# ಇಂಗ್ಲಂಡಿನ ಅರ್ವಾಚೀನ ಇತಿಹಾಸವು

## ಭಾಗ ೨

(ಇ. ಸ. ೧೬೦೩ರಿಂದ ಇ. ಸ. ೧೯೩೮)

# ಇಂಗ್ಲಂಡಿನ
# ಅರ್ವಾಚೀನ ಇತಿಹಾಸವು

## ಭಾಗ ೨

ಸ್ಟುವರ್ಟಕಾಲದಿಂದ ೧೮೩೮ರ ವರೆಗಿನ
ಇಂಗ್ಲಂಡದ ಇತಿಹಾಸವು

(ಇ. ಸ. ೧೬೦೩ರಿಂದ ಇ. ಸ. ೧೯೩೮)

ಈ ಪುಸ್ತಕವನ್ನು

**ಪರಶುರಾಮ ಹರಿ ಬರ್ವೆ, ಎಂ.ಎ., ಬಿ.ಟಿ.**

ಯುರೋಪದ ಅರ್ವಾಚೀನ ಇತಿಹಾಸ, ಜರ್ಮನ್ ಕಾರಸ್ಥಾನದ ಉಚ್ಚಾಟನ,
ಅಧಃಪಾತ, ಜಾನ್ ರಸ್ಕಿನ್
ಈ ಪುಸ್ತಕಗಳ ಲೇಖಕರು

ಇವರು

ಮರಾಠಿ ಭಾಷೆಯಲ್ಲಿ ಬರೆದರು

ಅದನ್ನು

**ಸಾಲಿ ರಾಮಚಂದ್ರರಾಯರು, ಬಿ.ಎ.,**

ಅಧ್ಯಾಪಕ, ಕರ್ನಾಟಕ ಹೈಸ್ಕೂಲ್, ಧಾರವಾಡ

ಇವರು ಕನ್ನಡದಲ್ಲಿ ಪರಿವರ್ತಿಸಿದರು.

ಮೆಕ್‌ಮಿಲನ್ ಮತ್ತು ಕಂಪನಿ, ಲಿಮಿಟೆಡ್,
ಹಾರ್ನಬಿ ರೋಡ, ಫೋರ್ಟ, ಮುಂಬಯಿ

೧೯೪೮

 [ಬೆಲೆ: ರೂ. ೩ ಆಣೆ ೮.

# ಪ್ರಸ್ತಾವನೆ



ಜನಶಿಕ್ಷಣದ ಕಾರ್ಯದಲ್ಲಿ ಇತಿಹಾಸದ ಮಹತ್ವವು ಎಷ್ಟಿದೆಂಬುದನ್ನು ವಿವರಿಸಿ ಹೇಳುವ ಕಾರಣವಿಲ್ಲ. ನಮ್ಮ ನಿತ್ಯದ ವ್ಯವಹಾರದಲ್ಲಿ ಹಿಂದಿನ ಅನುಭವವು ಉಪಯುಕ್ತವಾಗಿರುವಂತೆ ಯಾವುದೊಂದು ದೇಶದವರಿಗೆ ಆ ದೇಶದ ಮತ್ತು ಮಿಕ್ಕ ದೇಶಗಳ ಇತಿಹಾಸವು ಬೋಧಪ್ರದವೂ ಮಾರ್ಗದರ್ಶಕವೂ ಆಗಿರುತ್ತದೆಂಬುದು ನಿಃಸಂದೇಹವು. ಆದುದರಿಂದ ಶಾಲೆ-ಕಾಲೇಜುಗಳ ಶಿಕ್ಷಣಕ್ರಮದಲ್ಲಿ ಇತಿಹಾಸಕ್ಕೆ ಕೊಡಲಾಗಿರುವ ಸ್ಥಾನವು ಎಲ್ಲ ಬಗೆಯಿಂದಲೂ ಯೋಗ್ಯವಾಗಿರುವುದು.

ಪ್ರಪಂಚದಲ್ಲಿ ಇಂದು ಮಹತ್ವವನ್ನೂ ಶ್ರೇಷ್ಠತೆಯನ್ನೂ ಪಡೆದ ರಾಷ್ಟ್ರಗಳಲ್ಲಿ ಇಂಗ್ಲಂಡು ಪ್ರಮುಖವಾದುದಾಗಿ ಎಣಿಸಲ್ಪಡುತ್ತದೆ. ಪ್ರದೇಶವಿಸ್ತಾರ, ಜನಸಂಖ್ಯೆ, ವ್ಯಾಪಾರ, ಉದ್ಯೋಗ-ವ್ಯವಸಾಯಗಳು, ಸಮುದ್ರದ ಮೇಲಿನ ಪ್ರಭುತ್ವ ಮತ್ತು ಸಾಮರ್ಥ್ಯ ಈಯೆಲ್ಲ ವಿಷಯಗಳಲ್ಲಿ ಇಂಗ್ಲಂಡು (ಬ್ರಿಟಿಶ್ ಸಾಮ್ರಾಜ್ಯವು) ಜಗತ್ತಿನಲ್ಲಿ ಮೇಲಿನ ಸ್ಥಾನವನ್ನು ಸಂಪಾದಿಸಿದೆ. ಇದಾದರೂ ಕಳೆದ ಮೂರು ನಾಲ್ಕು ಶತಕಗಳ ಸಂಪಾದನೆಯೆ ಆಗಿದೆ. ಈ ಶ್ರೇಷ್ಠತೆಯನ್ನು ದೊರಕಿಸಲು ಇಂಗ್ಲಂಡು ಬೇರೆ ಬೇರೆ ಕಾಲಕ್ಕೆ ಅನೇಕ ರಾಷ್ಟ್ರಗಳೊಡನೆ ಹೋರಾಡಬೇಕಾಯ್ತು. ೧೬ನೆಯ ಶತಕದಲ್ಲಿ ಸ್ಪೇನದೊಡನೆ, ೧೭ನೆಯ ಶತಕದಲ್ಲಿ ಹಾಲಂಡಿನೊಡನೆ, ೧೮ನೆಯ ಶತಕದಲ್ಲಿ ಫ್ರಾನ್ಸಿನೊಡನೆ, ೧೯ನೆಯ ಶತಕದಲ್ಲಿ ರಶಿಯದೊಡನೆ ಮತ್ತು ೨೦ನೆಯ ಶತಕದಲ್ಲಿ ಜರ್ಮನಿಯೊಡನೆ ಇಂಗ್ಲಂಡು ಕಾದಿತು; ಇಂಗ್ಲಿಶ್ ಜನರ ಶೌರ್ಯ, ದೃಢೋದ್ಯೋಗ, ಸಾಹಸವೃತ್ತಿ, ಸ್ವದೇಶಭಕ್ತಿ, ಆತ್ಮವಿಶ್ವಾಸ ಮತ್ತು ಸಂಘಶಕ್ತಿಯಿಂದ ಕೆಲಸಮಾಡುವ ಬುದ್ಧಿ ಈ ಗುಣ ಸಮುಚ್ಚಯದಿಂದ ಇಂಗ್ಲಂಡಿಗೆ ಜಯವು ದೊರೆಯುತ್ತ ಬಂದಿತು. ಅಮೇರಿಕೆಯಲ್ಲಿಯ ಉಪನಿವೇಶಗಳೊಡನೆ ಆದ ಯುದ್ಧವನ್ನುಳಿದು ಮಿಕ್ಕಾವ ಮಹತ್ವದ ಯುದ್ಧದಲ್ಲಿಯೂ ಇಂಗ್ಲಂಡಿಗೆ ಸೋಲು ಇರಲಿಲ್ಲ. ಆದರೆ ಈ ಅನುಭವದಿಂದ ಇಂಗ್ಲಂಡು ತನ್ನ ಉಪನಿವೇಶಗಳ ವಿಷಯದ ನೀತಿಯಲ್ಲಿ (Policy) ಬದಲಾವಣೆಯನ್ನು ಮಾಡಿತು. ಅದು ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಉಪನಿವೇಶಗಳಿಗೂ ದೇಶಗಳಿಗೂ ಸ್ವರಾಜ್ಯದ (self-government) ಅಧಿಕಾರಗಳನ್ನು ಕೊಡಲು ಮತ್ತು ಸಾಮ್ರಾಜ್ಯದ ಸಮಸ್ಯೆಗಳನ್ನು ಕುರಿತು ಅವುಗಳ ಆಲೋಚನೆಯನ್ನು ಕೇಳಲು

ಉಪಕ್ರಮಿಸಿತು. ಅದರಿಂದ ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಬೇರೆ ಬೇರೆ ದೇಶಗಳಲ್ಲಿ ಒಬ್ಬರೊಬ್ಬರ ವಿಷಯದಲ್ಲಿ ಆಪ್ತಭಾವನೆ ಬೆಳೆದು ಬ್ರಿಟಿಶ್ ಸಾಮ್ರಾಜ್ಯದ ಸಾಮರ್ಥ್ಯವು ಹೆಚ್ಚಲು ಅನುವಾಯ್ತು. ಇಂಗ್ಲಂಡಿನಲ್ಲಿಯ ರಾಜ್ಯಘಟನೆಯೂ ಪ್ರಪಂಚದ ಅನೇಕ ದೇಶಗಳಿಗೆ ಮಾರ್ಗದರ್ಶಕವಾಗಿರುವುದು. ಪರಿಸ್ಥಿತಿಗನು ಸಾರವಾಗಿ ಸ್ವಲ್ಪ ಹೆಚ್ಚು ಕಡಿಮೆ ಮಾಡಿ ಅನೇಕ ದೇಶಗಳು ತಮ್ಮ ರಾಜ್ಯಘಟನೆ ಗಳನ್ನು ಇಂಗ್ಲಂಡಿನ ರೀತಿಯಂತೆ ಮಾಡಿಕೊಂಡಿರುವುವು. ಹಿಂದುಸ್ಥಾನವು ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಮಹತ್ವದ ಭಾಗವಾಗಿರುವುದರಿಂದ ಹಿಂದುಸ್ಥಾನ ದವರಿಗೆ ಇಂಗ್ಲಂಡಿನ ಇತಿಹಾಸದ ಪರಿಚಯವಿರುವುದು ಅವಶ್ಯವಾಗಿದೆ.

ಮುಂಬಯಿ ಯುನಿವರ್ಸಿಟಿಯ ಮೆಟ್ರಿಕ್ಯುಲೇಶನ್ ಪರೀಕ್ಷೆ, ನಾಗಪುರ ಯುನಿವರ್ಸಿಟಿಯ ಹೈಸ್ಕೂಲ್ ಪರೀಕ್ಷೆ, ಆಗ್ರಾ, ಅಜಮೀರ, ಮಧ್ಯ ಹಿಂದುಸ್ಥಾನ ಇವುಗಳಲ್ಲಿಯ ಶಾಲೆಗಳ ಕೊನೆಯ ಪರೀಕ್ಷೆ, ಶ್ರೀ ನಥೀಬಾಯಿ ಠಾಕರಸಿ ಸ್ತ್ರೀಯರ ಯುನಿವರ್ಸಿಟಿಯ ಪ್ರವೇಶಪರೀಕ್ಷೆ ಇವೆಲ್ಲವುಗಳ ಅಭ್ಯಾಸಕ್ರಮವನ್ನು ಅನುಸರಿಸಿ ಮೇಲೆ ಹೇಳಿದ ಪರೀಕ್ಷೆಗಳಿಗೋಸುಗ ಕೊನೆಯ ನಾಲ್ಕು ವರ್ಷಗಳಿಗೆ ಪಠ್ಯಪುಸ್ತಕವೆಂದು ಉಪಯೋಗವಾಗುವಂತೆ ಈ ಪುಸ್ತಕವನ್ನು ರಚಿಸಲಾಗಿದೆ. ಇಂಗ್ಲಂಡಿನ ಇತಿಹಾಸದಂತೆ ಅಲ್ಲಿಯ ರಾಜ್ಯಘಟನೆಯ ಉತ್ಕ್ರಾಂತಿ, ಈಗಿನ ರಾಜ್ಯಘಟನೆ, ಬ್ರಿಟಿಶ್ ಸಾಮ್ರಾಜ್ಯದ ಬೆಳೆವಣಿಗೆ, ಇಂಗ್ಲಂಡಿನಲ್ಲಿಯ ಬೇರೆ ಬೇರೆ ಕಾಲದ ಸಾಮಾಜಿಕ ಸ್ಥಿತಿ, ಔದ್ಯೋಗಿಕ ಮತ್ತು ವ್ಯಾಪಾರ ವಿಷಯಕ ಸಂಗತಿ ಗಳಲ್ಲಿ ಇಂಗ್ಲಂಡು ಮಾಡಿದ ಪ್ರಗತಿ ಮತ್ತು ರಾಷ್ಟ್ರಸಂಘ ಇವೆಲ್ಲವನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ. ಪುಸ್ತಕದಲ್ಲಿಯ ಭಾಷೆ ಸುಲಭವಾಗುವಂತೆ ಪ್ರಯತ್ನವನ್ನು ಮಾಡಲಾಗಿದೆ.

ಇಂಗ್ಲಿಶ್ ಭಾಷೆಯಲ್ಲಿ ಇಂಗ್ಲಂಡಿನ ಇತಿಹಾಸದ ವಿಷಯದಲ್ಲಿ ಉತ್ಕೃಷ್ಟ ವಾದ ಅನೇಕ ಗ್ರಂಥಗಳಿರುವುವು. ಅವುಗಳಲ್ಲಿ ಹೆಚ್ಚಾಗಿ ಟಾವುಟ್, ಮೇರಿ ಯಟ್, ಮೆಕಲಿ ಜಾನ್, ಹಸಲ್ ವಾರ್ನರ ಮತ್ತು ಮಾರ್ಟಿನ್, ಟ್ರೆವಲಿನ್, ಗಾರ್ಡಿಸರ, ರಮ್ಸೆ ಮೂರ್, ಟೌಸ್‌ವೆಲ್—ಲಂಗ್‌ಮೇಡ, ಗ್ರೀನ್, ಈಗರ್ಟನ್, ಕೀಥ್ ಮೊದಲಾದ ವಿದ್ವಜ್ಜನರ ಗ್ರಂಥಗಳನ್ನು ಈ ಪುಸ್ತಕವನ್ನು ಬರೆವಾಗ ನಾನು ಉಪಯೋಗಿಸಿಕೊಂಡಿರುವೆನು. ಈಯೆಲ್ಲ ಲೇಖಕರಿಗೆ ನಾನು ಋಣಿಯಾಗಿರುವೆನು.

ಪರಶುರಾಮ ಹರಿ ಬರ್ವೆ.

# ಅನುವಾದಕರ ಎರಡು ಮಾತುಗಳು

ಅಲ್ಪ ಕಾಲದಲ್ಲಿ ಜನರ ಮೆಚ್ಚುಗೆಯನ್ನು ಪಡೆದು ವಿದ್ಯಾರ್ಥಿಗಳಿಗೂ ಸಾಮಾನ್ಯ ವಾಚಕರಿಗೂ ಬಹಳ ಉಪಯುಕ್ತವಾಗಿ ಪರಿಣಮಿಸಿದ ಶ್ರೀ. ಪರಶುರಾಮ ಹರಿ ಬರ್ವೆ ಇವರ ಮರಾಠಿ ಗ್ರಂಥದ ಅನುವಾದವಿದು. ಮೂಲ ಮರಾಠಿ ಮತ್ತು ಅದರ ಗುಜರಾಥಿ ಮತ್ತು ಹಿಂದಿ ಅನುವಾದಗಳು ಆ ಆ ಭಾಷೆಯ ಅಭ್ಯಾಸಿಗಳಿಗೆ ಉಪಕಾರಿಯಾದಂತೆ ಈ ಅನುವಾದವಾದರೂ ಕನ್ನಡ ವಾಚಕರಿಗೆ ಪ್ರಯೋಜನಕಾರಿಯಾಗುವುದೆಂದು ಆಶಿಸುವೆವು.

ಅನುವಾದವು ಸಾಧ್ಯವಿದ್ದ ಮಟ್ಟಿಗೆ ಸರಲವಾಗಿಯೂ, ಸುಲಭವಾಗಿಯೂ, ಕನ್ನಡ ಶುದ್ಧ ಭಾಷಾಸರಣಿಗೆ ಅನುಗುಣವಾಗಿಯೂ ಇರುವಂತೆ ಎಚ್ಚರ ಪಟ್ಟಿರುವೆವು. ಎಲ್ಲಾ ಭಾಗದ ಜನರಿಗೆ ತಿಳಿವಂತಹ ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸಿರುವೆವು. ಹೆಚ್ಚಾಗಿ ರೂಢಿಗೆ ಬಂದು ನಮ್ಮವಂತೆ ಆದ ಪರ ಭಾಷೆಯ ಕೆಲವು ಸಾಂಕೇತಿಕ ಪದಗಳನ್ನು ಅಲ್ಲಲ್ಲಿ ಬಳಸಿರುವೆವು. ಇಷ್ಟಾದರೂ ಕನ್ನಡದ ರೀತಿಗೆ ಕುಂದಾಗದಂತೆ ಪ್ರಯತ್ನಿಸಿರುವೆವು.

ಇಂಗ್ಲಂಡಿನ ಇತಿಹಾಸವು ಪ್ರಬೋಧಕವಾದುದು. ಇದು ಭಾರತೀಯರಿಗೂ ಕನ್ನಡಿಗರಿಗೂ ಹೆಚ್ಚಾಗಿ ಮಾರ್ಗದರ್ಶಿಯಾಗಿದೆ. ಇಂಗ್ಲಂಡಿನ ಚರಿತ್ರೆಗೆ ಸಂಬಂಧಪಟ್ಟ ಇಷ್ಟೊಂದು ವಿಷಯಗಳನ್ನು ತಿಳಿಯಾಗಿ ಹೇಳುವ ಗ್ರಂಥಗಳು ಕನ್ನಡದಲ್ಲಿ ಇಲ್ಲ. ಈ ಕೊರತೆ ಈ ಗ್ರಂಥದಿಂದ ಕೆಲಮಟ್ಟಿಗಾದರೂ ಹೋಗಲೆಂದು ಹಾರಯಿಸುವೆವು.

ಕರ್ನಾಟಕ ಹೈಸ್ಕೂಲ್,
ಧಾರವಾಡ.
ಪ್ರಮಾಥಿ, ಚೈತ್ರ ಶುದ್ಧ ೧.
ಮಾರ್ಚ ೨೨, ೧೯೩೯.

ಸಾಲಿ ರಾಮಚಂದ್ರರಾಯ.

# ಅನುಕ್ರಮಣಿಕೆ

---

## ಪಟಗಳು

---

## ವಂಶವೃಕ್ಷ



---

## ಸಂಸ್ಮರಣೀಯ ಸಂಗತಿಗಳು

| | | |
|---|---|---|
| ಇ. ಸ. | ೧೬೨೦ | ಪಿಲ್‌ಗ್ರಿಮ್ ಫಾದರ್ಸ. ಅಮೇರಿಕೆಯಲ್ಲಿ ಪ್ಯುರಿಟನ್ ಜನರ 'ನ್ಯೂ ಇಂಗ್ಲಂಡ್' ಉಪನಿವೇಶಗಳು. |
| ,, | ೧೬೨೮ | 'ಪಿಟಿಶನ್ ಆಫ್ ರಾಯಿಟ್ಸ' ಕಾಯ್ದೆ. |
| ,, | ೧೬೩೭ | ಶಿಪ್ ಮನಿ (ಹಡಗುಗಳಿಗೋಸುಗ) ಕರವು. |
| ,, | ೧೬೩೮ | ಜಾನ್ ಹೆಮ್‌ಡೆನ್ ಇವನ ವಿಚಾರಣೆ. |
| ,, | ೧೬೪೦-೬೦ | ಲಾಂಗ ಪಾರ್ಲಿಮೆಂಟ್. |

| | | |
|---|---|---|
| ಇ. ಶ. | ೧೬೪೨—೪೮ | ೧ನೆಯ ಚಾರ್ಲ್ಸ್ ಮತ್ತು ಪಾರ್ಲಿಮೆಂಟ್ ಇವರ ನಡುವೆ ಯುದ್ಧವು. |
| ,, | ೧೬೫೧ | ನೆವಿಗೇಶನ್ ಕಾಯ್ದೆ. |
| ,, | ೧೬೫೨—೫೪ | ಡಚ್-ಜನರೊಡನೆ ಮೊದಲನೆಯ ಯುದ್ಧವು. |
| ,, | ೧೬೬೦ | ನೆವಿಗೇಶನ್ ಕಾಯ್ದೆ. |
| ,, | ೧೬೬೫—೬೭ | ಡಚ್-ಜನರೊಡನೆ ಎರಡನೆಯ ಯುದ್ಧವು. |
| ,, | ೧೬೬೭ | ಬ್ರೇಡಾದ ಒಪ್ಪಂದವು. |
| ,, | ೧೬೭೦ | ಡೋವರ ಎಂಬಲ್ಲಿ ಫ್ರಾನ್ಸಿನೊಡನೆ ಗುಪ್ತ ಒಪ್ಪಂದವು. |
| ,, | ೧೬೭೩ | 'ಟೆಸ್ಟ ಅ್ಯಕ್ಟ' ಕಾಯ್ದೆ ಪಾಸಾಯಿತು. |
| ,, | ೧೬೭೯ | 'ಹೇಬಿಯಸ್ ಕಾರ್ಪಸ್ ಅ್ಯಕ್ಟ' ಕಾಯ್ದೆ ಪಾಸಾಯಿತು. |
| ,, | ೧೬೮೮ (೫ ನವೆಂಬರ) | ಅರೇಂಜದ ವಿಲಿಯಮನು ಇಂಗ್ಲಂಡಿಗೆ ಬಂದನು. |
| ,, | ೧೬೮೮ (೨೩ ಡಿಸೆಂಬರ) | ೨ನೆಯ ಜೇಮ್ಸನು ಇಂಗ್ಲಂಡಿನಿಂದ ಓಡಿ ಹೋದನು. |
| ,, | ೧೬೮೮ | ಇಂಗ್ಲಂಡಿನಲ್ಲಿ ರಾಜ್ಯಕ್ರಾಂತಿ. |
| ,, | ೧೬೮೯ | 'ಬಿಲ್ ಅ್ಯಫ್ ರಾಯಿಟ್ಸ' ಕಾಯ್ದೆ ಪಾಸಾಯಿತು. |
| ,, | ೧೬೯೪ | ಬೆಂಕ ಅ್ಯಫ್ ಇಂಗ್ಲಂಡಿನ ಸ್ಥಾಪನೆ. |
| ,, | ೧೬೯೪ | 'ಟ್ರಾಯೆನಿಯಲ್ ಅ್ಯಕ್ಟ' ಕಾಯ್ದೆ ಪಾಸಾಯಿತು. |
| ,, | ೧೭೦೦ | ಸ್ಪೇನದ ರಾಜನಾದ ೨ನೆಯ ಚಾರ್ಲ್ಸನ ಮರಣವು. |
| ,, | ೧೭೦೧ | 'ಅ್ಯಕ್ಟ ಅ್ಯಫ್ ಸೆಟಲ್‌ಮೆಂಟ' ಕಾಯ್ದೆ ಪಾಸಾಯಿತು. |
| ,, | ೧೭೦೨—೧೩ | ಸ್ಪೇನದ ಪಟ್ಟಕ್ಕೋಸುಗ ವಾರಸಾ ಹಕ್ಕಿನ ವಿಷಯದಲ್ಲಿ ಯುದ್ಧವು. |
| ,, | ೧೭೦೭ | ಇಂಗ್ಲಂಡ್ ಮತ್ತು ಸ್ಕಾಟಲಂಡ್ ಇವುಗಳ ಪಾರ್ಲಿಮೆಂಟುಗಳ ಏಕೀಕರಣವು. |
| ,, | ೧೭೧೩ | ಯುಟ್ರೆಕ್ಟದ ಒಪ್ಪಂದವು. |
| ,, | ೧೭೧೬ | 'ಸೆಪ್ಟೇನಿಯಲ್' ಕಾಯ್ದೆ ಪಾಸಾಯಿತು. |
| ,, | ೧೭೨೧—೪೨ | ಇಂಗ್ಲಂಡಿನ ಮೊದಲನೆಯ ಮುಖ್ಯ ಮಂತ್ರಿ—ವಾಲಪೋಲ. |
| ,, | ೧೭೩೯ | ಸ್ಪೇನದೊಡನೆ ಯುದ್ಧವು. |
| ,, | ೧೭೪೦—೪೮ | ಆಸ್ಟ್ರಿಯಾದ ಪಟ್ಟಕ್ಕೋಸುಗ ವಾರಸಾ ಹಕ್ಕಿನ ವಿಷಯದಲ್ಲಿ ಯುದ್ಧವು. |
| ,, | ೧೭೫೬—೬೩ | ಸಪ್ತವಾರ್ಷಿಕ ಯುದ್ಧವು. |

| | | |
|---|---|---|
| ಕ್ರಿ. ಶ. | ೧೭೭೩ | ಈಸ್ಟ್ ಇಂಡಿಯಾ ಕಂಪನಿಯ ರಾಜ್ಯಕಾರಭಾರದ ವಿಷಯದಲ್ಲಿ 'ರೆಗ್ಯುಲೇಟಿಂಗ ಅಕ್ಟ' ಕಾಯ್ದೆ. |
| ,, | ೧೭೭೫—೮೩ | ಮಾತೃಭೂಮಿಯೊಡನೆ ಅಮೇರಿಕೆಯಲ್ಲಿ ಇಂಗ್ಲಿಶ ಉಪನಿವೇಶಗಳ ಯುದ್ಧವು. |
| ,, | ೧೭೮೪ | ಪಿಟ್ಟನ ಇಂಡಿಯಾ ಬಿಲ್. |
| ,, | ೧೭೮೯ | ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿ. |
| ,, | ೧೭೯೩—೧೮೦೨ | ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿಯೊಡನೆ ಇಂಗ್ಲಂಡಿನ ಯುದ್ಧವು. |
| ,, | ೧೮೦೩—೧೮೧೫ | ನೆಪೋಲಿಯನನೊಡನೆ ಇಂಗ್ಲಂಡಿನ ಯುದ್ಧವು. |
| ,, | ೧೮೦೦ | ಐರ್ಲಂಡ್ ಮತ್ತು ಗ್ರೇಟ ಬ್ರಿಟನ್ ಇವುಗಳ ಪಾರ್ಲಿಮೆಂಟುಗಳ ಏಕೀಕರಣವು. |
| ,, | ೧೮೦೭ | ಬ್ರಿಟಿಶ ಸಾಮ್ರಾಜ್ಯದಲ್ಲಿ ಗುಲಾಮರ ವ್ಯಾಪಾರವು ನಿಲ್ಲಿಸಲ್ಪಟ್ಟಿತು. |
| ,, | ೧೮೧೫ | ವಾಟರ್ಲೂ ಯುದ್ಧವು; ಪೆರಿಸಿನ ಒಪ್ಪಂದವು. |
| ,, | ೧೮೨೯ | ಐರ್ಲಂಡಿನಲ್ಲಿಯ ರೋಮನ್ ಕಥಲಿಕ್ ಜನರ ಮೇಲಿನ ನಿರ್ಬಂಧಗಳು ದೂರಮಾಡಲ್ಪಟ್ಟುವು. |
| ,, | ೧೮೩೨ | ಪಾರ್ಲಿಮೆಂಟಿನ ಸುಧಾರಣೆಯ ಮೊದಲನೆಯ ಕಾಯ್ದೆ. |
| ,, | ೧೮೩೩ | ಬ್ರಿಟಿಶ ಸಾಮ್ರಾಜ್ಯದಲ್ಲಿ ಗುಲಾಮಗಿರಿ ಪದ್ಧತಿ ನಿಲ್ಲಿಸಲ್ಪಟ್ಟಿತು. |
| ,, | ೧೮೩೮ | ಕೆನಡಾದ ರಾಜ್ಯವ್ಯವಸ್ಥೆಯನ್ನು ಕುರಿತು ಲಾರ್ಡ ಡರಹೆಮ ಇವನ ರಿಪೋರ್ಟು. |
| ,, | ೧೮೪೬ | ಧಾನ್ಯದ ಮೇಲಿನ ಕರವು ರದ್ದುಮಾಡಲ್ಪಟ್ಟಿತು. |
| ,, | ೧೮೫೦—೫೫ | ಆಸ್ಟ್ರೇಲಿಯದ ಉಪನಿವೇಶಗಳಿಗೆ ಸ್ವರಾಜ್ಯದ ಅಧಿಕಾರಗಳು ದೊರೆತುವು. |
| ,, | ೧೮೫೨ | ನ್ಯೂ ಇಂಗ್ಲಂಡ ಉಪನಿವೇಶವು ಸ್ವಸತ್ತಾಕವಾಗುವುದು. |
| ,, | ೧೮೫೪—೫೬ | ಕ್ರಿಮಿಯನ್ ಯುದ್ಧವು. |
| ,, | ೧೮೫೬ | ಪೆರಿಸಿನ ಒಪ್ಪಂದವು. |
| ,, | ೧೮೫೮ | ಹಿಂದುಸ್ಥಾನದ ಆಡಳಿತವು ಈಸ್ಟ ಇಂಡಿಯಾ ಕಂಪನಿಯಿಂದ ವಿಕ್ಟೋರಿಯಾ ರಾಣಿಯ ಕಡೆಗೆ ಬಂದಿತು. ರಾಣಿಯ ಜಾಹೀರನಾಮೆ. |
| ,, | ೧೮೬೭ | ಪಾರ್ಲಿಮೆಂಟಿನ ಸುಧಾರಣೆಯ ಎರಡನೆಯ ಕಾಯ್ದೆ. |

| | | |
|---|---|---|
| ಇ. ಸ. | ೧೮೬೭ | ಕೆನಡಾದಲ್ಲಿಯ ಉಪನಿವೇಶಗಳ ಕಾಯ್ದೆ. |
| ,, | ೧೮೭೦ | ಪ್ರಾಥಮಿಕ ಶಿಕ್ಷಣದ ಕಾಯ್ದೆ. |
| ,, | ೧೮೭೦—೭೧ | ಫ್ರಾಂಕೋ-ಜರ್ಮನ್ ಯುದ್ಧವು. |
| ,, | ೧೮೭೮ | ಬರ್ಲಿನದ ಒಪ್ಪಂದವು. |
| ,, | ೧೮೮೪—೮೫ | ಪಾರ್ಲಿಮೆಂಟಿನ ಸುಧಾರಣೆಯ ಮೂರನೆಯ ಕಾಯ್ದೆ. |
| ,, | ೧೮೮೫ | ಹಿಂದಿರಾಷ್ಟ್ರೀಯ ಸಭೆಯ (Congress) ಸ್ಥಾಪನೆ. |
| ,, | ೧೮೯೯—೧೯೦೨ | ಬೋಯರ ಜನರೊಡನೆ ಗ್ರೇಟ ಬ್ರಿಟನಿನ ಯುದ್ಧವು. |
| ,, | ೧೯೦೧ | ಆಸ್ಟ್ರೇಲಿಯದಲ್ಲಿಯ ಇಂಗ್ಲಿಶ ಉಪನಿವೇಶಗಳ ಏಕೀಕರಣವು. |
| ,, | ೧೯೦೪—೧೯೦೫ | ರೂಸೊ ಜಪಾನಿ ಯುದ್ಧ. |
| ,, | ೧೯೧೦ | ದಕ್ಷಿಣ ಆಫ್ರಿಕೆಯಲ್ಲಿಯ ಬ್ರಿಟಿಶ ವಸಾಹತುಗಳ ಏಕೀಕರಣವು. |
| ,, | ೧೯೧೧ | 'ಪಾರ್ಲಿಮೆಂಟರಿ ಆ್ಯಕ್ಟ', ಲಾರ್ಡರ ಸಭೆಯ ಅಧಿಕಾರಗಳು ಕಡಿಮೆಯಾದುವು. ಪಾರ್ಲಿಮೆಂಟಿನ ಹೊಸ ಚುನಾವಣೆ ಐದು ವರ್ಷಗಳಿಗೊಮ್ಮೆ. |
| ,, | ೧೯೧೪—೧೮ | ಮಹಾಯುದ್ಧವು. |
| ,, | ೧೯೧೬—೨೨ | ಲಾಯಿಡ ಜಾರ್ಜನ ರಾಷ್ಟ್ರೀಯ ಮಂತ್ರಿಮಂಡಲವು. |
| ,, | ೧೯೧೮ | 'ರಿಪ್ರೆಝೆಂಟೇಶನ್ ಆಫ್ ಪೀಪಲ್ಸ ಆ್ಯಕ್ಟ'. |
| ,, | ೧೯೧೯ | ಹಿಂದುಸ್ಥಾನದ ರಾಜ್ಯಘಟನೆಯ ಕಾಯ್ದೆ. |
| ,, | ೧೯೧೯ (ಜೂನ) | ವರ್ಸೇಲ್ಸದ ಒಪ್ಪಂದವು. |
| ,, | ೧೯೨೦ (ಜಾನೆ) | ರಾಷ್ಟ್ರಸಂಘದ ಸ್ಥಾಪನೆ. |
| ,, | ೧೯೨೦ | ಐರ್ಲಂಡಿನಲ್ಲಿ ಉತ್ತರ ಐರ್ಲಂಡ್ ಮತ್ತು ದಕ್ಷಿಣ ಐರ್ಲಂಡ್ ಎಂದು ಎರಡು ವಿಭಾಗಗಳು ಮಾಡಲ್ಪಟ್ಟುವು. |
| ,, | ೧೯೨೨ | 'ಐರಿಶ್ ಫ್ರೀ ಸ್ಟೇಟ ಆ್ಯಕ್ಟ' ಕಾಯ್ದೆ ಪಾಸಾಯಿತು. |
| ,, | ೧೯೨೪ (ಜಾನೇ. ಯಿಂದ ನವೆಂ.) | ರೆಮ್ಸೆ ಮೆಕ್ಡೋನಲ್ಡನ ಮೊದಲನೆಯ ಕೂಲಿಕಾರ ಮಂತ್ರಿಮಂಡಳವು. |
| ,, | ೧೯೨೮ | 'ರಿಪ್ರೆಝೆಂಟೇಟಿವ್ ಆಫ್ ಪೀಪಲ್ಸ ಆ್ಯಕ್ಟ'. |
| ,, | ೧೯೨೯ (ಜೂನ) | ರೆಮ್ಸೆ ಮೆಕ್ಡೋನಲ್ಡನ ಕೂಲಿಕಾರ ಮಂತ್ರಿಮಂಡಳವು. |
| ,, | ೧೯೩೦ (ನವೆಂ. ದಿಶೆಂ.) | ಹಿಂದುಸ್ಥಾನದ ರಾಜ್ಯಘಟನೆಯ ಪ್ರಶ್ನೆಯ ವಿಷಯದಲ್ಲಿ ರೌಂಡಟೇಬಲ್ ಪರಿಷತ್ತು. |

ಇ. ಸ. ೧೯೩೧—೩೫ ರೆಮ್ಸೆ ಮೆಕ್ಡೋನಲ್ಡರ ರಾಷ್ಟ್ರೀಯ ಮಂತ್ರಿಮಂಡಳವು.

,, ೧೯೩೧ ಎರಡನೆಯ ರೌಂಡ್‌ಟೇಬಲ್ ಪರಿಷತ್ತು.

,, ೧೯೩೧ ಸ್ಟೆಟುಟ್ ಆಫ್ ವೆಸ್ಟಮಿನ್‌ಸ್ಟರ.

,, ೧೯೩೨ ಒಟಾವಾ ಎಂಬಲ್ಲಿ ಸಾಮ್ರಾಜ್ಯ ಪರಿಷತ್ತು.

,, ೧೯೩೫—೩೭ ಬಾಲ್ಡ್ವಿನನ ರಾಷ್ಟ್ರೀಯ ಮಂತ್ರಿಮಂಡಲವು.

,, ೧೯೩೫ (ಆಗಸ್ಟ) ಹಿಂದುಸ್ಥಾನದ ರಾಜ್ಯಘಟನೆಯ ಕಾಯ್ದೆ.

,, ೧೯೩೭ (ಮೇ) ೬ನೆಯ ಜಾರ್ಜರ ರಾಜ್ಯಾರೋಹಣ ಸಮಾರಂಭವು.

,, ೧೯೩೭ (ಮೇ) ಸಾಮ್ರಾಜ್ಯ ಪರಿಷತ್ತು.

,, ೧೯೩೭ (ಮೇಯಿಂದ) ಚೇಂಬರಲೇನನ ಮಂತ್ರಿಮಂಡಳವು,

# ಇಂಗ್ಲಂಡಿನ ರಾಜಮಾಲಿಕೆ

(ಟ್ಯೂಡರ ವಂಶದಿಂದ)

## ಟ್ಯೂಡರ ವಂಶವು

| | |
|---|---|
| ೭ನೆಯ ಹೆನ್ರಿ | ೧೪೮೫—೧೫೦೯ |
| ೮ನೆಯ ಹೆನ್ರಿ | ೧೫೦೯—೧೫೪೭ |
| ೬ನೆಯ ಎಡ್ವರ್ಡ | ೧೫೪೭—೧೫೫೩ |
| ಮೇರಿ | ೧೫೫೩—೧೫೫೮ |
| ಎಲಿಝಾಬೆಥ | ೧೫೫೮—೧೬೦೩ |

## ಸ್ಟುವರ್ಟ ವಂಶವು

| | |
|---|---|
| ೧ನೆಯ ಜೇಮ್ಸ | ೧೬೦೩—೧೬೨೫ |
| ೧ನೆಯ ಚಾರ್ಲ್ಸ್ | ೧೬೨೫—೧೬೪೯ |
| ಲೋಕಸತ್ತಾಕ ರಾಜ್ಯವು | ೧೬೪೯—೧೬೬೦ |
| ೨ನೆಯ ಚಾರ್ಲ್ಸ್ | ೧೬೬೦—೧೬೮೫ |
| ೨ನೆಯ ಜೇಮ್ಸ | ೧೬೮೫—೧೬೮೮ |
| ೩ನೆಯ ವಿಲಿಯಮ್ | ೧೬೮೯—೧೭೦೨ |
| ಮತ್ತು ಮೇರಿ | ೧೬೮೯—೧೬೯೪ |
| ಅನ್ | ೧೭೦೨—೧೭೧೪ |

## ಹೆನೋವರ ವಂಶವು

| | |
|---|---|
| ೧ನೆಯ ಜಾರ್ಜ | ೧೭೧೪—೧೭೨೭ |
| ೨ನೆಯ ಜಾರ್ಜ | ೧೭೨೭—೧೭೬೦ |
| ೩ನೆಯ ಜಾರ್ಜ | ೧೭೬೦—೧೮೨೦ |
| ೪ನೆಯ ಜಾರ್ಜ | ೧೮೨೦—೧೮೩೦ |
| ೪ನೆಯ ವಿಲಿಯಮ್ | ೧೮೩೦—೧೮೩೭ |
| ವಿಕ್ಟೋರಿಯಾ | ೧೮೩೭—೧೯೦೧ |

## ಸೆಕ್ಸ-ಕೋಬರ್ಗ ವಂಶವು

| | |
|---|---|
| ೭ನೆಯ ಎಡ್ವರ್ಡ | ೧೯೦೧—೧೯೧೦ |

## ವಿಂಡಸರ ವಂಶವು

| | |
|---|---|
| ೫ನೆಯ ಜಾರ್ಜ | ೧೯೧೦—೧೯೩೬ |
| ೮ನೆಯ ಎಡ್ವರ್ಡ | ೧೯೩೬ (ಜಾನೆ.ಯಿಂದ ಡಿಸೆಂಬರ) |
| ೬ನೆಯ ಜಾರ್ಜ | ೧೯೩೬ (ಡಿಸೆಂಬರದಿಂದ) |

## ೧೭೨೧ರಿಂದ ಮಂತ್ರಿಮಂಡಳಗಳು

| | | | |
|---|---|---|---|
| ೧೭೨೧—೧೭೪೨ | ವಾಲ್‌ಪೋಲನ ಮಂತ್ರಿಮಂಡಳವು | | (ವ್ಹಿಗ್) |
| ೧೭೪೨—೧೭೪೪ | ಕಾರ್ಟರೇಟನ | ,, | ,, |
| ೧೭೪೪—೧೭೫೪ | ಪೆಲ್ಹಮನ | ,, | ,, |
| ೧೭೫೪—೧೭೫೬ | ನ್ಯೂಕೆಸಲನ | ,, | ,, |
| ೧೭೫೬—೧೭೫೭ | ಡೆವಾನಶಾಯರನ | ,, | ,, |
| ೧೭೫೭—೧೭೬೧ | ಪಿಟ್ ಮತ್ತು ನ್ಯೂಕೆಸಲ | ,, | ,, |
| ೧೭೬೧—೧೭೬೩ | ಬ್ಯೂಟನ ಮಿಶ್ರಮಂತ್ರಿಮಂಡಳವು | | (ವ್ಹಿಗ್ ಮತ್ತು ಟೋರಿ) |
| ೧೭೬೩—೧೭೬೫ | ಗ್ರೆನ್‌ವಿಲ್ಲನ ಮಂತ್ರಿಮಂಡಳವು | | (ಮುಖ್ಯತಃ ವ್ಹಿಗ್) |
| ೧೭೬೫—೧೭೬೬ | ರಾಕಿಂಗಹೆಮನ | ,, | (ವ್ಹಿಗ್) |
| ೧೭೬೬—೧೭೬೮ | ಪಿಟ್ಟನ (ಚೆಥಮನ) | ,, | (ಮಿಶ್ರ) |
| ೧೭೬೮—೧೭೭೦ | ಗ್ರಾಫ್ಟನ್ನನ | ,, | (ಮಿಶ್ರ) |
| ೧೭೭೦—೧೭೮೨ | ನಾರ್ಥನ | ,, | (ಟೋರಿ) |
| ೧೭೮೨ | ರಾಕಿಂಗಹೆಮನ ೨ನೆಯ | ,, | (ವ್ಹಿಗ್) |
| ೧೭೮೨—೧೭೮೩ | ಶೆಲ್ಬರ್ನನ ಮಿಶ್ರ | ,, | (ವ್ಹಿಗ್ ಮತ್ತು ಟೋರಿ) |
| ೧೭೮೩ | ಫಾಕ್ಸ ಮತ್ತು ನಾರ್ಥ ಇವರ ಮಿಶ್ರ | ,, | ,, |
| ೧೭೮೩—೧೮೦೧ | ಪಿಟ್ಟನ (ಕಿರಿಯನು) ಮಂತ್ರಿಮಂಡಳವು | | ,, |
| ೧೮೦೧—೧೮೦೪ | ಅಡಿಂಗ್ಟನನ | ,, | ,, |
| ೧೮೦೪—೧೮೦೬ | ಪಿಟ್ಟನ (ಕಿರಿಯನು) ೨ನೆಯ | ,, | ,, |
| ೧೮೦೬—೧೮೦೭ | ಗ್ರೆನ್‌ವಿಲ್ಲನ ಸರ್ವಪಕ್ಷೀಯ | ,, | (ಮಿಶ್ರ) |
| ೧೮೦೭—೧೮೦೯ | ಪೋರ್ಟಲಂಡನ | ,, | (ಟೋರಿ) |
| ೧೮೦೯—೧೮೧೨ | ಪರ್ಸಿವಲನ | ,, | ,, |
| ೧೮೧೨—೧೮೨೭ | ಲಿವರಪೂಲನ | ,, | ,, |
| ೧೮೨೭ | ಕೆನಿಂಗನ | ,, | (ಪ್ರಗಮನಶೀಲ ಟೋರಿ) |
| ೧೮೨೭ | ಗೋಡರಿಚನ | ,, | ,, |
| ೧೮೨೮—೧೮೩೦ | ವೆಲಿಂಗ್ಟನ್ನನ | ,, | ,, |
| ೧೮೩೦—೧೮೩೪ | ಗ್ರೇ ಇವನ | ,, | (ವ್ಹಿಗ್) |
| ೧೮೩೪—೧೮೩೫ | ಪೀಲನ | ,, | (ಕಾಂಝರವೇಟಿವ್) |
| ೧೮೩೫—೧೮೪೧ | ಮೆಲ್‌ಬೋರ್ನನ | ,, | (ವ್ಹಿಗ್) |
| ೧೮೪೧—೧೮೪೬ | ಪೀಲನ | ,, | (ಕಾಂಝರವೇಟಿವ್) |
| ೧೮೪೬—೧೮೫೨ | ರಸೇಲನ | ,, | (ಲಿಬರಲ್) |
| ೧೮೫೨ | ಡರ್ಬಿಯ | ,, | (ಕಾಂಝರವೇಟಿವ್) |

| | | | |
|---|---|---|---|
| ೧೮೫೨—೧೮೫೫ | ಅಬರ್ಡೀನನ | ಮಂತ್ರಿಮಂಡಳವು | (ಮಿಶ್ರ) |
| ೧೮೫೫—೧೮೫೮ | ಪಾಮರಸ್ಟನನ | ,, | (ಲಿಬರಲ್) |
| ೧೮೫೮—೧೮೫೯ | ಡರ್ಬಿಯ ೨ನೆಯ | ,, | (ಕಾಂರ್ಝುರವೇಟಿವ್) |
| ೧೮೫೯—೧೮೬೫ | ಪಾಮರಸ್ಟನನ ೨ನೆಯ | ,, | (ಲಿಬರಲ್) |
| ೧೮೬೫—೧೮೬೬ | ರಸೆಲನ | ,, | (ಲಿಬರಲ್) |
| ೧೮೬೬—೧೮೬೮ | ಡರ್ಬಿಯ ೩ನೆಯ | ,, | (ಕಾಂರ್ಝುರವೇಟಿವ್) |
| ೧೮೬೮—೧೮೭೪ | ಗ್ಲಾಡ್‌ಸ್ಟನನ ೧ನೆಯ | ,, | (ಲಿಬರಲ್) |
| ೧೮೭೪—೧೮೮೦ | ಡಿಝ್ರೇಲಿಯ | ,, | (ಕಾಂರ್ಝುರವೇಟಿವ್) |
| ೧೮೮೦—೧೮೮೫ | ಗ್ಲಾಡ್‌ಸ್ಟನನ ೨ನೆಯ | ,, | (ಲಿಬರಲ್) |
| ೧೮೮೫—೧೮೮೬ | ಸಲ್ಸಬರಿಯ | ,, | (ಕಾಂರ್ಝುರವೇಟಿವ್) |
| ೧೮೮೬ | ಗ್ಲಾಡ್‌ಸ್ಟನನ ೩ನೆಯ | ,, | (ಲಿಬರಲ್) |
| ೧೮೮೬—೧೮೯೨ | ಸಲ್ಸಬರಿಯ | ,, | (ಯುನಿಯನಿಸ್ಟ) |
| ೧೮೯೨—೧೮೯೪ | ಗ್ಲಾಡ್‌ಸ್ಟನನ ೪ನೆಯ | ,, | (ಲಿಬರಲ್) |
| ೧೮೯೪—೧೮೯೫ | ರೋಜಬರಿಯ | ,, | ,, |
| ೧೮೯೫—೧೯೦೨ | ಸಲ್ಸಬರಿಯ ೨ನೆಯ | ,, | (ಯುನಿಯನಿಸ್ಟ) |
| ೧೯೦೨—೧೯೦೫ | ಬಾಲ್‌ಫೋರನ | ,, | ,, |
| ೧೯೦೫—೧೯೦೮ | ಕೆಂಪಬೆಲ್-ಬನರಮನ್ನನ | ,, | (ಲಿಬರಲ್) |
| ೧೯೦೮—೧೯೧೫ | ಆಸ್ಕ್ವಿಥನ | ,, | ,, |
| ೧೯೧೫—೧೯೧೬ | ,, ರಾಷ್ಟ್ರೀಯ | ,, | (ಮಿಶ್ರ) |
| ೧೯೧೬—೧೯೨೨ | ಲಾಯಿಡ್ ಜಾರ್ಜನ | ,, | ,, |
| ೧೯೨೨—೧೯೨೩ | ಬೋನಾರ ಲಾ ಇವನ | ,, | (ಕಾಂರ್ಝುರವೇಟಿವ್) |
| ೧೯೨೩—೧೯೨೪ | ಬಾಲ್ಡವಿನನ | ,, | ,, |
| ೧೯೨೪—(ಜಾನೆ.—ಅಕ್ಟೋ.) | ಮೆಕ್ಡೋನಲ್ಡನ | ,, | (ಕೂಲಿಕಾರ) |
| ೧೯೨೪—೧೯೨೯ | ಬಾಲ್ಡವಿನನ | ,, | (ಕಾಂರ್ಝುರವೇಟಿವ್) |
| ೧೯೨೯—೧೯೩೧ | ಮೆಕ್ಡೋನಲ್ಡನ | ,, | (ಕೂಲಿಕಾರ) |
| ೧೯೩೧—೧೯೩೫ | ,, | ,, | (ರಾಷ್ಟ್ರೀಯ) |
| ೧೯೩೫—೧೯೩೭ | ಬಾಲ್ಡವಿನನ | ,, | (ರಾಷ್ಟ್ರೀಯ) |
| ೧೯೩೭ ಮೇ ತಿಂಗಳಿಂದ | ನೆವಿಲ್ ಚೇಂಬರಲೇನನ | ,, | ,, |

## ಬ್ರಿಟಿಶ ಸಾಮ್ರಾಜ್ಯದಲ್ಲಿಯ ಯಾವ ಯಾವ ಪ್ರದೇಶಗಳು ಯಾವ ಯಾವ ರಾಜ್ಯಕರ್ತರ ಆಳಿಕೆಯಲ್ಲಿ ಸಂಪಾದಿಸಲ್ಪಟ್ಟುವೆಂಬುದನ್ನು ತೋರಿಸುವ ಪತ್ರಕವು.

| ರಾಜ್ಯಕರ್ತರು | ಉಪನಿವೇಶಗಳನ್ನು ನಿರ್ಮಿಸಿ | ಗೆದ್ದು | ಬೇರೆ ರೀತಿಯಿಂದ |
|---|---|---|---|
| ಎಲಿಝಬೆಥ (೧೫೫೮—೧೬೦೩) | *ವರ್ಜೀನಿಯಾ, ನ್ಯೂಫೌಂಡಲಂಡ. | — | — |
| ೧ನೆಯ ಜೇಮ್ಸ್ (೧೬೦೩—೧೬೨೫) | ಬಾರ್ಬೆಡಾಸ್, ಬರ್ಮ್ಯುಡಾಸ್, *ನ್ಯೂ ಇಂಗ್ಲಂಡ ವಸಾಹತುಗಳು. | — | |
| ೧ನೆಯ ಚಾರ್ಲ್‌ಸ್ (೧೬೨೫—೧೬೪೯) | ಬಹಾಮಾಸ್, *ಮೇರಿಲಂಡ. | — | — |
| ಲೋಕಸತ್ತಾತ್ಮಕ ರಾಜ್ಯ (೧೬೪೯—೧೬೬೦) | — | ಜಮೇಕಾ | — |
| ೨ನೆಯ ಚಾರ್ಲ್‌ಸ್ (೧೬೬೦—೧೬೮೫) | *ಕೆರೋಲಿನಾ, *ಪೆನ್ಸಿಲವಾನಿಯಾ, ಹಡ್ಸನ್ ಅಖಾತದ ನೆರೆಯ ಪ್ರದೇಶವು. | *ನ್ಯೂಯಾರ್ಕ, *ನ್ಯೂಜರ್ಸಿ, ಸೇಂಟ ಹೆಲಿನಾ | ಮುಂಬಯಿ |
| ೨ನೆಯ ಜೇಮ್ಸ್ (೧೬೮೫—೧೬೮೮) | — | — | — |
| ೩ನೆಯ ವಿಲಿಯಮ್ (೧೬೮೮—೧೭೦೨) | — | — | — |
| ಅನ್ (೧೭೦೨—೧೭೧೪) | — | ಜಿಬ್ರಾಲ್ಟರ, ನೋವಾಸ್ಕೋಸಿಯಾ | — |
| ೧ನೆಯ ಜಾರ್ಜ (೧೭೧೪—೧೭೨೭) | — | — | — |

| ರಾಜ್ಯಕರ್ತರು | ಉಪನಿವೇಶಗಳನ್ನು ನಿರ್ಮಿಸಿ | ಗೆದ್ದು | ಬೇರೆ ರೀತಿಯಿಂದ |
|---|---|---|---|
| ೨ನೆಯ ಜಾರ್ಜ (೧೭೨೭—೧೭೬೦) | *ಜಾರ್ಜಿಯಾ. | ಕೆನಡಾ, ನ್ಯೂಬ್ರನ್ಸವಿಕ್, ಕೇಪ ಬ್ರಿಟನ್ ನಡುಗಡ್ಡೆ, ಪ್ರಿನ್ಸ ಎಡ್ವರ್ಡ ನಡುಗಡ್ಡೆ, ಬಂಗಾಲ. | — |
| ೩ನೆಯ ಜಾರ್ಜ (೧೭೬೦—೧೮೨೦) | ನ್ಯೂ ಸೌಥವೇಲ್ಸ, ಟಸ್ಮಾನಿಯಾ, ಮನಿಟೋಬಾ. | * ಫ್ಲಾರಿಡಾ, ಬ್ರಿಟಿಶ ಹಂಡುರಾಸ, ಟ್ರಿನಿಡಾಡ, ಮಾಲ್ಟಾ, ಕೇಪ ಕಾಲನಿ, ಬ್ರಿಟಿಶ ಗಾಯನಾ, ಮಾರಿಶಸ್, ಸಿಲೋನ, ದಕ್ಷಿಣ ಮತ್ತು ಮಧ್ಯಹಿಂದುಸ್ಥಾನ. | ಪೆನಾಂಗ ಮತ್ತು ವೆಲ್ಲಸ್ಲಿ ಪ್ರದೇಶವು, ಸಿರಿಯಾ ಲೋನೆ. |
| ೪ನೆಯ ಜಾರ್ಜ (೧೮೨೦—೧೮೩೦) | ಪಶ್ಚಿಮ ಆಸ್ಟ್ರೇಲಿಯಾ. | ಆಸಾಮ. | ಸಿಂಗಾಪುರ, ಮಲಕ್ಕಾ. |
| ೪ನೆಯ ವಿಲಿಯಮ್ (೧೮೩೦—೧೮೩೭) | ದಕ್ಷಿಣ ಆಸ್ಟ್ರೇಲಿಯಾ. | — | — |
| ವಿಕ್ಟೋರಿಯಾ (೧೮೩೭—೧೯೦೧) | ವಿಕ್ಟೋರಿಯಾ, ನ್ಯೂಝಿಲಂಡ, ನಾತಾಳ, ಬ್ರಿಟಿಶ ಕೋಲಂಬಿಯಾ, ಕ್ವೀನ್ಸಲಂಡ. | ಏಡನ್, ಹಾಂಗಕಾಂಗ, ಲಗಾಸ್, ಅಶಾರಾ, ಪಂಜಾಬ, ಅಯೋಧ್ಯಾ, ಬ್ರಹ್ಮದೇಶ, ಝುಲು ಪ್ರದೇಶ, ರ್‍ಹೋಡೇಶಿಯಾ, ಟ್ರಾನ್ಸವಾಲ, ಆರೇಂಜ ಫ್ರೀ ಸ್ಟೇಟ. | ಪೇರಿಮ, ಪಶ್ಚಿಮ ಗ್ರೀಕಾಲಂಡ, ಬಸೊಟೋಲಂಡ, ಬೇಚುನಾಲಂಡ, ಬ್ರಿಟಿಶ ಬೋರ್ನಿಓ, ಫಿಜಿ ನಡುಗಡ್ಡೆಗಳು, ಸೈಪ್ರಸ್ ಮತ್ತು ಹವೆವಯಿ. |
| ೭ನೆಯ ಎಡ್ವರ್ಡ (೧೯೦೧—೧೯೧೦) | — | — | — |
| ೫ನೆಯ ಜಾರ್ಜ (೧೯೧೦—೧೯೩೬) | — | — | — |
| ೮ನೆಯ ಎಡ್ವರ್ಡ ೧೯೩೬ (ಜಾ. ದಿ.) | — | — | — |
| ೬ನೆಯ ಜಾರ್ಜ (೧೯೩೬) | — | — | — |

* ಈ ಚಿಹ್ನವು ಇದ್ದ ಪ್ರದೇಶಗಳು ಈಗ ಬ್ರಿಟಿಶ ಸಾಮ್ರಾಜ್ಯದಲ್ಲಿ ಇಲ್ಲ.



ಆರನೆಯ ಜಾರ್ಜ್ ಮಹಾರಾಜರು

KING GEORGE VI

*Photo: Dorothy Wilding.*

# ೮ನೆಯ ಪ್ರಕರಣವು

## ಒಂದನೆಯ ಜೇಮ್ಸನು

ಜನ್ಮವು ೧೫೬೬; ರಾಜ್ಯಾರೋಹಣವು (೩೭ನೆಯ ವರ್ಷದಲ್ಲಿ) ೧೬೦೩;
ಮೃತ್ಯು ೧೬೨೫.

(೧೬೦೩—೧೬೨೫)

ತತ್ಕಾಲೀನ ರಾಜ್ಯಕರ್ತರು.

| ಫ್ರಾನ್ಸ | ಸ್ಪೇನ |
|---|---|
| ೪ನೆಯ ಹೆನ್ರಿ (೧೫೮೯—೧೬೧೦) | ೩ನೆಯ ಫಿಲಿಪ್ (೧೫೯೮—೧೬೨೧) |
| ೧೩ನೆಯ ಲುಯಿ (೧೬೧೦—೧೬೪೩) | ೪ನೆಯ ಫಿಲಿಪ್ (೧೬೨೧—೧೬೬೫) |

### ಮಹತ್ವದ ಇಸ್ವಿಗಳು.

೧೬೦೪ ಹ್ಯಾಮಟನ್ ಕೋರ್ಟ ಎಂಬಲ್ಲಿಯ ಧಾರ್ಮಿಕ ವಿಷಯುಗಳ ಪರಿಷತ್ತು.

೧೬೦೫ ಗನ್ ಪೌಡರ ಸಂಚು.

೧೬೦೭ ವರ್ಜಿನಿಯಾ (ಅಮೇರಿಕೆಯಲ್ಲಿ) ಎಂಬಲ್ಲಿ ಉಪನಿವೇಶದ (colony) ಸ್ಥಾಪನೆ.

೧೬೧೮ ಯುರೋಪದಲ್ಲಿ ಧಾರ್ಮಿಕ ಪ್ರಶ್ನೆಯ ಸಂಬಂಧದಲ್ಲಿ ಮೂವತ್ತು ವರ್ಷಗಳ ಯುದ್ಧದ ಪ್ರಾರಂಭವು.

೧೬೨೦ ಪ್ಯುರಿಟನ್ ಪಂಥದ ಜನರು ಅಮೇರಿಕೆಯಲ್ಲಿ 'ನ್ಯೂ ಇಂಗ್ಲಂಡ್' ಉಪನಿವೇಶವನ್ನು (colony) ಸ್ಥಾಪಿಸುವರು.

ಸ್ಟುಅರ್ಟ ವಂಶದ ಅರಸರು—೧೬೦೩ರಲ್ಲಿ ಎಲಿಝಾಬೆಥ ರಾಣಿ ಮರಣಹೊಂದಿದ ಬಳಿಕ ಸ್ಕಾಟಲಂಡಿನ ರಾಣಿಯಾದ *ಮೇರಿಯ ಮಗನು ಜೇಮ್ಸ ಎಂಬವನು ಇಂಗ್ಲಂಡಿನ ಪಟ್ಟಕ್ಕೆ ಬಂದನು. ಕರ್ತೃತ್ವಶಾಲಿನಿಯೂ ನೀತಿಕುಶಲೆಯೂ ಆದ ಎಲಿಝಾಬೆಥ ರಾಣಿ ಯುರೋಪದ ರಾಜಕಾರಣದಲ್ಲಿ ಇಂಗ್ಲಂಡಿಗೆ ಮಹತ್ವದ ಸ್ಥಾನವನ್ನು ಒದಗಿಸಿಕೊಟ್ಟಿದ್ದಳು. ಆದರೆ ಅವಳತರುವಾಯದಲ್ಲಿ ಇಂಗ್ಲಂಡಿನ ಪಟ್ಟಕ್ಕೆ ಬಂದ ಸ್ಟುಅರ್ಟ ವಂಶದ ರಾಜರು ಕರ್ತೃತ್ವವುಳ್ಳವರಾಗಿರಲಿಲ್ಲ; ಅದರಿಂದ ಅವರ ಆಳ್ಕೆಯಲ್ಲಿ ಇಂಗ್ಲಂಡಿನ ಮಹತ್ವವು ಬಹಳವಾಗಿ

*೬೪ನೆಯ ಪುಟದಲ್ಲಿಯ ವಂಶವೃಕ್ಷವನ್ನು ನೋಡಿರಿ.

ಕುಗ್ಗಿತು, ಮತ್ತು ಪರಕೀಯ ರಾಜ್ಯಕರ್ತರಿಗೆ ಇಂಗ್ಲಂಡಿನ ರಾಜಕಾರಣದಲ್ಲಿ ಕೈಹಾಕಲು ಸಂಧಿ ದೊರೆತಿತು. ೧೬೮೮ರಲ್ಲಿ ಇಂಗ್ಲಂಡಿನಲ್ಲಿ ರಾಜ್ಯಕ್ರಾಂತಿಯಾಗಿ ರಾಜ್ಯಕಾರಭಾರದಲ್ಲಿ ಪಾರ್ಲಿಮೆಂಟ ಸಭೆಯ ವರ್ಚಸ್ಸು ಪ್ರಸ್ಥಾಪಿತ ಾಗುವವರೆಗೆ ಪರಕೀಯ ರಾಜಕಾರಣದಲ್ಲಿ ಇಂಗ್ಲಂಡಿಗೆ ತನ್ನ ಮಹತ್ವವನ್ನು ಸ್ಥಾಪಿಸಲು ಶಕ್ಯವಾಗಲಿಲ್ಲ.

## ಸ್ಟುಅರ್ಟ ವಂಶದ ವಂಶವೃಕ್ಷವು.



**ಜೇಮ್ಸನ ಸ್ವಭಾವವೂ ಮತಗಳೂ**—ಜೇಮ್ಸನು ಪಟ್ಟಕ್ಕೆ ಬಂದಾಗ ೩೭ ವರ್ಷದವನಿದ್ದನು. ಅವನು ಇಂಗ್ಲಂಡಿನ ಅರಸನಾಗುವ ಮೊದಲು ಸ್ಕಾಟ ಲಂಡಿನ ಅರಸನಾಗಿದ್ದನು. ಆದುದರಿಂದ ಅವನು ಈಗ ಇಂಗ್ಲಂಡ್, ಸ್ಕಾಟ ಲಂಡ್ ಮತ್ತು ಐರ್ಲಂಡ್ ಈ ಮೂರರೂ ದೇಶಗಳ ಅರಸನಾದನು. ಈ ಮೂರರೂ ದೇಶಗಳ ಪಾರ್ಲಿಮೆಂಟುಗಳು ಬೇರೆಬೇರೆಯಾಗಿದ್ದುವು. ಅವುಗಳ ಏಕೀಕರಣವು ಆಗ ಆಗಿದ್ದಿಲ್ಲ. ಜೇಮ್ಸನು ಸ್ವಭಾವದಿಂದ ಅಂಜುಬುರುಕನೂ ದುರ್ಬಲನೂ ಆಗಿದ್ದನು. ಆದುದರಿಂದ ಯಾವ ಕೆಲಸವನ್ನಾದರೂ ನಿರ್ದಾಕ್ಷಿಣ್ಯದಿಂದ ಕೊನೆ ಗಾಣಿಸುವ ಧೈರ್ಯವು ಅವನಲ್ಲಿ ಇರಲಿಲ್ಲ. ಈ ಕಾರಣದಿಂದ ಅವನು ಪರಾವ ಲಂಬಿಯಾಗಿ ಇರಬೇಕಾಗುತ್ತಿತ್ತು. ಸ್ಕಾಟಲಂಡಿನಲ್ಲಿ ಇರುವವರೆಗೆ ಅರನ್ ಮತ್ತು ಲೆನಾಕ್ಸ ಎಂಬವರು ಅವನಿಗೆ ಮಂತ್ರಿಗಳಾಗಿದ್ದರು, ತರುವಾಯದಲ್ಲಿ ಇಂಗ್ಲಂಡಿನಲ್ಲಿ ಅವನಿಗೆ **ರಾಬರ್ಟ ಸೆಸಿಲ್**, **ರಾಚೆಸ್ಟರ** ಮತ್ತು **ಬಕಿಂಗಹ್ಯಾಮು** ಇವರು ಮಂತ್ರಿಗಳಾದರು. ಜೇಮ್ಸನು ಕುರೂಪಿಯೂ ಸ್ಥೂಲದೇಹಿಯೂ ಇದ್ದನು. ಮುಖದಲ್ಲಿ ತೇಜವು ಇರಲಿಲ್ಲ. ಅವನು ಗರ್ವಿಷ್ಠನಾಗಿದ್ದು ಅವನಿಗೆ ತನ್ನ ವಿದ್ಯೆಯ ವಿಷಯದಲ್ಲಿ ಹೆಮ್ಮೆಯಿತ್ತು. ಜೇಮ್ಸನು ಒಂದು ವರ್ಷದವನಿದ್ದಾಗ ಅವನಿಗೆ ಸ್ಕಾಟಲಂಡಿನ ಪಟ್ಟವು ದೊರೆತಿತ್ತು; ಮತ್ತು ವಂಶಪರಂಪರೆಯ ಅಧಿಕಾರ ದಿಂದ ಇಂಗ್ಲಂಡಿನ ಪಟ್ಟಕ್ಕೂ ಅವನು ಒಡೆಯನಾದನು. **ರಾಜನ ಸತ್ತೆ ಈಶ್ವರದತ್ತವಾದುದು** ಎಂಬ **ತತ್ವದಲ್ಲಿ** (Divine Right Theory) ಆತನಿಗೆ ಮೊದಲಿನಿಂದ ವಿಶ್ವಾಸವಿತ್ತು, ಆದುದರಿಂದ ರಾಜನ ಅಧಿಕಾರಗಳ ವಿಷಯದಲ್ಲಿ ಆತನ ಕಲ್ಪನೆಗಳು ವಿಲಕ್ಷಣವಾಗಿದ್ದುವು. ಈ ತತ್ವದಂತೆ ರಾಜನಿಗೆ ರಾಜ್ಯವಾಳಲು ಅಧಿಕಾರವು ಬರುವುದು ಪ್ರಜೆಗಳ ಇಚ್ಛೆಯಿಂದಲ್ಲ, ಆದರೆ ಈಶ್ವರನ ಸಂಕೇತದಿಂದ, ರಾಜನು ತನ್ನ ಕೃತಿಗಳಿಗೋಸುಗ ಜವಾಬದಾರನಾಗಿರುವುದು ಪ್ರಜೆಗಳಿಗಲ್ಲ ಆದರೆ ಈಶ್ವರನಿಗೆ, ಹೊಸ ಕಾಯ್ದೆಯನ್ನು ಮಾಡಲೂ ಇದ್ದ ಕಾಯ್ದೆಯನ್ನು ರದ್ದುಗೊಳಿಸಲೂ ರಾಜನಿಗೆ ಅಧಿಕಾರವಿರುವುದಲ್ಲದೆ ಯಾವ ಕಾಯ್ದೆಯೂ ಅವನಿಗೆ ಬಂಧನಕಾರಕವಾಗದು. ಈ ತತ್ವವನ್ನು ಪ್ರತಿಪಾದಿ ಸಲು ಜೇಮ್ಸನು ಸ್ಕಾಟಲಂಡಿನಲ್ಲಿರುವಾಗ ಒಂದು ಪುಸ್ತಕವನ್ನು ಬರೆದಿದ್ದನು.

**ಜೇಮ್ಸನ ಧಾರ್ಮಿಕ ಮತಗಳ ವಿಷಯವಾಗಿ ಇಂಗ್ಲಂಡಿನಲ್ಲಿಯ ಜನರ ಕಲ್ಪನೆಗಳು**—ಜೇಮ್ಸನು ಇಂಗ್ಲಂಡಿನ ಪಟ್ಟಕ್ಕೆ ಬಂದಾಗ ಅವನ ಸ್ವಭಾವ ವನ್ನಾಗಲಿ ಅವನ ಮತಗಳನ್ನಾಗಲಿ ಅಲ್ಲಿಯ ಜನರು ಸರಿಯಾಗಿ ಅರಿತಿರಲಿಲ್ಲ. ಆದುದರಿಂದ ಎಪಿಸ್‌ಕೊಪೇಲಿಯನ್, ಪ್ಯೂರಿಟನ್ ಮತ್ತು ರೋಮನ್

**ಕ್ಯಾಥೊಲಿಕ್** ಈ ಮೂರೂ ಪಂಥದವರಿಗೆ ಜೇಮ್ಸನಿಂದ ತಮಗೆ ಲಾಭವನ್ನು ಮಾಡಿಕೊಳ್ಳಲು ಬರಬಹುದೆಂದು ಎನಿಸುತ್ತಿತ್ತು. ಜೇಮ್ಸನ ಆಯುಷ್ಯವು *ಪ್ರೆಸ್‌ಬಿಟೇರಿಯನ್ ಪಂಥದ ಸ್ಕಾಟಿಶ್ ಜನರ ಸಹವಾಸದಲ್ಲಿ ಹೋದುದರಿಂದ ಪ್ಯೂರಿಟನ್ ಪಂಥದವರ ವಿಷಯದಲ್ಲಿ ಅವನು ಸಹಾನುಭೂತಿಯುಳ್ಳವನಾಗ ಬಹುದೆಂದು ಆ ಪಂಥದವರು ಬಗೆದಿದ್ದರು. ಸ್ಕಾಟಲಂಡಿನ ರಾಣಿಯಾದ ಮೇರಿ ರೋಮನ್ ಕ್ಯಾಥೊಲಿಕ ಪಂಥದ ಏಕನಿಷ್ಠ ಅನುಯಾಯಿಯಾಗಿದ್ದಳು, ಆದುದ ರಿಂದ ಅವಳ ಮಗನಾದ ಜೇಮ್ಸನಿಗೆ ಆ ಪಂಥದ ವಿಷಯದಲ್ಲಿ ಸಹಾನುಭೂತಿ ಇರುವುದು ಸ್ವಾಭಾವಿಕವೆಂದು ರೋಮನ್ ಕ್ಯಾಥೊಲಿಕ್ ಪಂಥದವರು ತಿಳಿದಿ ದ್ದರು. ಇಂಗ್ಲಂಡಿನ ಬಹುಜನ ಸಮಾಜವು ಎಪಿಸ್‌ಕೊಪೇಲಿಯನ್ ಪಂಥದ ಅನುಯಾಯಿಯಾಗಿತ್ತು. ಜೇಮ್ಸನ ವಿಷಯದಲ್ಲಿ ಅವರ ಕಲ್ಪನೆ ಬೇರೆಯೇ ಇದ್ದಿತು. ಜೇಮ್ಸನು ಯಾವ ಪಂಥದವನಿದ್ದರೇನು, ಇಂಗ್ಲಂಡಿನ ಬಹುಜನ ಸಮಾಜದ ವಿರುದ್ಧವಾಗಿ ಅವನು ವರ್ತಿಸಲಾರನೆಂದು ಅವರು ಎಂದುಕೊಂಡಿ ದ್ದರು. ಹೀಗೆ ಜೇಮ್ಸನ ವಿಷಯದಲ್ಲಿ ಬೇರೆ ಬೇರೆ ಪಂಥದವರಿಗೆ ಬೇರೆ ಬೇರೆ ಕಲ್ಪನೆಯಿತ್ತು.

†**ಹ್ಯಾಮಟನ್ ಕೋರ್ಟ, ಪರಿಷತ್ತು ೧೬೦೪**—ಜೇಮ್ಸನು ಪಟ್ಟಕ್ಕೆ ಬಂದ ಬಳಿಕ ಪ್ಯೂರಿಟನ್ ಪಂಥದವರು ತಮ್ಮ ಅಭಿಪ್ರಾಯಗಳನ್ನು ಅವನ ಮುಂದೆ ಇರಿಸಿದರು. ಇಂಗ್ಲಂಡಿನ ಎಪಿಸ್‌ಕೊಪೇಲಿಯನ್ ಪಂಥದ ನಿಯಮ ದಂತೆ ಇಂಗ್ಲಂಡಿನಲ್ಲಿ ಧಾರ್ಮಿಕ ವ್ಯವಸ್ಥೆಯನ್ನು ನೋಡುವುದು ಆರ್ಚಬಿಶಪ್, ಬಿಶಪ್ ಈ ಅಧಿಕಾರಿಗಳ ಕೆಲಸವಾಗಿತ್ತು. ಧಾರ್ಮಿಕ ವಿಷಯದಲ್ಲಿ ಅರಸನೇ ಶ್ರೇಷ್ಠನಾದ ಅಧಿಕಾರಿಯೆಂದು ಈ ಪಂಥದವರು ತಿಳಿಯುತ್ತಿದ್ದುದರಿಂದ ಜೇಮ್ಸ ನಿಗೆ ಎಪಿಸ್‌ಕೊಪೇಲಿಯನ್ ಪಂಥದ ವಿಷಯದಲ್ಲಿ ಸಹಾನುಭೂತಿಯೆನಿ ಸಿತು. ಸ್ಕಾಟಲಂಡಿನಲ್ಲಿಯ ಪ್ರೆಸ್‌ಬಿಟೇರಿಯನ್ ಪಂಥದವರಂತೆ ಇಂಗ್ಲಂಡಿನ

---

*ಪ್ರೆಸ್‌ಬಿಟೇರಿಯನ್ ಪಂಥವು:— ಸ್ಕಾಟಲಂಡಿನ ಧರ್ಮಪಂಥಕ್ಕೆ ಪ್ರೆಸ್‌ಬಿಟೇರಿಯನ್ ಪಂಥವೆಂದು ಹೆಸರು. ಸ್ಕಾಟಿಶ್ ಜನರು ಯುರೋಪದಲ್ಲಿಯ ಕ್ಯಾಲ್ವಿನ್ ಮೊದಲಾದ ಧರ್ಮ ಸುಧಾರಕರಂತೆ ಧರ್ಮಸುಧಾರಣೆಯನ್ನು ಮಾಡಿದ್ದರು. ಚರ್ಚಿಗೆ ಸಂಬಂಧಪಟ್ಟ ಸಂಗತಿಗಳಲ್ಲಿ ಬಿಶಪರ ವರ್ಚಸ್ಸಿರಲಿಲ್ಲ. ಚರ್ಚಿನ ಎಲ್ಲ ವ್ಯವಸ್ಥೆ ಸಾಮಾನ್ಯಜನರಲ್ಲಿಯ ವಯಸ್ಕರಾದವರ (Presbyter) ಮತದಂತೆ ನಡೆಯುತ್ತಿತ್ತು.

†ಹ್ಯಾಮಟನ್ ಕೋರ್ಟ ಎಂಬುದು ಥೇಮ್ಸನದಿಯ ದಂಡೆಯ ಮೇಲಿನ ಒಂದು ಸುಂದರವಾದ ಹಳ್ಳಿ. ಇಲ್ಲಿ ವೂಲ್ಸೆ ಒಂದು ಸುಂದರವಾದ ಪ್ರಾಸಾದವನ್ನು ಕಟ್ಟಿಸಿದನು. ಅದನ್ನು ಆತನು ೮ನೆಯ ಹೆನ್ರಿಗೆ ಕಾಣಿಕೆಯಾಗಿ ಕೊಟ್ಟನು.

ಲ್ಲಿಯ ಪ್ಯೂರಿಟಿನ್ ಪಂಥದವರಿಗೆ ಅನೇಕ ವಿಷಯಗಳಲ್ಲಿ ಸುಧಾರಣೆಯಾಗುವುದು ಬೇಕಾಗಿತ್ತು, ಮತ್ತು ಬಿಶಪರ ಧಾರ್ಮಿಕ ವರ್ಚಸ್ಸು ಅವರಿಗೆ ಮಾನ್ಯವಾಗಿರಲಿಲ್ಲ. ಆದುದರಿಂದ ಜೇಮ್ಸನಿಗೆ ಪ್ಯೂರಿಟನ್ ಪಂಥದವರ ವಿಷಯದಲ್ಲಿ ಸಹಾನುಭೂತಿಯಿರಲಿಲ್ಲ. "ಇಂದು ಇವರಿಗೆ ಬಿಶಪರು ಬೇಕಾಗಿಲ್ಲ; ನಾಳೆ ಅರಸನೂ ಬೇಕಾಗಲಿಕ್ಕಿಲ್ಲ" ಎಂದು ಜೇಮ್ಸನು ಎನ್ನುತ್ತಿದ್ದನು. ಆದರೂ ಅವನು ಎಪಿಸ್‌ಕೊಪೇಲಿಯನ್ ಮತ್ತು ಪ್ಯೂರಿಟನ್ ಈಯೆರಡೂ ಪಂಥಗಳ ಪ್ರತಿನಿಧಿಗಳ ಅಭಿಪ್ರಾಯಗಳನ್ನು ಕೇಳಿಕೊಳ್ಳಲು **ಹ್ಯಾಮಟನ್ ಕೋರ್ಟ** ಎಂಬಲ್ಲಿ ಒಂದು ಪರಿಷತ್ತನ್ನು ನೆರೆಯಿಸಿದನು. ಜೇಮ್ಸನು ಅವರ ಅಭಿಪ್ರಾಯಗಳನ್ನು ಕೇಳಿಕೊಂಡು ಎಪಿಸ್‌ಕೊಪೇಲಿಯನ್ ಪಂಥದವರ ಅಭಿಪ್ರಾಯಗಳು ತನಗೆ ಮಾನ್ಯವಿರುವವೆಂದು ಹೇಳಿದನು (೧೬೧೪). ಜೇಮ್ಸನ ಈ ಅಭಿಪ್ರಾಯದಿಂದ ಪ್ಯೂರಿಟನ ಪಂಥದವರಿಗೆ ಪೂರ್ಣ ನಿರಾಶೆಯಾಯ್ತು. ಎಲಿಝಾಬೆಥ್ ರಾಣಿಯ ಆಳ್ಕೆಯಲ್ಲಿ ಅವರ ವಿರುದ್ಧವಾಗಿ ನಿರ್ಮಿಸಲ್ಪಟ್ಟ ಕಾಯ್ದೆಗಳು ಈಗ ಉಗ್ರರೀತಿಯಿಂದ ಉಪಯೋಗಿಸಲ್ಪಡತೊಡಗಿದುವು. ಅದರಿಂದ ಇಂಗ್ಲಂಡನ್ನು ಬಿಟ್ಟುಹೋಗುವುದು ಒಳಿತೆಂದು ಪ್ಯೂರಿಟನ ಜನರಿಗೆ ತೋರಿತು. ಎಪಿಸ್‌ಕೊಪೇಲಿಯನ್ ಪಂಥದವರಿಗೆ ಜೇಮ್ಸನ ಸಹಾನುಭೂತಿಯಿದ್ದುದರಿಂದ ಅವರು ಅವನ **ರಾಜನ ಸತ್ತೆ ಈಶ್ವರದತ್ತವಾದುದು** ಎಂಬ ತತ್ವಕ್ಕೆ (Divine Right Theory) ಬೆಂಬಲವನ್ನಿತ್ತರು. ಹ್ಯಾಮಟನ್ ಕೋರ್ಟ ಪರಿಷತ್ತು ***ಬೈಬಲನ್ನು ಇಂಗ್ಲಿಶ ಭಾಷೆ**ಯಲ್ಲಿ ಪರಿವರ್ತಿಸಿತು (೧೬೧೧). ಈ ಪರಿವರ್ತನೆಯ ಕೆಲಸವು ೪೭ ಧರ್ಮಾಧಿಕಾರಿಗಳಿಗೆ ಒಪ್ಪಿಸಲ್ಪಟ್ಟಿತ್ತು. ಹಿಬ್ರು ಮತ್ತು ಗ್ರೀಕ ಭಾಷೆಗಳಲ್ಲಿಯ ಬೈಬಲನ್ನು ಅವರು ಇಂಗ್ಲಿಶ್ ಭಾಷೆಯಲ್ಲಿ ಭಾಷಾಂತರಿಸಿದರು.

**ಮೇನ ಪ್ಲಾಟ್ ಮತ್ತು ಬಾಯ ಪ್ಲಾಟ್, ೧೬೦೩**—ಜೇಮ್ಸನು ಇಂಗ್ಲಂಡಿನ ಪಟ್ಟಕ್ಕೆ ಬಂದ ಒಳಿಕ ಎಲಿಝಾಬೆಥ್ ರಾಣಿಯ ರಾಬರ್ಟ ಸೆಸಿಲ್ ಎಂಬ ಕರ್ತೃತ್ವಶಾಲಿಯಾದ ಮಂತ್ರಿಯನ್ನೆ ತನ್ನ ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು. ಜೇಮ್ಸನ ಆಳಿಕೆಯಲ್ಲಿಯೂ ಸೆಸಿಲನಿಗೆ ಮುಖ್ಯ ಮಂತ್ರಿಪದವು ಬಂದುದನ್ನು ಕಂಡು ಅವನ ಶತ್ರುಗಳು ಅವನ ವಿಷಯದಲ್ಲಿ ಮತ್ಸರವನ್ನು ತಳೆದು ಅವನ ವಿರುದ್ಧವಾಗಿ ಪ್ರಯತ್ನಗಳನ್ನು ನಡೆಯಿಸಿದರು. **ಲಾರ್ಡ ಕ್ಯಾಬ್ರಹ್ಯಾಮ್ ಮತ್ತು ಸರ ವಾಲ್ಟರ ರ್‍ಯಾಲೆ** ಎಂಬವರ ನೇತೃತ್ವದಲ್ಲಿ **ಮೇನ್ ಪ್ಲಾಟ್** ಎಂಬ ಒಳಸಂಚು ನಡೆಯಿತು. ಸೆಸಿಲನನ್ನು ಮಂತ್ರಿಪದದಿಂದ ತಳ್ಳುವುದು ಮತ್ತು

*Authorised Version.

ಸ್ಪೇನದ ಸಾಹಾಯ್ಯದಿಂದ ಜೇಮ್ಸನನ್ನು ಪಟ್ಟದಿಂದ ತಳ್ಳಿ ಅವನ ಒಳಗ ದೊಳಗಿನ *ಅರಾಬೆಲ್ಲಾ ಸ್ಟುಅರ್ಟ ಎಂಬವಳಿಗೆ ಪಟ್ಟಗಟ್ಟುವುದು ಈ ಸಂಚಿನ ಉದ್ದೇಶವಾಗಿತ್ತು. ವಾಟಸನ್ ಎಂಬ ರೋಮನ ಕ್ಯಾಥೊಲಿಕ ಪಂಥದ ಧರ್ಮಾಧಿಕಾರಿಯ ಪ್ರೇರಣೆಯಿಂದ 'ಬಾಯ ಪ್ಲಾಟ್' ಎಂಬ ಒಳಸಂಚು ರಚಿಸಲ್ಪಟ್ಟಿತು. ರೋಮನ ಕ್ಯಾಥೊಲಿಕ್ ಪಂಥದವರಿಗೆ ಕೆಲವು ಹಕ್ಕುಗಳು ದೊರೆವವರೆಗೆ ಜೇಮ್ಸನನ್ನು ಪ್ರತಿಬಂಧದಲ್ಲಿಡುವುದು ಈ ಸಂಚಿನ ಉದ್ದೇಶವಿತ್ತು. ಆದರೆ ಈ ಎರಡೂ ಸಂಚುಗಳ ಗುಟ್ಟು ಗೊತ್ತಾಯ್ತು ಮತ್ತು ಅವುಗಳಲ್ಲಿ ತೊಡಗಿದ ಜನರು ಶಿಕ್ಷೆಗೆ ಗುರಿಮಾಡಲ್ಪಟ್ಟರು. ಸೆಸಿಲನ ಶತ್ರುವಾದ ಸರ ವಾಲ್ಟರ ರ್‍ಯಾಲೆ ಈತನಿಗೆ ಮರಣದ ಶಿಕ್ಷೆ ಹೇಳಲ್ಪಟ್ಟಿತು. ಆದರೆ ಅವನು ಕೊಲ್ಲಲ್ಪಡದೆ ಲಂಡನಿನ ಕಾರಾಗೃಹದಲ್ಲಿ ಇಡಲ್ಪಟ್ಟನು.

**ಗನ್ ಪೌಡರ ಪ್ಲಾಟ್, ೧೬೦೫**—೧೬೦೫ರಲ್ಲಿ ಗನ್ ಪೌಡರ ಪ್ಲಾಟ್ ಎಂಬ ಒಳಸಂಚು ನಡೆಯಿತು. ಜೇಮ್ಸನಿಂದ ತಮಗೆ ಅನೇಕ ಹಕ್ಕುಗಳು ದೊರೆಯಬಹುದೆಂದು ರೋಮನ್ ಕ್ಯಾಥೊಲಿಕ್ ಪಂಥದವರು ಎಣಿಸಿದ್ದರು. ಆದರೆ ಅವರ ಆಶೆ ಬಯಲಾಯ್ತು, ಮತ್ತು ಜೇಮ್ಸನು ಅವರನ್ನು †ಛಲನೆಗೆ ಗುರಿಮಾಡಿದನು. ರೋಮನ್ ಕ್ಯಾಥೊಲಿಕ್ ಜನರಿಗೆ ಮಾರ್ಗವು ತೋಚದಾಯ್ತು. ಕೊನೆಗೆ ರಾಬರ್ಟ ಕ್ಯಾಟ್ಸಬಿ ಎಂಬವನು ರೋಮನ್ ಕ್ಯಾಥೊಲಿಕ್ ಪಂಥದ ಕೆಲವು ಜನರನ್ನು ಕೂಡಿಕೊಂಡು ಒಂದು ಭಯಂಕರವಾದ ಒಳಸಂಚನ್ನು ರಚಿಸಿದನು. ಈ ಸಂಚುಗಾರರು ಪಾರ್ಲಿಮೆಂಟ ಸಭಾಗೃಹದ ಕೆಳಗಿನ ನೆಲಮನೆಯನ್ನು ಬಾಡಿಗೆಯಿಂದ ಹಿಡಿದು ಅದರಲ್ಲಿ ಮದ್ದನ್ನು ತುಂಬಿದರು. ಪಾರ್ಲಿಮೆಂಟ ಸಭೆಯ ಅಧಿವೇಶನದ ಮೊದಲನೆಯ ದಿನವೆ ಅರಸನು, ಕಾಮನ್ಸ ಮತ್ತು ಲಾರ್ಡ್ಸ ಸಭೆಗಳ ಎಲ್ಲ ಸದಸ್ಯರು ಅಲ್ಲಿ ನೆರೆದಾಗ ಮದ್ದಿಗೆ ಬೆಂಕಿಯಿಕ್ಕಿ ಎಲ್ಲರನ್ನು ಮೃತ್ಯುವಿಗೆ ಗುರಿಮಾಡಬೇಕೆಂದು ಅವರು ನಿಶ್ಚಯಿಸಿದ್ದರು. ಈ ಭಯಂಕರವಾದ ಕೃತ್ಯವನ್ನು ನೆರವೇರಿಸುವ ಕೆಲಸವು ಗಾಯ್ ಫಾಕ್ಸ್ ಎಂಬವನಿಗೆ ಒಪ್ಪಿಸಲ್ಪಟ್ಟಿತ್ತು. ಈ ಸಂಚಿನಲ್ಲಿ ಸೇರಿದ ಒಬ್ಬ ಮನುಷ್ಯನು ಲಾರ್ಡ್ಸ ಸಭೆಯಲ್ಲಿಯ ಲಾರ್ಡ ಮಾಂಟಿ

---

*೧೫೫ನೆಯ ಪುಟದಲ್ಲಿಯ ವಂಶವೃಕ್ಷವನ್ನು ನೋಡಿರಿ.

†ಕ್ಯಾಥೊಲಿಕ್ ಜನರ ಛಲನೆಯನ್ನು ಮಾಡಲು ಜೇಮ್ಸನು ಎಪಿಸ್ಕೊಪೇಲಿಯನ್ ಪಂಥದ ಚರ್ಚಿನಲ್ಲಿ ಪ್ರಾರ್ಥನೆಗೆ ಹೋಗದವರಿಗೆ ದಂಡವನ್ನು ಮಾಡಲಾರಂಭಿಸಿದನು. ಈ ದಂಡವನ್ನು ವಸೂಲುಮಾಡಲು ಅನೇಕ ಭೂಮಿಗಳನ್ನು ಅವನು ಜಪ್ತಮಾಡಿಸಿದನು. ಈ ಬಗೆಯಾಗಿ ಒಂದು ವರ್ಷದಲ್ಲಿ ೬೦೦ ಕ್ಯಾಥೊಲಿಕ ಜನರು ಎಪಿಸ್ಕೊಪೇಲಿಯನ್ ಚರ್ಚಿಗೆ ಹೋಗಲಿಲ್ಲೆಂಬ ಆರೋಪದಿಂದ ನ್ಯಾಯಾಸನಕ್ಕೆ ಎಳೆಯಲ್ಪಟ್ಟರು.

ಗಲ್ ಎಂಬ ರೋಮನ್ ಕ್ಯಾಥೊಲಿಕ ಸರದಾರನ ಪ್ರಾಣವನ್ನು ಉಳಿಸಬೇಕೆಂದು ಅವನಿಗೆ ಒಂದು ಅನಾಮಿಕ ಪತ್ರವನ್ನು ಬರೆದನು. ಅದರಲ್ಲಿ ಅವನು, '೫ನೆಯ ನವೆಂಬರದ ದಿವಸ ಕೂಡುವ ಪಾರ್ಲಿಮೆಂಟಿನ ಅಧಿವೇಶನಕ್ಕೆ ನೀವು ಹೋಗ ಕೂಡದು, ಏಕೆಂದರೆ ಅಂದು ಭಯಂಕರವಾದ ಅನರ್ಥವು ಒದಗುವ ಸಂಭವವಿರುವುದು' ಎಂದು ಸೂಚಿಸಿದ್ದನು. ಲಾರ್ಡ ಮೊಂಟೆಗಲನಿಗೆ ಅದರ ಅರ್ಥವಾಗಲಿಲ್ಲ. ಅವನು ಆ ಪತ್ರವನ್ನು ಜೇಮ್ಸನಿಗೆ ಕಳಿಸಿದನು. ಜೇಮ್ಸನ ಮುಖ್ಯ ಮಂತ್ರಿಯಾದ **ರಾಬರ್ಟ ಸೆಸಿಲನಿಗೆ** ಸಂಚಿನ ಸಂಶಯವು ಬಂದಿತು. ಅವನು ಪಾರ್ಲಿಮೆಂಟ ಸಭೆ ನೆರೆವ ಹಿಂದಿನ ದಿವಸವೆ (೪ ನವೆಂಬರ) ಪಾರ್ಲಿಮೆಂಟ ಸಭಾಗೃಹದ ಕೆಳಗಿನ ನೆಲಮನೆಯಲ್ಲಿ ಶೋಧಮಾಡಲು ಗುಪ್ತಚಾರರನ್ನೂ ಸೈನಿಕರನ್ನೂ ಕಳಿಹಿದನು. ನೆಲಮನೆಯಲ್ಲಿ ಮದ್ದು ತುಂಬಿದೆಂದು ಅವರಿಗೆ ಗೊತ್ತಾಯ್ತು. ಮದ್ದಿಗೆ ಬೆಂಕಿಯಿಕ್ಕುವ ಕೆಲಸವನ್ನು ಕೈಕೊಂಡಿದ್ದ **ಗಾಯ ಫಾಕ್ಸ** ಎಂಬವನನ್ನು ಅವರು ಅಲ್ಲಿಯೆ ಹಿಡಿದರು. ಗಾಯ ಫಾಕ್ಸನೂ ಅವನ ಸಂಗಡಿಗರೂ ರಾಜಾಜ್ಞೆಯಿಂದ ಕೊಲ್ಲಲ್ಪಟ್ಟರು. ಹೀಗೆ ಈ ಸಂಚಿನ ಮೂಲವು ರೋಮನ್ ಕ್ಯಾಥೊಲಿಕ ಪಂಥದವರನ್ನು ಸಂಬಂಧಿಸಿದುದೆಂದು ಗೊತ್ತಾದ ಬಳಿಕ ಎಲ್ಲೆಲ್ಲಿಯೂ ಅವರ ವಿಷಯದಲ್ಲಿ ದ್ವೇಷವೂ ತಿರಸ್ಕಾರವೂ ತಲೆದೋರಿದುವು. ಆ ಬಳಿಕ ಅವರ ವಿರುದ್ಧವಾಗಿ *ಕಾಯ್ದೆಗಳು ಮಾಡಲ್ಪಟ್ಟುವು ಮತ್ತು ಅವುಗಳ ಪ್ರಯೋಗವೂ ಉಗ್ರವಾಗತೊಡಗಿತು.

**ಜೇಮ್ಸನು ಮತ್ತು ಪಾರ್ಲಿಮೆಂಟು**—ರಾಜನ ಸತ್ತೆ ಮತ್ತು ಅಧಿಕಾರವು **ಈಶ್ವರದತ್ತವಾಗಿರುವುವು**. ಆದುದರಿಂದ ಅವನನ್ನು ಯಾರೂ ವಿರೋಧಿಸಕೂಡದೆಂದು ಜೇಮ್ಸನ ಮತವಿತ್ತು. ಇದರಿಂದ ಜೇಮ್ಸ ಮತ್ತು ಪಾರ್ಲಿಮೆಂಟು ಇವರ ನಡುವೆ ಪರಸ್ಪರರ ಅಧಿಕಾರಗಳ ವಿಷಯದಲ್ಲಿ ಅಸಂತೋಷವು ಹುಟ್ಟಿತು. ಎಲಿಝಾಬೆಥ ರಾಣಿಯ ಕಾಲದಿಂದ ಸ್ಪೇನ ಮತ್ತು ಇಂಗ್ಲಂಡ್ ಇವುಗಳ ನಡುವೆ ತೀವ್ರವಾದ ವೈರವು ಇದ್ದಿತಾದುದರಿಂದ ಸ್ಪೇನದೊಡನೆ ಸಖ್ಯವು ಇರಲಾಗದೆಂದು ನಿಶ್ಚಿತವಾದಂತಾಗಿತ್ತು. ಆದುದರಿಂದ ಸ್ಪೇನದೊಡನೆ ಸಖ್ಯವನ್ನು ಬಯಸುವ ಜೇಮ್ಸನ ನೀತಿ ಪಾರ್ಲಿಮೆಂಟಿಗೆ ಸರಿದೋರಲಿಲ್ಲ. ಜೇಮ್ಸನ ಮೊದಲನೆಯ ಪಾರ್ಲಿಮೆಂಟು ೧೬೦೪ರಿಂದ ೧೬೧೧ರ ವರೆಗೆ ಇದ್ದಿತು. ಈ ಪಾರ್ಲಿಮೆಂಟು ಆಯಾತ ವಸ್ತುಗಳ ಮೇಲೆ **"ಟನೇಜ ಮತ್ತು ಪೌಂಡೇಜ"** ಎಂಬ ಕರವನ್ನು ತಾನು

*ರೋಮನ್ ಕ್ಯಾಥೊಲಿಕ ಜನರಿಗೆ ಇಂಗ್ಲಂಡಿನಲ್ಲಿ ವಾಸವಾಗಿರಲು ಪ್ರತಿಬಂಧವು ಮಾಡಲ್ಪಟ್ಟಿತು. ಮತ್ತು ಅವರು ವಕೀಲರಾಗಲಿ ಡಾಕ್ಟರರಾಗಲಿ ಆಗಕೂಡದೆಂದು ನಿಯಮವಾಯ್ತು.

ಬದುಕಿರುವ ವರೆಗೆ ತೆಗೆದುಕೊಳ್ಳಲು ಜೇಮ್ಸನಿಗೆ ಅಧಿಕಾರವನ್ನು ಕೊಟ್ಟಿತು. ಮಾದಕ ಪೇಯಗಳ ಮೇಲೆ ಕರವನ್ನು ಒಂದು **ಟನ್ನಿಗೆ** ಇಷ್ಟರಂತೆ ಮತ್ತು ಇತರ ವಸ್ತುಗಳ ಮೇಲೆ ಕರವನ್ನು ಒಂದು **ಪೌಂಡಿನ** ಬೆಲೆಗೆ ಇಷ್ಟರಂತೆ ತೆಗೆದುಕೊಳ್ಳಬೇಕೆಂಬ ನಿಯಮವು ಮಾಡಲ್ಪಟ್ಟಿತಾದುದರಿಂದ ಈ ಕರಕ್ಕೆ **ಟನೇಜ** ಮತ್ತು ಪೌಂಡೇಜ ಎಂದು ಹೆಸರು ಬಂದಿತು. ಈ ಕರದಿಂದಾಗುವ ಉತ್ಪನ್ನವಲ್ಲದೆ ಅರಸನಿಗೆ ತನ್ನ ಸ್ವಂತ ಭೂಮಿಗಳಿಂದಲೂ ಸರಂಜಾಮಿಯ ಕಾಣ್ಕೆಗಳಿಂದಲೂ ಉತ್ಪನ್ನವು ದೊರೆಯುತಿತ್ತು. ಆದರೆ ೧೬ನೆಯ ಶತಕದಲ್ಲಿ ಅಮೇರಿಕೆಯಿಂದ ಯುರೋಪದಲ್ಲಿ ಮತ್ತು ಇಂಗ್ಲಂಡಿನಲ್ಲಿ ಬೆಳ್ಳಿಬಂಗಾರಗಳ ಆಯಾತವು ಬಹಳವಾಯ್ತಾದುದರಿಂದ ಪದಾರ್ಥಗಳ ಬೆಲೆಗಳು ಬಹಳವಾಗಿ ಹೆಚ್ಚಿದುವು. ರಾಜನ ಕ್ಲಪ್ತವಾದ ಉತ್ಪನ್ನವು ರಾಜ್ಯಕಾರಭಾರದ ವೆಚ್ಚಕ್ಕೆ ಸಾಕಾಗದಂತಾಯ್ತು. ಆದುದರಿಂದ ಅವನು ಪಾರ್ಲಿಮೆಂಟಿನ ಸಮ್ಮತಿಯನ್ನು ಪಡೆಯದೆ ತನ್ನ ಅಧಿಕಾರದಿಂದೆಯೆ ೧೬೦೮ರಲ್ಲಿ ಆಯಾತವಸ್ತುಗಳ ಮೇಲಿನ ಜಕಾತಿಯನ್ನು (ಟನೇಜ ಮತ್ತು ಪೌಂಡೇಜ) ಹೆಚ್ಚಿಸಿದನು.* ಹೆಚ್ಚಿಸಿದ ಕರವನ್ನು ಕೊಡಲು ಒಪ್ಪದಿದ್ದವರು ಶಿಕ್ಷೆಯನ್ನು ಅನುಭವಿಸಬೇಕಾಯ್ತು. ಪಾರ್ಲಿಮೆಂಟು ಈ ವಿಷಯದಲ್ಲಿ ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸಿತು, ಮತ್ತು ಕರವನ್ನು ಕೂಡಿಸಲು ಅಧಿಕಾರವು ಅರಸನಿಗಿರದೆ ಪಾರ್ಲಿಮೆಂಟಿಗೆ ಇರುವುದೆಂದು ಪ್ರಕಟಿಸಿತು. ಪಾರ್ಲಿಮೆಂಟಿನ ಈ ಕೃತಿಯಿಂದ ಜೇಮ್ಸನಿಗೆ ಕೋಪವು ಬಂದಿತು. ಅವನು ಆ ಪಾರ್ಲಿಮೆಂಟನ್ನು ವಿಸರ್ಜಿಸಿದನು (೧೬೧೧). ಜೇಮ್ಸನು ಮುಂದೆ ಮೂರು ವರ್ಷಗಳ ವರೆಗೆ ಪಾರ್ಲಿಮೆಂಟಿನ ಸಭೆಯನ್ನು ಕರೆಯಲಿಲ್ಲ; ಮತ್ತು ತನ್ನ ಅಧಿಕಾರದಲ್ಲಿಯೆ ಕರಗಳನ್ನು ಕೂಡಿಸುವ ಪ್ರಘಾತವನ್ನು ಪ್ರಾರಂಭಿಸಿದನು. ಆದರೆ ಅವನಿಗೆ ಸಾಕಷ್ಟು ಹಣವು ದೊರೆಯಲಿಲ್ಲವಾದುದರಿಂದ ೧೬೧೪ರಲ್ಲಿ ಪಾರ್ಲಿಮೆಂಟ ಸಭೆಯನ್ನು ಕರೆದನು. ಆದರೆ ಈ ಸಭೆಯೂ ರಾಜನ ನೀತಿಯನ್ನು ಕುರಿತು ತನ್ನ ಅಸಮ್ಮತಿಯನ್ನು ವ್ಯಕ್ತಗೊಳಿಸಿ ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ರಾಜನು ಕರವನ್ನು ಕೂಡಿಸಲಾರನೆಂದು ಪ್ರಕಟಿಸಿತು. ಆಗ ಜೇಮ್ಸನು ಈ ಪಾರ್ಲಿಮೆಂಟನ್ನೂ ವಿಸರ್ಜಿಸಿದನು (೧೬೧೪). ಮುಂದೆ ಪ್ರಸಿದ್ಧಿಯನ್ನು ಪಡೆದ **ಜಾನ್ ಪಿಮ್** ಮತ್ತು ಸರ **ಜಾನ್**

---

* ಟನೇಜ ಮತ್ತು ಪೌಂಡೇಜ ಕರವನ್ನು ತಾನು ಬದುಕಿರುವವರೆಗೆ ತೆಗೆದುಕೊಳ್ಳಲು ಜೇಮ್ಸನಿಗೆ ಪಾರ್ಲಿಮೆಂಟು ಅಧಿಕಾರವನ್ನು ಕೊಟ್ಟಿತ್ತು. ಯಾವ ವಸ್ತುವಿಗೆ ಎಷ್ಟು ಕರವನ್ನು ತೆಗೆದುಕೊಳ್ಳಬೇಕೆಂಬದು ನಿರ್ಣಯಿಸಲ್ಪಟ್ಟಿತ್ತು. ಆದರೆ ಜೇಮ್ಸನು ನಿರ್ಣಯಿಸಲ್ಪಟ್ಟ ಪ್ರಮಾಣವನ್ನು ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಹೆಚ್ಚಿಸಿದನು. ಹೀಗೆ ಹೆಚ್ಚಿಸಲ್ಪಟ್ಟ ಕರಕ್ಕೆ "New Impositions" ಎಂದು ಹೆಸರು.

ಇಲಿಯಟ್ ಎಂಬವರು ಈ ಪಾರ್ಲಿಮೆಂಟಿನಲ್ಲಿ ಸದಸ್ಯರಿದ್ದರು. ಜೇಮ್ಸನು ಮುಂದೆ ಏಳು ವರ್ಷಗಳ ವರೆಗೆ ಪಾರ್ಲಿಮೆಂಟ ಸಭೆಯನ್ನು ಕರೆಯಲಿಲ್ಲ. ರಾಜ್ಯಕಾರ ಭಾರದ, ಆಸ್ಥಾನದ ಮತ್ತು ಉಳಿದ ವೆಚ್ಚಗಳಿಗೋಸುಗ ಅವನು ತನ್ನ ಸ್ವಂತ ಅಧಿಕಾರದಿಂದ ಆಯಾತವಸ್ತುಗಳ ಮೇಲಿನ ಕರವನ್ನು ಹೆಚ್ಚಿಸಿದನು. ಯಾವು ದಾದರೊಂದು ವಸ್ತುವಿನ ವ್ಯಾಪಾರವನ್ನು ಮಾಡಲು 'ಸರ್ವಾಧಿಕಾರ'ವನ್ನು (Monopoly) ಮಾರುವ ಪದ್ಧತಿ ಎಲಿಝಾಬೆಥ ರಾಣಿಯ ಆಳ್ಕೆಯಲ್ಲಿ ತಡೆಯ ಲ್ಪಟ್ಟಿತ್ತು. ಅದನ್ನು ಜೇಮ್ಸನು ಮತ್ತೆ ಪ್ರಾರಂಭಿಸಿದನು ಮತ್ತು ದೊಡ್ಡ ದೊಡ್ಡ ಪದವಿಗಳನ್ನು ಮಾರುವ ಮತ್ತು ಕಾಣ್ಕೆಗಳನ್ನು ಸ್ವೀಕರಿಸುವ ಪದ್ಧತಿಯನ್ನು ಪ್ರಚಾರದಲ್ಲಿ ತಂದನು.

**ಜೇಮ್ಸನ ಮಂತ್ರಿಗಳು—ರಾಬರ್ಟ ಸೆಸಿಲ್, ಸಮರಸೆಟ್ ಮತ್ತು ಬಕಿಂಗಹ್ಯಾಮ್**—ಜೇಮ್ಸ ಮತ್ತು ಪಾರ್ಲಿಮೆಂಟ್ ಇವರ ನಡುವೆ ವಿತುಷ್ಟವು ಬರುತ್ತಿರುವಾಗ ಜೇಮ್ಸನ ಮಂತ್ರಿಗಳಲ್ಲಿಯೂ ಬದಲಾಗುತ್ತಿತ್ತು. ೧೬೦೩ರಿಂದ ೧೬೧೨ರ ವರೆಗೆ **ರಾಬರ್ಟ ಸೆಸಿಲನು** ಮುಖ್ಯ ಮಂತ್ರಿಯಾಗಿದ್ದನು. ಜೇಮ್ಸನು ಅವನನ್ನು ೧೬೦೫ರಲ್ಲಿ **ಸ್ಯಾಲಿಸ್‌ಬರಿಯ ಅರ್ಲ** (ಸರದಾರ)ನಾಗಿ ಮಾಡಿ ದನು. ಸೆಸಿಲನು ಕುಶಲನಾದ ರಾಜಕಾರಣಿಯೂ ಕರ್ತೃತ್ವಶಾಲಿಯೂ ಆಗಿ ದ್ದನು. ಅದರಿಂದ ರಾಜ್ಯಕಾರಭಾರವು ಸರಿಯಾಗಿ ನಡೆಯಿತು. ಅವನು ೧೬೧೨ರಲ್ಲಿ ಸಾಯಲು ಜೇಮ್ಸನು ಸ್ಕಾಟಲಂಡಿನಿಂದ ಬಂದ **ರಾಬರ್ಟ ಕರ** ಎಂಬವನನ್ನು **ಸಮರಸೆಟದ ಅರ್ಲ**ನಾಗಿ ಮಾಡಿ ಅವನನ್ನು ತನ್ನ ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು. ಮೋಹಕವಾದ ಮುಖಮುದ್ರೆ ಮತ್ತು ಒಯ್ಯಾರ ಇವುಗಳ ಹೊರ್ತು ಬೇರೆ ಗುಣಗಳಾವುವೂ ಸಮರಸೆಟನಲ್ಲಿ ಇದ್ದಿಲ್ಲ. ಅವನು ಯೋಗ್ಯತಾಹೀನನೂ ಸ್ವಾರ್ಥಿಯೂ ಆಗಿದ್ದನು. ೧೬೧೬ರ ವರೆಗೆ ಜೇಮ್ಸನ ಮೇಲೆ ಸಮರಸೆಟನ ವರ್ಚಸ್ಸು ಇದ್ದಿತು. ಆದರೆ ಜೇಮ್ಸನಿಗೂ ಅವನ ನಡತೆ ಸರಿದೋರದಂತಾಯ್ತು, ಆದುದರಿಂದ ಅವನು ಸಮರಸೆಟನನ್ನು ಸೆರೆಯಲ್ಲಿಟ್ಟನು. ಆ ಬಳಿಕ ಜೇಮ್ಸನು **ಜಾರ್ಜ ವ್ಹಿಲರ್ಸ** ಎಂಬವನನ್ನು **ಬಕಿಂಗಹ್ಯಾಮದ ಡ್ಯೂಕ**ನಾಗಿ ಮಾಡಿ ಅವನಿಗೆ ಮುಖ್ಯ ಮಂತ್ರಿಯ ಪದವನ್ನು ಕೊಟ್ಟನು. ಬಕಿಂಗಹ್ಯಾಮನು ಕಾರಸ್ಥಾನಿಯಾಗಿದ್ದುದರಿಂದ ಜೇಮ್ಸನ ಮೇಲೆಯೂ ರಾಜ ಪುತ್ರನಾದ ಚಾರ್ಲಸನ ಮೇಲೆಯೂ ತನ್ನ ವರ್ಚಸ್ಸನ್ನು ಸ್ಥಾಪಿಸಿದ್ದನು.

**ಸರ ವಾಲ್ಟರ ರ್‍ಯಾಲೆ**—ಎಲಿಝಾಬೆಥ ರಾಣಿಯ ಆಳ್ಕೆಯಲ್ಲಿ ಸರ ವಾಲ್ಟರ ರ್‍ಯಾಲೆ ಎಂಬವನು ಕುಶಲನಾವಿಕನೆಂದೂ ಉತ್ತಮ ಸರದಾರನೆಂದೂ ಪ್ರಸಿದ್ಧ

ನಾಗಿದ್ದನು. ೧೬೦೩ರಲ್ಲಿ 'ಮೇನ್ ಪ್ಲಾಟ' ಸಂಚಿನ ಅವನಲ್ಲಿ ಅಂಗವಿತ್ತೆಂದು ಅವನು ಸೆರೆಯಲ್ಲಿ ಇಡಲ್ಪಟ್ಟನು. ಅವನು ಅಮೇರಿಕೆಯ ವರೆಗೆ ನೌಕಾ ಪ್ರವಾಸ ವನ್ನು ಮಾಡಿದ್ದನು. ಆದುದರಿಂದ ಅವನಿಗೆ ಆ ಪ್ರದೇಶದ ವಿಷಯದಲ್ಲಿ ಎಷ್ಟೋ ಮಾಹಿತಿಯಿತ್ತು. ಅವನು ತನ್ನ ಬಿಡುಗಡೆಯಾದರೆ ದಕ್ಷಿಣ ಅಮೇರಿಕೆಯಲ್ಲಿ ಬಂಗಾರದ ಕಣಿಗಳನ್ನು ಶೋಧಿಸಿಕೊಡುವೆನೆಂದು ಹೇಳಿದನು. ಈ ಬಂಗಾರದ ಕಣಿಗಳ ಶೋಧವಾದರೆ ತನಗೆ ಹೇರಳವಾಗಿ ಸಂಪತ್ತು ದೊರೆಯಬಹುದೆಂದು ಬಗೆದು ಜೇಮ್ಸನು ಅವನ ಬಿಡುಗಡೆಯನ್ನು ಮಾಡಿದನು. ಆದರೆ ದಕ್ಷಿಣ ಅಮೇರಿಕೆಯಲ್ಲಿಯ ಸ್ಪ್ಯಾನಿಶ್ ವಸಾಹತುಗಳೊಡನೆ ಸ್ನೇಹದಿಂದ ಇದ್ದು ಈ ಮಾತನ್ನು ಸಾಧಿಸಬೇಕೆಂದು ಹೇಳಿ ಜೇಮ್ಸನು ಅವನನ್ನು ಜಲಪ್ರವಾಸಕ್ಕೆ ಕಳಿಸಿದನು (೧೬೧೬). ಆದರೆ ಸರ ವಾಲ್ಟರ ರ್‍ಯಾಲೆ ದಕ್ಷಿಣ ಅಮೇರಿಕೆಗೆ ಹೋದ ಬಳಿಕ ಅವನ ಜನರಿಗೂ ಅಲ್ಲಿಯ ಸ್ಪ್ಯಾನಿಯರ್ಡರಿಗೂ ಕಲಹವು ಹುಟ್ಟಿ ಅವನ ಜನರು ಸ್ಪ್ಯಾನಿಯರ್ಡರ ಒಂದು ಊರನ್ನು ಉಧ್ವಸ್ತಗೊಳಿಸಿದರು. ಆದರೆ ರ್‍ಯಾಲೆಗೆ ಬಂಗಾರದ ಕಣಿಗಳ ಶೋಧವು ಮಾತ್ರ ಆಗಲಿಲ್ಲ. ಅವನ ಮಗನೂ ಅವನೊಡನೆ ಹೋದ ಎಷ್ಟೋ ಜನರೂ ಬೇನೆಗೆ ಗುರಿಯಾಗಿ ಮೃತ್ಯುವಶರಾದರು. ಹೀಗೆ ರ್‍ಯಾಲೆ ಹಾನಿಗೊಳಪಟ್ಟು ಅಯಶಸ್ವಿಯಾಗಿ ತಿರುಗಿ ಬರಬೇಕಾಯ್ತು. ಸ್ಪೇನದ ಅರಸನು ರ್‍ಯಾಲೆಯ ವರ್ತನದ ವಿಷಯದಲ್ಲಿ ತನ್ನ ಮನಸ್ತಾಪವನ್ನು ಜೇಮ್ಸನಿಗೆ ತಿಳಿಸಿದನು. ಜೇಮ್ಸನು ಸ್ಪೇನದ ಅರಸನನ್ನು ಸಂತೋಷಗೊಳಿಸಲು ೧೫ ವರ್ಷಗಳ ಹಿಂದೆ ಮೇನ್ ಪ್ಲಾಟ ಸಂಚಿನಲ್ಲಿ ಭಾಗವಹಿಸಿದ ಆರೋಪವನ್ನಿಟ್ಟು ರ್‍ಯಾಲೆಗೆ ಮರಣಶಿಕ್ಷೆ ಯನ್ನು ವಿಧಿಸಿದನು. ೧೬೧೮ರಲ್ಲಿ ರ್‍ಯಾಲೆ ಶೂಲಕ್ಕೇರಿಸಲ್ಪಟ್ಟನು.

**ಜೇಮ್ಸನ ಪರರಾಷ್ಟ್ರೀಯ ನೀತಿ**—ಜೇಮ್ಸನಿಗೆ ಸ್ಪೇನದ ಶ್ರೇಷ್ಠತೆಯ ವಿಷಯದಲ್ಲಿ ಬಹು ಆದರವಿದ್ದಿತು, ಆದುದರಿಂದ ತನ್ನ ಮಗನಾದ ಚಾರ್ಲಸನಿಗೆ ಸ್ಪೇನದ ರಾಜಕನ್ಯೆಯೊಡನೆ ಲಗ್ನವು ಆಗಬೇಕೆಂದು ಮತ್ತು ಸ್ಪೇನದೊಡನೆ ಸಖ್ಯವು ಬೆಳೆಯಬೇಕೆಂದು ಆತನ ಇಚ್ಛೆಯಿತ್ತು. ಆದರೆ ಪಾರ್ಲಿಮೆಂಟಿಗೆ ಅವನ ಈ ನೀತಿ ಸರಿದೋರಲಿಲ್ಲ. ಸ್ಪೇನದ ಗಂಡೊಮಾರನೆಂಬ ವಕೀಲನು ಇಂಗ್ಲಂಡಿನ ಆಸ್ಥಾನದಲ್ಲಿದ್ದನು. ಅವನು ಸ್ಪೇನದ ವೈಭವದ ಮತ್ತು ಶ್ರೇಷ್ಠತ್ವದ ವಿಷಯ ದಲ್ಲಿ ಜೇಮ್ಸನ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಮಾಡಿದ್ದನು. ಆದ್ದರಿಂದ ಜೇಮ್ಸನ ಇಚ್ಛೆ ಬಲವತ್ತರವಾಯ್ತು. ಇದೇ ಸಮಯದಲ್ಲಿ ಸರ ವಾಲ್ಟರ ರ್‍ಯಾಲೆಯ ಪ್ರಕರಣವೂ ಉಪಸ್ಥಿತವಾಯ್ತು. ಸ್ಪೇನದ ಅರಸನನ್ನು ಸಂತೋಷ ಗೊಳಿಸಲು ಜೇಮ್ಸನು ರ್‍ಯಾಲೆಯನ್ನು ಮರಣಕ್ಕೆ ಗುರಿಮಾಡಿದನು.

೧೬೧೮ರಲ್ಲಿ ಜರ್ಮನಿಯಲ್ಲಿ ಧಾರ್ಮಿಕ ಪ್ರಶ್ನೆಯ ಕೊನೆಯ ನಿರ್ಣಯಕ್ಕೋಸುಗ ರೋಮನ ಕ್ಯಾಥೊಲಿಕ ಪಂಥದ ಮತ್ತು ಪ್ರಾಟೆಸ್ಟಂಟ ಪಂಥದ ಸಂಸ್ಥಾನಿಕರಲ್ಲಿ **ಮೂವತ್ತು ವರ್ಷಗಳ ಯುದ್ಧವು** (೧೬೧೮—೧೬೪೮) ಪ್ರಾರಂಭವಾಯ್ತು. ಜರ್ಮನಿಯಲ್ಲಿಯ ಪ್ಯಾಲಾಟೈನಿನ ಸಂಸ್ಥಾನಿಕನಾದ **ಫ್ರೆಡರಿಕನು** ಪ್ರಾಟೆಸ್ಟಂಟ ಪಂಥದವನಿದ್ದನು. ಯುದ್ಧದಲ್ಲಿ ಅವನು ಸೋತನು, ಮತ್ತು ಅವನ ಸಂಸ್ಥಾನವು ಶತ್ರುಗಳ ವಶದಲ್ಲಿ ಹೋಯ್ತು. ಫ್ರೆಡರಿಕನು ಜೇಮ್ಸನ ಅಳಿಯನು (ಜೇಮ್ಸನ **ಎಲಿಝಾಬೆಥ್** ಎಂಬ ಮಗಳ ಗಂಡನು). ಆದುದರಿಂದ ಜೇಮ್ಸನ ಲಕ್ಷ್ಯ ಈ ಯುದ್ಧದ ಕಡೆಗೆ ಹೋಯ್ತು. ಫ್ರೆಡರಿಕನಿಗೆ ಸಾಹಾಯ್ಯಮಾಡಲು ಸೈನ್ಯವನ್ನು ಕಳಿಸಬೇಕೆಂದು ಅವನಿಗೆ ಎನಿಸಿತು. ಪ್ರಾಟೆಸ್ಟಂಟ ಪಂಥದ ಸಂಸ್ಥಾನಗಳ ಸಾಹಾಯ್ಯಕ್ಕೋಸುಗ ಹಣವನ್ನು ಕೊಡಲು ಪಾರ್ಲಿಮೆಂಟು ಒಪ್ಪಬಹುದೆಂದು ತಿಳಿದು ಅವನು ೧೬೨೧ರಲ್ಲಿ ಪಾರ್ಲಿಮೆಂಟಿನ ಸಭೆಯನ್ನು ಕರೆದನು.

**ಜೇಮ್ಸ ಮತ್ತು ಪಾರ್ಲಿಮೆಂಟ್ ಇವರ ನಡುವೆ ವಿರೋಧವು**— ೧೬೨೧ರಲ್ಲಿ ನೆರೆದ ಪಾರ್ಲಿಮೆಂಟ ಸಭೆ ಜರ್ಮನಿಯಲ್ಲಿಯ ಯುದ್ಧದಲ್ಲಿ ತೊಡಗಿದ ಪ್ರಾಟೆಸ್ಟಂಟ ಪಂಥದವರಿಗೆ ಸಾಹಾಯ್ಯಮಾಡಲು ಹಣವನ್ನು ಕೊಡಲು ಒಪ್ಪಿತು. ಆದರೆ ಮುಂದೆ ರಾಜ್ಯಕಾರಭಾರದಲ್ಲಿಯೂ ಲಕ್ಷ್ಯವನ್ನು ಹಾಕಬೇಕೆಂದು ಈ ಸಭೆ ಗೊತ್ತುಮಾಡಿತು. ಪಾರ್ಲಿಮೆಂಟಿನ ಸಮ್ಮತಿಯ ಹೊರ್ತು ಆಯಾತ ವಸ್ತುಗಳ ಮೇಲಿನ ಜಕಾತಿಯನ್ನು ಹೆಚ್ಚಿಸುವುದು, ಕಾಣ್ಕೆಗಳನ್ನು ಸ್ವೀಕರಿಸುವುದು, ಸರ್ವಾಧಿಕಾರಗಳನ್ನು ಮಾರುವುದು ಮೊದಲಾದ ಕಾಯ್ದೆಗೆ ವಿರುದ್ಧವಾದ ಜೇಮ್ಸನ ಕೃತಿಗಳನ್ನು ಪಾರ್ಲಿಮೆಂಟು ಟೀಕಿಸಿ ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಜನರ ಮೇಲೆ ರಾಜನು ಕರವನ್ನು ಕೂಡಿಸಲಾರನೆಂದು ಪ್ರಕಟಿಸಿತು. ಆ ಬಳಿಕ ಮುಖ್ಯ ನ್ಯಾಯಾಧೀಶನಾದ ಲಾರ್ಡ ಚ್ಯಾನ್ಸೆಲರ್ ಬೇಕನ್ ಇವನು ಲಂಚವನ್ನು ತಿಂದಿರುವನೆಂಬ ಆರೋಪದ ವಿಷಯದಲ್ಲಿ ವಿಚಾರಣೆ ಪ್ರಾರಂಭಿಸಲ್ಪಟ್ಟಿತು.* ಬೇಕನನು ತಾನು ಅಪರಾಧಿಯೆಂದು ಒಪ್ಪಿಕೊಂಡುದುದರಿಂದ ಅವನು ಅಧಿಕಾರ

* ಬೇಕನನ ವಿಚಾರಣೆ 'ಇಂಪೀಚಮೆಂಟ' ಪದ್ಧತಿಯಿಂದ ನಡೆಯಿತು. ರಾಜನ ಮುಖ್ಯ ಮಂತ್ರಿಯ ಅಥವಾ ಮಹತ್ವದ ಅಧಿಕಾರಸ್ಥಾನದಲ್ಲಿರುವ ಮನುಷ್ಯನ ವಿಚಾರಣೆಯನ್ನು ಕಾಮನ್ಸ ಸಭೆ ಲಾರ್ಡ್ಸ ಸಭೆಯ ಮುಂದೆ ಮಾಡುತ್ತಿತ್ತು. ಈ ವಿಚಾರಣೆಯ ಸಮಯದಲ್ಲಿ ಆರೋಪವನ್ನು ಸಿದ್ಧಮಾಡುವುದು ಕಾಮನ್ಸ ಸಭೆಯ ಕೆಲಸವಾಗಿತ್ತು ಮತ್ತು ನ್ಯಾಯವನ್ನು ಕೊಡುವುದು ಲಾರ್ಡ್ಸ ಸಭೆಯ ಕೆಲಸವಾಗಿತ್ತು. ಈ ವಿಚಾರಣಾ ಪದ್ಧತಿಗೆ 'ಇಂಪೀಚಮೆಂಟ್' ಎಂದು ಹೆಸರು.

ದಿಂದ ತಳ್ಳಲ್ಪಟ್ಟನು ಮತ್ತು ಅವನಿಗೆ ಭಾರವಾದ ದಂಡವು ವಿಧಿಸಲ್ಪಟ್ಟಿತು (೧೬೨೧). ಸ್ಪೇನದೊಡನೆ ಸಖ್ಯವನ್ನು ಕಾಯ್ದುಕೊಳ್ಳುವ ಜೇಮ್ಸನ ಪರರಾಷ್ಟ್ರೀಯ ನೀತಿ ತನಗೆ ಸಮ್ಮತವಿಲ್ಲವೆಂದು ಪಾರ್ಲಿಮೆಂಟು ಹೇಳಿತು. ತನ್ನ ಮಗನಾದ ಚಾರ್ಲಸನ ವಿವಾಹವು ಸ್ಪ್ಯಾನಿಶ್ ರಾಜಕನ್ಯೆಯೊಡನೆ ಆಗಬೇಕೆಂದು ಜೇಮ್ಸನ ಯೋಚನೆ. ಈ ವಿಷಯದಲ್ಲಿ ಪಾರ್ಲಿಮೆಂಟು ತನ್ನ ಅಸಮ್ಮತಿಯನ್ನು ವ್ಯಕ್ತಗೊಳಿಸಿ ಚಾರ್ಲಸನ ವಿವಾಹವು ಪ್ರಾಟೆಸ್ಟಂಟ ಪಂಥದ ರಾಜಕನ್ಯೆಯೊಡನೆ ಆಗಬೇಕೆಂದು ಸೂಚಿಸಿತು. ತನ್ನ ಅಧಿಕಾರದಲ್ಲಿ ಮತ್ತು ತನ್ನ ಖಾಸಗಿಯ ವ್ಯವಹಾರದಲ್ಲಿ ಪಾರ್ಲಿಮೆಂಟು ಕೈಹಾಕುತ್ತಿರುವುದನ್ನು ಕಂಡು ಜೇಮ್ಸನು ಆ ಪಾರ್ಲಿಮೆಂಟನ್ನು ವಿಸರ್ಜಿಸಿದನು (೧೬೨೨), ಮತ್ತು ಅದರಲ್ಲಿಯ ಮುಂದಾಳುಗಳನ್ನು ಸೆರೆಯಲ್ಲಿರಿಸಿದನು.

ತನ್ನ ಮಗನಾದ ಚಾರ್ಲಸನ ಮದುವೆ ಸ್ಪೇನದ ರಾಜಕನ್ಯೆಯೊಡನೆ ಆಗಬೇಕೆಂದು ಜೇಮ್ಸನು ಬಯಸಿದ್ದನು. ಆದರೆ ಈ ಮದುವೆಯ ವಿಷಯದಲ್ಲಿ ಸ್ಪೇನದ ರಾಜನಿಂದ ಯಾವ ಮಾತೂ ಬರಲಿಲ್ಲ. ಆದುದರಿಂದ ಇದನ್ನು ಒಮ್ಮೆ ಬಗೆಹರಿಸಬೇಕೆಂದು ರಾಜಪುತ್ರ ಚಾರ್ಲಸನೂ ಪ್ರಧಾನನಾದ ಬಕಿಂಗಹ್ಯಾಮನೂ ಸ್ಪೇನಕ್ಕೆ ಹೋದರು. ಆದರೆ ಸ್ಪೇನದ ರಾಜನು ತನ್ನ ಒಪ್ಪಿಗೆಯನ್ನು ಕೊಡಲಿಲ್ಲ (೧೬೨೨). ಆದುದರಿಂದ ಚಾರ್ಲಸನಿಗೆ ಕೋಪವು ಬಂದಿತು. ಅವನು ಮರಳಿ ಇಂಗ್ಲಂಡಿಗೆ ಹೋದ ಬಳಿಕ ಫ್ರಾನ್ಸಿನೊಡನೆ ಮಿತ್ರತ್ವವನ್ನು ಮಾಡಿ ಸ್ಪೇನದೊಡನೆ ಯುದ್ಧಮಾಡಲು ಜೇಮ್ಸನ ಮನವನ್ನು ಒಲಿಸಿದನು. ಆ ಬಳಿಕ ಫ್ರಾನ್ಸಿನ **ಹೆನ್ರಿಯೆಟಾ ಮರಾಯಾ** ಎಂಬ ಕ್ಯಾಥಲಿಕ್ ಪಂಥದ ರಾಜಕನ್ಯೆಯೊಡನೆ ಚಾರ್ಲಸನ ಲಗ್ನವು ಗೊತ್ತಾಯ್ತು. ಈ ಲಗ್ನದ ಪೂರ್ವ ಸಿದ್ಧತೆ ನಡೆದಿರುವಾಗ ೧೬೨೫ರಲ್ಲಿ ಮೇ ತಿಂಗಳಲ್ಲಿ ಜೇಮ್ಸನು ಮರಣಹೊಂದಿದನು.

**ವ್ಯಾಪಾರವೂ ಉಪನಿವೇಶಗಳೂ**—ಜೇಮ್ಸನ ಆಳ್ಕೆಯಲ್ಲಿ ವ್ಯಾಪಾರದ ಮತ್ತು ಉಪನಿವೇಶಗಳ ವೃದ್ಧಿಯಾಯ್ತು. ಅವನ ಆಳ್ಕೆಯಲ್ಲಿ ಐರ್ಲಂಡಿನಲ್ಲಿಯ **ಅಲ್ಸ್ಟರ್** ಪರಗಣೆಯಲ್ಲಿ ಇಂಗ್ಲಿಶ್ ಮತ್ತು ಸ್ಕಾಟಿಶ್ ಜನರು ಹೋಗಿ ಉಪನಿವೇಶಗಳನ್ನು ಸ್ಥಾಪಿಸಿದರು. ಸರ್ **ವಾಲ್ಟರ್** ರ್‍ಯಾಲೆ ಎಲಿಝಾಬೆಥ್ ರಾಣಿ ಆಳುತ್ತಿರುವಾಗ ಉತ್ತರ ಅಮೇರಿಕೆಯಲ್ಲಿ ಒಂದು ಉಪನಿವೇಶವನ್ನು ಸ್ಥಾಪಿಸಲು ಪ್ರಯತ್ನಿಸಿದ್ದನು. ಈ ಉಪನಿವೇಶಕ್ಕೆ ಅವನು ಎಲಿಝಾಬೆಥ್ ರಾಣಿಯ ಸ್ಮರಣಾರ್ಥವಾಗಿ ವರ್ಜೀನಿಯಾ (ವರ್ಜಿನ್=ಕುಮಾರಿಕೆ) ಎಂದು ಹೆಸರನ್ನಿತ್ತನು. ಆದರೆ ಆ ಪ್ರಯತ್ನವು ಯಶಸ್ವಿಯಾಗಲಿಲ್ಲ. ಮುಂದೆ ಜೇಮ್ಸನ ಆಳ್ಕೆಯಲ್ಲಿ ೧೬೦೭ರಲ್ಲಿ ಕೆಲವು ಇಂಗ್ಲಿಶ್ ಜನರು ಅಲ್ಲಿ ಉಪನಿವೇಶವನ್ನು ಸ್ಥಾಪಿಸಿದರು. ಮುಂದೆ ವೆಸ್ಟ

ಇಂಡೀಜ ನಡುಗಡ್ಡೆಗಳಲ್ಲಿಯ **ಬರಬೆಡಾಸ್** ಎಂಬ ನಡುಗಡ್ಡೆಯನ್ನು ಇಂಗ್ಲಿಶರು ತಮ್ಮ ವಶದಲ್ಲಿ ತೆಗೆದುಕೊಂಡರು (೧೬೨೫). ವರ್ಜೀನಿಯಾ ಮತ್ತು ಬರಬೆಡಾಸ್ ಈ ಸ್ಥಳಗಳಲ್ಲಿ ಉಷ್ಣಕಟಿಬಂಧದಲ್ಲಿ ಬೆಳೆವ ತಂಬಾಕು, ಹತ್ತಿ ಮೊದಲಾದ ಬೆಳೆಗಳು ಬೆಳೆಯಿಸಲ್ಪಟ್ಟುವು ಮತ್ತು ಅಲ್ಲಿಯ ಭೂಮಿಗಳಲ್ಲಿ ಕೆಲಸ ಮಾಡಲು ಆಫ್ರಿಕೆಯಿಂದ ನಿಗ್ರೋ ಗುಲಾಮರು ತರಲ್ಪಟ್ಟರು. ಮುಂದೆ ಇಂಗ್ಲಂಡಿನಲ್ಲಿಯ ಪ್ಯುರಿಟನ್ ಪಂಥದ ಜನರು ಧಾರ್ಮಿಕ ಪೀಡೆಗೆ ಬೇಸತ್ತು ಉತ್ತರ ಅಮೇರಿಕೆಗೆ ಹೋಗಿ ಅಲ್ಲಿ ಉಪನಿವೇಶಗಳನ್ನು ಸ್ಥಾಪಿಸಿದರು. ಇಂಗ್ಲಂಡಿನಲ್ಲಿ ತಮಗೆ ತಮ್ಮ ಧಾರ್ಮಿಕ ಭಾವನೆಗಳನ್ನು ಅನುಸರಿಸಿ ಇರುವುದು ಕಠಿಣವೆಂದೆಣಿಸಿ ಅವರು **ಮೇ ಫ್ಲಾವರ** ಎಂಬ ಚಿಕ್ಕ ಹಡಗಿನಲ್ಲಿ ಕುಳಿತು ಇಂಗ್ಲಂಡಿನ ತೀರವನ್ನು ಬಿಟ್ಟು ಉತ್ತರ ಅಮೇರಿಕೆಗೆ ಹೋಗಿ **ನ್ಯೂ ಪ್ಲೀಮಥ** ಎಂಬ ಉಪನಿವೇಶವನ್ನು ಸ್ಥಾಪಿಸಿದರು (೧೬೨೦). ಈ ಜನರು ಧರ್ಮಕ್ಕೋಸುಗ ಇಂಗ್ಲಂಡನ್ನು ಬಿಟ್ಟು ಹೋದುದರಿಂದ ಅವರಿಗೆ **"ಪಿಲ್ಗ್ರಿಮ ಫಾದರ್ಸ"** (ಯಾತ್ರಿಕರು) ಎಂಬ ಹೆಸರು ಬಂದಿತು. ಆ ಬಳಿಕ ಮತ್ತೆ ಕೆಲವು ಪ್ಯುರಿಟನ್ ಜನರು ಅಮೇರಿಕೆಗೆ ಹೋಗಿ ಸಮೀಪದಲ್ಲಿಯೆ **ಮಸಾಚುಸೆಟ್ಸ** ಮತ್ತು ಬೇರೆ ಎರಡು ಉಪನಿವೇಶಗಳನ್ನು ಸ್ಥಾಪಿಸಿದರು. ಈ ನಾಲ್ಕು ಉಪನಿವೇಶಗಳಿಗೂ **"ನ್ಯೂ ಇಂಗ್ಲಂಡ ಉಪನಿವೇಶ"** ಎಂಬ ಹೆಸರು ಉಂಟಾಯ್ತು. ಜೇಮ್ಸನ ಆಳ್ಕೆಯಲ್ಲಿ ಉಪನಿವೇಶಗಳಂತೆ ಇಂಗ್ಲಂಡಿನ ವ್ಯಾಪಾರವೂ ಬಹಳವಾಗಿ ಬೆಳೆದು ಇಂಗ್ಲಿಶ್ ವ್ಯಾಪಾರಸ್ಥರು ಹಿಂದುಸ್ಥಾನ, ಚೀನ, ಆಫ್ರಿಕಾ, ಮತ್ತು ಮಸಾಲೆಯ ನಡುಗಡ್ಡೆಗಳು ಇವೇ ಮೊದಲಾದ ದೂರ ದೂರದ ಪ್ರದೇಶಗಳಲ್ಲಿ ವ್ಯಾಪಾರವನ್ನು ಮಾಡಲಾರಂಭಿಸಿದರು. ಎಲಿಝಾಬೆಥ್ ರಾಣಿಯ ಆಳ್ಕೆಯಲ್ಲಿ ೧೬೦೦ರಲ್ಲಿ ಪೌರ್ವಾತ್ಯದೇಶಗಳೊಡನೆ ವ್ಯಾಪಾರ ಮಾಡಲು ಈಸ್ಟ ಇಂಡಿಯಾ ಕಂಪನಿ ಸ್ಥಾಪಿಸಲ್ಪಟ್ಟಿತ್ತು. ಈ ವ್ಯಾಪಾರದ ಮೂಲಕವಾಗಿ ಡಚ್ ಈಸ್ಟ ಇಂಡಿಯಾ ಕಂಪನಿಗೂ ಈ ಕಂಪನಿಗೂ ಕಲಹಗಳು ಪ್ರಾರಂಭವಾದುವು.

**ಉಳಿದ ಸಂಗತಿಗಳು**—ಆ ಕಾಲದಲ್ಲಿ ನಗರಗಳ ರಚನೆ ಅವ್ಯವಸ್ಥಿತವಾಗಿದ್ದಿತು. ಹೊಲಸು ಹೊರಗೆ ಹೋಗಲು ಅನುಕೂಲತೆ ಇರುತ್ತಿದ್ದಿಲ್ಲ. ಅದರಿಂದ ಆಗಾಗ ರೋಗಗಳು ಉದ್ಭವಿಸುತ್ತಿದ್ದುವು. ಜೇಮ್ಸನ ಆಳ್ಕೆಯ ಮೊದಲನೆಯ ವರ್ಷದಲ್ಲಿಯೇ ಲಂಡನ ನಗರದಲ್ಲಿ ೩೦ ಸಾವಿರ ಜನರು ಪ್ಲೇಗಿಗೆ ತುತ್ತಾದರು. ಜೇಮ್ಸನ ಆಳ್ಕೆಯಲ್ಲಿ ರಾಷ್ಟ್ರದ ರಾಜಕಾರಣದ ಕಡೆಗೆ ಸಾಮಾನ್ಯ ಜನರ ಲಕ್ಷ್ಯವು ಹೋಗತೊಡಗಿತು, ಮತ್ತು ರಾಜಕೀಯ ವಿಷಯಗಳ ಜ್ಞಾನದ ಪ್ರಸಾ

ರವನ್ನು ಮಾಡಲು 'ವಾರದ ವೃತ್ತಪತ್ರಿಕೆ' ಎಂಬ ವೃತ್ತಪತ್ರವು ಇಂಗ್ಲಂಡಿನಲ್ಲಿ ಹೊರಡಲಾರಂಭಿಸಿತು (೧೬೨೨).

---

## ಸಾರಾಂಶವು

### ಒಂದನೆಯ ಜೇಮ್ಸನು (೧೬೦೩—೧೬೨೫)

ಜೇಮ್ಸನ ಮುಖ್ಯ ನೀತಿ—

(೧) ಅನಿಯಂತ್ರಿತವಾಗಿ ರಾಜ್ಯವಾಳುವುದು.

(೨) "ರಾಜನ ಸತ್ತೆ ಈಶ್ವರದತ್ತವಾದುದು" (Divine Right Theory) ಎಂಬ ತತ್ವದಲ್ಲಿ ವಿಶ್ವಾಸವು ಮತ್ತು ಆದರಂತೆ ವರ್ತನವು.

ಜೇಮ್ಸನ ವಿರುದ್ಧವಾಗಿ ಒಳಸಂಚುಗಳು:—

೧೬೦೩—ಮೇನ್ ಪ್ಲಾಟ್—ಜೇಮ್ಸನನ್ನು ಪಟ್ಟದಿಂದ ತಳ್ಳಿ ಅರೆಬೆಲಾ ಸ್ಟುಅರ್ಟ ಇವಳಿಗೆ ಪಟ್ಟಗಟ್ಟಲು ಹೂಡಿದ ಸಂಚು. ಸರ್ ವಾಲ್ಟರ ರ್ಯಾಲೆ ಇವನ ಅಂಗವು ಈ ಸಂಚಿನಲ್ಲಿದ್ದುದರಿಂದ ಅವನು ೧೫ ವರ್ಷಗಳ ವರೆಗೆ ಸೆರೆಯಲ್ಲಿ ಕೊಳೆಯಬೇಕಾಯಿತು.

೧೬೦೫—ಗನ್ ಪೌಡರ್ ಒಳಸಂಚು—ತನಗಾಗುವ ಧಾರ್ಮಿಕ ಪೀಡೆಗೆ ಬೇಸತ್ತು ರೋಮನ್ ಕ್ಯಾಥಲಿಕ್ ಜನರು ಹೂಡಿದ ಸಂಚು. ಕ್ಯಾಟ್ಸಬೀ, ಗಾಯ ಫಾಕ್ಸ. ಇದರಿಂದ ರೋಮನ್ ಕ್ಯಾಥಲಿಕರ ವಿರುದ್ಧವಾಗಿ ಜೇಮ್ಸನು ಹೊಸ ಧೋರಣವನ್ನು ಸ್ವೀಕರಿಸಿದುದು.

ಜೇಮ್ಸನ ಧಾರ್ಮಿಕ ನೀತಿ:—

೧೬೦೪—ಪ್ಯುರಿಟನ್ ಮತ್ತು ಎಪಿಸ್ಕೊಪೇಲಿಯನ್ ಪಂಥಗಳ ಪ್ರತಿನಿಧಿಗಳು ಹ್ಯಾಮಟನ್ ಕೋರ್ಟ ಎಂಬಲ್ಲಿ ನೆರೆಯಿಸಿದ ಪರಿಷತ್ತು. ಎಪಿಸ್ಕೊಪೇಲಿಯನ್ ಪಂಥಕ್ಕೆ ಸಹಾನುಭೂತಿ. ಪ್ಯುರಿಟನ್ ಪಂಥದ ವಿರುದ್ಧವಾಗಿ ಜೇಮ್ಸನ ನೀತಿ.

೧೬೧೧—ಬೈಬಲಿನ ಹೊಸ ಭಾಷಾಂತರವು ಪ್ರಸಿದ್ಧಿಸಲ್ಪಟ್ಟಿತು.

ಜೇಮ್ಸನು ಮತ್ತು ಪಾರ್ಲಿಮೆಂಟು:—

(೧) ಜೇಮ್ಸನ ಅಭಿಪ್ರಾಯಗಳು:—

"ರಾಜನ ಸತ್ತೆ ಈಶ್ವರದತ್ತವಾದುದು" (Divine Right Theory) ಈ ತತ್ವದಂತೆ ಪಾರ್ಲಿಮೆಂಟು ಮತ್ತು ಜನರು ರಾಜನ ಆಜ್ಞೆಯನ್ನು ಮರುಮಾತಿಲ್ಲದೆ ಪಾಲಿಸಬೇಕು; ರಾಜನನ್ನು ವಿರೋಧಿಸಲಾಗದು;

ಪಾರ್ಲಿಮೆಂಟಿನ ಸಮ್ಮತಿ ಇಲ್ಲದೆ ಯಾವ ಕರವನ್ನಾದರೂ ಕೂಡಿಸಲು, ಕಾಯದೆಯನ್ನು ಮಾಡಲು ಅಥವಾ ಇದ್ದ ಕಾಯದೆಯನ್ನು ರದ್ದು ಗೊಳಿಸಲು ರಾಜನಿಗೆ ಸಂಪೂರ್ಣವಾದ ಅಧಿಕಾರವಿರುವುದು.

(೨) ಪಾರ್ಲಿಮೆಂಟಿನ ಅಭಿಪ್ರಾಯಗಳು:—

ಪಾರ್ಲಿಮೆಂಟು ಮಾಡಿದ ಕಾಯದೆಗಳು ಜನರಂತೆ ರಾಜನಿಗೂ ಬಂಧನ ಕಾರಕವಾಗಿರುವುವು; ಪಾರ್ಲಿಮೆಂಟಿನ ಸಮ್ಮತಿ ಇಲ್ಲದೆ ಕರ ಕೂಡಿಸು ವುದು ಕಾಯಿದೆಗೆ ವಿರುದ್ಧವಾದುದು.

ಪಾರ್ಲಿಮೆಂಟಿಗೆ ಸರಿದೋರದ ಈ ಕೆಳಗಿನ ಕೃತಿಗಳನ್ನು ಜೇಮ್ಸನು ಮಾಡಿ ದನು:—

(೧) ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಕರಗಳನ್ನೂ ಸುಂಕಗಳನ್ನೂ ಕೂಡಿಸುವುದು ಮತ್ತು ಅವುಗಳನ್ನು ಬೆಳೆಯಿಸುವುದು.

(೨) ಒತ್ತಾಯದಿಂದ ಸಾಲವನ್ನೂ ಕಾಣ್ಕೆಗಳನ್ನೂ ತೆಗೆದುಕೊಳ್ಳುವುದು.

(೩) ನ್ಯಾಯಾಧೀಶರ ಮೇಲೆ ತನ್ನ ವರ್ಚಸ್ಸನ್ನು ಹಾಕಿ ತನಗೆ ಬೇಕಾದಂತೆ ನ್ಯಾಯನಿರ್ಣಯವನ್ನು ಮಾಡಿಸಿಕೊಳ್ಳುವುದು.

(೪) ಬ್ಯಾರೊನೆಟ್ ಪದವಿಯನ್ನೂ ಸರ್ವಾಧಿಕಾರ (Monopoly) ವನ್ನೂ ಮಾರುವುದು.

(೫) ಪಾರ್ಲಿಮೆಂಟಿನ ವಿಶ್ವಾಸಕ್ಕೆ ಪಾತ್ರವಲ್ಲದವರನ್ನು ಮಂತ್ರಿಗಳಾಗಿ ನಿಯೋಜಿಸುವುದು—ಸಮರಸೆಟ್, ಬಕಿಂಗಹ್ಯಾಮ್.

(೬) ಪಾರ್ಲಿಮೆಂಟಿಗೆ ಸರಿದೋರದ ಪರರಾಷ್ಟ್ರದ ನೀತಿಯನ್ನು ಕೈಕೊಳ್ಳು ವುದು—ಸ್ಪೇನದೊಡನೆ ಮಿತ್ರತ್ವವು.

ಜೇಮ್ಸನಿಂದ ಮೇಲೆ ಹೇಳಿದ ಕೃತಿಗಳು ಆಗಬಾರದೆಂದು ಪಾರ್ಲಿಮೆಂಟು ಯೋಜಿಸಿದ ಉಪಾಯಗಳು:—

(೧) ತನ್ನ ಇಷ್ಟವು ಕೈಗೂಡಿದ ಹೊರತು ರಾಜ್ಯಕಾರಭಾರಕ್ಕೋಸುಗ ರಾಜ ನಿಗೆ ದುಡ್ಡು ಕೊಡಲು ಒಪ್ಪದಿರುವುದು; ಮತ್ತು ರಾಜನ ಕಾಯ್ದೆಯ ವಿರುದ್ಧ ಕೃತಿಗಳನ್ನು ನಿಷೇಧಿಸುವುದು.

(೨) ಬೇಕನನ ಮೇಲೆ ಲಂಚವನ್ನು ತಿಂದ ಆರೋಪವನ್ನು ಹೊರಿಸಿ, ನ್ಯಾ ಯಾಸನಕ್ಕೆಳೆದು ಅವನಿಗೆ ಉಗ್ರವಾದ ದಂಡವನ್ನು ವಿಧಿಸಿ ಅವನನ್ನು ಕೆಲಸದಿಂದ ತಳ್ಳಿದುದು.

(೩) ರಾಜನ ಪರರಾಷ್ಟ್ರೀಯ ನೀತಿಯನ್ನು (ಸ್ಪೇನದೊಡನೆ ಮಿತ್ರತ್ವ) ಟೀಕಿಸುವುದು.

ಜೇಮ್ಸನ ಮುಖ್ಯ ಮಂತ್ರಿಗಳು:—

(೧) ರಾಬರ್ಟ ಸೆಸಿಲ್ (ಅರ್ಲ ಆಫ್ ಸ್ಯಾಲಿಸ್‌ಬರಿ) ೧೬೦೩—೧೬೧೨.
(೨) ರಾಬರ್ಟ ಕರ (ಅರ್ಲ ಆಫ್ ಸಮರಸೆಟ್) ೧೬೧೨—೧೬೧೬.
(೩) ಜಾರ್ಜ ವ್ಹೀಲರ್ಸ (ಅರ್ಲ ಆಫ್ ಬಕ್ಕಿಂಗಹ್ಯಾಮ್) ೧೬೧೬—೧೬೨೫.

ತತ್ಕಾಲೀನ ಪ್ರಮುಖ ಜನರು:—

(೧) ಸರ ವಾಲ್ಟರ ಡ್ಯಾಲೆ--ಸರದಾರನು, ನಾವಿಕನು, ಸಾಹಸಗಾರನು, ಲೇಖಕನು.
(೨) ಜಾನ್ ಪಿಮ್—ಪಾರ್ಲಿಮೆಂಟಿನಲ್ಲಿಯ ಜನರ ನಾಯಕನು.
(೩) ಫ್ರಾನ್ಸಿಸ್ ಬೇಕನ್—ಲೇಖಕನು, ತತ್ವಜ್ಞಾನಿ ಮತ್ತು ವಿದ್ವಾಂಸನು, ಮುಖ್ಯ ನ್ಯಾಯಾಧೀಶನು.

ಉಪನಿವೇಶಗಳೂ ವ್ಯಾಪಾರವೂ:—

ಅಮೆರಿಕೆಯಲ್ಲಿಯ ವರ್ಜಿನಿಯಾ ಉಪನಿವೇಶವು, ಬರಮಿಡಾಸ ನಡುಗಡ್ಡೆ ಮತ್ತು ವರ್ಜಿನಿಯಾ ಈ ಸ್ಥಳಗಳಲ್ಲಿ ತಂಬಾಕು ಹತ್ತಿಗಳನ್ನು ಬೆಳೆಯಿಸು ವುದು. ಪಿಲ್ಗ್ರಿಮ್ ಫಾದರ್ಸ ಇವರು ಅಮೇರಿಕೆಯಲ್ಲಿ ನ್ಯೂ ಪ್ಲೀಮಥ್ ಮತ್ತು ಮ್ಯಾಸಾಚುಸೆಟ್ಸ ಮೊದಲಾದ ನಾಲ್ಕು ಉಪನಿವೇಶಗಳನ್ನು ಸ್ಥಾಪಿಸಿ ದುದು. ಈ ಉಪನಿವೇಶಗಳಿಗೆ ನ್ಯೂ ಇಂಗ್ಲಂಡ ಉಪನಿವೇಶ ಎಂಬ ಹೆಸರು. ಐರ್ಲಂಡಿನಲ್ಲಿ ಅಲ್ಸ್ಟರ ಪರಗಣೆಯ ಸ್ಥಾಪನೆ, ಪೌರ್ವಾತ್ಯ ದೇಶಗಳೊಡನೆ ಈಸ್ಟ ಇಂಡಿಯಾ ಕಂಪನಿಯ ವ್ಯಾಪಾರವು ಮತ್ತು ಡಚ್ ಈಸ್ಟ ಇಂಡಿಯಾ ಕಂಪನಿಯೊಡನೆ ವ್ಯಾಪಾರಸ್ಪರ್ಧ.

# ೯ನೆಯ ಪ್ರಕರಣವು

## ಒಂದನೆಯ ಚಾರ್ಲಸ್

ಜನ್ಮವು (೧೬೦೦); ರಾಜ್ಯಾರೋಹಣವು (೨೫ನೆಯ ವರ್ಷದಲ್ಲಿ) ೧೬೨೫;
ಮೃತ್ಯು ೧೬೪೯.
(೧೬೨೫—೧೬೪೯).

### ತತ್ಕಾಲೀನ ರಾಜ್ಯಕರ್ತರು.

**ಫ್ರಾನ್ಸ**

೧೩ನೆಯ ಲುಯಿ ೧೬೧೦—೧೬೪೩
೧೪ನೆಯ ಲುಯಿ ೧೬೪೩—೧೭೧೫

**ಸ್ಪೇನ**

೪ನೆಯ ಫಿಲಿಪ್ ೧೬೨೧—೧೬೬೫

### ಮಹತ್ವದ ಇಸ್ವಿಗಳು.

೧೬೨೮ "ಪಿಟಿಶನ್ ಆಫ್ ರಾಯಿಟ್ಸ".
೧೬೩೩ ವೆಂಟವರ್ಥನು ಐರ್ಲಂಡಿನ ಲಾರ್ಡ ಲೆಫ್ಟಿನಂಟನು.
೧೬೩೩ ಲಾಡ್, ಕಂಟರ್ಬರಿಯ ಆರ್ಚಬಿಶಪ್‌ನು.
೧೬೩೭ ಜಾನ್ ಹ್ಯಾಮಟನನ ಮೇಲೆ ಖಟ್ಲೆ.
೧೬೩೭ ಸ್ಕಾಟಿಶ್ ಜನರು ರಾಷ್ಟ್ರೀಯ ಪತ್ರಕವನ್ನು ಪ್ರಸಿದ್ಧಗೊಳಿಸಿದರು.
೧೬೪೦ ಲಾಂಗ ಪಾರ್ಲಿಮೆಂಟಿನ ಪ್ರಾರಂಭವು.
೧೬೪೧ ಸ್ಟ್ರಾಫರ್ಡನು ಶೂಲಕ್ಕೇರಿಸಲ್ಪಟ್ಟನು.
೧೬೪೨—೪೯ ಚಾರ್ಲಸನಿಗೂ ಪಾರ್ಲಿಮೆಂಟಿಗೂ ಕದನ.
೧೬೪೪ ಮಾರ್ಸ್ಟನ್ ಮೂರದ ಯುದ್ಧವು.
೧೬೪೫ ನೆಸ್ಬಿಯ ಯುದ್ಧವು.

**ಚಾರ್ಲಸನ ಸ್ವಭಾವವೂ ಅವನ ಮತಗಳೂ**—ಜೇಮ್ಸನ ತರುವಾಯದಲ್ಲಿ ಅವನ ಮಗನಾದ ಚಾರ್ಲಸನು ಇಂಗ್ಲಂಡಿನ ಪಟ್ಟಕ್ಕೆ ಬಂದನು. ಚಾರ್ಲಸನ ಮುಖಮುದ್ರೆ ಭವ್ಯವಾಗಿದ್ದಿತು. ಒಟ್ಟಿನಲ್ಲಿ ಅವನ ನಡತೆ ಸರಿಯಾಗಿದ್ದಿತು. ಅವನಿಗೆ ಇಂಗ್ಲಂಡಿನ ಎಪಿಸ್ಕೊಪೇಲಿಯನ್ ಧರ್ಮಪಂಥದಲ್ಲಿ ಅಭಿಮಾನವಿದ್ದಿತು. ವಿದ್ಯೆಯ ಮತ್ತು ಕಲೆಯ ವಿಷಯದಲ್ಲಿ ಅವನಿಗೆ ಸಹಾನುಭೂತಿ ಇದ್ದಿತು. ಪಟ್ಟಕ್ಕೆ ಬಂದ ಬಳಿಕ ಅವನು "ಹೆನ್ರಿಯೆಟಾ ಮರಾಯಾ" ಎಂಬ ಫ್ರೆಂಚ ರಾಜಕನ್ಯೆಯನ್ನು ಲಗ್ನವಾದನು. ಹೆನ್ರಿಯೆಟಾ ಮರಾಯಾ ಇವಳು ರೋಮನ್

ಕ್ಯಾಥಲಿಕ್ ಪಂಥದವಳಾದುದರಿಂದ ಈ ಲಗ್ನವು ಪ್ಯುರಿಟನ್ ಪಂಥದವರಿಗೆ ಸರಿದೋರಲಿಲ್ಲ. ಜೇಮ್ಸನ ಮಂತ್ರಿಯಾದ ಬಕಿಂಗಹ್ಯಾಮನಲ್ಲಿ ಜನರಿಗೆ ವಿಶ್ವಾಸವಿರಲಿಲ್ಲ. ಅವನು ಅವರಿಗೆ ಅಪ್ರಿಯನಾಗಿದ್ದರೂ ಅವನನ್ನೇ ಚಾರ್ಲಸನು ತನ್ನ ಮುಖ್ಯಮಂತ್ರಿಯಾಗಿ ಮಾಡಿಕೊಂಡನು. ಇದು ಜನರಿಗೆ ಸರಿದೋರಲಿಲ್ಲ. **"ರಾಜನ ಸತ್ತೆ ಈಶ್ವರದತ್ತವಾದುದು"** ಈ ತತ್ವದಲ್ಲಿ ಜೇಮ್ಸನಂತೆ ಚಾರ್ಲಸನಿಗೂ ವಿಶ್ವಾಸವಿದ್ದಿತು, ಮತ್ತು ರಾಜಕೀಯ ವಿಷಯದಲ್ಲಿ ಅವನು ದುರಾಗ್ರಹಿಯಾಗಿದ್ದನು. ಆದುದರಿಂದ ಅವನ ಆಳ್ಕೆಯಲ್ಲಿ ಪಾರ್ಲಿಮೆಂಟಿಗೂ ರಾಜನಿಗೂ ವಿರೋಧವು ಆಗಬಹುದೆಂದು ತೋರಿತು.



ಒಂದನೆಯ ಚಾರ್ಲಸನು

**ಚಾರ್ಲಸನ ಪರರಾಷ್ಟ್ರನೀತಿಯೂ ಪಾರ್ಲಿಮೆಂಟೂ—** ಚಾರ್ಲಸನು ಪಟ್ಟಕ್ಕೆ ಬಂದಾಗ ಇಂಗ್ಲಂಡ್ ಸ್ಪೇನಗಳ ನಡುವೆ ಯುದ್ಧವು ನಡೆದಿತ್ತು. ಜರ್ಮನಿಯಲ್ಲಿ ಕ್ಯಾಥೊಲಿಕ ಪಂಥದ ಮತ್ತು ಪ್ರಾಟೆಸ್ಟಂಟ ಪಂಥದ ಸಂಸ್ಥಾನಿಕರಲ್ಲಿ ಯುದ್ಧವು ಪ್ರಾರಂಭವಾಗಿತ್ತು. ಕ್ಯಾಥೊಲಿಕ ಪಂಥದ ಸ್ಪೇನದೊಡನೆ ಯುದ್ಧವನ್ನು ಸಾಗಿಸಲು ಮತ್ತು ಜರ್ಮನಿಯಲ್ಲಿಯ ಪ್ರಾಟೆಸ್ಟಂಟ ಪಂಥದ ಸಂಸ್ಥಾನಿಕರಿಗೆ ಸಾಹಾಯ್ಯವನ್ನು ಮಾಡಲು ಪಾರ್ಲಿಮೆಂಟಿನಿಂದ ತನಗೆ ಹಣವು ದೊರೆಯಬಹುದೆಂದು ಬಗೆದು ಚಾರ್ಲಸನು ೧೬೨೫ರಲ್ಲಿ ಪಾರ್ಲಿಮೆಂಟ ಸಭೆಯನ್ನು ಕರೆದನು. ಚಾರ್ಲಸನ ಮಂತ್ರಿಯಾದ **ಬಕಿಂಗ್‌ಹ್ಯಾಮನು** ಜೇಮ್ಸನ ಆಳ್ಕೆಯಲ್ಲಿ ಆದ ಸಾಲಕ್ಕೋಸುಗ ೮ ಲಕ್ಷ ಪೌಂಡುಗಳನ್ನು ಮತ್ತು ಸ್ಪೇನದೊಡನೆ ಯುದ್ಧವನ್ನು ಸಾಗಿಸಲು ೧೦ ಲಕ್ಷ ಪೌಂಡುಗಳನ್ನು ಕೊಡಲು ಪಾರ್ಲಿಮೆಂಟನ್ನು ಕೇಳಿದನು. ಆದರೆ ಚಾರ್ಲಸನು ರೋಮನ್ ಕ್ಯಾಥೊಲಿಕ ರಾಜಕನ್ಯೆಯನ್ನು ಮದುವೆಯಾದುದು ಮತ್ತು ಬಕಿಂಗಹ್ಯಾಮನನ್ನು ಮಂತ್ರಿಯಾಗಿ ಮಾಡಿಕೊಂಡುದು ಪಾರ್ಲಿಮೆಂಟಿಗೆ ಸರಿದೋರಿ

ದ್ದಿಲ್ಲ, ಆದುದರಿಂದ **"ಟನೇಜ ಮತ್ತು ಪೌಂಡೇಜ"** ಈ ಕರಗಳಿಂದ ಬರಬಹು ದಾದ ೧॥ ಲಕ್ಷ ಪೌಂಡುಗಳನ್ನು ೧ ವರ್ಷದ ಮಟ್ಟಿಗೆ ಪಾರ್ಲಿಮೆಂಟು ಮಂಜೂರ ಮಾಡಿತು, ಮತ್ತು ಬಕಿಂಗ್‌ಹ್ಯಾಮನನ್ನು ಕೆಲಸದಿಂದ ದೂರಮಾಡಬೇಕೆಂದು ಕೇಳಿತು. ಈ ವರೆಗಿನ ರಾಜರಿಗೆ ಟನೇಜ ಮತ್ತು ಪೌಂಡೇಜ ಕರಗಳಿಂದ ಬರುವ ಹಣವನ್ನು ಜನ್ಮವಿರುವವರೆಗೆ ತೆಗೆದುಕೊಳ್ಳಲು ಪಾರ್ಲಿಮೆಂಟಿನ ಸಮ್ಮತಿ ಇರು ತ್ತಿತ್ತು. ಆದರೆ ತನ್ನ ವಿಷಯದಲ್ಲಿ ಮಾತ್ರ ಒಂದು ವರ್ಷದ ಮಟ್ಟಿಗೆ ಈ ಹಣ ವನ್ನು ಕೊಡಲು ಪಾರ್ಲಿಮೆಂಟು ನಿರ್ಣಯಿಸಿದುದನ್ನು ಕಂಡು ಚಾರ್ಲಸನಿಗೆ ಕೋಪವು ಬಂದಿತು. ಆದುದರಿಂದ ಅವನು ಆ ಪಾರ್ಲಿಮೆಂಟ ಸಭೆಯನ್ನು ವಿಸ ರ್ಜಿಸಿದನು. ಆ ಬಳಿಕ ಚಾರ್ಲಸನು ಸ್ಪೇನದಲ್ಲಿಯ **ಕ್ಯಾಡಿಜ್** ಬಂದರವನ್ನು ವಶ ಪಡಿಸಿಕೊಳ್ಳಲು ಸೈನ್ಯವನ್ನೂ ಹಡಗುಪಡೆಯನ್ನೂ ಕಳುಹಿದನು. ಆದರೆ ಅವು ಯಶಸ್ವಿಯಾಗದೆ ಹಿಂದಿರುಗಬೇಕಾಯಿತು. ಸ್ಪೇನದ ವಿರುದ್ಧವಾಗಿ ತನಗೆ ಫ್ರಾನ್ಸಿ ನಿಂದ ಸಾಹಾಯ್ಯವು ದೊರೆಯಬಹುದೆಂಬ ಆಶೆ ಚಾರ್ಲಸನಿಗೆ ಇದ್ದಿತು. ಆದರೆ ಆ ಆಶೆ ನಿಷ್ಫಲವಾಯ್ತು. ಅದರಿಂದ ಫ್ರಾನ್ಸಿನ ವಿಷಯದಲ್ಲಿ ಅವನಿಗೆ ವೈಮನಸ್ಯವು ಉಂಟಾಯ್ತು. ಇಷ್ಟರಲ್ಲಿ ಫ್ರಾನ್ಸಿನ ರಾಜನಿಗೂ ಅಲ್ಲಿಯ ಹ್ಯೂಗೆನಾಟ್ಸ ಪಂಥದವ ರಿಗೂ ವಿರೋಧವು ಹುಟ್ಟಿತ್ತು. ಫ್ರಾನ್ಸಿನ ಪಶ್ಚಿಮ ದಂಡೆಯ ಮೇಲೆ ಹ್ಯೂಗೆ ನಾಟ್ಸ ಜನರ **ಲಾ ರಾಚೆಲ್** ಎಂಬುದೊಂದು ಕೋಟೆಯಿದ್ದಿತು. ಅದನ್ನು ತೆಗೆದು ಕೊಳ್ಳಲು ಫ್ರಾನ್ಸಿನ ರಾಜನು ಹವಣಿಸಿದನು. ಇಂಗ್ಲಂಡಿನ ಜನರ ಸಹಾನುಭೂತಿ ತನಗೆ ದೊರೆಯಬಹುದೆಂದು ಬಗೆದು ಚಾರ್ಲಸನು ಬಕಿಂಗಹ್ಯಾಮನ ನೇತೃತ್ವದಲ್ಲಿ ಹ್ಯೂಗೆನಾಟ್ಸ ಜನರಿಗೆ ಸಾಹಾಯ್ಯವನ್ನು ಕಳಿಹಿದನು. ಆದರೆ ಬಕಿಂಗಹ್ಯಾಮನು ಹಡಗುಪಡೆಯ ವಿದ್ಯೆಯನ್ನೂ ಯುದ್ಧಕಲೆಯನ್ನೂ ಅರಿಯದವನಾಗಿದ್ದುದರಿಂದ ಅವನು ಅಯಶಸ್ವಿಯಾಗಿ ಮರಳಿ ಬರಬೇಕಾಯ್ತು (೧೬೨೭). ಆದರೂ ರಾಚೆಲ್ ಕೋಟೆಯ ಮುತ್ತಿಗೆಯನ್ನು ಬಿಡಿಸಲು ಮತ್ತೊಮ್ಮೆ ಪ್ರಯತ್ನಿಸಬೇಕೆಂದು ಅವ ನಿಗೆ ಎನ್ನಿಸುತ್ತಿದ್ದುದರಿಂದ ಅದಕ್ಕೋಸುಗ ಅವನು ಸೈನ್ಯವನ್ನು ಕೂಡಿಸುತ್ತಿರು ವಾಗ **ಜಾನ್ ಫೆಲ್ಟನ್** ಎಂಬ ಅವನ ಶತ್ರುವೊಬ್ಬನು ಪೋರ್ಟ್ಸಮಥ್ ಎಂಬಲ್ಲಿ ಅವನನ್ನು ಕೊಂದನು (೧೬೨೮, ಅಗಸ್ಟ).

ಸ್ಪೇನದೊಡನೆ ಮತ್ತು ಫ್ರಾನ್ಸಿನೊಡನೆ ಯುದ್ಧವು ನಡೆದಿತ್ತು. ಅದರ ಮತ್ತು ರಾಜ್ಯಕಾರಭಾರದ ವೆಚ್ಚಕ್ಕೋಸುಗ ಚಾರ್ಲಸನಿಗೆ ಹಣವು ಬೇಕಾಗಿತ್ತು. ಆದುದರಿಂದ ಅವನು ೧೬೨೬ರಲ್ಲಿ ಮತ್ತೆ ಪಾರ್ಲಿಮೆಂಟ್ ಸಭೆಯನ್ನು ಕರೆದನು. ಆದರೆ ಈ ಪಾರ್ಲಿಮೆಂಟು ಬಕಿಂಗಹ್ಯಾಮನನ್ನು ಮಂತ್ರಿಪದದಿಂದ ತಳ್ಳಿದ

ಹೊರ್ತು ಹಣವನ್ನು ಕೊಡಲು ಒಪ್ಪಲಿಲ್ಲ; ಮತ್ತು ರಾಜನಿಗೆ ಅಯೋಗ್ಯವಾದ ಆಲೋಚನೆಯನ್ನಿತ್ತನೆಂದು ಬಕಿಂಗಹ್ಯಾಮನ ಮೇಲೆ ಆರೋಪವನ್ನು ಹೊರಿಸಿ ವಿಚಾರಣೆಯನ್ನು ಮಾಡಲು (ಇಂಪೀಚ್‌ಮೆಂಟ) ನಿಶ್ಚಯಿಸಿತು. ಇದರಿಂದ ಚಾರ್ಲಸನು ಕೋಪಗೊಂಡು ತನ್ನ ಮಂತ್ರಿಯ ವಿರುದ್ಧವಾಗಿ ಯಾರೂ ಏನನ್ನೂ ಎನ್ನಕೂಡದೆಂದು ಕಟ್ಟಪ್ಪಣೆಯನ್ನು ಮಾಡಿದನು. ವಾಸ್ತವಿಕವಾಗಿ ಕಾಯ್ದೆಗೆ ವಿರುದ್ಧವಾಗಿ ರಾಜ್ಯಕಾರಭಾರವನ್ನು ನಡೆಯಿಸಿದ ಮಂತ್ರಿಯ ವಿಚಾರಣೆಯನ್ನು ಮಾಡಿ ಅವನನ್ನು ಅಧಿಕಾರದಿಂದ ತಳ್ಳಬೇಕೆಂದು ಕೇಳಲು ಪಾರ್ಲಿಮೆಂಟಿಗೆ ಅಧಿಕಾರವಿದ್ದಿತು. ಈ ಅಧಿಕಾರವನ್ನು ಪಾರ್ಲಿಮೆಂಟು ಈ ಮೊದಲು ೧೪ನೆಯ ಮತ್ತು ೧೫ನೆಯ ಶತಕಗಳಲ್ಲಿ ಉಪಯೋಗಿಸಿತ್ತು. ಹೀಗಿದ್ದರೂ ಚಾರ್ಲಸನು ಪಾರ್ಲಿಮೆಂಟಿನ ಈ ಅಧಿಕಾರವು ತನಗೆ ಮಾನ್ಯವಿಲ್ಲವೆಂದು ಹೇಳಿ ೧೬೨೬ರಲ್ಲಿ ಜೂನ್ ತಿಂಗಳಲ್ಲಿ ಪಾರ್ಲಿಮೆಂಟಿನ ಈ ಸಭೆಯನ್ನು ಮುರಿದನು. ಆ ಬಳಿಕ ಅವನು ತನ್ನ ಸ್ವಂತದ ಅಧಿಕಾರದಿಂದ ಹಣವನ್ನು ಕೂಡಿಸಲಾರಂಭಿಸಿದನು. ಒತ್ತಾಯದಿಂದ ಜನರಿಂದ ಸಾಲಗಳನ್ನು ತೆಗೆದುಕೊಳ್ಳುವುದು, ಸಾಲವನ್ನು ಕೊಡಲು ಒಪ್ಪದವರನ್ನು ಸೆರೆಯಲ್ಲಿಡುವುದು, ಸೈನಿಕರ ವೆಚ್ಚಕ್ಕೋಸುಗ ಹಣವನ್ನು ಕೊಡಲು ಜನರನ್ನು ಪೀಡಿಸುವುದು, ಲಷ್ಕರಿ ಕಾಯ್ದೆಯನ್ನು (martial law) ಸಾರುವುದು ಇವೇ ಮೊದಲಾದ ಅನ್ಯಾಯದ ಕೃತಿಗಳನ್ನು ಅವನು ಮಾಡಲಾರಂಭಿಸಿದನು.

**ಪಿಟಿಶನ್ ಆಫ್ ರಾಯಿಟ್ಸ, ೧೬೨೮**— ಈ ಬಗೆಯಾಗಿ ಅನ್ಯಾಯದ ಕೃತಿಗಳಿಂದ ಹಣವನ್ನು ಕೂಡಿಸಲು ಚಾರ್ಲಸನು ಪ್ರಯತ್ನಿಸಿದರೂ ಅವನಿಗೆ ರಾಜ್ಯಕಾರಭಾರದ ವೆಚ್ಚಕ್ಕೋಸುಗ ಮತ್ತು ಹ್ಯೂಗೆನಾಟ್ಸ ಜನರ ಸಾಹಾಯ್ಯಕ್ಕೋಸುಗ ಸಾಕಷ್ಟು ಹಣವು ದೊರೆಯಲಿಲ್ಲ. ಆದುದರಿಂದ ಫ್ರಾನ್ಸಿನೊಡನೆ ಯುದ್ಧವನ್ನು ಸಾಗಿಸಲಾದರೂ ಹಣವು ದೊರೆಯಬಹುದೆಂಬ ಆಶೆಯಿಂದ ಅವನು ೧೬೨೮ರಲ್ಲಿ ಪಾರ್ಲಿಮೆಂಟಿನ ಸಭೆಯನ್ನು ಕರೆದನು. ಈ ಪಾರ್ಲಿಮೆಂಟಿನಲ್ಲಿ **ಸರ್ ಥಾಮಸ್ ವೆಂಟ್ವರ್ಥ, ಸರ್ ಜಾನ್ ಇಲಿಯಟ್, ಪಿಮ್, ಮತ್ತು ಹ್ಯಾಮ್‌ಡೆನ್** ಈ ಮುಂದಾಳುಗಳಿದ್ದರು. ಇವರ ನೇತೃತ್ವದಲ್ಲಿ ಈ ಸಭೆಯೂ ಮೊದಲಿನ ಸಭೆಗಳ ನೀತಿಯನ್ನೇ ಕೈಕೊಂಡಿತು ಮತ್ತು ಬಕಿಂಗಹ್ಯಾಮನನ್ನು ಮಂತ್ರಿಪದದಿಂದ ತಳ್ಳಬೇಕೆಂದು ಆಗ್ರಹವನ್ನು ತಳೆಯಿತು. ಅದರಂತೆ ಈ ಸಭೆ ಚಾರ್ಲಸನ ಅನ್ಯಾಯದ ಕೃತಿಗಳನ್ನು ನಿಷೇಧಿಸಿ ಇಂತಹ ಕೃತಿಗಳು ಮುಂದೆ ಆಗಬಾರದೆಂದು **"ಪಿಟಿಶನ್ ಆಫ್ ರಾಯಿಟ್ಸ"** ಎಂಬ ವಿನಂತಿ ಪತ್ರವನ್ನು ರಾಜನೆಡೆಗೆ ಕಳಿಹಿತು.

ಅದರಲ್ಲಿ ಇಂಗ್ಲಿಶ್ ಜನತೆಯ ಪರಂಪರಾಗತವಾದ ಅಧಿಕಾರಗಳ ಉಲ್ಲೇಖವಿದ್ದಿತು ಮತ್ತು ಈ ಕೆಳಗಿನ ಕಲಮುಗಳಿದ್ದುವು:—

(೧) ರಾಜನು ಇನ್ನು ಮುಂದೆ ಒತ್ತಾಯದಿಂದ ಸಾಲವನ್ನು ತೆಗೆದುಕೊಳ್ಳಲಾಗದು.

(೨) ಸೈನಿಕರನ್ನು ಹೆಚ್ಚಿಸಿ ಅದರ ವೆಚ್ಚಕ್ಕೆ ಬೇಕಾಗುವ ಹಣಕ್ಕೋಸುಗ ಜನರನ್ನು ಪೀಡಿಸಲಾಗದು.

(೩) ಯಾವನಾದರೂ ಒಬ್ಬನ ಮೇಲೆ ಯಾವುದಾದರೂ ಆರೋಪವು ಬಂದರೆ, ಅದರ ವಿಚಾರಣೆಯಾಗಿ ಅದು ನಿಜವಾದುದೆಂದು ನಿರ್ಣಯವಾದ ಹೊರ್ತು ಅವನನ್ನು ಸೆರೆಯಲ್ಲಿ ಇರಿಸಲಾಗದು.

(೪) ಶಾಂತತೆಯ ಕಾಲದಲ್ಲಿ ಲಷ್ಕರಿ ಕಾಯ್ದೆಯನ್ನು ಉಪಯೋಗಿಸಲಾಗದು.

ಈ ವಿನಂತಿ ಪತ್ರಕ್ಕೆ ಚಾರ್ಲಸನು ಸಮ್ಮತಿಯನ್ನು ಇತ್ತ ಹೊರ್ತು ಅವನಿಗೆ ಹಣವು ದೊರೆಯಲಾರದೆಂದು ಪಾರ್ಲಿಮೆಂಟು ನಿರ್ಣಯವನ್ನು ಮಾಡಿತು. ಈ ಬಗೆಯಾಗಿ ತನ್ನ ಅಧಿಕಾರವನ್ನು ಮರ್ಯಾದಿತವಾಗಿ ಮಾಡುವ ಈ ವಿನಂತಿ ಪತ್ರಕ್ಕೆ ಸಮ್ಮತಿಯನ್ನು ಕೊಡಬೇಕೋ ಅಥವಾ ಕೊಡಬಾರದೊ ಎಂಬುದು ಚಾರ್ಲಸನಿಗೆ ಒಂದು ದೊಡ್ಡ ಪ್ರಶ್ನೆಯಾಯ್ತು. ಆದರೆ ಅವನಿಗೆ ಈಗ ಹಣದ ಆವಶ್ಯಕತೆ ಬಹಳವಾಗಿತ್ತು ಮತ್ತು ಇನ್ನಾವ ಉಪಾಯದಿಂದಾದರೂ ತನಗೆ ಹಣವು ದೊರೆವುದು ಶಕ್ಯವಲ್ಲವೆಂದು ಅವನಿಗೆ ತೋರಿತ್ತು. ಆದುದರಿಂದ ಅವನು ನಿರುಪಾಯನಾಗಿ ಸಮ್ಮತಿಯನ್ನಿತ್ತನು. ರಾಜನ ಸಮ್ಮತಿ ದೊರೆತ ಬಳಿಕ ಆ ವಿನಂತಿ ಪತ್ರಕ್ಕೆ ಕಾಯ್ದೆಯ ಸ್ವರೂಪವು ಪ್ರಾಪ್ತವಾಯ್ತು. ಆಗ ಪಾರ್ಲಿಮೆಂಟು ೪ ಲಕ್ಷ ಪೌಂಡುಗಳನ್ನು ಕೊಡಬೇಕೆಂದು ನಿರ್ಣಯವನ್ನು ಮಾಡಿತು.

ಚಾರ್ಲಸನು 'ಪಿಟಿಶನ್ ಆಫ್ ರಾಯಿಟ್ಸ' ಕಾಯ್ದೆಗೆ ತನ್ನ ಸಮ್ಮತಿಯನ್ನು ಕೊಟ್ಟುದೇನೊ ನಿಜವು, ಆದರೆ ಅದರಂತೆ ನಡೆವುದು ಅವನ ಮನಸ್ಸಿನಲ್ಲಿರಲಿಲ್ಲ. ಪಾರ್ಲಿಮೆಂಟಿನ ಅಧಿವೇಶನವು ಮುಗಿದೊಡನೆ ಅವನು ಈ ಕಾಯ್ದೆಗೆ ವಿರುದ್ಧವಾಗಿ ನಡೆದನು. ತನ್ನ ಸ್ವಂತದ ಅಧಿಕಾರದಿಂದ ಅವನು ಹೊಸ ಕರಗಳನ್ನು ಕೂಡಿಸಿದನು, ಒತ್ತಾಯದಿಂದ ಸಾಲವನ್ನು ತೆಗೆದುಕೊಳ್ಳಲು ಆರಂಭಿಸಿದನು ಮತ್ತು ಸಾಲವನ್ನು ಕೊಡಲೊಪ್ಪದವರನ್ನು ಸೆರೆಮನೆಗೆ ಕಳಿಸುವ ಕ್ರಮವನ್ನಿಟ್ಟನು. ಚಾರ್ಲಸನ ಈ ಅನ್ಯಾಯದ ಕೃತಿಗಳಿಂದ ಪಾರ್ಲಿಮೆಂಟಿನ ಸದಸ್ಯರು ಸ್ವಾಭಾವಿಕವಾಗಿ ಕೋಪಗೊಂಡರು ಮತ್ತು ಮರುವರ್ಷದ ಪಾರ್ಲಿಮೆಂಟಿನ

ಅಧಿವೇಶನದಲ್ಲಿ (೧೬೨೯) ಚಾರ್ಲಸನ ಕೃತಿಯನ್ನು ನಿಷೇಧಿಸಿದರು. ಪಾರ್ಲಿಮೆಂಟಿನ ಅವಿಧೇಯತೆಯನ್ನು ಕಂಡು ರಾಜನು ಪಾರ್ಲಿಮೆಂಟಿನ ಆ ಅಧಿವೇಶನವನ್ನು ಮುರಿಯಲು ಅಪ್ಪಣೆಯಿತ್ತನು. ಆದರೆ ಈ ಅಪ್ಪಣೆ ಸಭೆಯಲ್ಲಿ ಓದಲ್ಪಡುವ ಮೊದಲೆ ಇಲಿಯಟ್ ಎಂಬ ಮುಂದಾಳುವಿನ ಪ್ರೇರಣೆಯಿಂದ ಪಾರ್ಲಿಮೆಂಟು, 'ಕ್ಯಾಥಲಿಕ್ ಪಂಥಕ್ಕೆ ಮಾನ್ಯತೆಯನ್ನೀವ, ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಕರವನ್ನು ಕೂಡಿಸಲು ಆಲೋಚನೆಯನ್ನೀವ ಮತ್ತು ಈ ಒಗೆಯ ಕರವನ್ನು ಕೊಡುವ ಮನುಷ್ಯನು ರಾಷ್ಟ್ರದ್ರೋಹಿಯಾಗುವನು' ಎಂದು ನಿರ್ಣಯವನ್ನು ಮಾಡಿತು. ಆ ಬಳಿಕ ರಾಜನ ಅಪ್ಪಣೆ ಓದಲ್ಪಟ್ಟಿತು, ಮತ್ತು ಅಧಿವೇಶನವು ಮುಗಿಯಿತು (೧೬೨೯). ತರುವಾಯದಲ್ಲಿ ಚಾರ್ಲಸನು ಪಾರ್ಲಿಮೆಂಟ್ ಸಭೆಯಲ್ಲಿ ನಾಯಕತ್ವವನ್ನು ವಹಿಸಿದ ಇಲಿಯಟನನ್ನು ಸೆರೆಯಲ್ಲಿರಿಸಿದನು.

**ಚಾರ್ಲ್ಸನ ಅನಿಯಂತ್ರಿತ ಕಾರಭಾರವು ಮತ್ತು ಆತನ ಮಂತ್ರಿಗಳಾದ ಸ್ಟ್ರಫರ್ಡ್ ಮತ್ತು ಲಾಡ್ ಇವರು** – ಚಾರ್ಲಸನ ಮಂತ್ರಿಯಾದ ಬಕಿಂಗಹ್ಯಾಮನು ೧೬೨೮ರಲ್ಲಿ ಮಡಿದನು. ಆ ಬಳಿಕ ಚಾರ್ಲಸನು **ಸರ್ ಥಾಮಸ್ ವೆಂಟ್‌ವರ್ಥ** (ಅರ್ಲ ಅಫ್ ಸ್ಟ್ರಫರ್ಡ) ಮತ್ತು ಆರ್ಚಬಿಶಪ್ ಲಾಡ್ ಇವರನ್ನು ತನ್ನ ಮಂತ್ರಿಗಳಾಗಿ ನಿಯೋಜಿಸಿದನು. ಸರ ಥಾಮಸ್ ವೆಂಟ್‌ವರ್ಥನು ಕುಶಾಗ್ರಬುದ್ಧಿಯವನೂ ಕರ್ತೃತ್ವಶಾಲಿಯೂ ಆಗಿದ್ದನು. ಅವನು ಬಕಿಂಗಹ್ಯಾಮನ ಶತ್ರುವಾಗಿದ್ದುದರಿಂದ ಬಕಿಂಗಹ್ಯಾಮನನ್ನು ಮಂತ್ರಿಪದದಿಂದ ತಳ್ಳಿ ಅವನ ವಿಚಾರಣೆಯನ್ನು ಮಾಡಬೇಕೆಂದು ಪಾರ್ಲಿಮೆಂಟಿನ ಅಧಿವೇಶನದಲ್ಲಿ ರಾಜನ ಕಡೆಗೆ ಜೇಡಿಕೆಯನ್ನು ಕಳಿಸುವುದರಲ್ಲಿ ಮುಂದಾಳುವಾಗಿದ್ದನು. ಆದರೆ ಬಕಿಂಗಹ್ಯಾಮನು ಮಡಿದ ಬಳಿಕ ಚಾರ್ಲಸನು ಅವನನ್ನು ತನ್ನ ಪಕ್ಷಕ್ಕೆ ಒಲಿಸಿಕೊಂಡು ಸ್ಟ್ರಫರ್ಡದ ಸರದಾರನಾಗಿಮಾಡಿ ತನ್ನ ಮಂತ್ರಿಯನ್ನು ಮಾಡಿಕೊಂಡನು (೧೬೨೯). ಚಾರ್ಲಸನ ಇನ್ನೊಬ್ಬ ಮಂತ್ರಿ **ವಿಲಿಯಮ್ ಲಾಡ್** ಎಂಬವನು. ಅವನನ್ನು ಚಾರ್ಲಸನು ಕ್ಯಾಂಟರ್ಬರಿಯ ಆರ್ಚಬಿಶಪನ್ನಾಗಿ (ಇಂಗ್ಲಂಡಿನ ಮುಖ್ಯ ಧರ್ಮಾಧಿಕಾರಿ) ನಿಯಮಿಸಿದನು (೧೬೩೩). ಲಾಡ್ ಇವನು ಎಪಿಸ್ಕೊಪೇಲಿಯನ್ ಪಂಥದ ತೀವ್ರ ಅಭಿಮಾನಿಯಾಗಿದ್ದನು. ಆ ಕಾಲದಲ್ಲಿ ಇಂಗ್ಲಂಡಿನಲ್ಲಿ ಪ್ಯುರಿಟನ್ ಪಂಥದ ಪ್ರಸಾರವು ಭರದಿಂದ ಸಾಗಿದ್ದಿತು. ಆ ಪಂಥವನ್ನು ಮಣ್ಣುಗೂಡಿಸಬೇಕೆಂದು ಲಾಡನು ಒಯಸಿದನು. ಧಾರ್ಮಿಕ ವಿಷಯದಲ್ಲಿ ಚಾರ್ಲಸನು ಅವನ ಆಲೋಚನೆಯಂತೆ ನಡೆಯುತ್ತಿದ್ದನು. ೧೬೨೯ರಲ್ಲಿಯ ಪಾರ್ಲಿಮೆಂಟಸಭೆ ಮುರಿದಬಳಿಕ ಮುಂದೆ ೧೧ ವರ್ಷಗಳ ವರೆಗೆ ಚಾರ್ಲ

ಸನು ಪಾರ್ಲಿಮೆಂಟಿನ ಸಭೆಯನ್ನು ಕರೆಯಲಿಲ್ಲ. ಸ್ಟ್ರೆಫರ್ಡನ ಆಲೋಚನೆಯ ನ್ನನುಸರಿಸಿ ಅವನು ತನ್ನ ಅಧಿಕಾರದಿಂದಲೆ ಜನರ ಮೇಲೆ ಕರಗಳನ್ನು ಕೂಡಿಸಿ ದನು. ಈ ಕರಗಳನ್ನು ಕೊಡಲೊಪ್ಪದವರು ಅಥವಾ ರಾಜನ ಅನ್ಯಾಯದ ಕೃತಿಗಳನ್ನು ಟೀಕಿಸಿದವರು **ಸ್ಟಾರ ಚೆಂಬರ ಕೋರ್ಟಿಗೆ** ಎಳೆಯಲ್ಪಟ್ಟು ಶಿಕ್ಷೆಗೆ ಗುರಿಮಾಡಲ್ಪಡುತ್ತಿದ್ದರು. ಧಾರ್ಮಿಕ ವಿಷಯದಲ್ಲಿಯೂ ಎಪಿಸ್ಕೊಪೇಲಿಯನ್ ಪಂಥದಂತೆ ನಡೆಯದಿದ್ದವರನ್ನು ಶಿಕ್ಷಿಸಲು **ಹಾಯ್ ಕಮಿಶನ್ ಕೋರ್ಟು** ಪ್ರಾರಂಭಿಸಲ್ಪಟ್ಟಿತು. ಆರ್ಚಬಿಶಪ ಲಾಡ ಇವನು ಈ ಕೋರ್ಟಿನ ಅಧ್ಯಕ್ಷ ನಾಗಿದ್ದನು. ಚಾರ್ಲಸನ ರಾಜಕೀಯ ಮತ್ತು ಧಾರ್ಮಿಕ ಪೀಡೆಗೆ ಬೇಸತ್ತು ಅನೇಕ ಪ್ಯುರಿಟನರು ಇಂಗ್ಲಂಡನ್ನು ಬಿಟ್ಟು ವಸಾಹತುಮಾಡಿಕೊಂಡಿರಲು ಅಮೇರಿಕೆಗೆ ಹೋದರು.

**ಸ್ಟ್ರೆಫರ್ಡನು ಐರ್ಲಂಡಿಗೆ ಕಳುಹಿಸಲ್ಪಟ್ಟುದು (೧೬೩೩)**—ಈ ಸಮ ಯದಲ್ಲಿ ಐರ್ಲಂಡಿನಲ್ಲಿ ಬಂಡುಗಳು ಹುಟ್ಟಿದ್ದುವು. ಆದುದರಿಂದ ಚಾರ್ಲಸನು ಸ್ಟ್ರೆಫರ್ಡನನ್ನು ಅಲ್ಲಿಗೆ ಕಳುಹಿದನು. ಸ್ಟ್ರೆಫರ್ಡನು ೧೬೩೩ರಿಂದ ೧೬೪೦ರ ವರೆಗೆ ಐರ್ಲಂಡಿನ ಆಡಳಿತೆಯನ್ನು ಸಾಗಿಸಿದನು. ಅವನು ಅಲ್ಲಿ ಶಾಶ್ವತ ಸೈನ್ಯವೊಂದನ್ನು ಸಿದ್ಧಗೊಳಿಸಿ ಅದರ ಸಾಹಾಯ್ಯದಿಂದ ಬಹಳವಾಗಿ ರಕ್ತಪಾತವನ್ನು ಮಾಡಿ ಅಲ್ಲಿಯ ಬಂಡುಗಳನ್ನು ಮುರಿದು ಅವುಗಳಲ್ಲಿ ಸೇರಿದ ಜನರ ಭೂಮಿಗಳನ್ನು ರಾಜಸ್ವ ವಾಗಿ ಮಾಡಿದನು ('ಜಪ್ತ' ಮಾಡಿದನು). ಆ ಬಳಿಕ ಅವನು ಅಲ್ಲಿ ಎಪಿಸ್ಕೊ ಪೇಲಿಯನ್ ಪಂಥವನ್ನು ಸ್ಥಾಪಿಸಲು ಪ್ರಯತ್ನಿಸಿದನು. ಆದರೆ ಅಲ್ಲಿಯ ಬಹುಜನ ಸಮಾಜವು ಕ್ಯಾಥಲಿಕ್ ಪಂಥದ ಅನುಯಾಯಿಯಾಗಿರುವುದರಿಂದಲೂ ಉಳಿದ ಜನರು ಪ್ಯುರಿಟನ್ ಮತ್ತು ಪ್ರೆಸ್ಬಿಟೇರಿಯನ್ ಪಂಥದ ಅನುಯಾಯಿಗಳಾಗಿದ್ದುದ ರಿಂದಲೂ ಅವನ ಪ್ರಯತ್ನವು ಕೈಗೂಡಲಿಲ್ಲ. ಅವನ ಉಗ್ರ ನೀತಿ ಮತ್ತು ಧಾರ್ಮಿಕ ವಿಷಯದಲ್ಲಿ ಕೈಹಾಕಲು ಮಾಡಿದ ಪ್ರಯತ್ನವು ಜನರನ್ನು ಬಹಳ ವಾಗಿ ರೇಗಿಸಿತು. ಆದುದರಿಂದ ಅವನು ಜನರ ತಿರಸ್ಕಾರಕ್ಕೆ ಗುರಿಯಾದನು.

**ಶಿಪ್‌ಮನಿ ಕರವು ಮತ್ತು ಹ್ಯಾಮಡೆನ್ (೧೬೩೭)**—೧೬೨೯ರಿಂದ ೧೬೪೦ರ ವರೆಗೆ ಚಾರ್ಲಸನು ಪಾರ್ಲಿಮೆಂಟ ಸಭೆಯನ್ನು ಕರೆಯದೆ ತನ್ನ ಸ್ವಂತದ ಅಧಿಕಾರದಿಂದ ಜನರ ಮೇಲೆ ಕರವನ್ನು ಕೂಡಿಸಿದನು. ಅವನು ಟನೇಜ ಮತ್ತು ಪೌಂಡೇಜ ಕರಗಳಿಂದ ಹಣವನ್ನು ಕೂಡಿಸಿದನು, 'ಸರ್ವಾಧಿಕಾರ'ಗಳನ್ನು ಮಾರಿ ದನು, ಮಧ್ಯಯುಗದಲ್ಲಿ ಪ್ರಚಾರದಲ್ಲಿದ್ದ **ಶಿಪ್‌ಮನಿ (ಹಡಗುಗಳಿಗೋಸುಗ ಕರವು)** ಎಂಬ ಕರವನ್ನು ಪುನಃ ಪ್ರಾರಂಭಿಸಿದನು. ಮೊದಲು ಅಂಗ್ಲೋ

ಸ್ಯಾಕ್ಸನ್ ಅರಸರ ಆಳ್ಕೆಯಲ್ಲಿ ಡೇನ್ಸಜನರ ದಾಳಿಗಳಿಂದ ಇಂಗ್ಲಂಡಿನ ದಂಡೆಯ ರಕ್ಷಣಕ್ಕೋಸುಗ ಸಮುದ್ರತೀರದಲ್ಲಿರುವ ಊರುಗಳಿಂದ ಈ ಕರವು ಎತ್ತಲ್ಪಡುತ್ತಿತ್ತು. ಆದರೆ ಮುಂದೆ ಈ ಪ್ರಘಾತವು ನಿಂತಿತು. ಚಾರ್ಲಸನು ಸಮುದ್ರತೀರದ ಊರುಗಳಂತೆ ದೇಶದ ಎಲ್ಲ ಭಾಗಗಳ ಜನರ ಮೇಲೆಯೂ ಈ ಕರವನ್ನು ಹೇರಿದನು (೧೬೩೫). ಆದರೆ ಜಾನ್ ಹ್ಯಾಮ್ಡೆನ್ ಎಂಬವನು ಈ ಕರಕ್ಕೆ ಪಾರ್ಲಿಮೆಂಟಿನ ಸಮ್ಮತಿ ಇಲ್ಲವೆಂದು ಆದನ್ನು ಕೊಡಲು ಒಪ್ಪಲಿಲ್ಲ. ಆದುದರಿಂದ ಅವನು ನ್ಯಾಯಾಸನಕ್ಕೆ ಎಳೆಯಲ್ಪಟ್ಟನು. ಆದರೆ ನ್ಯಾಯಾಧೀಶರು ಅರಸನ ಕೋಪಕ್ಕೆ ಹೆದರಿ ಈ ಕರವನ್ನು ಕೂಡಿಸಲು ಅರಸನಿಗೆ ಅಧಿಕಾರವುಂಟೆಂದು ನಿರ್ಣಯವನ್ನಿತ್ತು ಹ್ಯಾಮಡೆನನು ದೋಷಿಯೆಂದು ನಿಶ್ಚಯಿಸಿ ಅವನಿಗೆ ಭಾರವಾದ ದಂಡವನ್ನು ವಿಧಿಸಿದರು.



ಜಾನ್ ಹ್ಯಾಮ್ಡೆನ್

**ಸ್ಕಾಟಲಂಡಿನಲ್ಲಿ ಎಪಿಸ್ಕೊಪೇಲಿಯನ್ ಪಂಥವನ್ನು ಸ್ಥಾಪಿಸಲು ಪ್ರಯತ್ನವು**—ಚಾರ್ಲಸನು ತನ್ನ ಅನ್ಯಾಯದ ಕೃತ್ಯಗಳಿಂದ ಇಂಗ್ಲಂಡಿನಲ್ಲಿ ಅಪ್ರಿಯನಾಗಿದ್ದನು. ಮುಂದೆ ಅವನು ಸ್ಕಾಟಿಶ್ ಜನರ ಧಾರ್ಮಿಕ ವಿಷಯದಲ್ಲಿ ಕೈಹಾಕಿದನು. ಚಾರ್ಲಸನು ಲಾಡ್ ಇವನ ಸೂಚನೆಯನ್ನನುಸರಿಸಿ ಇಂಗ್ಲಂಡಿನ ಪ್ರಾರ್ಥನೆಯ ಪುಸ್ತಕದಂತಹ ಹೊಸದೊಂದು ಪ್ರಾರ್ಥನೆಯ ಪುಸ್ತಕವನ್ನು ಸಿದ್ಧಗೊಳಿಸಿ ಸ್ಕಾಟಲಂಡಿನಲ್ಲಿಯ ಚರ್ಚುಗಳಲ್ಲಿ ಅದು ಉಪಯೋಗಿಸಲ್ಪಡಬೇಕೆಂದು ಅಪ್ಪಣೆಯನ್ನು ವಿಧಿಸಿದನು. ತಮ್ಮ ಮೇಲೆ ಈ ಬಗೆಯಾಗಿ ಎಪಿಸ್ಕೊಪೇಲಿಯನ್ ಪಂಥವನ್ನು ಹೇರಲು ಪ್ರಯತ್ನವಾಗುತ್ತಿರುವುದನ್ನು ಕಂಡು ಸ್ಕಾಟಿಶ್ ಜನರು ಅತ್ಯಂತವಾಗಿ ಕೋಪಿಸಿಕೊಂಡು ಕೆಲವೆಡೆಗಳಲ್ಲಿ ಬಂಡುಗಳನ್ನು ಹೂಡಿದರು. ಆ ಬಳಿಕ ತಮ್ಮ ಪ್ರೆಸ್ಬಿಟೇರಿಯನ್ ಧರ್ಮಪಂಥದ ರಕ್ಷಣಾರ್ಥವಾಗಿ ಸ್ಕಾಟಲಂಡಿನಲ್ಲಿಯ ಸರದಾರರು, ವ್ಯಾಪಾರಸ್ಥರು, ಒಕ್ಕಲಿಗರು, ಕೂಲಿಕಾರರು ಮೊದಲಾದವರು ಒಂದು "ರಾಷ್ಟ್ರೀಯ ಸಂಘ" (National Covenant)ವನ್ನು ಸ್ಥಾಪಿಸಿ ಚಾರ್ಲಸನನ್ನು ವಿರೋಧಿಸಲು ನಿಶ್ಚಯಿಸಿದರು (೧೬೩೮).

**ಸ್ಕಾಟಲಂಡಿನೊಡನೆ ಯುದ್ಧವು (೧೬೩೯-೪೦)**—ಸ್ಕಾಟಲಂಡಿನಲ್ಲಿ

ತನ್ನ ವಿರುದ್ಧವಾಗಿ ಬಂಡುಗಳು ಪ್ರಾರಂಭವಾದುದನ್ನು ನೋಡಿ ಚಾರ್ಲಸನು ಸೈನ್ಯವನ್ನು ತೆಗೆದುಕೊಂಡು ಸ್ಕಾಟಲಂಡಿಗೆ ಹೋದನು. ಆದರೆ ಸ್ಕಾಟಲಂಡಿನವರು ಬಹು ದೊಡ್ಡ ಸೈನ್ಯವನ್ನು ಕೂಡಿಸಿದುದನ್ನು ಕಂಡು ತಾನೂ ಹೆಚ್ಚಿಗೆ ಸೈನ್ಯವನ್ನು ಕೂಡಿಸಿದ ಹೊರ್ತು ಅಲ್ಲಿಯ ಬಂಡುಗಳನ್ನು ಮುರಿವುದು ಅಶಕ್ಯವೆಂದು ಚಾರ್ಲಸನಿಗೆ ತೋರಿತು. ಆದುದರಿಂದ ಸ್ಕಾಟಿಶ್ ಜನರೊಡನೆ ಒಪ್ಪಂದವನ್ನು ಮಾಡಿಕೊಂಡು ಅವನು ಮರಳಿ ಲಂಡನಿಗೆ ಬಂದನು. ಆ ಬಳಿಕ ಅವನು ಸ್ಟ್ರಫರ್ಡನನ್ನು ಐರ್ಲಂಡಿನಿಂದ ಕರೆಯಿಸಿಕೊಂಡನು, ಮತ್ತು ಸ್ಕಾಟಿಶ ಜನರೊಡನೆ ಮತ್ತೆ ಯುದ್ಧಮಾಡಲು ನಿಶ್ಚಯಿಸಿ ಹಣಕ್ಕೋಸುಗ ನಿರುಪಾಯನಾಗಿ ೧೬೪೦ರಲ್ಲಿ ಎಪ್ರಿಲ ತಿಂಗಳಲ್ಲಿ ಪಾರ್ಲಿಮೆಂಟನ್ನು ನೆರೆಯಿಸಿದನು. ಈ ಸಭೆಯಲ್ಲಿ ಜಾನ್ ಪಿಮ್, ಜಾನ್ ಹ್ಯಾಮ್‌ಡೆನ್ ಮೊದಲಾದ ಮುಂದಾಳುಗಳಿದ್ದರು. ಈ ಪಾರ್ಲಿಮೆಂಟು ಕಳೆದ ಹನ್ನೊಂದು ವರ್ಷಗಳಲ್ಲಿಯ ಚಾರ್ಲಸನ ಅನ್ಯಾಯದ ಕೃತಿಗಳನ್ನು ನಿಷೇಧಿಸಿದುದಲ್ಲದೆ ಅವನು ತನ್ನ ವರ್ತನವನ್ನು ಸುಧಾರಿಸಿದ ಹೊರತು ಹಣವನ್ನು ಕೊಡಲಾಗದೆಂದು ಸ್ಪಷ್ಟವಾಗಿ ಹೇಳಿತು. ಪಾರ್ಲಿಮೆಂಟಿನ ಈ ನಿರ್ದಾಕ್ಷಿಣ್ಯವಾದ ವರ್ತನದಿಂದ ಕೋಪಗೊಂಡು ಚಾರ್ಲಸನು ಮೂರು ವಾರಗಳೊಳಗಾಗಿ ಅದನ್ನು ಮುರಿದನು. ಈ ಪಾರ್ಲಿಮೆಂಟಿನ ಅವಧಿ ಬಹು ಅಲ್ಪವಾಗಿದ್ದುದರಿಂದ ಅದಕ್ಕೆ **ಶಾರ್ಟ ಪಾರ್ಲಿಮೆಂಟ** (Short Parliament) ಎಂಬ ಹೆಸರು ಬಂದಿತು. ಇತ್ತ ಸ್ಕಾಟಿಶ್ ಜನರು ಚಾರ್ಲಸನು ತಮ್ಮೊಡನೆ ಒಪ್ಪಂದವನ್ನು ಮಾಡಿಕೊಂಡಿದ್ದರೂ ಮತ್ತೆ ಅವನು ದೊಡ್ಡ ಸೈನ್ಯವನ್ನು ಕೂಡಿಸಿ ತಮ್ಮ ಮೇಲೆ ದಾಳಿಮಾಡಲು ಬಗೆಯುತ್ತಿರುವುದನ್ನು ಕಂಡು ಇಂಗ್ಲಂಡಿನ ಮೇಲೆ ದಾಳಿ ಮಾಡಲು **ಅಲೆಕ್ಝಾಂಡರ ಲೆಸ್ಲಿ** ಎಂಬವನ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿದರು. ಈ ಸೈನ್ಯವು ಇಂಗ್ಲಂಡಿನ ಉತ್ತರ ಭಾಗದಲ್ಲಿ ಚಾರ್ಲಸನ ಸೈನ್ಯವನ್ನು ಸೋಲಿಸಿ ಅಲ್ಲಿ ತನ್ನ ವರ್ಚಸ್ಸನ್ನು ಸ್ಥಾಪಿಸಿತು. ಆಗ ಚಾರ್ಲಸನು ಕೆಲವು ಹಣವನ್ನು ಕೊಡಲೊಪ್ಪಿ ಸ್ಕಾಟಿಶ್ ಸೈನ್ಯದೊಡನೆ ಒಪ್ಪಂದವನ್ನು ಮಾಡಿಕೊಂಡನು. ಆದರೆ ಈ ಹಣವು ತನ್ನ ಕೈಯಲ್ಲಿ ಬಂದ ಹೊರ್ತು ಸ್ಕಾಟಿಶ್ ಸೈನ್ಯವು ಇಂಗ್ಲಂಡನ್ನು ಬಿಟ್ಟುಹೋಗಲು ಸಿದ್ಧವಿರಲಿಲ್ಲ. ಆದರೆ ಚಾರ್ಲಸನ ಬಳಿಯಲ್ಲಿ ಹಣವಿರಲಿಲ್ಲವಾದುದರಿಂದ ಪಾರ್ಲಿಮೆಂಟಿನ ಸಭೆಯನ್ನು ಕರೆವುದು ಅವನಿಗೆ ಅವಶ್ಯವಾಯಿತು (೧೬೪೦ ನವೆಂಬರ).

**ಲಾಂಗ ಪಾರ್ಲಿಮೆಂಟು** (Long Parliament) (೧೬೪೦-೧೬೬೦) – ಚಾರ್ಲಸನು ತನ್ನ ಆಳ್ಕೆಯಲ್ಲಿ ನೆರೆಯಿಸಿದ ಕಡೆಯ ಸಭೆ ಇದು. ಈ

ಸಭೆಯಲ್ಲಿಯೂ ಹಿಂದಿನ ಸಭೆಯಲ್ಲಿದ್ದ ಪಿಮ್, ಹ್ಯಾಮ್‌ಡೆನ್ ಮೊದಲಾದವರು ಮುಂದಾಳುಗಳಾಗಿದ್ದರು. ಈ ಪಾರ್ಲಿಮೆಂಟಿನಲ್ಲಿ ಅವರು ಚಾರ್ಲ್ಸನ ಅನ್ಯಾಯದ ಕೃತಿಗಳಿಗೆ ಅವನ ಉತ್ತರವೇನೆಂಬುದನ್ನು ಕೇಳಲು ನಿಶ್ಚಯಿಸಿದರು. ಈ ಪಾರ್ಲಿಮೆಂಟು ೨೦ ವರ್ಷಗಳ ವರೆಗೆ ನಡೆಯಿತಾದುದರಿಂದ ಇದಕ್ಕೆ ಲಾಂಗ ಪಾರ್ಲಿಮೆಂಟೆಂದು ಹೆಸರು ಬಂದಿತು.

**ಸ್ಟ್ರಫರ್ಡ ಮತ್ತು ಲಾಡ್ ಇವರಿಗೆ ಶಿಕ್ಷೆ** — ಈ ಲಾಂಗ ಪಾರ್ಲಿಮೆಂಟು ಚಾರ್ಲ್ಸನ ಅನಿಯಂತ್ರಿತ ಸತ್ತೆಯನ್ನೂ ಅನ್ಯಾಯದ ಕಾರಭಾರವನ್ನೂ ನಷ್ಟಗೊಳಿಸಲು ಮುಂದೆ ಹೇಳಿದ ವಿಧಾನಗಳನ್ನು ಕೈಕೊಂಡಿತು. ರಾಜನ ಮಂತ್ರಿಯಾದ ಸ್ಟ್ರಫರ್ಡನು ಕಾಯ್ದೆಗೆ ವಿರುದ್ಧವಾದ, ಅನ್ಯಾಯದ ಮತ್ತು ಸ್ವೈರ ಕೃತಿಗಳನ್ನು ಮಾಡಿದ್ದನು, ಮತ್ತು ಆ ಬಗೆಯ ಕೃತಿಗಳನ್ನು ಮಾಡಲು ರಾಜನನ್ನು ಪ್ರೇರಿಸಿದ್ದನು. ಆದುದರಿಂದ ಪಾರ್ಲಿಮೆಂಟು ಅವನ ಮೇಲೆ ರಾಜದ್ರೋಹದ (Treason) ಆರೋಪವನ್ನಿಟ್ಟು ಅವನ ವಿಚಾರಣೆಯನ್ನು (Impeachment) ಪ್ರಾರಂಭಿಸಿತು. ಇಂಗ್ಲಿಶ್ ಕಾಯ್ದೆಯಂತೆ ರಾಜನಿಗೆ ದ್ರೋಹವನ್ನು ಬಗೆದವನು 'ಟ್ರೇಜನ್' ಅಥವಾ 'ರಾಜದ್ರೋಹ'ವನ್ನು ಮಾಡಿ



ಅರ್ಲ ಆಫ್ ಸ್ಟ್ರಫರ್ಡ

ದಂತಾಗುತ್ತಿತ್ತು, ಮತ್ತು ಅದಕ್ಕೋಸುಗ ಶಿಕ್ಷೆ ಹೇಳಲ್ಪಟ್ಟಿತ್ತು. ಆದರೆ ಸ್ಟ್ರಫರ್ಡನು ರಾಷ್ಟ್ರದ ಜನತೆಯ ವಿರುದ್ಧವಾಗಿ ಕೃತ್ಯಗಳನ್ನು ಮಾಡಿದ್ದನಲ್ಲದೆ ರಾಜನಿಗೆ ದ್ರೋಹವನ್ನು ಬಗೆದಿರಲಿಲ್ಲ. ಅವನು ರಾಜನ ಸೇವೆಯನ್ನು ಮನೋಭಾವದಿಂದ ಮಾಡಿದ್ದನು. ಆದುದರಿಂದ ಅವನ ಮೇಲೆ ರಾಜದ್ರೋಹದ ಆರೋಪವು ಸಿದ್ಧವಾಗುವ ಸಂಭವವಿರಲಿಲ್ಲವೆಂದು ಪಾರ್ಲಿಮೆಂಟಿನ ಸಭಾಸದರಿಗೆ ತೋರಿತು. ಆದುದರಿಂದ ಇನ್ನಾವುದಾದರೂ ಬೇರೆ ಉಪಾಯದಿಂದ ಅವನಿಗೆ ಶಿಕ್ಷೆಯನ್ನು

ವಿಧಿಸಲೇ ಬೇಕೆಂದು ಪಾರ್ಲಿಮೆಂಟು, 'ಸ್ಟ್ರಫರ್ಡನು ರಾಷ್ಟ್ರಹಿತದ ವಿರುದ್ಧವಾಗಿ ಕೃತಿಗಳನ್ನು ಮಾಡಿರುವನಾದುದರಿಂದ ಅವನು ಶೂಲಕ್ಕೇರಿಸಲ್ಪಡಬೇಕು' ಎಂದು 'ಬಿಲ್ ಆಫ್ ಅಟೇಂಡರ್' ಎಂಬ ಕಾಯ್ದೆಯನ್ನು ಮಾಡಿ (attaint= ದೋಷಿಯೆಂದು ನಿಶ್ಚಯಿಸು) ಅವನನ್ನು ಶೂಲಕ್ಕೇರಿಸಿತು (೧೬೪೧), ಮತ್ತು ಅವನ ಎಲ್ಲ ಸ್ವತ್ತನ್ನು ಜಪ್ತು ಮಾಡಿತು. ಆ ಬಳಿಕ ಚಾರ್ಲಸನ ಎರಡನೆಯ ಮಂತ್ರಿಯಾದ **ಆರ್ಚ ಬಿಶಪ್ ಲಾಡ್** ಇವನ ವಿಚಾರಣೆಯನ್ನು (Impeachment) ಪಾರ್ಲಿಮೆಂಟು ಮಾಡಿತು. ಅವನು "ಸ್ಟಾರ ಚೆಂಬರ ಕೋರ್ಟ್" ಮತ್ತು "ಹಾಯ್ ಕಮಿಶನ್ ಕೋರ್ಟ್" ಈಯೆರಡೂ ಕೋರ್ಟುಗಳ ಸದಸ್ಯನಾಗಿದ್ದನು, ಮತ್ತು ಈಯೆರಡೂ ಎಡೆಗಳಲ್ಲಿ ಅವನು ಎಷ್ಟೋ ಅನ್ಯಾಯದ ಅತ್ಯಾಚಾರಗಳನ್ನು ಮಾಡಿದ್ದನು. ಅವನ ಮೇಲಿನ ಆರೋಪವು ಸಿದ್ಧವಾಗಿ ಅವನು ಸೆರೆಯಲ್ಲಿ ಇಡಲ್ಪಟ್ಟನು (೧೬೪೧), ಮತ್ತು ಮುಂದೆ ನಾಲ್ಕು ವರ್ಷಗಳ ತರುವಾಯದಲ್ಲಿ ಅವನು ಶೂಲಕ್ಕೇರಿಸಲ್ಪಟ್ಟನು (೧೬೪೫).



ಆರ್ಚ ಬಿಶಪ್ ಲಾಡ್

**ಲಾಂಗ ಪಾರ್ಲಿಮೆಂಟು ಮಾಡಿದ ರಾಷ್ಟ್ರಹಿತದ ಕಾರ್ಯಗಳು, ೧೬೪೦-೪೧**—(೧) ಸ್ಟಾರ ಚೆಂಬರ ಮತ್ತು ಹಾಯ ಕಮಿಶನ್ ಕೋರ್ಟ್ ಈಯೆರಡೂ ಎಡೆಗಳಲ್ಲಿ ಅನ್ಯಾಯವೂ ಅತ್ಯಾಚಾರವೂ ಬಹಳವಾಗಿ ಸಾಗುತ್ತಿತ್ತು. ಪಾರ್ಲಿಮೆಂಟು ಆಯೆರಡೂ ಕೋರ್ಟುಗಳನ್ನು ೧೬೪೧ರಲ್ಲಿ ನಷ್ಟಗೊಳಿಸಿ ಅವು ಶಿಕ್ಷೆಗೆ ಗುರಿಮಾಡಿದವರನ್ನು ಬಂಧನದಿಂದ ಮುಕ್ತಗೊಳಿಸಿತು. (೨) ರಾಜನು ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಜನರ ಮೇಲೆ ಹೇರಿದ ಶಿಪ್‌ಮನಿ, ಟನೇಜ ಮತ್ತು ಪೌಂಡೇಜ, ಬೆನಿವೊಲೆನ್ಸ ಅಥವಾ ಒತ್ತಾಯದ ಸಾಲಗಳು ಇವೇ ಮೊದಲಾದುವು ಕಾಯ್ದೆಯ ವಿರುದ್ಧವಾದುವೆಂದು ಪ್ರಕಟಗೊಳಿಸಿತು. (೩) ರಾಜನು

ಮೂರು ವರ್ಷಗಳಿಗೊಮ್ಮೆಯಾದರೂ ಪಾರ್ಲಿಮೆಂಟಿನ ಸಭೆಯನ್ನು ಕರೆಯಲೇ ಬೇಕು, ಕರೆಯದಿದ್ದರೆ ಪಾರ್ಲಿಮೆಂಟಿನ ಸದಸ್ಯರಿಗೆ ಸಭೆಯನ್ನು ಕರೆಯಲು ಅಧಿ ಕಾರವಿರದೇಕು ಎಂದು ಕಾಯ್ದೆಯನ್ನು ಮಾಡಿತು. ಈ ಕಾಯ್ದೆಗೆ **ಟ್ರಾಯಾನಿಯಲ್ ಅಕ್ಟ** ಎಂದು ಹೆಸರು. (೪) ಇನ್ನು ಮುಂದೆ ರಾಜನಿಗೆ ಪಾರ್ಲಿಮೆಂಟಿನ ಸಭೆಯನ್ನು ತನಗೆ ಬೇಕಾದಾಗ ಮುರಿಯಲು ಬರಬಾರದೆಂದು ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಅದನ್ನು ಮುರಿಯಲಾಗದೆಂದು ನಿಶ್ಚಯಿಸಿತು. (೫) ನ್ಯಾಯಾಧೀಶರಿಗೆ ರಾಜನ ತಂತ್ರದಂತೆ ನಡೆವುದು ಆವಶ್ಯಕವಾಗಬಾರದೆಂದು ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಅವರನ್ನು ಕೆಲಸದಿಂದ ದೂರಮಾಡಲಾಗದೆಂದು ಕಾಯ್ದೆಯನ್ನು ಮಾಡಿತು. ಇದರಿಂದ ನ್ಯಾಯಾಧೀಶರ ಮೇಲೆ ಇರುತ್ತಿದ್ದ ರಾಜನ ವರ್ಚಸ್ಸು ನಷ್ಟವಾಯ್ತು.

**ಧಾರ್ಮಿಕ ಪ್ರಶ್ನೆ—ರೂಟ ಅಂಡ್ ಬ್ರ್ಯಂಚ್ ಬಿಲ್, ೧೬೪೧—** ರಾಜನ ಸ್ವೈರವೃತ್ತಿಗೆ ಈ ಬಗೆಯಾಗಿ ತಡೆಯನ್ನೊದಗಿಸಲು ಕಾಯ್ದೆಗಳನ್ನು ಮಾಡಿ ಪಾರ್ಲಿಮೆಂಟು ತನ್ನ ದೃಷ್ಟಿಯನ್ನು ಧಾರ್ಮಿಕ ಪ್ರಶ್ನೆಯ ಕಡೆಗೆ ತಿರುಗಿಸಿತು. ಆಗ ಮಾತ್ರ ಪಾರ್ಲಿಮೆಂಟಿನಲ್ಲಿ ಎರಡು ಪಕ್ಷಗಳಾದುವು. ಪಾರ್ಲಿಮೆಂಟಿನ ಸದಸ್ಯರಲ್ಲಿ ಬಹು ಜನರ ಒಲವು ಪ್ಯುರಿಟನ್ ಪಂಥದ ಕಡೆಗಿದ್ದಿತು, ಆದುದರಿಂದ ಅವರು **ಪಿಮ್** ಮತ್ತು **ಹ್ಯಾಮ್‌ಡೆನ್** ಈ ಮುಂದಾಳುಗಳ ಸಮ್ಮತಿಯಿಂದ 'ರೂಟ ಅಂಡ್ ಬ್ರ್ಯಂಚ್ ಬಿಲ್' ಎಂಬ ಕಾಯ್ದೆಯ ಮಸೂದೆಯನ್ನು ಪಾರ್ಲಿಮೆಂಟಿನಲ್ಲಿ ತಂದರು (೧೬೪೧). ಧಾರ್ಮಿಕ ವಿಷಯದಲ್ಲಿ ಬಿಶಪ್ ಜನರ ಸತ್ತೆ ಇಲ್ಲದಂತಾಗಬೇಕು ಮತ್ತು ಪ್ರಾರ್ಥನೆಯ ಪುಸ್ತಕವು ರದ್ದಾಗಬೇಕು ಮತ್ತು ಇಂಗ್ಲಂಡಿನ ಧಾರ್ಮಿಕ ವ್ಯವಸ್ಥೆ ಪ್ರೆಸ್ಬಿಟೇರಿಯನ್ ಪಂಥವನ್ನು ಅನುಸರಿಸಿರಬೇಕು ಎಂಬುದು ಈ ಮಸೂದೆಯ ಆಶಯವು. ಈ ಮಸೂದೆ ಅಲ್ಪ ಮತಾಧಿಕ್ಯದಿಂದ ಪಾಸಾಯ್ತು. ಆದರೆ **ಲಾರ್ಡ ಫಾಕ್‌ಲಂಡ** ಮತ್ತು **ಎಡ್ವರ್ಡ ಹಾಯಿಡ್** ಎಂಬವರ ನೇತೃತ್ವದಲ್ಲಿ ಇನ್ನೊಂದು ಪಕ್ಷವು ಅದರ ವಿರುದ್ಧವಾಗಿದ್ದಿತು. ಆದುದರಿಂದ ಪಾರ್ಲಿಮೆಂಟಿನಲ್ಲಿ ಒಡಕು ಬೆಳೆಯುತ್ತ ಹೋಯ್ತು.

**ಗ್ರ್ಯಾಂಡ್ ರಿಮಾನ್‌ಸ್ಟ್ರನ್ಸ, ನೊವೆಂಬರ ೧೬೪೧**—೧೬೪೧ರಲ್ಲಿ ಪಾರ್ಲಿಮೆಂಟು **ಪಿಮ್** ಇವನ ನೇತೃತ್ವದಲ್ಲಿ '**ಗ್ರ್ಯಾಂಡ್ ರಿಮಾನ್‌ಸ್ಟ್ರನ್ಸ**' ಎಂಬ ಪತ್ರಿಕೆಯನ್ನು ಸಿದ್ಧಗೊಳಿಸಿತು. ಅದರಲ್ಲಿ ರಾಜನು ತನ್ನ ಈ ವರೆಗಿನ ಆಳ್ಕೆಯಲ್ಲಿ ಮಾಡಿದ ಅನ್ಯಾಯದ ಮತ್ತು ಅತ್ಯಾಚಾರದ ಕೃತಿಗಳ ಉಲ್ಲೇಖವಿತ್ತು, ಮತ್ತೆ ಇನ್ನು ಮುಂದೆ ಇಂತಹ ಕೃತ್ಯಗಳು ಆಗಬಾರದೆಂದು ಪಾರ್ಲಿಮೆಂಟಿನ ವಿಶ್ವಾಸಕ್ಕೆ



ಪಾರ್ಲಿಮೆಂಟಿನ ಮುಂದಾಳುಗಳನ್ನು ಸೆರೆಹಿಡಿಯಲು ಚಾರ್ಲ್ಸನು ಸಭಾಗೃಹದಲ್ಲಿ ಬಂದಿರುತ್ತಾನೆ.
(ಲಾರ್ಡ್ ಸಭಾಗೃಹದಲ್ಲಿಯ ಚಿತ್ರದಿಂದ.)

ಪಾತ್ರರಾದವರನ್ನೇ ರಾಜನು ತನ್ನ ಮಂತ್ರಿಗಳಾಗಿ ಮಾಡಿಕೊಳ್ಳಬೇಕೆಂದು ಸೂಚಿಸಲ್ಪಟ್ಟಿತ್ತು. ಆದರೆ ರಾಜನ ಅನಿಯಂತ್ರಿತ ಸತ್ತೆಗೆ ತಡೆಯನ್ನೊದಗಿಸಲು ಸ್ವಲ್ಪ ಕಾಲದ ಪೂರ್ವದಲ್ಲಿಯೆ ಪಾರ್ಲಿಮೆಂಟು ಉಪಾಯವನ್ನು ಯೋಜಿಸಿದುದರಿಂದ ಈ ಪತ್ರಿಕೆಯನ್ನು ಪ್ರಸಿದ್ಧಿಸಿ ಮತ್ತೆ ಕಲಹಗಳನ್ನು ಹುಟ್ಟಿಸಕೂಡದೆಂದು **ಹಾಯಿಡ್** ಮತ್ತು **ಫಾಕ್‍ಲಂಡ್** ಇವರ ಪಕ್ಷದವರು ಈ ಪತ್ರಿಕೆಯನ್ನು ಪಾರ್ಲಿಮೆಂಟಿನಲ್ಲಿ ವಿರೋಧಿಸಿದರು. ಕೊನೆಗೆ ಅಲ್ಪ ಮತಾಧಿಕ್ಯದಿಂದ **ಗ್ರ್ಯಾಂಡ್ ರಿಮಾನ್‍ಸ್ಟ್ರನ್ಸ** ಪತ್ರಿಕೆ ಪಾರ್ಲಿಮೆಂಟಿನಲ್ಲಿ ಗ್ರಾಹ್ಯವಾಗಿ ಅದು ಚಾರ್ಲಸನ ಕಡೆಗೆ ಕಳಿಸಲ್ಪಟ್ಟಿತು. ಈ ರೀತಿಯಾಗಿ ಧಾರ್ಮಿಕ ವಿಷಯದಂತೆ ರಾಜಕೀಯ ವಿಷಯದಲ್ಲಿಯೂ ಪಾರ್ಲಿಮೆಂಟ ಸಭೆಯಲ್ಲಿ ಒಡಕು ಹುಟ್ಟಿತು.

**ಐದು ಮುಂದಾಳುಗಳನ್ನು ಸೆರೆಹಿಡಿಯಲು ಪ್ರಯತ್ನವು, ಜಾನ್ಯೇವರಿ ೧೬೪೨**—ಈ ಬಗೆಯಾಗಿ ಪಾರ್ಲಿಮೆಂಟಿನಲ್ಲಿ ಹಾಯಿಡ್ ಮತ್ತು ಫಾಕ್‍ಲಂಡ್ ಇವರ ನೇತೃತ್ವದಲ್ಲಿ **ಮುಂದಗಾಮಿ ಪಕ್ಷವೊಂದು** ತಲೆಯೆತ್ತುತ್ತಿದ್ದಿತು. ಈ ಪಕ್ಷದ ಸಹಾನುಭೂತಿಯನ್ನು ಪಡೆಯಲು ಚಾರ್ಲಸನು ವಿವೇಕದಿಂದ ವರ್ತಿಸಬೇಕಾಗಿತ್ತು. ಆದರೆ ಅವನು ಪಾರ್ಲಿಮೆಂಟಿನಲ್ಲಿ ತನಗೆ ವಿರುದ್ಧರಾದ ಮುಂದಾಳುಗಳ ಮುಯ್ಯನ್ನು ತೀರಿಸಿ, ಅವರ ಮೇಲೆ ರಾಜದ್ರೋಹದ ಆರೋಪವನ್ನು ಹೊರಿಸಿ ಸೆರೆಮನೆಗೆ ಅಟ್ಟಬೇಕೆಂದು ನಿಶ್ಚಯಿಸಿದನು. ೧೬೪೨ರಲ್ಲಿ ಜಾನೇವರಿ ತಿಂಗಳ ೪ನೆಯ ತಾರೀಖಿನ ದಿವಸ ಚಾರ್ಲಸನು ೩—೪ ನೂರು ಸೈನಿಕರೊಡನೆ **ಪಿಮ್, ಹ್ಯಾಮ್‍ಡೆನ್, ಹೋಲ್ಸ, ಹೆಝುಲ್‍ರಿಗ್, ಮತ್ತು ಸ್ಟ್ರೋಡ್** ಎಂಬ ಐದು ಮುಂದಾಳುಗಳನ್ನು ಸೆರೆಹಿಡಿಯಲು ಪಾರ್ಲಿಮೆಂಟ್ ಗೃಹದ ಕಡೆಗೆ ನಡೆದನು. ತಮ್ಮನ್ನು ಹಿಡಿಯಲು ರಾಜನೇ ಬರುತ್ತಿರುವನೆಂದು ಸುದ್ದಿ ಗೊತ್ತಾದೊಡನೆ ಈ ಐದು ಸದಸ್ಯರು ಸಭಾಗೃಹದಿಂದ ಓಡಿಹೋಗಿ ಲಂಡನಿನಲ್ಲಿ ಅಡಗಿಕೊಂಡು ಉಳಿದರು. ರಾಜನು ಸಭಾಗೃಹಕ್ಕೆ ಬಂದು ನೋಡುತ್ತಾನೆ, ಐವರಲ್ಲಿ ಒಬ್ಬನೂ ಇಲ್ಲ! ಇದರಿಂದ ಅವನಿಗೆ ಬಹು ನಿರಾಶೆಯಾಯ್ತು. ಚಾರ್ಲಸನ ಈ ಕೃತ್ಯವನ್ನು ಕಂಡು ಸಂಧಿ ದೊರೆತರೆ ಅವನು ಅನ್ಯಾಯದ ಅತ್ಯಾಚಾರಗಳನ್ನು ಮತ್ತೆ ಮಾಡದಿರನೆಂದು ಅವನ ವಿಷಯದಲ್ಲಿ ಸಹಾನುಭೂತಿಯುಳ್ಳ ಜನರಿಗೂ ಎನಿಸಿತು, ಅದರಿಂದ ಅವರೂ ಅವನನ್ನು ತಿರಸ್ಕರಿಸಲಾರಂಭಿಸಿದರು.

**ಐರ್ಲಂಡಿನಲ್ಲಿಯ ಬಂಡು, ೧೬೪೧**—೧೬೪೧ರಲ್ಲಿ ಐರ್ಲಂಡಿನಲ್ಲಿ ದೊಡ್ಡ ಬಂಡಾಯ್ತು. ಸ್ಟ್ರಫರ್ಡನು ಐರ್ಲಂಡಿನ ಲಾರ್ಡ ಡೆಪ್ಯುಟಿಯಾಗಿದ್ದಾಗ ಅಲ್ಲಿ ಅವನು ಶಾಶ್ವತ ಸೈನ್ಯವನ್ನು ಅಸ್ತಿತ್ವದಲ್ಲಿ ತಂದು ಅಲ್ಲಿಯ ರೋಮನ್ ಕ್ಯಾಥಲಿಕ್

ಜನರನ್ನು ಬಹು ಪರಿಯಿಂದ ಪೀಡಿಸಿ ಅವರ ಭೂಮಿಗಳನ್ನು ರಾಜಸ್ವವಾಗಿ ಮಾಡಿದನು. ಇದರಿಂದ ಐರಿಶ್ ಜನರು ಕೋಪಗೊಂಡಿದ್ದರು. ಅವನ ಉಗ್ರ ಶಾಸನಕ್ಕೆ ಹೆದರಿ ಜನರು ಅವನು ಅಲ್ಲಿ ಇರುವ ವರೆಗೆ ಬಂಡನ್ನು ಹೂಡಲು ಧೈರ್ಯಗೊಳಲಿಲ್ಲ. ಆದರೆ ಸ್ಟ್ರಫರ್ಡನು ಇಂಗ್ಲಂಡಿಗೆ ತಿರುಗಿ ಬಂದಬಳಿಕ ಅವನಿಂದ ಗಡಿಪಾರಮಾಡಲ್ಪಟ್ಟ ಓನೆಲ್ ಎಂಬವನ ನೇತೃತ್ವದಲ್ಲಿ ಐರಿಶ್ ಜನರು ಬಂಡನ್ನು ಹೂಡಿ ಅಲ್‌ಸ್ಟರ ಪ್ರಾಂತದಲ್ಲಿಯ ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಜನರ ಮೇಲೆ ಏರಿಹೋಗಿ ಅನೇಕರನ್ನು ಮೃತ್ಯುವಿಗೆ ಗುರಿಮಾಡಿದರು. ಆದುದರಿಂದ ಈ ಬಂಡನ್ನು ಮುರಿಯಲು ಸೈನ್ಯವನ್ನು ಸಿದ್ಧಗೊಳಿಸುವುದು ಅವಶ್ಯಕವಾಯ್ತು. ಆದರೆ ಈ ಸೈನ್ಯವನ್ನು ರಾಜನ ವಶಕ್ಕೆ ಕೊಟ್ಟರೆ ಅದರ ಸಾಹಾಯ್ಯದಿಂದ ರಾಜನು ತಮ್ಮ ಮೇಲೆ ಅತ್ಯಾಚಾರಗಳನ್ನು ಮಾಡಬಹುದೆಂದು ಬಗೆದು ಈ ಸೈನ್ಯದ ಅಧಿಕಾರಿಗಳು ಪಾರ್ಲಿಮೆಂಟಿನಿಂದ ನಿಯೋಜಿಸಲ್ಪಟ್ಟವರಿರಬೇಕೆಂದು ಪಾರ್ಲಿಮೆಂಟು ನಿಶ್ಚಯಿಸಿತು. ಆದರೆ ರಾಜನು ಇದಕ್ಕೆ ಒಪ್ಪದೆ ತನ್ನ ಅಧಿಕಾರದಿಂದಲೆ ಸೈನ್ಯವನ್ನು ಸಿದ್ಧಗೊಳಿಸತೊಡಗಿದನು. ಆಗ ಪಾರ್ಲಿಮೆಂಟೂ ತನ್ನ ಅಧಿಕಾರದಿಂದ ಸೈನ್ಯವನ್ನು ಸಿದ್ಧಗೊಳಿಸಲು ಪ್ರಾರಂಭಿಸಿತು. ಪಾರ್ಲಿಮೆಂಟಿನ ಈ ಕೃತ್ಯವನ್ನು ಕಂಡು ಚಾರ್ಲಸನು ಲಂಡನ್‌ನಗರವನ್ನು ಬಿಟ್ಟು ಹೋದನು.

**ಪಾರ್ಲಿಮೆಂಟು ಮತ್ತು ರಾಜನು ಅವರ ನಡುವೆ ಯುದ್ಧವು**—ಲಂಡನನ್ನು ಬಿಟ್ಟಬಳಿಕ ಚಾರ್ಲಸನು **ನಾಟಿಂಗಹೆಮ್** ಎಂಬಲ್ಲಿಗೆ ಹೋಗಿ ಅಲ್ಲಿ ಸೈನ್ಯವನ್ನು ಸಿದ್ಧಗೊಳಿಸಿ ಪಾರ್ಲಿಮೆಂಟಿನ ವಿರುದ್ಧವಾಗಿ ಯುದ್ಧವನ್ನು ಸಾರಿದನು (೧೬೪೨). ಈ ಯುದ್ಧವು ೧೬೪೯ರ ವರೆಗೆ ಸಾಗಿತು. ರಾಜನ ಪಕ್ಷದಲ್ಲಿ ಮನ್ನೆಯರು, ಸರದಾರರು, ಮತ್ತು "ಬಿಶಪರು ಮತ್ತು ಪ್ರಾರ್ಥನೆಯ ಪುಸ್ತಕವು ಬೇಕು" ಎಂಬ ಎಪಿಸ್‌ಕೊಪೇಲಿಯನ್ ಪಂಥದ ಜನರು ಇದ್ದರು. ರಾಜನಿಗೆ ಉತ್ತರ ಮತ್ತು ಪಶ್ಚಿಮ ಭಾಗಗಳಲ್ಲಿ ಬೆಂಬಲವಿದ್ದಿತು. ರಾಜಪಕ್ಷದ ಸೈನಿಕರಿಗೆ **ರಾಯಲಿಸ್ಟ** ಅಥವಾ **ಕ್ಯಾವೆಲಿಯರ್ಸ** ಎಂದು ಹೆಸರು. ಅವರ ಬಟ್ಟೆಗಳು ಉಚ್ಚಪ್ರತಿಯವಿದ್ದುವು ಮತ್ತು ಅವರ ತಲೆಗೂದಲು ಉದ್ದವಾಗಿದ್ದಿತು. **ಡ್ಯೂಕ್ ಆಫ್ ನ್ಯೂ ಕ್ಯಾಸ್ಟೆಲ್** ಎಂಬವನು ರಾಜಸೈನ್ಯದ ಸೇನಾಪತಿಯಾಗಿದ್ದನು, ಮತ್ತು **ಲಾರ್ಡ ಫಾಕ್‌ಲಂಡ್** ಮತ್ತು ಚಾರ್ಲಸನ ಸೋದರಳಿಯನಾದ **ಪ್ರಿನ್ಸ ರೂಪರ್ಟ** ಎಂಬ ಅಧಿಕಾರಿಗಳು ಆತನಿಗೆ ಸಾಹಾಯ್ಯಕರಾಗಿದ್ದರು. ಪಾರ್ಲಿಮೆಂಟಿನ ಸೈನ್ಯದಲ್ಲಿ ವಿಶೇಷವಾಗಿ ವ್ಯಾಪಾರಸ್ಥರೂ ಮಧ್ಯಮ ಮತ್ತು ಕೆಳಗಿನ ವರ್ಗಗಳ ಜನರೂ ಸೇರಿದ್ದರು. ಅವರಲ್ಲಿ ಬಹಳ ಜನರು ಪ್ಯುರಿಟನ್

ಪಂಥದವರಾಗಿದ್ದರು. ಅವರ ತಲೆಗೂದಲು ಕಿರಿದಾಗಿದ್ದಿತು. ಆದುದರಿಂದ ಅವರಿಗೆ **"ರಾವುಂಡ್ ಹೆಡ್ಸ"** ಎಂದು ಹೆಸರು ಬಂದಿತು. ಪಾರ್ಲಿಮೆಂಟಿಗೆ ಇಂಗ್ಲಂಡಿನ ಪೂರ್ವ ಮತ್ತು ದಕ್ಷಿಣ ಭಾಗಗಳ ಬೆಂಬಲವಿದ್ದಿತು. **ಅರ್ಲ ಅಫ್ ಎಸೆಕ್ಸ** ಈತನು ಪಾರ್ಲಿಮೆಂಟ ಸೈನ್ಯದ ಸೇನಾಪತಿಯಾಗಿದ್ದನು. ಅಶ್ವದಲದ ಅಧಿನಾಯಕನಾಗಿದ್ದ **ಆಲಿವರ್ ಕ್ರಾಮವೆಲ್** ಎಂಬವನು ಆತನಿಗೆ ಸಾಹಾಯ್ಯಕನಾಗಿದ್ದನು.

**ಯುದ್ಧವು**–ಚಾರ್ಲಸನು ನಾಟಿಂಗಹೆಮಿನಿಂದ ಲಂಡನಿನ ಮೇಲೆ ದಾಳಿ ಮಾಡಲು ಹೊರಟನು. ಪಾರ್ಲಿಮೆಂಟಿನ ಸೈನ್ಯವು ರಾಜಸೈನ್ಯವನ್ನು **ಎಡಜ್ ಹಿಲ್** ಎಂಬಲ್ಲಿ ಇದಿರಿಸಿತು (೧೬೪೨). ಆದರೆ ಈ ಯುದ್ಧದಲ್ಲಿ ಯಾವ ಪಕ್ಷವೂ ಗೆಲ್ಲಲಿಲ್ಲ. ಆ ಬಳಿಕ ೧೬೪೪ರಲ್ಲಿ ಜೂನ ತಿಂಗಳಲ್ಲಿ **ಚಾಲಗ್ರೀವ ಫೀಲ್ಡ** ಎಂಬಲ್ಲಿ ಕಾಳೆಗವಾಯ್ತು. ಅದರಲ್ಲಿ ಪಾರ್ಲಿಮೆಂಟು ಸೋತಿತು ಮತ್ತು ಜಾನ್ ಹ್ಯಾಮ್‌ಡೆನನು ಮರಣಹೊಂದಿದನು. ಇದೇ ಸಮಯದಲ್ಲಿ ಪಾರ್ಲಿಮೆಂಟಿನ ಮುಂದಾಳುವಾದ ಪಿಮ್ ಇವನೂ ಮರಣ ಹೊಂದಿದನು. ಅನಂತರದಲ್ಲಿ **ನ್ಯೂಬರಿ** ಎಂಬಲ್ಲಿ ಕಾಳೆಗವಾಯ್ತು. ಅರ್ಲ್ ಅಫ್ ಎಸೆಕ್ಸನು ರಾಜಸೈನ್ಯವನ್ನು ಸೋಲಿಸಿದನು. ಈ ಕಾಳೆಗದಲ್ಲಿ ರಾಜಪಕ್ಷದ ಲಾರ್ಡ



ಫ್ಲಾಕ್‌ಲಂಡನು ಮಡಿದನು. ಪಾರ್ಲಿಮೆಂಟಿನ ಸೈನ್ಯಕ್ಕೆ ಜಯವು ದೊರೆತರೂ ಸ್ಕಾಟಿಶ್‌ಜನರ ಸಾಹಾಯ್ಯವನ್ನು ತೆಗೆದುಕೊಳ್ಳದಿದ್ದರೆ ಪಾರ್ಲಿಮೆಂಟಿಗೆ ಶಾಶ್ವತ ವಾದ ವಿಜಯವು ಬರಲಾರದೆಂದು ತೋರಿತು. ಆದುದರಿಂದ ಪಾರ್ಲಿಮೆಂಟು ಇಂಗ್ಲಂಡಿನಲ್ಲಿ ಪ್ರೆಸ್‌ಬಿಟೇರಿಯನ್ ಪಂಥವು ಸ್ಥಾಪಿಸಲ್ಪಡುವುದೆಂದು ಆಶ್ವಾಸನ ವನ್ನಿತ್ತು ಸ್ಕಾಟಿಶ್‌ಜನರ ಸಾಹಾಯ್ಯವನ್ನು ಸಂಪಾದಿಸಿತು (೧೬೪೩). ಸ್ಕಾಟ ಲಂಡಿನಿಂದ ೨೦,೦೦೦ ಸೈನಿಕರ ಸೈನ್ಯವು ಇಂಗ್ಲಂಡಿಗೆ ಬಂದಿತು. ಕ್ರಾಮ್‌ವೆಲನ ನೇತೃತ್ವದಲ್ಲಿಯ ಪಾರ್ಲಿಮೆಂಟಿನ ಸೈನ್ಯವು ಅದನ್ನು ಕೂಡಿಕೊಂಡಿತು. **ಆಲಿವರ್ ಕ್ರಾಮ್‌ವೆಲನು** ತನ್ನ ಸೈನ್ಯಕ್ಕೆ ಯುದ್ಧಶಿಕ್ಷಣವನ್ನು ಕೊಟ್ಟು ಅದನ್ನು ಬಹು ಬಲ ಶಾಲಿಯಾಗಿ ಮಾಡಿದ್ದನು, ಆದುದರಿಂದ ಅದಕ್ಕೆ ಕಬ್ಬಿಣದಂತೆ ಗಟ್ಟಿಯಾದ ಸೈನ್ಯವು (Ironsides) ಎಂದು ಹೆಸರು ಬಂದಿತು. **ಮಾರ್ಸ್ಟನ್‌ಮೂರ್** ಎಂಬಲ್ಲಿ ಈ ಸಂಯುಕ್ತ ಸೈನ್ಯವು ಪ್ರಿನ್ಸ ರೂಪರ್ಟನ ನಾಯಕತ್ವದಲ್ಲಿಯ ರಾಜಸೈನ್ಯ ವನ್ನು ಇದಿರಿಸಿ ಅದನ್ನು ಸೋಲಿಸಿತು (೧೬೪೪ ಜುಲೈ). ಈ ಯುದ್ಧದಲ್ಲಿ ಕ್ರಾಮ್‌ವೆಲನ ಅಶ್ವದಲವು ಬಹು ಪರಾಕ್ರಮದಿಂದ ಹೋರಾಡಿತು.

**ಕ್ರಾಮ್‌ವೆಲನು ಸೈನ್ಯದ ಶಿಸ್ತಿನ ವಿಷಯದಲ್ಲಿ ಮಾಡಿದ ಸುಧಾರಣೆ ಗಳು (೧೬೪೫)**—ಪಾರ್ಲಿಮೆಂಟಿನ ಪಕ್ಷಕ್ಕೆ ವಿಜಯವು ದೊರೆಯಬೇಕಾದರೆ ಯೋಗ್ಯ ಸೈನ್ಯಾಧಿಕಾರಿಗಳೂ ಯುದ್ಧಶಿಕ್ಷಣವನ್ನು ಪಡೆದ ಸೈನಿಕರೂ ಅವಶ್ಯ ವೆಂದು ತೋರಿದುದರಿಂದ ಕ್ರಾಮ್‌ವೆಲನು ಪಾರ್ಲಿಮೆಂಟಿನಲ್ಲಿ ಒಂದು ಕಾಯ್ದೆ ಯನ್ನು ಪಾಸುಮಾಡಿಸಿಕೊಂಡನು (೧೬೪೪). ಇದಕ್ಕೆ **ಅಧಿಕಾರ ತ್ಯಾಗದ ಕಾಯ್ದೆ** (Self-denying Ordinance) ಎಂದು ಹೆಸರು. ಈ ಹೊಸ ಕಾಯ್ದೆಯಂತೆ ಪಾರ್ಲಿಮೆಂಟಿನ ಸದಸ್ಯರಿಗೆ ಸೈನ್ಯದಲ್ಲಿಯ ಅಧಿಕಾರ ಸ್ಥಳಗಳನ್ನು ಸ್ವೀಕರಿಸಲು ಪ್ರತಿಬಂಧವಾಯ್ತು. ಕ್ರಾಮ್‌ವೆಲನು ಪಾರ್ಲಿಮೆಂಟಿನ ಸದಸ್ಯನಾಗಿ ದ್ದರೂ ಅವನ ವಿಷಯದಲ್ಲಿ ಅಪವಾದವೆಂದು ಸೈನ್ಯದಲ್ಲಿಯ ಅಧಿಕಾರ ಸ್ಥಳವನ್ನು ಸ್ವೀಕರಿಸಲು ಪಾರ್ಲಿಮೆಂಟು ಅವನಿಗೆ ಅಪ್ಪಣೆಯನ್ನಿತ್ತಿತು. ಕ್ರಾಮ್‌ವೆಲನು ಪಾರ್ಲಿಮೆಂಟಿನ ಸೈನ್ಯದೊಳಗಿನ ಎಲ್ಲ ಸೈನಿಕರಿಗೆ ಶಿಸ್ತಿನ ಯುದ್ಧಶಿಕ್ಷಣವನ್ನು ಕೊಟ್ಟು ಸೈನ್ಯವನ್ನು ಬಹು ಬಲಶಾಲಿಯಾಗಿ ಮಾಡಿದನು. ಈ ಸೈನ್ಯದಲ್ಲಿ ೨೦,೦೦೦ ಸೈನಿಕರಿದ್ದರು. ಪಾರ್ಲಿಮೆಂಟು ಥಾಮಸ್ ಫೇಯರ್‌ಫಕ್ಸ ಎಂಬವನನ್ನು ಮುಖ್ಯ ಸೇನಾನಾಯಕನಾಗಿಯೂ ಕ್ರಾಮ್‌ವೆಲನನ್ನು ಅಶ್ವದಲದ ಅಧಿಪತಿ ಯಾಗಿಯೂ ನಿಯೋಜಿಸಿತು.

**ಚಾರ್ಲಸನು ಸೆರೆಹಿಡಿಯಲ್ಪಟ್ಟನು**—ಪಾರ್ಲಿಮೆಂಟಿನ ಸೈನ್ಯದ ಸಿದ್ಧತೆ

ಇಂತಾದ ಬಳಿಕ ೧೬೪೫ರಲ್ಲಿ ಕ್ರಾಮ್‌ವೆಲನು **ನೆಸ್ಬಿ** ಎಂಬಲ್ಲಿ ಚಾರ್ಲಸನ ಸೈನ್ಯ ವನ್ನು ಸಂಪೂರ್ಣವಾಗಿ ಸೋಲಿಸಿದನು. ಈ ವಿಜಯದಿಂದ ಕ್ರಾಮ್‌ವೆಲನ ಮತ್ತು ಅವನ ಸೈನ್ಯದ ಮಹತ್ವವು ಬೆಳೆಯಿತು ಮತ್ತು ಎಲ್ಲ ಸತ್ತೆ ಅವನ ಕೈಯಲ್ಲಿ ಬಂದಿತು. ಅತ್ತ ಸ್ಕಾಟಲಂಡಿನಲ್ಲಿ **ಅರ್ಲ ಆಫ್ ಮಾಂಟ್ರೋಜ** ಇವನು ಚಾರ್ಲಸನಿಗೆ ಸಾಹಾಯ್ಯಮಾಡಲು ಬಯಸಿ ಗುಡ್ಡಗಾಡು ಪ್ರದೇಶದಲ್ಲಿಯ ಹಾಯಲಂಡರ್ಸ ಜನರ ಸೈನ್ಯವನ್ನು ಸಿದ್ಧಗೊಳಿಸಿದ್ದನು. ಆದರೆ **ಡೆವಿಡ್ ಲೆಸ್ಲಿ** ಎಂಬವನು **ಫಿಲಿಫಗ್** ಎಂಬಲ್ಲಿ ಈ ಸೈನ್ಯವನ್ನು ಸೋಲಿಸಿದನು (೧೬೪೫). ನೆಸ್ಬಿಯುದ್ಧದಲ್ಲಿ ಸೋತು ಚಾರ್ಲಸನು ಉತ್ತರದ ಕಡೆಗೆ ಓಡಿಹೋಗಿ ಸ್ಕಾಟಿಶ್ ಸೈನ್ಯದ ಸ್ವಾಧೀನನಾದನು. ಆದರೆ ಸ್ಕಾಟಿಶ್ ಸೈನ್ಯವು ೪ ಲಕ್ಷ ಪೌಂಡುಗಳನ್ನು ಖಂಡಣಿಯಾಗಿ ತೆಗೆದುಕೊಂಡು ಅವನನ್ನು ಪಾರ್ಲಿ ಮೆಂಟಿನ ವಶಕ್ಕೆ ಒಪ್ಪಿಸಿ (೧೬೪೭) ತಿರುಗಿಹೋಯ್ತು. ಪಾರ್ಲಿಮೆಂಟು ಚಾರ್ಲಸ ನನ್ನು ಸೆರೆಯಲ್ಲಿಟ್ಟಿತು.

**ಪ್ಯುರಿಟನ್ ಪಂಥದ ಜನರಲ್ಲಿ ಎರಡು ಪಕ್ಷಗಳು—ಪ್ರೆಸ್‌ಬಿಟೇರಿ ಯನ್ಸ ಮತ್ತು ಇಂಡಿಪೆಂಡೆಂಟ್ಸ**—ಚಾರ್ಲಸನು ಸೆರೆಯಾಳಾದ ಬಳಿಕ ಪಾರ್ಲಿ ಮೆಂಟ ಪಕ್ಷದ ಪ್ಯುರಿಟನ್ ಜನರಲ್ಲಿ **ಪ್ರೆಸ್‌ಬಿಟೇರಿಯನ್ಸ** ಮತ್ತು **ಇಂಡಿ ಪೆಂಡೆಂಟ್ಸ (ಸ್ವತಂತ್ರ)** ಎಂದು ಎರಡು ಪಕ್ಷಗಳಾದುವು. ಇಂಡಿಪೆಂಡೆಂಟ್ಸ ಪಕ್ಷ ದವರಿಗೆ ಧಾರ್ಮಿಕ ವಿಷಯದಲ್ಲಿ ಪೂರ್ಣ ಸ್ವಾತಂತ್ರ್ಯವು ಬೇಕಾಗಿದ್ದಿತು ಮತ್ತು ಪ್ರೆಸ್‌ಬಿಟೇರಿಯನ್ ಪಂಥದಂತೆ ನಡೆವುದು ಅವರಿಗೆ ಸರಿದೋರುತ್ತಿದ್ದಿಲ್ಲ. ಇಂಗ್ಲಂಡಿ ನಲ್ಲಿ ರಾಜಸತ್ತೆಯನ್ನು ನಷ್ಟಗೊಳಿಸಿ ಲೋಕಸತ್ತಾಕ ರಾಜಪದ್ಧತಿಯನ್ನು ಸ್ಥಾಪಿ ಸುವುದು ಅವರಿಗೆ ಇಷ್ಟವಾಗಿತ್ತು. ಪ್ರೆಸ್‌ಬಿಟೇರಿಯನ್ ಪಕ್ಷದವರಿಗೆ ಇಂಗ್ಲಂಡಿ ನಲ್ಲಿ ಬಿಶಪರ ವರ್ಚಸ್ಸನ್ನು ನಷ್ಟಗೊಳಿಸಿ ಪ್ರಾರ್ಥನೆಯ ಪುಸ್ತಕವನ್ನು ರದ್ದುಗೊಳಿಸಿ ಪ್ರೆಸ್‌ಬಿಟೇರಿಯನ್ ಪಂಥಕ್ಕೆ ಅನುಕೂಲವಾದ ಧಾರ್ಮಿಕವ್ಯವಸ್ಥೆಯನ್ನು ಇಟ್ಟು ಕೊಳ್ಳುವುದು ಬೇಕಾಗಿದ್ದಿತು. ಇಂಗ್ಲಂಡಿನಲ್ಲಿ ಲೋಕನಿಯಂತ್ರಿತವಾದ ರಾಜ ಸತ್ತೆಯಿರಬೇಕೆಂದು ಅವರ ಮತವಿದ್ದಿತು. ಪಾರ್ಲಿಮೆಂಟಿನಲ್ಲಿ ಪ್ರೆಸ್‌ಬಿಟೇರಿಯನ್ ಪಕ್ಷದವರ ವರ್ಚಸ್ಸಿದ್ದಿತು, ಆದರೆ ಸ್ವತಂತ್ರ ಪಕ್ಷದವರಿಗೆ ಕ್ರಾಮ್‌ವೆಲನ ಮತ್ತು ಅವನ ಸೈನ್ಯದ ಬೆಂಬಲವಿದ್ದಿತು. ಅವರು ಚಾರ್ಲಸನನ್ನು ತಮ್ಮ ವಶದಲ್ಲಿ ತೆಗೆದು ಕೊಂಡರು. ರಾಜನ ಜೀವಿತಕ್ಕೆ ಅಪಾಯವು ಒದಗುವ ಸಂಭವವು ತೋರಿದು ದರಿಂದ ಸ್ಕಾಟಿಶ್‌ಜನರು ರಾಜನನ್ನು ಮುಕ್ತಗೊಳಿಸಲು **ಹ್ಯಾಮಿಲ್ಟನ್** ಎಂಬ ವನ ನಾಯಕತ್ವದಲ್ಲಿ ಸೈನ್ಯವನ್ನು ಕಳಿಸಿದರು. ಆದರೆ ಕ್ರಾಮ್‌ವೆಲನು ಆ ಸೈನ್ಯ

ವನ್ನು ಪ್ರೆಸ್ಟನ್ ಎಂಬಲ್ಲಿ ಸೋಲಿಸಿದನು (೧೬೪೮). ಆ ಬಳಿಕ ಕ್ರಾಂವೆಲನು ರಾಜನ ವಿಚಾರಣೆಗೋಸುಗ ಪಾರ್ಲಿಮೆಂಟಿನ ಸಭೆಯನ್ನು ಕರೆದನು. ಪ್ರೆಸ್‌ಬಿಟೇರಿಯನ್ ಪಕ್ಷದ ಸದಸ್ಯರು ರಾಜಸತ್ತೆಯನ್ನು ನಷ್ಟಗೊಳಿಸಬೇಕೆಂಬ ಮಾತಿಗೆ ಅನುಕೂಲರಾಗಲಿಕ್ಕಿಲ್ಲವೆಂದು ಬಗೆದು **ಕರ್ನಲ್ ಪ್ರಾಯಿಡ್** ಎಂಬ ಸೈನ್ಯಾಧಿಕಾರಿ ಪ್ರೆಸ್‌ಬಿಟೇರಿಯನ್ ಪಕ್ಷದ ೯೬ ಸದಸ್ಯರನ್ನು ಪಾರ್ಲಿಮೆಂಟ್‌ಸಭೆಗೆ ಬರಲು ಪ್ರತಿಬಂಧಿಸಿದನು; ಆ ಬಳಿಕ ಸ್ವತಂತ್ರ (ಇಂಡಿಪೆಂಡೆಂಟ) ಪಕ್ಷದ ೫೩ ಸದಸ್ಯರು ರಾಜನ ವಿಚಾರಣೆಯಾಗುವುದು ಅವಶ್ಯವೆಂದು ನಿರ್ಣಯವನ್ನು ಮಾಡಿದರು (೧೬೪೮). ಈ ವಿಚಾರಣೆಗೋಸ್ಕರ **ಬ್ರ್ಯಾಡ್‌ಶಾ** ಎಂಬವನ ನೇತೃತ್ವದಲ್ಲಿ ಒಂದು **ನ್ಯಾಯಾಸನವು** ಸ್ಥಾಪಿಸಲ್ಪಟ್ಟಿತು. ಆದರೆ ಚಾರ್ಲಸನು ಈ ನ್ಯಾಯಾಸನಕ್ಕೆ ತನ್ನ ವಿಚಾರಣೆಯನ್ನು ಮಾಡಲು ಅಧಿಕಾರವಿಲ್ಲವೆಂದು ಹೇಳಿ ಅದರ ಮುಂದೆ ಸಾಕ್ಷಿಯನ್ನು ಹೇಳಲು ನಿರಾಕರಿಸಿದನು. ಆದರೆ ಈ ನ್ಯಾಯಾಸನವು ಚಾರ್ಲಸನ ಮೇಲೆ "ಅತ್ಯಾಚಾರಿ, ದೇಶದ್ರೋಹಿ, ಮತ್ತು ರಾಷ್ಟ್ರದ ಕಲ್ಯಾಣವನ್ನು ವಿರೋಧಿಸುವವನು" ಎಂದು ಆರೋಪವನ್ನಿಟ್ಟು ಅವನು ದೋಷಿಯೆಂದು ನಿರ್ಣಯಿಸಿ ಮರಣಶಿಕ್ಷೆಯನ್ನು ವಿಧಿಸಿತು. ಚಾರ್ಲಸನು ೧೬೪೯ರಲ್ಲಿ ಶೂಲಕ್ಕೇರಿಸಲ್ಪಟ್ಟನು. ಪಾರ್ಲಿಮೆಂಟು ಮತ್ತು ಚಾರ್ಲಸ್ ಇವರ ನಡುವೆ ಯುದ್ಧವು ನಡೆದಿರುವಾಗ **ರಾಜಪುತ್ರ ಚಾರ್ಲಸನು** ಇಂಗ್ಲಂಡಿನಿಂದ ಓಡಿಹೋಗಿದ್ದನು. ಈಗ ತಂದೆಯ ತರುವಾಯದಲ್ಲಿ ಇಂಗ್ಲಂಡಿನ ಪಟ್ಟವನ್ನು ಪಡೆಯಲು ಕ್ರಾಂವೆಲನ ಸೈನ್ಯದೊಡನೆ ಯುದ್ಧಮಾಡುವುದು ಅವನಿಗೆ ಅವಶ್ಯವಾಯ್ತು.

---

## ಸಾರಾಂಶವು

ಚಾರ್ಲಸನ ಸ್ವಭಾವವೂ ಅವನು ಕೈಕೊಂಡ ನೀತಿಯೂ—

ವಿದ್ಯೆ, ಕಲೆ ಇವುಗಳ ವಿಷಯದಲ್ಲಿ ಸಹಾನುಭೂತಿ. ಎಪಿಸ್‌ಕೊಪೇಲಿಯನ್ ಪಂಥದ ಅಭಿಮಾನಿ. 'ರಾಜನ ಸತ್ತೆ ಈಶ್ವರದತ್ತವಾದುದು' ಎಂಬ ತತ್ವದಲ್ಲಿ ನಂಬುಗೆ ಮತ್ತು ಅದರಿಂದ ಅನಿಯಂತ್ರಿತವಾಗಿ ರಾಜ್ಯವಾಳುವ ನೀತಿ.

ಚಾರ್ಲಸನ ಮಂತ್ರಿಗಳು—

ಬಕಿಂಗಹ್ಯಾಮ್, ಸ್ಟ್ರಫರ್ಡ ಮತ್ತು ಲಾಡ್.

ಚಾರ್ಲಸನಿಗೂ ಪಾರ್ಲಿಮೆಂಟಿಗೂ ವಿರೋಧವು—

೧೬೨೫ರಲ್ಲಿ ಮೊದಲನೆಯ ಪಾರ್ಲಿಮೆಂಟು. "ರಾಜನ ಸತ್ತೆ ಈಶ್ವರದತ್ತವಾದುದು" ಎಂಬ ತತ್ವವು ಪಾರ್ಲಿಮೆಂಟಿಗೆ ಅಮಾನ್ಯವು. ಬಕಿಂಗಹ್ಯಾಮು

ನನ್ನು ಮಂತ್ರಿಪದದಿಂದ ದೂರಗೊಳಿಸಬೇಕೆಂದು ಪಾರ್ಲಿಮೆಂಟು ಕೇಳಿಕೊಂಡುದು. ಟನೇಜ ಮತ್ತು ಪೌಂಡೇಜ ಕರವನ್ನು ಒಂದು ವರ್ಷದ ಮಟ್ಟಿಗೆ ಕೂಡಿಸಬಹುದೆಂದು ನಿರ್ಣಯವು. ಚಾರ್ಲಸನು ಪಾರ್ಲಿಮೆಂಟಿನ ಸಭೆಯನ್ನು ಮುರಿದುದು. ಸ್ಪೇನದ ಕ್ಯಾಡಿಜ್ ಬಂದರವನ್ನು ತೆಗೆದುಕೊಳ್ಳಲು ದಾಳಿ ಆದರೆ ಆದರಲ್ಲಿ ಅಪಯಶವು.

೧೬೨೬ರಲ್ಲಿ ಎರಡನೆಯ ಪಾರ್ಲಿಮೆಂಟು. ಬಕಿಂಗಹ್ಯಾಮನ ವಿಚಾರಣೆ (Impeachment) ಆಗಬೇಕೆಂದು ಪಾರ್ಲಿಮೆಂಟು ನಿರ್ಣಯಿಸಿತು, ಆದುದರಿಂದ ಚಾರ್ಲಸನು ಪಾರ್ಲಿಮೆಂಟಿನ ಈ ಸಭೆಯನ್ನು ಮುರಿದನು. ಅವನು ಸ್ವಂತದ ಅಧಿಕಾರದಿಂದ ಕರಗಳನ್ನು ಕೂಡಿಸಿದನು, ಒತ್ತಾಯದ ಸಾಲಗಳನ್ನು ತೆಗೆದುಕೊಂಡನು, ವಿರೋಧಕರನ್ನು ಸೆರೆಯಲ್ಲಿಟ್ಟನು, ಸೈನಿಕರ ವೆಚ್ಚಕ್ಕೋಸುಗ ಜನರನ್ನು ಪೀಡಿಸತೊಡಗಿದನು ಮತ್ತು ಅನ್ಯಾಯದ ಕೃತಿಗಳನ್ನು ಮಾಡಲಾರಂಭಿಸಿದನು. ಫ್ರಾನ್ಸಿನೊಡನೆ ಹಗೆತನವು ಮತ್ತು ಹ್ಯೂಗೆನಾಟ್ಸ ಜನರಿಗೆ ನೆರವಾಗಲು ಬಕಿಂಗಹ್ಯಾಮನನ್ನು ಸೈನ್ಯದೊಡನೆ ಕಳಿಹಿದನು (೧೬೨೭). ಅವನಿಗೆ ಅಪಯಶವು. ೧೬೨೮ರಲ್ಲಿ ಬಕಿಂಗಹ್ಯಾಮನ ಕೊಲೆ. ೧೬೨೮ರಲ್ಲಿ ಮೂರನೆಯ ಪಾರ್ಲಿಮೆಂಟು. ಪಿಮ್, ಹ್ಯಾಮ್ಡೆನ್, ಇಲಿಯಟ್ ಇವರು ಪಾರ್ಲಿಮೆಂಟಿನ ಮುಂದಾಳುಗಳು. 'ಪಿಟಿಶನ್ ಆಫ್ ರಾಯಿಟ್ಸ್' ಪತ್ರಿಕೆಯನ್ನು ಅವರು ಚಾರ್ಲಸನ ಕಡೆಗೆ ಕಳಿಹಿದರು. ಹಣದ ಅವಶ್ಯಕತೆಯಿದ್ದುದರಿಂದ ಚಾರ್ಲಸನು ಆ ಪತ್ರಿಕೆಗೆ ಮಾನ್ಯತೆಯಿತ್ತನು. ಪಾರ್ಲಿಮೆಂಟು ಹಣವನ್ನು ಕೊಡಬೇಕೆಂದು ನಿರ್ಣಯವನ್ನು ಮಾಡಿತು. ಚಾರ್ಲಸನು ಮತ್ತೆ ಅನ್ಯಾಯವನ್ನು ಆಚರಿಸಲಾರಂಭಿಸಿದನು. ಸ್ವಂತದ ಅಧಿಕಾರದಿಂದ ಟನೇಜ ಮತ್ತು ಪೌಂಡೇಜ ಕರವನ್ನು ಕೂಡಿಸಿದನು. ಈ ಕರವನ್ನು ಕೊಡದಿದ್ದವರಿಗೆ ಕಾರಾಗೃಹವಾಸವು. ಪಾರ್ಲಿಮೆಂಟು ಅವನ ಈ ಅನ್ಯಾಯದ ವರ್ತನವನ್ನು ನಿಷೇಧಿಸಿದುದರಿಂದ ಚಾರ್ಲಸನು ಪಾರ್ಲಿಮೆಂಟಿನ ಈ ಸಭೆಯನ್ನೂ ಮುರಿದನು (೧೬೨೯).

### ಚಾರ್ಲಸನ ಅನಿಯಂತ್ರಿತವೂ ಅತ್ಯಾಚಾರಪೂರ್ಣವೂ ಕಾಯ್ದೆಗೆ ವಿರುದ್ಧವೂ ಆದ ಆಳ್ಕೆ ೧೬೨೯-೧೬೪೦.

ಚಾರ್ಲಸನು ವೆಂಟವರ್ಥನನ್ನು ತನ್ನ ಕಡೆಗೆ ಒಲಿಸಿಕೊಂಡು ಅವನನ್ನು ಸ್ಟ್ರಾಫರ್ಡಿನ ಅರ್ಲ (ಸರದಾರ)ನಾಗಿ ಮಾಡಿದನು. ರಾಜಕೀಯ ವಿಷಯದಲ್ಲಿ ಸ್ಟ್ರಾಫರ್ಡನು, ಧಾರ್ಮಿಕ ವಿಷಯದಲ್ಲಿ ಲಾಡ್ ಇವರು ಚಾರ್ಲಸನಿಗೆ ಆಲೋಚನೆ ಹೇಳುವವರು. ಐರ್ಲಂಡಿನಲ್ಲಿ ಬಂಡನ್ನು ಮುರಿಯಲು ಸ್ಟ್ರಾಫರ್ಡನು ಕಳಿಸಲ್ಪಟ್ಟನು. ಇಂಗ್ಲಂಡಿನಲ್ಲಿ ಚಾರ್ಲಸನ ಅತ್ಯಾಚಾರಪೂರ್ಣವಾದ ಆಳ್ಕೆ. ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಟನೇಜ ಮತ್ತು ಪೌಂಡೇಜ ಕರಗಳು ಕೂಡಿಸಲ್ಪಟ್ಟುವು; ಒತ್ತಾಯದ ಸಾಲಗಳು; ಸರ್ವಾಧಿ

ಕಾರಗಳನ್ನು ಮಾರುವುದು, 'ಶಿಪ್‌ಮನಿ' ಕರವು (೧೬೩೫). ಅದನ್ನು ಜಾನ್ ಹ್ಯಾಮಡೆನನು ವಿರೋಧಿಸಿದುದರಿಂದ ಅವನಿಗೆ ದಂಡವು. ಸ್ಟಾರ್ ಚೆಂಬರ ಕೋರ್ಟು ಮತ್ತು ಹಾಯ್ ಕಮಿಶನ್ ಕೋರ್ಟು. ರಾಜಕೀಯ ಮತ್ತು ಧಾರ್ಮಿಕ ಪೀಡೆಗಳಿಗೆ ಬೇಸತ್ತು ಅನೇಕ ಪ್ಯುರಿಟನರು ಅಮೇರಿಕೆಗೆ ಹೋಗಿ ಅಲ್ಲಿ ವಸಾಹತುಗಳನ್ನು ಸ್ಥಾಪಿಸಿದರು. ಸ್ಕಾಟಲಂಡಿನಲ್ಲಿ ಎಪಿಸ್ಕೊಪೇಲಿಯನ್ ಪಂಥವನ್ನು ಸ್ಥಾಪಿಸಲು ಚಾರ್ಲಸನು ಯತ್ನಿಸಿದನು. ಸ್ಕಾಟಿಶ್ ಜನರ ವಿರೋಧವು. ಅಲ್ಲಿ ರಾಷ್ಟ್ರೀಯ ಸಂಘದ (National Covenant) ಸ್ಥಾಪನೆ. ಸ್ಕಾಟಲಂಡಿನೊಡನೆ ಯುದ್ಧವು. ಚಾರ್ಲಸನು ಸೋತು ಒಪ್ಪಂದವನ್ನು ಮಾಡಿಕೊಂಡನು. ಸ್ಟ್ರಫರ್ಡನು ಐರ್ಲಂಡಿನಿಂದ ಮರಳಿ ಕರೆಯಲ್ಪಟ್ಟನು. ಸ್ಕಾಟಲಂಡಿನೊಡನೆ ಯುದ್ಧಮಾಡಲು ಹಣದ ಅವಶ್ಯಕತೆ, ಅದಕ್ಕೋಸುಗ ಚಾರ್ಲಸನು ಪಾರ್ಲಿಮೆಂಟ ಸಭೆಯನ್ನು ಕರೆದನು (೧೬೪೦). ಪಾರ್ಲಿಮೆಂಟಿನಲ್ಲಿ ರಾಜನ ಅತ್ಯಾಚಾರದ ಮತ್ತು ಅನ್ಯಾಯದ ಕೃತಿಗಳ ನಿಷೇಧವು. ಇದರಿಂದ ಕೋಪಗೊಂಡು ಚಾರ್ಲಸನು ಮೂರು ವಾರಗಳಲ್ಲಿಯೆ ಸಭೆಯನ್ನು ಮುರಿದನು (ಶಾರ್ಟ ಪಾರ್ಲಿಮೆಂಟ್). ಸ್ಕಾಟಿಶ್ ಜನರ ದಾಳಿ. ಚಾರ್ಲಸನ ಪರಾಭವವು. ಸ್ಕಾಟಿಶ್ ಜನರು ಚಾರ್ಲಸನಿಂದ ಕಪ್ಪವನ್ನು ತೆಗೆದುಕೊಂಡು ಒಪ್ಪಂದಕ್ಕೆ ಒಪ್ಪಿದರು. ಚಾರ್ಲಸನಿಗೆ ಮತ್ತೆ ದುಡ್ಡಿನ ಕೊರತೆಯಾದುದರಿಂದ ಮತ್ತೆ ಪಾರ್ಲಿಮೆಂಟಿನ ಸಭೆಯನ್ನು ಕರೆದನು (೧೬೪೦). ಈ ಸಭೆ ಅನೇಕ ವರ್ಷಗಳ ವರೆಗೆ ಸಾಗಿತು. ಆದುದರಿಂದ ಲಾಂಗ ಪಾರ್ಲಿಮೆಂಟ್ ಎಂದು ಅದಕ್ಕೆ ಹೆಸರು ಬಂದಿತು.

## ಲಾಂಗ ಪಾರ್ಲಿಮೆಂಟ್ ೧೬೪೦-೧೬೬೦.

ಪಿಮ್, ಹ್ಯಾಮ್‌ಡೆನ್, ಸ್ಟ್ರೋಡ ಮೊದಲಾದವರು ಮುಂದಾಳುಗಳು. ರಾಜನ ಅನ್ಯಾಯದ ಕೃತಿಗಳ ನಿಷೇಧವು. ಸ್ಟ್ರಫರ್ಡ ಮತ್ತು ಲಾಡ್ ಇವರಿಗೆ ದೇಶದ್ರೋಹಕ್ಕೋಸುಗ ಮರಣಶಿಕ್ಷೆ. ಸ್ಟಾರ್ ಚೆಂಬರ್ ಕೋರ್ಟ್ ಮತ್ತು ಹಾಯ್ ಕಮಿಶನ್ ಕೋರ್ಟ್ ಇವು ರದ್ದುಗೊಳಿಸಲ್ಪಟ್ಟುವು. ಟ್ರಾಯೆನಿಯಲ್ ಅಕ್ಟ್, ಪಾರ್ಲಿಮೆಂಟಿನಲ್ಲಿ ಧಾರ್ಮಿಕ ಪ್ರಶ್ನದ ವಿಷಯವಾಗಿ ಒಡಕು, ಲಾರ್ಡ ಫಾಕ್‌ಲಂಡ್ ಮತ್ತು ಎಡವರ್ಡ ಹಾಯಿಟ್ ಇವರ ನೇತೃತ್ವದಲ್ಲಿ ಎಪಿಸ್ಕೊಪೇಲಿಯನ್ ಪಂಥಕ್ಕೆ ಬೆಂಬಲವನ್ನೀವ ಪಕ್ಷವು. ಪಿಮ್ ಮತ್ತು ಹ್ಯಾಮ್‌ಡೆನ್ ಇವರ ನೇತೃತ್ವದಲ್ಲಿ ಪ್ಯುರಿಟನ್ ಪಂಥಕ್ಕೆ ಬೆಂಬಲವನ್ನೀವ ಪಕ್ಷವು. "ರೂಟ್ ಅಂಡ ಬ್ರ್ಯಾಂಚ ಬಿಲ್." ಚಾರ್ಲಸನ ಅತ್ಯಾಚಾರಗಳನ್ನು ನಿಷೇಧಿಸಲೋಸುಗ ಗ್ರ್ಯಾಂಡ್ ರಿಮಾನ್‌ಸ್ಟ್ರನ್ಸ್ ಎಂಬ ನಿರ್ಣಯವು. ಪಿಮ್, ಹ್ಯಾಮ್‌ಡೆನ್, ಹೋಲ್ಸ, ಹೆಜಲರಿಗ್ ಮತ್ತು ಸ್ಟ್ರೋಡ್ ಈ ಐದು ಮುಂದಾಳುಗಳನ್ನು ಪಾರ್ಲಿಮೆಂಟಿನಲ್ಲಿ

ಸೆರೆಹಿಡಿಯಲು ಹೋದ ಚಾರ್ಲಸನ ಪ್ರಯತ್ನವು ನಿಷ್ಫಲವಾಯ್ತು. ಐರ್ಲಂಡಿನಲ್ಲಿ ಬಂಡು. ಸೈನ್ಯದ ಮೇಲೆ ತನ್ನ ಸತ್ತೆ ಇರಬೇಕೆಂದು ಪಾರ್ಲಿಮೆಂಟಿನ ಪ್ರಯತ್ನವು. ಈ ಕಾರಣದಿಂದ ಚಾರ್ಲಸ್ ಮತ್ತು ಪಾರ್ಲಿಮೆಂಟ್ ಇವರಲ್ಲಿ ಪರಸ್ಪರ ವೈರವು ಮತ್ತು ಯುದ್ಧವು.

## ಚಾರ್ಲಸ್ ಮತ್ತು ಪಾರ್ಲಿಮೆಂಟ್ ಇವರ ನಡುವೆ ಯುದ್ಧವು ೧೬೪೨-೧೬೪೯.

ರಾಜಪಕ್ಷವು—ರಾಜಪಕ್ಷದವರಿಗೆ ರಾಯಲಿಸ್ಟ್ಸ ಮತ್ತು ಕ್ಯಾವೆಲಿಯರ್ಸ್ ಎಂದು ಹೆಸರು. ಅವರು ಎಪಿಸ್ಕೊಪೇಲಿಯನ್ ಪಂಥದ ಅಭಿಮಾನಿಗಳು. ಡ್ಯೂಕ್ ಆಫ್ ನ್ಯೂಕ್ಯಾಸಲ್ ಇವನು ಮುಖ್ಯ ಸೇನಾಪತಿ. ಲಾರ್ಡ ಫಾಕ್‌ಲಂಡ ಮತ್ತು ಪ್ರಿನ್ಸ ರೂಪರ್ಟ್ ಇವರು ಆತನ ಸಾಹಾಯ್ಯಕ ಅಧಿಕಾರಿಗಳು.

ಪಾರ್ಲಿಮೆಂಟ್ ಪಕ್ಷವು— ಪಾರ್ಲಿಮೆಂಟ್ ಪಕ್ಷದವರಿಗೆ ರೌಂಡ್ ಹೆಡ್ಸ ಎಂದು ಹೆಸರು. ಅವರಲ್ಲಿ ಬಹುಜನರು ಪ್ಯುರಿಟನ್ ಪಂಥದ ಅಭಿಮಾನಿಗಳು. ಅರ್ಲ ಆಫ್ ಎಸೆಕ್ಸನು ಮುಖ್ಯ ಸೇನಾಪತಿ. ಅಶ್ವದಲದ ಅಧಿಪತಿಯಾದ ಕ್ರಾಮ್‌ವೆಲನು ಆತನ ಸಾಹಾಯ್ಯಕನು.

ಯುದ್ಧವು ೧೬೪೨-೧೬೪೯—೧೬೪೩ ಎಜ್‌ಹಿಲದ ಕಾಳಗವು ಸಮನಾಯಿತು. ೧೬೪೩ ಚಾಲ್‌ಗ್ರೀವ್ ಫೀಲ್ಡಿನ ಕಾಳಗವು; ರಾಜನಿಗೆ ಜಯವು. ೧೬೪೩ ನ್ಯೂಬರಿಯ ಕಾಳಗವು; ಪಾರ್ಲಿಮೆಂಟಿಗೆ ಜಯವು. ೧೬೪೩ ಇಂಗ್ಲಂಡಿನಲ್ಲಿ ಪ್ರೆಸ್‌ಬಿಟೇರಿಯನ್ ಪಂಥವನ್ನು ಸ್ಥಾಪಿಸಲು ಸ್ಕಾಟಲಂಡಿಗೆ ಆಶ್ವಾಸನವನ್ನಿತ್ತು ಪಾರ್ಲಿಮೆಂಟು ಸ್ಕಾಟ್‌ಲಂಡಿನಿಂದ ಸಾಹಾಯ್ಯವನ್ನು ಪಡೆಯಿತು. ೧೬೪೪ರಲ್ಲಿ ಮಾರ್ಸ್ಟನ್‌ಮೂರಿನ ಕಾಳಗವು; ಸ್ಕಾಟಿಶ್ ಸೈನ್ಯದ ಸಾಹಾಯ್ಯದಿಂದ ಕ್ರಾಮ್‌ವೆಲನು ಚಾರ್ಲಸನನ್ನು ಸೋಲಿಸಿದನು. ಕ್ರಾಮ್‌ವೆಲನು ಪಾರ್ಲಿಮೆಂಟಿನ ಸೈನ್ಯಕ್ಕೆ ಯುದ್ಧಶಿಕ್ಷಣವನ್ನು ಕೊಟ್ಟನು. ಅಧಿಕಾರತ್ಯಾಗದ ಕಾಯ್ದೆ (Self-denying Ordinance). ೧೬೪೫ರಲ್ಲಿ ನೆಸ್ಬಿಯ ಕಾಳಗವು; ಚಾರ್ಲಸನಿಗೆ ಪೂರ್ಣ ಪರಾಜಯವು. ೧೬೪೬ರಲ್ಲಿ ಚಾರ್ಲಸನು ಸ್ಕಾಟಿಶ್ ಸೈನ್ಯದ ಸ್ವಾಧೀನನಾದನು. ಸ್ಕಾಟಿಶ್ ಸೈನ್ಯವು ಅವನನ್ನು ಪಾರ್ಲಿಮೆಂಟಿನ ವಶಕ್ಕೆ ಒಪ್ಪಿಸಿತು. ಪಾರ್ಲಿಮೆಂಟಿನಲ್ಲಿ ಎರಡು ಪಕ್ಷಗಳು, ಒಂದು ಆಲಿವರ್ ಕ್ರಾಮ್‌ವೆಲನ ನೇತೃತ್ವದಲ್ಲಿ ಇಂಡಿಪೆಂಡೆಂಟ್ (ಸ್ವತಂತ್ರ) ಪಕ್ಷವು; ಈ ಪಕ್ಷಕ್ಕೆ ಸೈನ್ಯದ ಬೆಂಬಲವು. ಇನ್ನೊಂದು ಪ್ಯುರಿಟನ್ ಪಂಥದವರ ಪಕ್ಷವು. ಈ ಪಕ್ಷದವರಿಗೆ ಸ್ಕಾಟಲಂಡಿನ ಪ್ರೆಸ್‌

ಬಿಟೇರಿಯನ್ ಪಂಥದ ವಿಷಯದಲ್ಲಿ ಸಹಾನುಭೂತಿ. ಇಂಡಿಪೆಂಡೆಂಟ್ ಪಕ್ಷದವರು ಚಾರ್ಲಸನ ವಿಚಾರಣೆಗಾಗಿ ಬ್ರ್ಯಾಡ್‌ಶಾ ಇವನ ನೇತೃತ್ವದಲ್ಲಿ ಒಂದು ನ್ಯಾಯಾಸನವನ್ನು ನಿಯೋಜಿಸಿದರು. ಈ ನ್ಯಾಯಾಸನವು ಚಾರ್ಲಸನ ಮೇಲೆ "ಅತ್ಯಾಚಾರಿ, ದೇಶದ್ರೋಹಿ ಮತ್ತು ರಾಷ್ಟ್ರದ ಕಲ್ಯಾಣವನ್ನು ವಿರೋಧಿಸುವವನು" ಎಂದು ಆರೋಪವನ್ನಿಟ್ಟು ಅವನು ದೋಷಿಯೆಂದು ನಿರ್ಣಯಿಸಿ ಮರಣಶಿಕ್ಷೆಯನ್ನು ವಿಧಿಸಿತು. ಚಾರ್ಲಸನು ೧೬೪೯ರಲ್ಲಿ ಶೂಲಕ್ಕೇರಿಸಲ್ಪಟ್ಟನು.

---

# ೧೦ನೆಯ ಪ್ರಕರಣವು

## ಇಂಗ್ಲಂಡಿನಲ್ಲಿ ಲೋಕಸತ್ತಾತ್ಮಕ ರಾಜ್ಯವು ಮತ್ತು ಕ್ರಾಮವೆಲನು

(೧೬೪೯—೧೬೬೦).

### ತತ್ಕಾಲೀನ ರಾಜ್ಯಕರ್ತರು.

| ಫ್ರಾನ್ಸ | ಸ್ಪೇನ |
|---|---|
| ೧೪ನೆಯ ಲುಯಿ (೧೬೪೩—೧೭೧೫) | ೪ನೆಯ ಫಿಲಿಪನು (೧೬೨೧—೧೬೬೫) |

### ಮಹತ್ವದ ಇಸ್ವಿಗಳು

| | |
|---|---|
| ೧೬೪೮—೫೩ | ರಂಪ್ ಪಾರ್ಲಿಮೆಂಟ್. |
| ೧೬೪೯ | ಐರ್ಲಂಡಿನಲ್ಲಿ ಬಂಡು. |
| ೧೬೫೦—೫೧ | ಸ್ಕಾಟಲಂಡಿನಲ್ಲಿ ಬಂಡು. |
| ೧೬೫೧ | ನ್ಯಾವಿಗೇಶನ್ ಕಾಯ್ದೆ. |
| ೧೬೫೨—೫೪ | ಡಚ್ ಜನರೊಡನೆ ಯುದ್ಧವು. |
| ೧೬೫೩—೫೮ | ರಾಷ್ಟ್ರರಕ್ಷಕ ಕ್ರಾಮವೆಲನು. |
| ೧೬೫೫ | ಸ್ಪೇನದ ಜಮೇಕಾ ನಡುಗಡ್ಡೆ ಇಂಗ್ಲಂಡಿಗೆ ದೊರೆತಿತು. |
| ೧೬೬೦ | ಕನ್‌ವೆನ್‌ಶನ್ ಪಾರ್ಲಿಮೆಂಟ್. |

**ರಂಪ್ ಪಾರ್ಲಿಮೆಂಟ್ ಮತ್ತು ಕ್ರಾಮವೆಲನು**—೧ನೆಯ ಚಾರ್ಲಸನು ಶೂಲಕ್ಕೇರಿಸಲ್ಪಟ್ಟ ಬಳಿಕ ಇಂಗ್ಲಂಡಿನಲ್ಲಿಯ ಸತ್ತೆಯೆಲ್ಲವು ರಂಪ್ ಪಾರ್ಲಿಮೆಂಟಿನ ಕೈಯಲ್ಲಿ ಬಂದಿತು. ಕರ್ನಲ್ ಪ್ರಾಯಿಡನೆಂಬ ಸೈನ್ಯಾಧಿಕಾರಿ ಕ್ರಾಮವೆಲನ ಆಜ್ಞೆಯಿಂದ ೧೬೪೮ರಲ್ಲಿ ಲಾಂಗ ಪಾರ್ಲಿಮೆಂಟಿನಲ್ಲಿಯ ಪ್ರೆಸ್‌ಬಿಟೇರಿಯನ್ ಪಂಥದ ಮತ್ತು ಸೈನ್ಯಕ್ಕೆ ವಿರುದ್ಧರಾಗಿದ್ದ ಸದಸ್ಯರನ್ನು ಹೊರಗಟ್ಟಿದ ಬಳಿಕ ಲಾಂಗ ಪಾರ್ಲಿಮೆಂಟಿನ ಉಳಿದ ಭಾಗಕ್ಕೆ ರಂಪ್ ಪಾರ್ಲಿಮೆಂಟ್ (ರಂಪ್ ಎಂದರೆ ಉಳಿದ ಭಾಗವು) ಎಂದು ಹೆಸರು ಬಂದಿತು. ಈ ರಂಪ್ ಪಾರ್ಲಿಮೆಂಟು ಸೈನ್ಯದ ಮತ್ತು ಕ್ರಾಮವೆಲನ ತಂತ್ರದಿಂದೆಯೆ ರಾಜ್ಯಕಾರಭಾರವನ್ನು ಮಾಡುತ್ತಿತ್ತು. ಕೈಯಲ್ಲಿ ಸತ್ತೆ ಬಂದ ಬಳಿಕ ರಂಪ್ ಪಾರ್ಲಿಮೆಂಟು

ಮುಂದೆ ಹೇಳಿದ ಸಂಗತಿಗಳನ್ನು ಮಾಡಿತು: (೧) ಇಂಗ್ಲಂಡಿನ ರಾಜ್ಯವು ಲೋಕ ಸತ್ತಾತ್ಮಕವಾದುದೆಂದು ಪ್ರಕಟಿಸಿತು. (೨) 'ಹೌಸ್ ಆಫ್ ಲಾರ್ಡ್ಸ' ಸಭೆ ನಿರುಪಯುಕ್ತವೂ ರಾಷ್ಟ್ರಹಿತಕ್ಕೆ ವಿಘಾತಕವೂ ಎಂದು ಅದನ್ನು ರದ್ದುಗೊಳಿಸಿತು. (೩) ರಾಜ್ಯಭಾರವನ್ನು ಸಾಗಿಸಲು ೪೧ ಸದಸ್ಯರ '**ಕೌನ್ಸಿಲ್ ಆಫ್ ಸ್ಟೇಟ್**' ಎಂಬ ಮಂಡಳವನ್ನು ನಿರ್ಮಿಸಿ **ಬ್ರ್ಯಾಡಶಾ** ಇವನನ್ನು ಅದರ ಅಧ್ಯಕ್ಷನಾಗಿ ನಿಯೋಜಿಸಿತು. (ರಂಪ್ ಪಾರ್ಲಿಮೆಂಟಿನ ಅನೇಕ ಸದಸ್ಯರು ಕೌನ್ಸಿಲ್ ಆಫ್ ಸ್ಟೇಟಿನ ಸದಸ್ಯರಾಗಿದ್ದರು.) (೪) **ಕ್ರಾಮವೆಲನನ್ನು** ಲೋಕಸತ್ತಾತ್ಮಕ ರಾಜ್ಯದ **ಮುಖ್ಯ ಸೇನಾಪತಿಯಾಗಿ** ನಿಯೋಜಿಸಿತು.

**ಐರ್ಲಂಡಿನಲ್ಲಿಯ ಬಂಡು, ೧೬೪೯-೫೨**—ಇಂಗ್ಲಂಡಿನಲ್ಲಿ ಲೋಕ ಸತ್ತಾತ್ಮಕರಾಜ್ಯವು ಸ್ಥಾಪಿಸಲ್ಪಟ್ಟ ಬಳಿಕ ಐರ್ಲಂಡಿನಲ್ಲಿಯೂ ಸ್ಕಾಟಲಂಡಿನಲ್ಲಿಯೂ ಬಂಡುಗಳು ಪ್ರಾರಂಭವಾದುವು. ಎಲಿಝಬೆಥ್ ರಾಣಿಯ ಕಾಲದಿಂದ ಐರ್ಲಂಡಿನಲ್ಲಿ ಅಸಂತೋಷವು ಇದ್ದೇ ಇದ್ದಿತು. ಇಂಗ್ಲಂಡಿನ ರಾಜರ ನೀತಿ ಐರ್ಲಂಡಿನಲ್ಲಿಯ ರೋಮನ್ ಕ್ಯಾಥಲಿಕ್ ಜನರ ವಿರುದ್ಧವಾಗಿದ್ದಿತು. ಈ ಜನರ ಭೂಮಿಗಳು ಜಪ್ತಮಾಡಲ್ಪಟ್ಟು ಪ್ರಾಟೆಸ್ಟಂಟ ಪಂಥದವರಿಗೆ ಕೊಡಲ್ಪಡುತ್ತಿದ್ದುದರಿಂದ ಈ ಅಸಂತೋಷವು ಹೆಚ್ಚು ತೀವ್ರವಾಯ್ತು. ಇಂಗ್ಲಂಡಿನಲ್ಲಿ ಲೋಕಸತ್ತಾತ್ಮಕ ರಾಜ್ಯವು ಸ್ಥಾಪಿಸಲ್ಪಟ್ಟು ಪ್ಯುರಿಟನ್ ಪಂಥದವರ ಕೈಯಲ್ಲಿ ಎಲ್ಲ ಸತ್ತೆ ಬಂದ ಬಳಿಕ ತಮ್ಮ ಮೇಲೆ ಧಾರ್ಮಿಕ ವಿಷಯದಲ್ಲಿ ಅತ್ಯಾಚಾರವಾಗಬಹುದೆಂದು ಬಗೆದು ಐರಿಶ್ ಜನರು **ಆರ್ಮಂಡ್** ಎಂಬ ಸರದಾರನ ನೇತೃತ್ವದಲ್ಲಿ ಬಂಡನ್ನು ಹೂಡಿದರು ಮತ್ತು **ರಾಜಪುತ್ರ ಚಾರ್ಲಸನು** ರಾಜನೆಂದು ಸಾರಿದರು (೧೬೪೯). ಆಗ ಕೌನ್ಸಿಲ್ ಆಫ್ ಸ್ಟೇಟ್ ಮಂಡಳವು ಕ್ರಾಮವೆಲನನ್ನು ಐರ್ಲಂಡಿನಲ್ಲಿಯ ಬಂಡನ್ನು ಮುರಿಯಲು ಕಳಿಸಿತು; ಕ್ರಾಮವೆಲನು ತನ್ನ ೧೦,೦೦೦ ಸೈನಿಕರೊಡನೆ ಅಲ್ಲಿಗೆ ಹೋಗಿ ಡ್ರಾಘೆಡಾ ಮತ್ತು ವೆಕ್ಸಫರ್ಡ ಎಂಬೆರಡು ಭದ್ರವಾದ ಕೋಟೆಗಳನ್ನು ಉಧ್ವಸ್ತಗೊಳಿಸಿದನು (೧೬೪೯). ಈ ಕೋಟೆಯ ರಕ್ಷಣಗೋಸುಗವಿದ್ದ ಸೈನಿಕರೂ ರಾಜಪುತ್ರ ಚಾರ್ಲಸನ ಕಡೆಗೆ ಒಲವಿದ್ದ ಜನರೂ ಕ್ರೂರರೀತಿಯಿಂದ ಕೊಲ್ಲಲ್ಪಟ್ಟರು. ಇದೇ ಸಮಯದಲ್ಲಿ ಸ್ಕಾಟಲಂಡಿನಲ್ಲಿಯೂ ಬಂಡು ಉಂಟಾದುದರಿಂದ ಕ್ರಾಮವೆಲನು ತಿರುಗಿ ಕರೆಯಲ್ಪಟ್ಟನು (೧೬೫೦). ಕ್ರಾಮವೆಲನು ಐರ್ಲಂಡಿನಲ್ಲಿ ಶಾಂತತೆಯನ್ನಿಡುವ ಕೆಲಸವನ್ನು ತನ್ನ ಅಳಿಯನಾದ **ಐರ್ಟನನಿಗೆ** ಒಪ್ಪಿಸಿ ತಿರುಗಿ ಬಂದನು. ಐರ್ಟನನು ತನ್ನ ಅತ್ಯುಗ್ರ ನೀತಿಯಿಂದ ಐರ್ಲಂಡಿನಲ್ಲಿಯ ಅಶಾಂತತೆಯನ್ನು ಹತ್ತಿಕ್ಕಿದನು (೧೬೫೧).

**ಸ್ಕಾಟಲಂಡಿನಲ್ಲಿಯ ಬಂಡು, ೧೬೫೦-೫೧** — ಇತ್ತ ಸ್ಕಾಟಲಂಡಿನಲ್ಲಿ ಬಂಡು ಪ್ರಾರಂಭವಾಯ್ತು. ಮೊದಲನೆಯ ಚಾರ್ಲಸನು ಶೂಲಕ್ಕೇರಿಸಲ್ಪಟ್ಟಿದ್ದು ಗೊತ್ತಾದೊಡನೆ ಸ್ಕಾಟಿಶ್ ಜನರು **ರಾಜಪುತ್ರ ಚಾರ್ಲಸನು** ರಾಜನೆಂದು ಸಾರಿ ಸ್ಕಾಟಲಂಡಿಗೆ ಅವನನ್ನು ಕರೆಕಳಿಹಿದರು. ಸ್ಕಾಟಲಂಡಿನಲ್ಲಿ ಬಂಡು ಹುಟ್ಟಿದ ಸುದ್ದಿಯನ್ನು ಕೇಳಿ ಕೌನ್ಸಿಲ್ ಆಫ್ ಸ್ಟೇಟ್ ಸಭೆ ಕ್ರಾಮವೆಲನನ್ನು ಐರ್ಲಂಡಿನಿಂದ ತಿರುಗಿ ಕರೆಯಿಸಿ ಸ್ಕಾಟಲಂಡಿಗೆ ಕಳಿಹಿತು. ಕ್ರಾಮವೆಲನು ಅಲ್ಲಿ **ಡನ್‌ಬಾರ** ಎಂಬಲ್ಲಿ **ಸರ್ ಡೆವಿಡ್ ಲೆಸ್ಲಿಯ** ನಾಯಕತ್ವದಲ್ಲಿಯ ಸೈನ್ಯವನ್ನು ಸೋಲಿಸಿದನು (೧೬೫೦). ಆದರೆ ಈ ಪರಾಭವದಿಂದ ಸ್ಕಾಟಿಶ್ ಸೈನ್ಯವು ಸಂಪೂರ್ಣವಾಗಿ ಭಂಗಿಸಲ್ಪಡಲಿಲ್ಲ. ಇದೇ ಸಮಯದಲ್ಲಿ ರಾಜಪುತ್ರ ಚಾರ್ಲಸನೂ ಸ್ಕಾಟಲಂಡಿಗೆ ಬಂದನು. ಸ್ಕಾಟಿಶ್ ಜನರು ಅವನಿಗೆ ರಾಜ್ಯಾಭಿಷೇಕವನ್ನು ಮಾಡಿದರು (೧೬೫೧). ಆ ಬಳಿಕ ಅವರು ಅವನ ನೇತೃತ್ವದಲ್ಲಿ ಇಂಗ್ಲಂಡಿನ ಮೇಲೆ ದಾಳಿ ಮಾಡಿದರು. ಆದರೆ ಕ್ರಾಮವೆಲನು **ವೂರ್ಸೆಸ್ಟರ** ಎಂಬಲ್ಲಿ ಅವರನ್ನು ಸಂಪೂರ್ಣವಾಗಿ ಸೋಲಿಸಿದನು (೧೬೫೧). ಈ ಪರಾಭವದಿಂದ ಚಾರ್ಲಸನು ನಿರಾಶನಾಗಿ ಫ್ರಾನ್ಸಿಗೆ ಓಡಿಹೋದನು. ಕ್ರಾಮವೆಲನು ಸ್ಕಾಟಲಂಡಿನಲ್ಲಿಯ ಬಂಡನ್ನು ಮುರಿದ ಬಳಿಕ ಅಲ್ಲಿ ಶಾಂತತೆಯನ್ನಿಡಲು **ಜನರಲ್ ಮಂಕ್** ಎಂಬ ಅಧಿಕಾರಿಯನ್ನು ನಿಯೋಜಿಸಿ ಇಂಗ್ಲಂಡಿಗೆ ಮರಳಿ ಬಂದನು.

**ಡಚ್ ಜನರೊಡನೆ ಯುದ್ಧವು, ೧೬೫೨-೫೪** — ಹಾಲಂಡಿನ ಅಧ್ಯಕ್ಷನಾದ ೨ನೆಯ **ವಿಲಿಯಮನು** ೧ನೆಯ ಚಾರ್ಲಸನ ಮಗಳಾದ **ಮೇರಿಯನ್ನು** ಮದುವೆಯಾಗಿದ್ದನು. ಆದುದರಿಂದ ಅವನ ಒಲವು ಸ್ಟುಅರ್ಟ ವಂಶದತ್ತ ಇದ್ದಿತು. ಅವನು ಚಾರ್ಲಸನ ಪಕ್ಷದ ಅನೇಕ ಜನರಿಗೆ ಆಶ್ರಯವಿತ್ತನು. ಇಂಗ್ಲಂಡಿನಲ್ಲಿಯ ಲೋಕಸತ್ತೆಯ ರಾಜ್ಯಕ್ಕೆ ಅವನು ಮಾನ್ಯತೆಯನ್ನು ಕೊಡಲಿಲ್ಲ. ಪೌರ್ವಾತ್ಯ ದೇಶಗಳೊಡನೆ ನಡೆಯುತ್ತಿದ್ದ ವ್ಯಾಪಾರದ ವಿಷಯದಲ್ಲಿ ಮೊದಲಿನಿಂದ ಇಂಗ್ಲಂಡ್ ಮತ್ತು ಹಾಲಂಡ್ ಈ ದೇಶಗಳಲ್ಲಿ ಸ್ಪರ್ಧೆಯಿದ್ದಿತು, ಮತ್ತು ಬೇರೆ ಬೇರೆ ದೇಶಗಳಲ್ಲಿಯ ವಸ್ತುಗಳನ್ನು ಇತ್ತಿಂದತ್ತ ಒಯ್ಯುವ ವ್ಯವಹಾರವು ಡಚ್ ವ್ಯಾಪಾರಸ್ಥರ ವಶದಲ್ಲಿದ್ದಿತ್ತು. ಆದುದರಿಂದ ಡಚ್ ಜನರ ವ್ಯಾಪಾರವನ್ನು ಮುಳುಗಿಸಿ ಇಂಗ್ಲಂಡಿನ ವ್ಯಾಪಾರಕ್ಕೆ ಉತ್ತೇಜನವನ್ನು ಕೊಡಲು ರಂಪ್ ಪಾರ್ಲಿಮೆಂಟು ೧೬೫೧ರಲ್ಲಿ **ನ್ಯಾವಿಗೇಶನ್ ಕಾಯ್ದೆಯನ್ನು** ಮಾಡಿತು. ಈ ಕಾಯ್ದೆಯಿಂದ ಇಂಗ್ಲಂಡಿನಲ್ಲಿ ಮತ್ತು ಇಂಗ್ಲಂಡಿನ ವಸಾಹತುಗಳಲ್ಲಿ ಬರುವ ಸರಕುಗಳು ಇಂಗ್ಲಿಶ್ ಹಡಗುಗಳಿಂದಾಗಲಿ ಆ ಸರಕುಗಳು ಯಾವ ರಾಷ್ಟ್ರದವಿರುವವು ಆ ರಾಷ್ಟ್ರದ ಹಡಗ

ಗಳಿಂದಾಗಲಿ ಬರಬೇಕೆಂದು ನಿರ್ಣಯವಾಯ್ತು. ಅದರಂತೆಯೆ ಇಂಗ್ಲಿಶ್ ಚ್ಯಾನಲಿನ ಮೇಲೆ ಇಂಗ್ಲಂಡಿನ ಸ್ವಾಮಿತ್ವವುಂಟೆಂಬುದನ್ನು ವ್ಯಕ್ತಗೊಳಿಸಲು ಇಂಗ್ಲಂಡಿನ ಯುದ್ಧದ ಹಡಗುಗಳಿಗೆ ಡಚ್ ಹಡಗುಗಳು ಸನ್ಮಾನದ ಸಲಾಮಿಯನ್ನು ಕೊಡಬೇಕೆಂದು ಡಚ್ ಜನರಿಗೆ ಹೇಳಲ್ಪಟ್ಟಿತು. ನ್ಯಾವಿಗೇಶನ್ ಕಾಯ್ದೆಯಿಂದ ತಮ್ಮ ವ್ಯಾಪಾರವು ಮುಳುಗುವುದೆಂದು ಡಚ್ ಜನರು ಇಂಗ್ಲಂಡಿನ ವಿರುದ್ಧವಾಗಿ ಯುದ್ಧವನ್ನು ಸಾರಿದರು (೧೬೫೨). ಈ ಯುದ್ಧವು ಎರಡು ವರ್ಷಗಳ ವರೆಗೆ ನಡೆಯಿತು (೧೬೫೨—೫೪). **ಬ್ಲೇಕ್** ಮತ್ತು **ಮಂಕ್** ಇವರು ಇಂಗ್ಲಂಡಿನ ಹಡಗುಪಡೆಯ ಸೇನಾಪತಿಗಳಾಗಿದ್ದರು (Admirals), ಮತ್ತು ಡಚ್ ಹಡಗುಪಡೆಯ ಧುರೀಣತ್ವವು **ವ್ಹಾನ್ ಟ್ರಾಂಪ್**, **ಡಿ ರೈಟರ್** ಇವರ ಕಡೆಗೆ ಇದ್ದಿತು. ಈ ಹಡಗುಪಡೆಯ ಯುದ್ಧದಲ್ಲಿ ಮೊದಲು ಟ್ರಾಂಪನಿಗೆ ಜಯವು* ದೊರೆತಿತು. ಆದರೆ ಮುಂದೆ ೧೬೫೩ರಲ್ಲಿ ಬ್ಲೇಕನು ಹಾಲಂಡಿನ ದಂಡೆಯ ಮೇಲಿನ ಪೋರ್ಟಲಂಡಿನ ಬಳಿಯಲ್ಲಿ ಡಚ್ ಹಡಗುಪಡೆಯನ್ನು ಸಂಪೂರ್ಣವಾಗಿ ಸೋಲಿಸಿದನು. ಈ ಯುದ್ಧದಲ್ಲಿ ವ್ಹಾನ್ ಟ್ರಾಂಪನು ಕೊಲ್ಲಲ್ಪಟ್ಟನು. ಡಚ್ ಜನರು ಇಂಗ್ಲಂಡಿನೊಡನೆ ಒಪ್ಪಂದವನ್ನು ಮಾಡಿಕೊಂಡರು ಮತ್ತು ಇಂಗ್ಲಂಡಿನ ನ್ಯಾವಿಗೇಶನ್ ಕಾಯ್ದೆಗೂ ಲೋಕಸತ್ತೆಯ ರಾಜ್ಯಕ್ಕೂ ಮಾನ್ಯತೆಯಿತ್ತರು (೧೬೫೪).

**ರಂಪ್ ಪಾರ್ಲಿಮೆಂಟು ವಿಸರ್ಜಿಸಲ್ಪಟ್ಟಿತು**, ೧೬೫೩—೧೬೪೯ರಲ್ಲಿ ರಂಪ್ ಪಾರ್ಲಿಮೆಂಟು ರಾಜ್ಯಕಾರಭಾರವನ್ನು ಸಾಗಿಸಲು ೪೧ ಸದಸ್ಯರದೊಂದು ಕೌನ್ಸಿಲು ಆಫ್ ಸ್ಟೇಟ ಎಂಬ ಮಂಡಳವನ್ನೂ ಬ್ರ್ಯಾಡಶಾ ಇವನನ್ನು ಅದಕ್ಕೆ ಅಧ್ಯಕ್ಷನನ್ನೂ ನಿಯೋಜಿಸಿತು. ಹೀಗಿದ್ದರೂ ಕ್ರಾಮವೆಲನು ಮುಖ್ಯ ಸೇನಾಪತಿ ಯಾಗಿದ್ದುದರಿಂದ ರಾಜ್ಯಕಾರಭಾರವೆಲ್ಲವು ಅವನ ತಂತ್ರದಿಂದ ನಡೆಯುತ್ತಿತ್ತು. ೧೬೪೯ರಿಂದ ರಂಪ್ ಪಾರ್ಲಿಮೆಂಟು ಅಸ್ತಿತ್ವದಲ್ಲಿದ್ದಿತು, ಆದರೆ ಅದನ್ನು ವಿಸ ರ್ಜಿಸಿ ಪಾರ್ಲಿಮೆಂಟಿನ ಹೊಸ ಚುನಾವಣೆಯನ್ನು ಮಾಡಬೇಕೆಂದು ಕ್ರಾಮ ವೆಲನು ಸೂಚಿಸಿದನು. ಆದರೆ ಈ ಸೂಚನೆ ರಂಪ್ ಪಾರ್ಲಿಮೆಂಟಿನ ಸದಸ್ಯರಿಗೆ ಮಾನ್ಯವಾಗಲಿಲ್ಲ. ಅವರ ಈ ಸ್ವಾರ್ಥಪರವಾದ ವರ್ತನದಿಂದ ಕೋಪಗೊಂಡು ಕ್ರಾಮವೆಲನು ೩೦೦ ಸಶಸ್ತ್ರಸೈನಿಕರೊಡನೆ ಪಾರ್ಲಿಮೆಂಟ್ ಸಭಾಗೃಹವನ್ನು

* ಈ ವಿಜಯದಿಂದ ಇಂಗ್ಲಿಶ್ ಹಡಗುಗಳು ಇಂಗ್ಲಿಶ್ ಚ್ಯಾನಲಿನಿಂದ ಹೊರದೂಡಲ್ಪಟ್ಟುವೆಂಬು ದನ್ನು ತೋರಿಸಲು ಟ್ರಾಂಪನು ತನ್ನ ಹಡಗುಗಳ ಪಟಸ್ತಂಭಗಳಿಗೆ ಕಸಬರಿಗೆಯನ್ನು ಕಟ್ಟಿದನಂತೆ!

ಹೊಕ್ಕು ಅಲ್ಲಿಯ ಸದಸ್ಯರನ್ನು ಹೊರಗಟ್ಟಿ ರಂಪ್ ಪಾರ್ಲಿಮೆಂಟು ವಿಸರ್ಜಿಸಲ್ಪಟ್ಟಿತೆಂದು ಸಾರಿದನು (೧೬೫೩).

**ಬೇರಬೋನನ ಪಾರ್ಲಿಮೆಂಟು, ೧೬೫೩**— ಇದಾದ ತರುವಾಯದಲ್ಲಿ ಕ್ರಾಮವೆಲನು ಎಲ್ಲ ಸತ್ತೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ೧೪೦ ಸದಸ್ಯರ ಮತ್ತೊಂದು ಪಾರ್ಲಿಮೆಂಟನ್ನು ಕೂಡಿಸಿದನು. ಈ ಸದಸ್ಯರು ಜನರಿಂದ ಆರಿಸಲ್ಪಟ್ಟವರಾಗಿರದೆ ಅವರು ಕ್ರಾಮವೆಲ್ ಮತ್ತು ಅವನ ಕೈಕೆಳಗಿನ ಸೈನ್ಯಾಧಿಕಾರಿಗಳಿಂದ ನಿಯೋಜಿಸಲ್ಪಟ್ಟಿದ್ದರು. **ಬೇರಬೋನ**ನೆಂಬವನು ಈ ಸದಸ್ಯರಲ್ಲಿ ಒಬ್ಬನಾಗಿದ್ದನು, ಮತ್ತು ಅವನು ಈ ಪಾರ್ಲಿಮೆಂಟಿನಲ್ಲಿ ಪ್ರಮುಖ ಭಾಗವನ್ನು ವಹಿಸಿದ್ದನು. ಆದುದರಿಂದ ಅದಕ್ಕೆ **ಬೇರಬೋನ್ನನ ಪಾರ್ಲಿಮೆಂಟು** ಎಂದು ಹೆಸರು ಬಂದಿತು. ಆದರೆ ಈ ಪಾರ್ಲಿಮೆಂಟು ಕ್ರಾಮವೆಲನಿಗೆ ಅಮಾನ್ಯವಾದ ಕೆಲವು ಸಂಗತಿಗಳನ್ನು ಮಾಡಲೆಳಸಿದುದರಿಂದ ಅವನು ಅದನ್ನು ವಿಸರ್ಜಿಸಿದನು (೧೬೫೩).

**ರಾಷ್ಟ್ರರಕ್ಷಕ** (Lord Protector) **ಕ್ರಾಮವೆಲನು**— ತರುವಾಯ ಕ್ರಾಮವೆಲನ ಸೈನ್ಯಾಧಿಕಾರಿಗಳಿಂದ ಸೂಚಿಸಲ್ಪಟ್ಟ ಹೊಸ ರಾಜ್ಯಘಟನೆ (Instrument of Government) ಸ್ವೀಕರಿಸಲ್ಪಟ್ಟಿತು. ಈ ಘಟನೆಯಂತೆ ಕಾಯ್ದೆಗಳನ್ನು ಮಾಡಲು ಇಂಗ್ಲಂಡಿನ ೪೦೦, ಸ್ಕಾಟಲಂಡಿನ ೩೦ ಮತ್ತು ಐರ್ಲಂಡಿನ ೩೦ ಹೀಗೆ ೪೬೦ ಸದಸ್ಯರ ಪಾರ್ಲಿಮೆಂಟು ನಿರ್ಮಿಸಲ್ಪಟ್ಟಿತು. ಮೂರು ವರ್ಷಗಳಿಗೊಮ್ಮೆ ಪಾರ್ಲಿಮೆಂಟಿನ ಚುನಾವಣೆಯಾಗಬೇಕೆಂದು ನಿರ್ಣಯವಾಯ್ತು. ಕ್ರಾಮವೆಲನು ಇಂಗ್ಲಂಡ್, ಸ್ಕಾಟಲಂಡ್ ಮತ್ತು ಐರ್ಲಂಡ್ ಈ ಸಂಯುಕ್ತ ರಾಷ್ಟ್ರದ **ರಾಷ್ಟ್ರರಕ್ಷಕನಾಗಿ** (Lord Protector) ಎಂದರೆ **ಮುಖ್ಯಾಧಿಕಾರಿಯಾಗಿ** ನಿಯೋಜಿಸಲ್ಪಟ್ಟನು (೧೬೫೩), ಮತ್ತು ರಾಜ್ಯಕಾರಭಾರದಲ್ಲಿ ಅವನಿಗೆ ಆಲೋಚನೆಹೇಳಲು ೨೧ ಸದಸ್ಯರದೊಂದು **ಕೌನ್ಸಿಲ್ ಆಫ್ ಸ್ಟೇಟ** ಎಂಬ ಮಂಡಳವು ಸ್ಥಾಪಿಸಲ್ಪಟ್ಟಿತು. ಹೀಗೆ ಕ್ರಾಮವೆಲನು ಇಂಗ್ಲಂಡಿನ ಲೋಕಸತ್ತಾಕ ರಾಜ್ಯದ ಮುಖ್ಯಾಧಿಕಾರಿಯಾದನು ಮತ್ತು ಎಲ್ಲ ರಾಜ್ಯಕಾರಭಾರವು ಅವನ ತಂತ್ರದಿಂದ ಸಾಗಲಾರಂಭಿಸಿತು.

**ಪಾರ್ಲಿಮೆಂಟಿನ ಧಾರ್ಮಿಕ ನೀತಿ (೧೬೪೯-೧೬೫೮)**— ರಂಪ್ ಪಾರ್ಲಿಮೆಂಟಿನಲ್ಲಿಯ ಮತ್ತು ತರುವಾಯದಲ್ಲಿ ನೆರೆದ ಇನ್ನುಳಿದ ಪಾರ್ಲಿಮೆಂಟುಗಳಲ್ಲಿಯ ಸದಸ್ಯರಲ್ಲಿ ಬಹುಜನರು ಪ್ಯುರಿಟನ್ ಪಂಥದವರಿದ್ದರು. ಅವರು ರೋಮನ್ ಕ್ಯಾಥೊಲಿಕ್ ಮತ್ತು ಎಪಿಸ್ಕೊಪೇಲಿಯನ್ ಪಂಥ

ಗಳ ಜನರ ವಿರುದ್ಧವಾಗಿ ಉಗ್ರವಾದ ಕಾಯ್ದೆಗಳನ್ನು ಮಾಡಿದರು. ಇದ ರಿಂದ ಪ್ಯುರಿಟನ್ ಪಂಥದವರಲ್ಲದ ಜನರಿಗೆ ದಂಡವೂ ಶಿಕ್ಷೆಯೂ ಆಗತೊಡಗಿ ದುವು. ಧಾರ್ಮಿಕ ವಿಷಯದಂತೆ ಸಾಮಾಜಿಕ ವಿಷಯದಲ್ಲಿಯೂ ಪ್ಯುರಿಟನ್ ಸದಸ್ಯರು ಕೈಹಾಕಲಾರಂಭಿಸಿದರು. ಎಲ್ಲರೂ ಪವಿತ್ರವಾದ ಆಚರಣೆಯುಳ್ಳವ ರಾಗಬೇಕೆಂದು ಜೂಜಾಡುವುದು, ಮದ್ಯಪಾನವನ್ನು ಮಾಡುವುದು, ನಾಟಕ ನರ್ತನಗಳಲ್ಲಿ ಮನಸ್ಸನ್ನು ಹಾಕುವುದು, ಕ್ರಿಸ್‌ಮಸ್ ಹಬ್ಬದಲ್ಲಿ ಮನೆಗಳನ್ನು ಅಲಂಕರಿಸುವುದು, ರವಿವಾರದ ದಿವಸ ಆಟವಿನೋದಗಳಲ್ಲಿ ಮತ್ತು ದುಂದುಗಾರಿಕೆ ಯಲ್ಲಿ ಕಾಲವನ್ನು ಕಳೆವುದು ಮೊದ ಲಾದ ಸಂಗತಿಗಳ ವಿರುದ್ಧವಾಗಿ ಕಾಯ್ದೆಗಳು ಮಾಡಲ್ಪಟ್ಟುವು. ಈ ಕಾಯ್ದೆಗಳನ್ನು ಮುರಿದವರು ಶಿಕ್ಷೆ ಗೆ ಗುರಿಯಾಗುತ್ತಿದ್ದರು. ಪ್ಯುರಿಟ ನ್ ಪಂಥದ ಪಾರ್ಲಿಮೆಂಟಿನ ಈ ನೀತಿಯಿಂದ ಎಲ್ಲೆಲ್ಲಿಯೂ ಔದಾ ಸೀನ್ಯವು ಹಬ್ಬಿತು.



ಕ್ರಾಮವೆಲ್.

**ಕ್ರಾಮವೆಲನ ಪರರಾಷ್ಟ್ರೀಯ ನೀತಿ (೧೬೫೩-೧೬೫೮).** ಕ್ರಾಮವೆಲನು ರಾಷ್ಟ್ರರಕ್ಷಕನಾದ ಬಳಿಕ ಇಂಗ್ಲಂಡಿನ ಸಮುದ್ರದ ಮೇ ಲಿನ ಸತ್ತೆಯನ್ನು ಮತ್ತು ಪರರಾಷ್ಟ್ರ ಗಳಲ್ಲಿಯ ವರ್ಚಸ್ಸನ್ನು ಹೆಚ್ಚಿಸಲು ಯತ್ನಿಸಿದನು. ಈ ಕಾರ್ಯದಲ್ಲಿ ಅವನಿಗೆ ಯಶಸ್ಸು ಬಂದಿತು. ಈ ಸಮಯದಲ್ಲಿ ಯುರೋಪದಲ್ಲಿ ಫ್ರಾನ್ಸ್ ಮತ್ತು ಸ್ಪೇನ ಈ ರಾಷ್ಟ್ರಗಳ ನಡುವೆ ಯುದ್ಧವು ಪ್ರಾರಂಭವಾಗಿತ್ತು . ಕ್ರಾಮವೆಲನು ಫ್ರಾನ್ಸಿನೊಡನೆ ಮಿತ್ರತ್ವವನ್ನು ಮಾಡಿ ಸ್ಪೇನದೊಡನೆ ಯುದ್ಧವನ್ನು ಸಾರಿದನು. ಇಂಗ್ಲಂಡಿನ ಸಾಹಾಯ್ಯದಿಂದ ಫ್ರಾನ್ಸು ನೆದರ್ಲಂಡಿನಲ್ಲಿಯ ಸ್ಪ್ಯಾನಿಶ್ ಜನರನ್ನು ಸೋಲಿಸಿತು. ಇಂಗ್ಲಂಡಿಗೆ ಈ ಯುದ್ಧದಲ್ಲಿ ನೆದರ್ಲಂಡಿನಲ್ಲಿಯ ಡಂಕರ್ಕ ಎಂಬ ಬಂದರವು ದೊರೆತಿತು. ಆದರಿಂದ ಮೇರಿಯ ಆಳ್ಕೆಯಲ್ಲಿ ಫ್ರಾನ್ಸಿನಲ್ಲಿಯ ಕ್ಯಾಲೇ ಬಂದರವು ಹೋದುದರಿಂದ

ಉಂಟಾದ ಹಾನಿ ಈಗ ತುಂಬಿತು. ಆ ಬಳಿಕ ಸ್ಪೇನದ ಸಮುದ್ರಮೇಲಿನ ಸತ್ತೆಯನ್ನು ನಷ್ಟಗೊಳಿಸಲು ಕ್ರಾಮವೆಲನು ಸ್ಪೇನದ ವ್ಯಾಪಾರದ ಹಡಗುಗಳ ಮೇಲೆಯೂ ವಸಾಹತುಗಳ ಮೇಲೆಯೂ ದಾಳಿಮಾಡಲು ನಿಶ್ಚಯಿಸಿದನು. ಇಂಗ್ಲಂಡಿನ ಹಡಗುಪಡೆ ಸ್ಪ್ಯಾನಿಶ್ ಅಮೇರಿಕೆಯಿಂದ ಬೆಳ್ಳಿ ಬಂಗಾರಗಳನ್ನು ಹೇರಿಕೊಂಡು ಬರುವ ಸ್ಪ್ಯಾನಿಶ್ ಹಡಗುಗಳನ್ನು ಮುತ್ತಿ ಸುಲಿದಿತು, ಮತ್ತು ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿಯ ಸ್ಪೇನದ ವಶದಲ್ಲಿದ್ದ **ಜಮೇಕಾ** ನಡುಗಡ್ಡೆಯನ್ನು ವಶಪಡಿಸಿಕೊಂಡಿತು (೧೬೫೫). ಅದರಂತೆ ಆಫ್ರಿಕೆಯ ಉತ್ತರ ತೀರದಲ್ಲಿಯ **ಬಾರ್‌ಬರೀ ಕಡಲುಗಳ್ಳರು** ಉಧ್ವಸ್ತಗೊಳಿಸಲ್ಪಟ್ಟರು. ಅದರಿಂದ ಯುರೋಪಿಯನ್ ರಾಷ್ಟ್ರಗಳ ವ್ಯಾಪಾರಕ್ಕೆ ಈ ವರೆಗೆ ಆಗುತ್ತಿದ್ದ ಕಾಟವು ತಪ್ಪಿತು. ಈ ಬಗೆಯಾಗಿ ಇಂಗ್ಲಂಡಿನ ಸಮುದ್ರದ ಮೇಲಿನ ಸತ್ತೆ ಹೆಚ್ಚಿತು, ಮತ್ತು ಪರರಾಷ್ಟ್ರಗಳಲ್ಲಿ ಇಂಗ್ಲಂಡಿನ ವರ್ಚಸ್ಸು ಬೆಳೆಯಿತು.

**ಕ್ರಾಮವೆಲನ ರಾಜ್ಯಕಾರಭಾರವು (೧೬೫೩-೫೮)**—೧೬೫೩ರಲ್ಲಿ ನಿಶ್ಚಿತವಾದ ಹೊಸ ರಾಜ್ಯಘಟನೆಯಂತೆ ಕ್ರಾಮವೆಲನು "ರಾಷ್ಟ್ರರಕ್ಷಕ"ನೆಂದು ಇಂಗ್ಲಂಡಿನ ಲೋಕಸತ್ತಾತ್ಮಕ ರಾಜ್ಯದ ಮುಖ್ಯಾಧಿಕಾರಿಯಾದನು, ಮತ್ತು ಕಾಯ್ದೆಗಳನ್ನು ಮಾಡಲು ಹೊಸ ಪಾರ್ಲಿಮೆಂಟಿನ ಚುನಾವಣೆಯಾಯಿತು. ಈ ಹೊಸ ಪಾರ್ಲಿಮೆಂಟು ೧೬೫೪ರಲ್ಲಿ ನೆರೆಯಿತು. ಆದರೆ ಈ ಪಾರ್ಲಿಮೆಂಟಿಗೂ ಕ್ರಾಮವೆಲನಿಗೂ ವಿರೋಧವು ಉಂಟಾದುದರಿಂದ ಅವನು ಅದನ್ನು ಮುರಿದನು (೧೬೫೫). ಮುಂದೆ ಒಂದುವರೆ ವರ್ಷದ ವರೆಗೆ ಅವನು ಪಾರ್ಲಿಮೆಂಟ್ ಸಭೆಯ ಚುನಾವಣೆಯನ್ನು ಮಾಡಿಸದೆ ಎಲ್ಲ ಸತ್ತೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ಅವನು ರಾಜ್ಯದಲ್ಲಿ ಬೇರೆ ಬೇರೆ ಭಾಗಗಳನ್ನು ಮಾಡಿ ರಾಜ್ಯಕಾರಭಾರವನ್ನು ಮಾಡಲು **ಮೇಜರ್ ಜನರಲರೆಂಬ ಸೈನ್ಯಾಧಿಕಾರಿಗಳನ್ನು** ನಿಯೋಜಿಸಿದನು. ರಾಜ್ಯಕಾರಭಾರದ ವೆಚ್ಚಕ್ಕೋಸುಗ ಅವನು ತನ್ನ ಸ್ವಂತದ ಅಧಿಕಾರದಿಂದ ಜನರ ಮೇಲೆ ಕರಗಳನ್ನು ಕೂಡಿಸಿದನು. ಈ ಬಗೆಯಾಗಿ ಕ್ರಾಮವೆಲನ ಅನಿಯಂತ್ರಿತವಾದ ರಾಜ್ಯಕಾರಭಾರವು ಪ್ರಾರಂಭವಾಯ್ತು. ೧ನೆಯ ಚಾರ್ಲಸನ ಆಳ್ಕೆಯಂತೆ ಕ್ರಾಮವೆಲನ ಆಳ್ಕೆಯಾದರೂ ಸ್ವೈರವೂ ಪೀಡಾಕರವೂ ಆಯ್ತು. ಇದಲ್ಲದೆ ಅವನು ಲಷ್ಕರಿ ಸತ್ತೆಯನ್ನು ಸ್ಥಾಪಿಸಿದನು. ಆದುದರಿಂದ ಅವನ ವಿರುದ್ಧವಾಗಿ ಸಂಚುಗಳೂ ಕಾರಸ್ಥಾನಗಳೂ ನಡೆದುವು. ಕ್ರಾಮವೆಲನು ಉಗ್ರೋಪಾಯಗಳಿಂದ ಅವನ್ನು ಮುರಿದನು. ಆದರೆ ಮುಂದೆ ಹೊಸ ಪಾರ್ಲಿಮೆಂಟ್ ಸಭೆಯನ್ನು ಕರೆಯಲು ಅವನು ನಿಶ್ಚಯಿಸಿದನು; ಅದರಂತೆ ೧೬೫೭ರಲ್ಲಿ ಪಾರ್ಲಿ

ಮೆಂಟಿನ ಸಭೆ ಕೂಡಿತು. ಆದರೆ ಈ ಸಭೆಯಲ್ಲಿ ಕ್ರಾಮವೆಲನ ವಿರೋಧಕರಿಗೆ ಸ್ಥಳವಿರಲಿಲ್ಲ. ಆದರೂ ಈ ಪಾರ್ಲಿಮೆಂಟು ನಮ್ರ ಸೂಚನೆಗಳ ಒಂದು ವಿನಂತಿ ಪತ್ರವನ್ನು (The Humble Petition and Advice) ಅವನೆಡೆಗೆ ಕಳಿಹಿತು. ಈ ವಿನಂತಿಪತ್ರದಲ್ಲಿ ಮುಂದೆ ಹೇಳಿದ ಸೂಚನೆಗಳಿದ್ದುವು: (೧) ಸೈನ್ಯಾಧಿಕಾರಿಗಳ ಸಾಹಾಯ್ಯದಿಂದ ರಾಜ್ಯಕಾರಭಾರವನ್ನು ಮಾಡುವುದನ್ನು ನಿಲ್ಲಿಸಬೇಕು; (೨) ಹಳೆಯ ಲಾರ್ಡ್ಸ ಸಭೆ ರದ್ದಾದುದರಿಂದ ಹೊಸದೊಂದು ಲಾರ್ಡ್ಸ ಸಭೆ ನಿಯೋಜಿಸಲ್ಪಡಬೇಕು; (೩) ಕ್ರಾಮವೆಲನು ರಾಜಪದವನ್ನು ಸ್ವೀಕರಿಸಬೇಕು; (೪) ಕ್ರಾಮವೆಲನ ಯಾವ ವಿರೋಧಿಕರಿಗೆ ಈ ಸಭೆಯಲ್ಲಿ ಸ್ಥಳವಿರಲಿಲ್ಲ ಅವರನ್ನು ಪಾರ್ಲಿಮೆಂಟಿನ ಸದಸ್ಯರಾಗಿ ಸ್ವೀಕರಿಸಬೇಕು; (೫) ಕ್ರಾಮವೆಲನು ತನ್ನ ತರುವಾಯದಲ್ಲಿ ಯಾವನು ರಾಷ್ಟ್ರರಕ್ಷಕನಾಗಬೇಕೆಂಬುದನ್ನು ನಿಶ್ಚಯಿಸಬೇಕು. ಈ ವಿನಂತಿಪತ್ರದಲ್ಲಿ ಸೂಚಿಸಲ್ಪಟ್ಟ ಕೆಲವು ಮಾತುಗಳನ್ನು ಕ್ರಾಮವೆಲನು ಮಾಡಿದನು. ರಾಜಪದವನ್ನು ಸ್ವೀಕರಿಸಿದರೆ ತನಗೆ ವಿರೋಧವಾಗುವುದೆಂದು ಬಗೆದು ಅವನು ಅದನ್ನು ಸ್ವೀಕರಿಸಲಿಲ್ಲ. ಆದರೆ 'ರಾಷ್ಟ್ರರಕ್ಷಕ'ನೆಂದು ಬಹು ವೈಭವದಿಂದ ಅವನಿಗೆ ರಾಜಸಿಂಹಾಸನದಲ್ಲಿ ಅಭಿಷೇಕವು ಮಾಡಲ್ಪಟ್ಟಿತು. ಅವನು ಆ ಪ್ರಸಂಗದಲ್ಲಿ ತನಗೆ ಅನುಕೂಲರಾಗಿದ್ದ ಕೆಲವು ಜನರಿಗೆ 'ಲಾರ್ಡ' ಪದವಿಯನ್ನು ಕೊಟ್ಟು ಹೊಸದೊಂದು ಲಾರ್ಡ್ಸ ಸಭೆಯನ್ನು ಸ್ಥಾಪಿಸಿದನು. ೧೬೫೮ರಲ್ಲಿ ಪಾರ್ಲಿಮೆಂಟಿನ ಸಭೆಯ ಅಧಿವೇಶನವು ನೆರೆಯಿತು. ಹಿಂದಿನ ವರ್ಷ ಪ್ರವೇಶವು ದೊರೆಯದಿದ್ದ ಸದಸ್ಯರಲ್ಲಿ ಅನೇಕರು ಈ ಸಭೆಗೆ ಬಂದಿದ್ದರು. ಆದರೆ ಅವರು ಕ್ರಾಮವೆಲನು ತನ್ನ ಅಧಿಕಾರದಿಂದ ನಿರ್ಮಿಸಿದ ಹೊಸ ಲಾರ್ಡ್ಸ ಸಭೆಗೆ ಮಾನ್ಯತೆಯನ್ನು ಕೊಡಲು ಒಪ್ಪಲಿಲ್ಲ. ಅದನ್ನು ಕಂಡು ಕ್ರಾಮವೆಲನು ಈ ಪಾರ್ಲಿಮೆಂಟನ್ನು ಮುಕ್ತಾಯಗೊಳಿಸಿ ಇನ್ನು ಮುಂದೆ ಪಾರ್ಲಿಮೆಂಟಿನ ಸಭೆಯನ್ನೇ ಕರೆಯಬಾರದೆಂದು ನಿಶ್ಚಯಿಸಿದನು. ಮುಂದೆ ಸ್ವಲ್ಪ ದಿನಗಳಲ್ಲಿಯೆ ಕ್ರಾಮವೆಲನು ಮಡಿದನು (೧೬೫೮, ಸಪ್ಟೆಂಬರ).

**ರಿಚರ್ಡ ಕ್ರಾಮವೆಲ್**—ಕ್ರಾಮವೆಲನು ತನ್ನ ತರುವಾಯದಲ್ಲಿ ತನ್ನ ಮಗನಾದ **ರಿಚರ್ಡನು** ರಾಷ್ಟ್ರರಕ್ಷಕನಾಗಬೇಕೆಂದು ಸೂಚಿಸಿದ್ದನು. ಅದರಂತೆ ರಿಚರ್ಡನು ರಾಷ್ಟ್ರರಕ್ಷಕನಾದನು. ಆದರೆ ರಿಚರ್ಡನು ದುರ್ಬಲನೂ ಸೋಮಾರಿಯೂ ಆಗಿದ್ದನು. ಸಾಹಸವೂ, ರಾಜ್ಯಕಾರ್ಯಕೌಶಲ್ಯವೂ ಶೌರ್ಯವೂ ಅವನಲ್ಲಿ ಇರಲಿಲ್ಲ. ಆದುದರಿಂದ ಆ ಕಾಲದ ಪರಿಸ್ಥಿತಿಯಲ್ಲಿ ರಾಜ್ಯಭಾರವನ್ನು ವಹಿಸಲು ಅವನು ಸಮರ್ಥನಾಗಿರಲಿಲ್ಲ. ಅವನಾದರೂ ತನ್ನ ಅಯೋಗ್ಯತೆಯನ್ನು

ಅರಿಯದಿರಲಿಲ್ಲ. ಆದುದರಿಂದ ೧೬೫೯ರಲ್ಲಿ ಎಪ್ರಿಲ್ ತಿಂಗಳಲ್ಲಿ ಅವನು ತನ್ನ ರಾಷ್ಟ್ರರಕ್ಷಕ ಪದವನ್ನು ತ್ಯಜಿಸಿದನು.

**ಸೈನ್ಯಾಧಿಕಾರಿಗಳು ಮತ್ತು ರಂಪ್ ಪಾರ್ಲಿಮೆಂಟ್**—ರಿಚರ್ಡನು ಅಧಿಕಾರವನ್ನು ತ್ಯಜಿಸಿದ ಬಳಿಕ ಲ್ಯಾಂಬರ್ಟ ಮತ್ತು ಫ್ಲೀಟ್‌ವುಡ್ ಎಂಬ ಸೈನ್ಯಾಧಿಕಾರಿಗಳ ಕೈಯಲ್ಲಿ ಎಲ್ಲ ಸತ್ತೆ ಹೋಯ್ತು. ಅವರು ೧೬೫೩ರಲ್ಲಿ ಕ್ರಾಮವೆಲನು ರದ್ದುಗೊಳಿಸಿದ **ರಂಪ್** ಪಾರ್ಲಿಮೆಂಟನ್ನು ಮತ್ತೆ ಕರೆದರು (೧೬೫೯). ಆದರೆ ಕೆಲದಿಗಳಲ್ಲಿಯೆ ರಂಪ್ ಪಾರ್ಲಿಮೆಂಟು ಮತ್ತು ಸೈನ್ಯಾಧಿಕಾರಿಗಳ ನಡುವೆ ಕಲಹವು ಪ್ರಾರಂಭವಾಯ್ತು. ಆದುದರಿಂದ ಸೈನ್ಯಾಧಿಕಾರಿಗಳು ಈ ರಂಪ್ ಪಾರ್ಲಿಮೆಂಟನ್ನು ವಿಸರ್ಜಿಸಿದರು.

**ಜನರಲ್ ಮಂಕ್ ಮತ್ತು ಲಾಂಗ ಪಾರ್ಲಿಮೆಂಟ್**—ರಂಪ್ ಪಾರ್ಲಿಮೆಂಟು ಮತ್ತು ಸೈನ್ಯಾಧಿಕಾರಿಗಳ ನಡುವೆ ಕಲಹವು ಪ್ರಾರಂಭವಾದುದನ್ನು ಸ್ಕಾಟಲಂಡಿನ ರಾಜ್ಯಕಾರಭಾರವನ್ನು ಮಾಡುತ್ತಿದ್ದ **ಜನರಲ್ ಮಂಕನೆಂಬ** ಅಧಿಕಾರಿ ಸೂಕ್ಷ್ಮವಾಗಿ ನೋಡುತ್ತಿದ್ದನು. ಇಂಗ್ಲಂಡಿನಲ್ಲಿ ಮತ್ತೆ ರಾಜಸತ್ತೆ ಸ್ಥಾಪಿತವಾದ ಹೊರತು ಅಲ್ಲಿಯ ಅರಾಜಕತೆ ನಷ್ಟವಾಗದೆಂದು ಅವನಿಗೆ ತೋರಿತು. ಅವನು ತನ್ನ ಸೈನ್ಯದೊಡನೆ ಲಂಡನಿನ ಕಡೆಗೆ ಹೊರಟನು. ಅವನನ್ನು ತಡೆಯಲು ಲ್ಯಾಂಬರ್ಟನು ಯತ್ನಿಸಿದನು, ಆದರೆ ಅವನಿಗೆ ಯಶವು ದೊರೆಯಲಿಲ್ಲ. ಜನರಲ್ ಮಂಕನು ಲಂಡನಿಗೆ ಬಂದ ಬಳಿಕ **ಲಾಂಗ ಪಾರ್ಲಿಮೆಂಟನ್ನು** ಕರೆದನು. ೧೬೪೦ರಲ್ಲಿ ಚುನಾಯಿಸಲ್ಪಟ್ಟ ಲಾಂಗ ಪಾರ್ಲಿಮೆಂಟಿನ ಸದಸ್ಯರಲ್ಲಿ ಬದುಕಿದ್ದವರೆಲ್ಲರು ಆಮಂತ್ರಿಸಲ್ಪಟ್ಟರು. ಈ ಲಾಂಗ ಪಾರ್ಲಿಮೆಂಟು ರಾಷ್ಟ್ರದ ಪರಿಸ್ಥಿತಿಯನ್ನು ಆಲೋಚಿಸಲು ಮತ್ತೆ ಚುನಾವಣೆಯನ್ನು ಮಾಡಿಸಿ ಪಾರ್ಲಿಮೆಂಟ ಸಭೆಯನ್ನು ಕೂಡಿಸುವುದು ಅವಶ್ಯವೆಂದು ಬಗೆದು ತನ್ನನ್ನು ಮುಕ್ತಾಯಗೊಳಿಸಿಕೊಂಡಿತು (೧೬೬೦, ಮಾರ್ಚ್). ಮುಂದೆ ಸ್ವಲ್ಪ ಕಾಲದಲ್ಲಿಯೇ ಚುನಾವಣೆಯಾಗಿ ೧೬೬೦ರ ಎಪ್ರಿಲ್ ತಿಂಗಳಲ್ಲಿ ಹೊಸ ಪಾರ್ಲಿಮೆಂಟು ಕೂಡಿತು. ಇಂಗ್ಲಂಡಿನಲ್ಲಿ ಆಗ ರಾಜನಿರಲಿಲ್ಲವಾದುದರಿಂದ ಹೊಸ ಚುನಾವಣೆಯಾಗಬೇಕೆಂದು ರಾಜನ ಆಜ್ಞಾಪತ್ರವಿರಲಿಲ್ಲ; ಆದರೂ ಪೂರ್ವಪರಂಪರೆಯನ್ನನುಸರಿಸಿ ಈ ಹೊಸ ಪಾರ್ಲಿಮೆಂಟ್ ಸಭೆಯು ಚುನಾವಣೆ ಮಾಡಲ್ಪಟ್ಟುದರಿಂದ ಈ ಪಾರ್ಲಿಮೆಂಟಿಗೆ **ಕನ್ವೆನ್ಶನ್ ಪಾರ್ಲಿಮೆಂಟ್** ಎಂದು ಹೆಸರು ಬಂದಿತು. ಈ ಪಾರ್ಲಿಮೆಂಟು ಎಲ್ಲ ಪರಿಸ್ಥಿತಿಯನ್ನು ಆಲೋಚಿಸಿ ಇಂಗ್ಲಂಡಿನಲ್ಲಿ ಮತ್ತೆ ರಾಜಸತ್ತೆ ಸ್ಥಾಪಿಸಲ್ಪಡುವುದವಶ್ಯವೆಂದು ನಿರ್ಣಯಿಸಿತು. ರಾಜಪುತ್ರ **ಚಾರ್ಲಸನು**

ಈ ಸಮಯದಲ್ಲಿ ಹಾಲಂಡಿನಲ್ಲಿದ್ದನು, ಮತ್ತು ೧ನೆಯ ಚಾರ್ಲಸನು ಶೂಲಕ್ಕೇರಿಸಲ್ಪಟ್ಟ ಬಳಿಕ ಇಂಗ್ಲಂಡನ್ನು ಬಿಟ್ಟುಹೋಗಿದ್ದ ಎಡವರ್ಡ ಹಾಯಿಡ್ (ಕ್ಲ್ಯಾರೆಂಡನ್) ಎಂಬವನು ಆತನ ಆಪ್ತಾಲೋಚಕನಾಗಿದ್ದನು. ಜನರಲ್ ಮಂಕನ ಸೂಚನೆಯಂತೆ, "ಕಳೆದ ಹನ್ನೊಂದು ವರ್ಷಗಳಲ್ಲಿ ನಡೆದ ಸಂಗತಿಗಳಿಗಾಗಿ ನಿಮ್ಮೆಲ್ಲರನ್ನು ನಾನು ಕ್ಷಮಿಸಿರುವೆನು" ಎಂದು ರಾಜಪುತ್ರ ಚಾರ್ಲಸನು ಬ್ರೇಡಾ ಎಂಬಲ್ಲಿ ಪ್ರಕಟನೆಯನ್ನು ಪ್ರಸಿದ್ಧಿಸಿದನು. ರಾಜಪುತ್ರ ಚಾರ್ಲಸನು ಈ ಅಭಿವಚನವನ್ನು ಕೊಟ್ಟ ಬಳಿಕ ಕನ್ವೆನ್ಶನ್ ಪಾರ್ಲಿಮೆಂಟು ಇಂಗ್ಲಂಡಿನ ರಾಜಪದವನ್ನು ಸ್ವೀಕರಿಸಲು ಅವನಿಗೆ ನಿಮಂತ್ರಣವನ್ನು ಕಳಿಸಿತು. ಚಾರ್ಲಸನು ೧೬೬೦ನೆಯ ಇಸ್ವಿಯ ಮೇ ತಿಂಗಳ ೨೯ನೆಯ ತಾರೀಖಿನ ದಿವಸ ಲಂಡನ ನಗರವನ್ನು ಪ್ರವೇಶಿಸಿದನು. ಇಂಗ್ಲಂಡಿನಲ್ಲಿ ಮತ್ತೆ ರಾಜಸತ್ತೆ ಸ್ಥಾಪಿಸಲ್ಪಟ್ಟಿತು.

---

## ಸಾರಾಂಶವು

ರಂಪ್ ಪಾರ್ಲಿಮೆಂಟ್ ಮತ್ತು ಸೇನಾಪತಿ ಕ್ರಾಮವೆಲನು (೧೬೪೯-೧೬೫೩)—ಲಾಂಗ ಪಾರ್ಲಿಮೆಂಟಿನ ಅವಶೇಷವಾದ ರಂಪ್ ಪಾರ್ಲಿಮೆಂಟಿನ ಕೈಯಲ್ಲಿ ಸತ್ತೆ. ಲೋಕಸತ್ತಾಕ ರಾಜ್ಯವು. ಲಾರ್ಡ್ಸ ಸಭೆ ಮುರಿಯಲ್ಪಟ್ಟಿತು. ರಾಜ್ಯಕಾರಭಾರವನ್ನು ಸಾಗಿಸಲು ಕೌನ್ಸಿಲು ಆಫ್ ಸ್ಟೇಟ್ ಎಂಬ ಮಂಡಳವು ಮತ್ತು ಬ್ರ್ಯಾಡಶಾ ಇವನು ಅದರ ಅಧ್ಯಕ್ಷನು. ಮುಖ್ಯ ಸೇನಾಪತಿ ಕ್ರಾಮವೆಲನು. ರಾಜ್ಯಕಾರಭಾರವು ಅವನ ತಂತ್ರದಂತೆ.

ಐರ್ಲಂಡಿನಲ್ಲಿ ಬಂಡು, ೧೬೪೯— ಐರಿಶ್ ರೋಮನ್ ಕ್ಯಾಥಲಿಕರ ಮೇಲೆ ಧಾರ್ಮಿಕ ವಿಷಯದಲ್ಲಿ ಅತ್ಯಾಚಾರವು. ಅವರ ಭೂಮಿಗಳನ್ನು ಜಪ್ತು ಮಾಡುವ ನೀತಿ; ಅದರಿಂದ ಅಸಂತೋಷವು ಮತ್ತು ಬಂಡು. ಅವರ ಡ್ರಾಘೆಡಾ ಮತ್ತು ವೆಕ್ಸಫರ್ಡ ಎಂಬ ಕೋಟೆಗಳನ್ನು ಕ್ರಾಮವೆಲನು ಉಧ್ವಸ್ತಗೊಳಿಸಿದನು. ಬಂಡು ಮುರಿಯಲ್ಪಟ್ಟಿತು.

ಸ್ಕಾಟಲಂಡಿನಲ್ಲಿ ಬಂಡು (೧೬೫೦-೫೧)—ರಾಜಪುತ್ರ ಚಾರ್ಲಸನು ರಾಜನೆಂದು ಸ್ಕಾಟಿಶ್ ಜನರು ಸಾರಿದರು, ಮತ್ತು ಬಂಡನ್ನು ಹೂಡಿದರು. ಕ್ರಾಮವೆಲನು ಡನ್‌ಬಾರ್ ಎಂಬಲ್ಲಿ ಸ್ಕಾಟಿಶ್ ಸೈನ್ಯವನ್ನು ಸೋಲಿಸಿದನು. ಚಾರ್ಲಸನಿಗೆ ರಾಜ್ಯಾಭಿಷೇಕವು, ಮತ್ತೆ ಬಂಡು. ವೂರ್ಸೆಸ್ಟರ್ ಎಂಬಲ್ಲಿ ಸ್ಕಾಟಿಶ್ ಸೈನ್ಯವು ಕ್ರಾಮವೆಲನಿಂದ ಸೋಲಿಸಲ್ಪಟ್ಟಿತು (೧೬೫೧). ಸ್ಕಾಟಲಂಡದಲ್ಲಿ ಶಾಂತತೆಯನ್ನಿಡಲು ಜನರಲ್ ಮಂಕನ ನಿಯೋಜನೆ.

**ಹಾಲಂಡಿನೊಡನೆ ಯುದ್ಧವು (೧೬೫೨–೫೪)**—ಇಂಗ್ಲಂಡಿನ ಲೋಕಸತ್ತಾತ್ಮಕ ರಾಜ್ಯಕ್ಕೆ ಹಾಲಂಡು ಮಾನ್ಯತೆಯನ್ನು ಕೊಡಲಿಲ್ಲ ಮತ್ತು ರಾಜಪಕ್ಷದ ಜನರಿಗೆ ಆಶ್ರಯವನ್ನಿತ್ತಿತು. ವ್ಯಾಪಾರ ವಿಷಯಕವಾದ ಸ್ಪರ್ಧೆ. ಡಚ್ ಜನರ ವಿರುದ್ಧವಾಗಿ ನ್ಯಾವಿಗೇಶನ್ ಕಾಯದೆ. ಯುದ್ಧವು. ಇಂಗ್ಲಂಡಿನ ಬ್ಲೇಕ್, ಮಂಕ್ ಮತ್ತು ಹಾಲಂಡಿನ ವ್ಯಾನ್‌ಟ್ರಾಂಪ ಮತ್ತು ಡಿ ರೈಟರ್ ಇವರು ಹಡಗು ಪಡೆಯ ನಾಯಕರು. ಡಚ್‌ಜನರ ಪರಾಭವವು. ಇಂಗ್ಲಂಡಿನ ಲೋಕಸತ್ತಾತ್ಮಕ ರಾಜ್ಯಕ್ಕೂ ನ್ಯಾವಿಗೇಶನ್ ಕಾಯ್ದೆಗೂ ಡಚ್ ಜನರ ಮಾನ್ಯತೆ.

**ರಾಷ್ಟ್ರರಕ್ಷಕ ಕ್ರಾಮವೆಲನು (೧೬೫೩–೫೮)**—ಕ್ರಾಮವೆಲನು ರಂಪ್ ಪಾರ್ಲಿಮೆಂಟನ್ನು ಮುಕ್ತಾಯಗೊಳಿಸಿದನು (೧೬೫೩). ಹೊಸ ರಾಜ್ಯಘಟನೆ. ಕ್ರಾಮವೆಲನು ರಾಷ್ಟ್ರರಕ್ಷಕನು, ರಾಜ್ಯಕಾರಭಾರದಲ್ಲಿ ಅವನಿಗೆ ಆಲೋಚನೆ ಹೇಳಲು ಇಪ್ಪತ್ತೊಂದು ಸದಸ್ಯರ ಕೌನ್ಸಿಲ್ ಆಫ್ ಸ್ಟೇಟ. ಕಾಯದೆಗಳನ್ನು ಮಾಡಲು ಇಂಗ್ಲಂಡಿನ ೪೦೦, ಸ್ಕಾಟಲಂಡಿನ ೩೦, ಐರ್ಲಂಡಿನ ೩೦, ಹೀಗೆ ೪೬೦ ಸದಸ್ಯರ ಪಾರ್ಲಿಮೆಂಟು.

**ಪ್ಯೂರಿಟನ್ ಪಾರ್ಲಿಮೆಂಟಿನ ಧಾರ್ಮಿಕ ಮತ್ತು ಸಾಮಾಜಿಕ ನೀತಿ (೧೬೪೯–೧೬೬೦)**—ರಂಪ್ ಪಾರ್ಲಿಮೆಂಟಿನಲ್ಲಿ ಮತ್ತು ಆ ತರುವಾಯದ ಪಾರ್ಲಿಮೆಂಟುಗಳಲ್ಲಿ ಪ್ಯೂರಿಟನ್ ಜನರ ಆಧಿಕ್ಯವು. ಪ್ಯೂರಿಟನ್ ಅಲ್ಲದವರ ವಿರುದ್ಧವಾಗಿ ಕಾಯದೆಗಳು. ಅವರಿಗೆ ದಂಡ ಮತ್ತು ಶಿಕ್ಷೆ. ಆಟ, ನೃತ್ಯ ಮೊದಲಾದ ಮನೋರಂಜನೆಯ ಸಾಧನಗಳು ನಿಲ್ಲಿಸಲ್ಪಟ್ಟವು. ಎಲ್ಲರೂ ಸರಳವೃತ್ತಿಯವರಾಗಿರಬೇಕೆಂದು ಆಗ್ರಹವು. ಆದರಿಂದ ಎಲ್ಲೆಲ್ಲಿಯೂ ಔದಾಸೀನ್ಯವು.



**ಕ್ರಾಮವೆಲನ ಪರರಾಷ್ಟ್ರೀಯ ನೀತಿ (೧೬೫೩–೫೮)**—(೧) ಡಚ್ ಜನರೊಡನೆ ಒಪ್ಪಂದವು. ಇಂಗ್ಲಂಡಿನ ಲೋಕಸತ್ತಾತ್ಮಕರಾಜ್ಯಕ್ಕೆ ಅವರಿಂದ ಮಾನ್ಯತೆ. (೨) ಫ್ರಾನ್ಸ್ ಮತ್ತು ಸ್ಪೇನ ಈ ರಾಷ್ಟ್ರಗಳ ನಡುವೆ ಯುದ್ಧವು, ಮತ್ತು ಫ್ರಾನ್ಸಿನೊಡನೆ ಸಖ್ಯವು, ಸ್ಪೇನದೊಡನೆ ವೈರವು, ಇದು ಇಂಗ್ಲಂಡಿನ ನೀತಿ. ನೆದರ್ಲಂಡಿನಲ್ಲಿ ಫ್ರಾನ್ಸಿನಿಂದ ಸ್ಪೇನದ ಪರಾಭವವು. ಇಂಗ್ಲಂಡಿಗೆ ಡಂಕರ್ಕ ಬಂದರದ ಪ್ರಾಪ್ತಿ. (೩) ಸ್ಪೇನದ ವಸಾಹತುಗಳ ಮೇಲೆ ಮತ್ತು ಬೆಳ್ಳಿಬಂಗಾರಗಳನ್ನು ತುಂಬಿಕೊಂಡು ಬರುವ ಹಡಗುಗಳ ಮೇಲೆ ದಾಳಿ. ಸ್ಪೇನದ ಜಮೇಕಾ ಬಂದರವು ಇಂಗ್ಲಂಡಿನ ವಶವಾಯ್ತು (೧೬೫೫). (೪) ಬಾರ್ಬರಿ ಕಡಲುಗಳ್ಳರ ಬಲವು ಮುರಿಯಲ್ಪಟ್ಟಿದು. ಆದರಿಂದ ಇಂಗ್ಲಂಡಿನ ಮತ್ತು ಇತರ ಯುರೋಪಿಯನ್ ರಾಷ್ಟ್ರಗಳ ವ್ಯಾಪಾರಕ್ಕೆ ಈ ವರೆಗೆ ಆಗುತ್ತಿದ್ದ ತೊಂದರೆ ತಪ್ಪಿತು. ಇಂಗ್ಲಂಡಿನ ಸಮುದ್ರಸತ್ತೆ ಸ್ಥಾಪಿಸಲ್ಪಟ್ಟಿತು ಮತ್ತು ಎಲ್ಲೆಲ್ಲಿಯೂ ಇಂಗ್ಲಿಶರ ವರ್ಚಸ್ಸು ಹಬ್ಬಿತು.

ಸ್ಪೇನದೊಡನೆ ಯುದ್ಧವು (೧೬೫೫—೫೮)—ಸಮುದ್ರದ ಮೇಲೆ ಸ್ಪೇನದ ಪರಾಭವವು. ಜಮೇಕಾನಡುಗಡ್ಡೆ ಇಂಗ್ಲಿಶರ ವಶದಲ್ಲಿ ಬಂದಿತು.

ಕ್ರಾಮವೆಲನ ಅಂತಃಸ್ಥ ನೀತಿ (೧೬೫೩—೫೮)—(೧) ಕ್ರಾಮವೆಲ್ ಮತ್ತು ಅವನ ಮೊದಲನೆಯ ಪಾರ್ಲಿಮೆಂಟು ಇವರ ನಡುವೆ ವಿರೋಧವಾದುದರಿಂದ ಪಾರ್ಲಿಮೆಂಟಿನ ಮುಕ್ತಾಯವಾಯಿತು (೧೬೫೫). (೨) ಕ್ರಾಮವೆಲನ ಅನಿಯಂತ್ರಿತ ಕಾರಭಾರವು (೧೬೫೫—೫೬); ಲಷ್ಕರಿ ಅಧಿಕಾರಿಗಳ ಸಾಹಾಯ್ಯದಿಂದ ರಾಜ್ಯಕಾರಭಾರವನ್ನು ಸಾಗಿಸಿದುದು. ತನ್ನ ಅಧಿಕಾರದಿಂದಲೆ ಕರಗಳನ್ನು ಕೂಡಿಸಿದುದು. ಕ್ರಾಮವೆಲನ ವಿರುದ್ಧವಾಗಿ ಸಂಚುಗಳು. (೩) ಕ್ರಾಮವೆಲನ ಎರಡನೆಯ ಪಾರ್ಲಿಮೆಂಟು (೧೬೫೬—೫೭). ಕ್ರಾಮವೆಲನಿಗೆ ವಿರುದ್ಧರಾದ ಸದಸ್ಯರಿಗೆ ಈ ಪಾರ್ಲಿಮೆಂಟದಲ್ಲಿ ಸ್ಥಳವಿರಲಿಲ್ಲ. ಈ ಪಾರ್ಲಿಮೆಂಟು ನಮ್ರಸೂಚನೆಗಳ ವಿನಂತಿಪತ್ರವನ್ನು ಕ್ರಾಮವೆಲನೆಡೆಗೆ ಕಳಿಸಿದುದು. ಈ ಸೂಚನೆಗಳಂತೆ ಹೊಸ ಲಾರ್ಡ್ಸ ಸಭೆ. ಆ ಪಾರ್ಲಿಮೆಂಟಿನಲ್ಲಿ ಕ್ರಾಮವೆಲನಿಗೆ ವಿರುದ್ಧರಾದ ಸದಸ್ಯರ ವಿರೋಧವು. ಪಾರ್ಲಿಮೆಂಟಿನ ಮುಕ್ತಾಯವು. ಎಲ್ಲ ಸತ್ತೆ ಕ್ರಾಮವೆಲನ ಕೈಯಲ್ಲಿ. ಕ್ರಾಮವೆಲನ ಮೃತ್ಯು (೧೬೫೮).

ರಾಷ್ಟ್ರರಕ್ಷಕ ರಿಚರ್ಡ ಕ್ರಾಮವೆಲನು (೧೬೫೮—೫೯)—ರಾಜ್ಯಕಾರಭಾರದ ಕೆಲಸವನ್ನು ಸಾಗಿಸಲು ಅಸಮರ್ಥನು. ಅವನ ಅಧಿಕಾರ ತ್ಯಾಗವು (೧೬೫೯). ಎಲ್ಲ ಸತ್ತೆ ಸೈನ್ಯಾಧಿಕಾರಿಗಳ ಕೈಯಲ್ಲಿ ಬಂದಿತು.

ಲಾಂಗ ಪಾರ್ಲಿಮೆಂಟು ಮತ್ತು ಜನರಲ್ ಮಂಕನು—ಲ್ಯಾಂಬರ್ಟನು ರಂಪ್ ಪಾರ್ಲಿಮೆಂಟನ್ನು ಕರೆಯಿಸಿದನು. ಅವನಿಗೆ ಆ ಪಾರ್ಲಿಮೆಂಟಿನ ವಿರೋಧವು. ಆದರಿಂದ ಪಾರ್ಲಿಮೆಂಟು ವಿಸರ್ಜಿಸಲ್ಪಟ್ಟಿತು. ಎಲ್ಲ ಸತ್ತೆ ಅವನ ಕೈಯಲ್ಲಿ. ಇಂಗ್ಲಂಡಿನಲ್ಲಿಯ ಅರಾಜಕತೆಯನ್ನು ಕಂಡು ಸ್ಕಾಟಲಂಡಿನಲ್ಲಿಯ ಅಧಿಕಾರಿಯಾದ ಜನರಲ್ ಮಂಕನು ಲಂಡನಿಗೆ ಸೈನ್ಯದೊಡನೆ ಹೋಗಿ ಅಲ್ಲಿ ಲಾಂಗ ಪಾರ್ಲಿಮೆಂಟಿನ ಅಧಿವೇಶನವನ್ನು ಕರೆಯಿಸಿದನು. ಪರಿಸ್ಥಿತಿಯನ್ನು ಆಲೋಚಿಸಲು ಕನ್ವೆನ್ಶನ್ ಪಾರ್ಲಿಮೆಂಟು ನೆರೆಯಿತು ಮತ್ತು ರಾಜಪುತ್ರ ಚಾರ್ಲಸನಿಗೆ ಇಂಗ್ಲಂಡಿನ ರಾಜನಾಗಲು ಆಮಂತ್ರಣವನ್ನು ಕಳಿಸಿತು.

# ೧೧ನೆಯ ಪ್ರಕರಣವು

## ೨ನೆಯ ಚಾರ್ಲ್ಸನು

ಜನ್ಮವು ೧೬೩೦; ರಾಜ್ಯಾರೋಹಣವು (೩೦ನೆಯ ವರ್ಷದಲ್ಲಿ) ೧೬೬೦;

ಮೃತ್ಯು ೧೬೮೫

(೧೬೬೦—೧೬೮೫).

### ತತ್ಕಾಲೀನ ರಾಜ್ಯಕರ್ತರು.

| ಫ್ರಾನ್ಸ | ಸ್ಪೇನ |
|---|---|
| ೧೪ನೆಯ ಲುಯಿ (೧೬೪೩—೧೭೧೫) | ೪ನೆಯ ಫಿಲಿಪ್ (೧೬೨೧—೧೬೬೫) |
| | ೨ನೆಯ ಚಾರ್ಲ್ಸ (೧೬೬೫—೧೭೦೦) |

### ಮಹತ್ವದ ಇಸ್ವಿಗಳು.

೧೬೬೦—೬೫ ಪ್ಯುರಿಟನ್ ಮತ್ತು ರೋಮನ್ ಕ್ಯಾಥಲಿಕ್ ಪಂಥದವರ ವಿರುದ್ಧವಾಗಿ ಕಾಯದೆಗಳು.

೧೬೬೫—೬೭ ಡಚ್ ಜನರೊಡನೆ ಎರಡನೆಯ ಯುದ್ಧವು.

೧೬೬೭ ಬ್ರೇಡಾ ಎಂಬಲ್ಲಿ ಡಚ್ ಜನರೊಡನೆ ಒಪ್ಪಂದವು.

೧೬೭೦ ಫ್ರಾನ್ಸಿನೊಡನೆ ಡೋವರ್ ಎಂಬಲ್ಲಿ ಗುಪ್ತ ಒಪ್ಪಂದವು.

೧೬೭೨ "ಡಿಕ್ಲರೇಶನ್ ಆಫ್ ಇಂಡಲ್ಜನ್ಸ್" ಎಂಬ ಆಜ್ಞಾಪತ್ರ.

೧೬೭೩ "ಟೆಸ್ಟ ಅಕ್ಟ" ಕಾಯದೆ.

೧೬೭೭ ಜೇಮ್ಸನ ಮಗಳಾದ ಮೇರಿಯು ಲಗ್ನವು ಆರೇಂಜದ ರಾಜಪುತ್ರ ವಿಲಿಯಮನೊಡನೆ.

೨ನೆಯ ಚಾರ್ಲ್ಸನು— ಇಂಗ್ಲಂಡಿನಲ್ಲಿ ಕಳೆದ ೧೧ ವರ್ಷಗಳಲ್ಲಿ ಲೋಕಸತ್ತಾತ್ಮಕ ರಾಜ್ಯವನ್ನು ಸ್ಥಾಪಿಸಲು ಪ್ರಯತ್ನವಾಯಿತು; ಆದರೆ ಈ ಪ್ರಯತ್ನವು ಯಶಸ್ವಿಯಾಗದೆ ಅನಿಯಂತ್ರಿತವೂ ಸ್ವೈರವೂ ಆದ ಲಷ್ಕರಿ ಸತ್ತೆಯ ಪ್ರಭಾವವು ಬೆಳೆಯಿತು. ಆದುದರಿಂದ ೧೬೬೦ರಲ್ಲಿ ಕನ್ವೆನ್ಶನ್ ಪಾರ್ಲಿಮೆಂಟು ನೆರೆದು ಅದರಲ್ಲಿ ಇಂಗ್ಲಂಡಿನಲ್ಲಿಯ ಅರಾಜಕತೆ ಇಲ್ಲದಂತಾಗಲು ಮತ್ತೆ ರಾಜಸತ್ತೆ ಸ್ಥಾಪಿಸಲ್ಪಡುವುದು ಅವಶ್ಯವೆಂದು ನಿರ್ಣಯಿಸಲ್ಪಟ್ಟು ರಾಜಪುತ್ರ ಚಾರ್ಲ್ಸ

ನಿಗೆ ಇಂಗ್ಲಂಡಿನ ಪಟ್ಟವನ್ನು ಧರಿಸಲು ನಿಮಂತ್ರಣವು ಕಳಿಸಲ್ಪಟ್ಟಿತು. ಕಳೆದ ೧೧ ವರ್ಷಗಳಲ್ಲಿ ಚಾರ್ಲಸನು ದೇಶತ್ಯಾಗವನ್ನು ಮಾಡಿ ಪರದೇಶಗಳಲ್ಲಿ ಕಾಲವನ್ನು ಕಳೆಯಬೇಕಾದುದರಿಂದ ಪಾರ್ಲಿಮೆಂಟಿನ ಈ ನಿಮಂತ್ರಣವನ್ನು ಆನಂದದಿಂದ ಸ್ವೀಕರಿಸಿದನು. ಹಿಂದಾದ ಎಲ್ಲ ಸಂಗತಿಗಳನ್ನು ಮರೆವೆನೆಂದು ಅವನು ಅಭಿವಚನವನ್ನಿತ್ತುದರಿಂದ ಇಂಗ್ಲಿಶ್ ಜನತೆಯಾದರೂ ಅವನಿಗೆ ಸತ್ಕಾರಪೂರ್ವಕವಾದ ಸ್ವಾಗತವನ್ನಿತ್ತಿತು. ಹೀಗೆ ೧೬೬೦ರಲ್ಲಿ ಮೇ ೨೯ನೆಯ ತಾರೀಖಿನ ದಿವಸ ಚಾರ್ಲಸನು ತನ್ನ ವಂಶಪರಂಪರಾಗತವಾದ ಇಂಗ್ಲಂಡಿನ ಪಟ್ಟವನ್ನು ಧರಿಸಿದನು.



೨ನೆಯ ಚಾರ್ಲಸನು.

ಚಾರ್ಲಸನು ಈಗ ೩೦ ವರ್ಷದವನಿದ್ದನು. ಈ ಮೊದಲು ಅವನು ಯುರೋಪದಲ್ಲಿ ಅನೇಕ ವರ್ಷಗಳನ್ನು ಕಳೆದಿದ್ದನು. ಈ ಅವಧಿಯಲ್ಲಿ ಫ್ರಾನ್ಸಿನಲ್ಲಿಯ ವಿಲಾಸಪೂರ್ಣವಾದ ಆಚರಣದ ಪರಿಣಾಮವು ಅವನ ಮನಸ್ಸಿನ ಮೇಲೆ ಆಗಿತ್ತು. ಸ್ವಾರ್ಥವನ್ನು ಸಾಧಿಸಲು ಎಂತಹ ಕೃತಿಯನ್ನಾದರೂ ಮಾಡಲು ಅವನಿಗೆ ಸ್ವಲ್ಪವೂ ಹೇಸಿಕೆಯಾಗುತ್ತಿರಲಿಲ್ಲ. ಆದರೂ ಇನ್ನು ಮುಂದೆ ದೇಶತ್ಯಾಗದ ಪ್ರಸಂಗವು ತನಗೆ ಬರಬಾರದೆಂದು ಬಹಳ ಎಚ್ಚರಿಕೆಯಿಂದ ಇರಲು ಅವನು ನಿಶ್ಚಯಿಸಿದನು. ಚಾರ್ಲಸನು ಸುಂದರನಾಗಿರಲಿಲ್ಲ. ಆದರೆ ಅವನ ಸ್ವಭಾವವು ಮತ್ತು ನಡೆವಳಿ ಆಕರ್ಷಕವಾಗಿದ್ದುವು. ಆದುದರಿಂದ ಅವನು ತನ್ನ ಸವಿಮಾತುಗಳಿಂದ ಎರಡನೆಯವರ ಮೇಲೆ ವರ್ಚಸ್ಸನ್ನು ಕೂಡಿಸುತ್ತಿದ್ದನು. ಗಾಳಿ ಬೀಸಿದತ್ತ ತಿರುಗುವ ನೀತಿಯನ್ನು ಸ್ವೀಕರಿಸಿದನಾದುದರಿಂದ ಬೇಕಾದಾಗ ಬೇಕಾದ ಕರಾರುಗಳನ್ನು ಮಾಡಿ ಅವುಗಳನ್ನು ಮುರಿಯಲಾದರೂ ಅವನು ಹಿಂಜರಿಯುತ್ತಿರಲಿಲ್ಲ. ಪಟ್ಟಕ್ಕೆ ಬಂದು ೨ ವರ್ಷಗಳಾದ ಬಳಿಕ ಚಾರ್ಲಸನು ಪೋರ್ತುಗಾಲದ ರಾಜಕನ್ಯೆ ಕ್ಯಾಥರಿನ್ ಆಫ್ ಬ್ರೆಗ್ಯಾಂಝಾ ಇವಳನ್ನು ಲಗ್ನವಾದನು (೧೬೬೨).

ಈ ಲಗ್ನದಿಂದ ಅವನಿಗೆ ಮುಂಬಯಿ ನಡುಗಡ್ಡೆಯೂ ಆಫ್ರಿಕೆಯ ಉತ್ತರ ತೀರದಲ್ಲಿಯ ಟ್ಯಾಂಜಿಯರವೂ ಬಹಳ ಹಣವೂ ವರದಕ್ಷಿಣೆಯಾಗಿ ದೊರೆತುವು. ಚಾರ್ಲಸನು ಹಾಲಂಡಿನಲ್ಲಿರುವಾಗ ಎಡ್ವರ್ಡ ಹಾಯಿಡ್ ಎಂಬವನು ಅವನ ಆಪ್ತಾಲೋಚಕ ನಾಗಿ ಇರುತ್ತಿದ್ದನು. ಅವನು ಮತ್ತು ಇಂಗ್ಲಂಡಿನಲ್ಲಿಯ ಸೈನ್ಯಾಧಿಕಾರಿ ಮಂಕನು ಚಾರ್ಲಸನಿಗೆ ಪಟ್ಟವನ್ನು ದೊರೆಕಿಸಿಕೊಡಲು ಬಹಳವಾಗಿ ಪ್ರಯತ್ನಿಸಿದ್ದರಾದುದ ರಿಂದ ಚಾರ್ಲಸನು ಎಡ್ವರ್ಡ ಹಾಯಿಡನನ್ನು ಕ್ಲರೆಂಡನದ ಡ್ಯೂಕನಾಗಿ ಮಾಡಿ ಅವನನ್ನು ಚಾನ್ಸಲರನಾಗಿ ನಿಯೋಜಿಸಿ ತನ್ನ ಮುಖ್ಯಮಂತ್ರಿಯನ್ನು ಮಾಡಿ ಕೊಂಡನು ಮತ್ತು ಮಂಕನಿಗೆ ಸೇನಾಪತಿತ್ವವನ್ನು ಕೊಟ್ಟನು. ಚಾರ್ಲಸನ ತಮ್ಮ ನಾದ ಜೇಮ್ಸನು (ಡ್ಯೂಕ್ ಆಫ್ ಯಾರ್ಕ) ಹಡಗುಪಡೆಯ ಮುಖ್ಯಾಧಿಕಾರಿ ಯಾಗಿ (Lord High Admiral) ನಿಯೋಜಿಸಲ್ಪಟ್ಟನು.

**ಕನ್ವೆನ್ಶನ್ ಪಾರ್ಲಿಮೆಂಟು ಮತ್ತು ಚಾರ್ಲಸನು (೧೬೬೦)**— ಚಾರ್ಲಸನು ಇಂಗ್ಲಂಡಿನ ಪಟ್ಟಕ್ಕೆ ಬಂದಾಗ ಕನ್ವೆನ್ಶನ್ ಪಾರ್ಲಿಮೆಂಟು ಅಸ್ತಿತ್ವ ದಲ್ಲಿದ್ದಿತು. ಈ ಪಾರ್ಲಿಮೆಂಟು ಅವನಿಗೆ ೧೨ ಲಕ್ಷ ಪೌಂಡುಗಳ ವಾರ್ಷಿಕ ಉತ್ಪನ್ನವನ್ನು ಕೊಟ್ಟಿತು, ಆದರೆ ಹಿಂದಿನ 'ಸರಂಜಾಮಿ' ಪದ್ಧತಿಯಿಂದ ರಾಜನಿಗೆ ದೊರೆಯುತ್ತಿದ್ದ ಉತ್ಪನ್ನದ ಕೆಲವು ಬಾಬುಗಳನ್ನು ನಿಲ್ಲಿಸಿತು. ಇದೇ ಪಾರ್ಲಿ ಮೆಂಟಿನಲ್ಲಿ ೧ನೆಯ ಚಾರ್ಲಸನ ವಿರುದ್ಧವಾಗಿ ಆದ ಯುದ್ಧದಲ್ಲಿ ಭಾಗವನ್ನು ವಹಿಸಿದವರಿಗೆ ಕ್ಷಮೆ ದೊರೆಯಬೇಕೆಂದು ಕಾಯದೆ ಪಾಸಾಯಿತು. ಆದರೆ ಚಾರ್ಲಸನಿಗೆ ಮರಣದ ಶಿಕ್ಷೆಯನ್ನು ವಿಧಿಸಿದ ನ್ಯಾಯಾಸನದ ಸದಸ್ಯರಿಗೆ ಮಾತ್ರ ಈ ಕ್ಷಮೆ ದೊರೆಯಲಿಲ್ಲ. ಈ ಸದಸ್ಯರಲ್ಲಿ ೨೪ ಜನರು ಈ ಒಳಗಾಗಿಯೆ ಸತ್ತಿದ್ದರು ಮತ್ತು ಉಳಿದವರಲ್ಲಿ ಕೆಲವರು ದೇಶತ್ಯಾಗವನ್ನು ಮಾಡಿದ್ದರು. ಆದರೆ ಇನ್ನುಳಿದ ಜನರು ಶಿಕ್ಷೆಗೆ ಗುರಿಮಾಡಲ್ಪಟ್ಟರು. ಕಳೆದ ೧೧ ವರ್ಷಗಳ ಅವಧಿ ಯಲ್ಲಿ ಚರ್ಚಿನ ಮತ್ತು ರಾಜನ ಸ್ವಾಮಿತ್ವದಲ್ಲಿಯ ಅನೇಕ ಭೂಮಿಗಳು ಬೇರೆ ಬೇರೆ ಜನರಿಗೆ ಕೊಡಲ್ಪಟ್ಟುದರಿಂದ ರಾಜನ ಸ್ವಾಮಿತ್ವದಲ್ಲಿಯ ಭೂಮಿ ಬಹು ಅಲ್ಪ ವಾಗಿದ್ದಿತು. ಈ ಸ್ಥಿತಿಯನ್ನು ಬದಲಿಸಲು ೧೧ ವರ್ಷಗಳ ಪೂರ್ವದಲ್ಲಿ ರಾಜನ ಮತ್ತು ಚರ್ಚಿನ ವಶದಲ್ಲಿದ್ದ ಎಲ್ಲ ಭೂಮಿಗಳು ತಿರುಗಿ ತೆಗೆದುಕೊಳ್ಳಲ್ಪಟ್ಟುವು. ಕ್ರಾಮ ವೆಲನ ಆಳಿಕೆಯಲ್ಲಿ ಅಸ್ತಿತ್ವದಲ್ಲಿ ಬಂದ ಶಾಶ್ವತ ಸೈನ್ಯವು ಮುರಿಯಲ್ಪಟ್ಟಿತು, ಆದರೆ ರಾಜನ ಶರೀರರಕ್ಷಕರೆಂದು (Body Guard) ೫ ಸಾವಿರ ಸೈನಿಕರ ಒಂದು ದಳವು ಜನರಲ್ ಮಂಕನ ವಶದಲ್ಲಿರಿಸಲ್ಪಟ್ಟಿತು. ಇದುವೆ ಬೆಳೆಯುತ್ತ ಹೋಗಿ ಮುಂದೆ ರಾಷ್ಟ್ರದ ರಕ್ಷಣೆಗೋಸ್ಕರ ಪಾರ್ಲಿಮೆಂಟಿನ ಸಮ್ಮತಿಯಿಂದ

ಶಾಶ್ವತ ಸೈನ್ಯವಾಯಿತು. ೧೬೬೦ರ ಡಿಸೆಂಬರ ತಿಂಗಳಲ್ಲಿ ಕನ್ವೆನ್ಶನ್ ಪಾರ್ಲಿಮೆಂಟು ವಿಸರ್ಜಿಸಲ್ಪಟ್ಟಿತು.

**ಕವೆಲಿಯರ್ ಪಾರ್ಲಿಮೆಂಟು** (೧೬೬೧-೧೬೭೯)—೧೬೬೧ರಲ್ಲಿ ಹೊಸ ಚುನಾವಣೆಯಾಗಿ ಚಾರ್ಲಸನ ಆಳ್ಕೆಯಲ್ಲಿಯ ಮೊದಲನೆಯ ಪಾರ್ಲಿಮೆಂಟು ನೆರೆಯಿತು. ಈ ಸಭೆಯಲ್ಲಿ ಹಿಂದಿನ ಲಷ್ಕರಿ ಸತ್ತೆಗೆ ವಿರುದ್ಧರಾದ ರಾಜನಿಷ್ಟ ಸಭಾಸದರ ಮತಾಧಿಕ್ಯವಿದ್ದಿತು. ಆದುದರಿಂದ ಈ ಸಭೆಗೆ **ಕವೆಲಿಯರ್* ಪಾರ್ಲಿಮೆಂಟು** ಎಂದು ಹೆಸರು ಬಂದಿತು. ಈ ಪಾರ್ಲಿಮೆಂಟು ೧೬೬೧—೭೯ರ ವರೆಗೆ ನಡೆಯಿತು. ಕ್ರಾಮವೆಲನ ಆಳಿಕೆಯಲ್ಲಿ ಪ್ಯುರಿಟನ್ ಜನರ ವರ್ಚಸ್ಸು ಇದ್ದಿತು. ಅದು ಇಲ್ಲದಂತಾಗಬೇಕೆಂದು ಮತ್ತು ಎಪಿಸ್ಕೊಪೇಲಿಯನ್ ಪಂಥವು ಸಂಪೂರ್ಣವಾಗಿ ಸ್ಥಾಪಿಸಲ್ಪಡಬೇಕೆಂದು ಈ ಪಾರ್ಲಿಮೆಂಟು ೧೬೬೧—೬೫ರ ವರೆಗೆ ಧಾರ್ಮಿಕ ವಿಷಯದ ಕೆಲವು ಕಾಯದೆಗಳನ್ನು ಮಾಡಿತು. ಚಾರ್ಲಸನ ಮುಖ್ಯ ಮಂತ್ರಿಯಾದ ಕ್ಲರೆಂಡನನು ಈ ಪಾರ್ಲಿಮೆಂಟಿನಲ್ಲಿ ಸದಸ್ಯನೂ ಆಗಿದ್ದನು. ಅವನ ಸೂಚನೆಯಿಂದ ಈ ಕಾಯ್ದೆಗಳು ಮಾಟಲ್ಪಟ್ಟುವು. ಆದುದರಿಂದ ಇವಕ್ಕೆ **'ಕ್ಲರೆಂಡನ್ ಕೋಡ'** ಎಂಬ ಹೆಸರು ಬಂದಿತು.

**ಧಾರ್ಮಿಕ ವಿಷಯಗಳ ಕಾಯದೆಗಳು—(ಕ್ಲರೆಂಡನ್ ಕೋಡ)**—(೧) ೧೬೬೧ರಲ್ಲಿ **'ಕಾರ್ಪೊರೇಶನ್ ಅಕ್ಟ'** ಎಂಬ ಕಾಯ್ದೆ ಪಾಸಾಯ್ತು. ಈ ಕಾಯ್ದೆಯಂತೆ ಮ್ಯುನಿಸಿಪಾಲಿಟಿಗಳ ಮತ್ತು ಸ್ಥಾನಿಕ ಸಂಸ್ಥೆಗಳ ಮೇಯರ, ಆಲ್ಡರ್ಮನ್ ಮೊದಲಾದ ಅಧಿಕಾರಿಗಳು ಎಪಿಸ್‌ಕೊಪೇಲಿಯನ್ ಪಂಥದವರಿರಬೇಕೆಂದೂ ರಾಜನ ವಿರುದ್ಧವಾಗಿ ಶಸ್ತ್ರವೆತ್ತುವುದು ಕಾಯ್ದೆಗೆ ವಿರುದ್ಧವಾಗಿದೆಂದು ಅವರು ಶಪಥವನ್ನು ಮಾಡಬೇಕೆಂದೂ ನಿರ್ಣಯಿಸಲ್ಪಟ್ಟಿತು. (೨) ೧೬೬೨ರಲ್ಲಿ **ಅಕ್ಟ ಆಫ್ ಯುನಿಫಾರ್ಮಿಟಿ** ಎಂಬ ಕಾಯ್ದೆ ಪಾಸುಮಾಡಲ್ಪಟ್ಟಿತು. ಈ ಕಾಯ್ದೆಯಂತೆ ಇಂಗ್ಲಂಡಿನಲ್ಲಿಯ ೩೯ ಕಲಮುಗಳ ಪ್ರಾರ್ಥನೆಯ ಪುಸ್ತಕವು ಎಲ್ಲ ಚರ್ಚುಗಳಲ್ಲಿ ಉಪಯೋಗಿಸಲ್ಪಡಬೇಕೆಂದು ನಿರ್ಣಯವಾಯ್ತು. ಇದರಿಂದ ಪ್ಯುರಿಟನ್ ಪಂಥದ ಅನೇಕ ಧರ್ಮಾಧಿಕಾರಿಗಳು ಎಪಿಸ್‌ಕೊಪೇಲಿಯನ್ ಪಂಥವನ್ನು ಸ್ವೀಕರಿಸಿ ಪ್ರಾರ್ಥನೆಯ ಪುಸ್ತಕಕ್ಕೆ ಮಾನ್ಯತೆಯನ್ನಿತ್ತರು.

---

* ಒಂದನೆಯ ಚಾರ್ಲಸನಿಗೂ ಪಾರ್ಲಿಮೆಂಟಿಗೂ ಆದ ಯುದ್ಧಗಳಲ್ಲಿ ರಾಜಪಕ್ಷದ ಜನರು ಕವೆಲಿಯರ್ ಎಂದು ಕರೆಯಲ್ಪಡುತ್ತಿದ್ದರು. ಆದುದರಿಂದ ರಾಜಸತ್ತೆಗೆ ಬೆಂಬಲವಿತ್ತೀವ ಈ ಪಾರ್ಲಿಮೆಂಟಿಗೂ ಕವೆಲಿಯರ್ ಪಾರ್ಲಿಮೆಂಟೆಂಬ ಹೆಸರು ಬಂದಿತು.

ಆದರೆ ೨೦೦೦ ದೃಢಾಭಿಮಾನಿಗಳಾದ ಪ್ಯೂರಿಟನ್ ಪಂಥದ ಧರ್ಮಾಧಿಕಾರಿಗಳು ಎಪಿಸ್‌ಕೊಪೇಲಿಯನ್ ಪಂಥವನ್ನು ಸ್ವೀಕರಿಸಲು ಒಪ್ಪಲಿಲ್ಲ, ಆದುದರಿಂದ ಅವರು ತಮ್ಮ ಅಧಿಕಾರವನ್ನು ಕಳೆದುಕೊಳ್ಳಬೇಕಾಯ್ತು. (೩) ೧೬೬೪ರಲ್ಲಿ '**ಕಾನ್ ವೆಂಟಿಕಲ್ ಅಕ್ಟ**' ಎಂಬ ಕಾಯ್ದೆ ಪಾಸಾಯ್ತು. ಈ ಕಾಯ್ದೆಯಿಂದ ಎಪಿಸ್ ಕೊಪೇಲಿಯನ್ ಪಂಥದ ಅನುಯಾಯಿಗಳಲ್ಲದವರು ತಮ್ಮ ತಮ್ಮ ಪಂಥಗಳ ಪದ್ಧತಿಯಂತೆ ಸಾರ್ವಜನಿಕ ಪ್ರಾರ್ಥನೆಯನ್ನು ಮಾಡಲು ಪ್ರತಿಬಂಧವಾಯ್ತು. (೪) ೧೬೬೫ರಲ್ಲಿ '**ಫಾಯಿವ್ ಮಾಯಿಲ್ಸ ಅಕ್ಟ**' ಎಂಬ ಕಾಯ್ದೆಯಾಯ್ತು. ಈ ಕಾಯ್ದೆ ಎಪಿಸ್‌ಕೊಪೇಲಿಯನ್ ಪಂಥದವರಲ್ಲದ ಧರ್ಮಾಧಿಕಾರಿಗಳು ಮೊದಲು ತಾವು ಧರ್ಮಾಧಿಕಾರಿಗಳಾಗಿ ಕೆಲಸಮಾಡಿದ ಊರುಗಳ ಐದು ಮೈಲುಗಳ ಕಕ್ಷೆಯಲ್ಲಿ ಬರಲಾಗದೆಂದು ಗೊತ್ತುಮಾಡಿತು. ಈ ಧಾರ್ಮಿಕ ಕಾಯ್ದೆಗಳಿಗೆ ಮಾನ್ಯತೆಯನ್ನೀಯದ ಜನರಿಗೆ ಡಿಸೆಂಟರ್ಸ (ಇಂಗ್ಲಂಡಿನ ರಾಷ್ಟ್ರೀಯ ಧರ್ಮದಿಂದ ಸಿಡಿದು ನಿಂತವರು), ನಾನ್ ಕನ್‌ಫಾರ್ಮಿಸ್ಟ್ಸ (ಮಾನ್ಯತೆಯನ್ನೀಯದವರು) ಎಂದು ಹೆಸರುಗಳು ಬಂದುವು. ಈ ಜನರು ಕಾಯ್ದೆಗಳನ್ನು ಮುರಿದು ದಂಡ, ಕಾರಾಗೃಹವಾಸ ಮತ್ತು ದೇಶತ್ಯಾಗ ಈ ಶಿಕ್ಷೆಗಳಿಗೆ ಗುರಿಯಾಗಬೇಕಾಗುತ್ತಿತ್ತು. **ಜಾನ್ ಬನಿಯನ್** ಎಂಬ ಪ್ಯೂರಿಟನ್ ಪಂಥದ ಅಭಿಮಾನಿ ಧಾರ್ಮಿಕ ಕಾಯ್ದೆಗಳನ್ನು ಮುರಿದುದರಿಂದ ೧೨ ವರ್ಷಗಳ ವರೆಗೆ ಕಾರಾಗೃಹವಾಸವನ್ನು ಅನುಭವಿಸಬೇಕಾಯ್ತು. ಅವನು ಕಾರಾಗೃಹದಲ್ಲಿ ಇರುವಾಗ '**ಪಿಲ್‌ಗ್ರಿಮ್ಸ ಪ್ರಾಗ್ರೆಸ್**' ಎಂಬ ಪ್ರಸಿದ್ಧವಾದ ಗ್ರಂಥವನ್ನು ಬರೆದನು.

**ಕ್ಲರೆಂಡನ್**—ಚಾರ್ಲಸನು ಪಟ್ಟಕ್ಕೆ ಬಂದ ಬಳಿಕ ಅವನ ಆಳ್ಕೆಯ ಮೊದಲನೆಯ ೭ ವರುಷಗಳು ಮುಗಿವವರೆಗೆ **ಎಡ್ವರ್ಡ ಹಾಯಿಡ್ (ಡ್ಯೂಕ್ ಆಫ್ ಕ್ಲರೆಂಡನ್)** ಇವನು ಅವನ ಮುಖ್ಯ ಮಂತ್ರಿಯಾಗಿದ್ದನು. ಪಾರ್ಲಿಮೆಂಟಿನಲ್ಲಿ ಅವನ ವರ್ಚಸ್ಸು ಸಂಪೂರ್ಣವಾಗಿದ್ದಿತು. ಕ್ಲರೆಂಡನನು ಎಪಿಸ್ಕೊಪೇಲಿಯನ್ ಪಂಥದ ದೃಢಾಭಿಮಾನಿಯಾಗಿದ್ದನು. ಅವನು ೧ನೆಯ ಚಾರ್ಲಸನ ಆಳ್ಕೆಯಲ್ಲಿ ಲಾಂಗ ಪಾರ್ಲಿಮೆಂಟಿನ ಸದಸ್ಯನಾಗಿದ್ದನು. ಆದರೆ ಅದರಲ್ಲಿಯ ಸದಸ್ಯರ ಪ್ಯೂರಿಟನ್ ಪಂಥಕ್ಕೆ ಅನುಕೂಲವಾದ ನೀತಿ ಇವನಿಗೆ ಸರಿದೋರಲಿಲ್ಲವಾದುದರಿಂದ ಅವನು ರಾಜಪಕ್ಷವನ್ನು ಕೂಡಿದನು. ೧ನೆಯ ಚಾರ್ಲಸನು ಮಡಿದಬಳಿಕ ಅವನು ರಾಜಪುತ್ರ ಚಾರ್ಲಸನೊಡನೆ ಇರಲು ಹಾಲಂಡಿಗೆ ಹೋದನು. ಅವನು ತನ್ನ ಮಗಳಾದ **ಅನ್ ಹಾಯಿಡ್** ಎಂಬವಳನ್ನು ಚಾರ್ಲಸನ ತಮ್ಮನಾದ **ಜೇಮ್ಸನಿಗೆ** ಕೊಟ್ಟು ಮದುವೆಮಾಡಿದನು.

ಕ್ಲೆರೆಂಡನನು ಪ್ರಾಮಾಣಿಕನೂ ಸರಳವರ್ತನದವನೂ ಆಗಿದ್ದನು. ರಾಜಸತ್ತೆಯೂ ಪಾರ್ಲಿಮೆಂಟಿನ ಅಧಿಕಾರವೂ ಮರ್ಯಾದಿತವಾಗಿರಬೇಕು, ಒಬ್ಬರದೊಬ್ಬರ ಮೇಲೆ ಪ್ರಭಾವವಿರಬೇಕು ಎಂದು ಅವನ ಅಭಿಪ್ರಾಯವಿದ್ದಿತು. ಆದರೆ ಅವನಲ್ಲಿ ಮನೋದಾರ್ಢ್ಯವು ಸಾಕಷ್ಟು ಇರಲಿಲ್ಲವಾದುದರಿಂದ ರಾಜನನ್ನಾಗಲಿ ಪಾರ್ಲಿಮೆಂಟನ್ನಾಗಲಿ ಯಾರನ್ನೂ ಸಂತುಷ್ಟವಾಗಿಡಲು ಇವನು ಸಮರ್ಥನಾಗಲಿಲ್ಲ. ತನ್ನ ಉದ್ದೇಶವನ್ನು ಕೈಗೂಡಿಸಲು ಇವನಿಂದ ಉಪಯೋಗವಾಗದೆಂದು ಚಾರ್ಲಸನಿಗೆ ಗೊತ್ತಿದ್ದಿತು. ಇತ್ತ ರಾಜನ ಮುಂದೆ ಪಾರ್ಲಿಮೆಂಟಿನ ಅಭಿಪ್ರಾಯಗಳನ್ನು ಸ್ಪಷ್ಟವಾಗಿಡಲು ಇವನಿಗೆ ಧೈರ್ಯವಾಗಲಿಕ್ಕಿಲ್ಲವೆಂದು ಪಾರ್ಲಿಮೆಂಟಿಗೆ ಎನಿಸುತ್ತಿತ್ತು. ಪರರಾಷ್ಟ್ರೀಯ ರಾಜಕಾರಣದಲ್ಲಿ ಅವನು ಎಲಿಝಬೆಥ್ ಇವಳ "ಸ್ಪೇನದೊಡನೆ ವೈರವು ಮತ್ತು ಫ್ರಾನ್ಸಿನೊಡನೆ ಸಖ್ಯವು" ಈ ನೀತಿಯನ್ನು ಅನುಸರಿಸಿದನು. ಆದರೆ **೧೪ನೆಯ ಲುಯಿಯ** ಆಳ್ಕೆಯಲ್ಲಿ ಫ್ರಾನ್ಸು ಬಹಳ ಪ್ರಬಲವಾಗತೊಡಗಿದುದರಿಂದ ಸತ್ತೆಯ ಸಮತೂಕವನ್ನು ಕಾಯಲು ಫ್ರಾನ್ಸಿನ ಬೆಳೆಯುತ್ತಿರುವ ಸತ್ತೆಯನ್ನು ತಡೆವುದು ಅವಶ್ಯವಾಗಿತ್ತು. ಆದರೆ ಫ್ರಾನ್ಸಿನ ಮಿತ್ರತ್ವವನ್ನು ಕಾಯ್ದುಕೊಳ್ಳಲು ಅವನ ಆಲೋಚನೆಯನ್ನನುಸರಿಸಿ ಚಾರ್ಲಸನು ಡನ್ಕರ್ಕ ಬಂದರವನ್ನು ಫ್ರಾನ್ಸಿಗೆ ೪ ಲಕ್ಷ ಪೌಂಡುಗಳಿಗೆ ಮಾರಿದನು. ಆದರೆ ಅದು ಇಂಗ್ಲಂಡಿನ ಜನತೆಗೆ ಸರಿದೋರಲಿಲ್ಲ. ಮುಂದೆ ಡಚ್ ಜನರೊಡನೆ ಯುದ್ಧವಾಯಿತು. ಆ ಯುದ್ಧದಲ್ಲಿ ಇಂಗ್ಲಂಡಿಗೆ ಅಪಯಶಸ್ಸು ಬಂದಿತು. ಇದಕ್ಕೆ ಕ್ಲೆರೆಂಡನನು ಹೊಣೆಗಾರನೆಂದು ಪಾರ್ಲಿಮೆಂಟು ಅವನ ವಿಚಾರಣೆಯನ್ನು ನಡೆಯಿಸಿತು. ಕ್ಲೆರೆಂಡನನು ಇಂಗ್ಲಂಡನ್ನು ಬಿಟ್ಟು ಓಡಿಹೋದನು (೧೬೬೭). ಆದುದರಿಂದ ಪಾರ್ಲಿಮೆಂಟು ಅವನು ಹದ್ದುಪಾರು ಮಾಡಲ್ಪಟ್ಟಿರುವನೆಂದು ಸಾರಿತು.

**ಫ್ರಾನ್ಸಿನ ಅರಸನಾದ ೧೪ನೆಯ ಲುಯಿ**— ಈ ಸಮಯದಲ್ಲಿ ೧೪ನೆಯ ಲುಯಿ ಫ್ರಾನ್ಸಿನ ಅರಸನಾಗಿದ್ದನು. ಪಟ್ಟಕ್ಕೆ ಬಂದಾಗ ಅವನು ೫ ವರ್ಷದವನಾಗಿದ್ದನು. ಅವನು ೧೬೫೧ರಲ್ಲಿ ತನ್ನ ವಯಸ್ಸಿನ ೨೩ನೆಯ ವರ್ಷ ಎಲ್ಲ ಸತ್ತೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ೧೭೧೫ರ ವರೆಗೆ ರಾಜ್ಯವನ್ನಾಳಿದನು. ಫ್ರಾನ್ಸಿನಲ್ಲಿಯ ಬಹುಜನ ಸಮಾಜವು ರೋಮನ್ ಕ್ಯಾಥಲಿಕ್ ಪಂಥವನ್ನು ಅನುಸರಿಸುತ್ತಿತ್ತು. ಲುಯಿಯೂ ಅದೇ ಪಂಥದವನಾಗಿದ್ದನು. ಅವನು **ಕೋಲ್ಬರ್ಟ** ಎಂಬ ಬುದ್ಧಿವಂತ ಮನುಷ್ಯನನ್ನು ತನ್ನ ಮಂತ್ರಿಯಾಗಿ ನಿಯೋಜಿಸಿಕೊಂಡನು. ಲುಯಿ ಅತ್ಯಂತ ಮಹತ್ವಾಕಾಂಕ್ಷಿಯೂ ಯುಕ್ತಿವಂತನೂ ಕಾರ್ಯಸಮರ್ಥನೂ ಆಗಿದ್ದನು. ಫ್ರಾನ್ಸಿನ ರಾಜಸತ್ತೆಯನ್ನು ಪ್ರಬಲವಾಗಿಯೂ ಅನಿಯಂತ್ರಿತ

ವಾಗಿಯೂ ಮಾಡಬೇಕು, ಫ್ರಾನ್ಸಿನ ಉತ್ತರ ಸೀಮೆಯನ್ನು ರ್ಹಾಯಿನ್ ನದಿಯ ವರೆಗೆ ಬೆಳೆಯಿಸಬೇಕು, ವ್ಯಾಪಾರೋದ್ಯೋಗಗಳನ್ನು ಹೆಚ್ಚಿಸಿ ಫ್ರಾನ್ಸ ರಾಷ್ಟ್ರವನ್ನು ಪ್ರಬಲವಾಗಿಯೂ ವೈಭವಸಂಪನ್ನವಾಗಿಯೂ ಮಾಡಬೇಕು ಎಂದು ಅವನ ಮಹತ್ವಾಕಾಂಕ್ಷೆ. ಯುರೋಪದಲ್ಲಿಯ ಬಹುಶಃ ಎಲ್ಲ ರಾಷ್ಟ್ರಗಳ ದರಬಾರುಗಳಲ್ಲಿ ಅವನ ರಾಯಭಾರಿಗಳು ಇರುತ್ತಿದ್ದರು. ಅದರಿಂದ ಎಲ್ಲ ರಾಷ್ಟ್ರಗಳಲ್ಲಿ ನಡೆವ ಅಂತಃಸ್ಥ ಕಾರಸ್ಥಾನಗಳು ಸಂಪೂರ್ಣವಾಗಿ ಅವನಿಗೆ ಗೊತ್ತಿದ್ದುವು. ಅವನ ಸೈನ್ಯವು ಉತ್ಕೃಷ್ಟವಾಗಿದ್ದಿತು, ಆದುದರಿಂದ ಯುರೋಪದಲ್ಲಿಯೆ ಎಲ್ಲ ರಾಷ್ಟ್ರಗಳಿಗೆ ಅವನ ಹೆದರಿಕೆ ಇದ್ದಿತು. ನೋಡಲು ಅವನು ಸುಂದರನೂ ವರ್ಚಸ್ವಿಯೂ ಆಗಿದ್ದನು. ಅವನ ಭಾಷಣವೂ ವರ್ತನವೂ ಹೃದಯಾಕರ್ಷಕವಾಗಿದ್ದುವು. ಆದುದರಿಂದ ಎರಡನೆಯವರ ಮೇಲೆ ಸಹಜವಾಗಿ ಅವನ ವರ್ಚಸ್ಸು ಉಂಟಾಗುತ್ತಿತ್ತು. ವಿದ್ಯೆಗೂ ಕಲಾಕೌಶಲ್ಯಗಳಿಗೂ ಅವನ ಉತ್ತೇಜನವಿದ್ದಿತು. ಅವನ ದರಬಾರವು ವೈಭವಸಂಪನ್ನವಾಗಿದ್ದಿತು. ಯುರೋಪದಲ್ಲಿಯ ಇತರ ರಾಜರು ಇವನನ್ನು ಅನುಕರಿಸಲು ಪ್ರಯತ್ನಿಸುತ್ತಿದ್ದರು.

**ಚಾರ್ಲ್ಸನ ದರಬಾರವು**— ಈ ಸಮಯದಲ್ಲಿ ಚಾರ್ಲ್ಸನ ದರಬಾರವು ಸಂಪೂರ್ಣವಾಗಿ ವಿಲಾಸಪೂರ್ಣವಾಗಿದ್ದಿತು. ರಾಜಗೃಹದಲ್ಲಿಯೂ ಆಡಳಿತದ ದೊಡ್ಡ ದೊಡ್ಡ ಅಧಿಕಾರದ ಸ್ಥಳಗಳಲ್ಲಿಯೂ ವಿಲಾಸಿಗಳೂ ವಿಚಾರಹೀನರೂ ಆದ ಜನರನ್ನು ಅವನು ನಿಯೋಜಿಸಿದನು. ದರಬಾರದಲ್ಲಿ ಎಲ್ಲೆಲ್ಲಿಯೂ ಬಾಲಬಡೆವ ಜನರ ಸುಳಿದಾಟವೆ ಸುಳಿದಾಟವು. ಈ ರೀತಿಯಿಂದ ವಿಲಾಸವು ಬೆಳೆದುದರಿಂದ ದರಬಾರದ ವೆಚ್ಚವು ಅತಿಶಯವಾಗಿ ಬೆಳೆದು ಯಾವಾಗಲೂ ಹಣದ ಕೊರತೆ ಇರುತ್ತಿತ್ತು. ಆದುದರಿಂದ ಹಣವನ್ನು ಸಂಪಾದಿಸಲಿಕ್ಕೆ ಅಪಮಾನಾಸ್ಪದವಾದ ಒಪ್ಪಂದಗಳನ್ನು ಮಾಡಿಕೊಳ್ಳಲು, ಆಯಕಟ್ಟಿನ ಸ್ಥಳಗಳನ್ನು ಪರಕೀಯ ರಾಜರಿಗೆ ಮಾರಲು ಅಥವಾ ಫ್ರಾನ್ಸಿನ ಅರಸನಾದ ೧೪ನೆಯ ಲುಯಿಯೊಡನೆ ಗುಪ್ತವಾಗಿ ಒಪ್ಪಂದವನ್ನು ಮಾಡಿಕೊಂಡು ಹಣವನ್ನು ತೆಗೆದುಕೊಳ್ಳಲು ಅವನು ಹಿಂದೆ ಮುಂದೆ ನೋಡಲಿಲ್ಲ. ಕ್ರಾಮವೆಲನ ಆಳ್ಕೆಯಲ್ಲಿಯ ಪ್ಯುರಿಟನ್ ಜನರ ಸಾದಾತನದ ಮುಯ್ಯನ್ನು ತೀರಿಸಲು ಅವನ ವಿಲಾಸವು ಇಷ್ಟು ಸ್ವೈರವಾಗಿ ಬೆಳೆಯಿತೋ ಏನೋ ಎಂಬಂತೆ ಜನರಿಗೆ ಎನಿಸಿತು.

**ಪ್ಲೇಗವೂ ಲಂಡನಿನಲ್ಲಿಯ ಅಗ್ನಿಪ್ರಳಯವೂ (೧೬೬೬)**— ೧೬೬೫ರ ಮಳೆಗಾಲದಲ್ಲಿ ಇಂಗ್ಲಂಡಿನೊಳಗೆ ಪ್ಲೇಗವು ಪ್ರಾದುರ್ಭವಿಸಿ ಲಕ್ಷಾವಧಿ ಜನರು ಮೃತ್ಯುಮುಖಕ್ಕೆ ಆಹುತಿಯಾದರು. ಲಂಡನಿನಲ್ಲಿಯಂತೂ ಪ್ಲೇಗವು

ಅತ್ಯಂತ ಕರಾಲರೂಪವನ್ನು ತಳೆದಿತು. ಒಟ್ಟಿನಲ್ಲಿ ಒಂದು ಲಕ್ಷ ಜನರು ಅಲ್ಲಿ ಸಾವಿಗೆ ತುತ್ತಾದರು. ಈ ಪ್ಲೇಗದ ಅನಾಹುತದಿಂದ ಲಂಡನ್‌ನಗರವು ಪಾರಾಯಿತೆನ್ನುವಷ್ಟರಲ್ಲಿಯೆ ಮತ್ತೊಂದು ಆಪತ್ತಿಗೆ ಅದು ಗುರಿಯಾಯಿತು. ಈ ಆಪತ್ತೆಂದರೆ ಲಂಡನ್‌ನಗರವನ್ನೇ ಆಕ್ರಮಿಸಿದ ಅಗ್ನಿಪ್ರಳಯವು (೧೬೬೬). ನಗರದ ಮಧ್ಯಭಾಗದಲ್ಲಿ ಏನೊ ಒಂದು ಕಾರಣದಿಂದ ಹುಟ್ಟಿದ ಬೆಂಕಿ ಗಾಳಿಯಿಂದ ಎಲ್ಲ ದಿಕ್ಕುಗಳಲ್ಲಿ ಹಬ್ಬುತ್ತ ಇಡಿಯ ನಗರವನ್ನೆ ವ್ಯಾಪಿಸಿತು. ಅದರಿಂದ ಮಧ್ಯಯುಗದಲ್ಲಿ ಹಳೆಯ ಪದ್ಧತಿಯಿಂದ ಕಟ್ಟಲ್ಪಟ್ಟ ೧೩,೦೦೦ ಮನೆಗಳು ೮೯ ಚರ್ಚುಗಳು ಮತ್ತು ಎಷ್ಟೋ ಸಾರ್ವಜನಿಕ ಕಟ್ಟಡಗಳು ಅಗ್ನಿದೇವನಿಗೆ ಆಹುತಿಯಾದುವು. ಈ ಬೆಂಕಿಯನ್ನು ರೋಮನ್ ಕ್ಯಾಥಲಿಕ್ ಪಂಥದವರೆ ಹಚ್ಚಿದರೆಂದು ಜನರಲ್ಲಿ ಸುದ್ದಿ ಹಬ್ಬಿತು. ಈ ಅಗ್ನಿಯಿಂದ ಲಂಡನಿನಲ್ಲಿಯ ೫ದಷ್ಟು ಮನೆಗಳು ಸುಟ್ಟು ಅತಿಶಯವಾಗಿ ಹಾನಿಯಾಯ್ತು. ಆದರೆ ಲಂಡನ್‌ನಗರಕ್ಕೆ ಇದರಿಂದ ಮತ್ತೊಂದು ಬಗೆಯ ಲಾಭವಾಯ್ತು. ಹಳೆಯ ಪದ್ಧತಿಯಿಂದ ಕಟ್ಟಲ್ಪಟ್ಟ ಗಾಳಿಯಾಡದ ಮತ್ತು ರೋಗಕ್ಕೆ ಮನೆಯಾದ ಎಷ್ಟೋ ಕಟ್ಟಡಗಳು ಸುಟ್ಟುವು. ಆದುದರಿಂದ ಹೊಸ ಪದ್ಧತಿಯಿಂದ ಆರೋಗ್ಯಕಾರಕವಾದ ಮನೆಗಳನ್ನು ಕಟ್ಟಲು ಲಂಡನಿನಂತಹ ದಟ್ಟಾದ ಲೋಕವಸ್ತಿಯ ನಗರಕ್ಕೆ ಶಕ್ಯವಾಯ್ತು.

**ಹಾಲಂಡಿನೊಡನೆ ಯುದ್ಧವು, ೧೬೬೫-೬೭**—ಕ್ಲರೆಂಡನನು ಮುಖ್ಯ ಮಂತ್ರಿಯಾಗಿರುವಾಗ ಸಂಭವಿಸಿದ ಮುಖ್ಯ ಸಂಗತಿಯೆಂದರೆ ಹಾಲಂಡಿನೊಡನೆ ಯುದ್ಧವು. ಫ್ರಾನ್ಸ್‌ದೇಶವು ರೋಮನ್ ಕಥಲಿಕ್ ಪಂಥದ ಅನುಯಾಯಿಯಾಗಿತ್ತು. ಅದರ ಮೇರೆಮೀರಿದ ಮಹತ್ವಾಕಾಂಕ್ಷೆಯನ್ನು ಕುಗ್ಗಿಸಲು ಪ್ರಾಟೆಸ್ಟಂಟ ಪಂಥದ ಅನುಯಾಯಿಗಳಾದ ಹಾಲಂಡ್ ಮತ್ತು ಇಂಗ್ಲಂಡ್ ಈಯೆರಡು ರಾಷ್ಟ್ರಗಳಲ್ಲಿ ಸ್ನೇಹವಿರುವುದು ಅತ್ಯವಶ್ಯವಾಗಿತ್ತು, ಆದರೆ ಈಯೆರಡು ರಾಷ್ಟ್ರಗಳಲ್ಲಿ ವ್ಯಾಪಾರವಿಷಯಕ ಸ್ಪರ್ಧೆಯಿಂದ ೧೬೬೫ರಲ್ಲಿ ಯುದ್ಧವು ಹುಟ್ಟಿತು. ಈ ಸಮಯದಲ್ಲಿ ಬ್ಲೇಕನು ಮರಣಹೊಂದಿದುದರಿಂದ ಪ್ರಿನ್ಸ ರೂಪರ್ಟ ಮತ್ತು ಜನರಲ್ ಮಂಕ್ (ಇವನು ಆಗ ಅಲ್ಬೆಮಾರ್ಲದ ಡ್ಯೂಕನಾಗಿ ಮಾಡಲ್ಪಟ್ಟಿದ್ದನು) ಇವರು ಇಂಗ್ಲಂಡಿನ ಹಡಗುಪಡೆಯ ಮುಖ್ಯರಾಗಿದ್ದರು. ಈ ಯುದ್ಧಕ್ಕೋಸುಗ ಪಾರ್ಲಿಮೆಂಟು ಬಹಳ ಹಣವನ್ನು ಮಂಜೂರು ಮಾಡಿತು. ಆದರೆ ಚಾರ್ಲಸನು ತನ್ನ ದರಬಾರದ ವಿಲಾಸಕ್ಕೋಸುಗ ಅದರಲ್ಲಿಯ ಎಷ್ಟೋ ಹಣವನ್ನು ವೆಚ್ಚಮಾಡಿದನು. ಯುದ್ಧದ ಹಡಗುಗಳನ್ನು ಸರಿಪಡಿಸಿ ಹಡಗುಪಡೆಯನ್ನು ಒಳಿತಾದ ಸ್ಥಿತಿಯಲ್ಲಿ ಇಡುವುದರ ಕಡೆಗೆ ಅವನು ಲಕ್ಷ್ಯವನ್ನು ಕೊಡ

ಲ್ಲಿಲ್ಲ. ಹಡಗುಪಡೆಯಲ್ಲಿ ಈ ಬಗೆಯಾಗಿ ಅವ್ಯವಸ್ಥೆ ಇದ್ದಿತಾದುದರಿಂದ ಹಾಲಂಡಿನೊಡನೆ ನಡೆದ ಸಮುದ್ರಯುದ್ಧದಲ್ಲಿ ಮೊದಮೊದಲು ಇಂಗ್ಲಿಶರಿಗೆ ಅಲ್ಪ ಸ್ವಲ್ಪ ಜಯವು ದೊರೆತುದಾದರೂ ಕೊನೆಯಲ್ಲಿ **ಅಡಮಿರಲ್ ಡಿ ರಾಯಟರ್** ಎಂಬ ಡಚ್ ಹಡಗುಪಡೆಯ ಅಧಿಪತಿ ಇಂಗ್ಲಿಶ್ ಹಡಗುಪಡೆಯನ್ನು ಸೋಲಿಸಿದನು. ೧೬೬೭ರಲ್ಲಂತು ಡಚ್ ಸೈನ್ಯವು ಟೇಮ್ಸ ನದಿಯವರೆಗೆ ಬಂದುದಲ್ಲದೆ ಇಂಗ್ಲಿಶರ ಎಷ್ಟೋ ಹಡಗುಗಳನ್ನು ಸುಟ್ಟಿತು.

ಈ ಬಗೆಯಾಗಿ ಇಂಗ್ಲಂಡು ಸೋತು ೧೬೬೭ರಲ್ಲಿ ಬ್ರೇಡಾ ಎಂಬಲ್ಲಿ ಡಚ್ ಜನರೊಡನೆ ಒಪ್ಪಂದವನ್ನು ಮಾಡಿಕೊಂಡಿತು. ಈ ಒಪ್ಪಂದದಿಂದ ಏಶಿಯಾ ಖಂಡದೊಳಗಿನ ಮಸಾಲೆಯ ನಡುಗಡ್ಡೆಗಳ ಮೇಲಿನ ತನ್ನ ಹಕ್ಕನ್ನು ಇಂಗ್ಲಂಡು ಬಿಡಬೇಕಾಯ್ತು, ಆದರೆ ಈ ಯುದ್ಧದಲ್ಲಿ ತಾನು ಗೆದ್ದಿದ್ದ ಅಮೇರಿಕೆಯಲ್ಲಿಯ ಹಾಲಂಡಿನ **ನ್ಯೂ ಆಮ್‌ಸ್ಟರ್ಡಮ್** ವಸಾಹತನ್ನು ತನ್ನ ವಶದಲ್ಲಿಟ್ಟುಕೊಳ್ಳಲು ಅದಕ್ಕೆ ಅಧಿಕಾರವು ದೊರೆತಿತು. ಈ ವಸಾಹತಿನ ಮೊದಲಿನ ಹೆಸರು ಹೋಗಿ ಅದಕ್ಕೆ ಚಾರ್ಲಸನ ತಮ್ಮನಾದ **ಜೇಮ್ಸ ಡ್ಯೂಕ್ ಆಫ್ ಯಾರ್ಕ** ಇವನ ಹೆಸರಿನಿಂದ **ನ್ಯೂಯಾರ್ಕ** ಎಂದು ಹೊಸ ಹೆಸರು ಬಂದಿತು.

**ಕೇಬಲ್ ಮಂತ್ರಿಮಂಡಲವು**—೧೬೬೭ರಲ್ಲಿ ಕ್ಲ್ಯಾರೆಂಡನನು ಹದ್ದುಪಾರ ಮಾಡಲ್ಪಟ್ಟ ಬಳಿಕ ಚಾರ್ಲಸನು ರಾಜ್ಯಕಾರಭಾರದ ಸೂತ್ರಗಳನ್ನು ಒಂದು ಮಂಡಲಕ್ಕೆ ಒಪ್ಪಿಸಿದನು. ಅದಕ್ಕೆ **ಕೇಬಲ್** (ಗುಪ್ತಮಂಡಲವು) ಎಂದು ಹೆಸರು ಬಂದಿತು. ಇದರಲ್ಲಿ **ಕ್ಲಿಫರ್ಡ, ಆರ್ಲಿಂಗ್ಟನ್, ಬಕಿಂಗಹ್ಯಾಮ್, ಅಶ್ಲೆ** (ಇವನು ಮುಂದೆ ಶೆಫ್ಟ್ಸಬರಿ ಎಂದು ಪ್ರಸಿದ್ಧನಾದನು) ಮತ್ತು **ಲಾಡರ್ ಡೇಲ್** ಎಂಬ ಐವರು ಸದಸ್ಯರಿದ್ದರು. ಇವರ ಹೆಸರುಗಳ ಮೊದಲಕ್ಷರಗಳಿಂದ '**ಕೇಬಲ್**' (Cabal) ಎಂದು ಶಬ್ದವಾಗುತ್ತದೆ. ಈ ಕೇಬಲಿನಲ್ಲಿಯ ಸದಸ್ಯರೆಲ್ಲರು ಒಂದೇ ಪಂಥದವರಾಗಲಿ ಒಂದೇ ಮತದವರಾಗಲಿ ಇರಲಿಲ್ಲ. ಈ ಸಮಯದಲ್ಲಿ ೧೪ನೆಯ ಲುಯಿ ಫ್ರಾನ್ಸಿನ ಅರಸನಾಗಿದ್ದನು. ಮಹತ್ವಾಕಾಂಕ್ಷಿಯಾದ ಇವನು ವ್ಯಾಪಾರೋದ್ಯೋಗಗಳಲ್ಲಿ ಮುಂದುವರಿದ ಸುಸಂಪನ್ನವಾದ ಹಾಲಂಡ್ ರಾಷ್ಟ್ರವನ್ನು ತನ್ನ ವಶದಲ್ಲಿ ತೆಗೆದುಕೊಳ್ಳಬೇಕೆಂದು ಯೋಚಿಸಿದ್ದನು. ಅವನ ಮಹತ್ವಾಕಾಂಕ್ಷೆಯನ್ನು ತಡೆಯಲು **ಕೇಬಲ್ ಮಂತ್ರಿಮಂಡಲವು** ೧೬೬೮ರಲ್ಲಿ ಹಾಲಂಡ್ ಮತ್ತು ಸ್ವೀಡನ್ ಇವುಗಳೊಡನೆ 'ತ್ರಿಕೂಟ ಸಂಘ'ವನ್ನು (Triple Alliance) ಮಾಡಿಕೊಂಡಿತು.

**ಡೋವರಿನ ಗುಪ್ತ ಒಪ್ಪಂದವು, ೧೬೭೦** – ತನ್ನ ವಿರುದ್ಧವಾಗಿ ತ್ರಿಕೂಟ

ಸಂಘವು ಸ್ಥಾಪಿಸಲ್ಪಟ್ಟುದನ್ನು ಕೇಳಿದೊಡನೆ ೧೪ನೆಯ ಲುಯಿ ಈ ಸಂಘದೊಳಗಿಂದ ಇಂಗ್ಲಂಡನ್ನು ಒಡೆದುಕೊಳ್ಳಬೇಕೆಂದು ಯೋಚಿಸಿದನು. ಮೊದಲಿಂದಲೂ ಚಾರ್ಲಸನೊಡನೆ ಅವನ ಮಿತ್ರತ್ವವಿದ್ದಿತು, ಮತ್ತು ರೋಮನ್ ಕ್ಯಾಥಲಿಕ್ ಪಂಥದ ಕಡೆಗೆ ಆತನ ಒಲವಿದ್ದಿತೆಂಬುದನ್ನೂ ಅವನು ಅರಿತಿದ್ದನು. ಆದುದರಿಂದ ಅವನು ಚಾರ್ಲಸನ ಮನವನ್ನೊಲಿಸಿ ಆತನೊಡನೆ ೧೬೭೦ರಲ್ಲಿ ಮೇ ತಿಂಗಳಲ್ಲಿ **ಡೋವರ್** ಎಂಬಲ್ಲಿ **ಗುಪ್ತವಾದ ಒಪ್ಪಂದವನ್ನು** ಮಾಡಿಕೊಂಡನು. ಈ ಒಪ್ಪಂದದಲ್ಲಿ ಮುಂದೆ ಹೇಳಿದ ಕರಾರುಗಳಿದ್ದುವು:—(೧) ಹಾಲಂಡಿನ ವಿರುದ್ಧವಾಗಿ ಇಂಗ್ಲಂಡು ಫ್ರಾನ್ಸಿಗೆ ಸಾಹಾಯ್ಯವನ್ನು ಮಾಡಬೇಕು; (೨) ಚಾರ್ಲಸನಿಗೆ ಲುಯಿ ಪ್ರತಿವರ್ಷ ೨! ಲಕ್ಷ ಪೌಂಡುಗಳನ್ನು ಕೊಡಬೇಕು; (೩) ಇಂಗ್ಲಂಡಿನಲ್ಲಿ ರೋಮನ್ ಕ್ಯಾಥಲಿಕ್ ಪಂಥದವರಿಗೆ ಅನುಕೂಲತೆಗಳನ್ನು ಒದಗಿಸಿಕೊಡಬೇಕು ಮತ್ತು ಈ ಪಂಥದ ಪ್ರಸಾರವನ್ನು ಮಾಡಬೇಕು; (೪) ಚಾರ್ಲಸನು ತಾನು ರೋಮನ್ ಕ್ಯಾಥಲಿಕ್ ಪಂಥದವನಿದ್ದೇನೆಂದು ಯೋಗ್ಯ ಸಮಯವು ಬಂದೊಡನೆ ಪ್ರಕಟಿಸಬೇಕು; (೫) ಮತ್ತು ಇಂಗ್ಲಂಡಿನಲ್ಲಿ ರೋಮನ್ ಕ್ಯಾಥಲಿಕ್ ಪಂಥದ ವಿರುದ್ಧವಾಗಿ ಬಂಡು ಉಂಟಾದರೆ ಅದನ್ನು ನಾಶಗೊಳಿಸಲು ಲುಯಿ ೬೦೦೦ ಫ್ರೆಂಚ ಸೈನಿಕರನ್ನು ಸಾಹಾಯ್ಯಕ್ಕೆ ಕಳಿಸಬೇಕು.

**ಡಚ್ ಜನರೊಡನೆ ಯುದ್ಧವು, ೧೬೭೨-೭೪**—ಡೋವರಿನ ಗುಪ್ತ ಒಪ್ಪಂದವಾದ ಬಳಿಕ ೧೪ನೆಯ ಲುಯಿಯ ಸೂಚನೆಯಂತೆ ಚಾರ್ಲಸನು ವ್ಯಾಪಾರವಿಷಯಕ ಸ್ಪರ್ಧೆಯ ಕಾರಣವನ್ನು ಮುಂದೆ ಮಾಡಿ ಡಚ್ ಜನರೊಡನೆ ಯುದ್ಧವನ್ನು ಸಾರಿದನು. ಈ ಯುದ್ಧವು ಜನರಿಗೆ ಸಮ್ಮತವಾಗಿರಲಿಲ್ಲ. ಆದುದರಿಂದ ಪಾರ್ಲಿಮೆಂಟಿನಿಂದ ಅದಕ್ಕೋಸುಗ ಹಣವು ದೊರೆಯದೆಂದು ಬಗೆದು ಚಾರ್ಲಸನು ಲಂಡನಿನಲ್ಲಿಯ ಶ್ರೀಮಂತ ಜನರಿಂದಲೂ ವ್ಯಾಪಾರಸ್ಥರಿಂದಲೂ ಸಾಲದಿಂದ ಹಣವನ್ನು ಸಂಗ್ರಹಿಸಿ ಹಡಗುಪಡೆಯನ್ನು ಸಿದ್ಧಗೊಳಿಸಿ ಕಳಿಹಿದನು. ಇತ್ತ ಲುಯಿಯೂ ಹಾಲಂಡಿನೊಡನೆ ಯುದ್ಧವನ್ನು ಸಾರಿ ಫ್ರೆಂಚ ಸೈನ್ಯವನ್ನು ನೆದರ್ಲಂಡಿಗೆ ಒಯ್ದಿದ್ದನು. ಈ ಫ್ರೆಂಚ ಸೈನ್ಯದಿಂದ ಹಾಲಂಡನ್ನು ರಕ್ಷಿಸುವದು ಅತ್ಯಂತ ಕಠಿಣವಾದ ಕೆಲಸವಾಗಿತ್ತು; ಆದರೆ ಡಚ್ ಜನರ ಅತ್ಯಂತ ಪರಿಶ್ರಮಪೂರ್ವಕವಾಗಿ ಫ್ರೆಂಚ್ ಸೈನ್ಯವನ್ನು ಎದುರಿಸಿ ತಡೆದರು. **ವಿಲಿಯಮ್ ಆಫ್ ಆರೇಂಜ** ಇವನು ಹಾಲಂಡಿನ ಮುಖ್ಯ ಸೇನಾಪತಿಯಾಗಿದ್ದನು. ಆತನು ಚಾರ್ಲಸನ ಸೋದರಳಿಯನು. ಆತನು ಹಾಲಂಡನ್ನು ಸಮುದ್ರದಿಂದ ಸಂರಕ್ಷಿಸಲು ಕಟ್ಟಿಸಿದ ಗೋಡೆಗಳನ್ನು ಒಡೆದು ಎಲ್ಲ ಪ್ರದೇಶವನ್ನು ಜಲ

ಮಯವಾಗಿ ಮಾಡಿದನು. ಅದರಿಂದ ಫ್ರೆಂಚ ಸೈನ್ಯಕ್ಕೆ ಮುಂದುವರಿವುದಾಗ ಲಿಲ್ಲ. ಪ್ರೊಟೆಸ್ಟಂಟ ಪಂಥದ ಅನುಯಾಯಿಯಾದ ಹಾಲಂಡಿನೊಡನೆ ನಡೆದ ಈ ಯುದ್ಧವು ಜನರಿಗೆ ಅಪ್ರಿಯವಾಗಿತ್ತು ಮತ್ತು ಯುದ್ಧವನ್ನು ಸಾಗಿಸಲು ಸಾಕಷ್ಟು ಹಣವಿರಲಿಲ್ಲ. ಆದುದರಿಂದ ಚಾರ್ಲಸನು ೧೬೭೪ರಲ್ಲಿ ಹಾಲಂಡಿನೊಡನೆ ಒಪ್ಪಂದವನ್ನು ಮಾಡಿಕೊಂಡನು. ಈ ಒಪ್ಪಂದದಿಂದ ಇಂಗ್ಲಂಡಿಗೆ ಹಾಲಂಡಿನಿಂದ ೩ ಲಕ್ಷ ಪೌಂಡುಗಳು ದೊರೆತುವು. ಈ ಯುದ್ಧದ ತರುವಾಯದಲ್ಲಿ ಹಾಲಂಡಿನ ಹಡಗುಪಡೆಯ ಸತ್ತೆಯೂ ವ್ಯಾಪಾರವೂ ಕುಗ್ಗಲಾರಂಭಿಸಿದುವು.

**ಟೆಸ್ಟ ಅಕ್ಟ, ೧೬೭೩**—ಡೋವರಿನ ಗುಪ್ತ ಒಪ್ಪಂದದಂತೆ ರೋಮನ್ ಕ್ಯಾಥಲಿಕ್ ಜನರಿಗೆ ಅನುಕೂಲತೆಗಳನ್ನು ಒದಗಿಸಿಕೊಡಬೇಕೆಂದು ಚಾರ್ಲಸನು ಬಯಸಿದನು. ಆದರೆ ಈ ಮಾತಿಗೆ ಪಾರ್ಲಿಮೆಂಟಿನ ಸಮ್ಮತಿ ದೊರೆಯದೆಂದು ಅವನು ತನ್ನ ಸ್ವಂತದ ಅಧಿಕಾರದಿಂದ **"ಡಿಕ್ಲೇರೇಶನ್ ಆಫ್ ಇಂಡಲ್ಜನ್ಸ"** ಎಂಬ ಜಾಹೀರನಾಮೆಯನ್ನು ಪ್ರಕಟಿಸಿದನು (೧೬೭೨). ಧಾರ್ಮಿಕ ಕಾಯ್ದೆಯಂತೆ ಪ್ಯುರಿಟನ್ ಮತ್ತು ರೋಮನ್ ಕ್ಯಾಥಲಿಕ ಜನರಿಗೆ ಆಗುತ್ತಿದ್ದ ಶಿಕ್ಷೆಯೂ ದಂಡವೂ ಆಗಬಾರದೆಂದು ಈ ಜಾಹೀರನಾಮೆಯಿಂದ ನಿರ್ಣಯವಾಯಿತು. ಆದರೆ ಪಾರ್ಲಿಮೆಂಟಿನ ಕಾಯ್ದೆಯ ವಿರುದ್ಧವಾಗಿ ಜಾಹೀರನಾಮೆಯನ್ನು ಪ್ರಕಟಿಸುವುದು ಜನರಿಗೆ ಯೋಗ್ಯವೆನಿಸಲಿಲ್ಲ. ಈ ಸಮಯದಲ್ಲಿ ಡಚ್ ಜನರೊಡನೆ ಯುದ್ಧವು ನಡೆದಿದ್ದಿತು ಮತ್ತು ಯುದ್ಧಕ್ಕೋಸುಗ ಹಣವು ಬೇಕಾಗಿದ್ದಿತು. ಆದುದರಿಂದ ಪಾರ್ಲಿಮೆಂಟಿನ ಸಭೆಯನ್ನು ಚಾರ್ಲಸನು ಕರೆಯಬೇಕಾಯಿತು. ಈ ಪಾರ್ಲಿಮೆಂಟಿನ ಸಭೆ "ಡಿಕ್ಲೇರೇಶನ್ ಆಫ್ ಇಂಡಲ್ಜನ್ಸ್" ಜಾಹೀರನಾಮೆಯನ್ನು ಚಾರ್ಲಸನು ತಿರುಗಿ ತೆಗೆದುಕೊಳ್ಳಬೇಕೆಂದು ನಿರ್ಣಯಿಸಿದುದಲ್ಲದೆ "ಟೆಸ್ಟ ಅಕ್ಟ" ಎಂಬ ಹೊಸ ಕಾಯ್ದೆಯನ್ನು ಮಾಡಿತು (೧೬೭೩). ಈ ಕಾಯ್ದೆಯಿಂದ ಇಂಗ್ಲಂಡಿನ ಎಪಿಸ್ಕೊಪೇಲಿಯನ್ ಪಂಥದವರಲ್ಲದ ಜನರಿಗೆ ರಾಜ್ಯಕಾರಭಾರದಲ್ಲಿ ಯಾವ ಅಧಿಕಾರಸ್ಥಾನವೂ ದೊರೆಯಲಾಗದೆಂದೂ ಯಾರಿಗಾದರೂ ದೊರೆತಿದ್ದರೆ ಅದರಿಂದ ಅವನು ದೂರಮಾಡಲ್ಪಡಬೇಕೆಂದೂ ನಿರ್ಣಯವಾಯಿತು. ಈ ಕಾಯ್ದೆಯಾದುದರಿಂದ ಚಾರ್ಲಸನಿಗೆ ತನ್ನ ಮಂತ್ರಿಮಂಡಳದಲ್ಲಿದ್ದ **ಆರ್ಲಿಂಗಟನ್** ಮತ್ತು **ಕ್ಲಿಫರ್ಡ** ಈ ಇಬ್ಬರು ರೋಮನ್ ಕ್ಯಾಥಲಿಕ್ ಪಂಥದ ಮಂತ್ರಿಗಳನ್ನು ಕೆಲಸದಿಂದ ದೂರಮಾಡಬೇಕಾಯಿತು. ಈ ಬಗೆಯಾಗಿ 'ಕೇಬಲ' ಮಂತ್ರಿಮಂಡಳವು ಮುರಿಯಿತು. ಚಾರ್ಲಸನ ತಮ್ಮನಾದ

**ಜೇಮ್ಸನು** (ಡ್ಯೂಕ್ ಆಫ್ ಯಾರ್ಕ್) ರೋಮನ್ ಕ್ಯಾಥಲಿಕ್ ಪಂಥವನ್ನು ಸ್ವೀಕರಿಸಿದ್ದನು, ಆದುದರಿಂದ ಅವನು **ಲಾರ್ಡ ಹಾಯ್ ಅಡ್ಮಿರಲ್** ಎಂಬ ಹಡಗು ಪಡೆಯ ಅಧಿಕಾರದ ಸ್ಥಳವನ್ನು ಬಿಟ್ಟುಬಿಡಬೇಕಾಯಿತು.

**ಚಾರ್ಲಸನು ಮತ್ತು ಅವನ ಮಂತ್ರಿ ಡನ್ಬಿ** (೧೬೭೩-೭೯)— ಕೇಬಲ್ ಮಂತ್ರಿಮಂಡಳವು ಮುರಿದ ಬಳಿಕ ಚಾರ್ಲಸನು ಡನ್ಬಿ ಎಂಬವನನ್ನು ತನ್ನ ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು. ಡನ್ಬಿ ಪಾರ್ಲಿಮೆಂಟಿನಲ್ಲಿಯ ಸದಸ್ಯರನ್ನು ತನ್ನ ಕಡೆಗೆ ಒಲಿಸಿಕೊಳ್ಳುವ ಕಲೆಯನ್ನು ಚನ್ನಾಗಿ ಅರಿತಿದ್ದನು. ಆದುದರಿಂದ ಅವನಿಂದ ಚಾರ್ಲಸನಿಗೆ ಬಹು ಉಪಯೋಗವಾಯಿತು. ಫ್ರಾನ್ಸನ್ನು ವಿರೋಧಿಸಿ ಹಾಲಂಡಿನೊಡನೆ ಮಿತ್ರತ್ವವನ್ನು ಇಟ್ಟುಕೊಳ್ಳುವುದು ಯೋಗ್ಯವೆಂದು ಡನ್ಬಿಗೆ ತೋರುತ್ತಿತ್ತು. ಇತ್ತ ಪಾರ್ಲಿಮೆಂಟೂ ಹಾಲಂಡಿನೊಡನೆ ಯುದ್ಧವನ್ನು ಸಾಗಿಸಲು ಅನುಕೂಲವಾಗಿರಲಿಲ್ಲ. ಆದುದರಿಂದ ಚಾರ್ಲಸನು ಡನ್ಬಿಯ ಸೂಚನೆಯನ್ನನುಸರಿಸಿ ಹಾಲಂಡಿನೊಡನೆ ಒಪ್ಪಂದವನ್ನು ಮಾಡಿಕೊಂಡಿದ್ದನು (೧೬೭೪). ಆ ಬಳಿಕ ಹಾಲಂಡಿನೊಡನೆ ಆದ ಸ್ನೇಹವು ದೃಢವಾಗಬೇಕೆಂಬ ಉದ್ದೇಶದಿಂದ ಡನ್ಬಿ ಚಾರ್ಲಸನ ತಮ್ಮನಾದ ಜೇಮ್ಸನ **ಮೇರಿ** ಎಂಬ ಮಗಳ ಮದುವೆಯನ್ನು ಹಾಲಂಡಿನ ರಾಜಪುತ್ರ **ವಿಲಿಯಮನೊಡನೆ** (ಚಾರ್ಲಸನ ಸೋದರಳಿಯನು) ೧೬೭೦ರಲ್ಲಿ ಮಾಡಿಸಿದನು. ಇಂಗ್ಲಂಡ ಮತ್ತು ಹಾಲಂಡ ಇವುಗಳ ನಡುವೆ ಈ ಬಗೆಯಾದ ಸಖ್ಯವು ಉಂಟಾದ ಬಳಿಕ ಪಾರ್ಲಿಮೆಂಟು ಫ್ರಾನ್ಸಿನೊಡನೆ ಯುದ್ಧಮಾಡಲು ಹಣವನ್ನು ಕೊಡಲು ಒಪ್ಪಿಕೊಂಡಿತು. ಈ ಸುದ್ದಿ ಗೊತ್ತಾದೊಡನೆ ೧೪ನೆಯ ಲುಯಿ ಪಾರ್ಲಿಮೆಂಟಿನ ಈ ನೀತಿಯನ್ನು ನಡೆದಿಕ್ಕಲು ಚಾರ್ಲಸನನ್ನು ತನ್ನ ಪಕ್ಷಕ್ಕೆ ಒಲಿಸಿಕೊಳ್ಳಬೇಕೆಂದು ಅವನೊಡನೆ ಮತ್ತೊಮ್ಮೆ ಗುಪ್ತವಾಗಿ ಒಪ್ಪಂದವನ್ನು ಮಾಡಿಕೊಂಡನು (೧೬೭೮). ಈ ಒಪ್ಪಂದದಂತೆ ಚಾರ್ಲಸನು ಹಾಲಂಡಿನ ಸಖ್ಯವನ್ನು ಬಿಡಬೇಕು, ಪಾರ್ಲಿಮೆಂಟನ್ನು ವಿಸರ್ಜಿಸಬೇಕು ಮತ್ತು ಚಾರ್ಲಸನಿಗೆ ಲುಯಿ ಮೂರು ಲಕ್ಷ ಪೌಂಡುಗಳನ್ನು ಕೊಡಬೇಕು ಎಂದು ನಿರ್ಣಯವಾಯಿತು. ಈ ಒಪ್ಪಂದವನ್ನು ಡನ್ಬಿ ಅರಿತಿದ್ದನು. ಆತನು ಫ್ರಾನ್ಸಿಗೆ ವಿರುದ್ಧನಾಗಿದ್ದರೂ ಚಾರ್ಲಸನ ಅಪ್ರಿಯತೆಗೆ ಗುರಿಯಾಗಬಾರದೆಂದು ಈ ಒಪ್ಪಂದಕ್ಕೆ ಸಮ್ಮತಿಯನ್ನಿತ್ತು ಅದರ ಕರಾರುಗಳನ್ನು ಗುಪ್ತವಾಗಿಟ್ಟನು. ಆದರೆ ಪಾರ್ಲಿಮೆಂಟಿನ ಕೆಲ ಸದಸ್ಯರಿಗೆ ಹೇಗೋ ಈ ಒಪ್ಪಂದದ ವಿಷಯವು ಗೊತ್ತಾಗಿ ಚರ್ಚೆಯಾಗತೊಡಗಿತು. ಅವರು ಡನ್ಬಿಯ ವರ್ತನವು ಆಕ್ಷೇಪಾರ್ಹವಾದುದೆಂದು ಮನಗಂಡು ಅವನ

ವಿಚಾರಣೆಯನ್ನು (Impeachment) ಆರಂಭಿಸಿದರು. ಆದರೆ ಅವನನ್ನು ಉಳಿಸಿಕೊಳ್ಳಲು ಚಾರ್ಲಸನು ಪಾರ್ಲಿಮೆಂಟನ್ನು ವಿಸರ್ಜಿಸಿದನು (೧೬೭೯). ಮುಂದೆ ೧೬೭೯ನೆಯ ಇಸ್ವಿಯ ಮಳೆಗಾಲದಲ್ಲಿ ಹೊಸ ಚುನಾವಣೆಯಾಗಿ ಪಾರ್ಲಿಮೆಂಟಿನ ಸಭೆ ಕೂಡಿತು. ಆದರೆ ಈ ಪಾರ್ಲಿಮೆಂಟಿನಲ್ಲಿಯೂ ಡನ್ಬಿಯ ವಿಚಾರಣೆ ಪ್ರಾರಂಭವಾಯಿತು. ಪಾರ್ಲಿಮೆಂಟಿನ ನೀತಿ ಫ್ರಾನ್ಸಿನ ವಿರುದ್ಧವಾಗಿದ್ದರೂ ರಾಜನ ಆಜ್ಞೆಯಿಂದ ತಾನು ಈ ಗುಪ್ತ ಸಂಧಿಗೆ ಸಮ್ಮತಿಯನ್ನಿತ್ತೆನೆಂದು ಡನ್ಬಿಯ ಸಮರ್ಥನೆ ಇದ್ದಿತು. ಆದರೆ ಮಂತ್ರಿ ತನ್ನ ಪ್ರತಿಯೊಂದು ರಾಜಕೀಯ ಕೃತ್ಯಕ್ಕೋಸುಗ ಪಾರ್ಲಿಮೆಂಟಿಗೆ ಹೊಣೆಗಾರನಾಗಿರುವುದರಿಂದ ಫ್ರಾನ್ಸಿನೊಡನಾದ ಒಪ್ಪಂದಕ್ಕೆ ಅವನೇ ಹೊಣೆಗಾರನೆಂದು ನಿರ್ಣಯಿಸಿ ಪಾರ್ಲಿಮೆಂಟು ಅವನನ್ನು ಸೆರೆಯಲ್ಲಿಟ್ಟಿತು.

**ರೋಮನ್ ಕ್ಯಾಥಲಿಕ್ ಜನರ ವಿರುದ್ಧ ಅಪವಾದಗಳು, ೧೬೭೮** — ಚಾರ್ಲಸನು ೧೪ನೆಯ ಲುಯಿಯೊಡನೆ ಮಾಡಿದ ಗುಪ್ತ ಸಂಧಿಯ ಸುದ್ದಿ ಹೇಗೋ ಜನರಿಗೆ ಗೊತ್ತಾದೊಡನೆ ಫ್ರಾನ್ಸಿನ ವಿರುದ್ಧವಾಗಿಯೂ ರೋಮನ್ ಕ್ಯಾಥಲಿಕ್ ಜನರ ವಿರುದ್ಧವಾಗಿಯೂ ಅಪವಾದಗಳು ಹುಟ್ಟತೊಡಗಿದುವು. ಟಾಯಟನ್ ಓಟ್ಸ ಎಂಬ ಉಪದ್ವ್ಯಾಪಿಯಾದ ಮನುಷ್ಯನು, "ರೋಮನ್ ಕ್ಯಾಥಲಿಕ್ ಜನರು ಚಾರ್ಲಸನನ್ನು ಕೊಂದು ಫ್ರೆಂಚ ಸೈನ್ಯದ ಸಾಹಾಯ್ಯದಿಂದ ಇಂಗ್ಲಂಡಿನಲ್ಲಿ ರೋಮನ್ ಕ್ಯಾಥಲಿಕ್ ಪಂಥವನ್ನು ಸ್ಥಾಪಿಸಬೇಕೆಂದೂ ಚಾರ್ಲಸನ ತಮ್ಮನಾದ ಜೇಮ್ಸನಿಗೆ ಪಟ್ಟಗಟ್ಟಬೇಕೆಂದೂ" ಒಳಸಂಚನ್ನು ಹೂಡಿರುವರೆಂದು ಅಪವಾದವನ್ನು ಹುಟ್ಟಿಸಿದನು (೧೬೭೮). ಎಷ್ಟೋ ಜನರು ಈ ಅಪವಾದವನ್ನು ನಂಬಿದರು. ಅದರಿಂದ ರೋಮನ್ ಕ್ಯಾಥಲಿಕ್ ಪಂಥದವರ ವಿಷಯದಲ್ಲಿ ಜನಮತವು ವಿರುದ್ಧವಾಯ್ತು. ಎಷ್ಟೋ ನಿರಪರಾಧಿಗಳಾದ ರೋಮನ್ ಕ್ಯಾಥಲಿಕ್ ಜನರು ಹಿಡಿಯಲ್ಪಟ್ಟರು, ಮತ್ತು ಅನೇಕರು ಸಣ್ಣ ಪುಟ್ಟ ಅಪರಾಧಗಳಿಗೋಸುಗ ಉಗ್ರವಾದ ಶಿಕ್ಷೆಗೆ ಗುರಿಯಾದರು.

**ಹೇಬಿಯಸ್ ಕಾರ್ಪಸ್ ಅಕ್ಟ** (ವ್ಯಕ್ತಿ ಸ್ವಾತಂತ್ರ್ಯದ ಕಾಯ್ದೆ) **೧೬೭೯**—೧೬೭೯ರಲ್ಲಿ ನೆರೆದ ಪಾರ್ಲಿಮೆಂಟು ಹೇಬಿಯಸ್ ಕಾರ್ಪಸ್ ಅಕ್ಟ ಎಂಬ ಒಂದು ಮಹತ್ವದ ಕಾಯ್ದೆಯನ್ನು ಮಾಡಿತು. ಯೋಗ್ಯ ವಿಚಾರಣೆಯಾಗಿ ಆರೋಪವು ಸಿದ್ಧವಾದ ಹೊರ್ತು ಯಾವ ವ್ಯಕ್ತಿಯನ್ನೂ ಸೆರೆಮನೆಯಲ್ಲಿ ಇಡಕೂಡದೆಂದು ಮ್ಯಾಗ್ನಚಾರ್ಟಾ ಸನದಿನಲ್ಲಿ ಇದ್ದಿತು. ಆದರೆ ಎಷ್ಟೋ ಸಲ ಕೇವಲ ಸಂಶಯದಿಂದ ಜನರು ಸೆರೆಮನೆಯಲ್ಲಿ ಇಡಲ್ಪಡುತ್ತಿದ್ದರು. ಅವರ

ವಿಚಾರಣೆ ಯಾವಾಗ ನಡೆಯಬೇಕೆಂಬುದು ನಿಶ್ಚಯಿಸಲ್ಪಡುತ್ತಿರಲಿಲ್ಲ. ಆದುದರಿಂದ ಎಷ್ಟೋ ತಿಂಗಳುಗಳ ವರೆಗೆ ಅವರು ಸೆರೆಮನೆಯಲ್ಲಿ ಕೊಳೆಯಬೇಕಾಗುತ್ತಿತ್ತು. ಈ ಕಾಯ್ದೆಯಿಂದ (ಹೇಬಿಯಸ್ ಕಾರ್ಪಸ=ಆಪಾದಿತನನ್ನು (ನ್ಯಾಯಸಭೆಯ) ಮುಂದೆ ತನ್ನಿರಿ) ಸೆರೆಮನೆಯ ಅಧಿಕಾರಿ ಆಪಾದಿತನನ್ನು ಆದಷ್ಟು ಬೇಗನೆ ವಿಚಾರಣೆಗೋಸುಗ ನ್ಯಾಯಸಭೆಯ ಮುಂದೆ ತರಬೇಕೆಂದು ನಿರ್ಣಯವಾಯಿತು. ಅದರಿಂದ ಆಪಾದಿತನಿಗೆ ತನ್ನನ್ನು ನ್ಯಾಯಸಭೆಯ ಮುಂದೆ ವಿಚಾರಣೆಗೋಸುಗ ಆದಷ್ಟು ಬೇಗನೆ ಒಯ್ಯಲು ಸೆರೆಮನೆಯ ಅಧಿಕಾರಿಗೆ ನ್ಯಾಯಾಧೀಶನಿಂದ ಆಜ್ಞೆಯಾಗಬೇಕೆಂದು ಬೇಡಲು ಅಧಿಕಾರವು ದೊರೆಯಿತು. ಒಂದು ಆರೋಪದಿಂದ ಮುಕ್ತನಾದ ಆರೋಪಿಯನ್ನು ಮತ್ತೆ ಅದೇ ಆರೋಪಕ್ಕೋಸುಗ ಹಿಡಿಯಬಾರದೆಂದೂ ನಿಯಮವಾಯಿತು.

**ಶೆಫ್ಟ್ಸಬರಿ ಮತ್ತು ಎಕ್ಸ್‌ಕ್ಲೂಜನ್ ಬಿಲ್**—ಡನ್ಬಿಯ ವಿಚಾರಣೆ ಮತ್ತು ಹೇಬಿಯಸ್ ಕಾರ್ಪಸ್ ಅಕ್ಟ ಇವನ್ನು ಪಾರ್ಲಿಮೆಂಟಿನಿಂದ ಮಾಡಿಸುವ ಕಾರ್ಯದಲ್ಲಿ **ಶೆಫ್ಟ್ಸಬರಿ** ಎಂಬ ಸದಸ್ಯನು ಬಹಳವಾಗಿ ಪ್ರಯತ್ನಿಸಿದ್ದನು. ಕೇಬಲ್ ಮಂತ್ರಿಮಂಡಳದಲ್ಲಿಯ **ಅಶ್ಲೆ** ಎಂಬ ಮಂತ್ರಿ ಇವನೆ. ಇವನು ಮುಂದೆ ಶೆಫ್ಟ್ಸಬರಿಯ ಲಾರ್ಡನಾಗಿ (ಸರದಾರ) ಮಾಡಲ್ಪಟ್ಟನು. ಅವನು ಎಪಿಸ್ಕೋಪೇಲಿಯನ್ ಪಂಥದವನಿದ್ದನು. ಚಾರ್ಲಸನಿಗೆ ಮಕ್ಕಳಿರಲಿಲ್ಲ. ಆದುದರಿಂದ ಅವನ ತರುವಾಯದಲ್ಲಿ ಪಟ್ಟಕ್ಕೆ ಯಾರು ಬರಬೇಕೆಂಬ ವಿಷಯದಲ್ಲಿ ವಿಚಾರವಾಗತೊಡಗಿತು. ಚಾರ್ಲಸನ ತಮ್ಮನಾದ **ಜೇಮ್ಸನು (ಡ್ಯೂಕ್ ಆಫ್ ಯಾರ್ಕ)** ಕಾಯ್ದೆಯಿಂದ ಪಟ್ಟಾಧಿಕಾರಿಯಾಗಿದ್ದನು. ಆದರೆ ಇಂಗ್ಲಂಡಿನ ಅರಸನು ಧಾರ್ಮಿಕ ವಿಷಯದಲ್ಲಿಯೂ ಮುಖ್ಯಾಧಿಕಾರಿ ಇರುವನು. ಟೆಸ್ಟ ಅಕ್ಟಿನಂತೆ ಇಂಗ್ಲಂಡಿನ ಎಪಿಸ್ಕೋಪೇಲಿಯನ್ ಪಂಥದವರಲ್ಲದ ಜನರಿಗೆ ರಾಜ್ಯಕಾರಭಾರದಲ್ಲಿ ಯಾವ ಅಧಿಕಾರಸ್ಥಾನವೂ ದೊರೆಯಲಾಗದೆಂದು ನಿಯಮವಿದ್ದುದರಿಂದ ಮುಖ್ಯಧರ್ಮಾಧಿಕಾರಿ ರೋಮನ್ ಕ್ಯಾಥಲಿಕ್ ಪಂಥದವರು ಇರಬಾರದೆಂದು ಶೆಫ್ಟ್ಸಬರಿಯ ಮತ್ತು ಪಾರ್ಲಿಮೆಂಟಿನ ಕೆಲವು ಸಭಾಸದರ ಅಭಿಪ್ರಾಯವಿದ್ದಿತು. ಆದುದರಿಂದ ಜೇಮ್ಸನಿಗೆ ಪಟ್ಟವು ದೊರೆಯಬಾರದೆಂದು ಶೆಫ್ಟ್ಸಬರಿ ಎಕ್ಸ್‌ಕ್ಲೂಜನ್ ಕಾಯದೆಯ ಮಸೂದೆಯನ್ನು (ಎಕ್ಸ್‌ಕ್ಲೂಜನ್=ತೆಗೆದುಹಾಕುವುದು) ಪಾರ್ಲಿಮೆಂಟಿನ ಸಭೆಯ ಮುಂದೆ ತಂದನು. ಮತ್ತು ಅದರ ವಿಷಯದಲ್ಲಿ ಚರ್ಚೆ ಪ್ರಾರಂಭವಾಯ್ತು. ತನ್ನ ತರುವಾಯದಲ್ಲಿ ತನ್ನ ತಮ್ಮನಾದ ಜೇಮ್ಸನಿಗೆ ಪಟ್ಟವು ದೊರೆಯಬೇಕೆಂದು ಚಾರ್ಲಸನ ಮನೀಷೆ ಇದ್ದುದರಿಂದ ಈ ಕಾಯದೆ ಪಾಸಾಗಬಾರ

ದೆಂದು ಅವನು ಪಾರ್ಲಿಮೆಂಟನ್ನು ವಿಸರ್ಜಿಸಿದನು (೧೬೭೯). ೧೬೮೦ರಲ್ಲಿ ಮತ್ತೆ ಚುನಾವಣೆಯಾಗಿ ಪಾರ್ಲಿಮೆಂಟು ಕೂಡಿತು. ಆದರೆ ಈ ಪಾರ್ಲಿಮೆಂಟಿನಲ್ಲಿಯೂ ಶಫ್ಟ್ಸಬರಿಯ ಅನುಯಾಯಿಗಳ ಮತಾಧಿಕ್ಯವಿದ್ದಿತು. ಕಾಮನ್ಸ ಸಭೆ ಎಕ್ಸ್‌ಕ್ಲೂಜನ ಕಾಯದೆಯ ಮಸೂದೆಯನ್ನು ಚರ್ಚಿಸಿ ಪಾಸುಮಾಡಿತು. ಆದರೆ ಲಾರ್ಡ್ಸ್‌ಸಭೆ ಅದಕ್ಕೆ ತನ್ನ ಸಮ್ಮತಿಯನ್ನು ಕೊಡಲಿಲ್ಲ. ಚಾರ್ಲಸನು ಈ ಪಾರ್ಲಿಮೆಂಟನ್ನೂ ವಿಸರ್ಜಿಸಿದನು (೧೬೮೧). ಮುಂದೆ ಅವನು ತಾನು ಬದುಕಿರುವ ವರೆಗೂ (೧೬೮೫) ಪಾರ್ಲಿಮೆಂಟ ಸಭೆಯನ್ನು ಕರೆಯದೆ ರಾಜ್ಯ ಕಾರಭಾರವನ್ನು ಸಾಗಿಸಿದನು.

**ರಾಜಕೀಯ ಪಕ್ಷಗಳು—ವ್ಹಿಗ್ ಮತ್ತು ಟೋರಿ**—ಪಾರ್ಲಿಮೆಂಟಿನಲ್ಲಿ ಎಕ್ಸ್‌ಕ್ಲೂಜನ್ ಕಾಯದೆಯ ಚರ್ಚೆ ನಡೆದಾಗ **ವ್ಹಿಗ್ ಮತ್ತು ಟೋರಿ** ಎಂಬ ಹೆಸರಿನಿಂದ ಮುಂದೆ ಪ್ರಸಿದ್ಧಿಗೆ ಬರುವ ಎರಡು ರಾಜಕೀಯ ಪಕ್ಷಗಳು ತಲೆಯೆತ್ತಲಾರಂಭಿಸಿದುವು. ಜೇಮ್ಸನ ವಿರುದ್ಧವಿದ್ದ ಪಕ್ಷದವರು ಎಕ್ಸ್‌ಕ್ಲೂಜನ್ ಕಾಯದೆಯ ಚರ್ಚೆಯನ್ನು ಮಾಡಲು ಪಾರ್ಲಿಮೆಂಟ ಸಭೆಯನ್ನು ಕರೆಯಬೇಕೆಂದು ಚಾರ್ಲಸನಿಗೆ ವಿನಂತಿಪತ್ರಗಳನ್ನು ಕಳಿಸುತ್ತಿದ್ದರು. ಆದುದರಿಂದ ಅವರಿಗೆ **ಪಿಟಿಶನರ್ಸ** (ವಿನಂತಿಪತ್ರವನ್ನು ಕಳಿಸುವವರು) ಎಂದು ಹೆಸರು ಬಂದಿತು. ಹೀಗೆ ಆಗ್ರಹವನ್ನು ತೊಡುವುದೆಂದರೆ ರಾಜನ ಅಧಿಕಾರದಲ್ಲಿ ಕೈಹಾಕಿದಂತಾಗುವುದೆಂದು ರಾಜಪಕ್ಷದವರ ಅಭಿಪ್ರಾಯವು. ಅವರಿಗೆ ಜೇಮ್ಸನ ವಿರುದ್ಧಪಕ್ಷದವರ ವಿನಂತಿಪತ್ರವನ್ನು ಕಳಿಸುವ ಪದ್ಧತಿ ಹೇಯವಾಗಿ ತೋರಿತು. ಆದುದರಿಂದ ಅವರಿಗೆ ಅಬ್ಹಾರರ್ಸ (ಅಬ್ಹಾರ್=ಹೇಯವಾಗಿ ಎಣಿಸು) ಎಂಬ ಹೆಸರು ಬಂದಿತು. ಮುಂದೆ ಇವೆರಡೂ ಪಕ್ಷಗಳು ಒಂದಕ್ಕೊಂದು ಕುಚೇಷ್ಟೆಗೋಸುಗ **ವ್ಹಿಗ್ ಮತ್ತು ಟೋರಿ** ಎಂಬ ಹೆಸರನ್ನು ಕೊಟ್ಟುವು. **ಪಿಟಿಶನರ್ ಜನರಿಗೆ ವ್ಹಿಗ್ ಮತ್ತು ಅಬ್ಹಾರರ್ ಜನರಿಗೆ ಟೋರಿ** ಎಂಬ ಹೆಸರುಗಳು ಬಂದುವು. ವ್ಹಿಗ್ ಎಂಬ ಹೆಸರು ೨ನೆಯ ಚಾರ್ಲಸನ ಆಳ್ಕೆಯಲ್ಲಿ ಪಾಸಾದ ಧಾರ್ಮಿಕ ವಿಷಯದ ಕಾಯ್ದೆಯನ್ನು (ಕ್ಲೆರೆಂಡನ್ ಅಕ್ಟನ್ನು) ವಿರೋಧಿಸುವ ಸ್ಕಾಟಲಂಡಿನಲ್ಲಿಯ ಪ್ರೆಸ್ಬಿಟೇರಿಯನ್ ಪಂಥದ ಕಾವೆನೆಂಟರ್ಸ ಎಂಬ ಜನರಿಗೆ ಮೊದಲು ಕೊಡಲ್ಪಟ್ಟಿತು. ಮುಂದೆ ರಾಜನನ್ನು ವಿರೋಧಿಸುವ ಪಕ್ಷದವರು ಈ ಹೆಸರಿನಿಂದ ಕರೆಯಲ್ಪಡಲಾರಂಭಿಸಿದರು. ಟೋರಿ ಎಂಬ ಹೆಸರು ಇಂಗ್ಲಂಡಿನಲ್ಲಿ ಲೋಕಸತ್ತಾಕ ರಾಜ್ಯವು ಸ್ಥಾಪಿಸಲ್ಪಟ್ಟ ಬಳಿಕ (೧೬೪೯) ಬಂಡನ್ನು ಹೂಡಿದುದರಿಂದ ಭೂಮಿಗಳನ್ನು ಕಳಕೊಂಡು ನ್ಯಾಯಬಾಹ್ಯರಾಗಿ (out-law)

ಮಾಡಲ್ಪಟ್ಟ ಐರ್ಲಂಡಿನಲ್ಲಿಯ ರೋಮನ್ ಕ್ಯಾಥಲಿಕ್ ಜನರಿಗೆ ಮೊದಲು ಕೊಡಲ್ಪಟ್ಟಿತು. ಮುಂದೆ ರಾಜಪಕ್ಷದ ಜನರು ಆ ಹೆಸರಿನಿಂದ ಕರೆಯಲ್ಪಡಲಾರಂಭಿಸಿದರು. ವ್ಹಿಗ್ ಮತ್ತು ಟೋರಿ ಶಬ್ದಗಳ ಮೂಲ ಅರ್ಥವು ಕೆಟ್ಟದಿದ್ದರೂ ಮುಂದೆ ಆ ಕೆಟ್ಟತನವು ಅಳಿದು ಆ ಆ ಪಕ್ಷದವರು ಅಭಿಮಾನದಿಂದ ಆ ಆ ಹೆಸರನ್ನು ಧರಿಸಲಾರಂಭಿಸಿದರು. ಇವು ಮುಂದೆ ರಾಜಕೀಯ ಪಕ್ಷಗಳ ರೂಢವಾದ ಹೆಸರುಗಳಾದುವು.

**ರಾಯ ಹೌಸ್ ಪ್ಲಾಟ್** (ಒಳಸಂಚು)—೧೬೮೧ರಲ್ಲಿ ಪಾರ್ಲಿಮೆಂಟ ಸಭೆಯನ್ನು ವಿಸರ್ಜಿಸಿದ ಬಳಿಕ ಮತ್ತೆ ಸಭೆಯನ್ನು ಕರೆಯದೆ ಚಾರ್ಲಸನು ರಾಜ್ಯಕಾರಭಾರವನ್ನು ಸಾಗಿಸಿದನು. ಅವನ ಈ ನೀತಿ ವ್ಹಿಗ್ ಪಕ್ಷದವರಿಗೆ ಸರಿದೋರಲಿಲ್ಲ. ಆದುದರಿಂದ ಅವರಲ್ಲಿ ಕೆಲವರು ಒಂದು ಒಳಸಂಚನ್ನು ಹೂಡಿದರು (೧೬೮೩). ಚಾರ್ಲಸನು ಶರ್ಯತ್ತಿನಿಂದ ತಿರುಗಿ ಬರುವಾಗ **ರಾಯ ಹೌಸ್ ಹೊಲದ** ಬಳಿಯಲ್ಲಿ ಅವನ ಕೊಲೆಮಾಡಿ ಅವನ ದಾಸಿಯ ಪುತ್ರನಾದ **ಜೇಮ್ಸ್** (ಡ್ಯೂಕ್ ಆಫ್ ಮನ್‌ಮಥ್) ಇವನಿಗೆ ಪಟ್ಟಗಟ್ಟಬೇಕೆಂದು ಸಂಚುಗಾರರು ಯೋಚಿಸಿದ್ದರು. ಆದರೆ ಈ ಸಂಚು ಬೈಲಿಗೆ ಬಂದಿತು ಮತ್ತು ಅದರಲ್ಲಿ ಅಂಗವಿದ್ದ ಸಿಡ್ನೆ, ರಸೆಲ್ ಮೊದಲಾದ ವ್ಹಿಗ್ ಪಕ್ಷದ ಕೆಲ ಜನರು ಶೂಲಕ್ಕೇರಿಸಲ್ಪಟ್ಟರು.

**ಚಾರ್ಲಸನ ಕೊನೆಯ ದಿನಗಳು**—ರಾಯ ಹೌಸ್ ಒಳಸಂಚನ್ನು ಮುರಿದ ಬಳಿಕ ಚಾರ್ಲಸನು ಅನಿಯಂತ್ರಿತವಾಗಿ ರಾಜ್ಯಕಾರಭಾರವನ್ನು ಮಾಡತೊಡಗಿದನು. ಮುಂದೆ ಅವನು ಪಾರ್ಲಿಮೆಂಟಿನ ಸಭೆಯನ್ನು ಕರೆಯಲಿಲ್ಲ. ರೋಮನ್ ಕೆಥಲಿಕ್ ಪಂಥದ ಪ್ರಸಾರವನ್ನು ಮಾಡಲು ಅವನು ತನ್ನ ಶಾಶ್ವತ ಸೈನ್ಯವನ್ನು ಹೆಚ್ಚಿಸಿದನು. ಈ ಬಗೆಯಾಗಿ ತನ್ನ ಸತ್ತೆಯನ್ನು ಬೆಳೆಯಿಸಲು ಚಾರ್ಲಸನು ಪ್ರಯತ್ನಿಸುತ್ತಿರುವಾಗ ೧೬೮೫ರಲ್ಲಿ ಫೆಬ್ರುವರಿ ತಿಂಗಳಲ್ಲಿ ಒಮ್ಮಿಂದೊಮ್ಮೆ ಬೇನೆಗೆ ಗುರಿಯಾಗಿ ತನ್ನ ವಯಸ್ಸಿನ ೫೫ನೆಯ ವರ್ಷ ಮರಣ ಹೊಂದಿದನು. ಮರಣದ ಕಾಲದಲ್ಲಿ ತಾನು ರೋಮನ್ ಕಥಲಿಕ್ ಪಂಥದವನು ಇರುವೆನೆಂದು ಅವನು ಬಹಿರಂಗವಾಗಿ ಒಪ್ಪಿಕೊಂಡನು.

**ಉಳಿದ ಸಂಗತಿಗಳು**—ಚಾರ್ಲಸನ ಆಳ್ಕೆಯಲ್ಲಿ ಲಂಡನಿನ ಬೀದಿಗಳಲ್ಲಿ ದೀಪಗಳನ್ನು ಹಚ್ಚುವ ವ್ಯವಸ್ಥೆ (೧೬೮೪) ಮೊದಲು ಪ್ರಾರಂಭವಾಯ್ತು. ಅಂಚೆಯ ಮುಖಾಂತರವಾಗಿ ಪತ್ರಗಳನ್ನು ಮುಟ್ಟಿಸುವ ಸರ್ವಾಧಿಕಾರವು ಜೇಮ್ಸ್ ಡ್ಯೂಕ್ ಆಫ್ ಯಾರ್ಕ ಇವನಿಗೆ ಕೊಡಲ್ಪಟ್ಟಿತು. ೧೬೬೦ರಲ್ಲಿ ಆದ "ಲಾಯ

ಸೆನ್ಸಿಂಗ ಆಕ್ಟ್" ಕಾಯ್ದೆಯಿಂದ ವೃತ್ತಪತ್ರಗಳ ಮೇಲೆ ನಿಯಂತ್ರಣವು ಹಾಕಲ್ಪಟ್ಟುದರಿಂದ ಎಷ್ಟೋ ವೃತ್ತಪತ್ರಗಳು ನಿಂತುವು. "ಲಂಡನ್ ಗ್ಯಾಝೆಟ್" ಮತ್ತು "ಆಬ್ಝರ್ವರ್" ಈ ಎರಡು ವೃತ್ತಪತ್ರಗಳಿಗೆ ಲಾಯಸೆನ್ಸು (ಅಪ್ಪಣೆ) ದೊರೆತಿತ್ತು. ಶಾಸ್ತ್ರೀಯ ಜ್ಞಾನವನ್ನು ಹೆಚ್ಚಿಸಲು 'ರಾಯಲ್ ಸೊಸಾಯಟಿ' ಎಂಬ ಸಂಸ್ಥೆ ಸ್ಥಾಪಿಸಲ್ಪಟ್ಟಿತು. **ಸರ್ ಐಝಿಕ್ ನ್ಯೂಟನನು** ೨೪ ವರ್ಷಗಳವರೆಗೆ ಈ ಸಂಸ್ಥೆಯ ಅಧ್ಯಕ್ಷನಾಗಿದ್ದನು. ೧೬೬೮ರಲ್ಲಿ ಚಾರ್ಲಸನು ಮುಂಬಯಿ ನಡುಗಡ್ಡೆಯನ್ನು ಈಸ್ಟ ಇಂಡಿಯಾ ಕಂಪನಿಗೆ ವರ್ಷಕ್ಕೆ ೧೦ ಪೌಂಡಿನಂತೆ ಬಾಡಿಗೆಯಿಂದ ಕೊಟ್ಟನು. **ಪ್ಯುರಿಟನ್** ಪಂಥದ ಅನುಯಾಯಿಯಾದ **ಜಾನ್ ಬನಿಯನ್** ಎಂಬವನು ಕಾರಾಗೃಹದಲ್ಲಿದ್ದಾಗ **ಯಾತ್ರಿಕರ ಪ್ರವಾಸ** (Pilgrim's Progress) ಎಂಬ ಪುಸ್ತಕವನ್ನು ಬರೆದನು. ಅದರಂತೆ ಚಾರ್ಲಸನ ಮಂತ್ರಿಯಾದ **ಕ್ಲರೆಂಡನನು "ದೊಡ್ಡ ಬಂಡಿನ ಇತಿಹಾಸವು"** (History of the Great Rebellion) ಎಂಬ ಗ್ರಂಥವನ್ನು ಬರೆದನು.

---

## ಸಾರಾಂಶವು

### ೨ನೆಯ ಚಾರ್ಲಸನು (೧೬೬೦—೧೬೮೫).

೨ನೆಯ ಚಾರ್ಲಸನು ಅನುಸರಿಸಿದ ನೀತಿ—

(೧) ಇಂಗ್ಲಂಡನ್ನು ಬಿಟ್ಟುಹೋಗುವ ಪ್ರಸಂಗವು ತನಗೆ ಬರಬಾರದೆಂದು ಪಾರ್ಲಿಮೆಂಟಿನೊಡನೆ ಮಿತ್ರತ್ವದಿಂದ ಇದ್ದುಕೊಂಡು ತನಗೆ ಬೇಕಾದಂತೆ ರಾಜ್ಯಕಾರಭಾರವನ್ನು ಮಾಡುವುದು, ಮತ್ತು ಪಾರ್ಲಿಮೆಂಟನ್ನು ಅವಲಂಬಿಸಿರುವ ಅವಶ್ಯಕತೆ ಉಂಟಾಗದಂತೆ ಮಾಡುವುದು.

(೨) ರೋಮನ್ ಕೆಥಲಿಕ್ ಪಂಥದವರಿಗೆ ಅನುಕೂಲತೆಗಳನ್ನು ಒದಗಿಸುವುದು, ಮತ್ತು ಶಕ್ಯವಾದರೆ ಇಂಗ್ಲಂಡಿನಲ್ಲಿ ರೋಮನ್ ಕೆಥಲಿಕ್ ಪಂಥದ ಪ್ರಸಾರವನ್ನು ಮಾಡುವುದು.

೨ನೆಯ ಚಾರ್ಲಸನು ಮತ್ತು ಪಾರ್ಲಿಮೆಂಟು—

೧೬೬೦—ಕನ್ವೆನ್ಶನ್ ಪಾರ್ಲಿಮೆಂಟು.

ಹಿಂದಿನ ಅಂತಃಸ್ಥ ಯುದ್ಧದಲ್ಲಿ ರಾಜನ ವಿರುದ್ಧವಾಗಿ ಭಾಗವಹಿಸಿದವರಿಗೆ ಕ್ಷಮೆ. ಸರಂಜಾಮಿ ಪದ್ಧತಿಯ ಎಲ್ಲ ಕರಗಳು ರದ್ದುಗೊಳಿಸಲ್ಪಟ್ಟುವು. ಸರಂಜಾಮಿ ಪದ್ಧತಿಯಿಂದ ರಾಜನಿಗೆ ಈವರೆಗೂ ದೊರೆಯುತ್ತಿದ್ದ ಎಷ್ಟೋ ಉತ್ಪನ್ನದ ಬಾಬುಗಳು ರದ್ದುಗೊಳಿಸಲ್ಪಟ್ಟುವು. ಮತ್ತು ಅದರ ಬದಲು ಅವ

ನಿಗೆ ಬದುಕಿರುವವರೆಗೆ ವರ್ಷಕ್ಕೆ ೧೨ ಲಕ್ಷ ಪೌಂಡುಗಳನ್ನು ಕೊಡಬೇಕೆಂದು ನಿರ್ಣಯಿಸಲ್ಪಟ್ಟಿತು.

೧೬೬೧—೭೯ ಚಾರ್ಲಸನ ಮೊದಲನೆಯ ಪಾರ್ಲಿಮೆಂಟು (ಕೆವೇಲಿಯರ್ ಪಾರ್ಲಿಮೆಂಟು)—

೧೬೬೧—೬೫ ಧಾರ್ಮಿಕ ಕಾಯದೆಗಳು: (ಕ್ಲೆರೆಂಡನ್ ಕೋಡ್)—ಕಾರ್ಪೊರೇಶನ್ ಕಾಯದೆ (೧೬೬೧), ಯುನಿಫಾರ್ಮಿಟಿ ಕಾಯದೆ (೧೬೬೨), ಕಾನವೆಂಟಿಕಲ್ ಕಾಯದೆ (೧೬೬೪), ಫೈವ್ ಮೈಲ್ಸ ಕಾಯದೆ (೧೬೬೫).

೧೬೬೫. ಡಚ್ ಜನರೊಡನೆ ಯುದ್ಧಮಾಡಲು ಪಾರ್ಲಿಮೆಂಟು ಹಣವನ್ನು ಕೊಡಲೊಪ್ಪಿತು.

೧೬೭೩. ಟೆಸ್ಟ ಆಕ್ಟ—ಡೋವರಿನಲ್ಲಿ ಆದ ಗುಪ್ತ ಸಂಧಿಯಂತೆ (೧೬೭೦) ರೋಮನ್ ಕೆಥಲಿಕ್ ಜನರಿಗೆ ಅನುಕೂಲತೆಗಳನ್ನು ಒದಗಿಸಲು ಚಾರ್ಲಸನು "ಡಿಕ್ಲೇರೇಶನ್ ಆಫ್ ಇಂಡಲ್ಜನ್ಸ್" ಎಂಬ ಆಜ್ಞಾ ಪತ್ರವನ್ನು ಪ್ರಕಟಿಸಿದುದರಿಂದ ಪಾರ್ಲಿಮೆಂಟು 'ಟೆಸ್ಟ ಆಕ್ಟ' ಕಾಯದೆಯನ್ನು ಮಾಡಿತು. ಈ ಕಾಯದೆಯಂತೆ ರೋಮನ್ ಕ್ಯಾಥಲಿಕರಿಗೆ ಅಧಿಕಾರಸ್ಥಳಗಳು ದೊರೆಯಕೂಡದೆಂದು ನಿಯಮವಾಯಿತು.

೧೬೭೪. ಶಾಂತತೆಯ ಕಾಲದಲ್ಲಿ ಶಾಶ್ವತಸೈನ್ಯವನ್ನು ಇಡಕೂಡದು.

೧೬೭೮. ಡೆನ್ಬಿಯ ವಿಚಾರಣ. ಪಾರ್ಲಿಮೆಂಟು ವಿಸರ್ಜಿಸಲ್ಪಟ್ಟಿತು ೧೬೭೯ (ಜಾನೆವರಿ).

೧೬೭೯ ಚಾರ್ಲಸನ ೨ನೆಯ ಪಾರ್ಲಿಮೆಂಟು—

ಡೆನ್ಬಿಯ ವಿಚಾರಣೆ ಮತ್ತು ಆತನಿಗೆ ಸೆರೆಮನೆಯ ಶಿಕ್ಷೆ.

ಹೇಬಿಯಸ್ ಕಾರ್ಪಸ್ ಕಾಯದೆ (ವ್ಯಕ್ತಿಸ್ವಾತಂತ್ರ್ಯದ ಕಾಯದೆ).

ಎಕ್ಸ್‌ಕ್ಲೂಜನ್ ಕಾಯದೆಯ ಚರ್ಚೆ. ಪಾರ್ಲಿಮೆಂಟಿನ ವಿಸರ್ಜನವು.

ಲೋಕಪಕ್ಷದ ನಾಯಕನು ಶಿಪ್ಟ್ಸಬರಿ.

೧೬೭೯ ಚಾರ್ಲಸನ ೩ನೆಯ ಪಾರ್ಲಿಮೆಂಟು—

ಎಕ್ಸ್‌ಕ್ಲೂಜನ್ ಬಿಲ್ ಕಾಮನ್ಸ ಸಭೆಯಲ್ಲಿ ಪಾಸಾಯಿತು. ಆದರೆ ಲಾರ್ಡ್ಸ ಸಭೆಯಲ್ಲಿ ಅದಕ್ಕೆ ಸಮ್ಮತಿ ದೊರೆಯಲಿಲ್ಲ. ಲೋಕ ಪಕ್ಷದ ನಾಯಕನು ಶಿಪ್ಟ್ಸಬರಿ.

೧೬೮೧. ಎಕ್ಸ್‌ಕ್ಲೂಜನ್ ಬಿಲ್ಲಿನ ಚರ್ಚೆ. ಪಾರ್ಲಿಮೆಂಟಿನ ವಿಸರ್ಜನವು.

೧೬೮೧-೮೫. ಚಾರ್ಲಸನ ಅನಿಯಂತ್ರಿತ ಕಾರಭಾರವು. ಪಾರ್ಲಿಮೆಂಟಿನ ಸಭೆಯಿಲ್ಲ.

ಚಾರ್ಲ್ಸನ ಪರರಾಷ್ಟ್ರೀಯ ನೀತಿ —

೧೬೬೫-೬೭. ವ್ಯಾಪಾರ ವಿಷಯಕ ಸ್ಪರ್ಧೆಯಿಂದ ಡಚ್‌ಜನರೊಡನೆ ೨ನೆಯ ಯುದ್ಧವು ಮತ್ತು ಇಂಗ್ಲಂಡಿನ ಪರಾಭವವು. ಬ್ರೇಡಾ ಎಂಬಲ್ಲಿ ಒಪ್ಪಂದವು (೧೬೬೭.). ಇಂಗ್ಲಂಡಿಗೆ ಡಚ್ ಜನರ ನ್ಯೂ ಆಮ್‌ಸ್ಟರ್ಡಂ ಎಂಬ ವಸಾಹತು ದೊರೆತುದು. ಮುಂದೆ ಇದಕ್ಕೆ ನ್ಯೂಯಾರ್ಕ ಎಂಬ ಹೆಸರು.

೧೬೬೮. ಹಾಲಂಡ, ಸ್ವೀಡನ್ ಮತ್ತು ಇಂಗ್ಲಂಡ್ ಇವುಗಳ 'ತ್ರಿಕೂಟವು'.

೧೬೭೦. ೧೪ನೆಯ ಲುಯಿಯೊಡನೆ ಡೋವರ್ ಎಂಬಲ್ಲಿ ಗುಪ್ತಸಂಧಿ ಮತ್ತು ಇಂಗ್ಲಂಡಿನಲ್ಲಿ ರೋಮನ್ ಕೆಥಲಿಕ್ ಪಂಥದ ಸ್ಥಾಪನೆಗೋಸುಗ ೧೪ನೆಯ ಲುಯಿಯ ಸಾಹಾಯ್ಯವು.

೧೬೭೨-೭೪. ಡಚ್‌ಜನರೊಡನೆ ೩ನೆಯ ಯುದ್ಧವು. ಗುಪ್ತಸಂಧಿಯಂತೆ ಚಾರ್ಲ್ಸನು ಡಚ್‌ಜನರೊಡನೆ ಯುದ್ಧಮಾಡಿದನು.

೧೬೭೪-೭೮. "ಡಚ್‌ಜನರೊಡನೆ ಸಖ್ಯವು ಮತ್ತು ಫ್ರಾನ್ಸಿನೊಡನೆ ವೈರವು" ಇದು ಪಾರ್ಲಿಮೆಂಟಿನ ನೀತಿ. ೧೬೭೭ರಲ್ಲಿ ಹಾಲಂಡಿನ ರಾಜಪುತ್ರ ವಿಲಿಯಮನೊಡನೆ ಜೇಮ್ಸನ ಮಗಳಾದ ಮೇರಿಯ ಮದುವೆ.

೧೬೭೮. ಪಾರ್ಲಿಮೆಂಟಿನ ಈ ನೀತಿಯನ್ನು ಕಂಡು ೧೪ನೆಯ ಲುಯಿ ಚಾರ್ಲ್ಸನೊಡನೆ ಮತ್ತೊಂದು ಗುಪ್ತಸಂಧಿಯನ್ನು ಮಾಡಿಕೊಂಡನು. ಅದಕ್ಕೆ ಡೆನ್ಬಿಯ ಸಮ್ಮತಿ. ಅದಕ್ಕೋಸುಗ ಪಾರ್ಲಿಮೆಂಟಿನಿಂದ ಡೆನ್ಬಿಯ ವಿಚಾರಣೆ. ಅವನಿಗೆ ಕಾರಾಗೃಹವಾಸವು (೧೬೭೯).

ಚಾರ್ಲ್ಸನ ಧಾರ್ಮಿಕ ನೀತಿ.

೧೬೬೧-೧೬೬೫. ಕ್ಲೆರೆಂಡನನ ಪ್ರೇರಣೆಯಿಂದ ಪಾರ್ಲಿಮೆಂಟು ಧಾರ್ಮಿಕ ಕಾಯ್ದೆಗಳನ್ನು ಮಾಡಿತು, ಮತ್ತು ಎಪಿಸ್ಕೊಪೇಲಿಯನ್ ಪಂಥದಲ್ಲದವರನ್ನು ಶಾಸನಕ್ಕೆ ಗುರಿಮಾಡಲು ಪ್ರಯತ್ನಿಸಿತು.

ಇಂಗ್ಲಂಡಿನಲ್ಲಿ ರೋಮನ್ ಕೆಥಲಿಕ್ ಪಂಥದ ಪ್ರಸಾರವನ್ನು ಮಾಡುವುದು, ಮತ್ತು ಅದು ಶಕ್ಯವಾಗದಿದ್ದರೆ ಆ ಪಂಥದವರಿಗೆ ಧಾರ್ಮಿಕ ಅನುಕೂಲತೆಗಳನ್ನು ಕಲ್ಪಿಸುವುದು, ಇದು ಚಾರ್ಲ್ಸನ ನೀತಿಯಾಗಿತ್ತು.

೧೬೭೦. ಡೋವರಿನ ಗುಪ್ತಸಂಧಿ. ಇಂಗ್ಲಂಡಿನಲ್ಲಿ ರೋಮನ್ ಕೆಥಲಿಕ್ ಪಂಥದ ಪ್ರಸಾರವನ್ನು ಮಾಡಬೇಕೆಂಬ ಮುಖ್ಯ ಕರಾರವು.

೧೬೭೨. ಡಿಕ್ಲೆರೇಶನ್ ಆಫ್ ಇಂಡಲ್ಜನ್ಸ — ರೋಮನ್ ಕೆಥಲಿಕರು ಮತ್ತು ಪುರಿಟನರು ಧಾರ್ಮಿಕ ಕಾಯ್ದೆಗಳನ್ನು ಮುರಿದರೆ ಅವರಿಗೆ ಕ್ಷಮೆ ದೊರೆಯಬೇಕೆಂದು ಚಾರ್ಲ್ಸನ ಪ್ರಕಟನೆ.

೧೬೭೩. ಟೆಸ್ಟ ಆಕ್ಟ. ರೋಮನ್ ಕೆಥಲಿಕರಿಗೆ ಯಾವ ಅಧಿಕಾರ ಸ್ಥಳವೂ ದೊರೆಯಕೂಡದೆಂದು ನಿಯಮವು. ಚಾರ್ಲಸನ ತಮ್ಮನಾದ ಜೇಮ್ಸನು ಹಡಗುಪಡೆಯ ಅಧಿಕಾರವನ್ನು ಬಿಡ ಬೇಕಾಯ್ತು.

೧೬೭೮. ರೋಮನ್ ಕೆಥಲಿಕರು ಚಾರ್ಲಸನ ವಿರುದ್ಧವಾಗಿಯೂ ಪ್ರಾಟೆಸ್ಟಂಟ ಪಂಥದವರ ವಿರುದ್ಧವಾಗಿಯೂ ಸಂಚನ್ನು ರಚಿಸಿರು ವರೆಂದು ಟಾಯಟಸ್ ಓಟ್ಸನು ಅಪವಾದವನ್ನು ಹುಟ್ಟಿಸಿದನು.

೧೬೮೫. ಚಾರ್ಲಸನು ಮರಣ ಸಮಯದಲ್ಲಿ ತಾನು ರೋಮನ್ ಕ್ಯಾಥ ಲಿಕನೆಂದು ಒಪ್ಪಿದನು.

ತತ್ಕಾಲೀನ ಪ್ರಮುಖ ಪುರುಷರು.

ಚಾರ್ಲಸನ ಮಂತ್ರಿಗಳು —

೧೬೬೦-೧೬೬೭. ಕ್ಲೆರೆಂಡನ್—'ಕ್ಲೆರೆಂಡನ್ ಕೋಡ' ಎಂಬ ಧಾರ್ಮಿಕ ಕಾಯ್ದೆ. ಅವನಿಗೆ ಹದ್ದುಪಾರಿನ ಶಿಕ್ಷೆ. ಹದ್ದುಪಾರಿನಲ್ಲಿರು ವಾಗ ಅವನು ಬಂಡಿನ ಇತಿಹಾಸವನ್ನು ಬರೆದನು.

೧೬೬೭-೧೬೭೩. ಕೇಬಲ್ ಮಂತ್ರಿಮಂಡಲವು—ಕ್ಲಿಫರ್ಡ, ಅರ್ಲಿಂಗ್ಟನ್, ಬಕಿಂಗಹಮ್, ಆಶ್ಲೆ (ಶೆಪ್ಟ್ಸಬರಿ), ಲಾಡರ್ಡೇಲ್.

೧೬೭೩-೧೬೭೯. ಡ್ಯಾನ್ಬಿಯ ಕಾರಭಾರವು. ಫ್ರಾನ್ಸಿನೊಡನೆ ಗುಪ್ತಸಂಧಿಯನ್ನು ಮಾಡುವುದರಲ್ಲಿ ಅತನ ಅಂಗವಿತ್ತೆಂದು ಪಾರ್ಲಿಮೆಂಟು ವಿಚಾ ರಣೆಯನ್ನು ನಡೆಯಿಸಿ ಅವನನ್ನು ಸೆರೆಮನೆಗೆ ಅಟ್ಟಿತು.

ಪಾರ್ಲಿಮೆಂಟಿನ ಮುಂದಾಳುಗಳು —

೧೬೭೩-೧೬೮೩. ಶೆಫ್ಟ್ಸಬರಿ (ಆಶ್ಲೆ.) ಇವನು ಮೊದಲು ಕೇಬಲ್ ಮಂತ್ರಿ ಮಂಡಲದ ಸದಸ್ಯನಾಗಿದ್ದನು. ಆದರೆ ಮುಂದೆ ಪಾರ್ಲಿ ಮೆಂಟ್ ಪಕ್ಷವನ್ನು ಕೂಡಿದನು. ಟೆಸ್ಟ ಆಕ್ಟ, ಹೇಬಿಯಸ್ ಕಾರ್ಪಸ ಆಕ್ಟ, ಈ ಕಾಯ್ದೆಗಳು ಇವನ ಪ್ರೇರಣೆಯಿಂದಾದುವು. ಎಕ್ಸ್‌ಕ್ಲೂಜನ ಬಿಲ್ಲಿನ ವಿಷಯದಲ್ಲಿ ಇವನು ಪ್ರಯತ್ನಿಸಿದನು.

ರಸೆಲ್ ಮತ್ತು ಸಿಡ್ನಿ — ಚಾರ್ಲಸನ ತರುವಾಯವಲ್ಲಿ ಡ್ಯೂಕ್ ಆಫ್ ಮಾನ್‌ಮಥನಿಗೆ ಪಟ್ಟವು ದೊರೆಯಬೇಕೆಂದು ಪ್ರಯತ್ನಿಸಿದರು. ರಾಯ್ ಹೌಸ ಸಂಚಿನಲ್ಲಿ ಅವರ ಅಂಗವಿತ್ತೆಂದು ಅವರಿಗೆ ಮರಣದಂಡನೆ.

ಬೇರೆಯವರು —

ಟಾಯಟಸ್ ಓಟ್ಸ — ರೋಮನ್ ಕೆಥಲಿಕರು ಚಾರ್ಲಸನ ಮತ್ತು ಪಾರ್ಲಿಮೆಂಟಿನ ವಿರುದ್ಧವಾಗಿ ಸಂಚನ್ನು ಹೂಡಿರುವರೆಂದು ಅಪವಾದವನ್ನು ಹುಟ್ಟಿಸಿದ ಒಬ್ಬ ಉಪಾಧ್ಯಾಯ.

ನ್ಯೂಟನ್ (೧೬೪೨-೧೭೨೭)—ಪ್ರಖ್ಯಾತ ಶಾಸ್ತ್ರಜ್ಞನು ರಾಯಲ್ ಸೊಸೈಟಿಯ ಅಧ್ಯಕ್ಷನು (೨೪ ವರ್ಷಗಳವರೆಗೆ).

ಜಾನ್ ಬನಿಯನ್—'ಯಾತ್ರಿಕನ ಪ್ರವಾಸ'ವೆಂಬ ಗ್ರಂಥದ ಲೇಖಕನು. ಪ್ಯೂರಿಟನ್ ಪಂಥದವನು.

ಯಾರಿಗೋಸುಗ ಒಳಸಂಚುಗಳು ನಡೆದುವೊ ಅವರು—

ಜೇಮ್ಸ್ ಡ್ಯೂಕ್ ಆಫ್ ಯಾರ್ಕ್—ಚಾರ್ಲಸನ ತಮ್ಮನು. ಹಡಗುಪಡೆಯ ಮುಖ್ಯಾಧಿಕಾರಿ. ಕೆಥಲಿಕ್ ಪಂಥದವರ ಬೆಂಬಲವು ಇವನಿಗಿದ್ದಿತು.

ಡ್ಯೂಕ್ ಆಫ್ ಮನ್‌ಮಥ್—ಚಾರ್ಲಸನ ದಾಸೀಪುತ್ರನು. ವ್ಹಿಗ್ ಮತ್ತು ಪ್ರಾಟೆಸ್ಟಂಟ್ ಪಂಥದವರ ಬೆಂಬಲವು ಈತನಿಗಿದ್ದಿತು.

ರಾಜಕೀಯ ಪಕ್ಷಗಳು—

ವ್ಹಿಗ್ ಮತ್ತು ಟೋರಿ. ವ್ಹಿಗ್ ಪಕ್ಷವು ಲೋಕಪಕ್ಷವು. ಈ ಪಕ್ಷದವರು ಪ್ರಾಟೆಸ್ಟಂಟ್ ಪಂಥದ ಅಭಿಮಾನಿಗಳು. ಚಾರ್ಲಸನ ತರುವಾಯದಲ್ಲಿ ಜೇಮ್ಸನಿಗೆ ಪಟ್ಟವು ದೊರೆಯಬಾರದೆಂದು ಅವರ ಅಭಿಪ್ರಾಯವು. ಟೋರಿ ಪಕ್ಷವು ರಾಜಪಕ್ಷವು. ಪ್ರಾರಂಭದಲ್ಲಿ ತಿರಸ್ಕಾರವ್ಯಂಜಕವಾದ 'ವ್ಹಿಗ್' ಮತ್ತು 'ಟೋರಿ' ಹೆಸರುಗಳು ಮುಂದೆ ರಾಜಕೀಯ ಪಕ್ಷಗಳ ರೂಢವಾದ ಹೆಸರುಗಳಾದುವು.

---

# ೧೨ನೆಯ ಪ್ರಕರಣವು

## ಎರಡನೆಯ ಜೇಮ್ಸನು

ಜನ್ಮವು ೧೬೩೩; ರಾಜ್ಯಾರೋಹಣವು (೫೨ನೆಯ ವರ್ಷದಲ್ಲಿ) ೧೬೮೫;
ಪದಚ್ಯುತಿ ೧೬೮೮.

೧೬೮೫—೧೬೮೮.

### ತತ್ಕಾಲೀನ ರಾಜ್ಯಕರ್ತರು.

**ಫ್ರಾನ್ಸ**
೧೪ನೆಯ ಲುಯಿ (೧೬೪೩—೧೭೧೫)

**ಸ್ಪೇನ**
೨ನೆಯ ಚಾರ್ಲಸ್

### ಮಹತ್ವದ ಇಸ್ವಿಗಳು

೧೬೮೫ ಮನ್‌ಮಥನ ಬಂಡು.
೧೬೮೮ ಡಿಕ್ಲೆರೇಶನ್ ಆಫ್ ಇಂಡಲ್ಜನ್ಸ.
೧೬೮೮ (ಜೂನ ೧೦) ಜೇಮ್ಸನಿಗೆ ಪುತ್ರಪ್ರಾಪ್ತಿ.
೧೬೮೮ (ಜೂನ ೩೦) ಏಳು ಬಿಶಪರು ದೋಷಮುಕ್ತರಾಗುವರು.
೧೬೮೮ (ಜೂನ ೩೦) ಆರೇಂಜದ ರಾಜಪುತ್ರ ವಿಲಿಯಮನಿಗೆ ಇಂಗ್ಲಂಡಿನ ಪಟ್ಟವನ್ನು ಸ್ವೀಕರಿಸಲು ನಿಮಂತ್ರಣವು.
೧೬೮೮ (ನವೆಂಬರ ೫) ವಿಲಿಯಮನು ಇಂಗ್ಲಂಡಿಗೆ ಬರುವನು.
೧೬೮೮ (ಡಿಸೆಂಬರ ೨೩) ೨ನೆಯ ಜೇಮ್ಸನು ರಾಜಪದವನ್ನು ತ್ಯಜಿಸಿ ಇಂಗ್ಲಂಡಿನಿಂದ ಓಡಿಹೋಗುವನು.
೧೬೮೯ (ಜಾನೆವರಿ) ಕನ್ವೆನ್ಶನ್ ಪಾರ್ಲಿಮೆಂಟಿನ ಅಧಿವೇಶನವು ಮತ್ತು "ಡಿಕ್ಲೆರೇಶನ್ ಆಫ್ ರೈಟ್ಸ" ಪತ್ರಿಕೆ.
೧೬೮೯ (ಫೆಬ್ರುವರಿ) ವಿಲಿಯಮ್ ಮತ್ತು ಮೇರಿ ಇವರು ಇಂಗ್ಲಂಡಿನ ರಾಜ್ಯಕರ್ತರೆಂದು ಘೋಷಣೆ.

**ಎರಡನೆಯ ಜೇಮ್ಸನು.**—೨ನೆಯ ಚಾರ್ಲಸನ ತರುವಾಯದಲ್ಲಿ ಅವನ ತಮ್ಮನಾದ ಜೇಮ್ಸನು ಪಟ್ಟಕ್ಕೆ ಬಂದನು. ೨ನೆಯ ಚಾರ್ಲಸನು ಬಲು ಎಚ್ಚರುಳ್ಳವನಾಗಿದ್ದನು. ಅವನು ಪ್ರಸಂಗಕ್ಕೆ ಅನುಕೂಲವಾಗಿ ವರ್ತಿಸುತ್ತ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿಯೂ ೨೫ ವರ್ಷಗಳ ವರೆಗೆ ರಾಜ್ಯವಾಳಲು ಸಮರ್ಥನಾದನು.

ಆದರೆ ಜೇಮ್ಸನು ಹೆಚ್ಚು ಸರಲಸ್ವಭಾವದವನು. ಒಳಗೊಂದು ಹೊರಗೊಂದು ಹೀಗೆ ಇಬ್ಬಗೆಯಾದ ವರ್ತನವು ಅವನದಿದ್ದಿಲ್ಲ. ಚಾರ್ಲಸನಂತೆ ಅವನು ವಿಲಾಸಿಯಾಗಿರಲಿಲ್ಲ. ಅವನ ಮಾತಿನಲ್ಲಿ ಸಂಬುಗೆಯಿಡಲು ಯಾರಿಗೂ ಸಂಶಯವು ಬರುತ್ತಿರಲಿಲ್ಲ. ರೋಮನ್ ಕಥಲಿಕ್ ಪಂಥದ ವಿಷಯದಲ್ಲಿ ಅವನಿಗೆ ನಿಜವಾದ ಪ್ರೇಮವಿದ್ದಿತು. ಅವನು ಅದನ್ನು ಮುಚ್ಚಿಡಲು ಯಾವಾಗಲೂ ಪ್ರಯತ್ನಿಸಲಿಲ್ಲ. ಸ್ಪನಿಶ್ ಮತ್ತು ಫ್ರೆಂಚ್ ಸೈನ್ಯಗಳೊಡನೆ ಯುದ್ಧಮಾಡಿ ವಿಜಯಿಯೋದ್ಧಾರನೆಂದು ಹೆಸರನ್ನು ಪಡೆದಿದ್ದನು. ಚಾರ್ಲಸನಿಗಿಂತ ಅವನ ಸ್ವಭಾವವು ಹೆಚ್ಚು ಒಳಿತಾಗಿದ್ದರೂ ಅವನಲ್ಲಿ ಕೆಲವು ದೋಷಗಳಿದ್ದುವು. ಅದರಿಂದ ಅವನು ಇಂಗ್ಲಿಶ್ ಜನತೆಯ ಪ್ರೇಮವನ್ನು ಸಂಪಾದಿಸಲು ಸಮರ್ಥನಾಗಲಿಲ್ಲ. ಅವನು ಗರ್ವಿಷ್ಠನಾಗಿದ್ದನು. ತನ್ನದೇ ನಡೆಯಬೇಕೆಂಬ ಹಟವು ಅವನಿಗಿದ್ದಿತು. ಅವನಿಗೆ ತನ್ನ ವಿದ್ವತ್ತೆಯ ಮತ್ತು ಕರ್ತೃತ್ವದ ವಿಷಯವಾಗಿ ಬಹು ಅಭಿಮಾನವಿದ್ದಿತು. ಎರಡನೆಯವರ ವಿಷಯದಲ್ಲಿ ಅವನಿಗೆ ಆದರವಿರಲಿಲ್ಲ. ದೂರದರ್ಶಿತ್ವವೂ ಮುತ್ಸದ್ದಿತನವೂ ಅವನಲ್ಲಿದ್ದಿಲ್ಲ. 'ರಾಜನ ಸತ್ತೆ ಈಶ್ವರದತ್ತವಾದುದು,' ಎಂಬೀ ತತ್ವದಲ್ಲಿ ಅವನಿಗೆ ವಿಶ್ವಾಸವಿದ್ದಿತು. ತನ್ನ ಸತ್ತೆ ಅನಿಯಂತ್ರಿತವಾಗಿರಬೇಕೆಂದೂ ಇಂಗ್ಲಂಡಿನಲ್ಲಿ ರೋಮನ್ ಕಥಲಿಕ್ ಪಂಥದ ಸ್ಥಾಪನೆಯಾಗಬೇಕೆಂದೂ ಅವನ ಮನೀಷೆಯಿತ್ತು. ಆದರೆ ಅವನಿಗೆ ತನ್ನ ಉದ್ದೇಶವನ್ನು ಸಾಧಿಸುವುದಾಗಲಿಲ್ಲ. ರಾಜಪದವನ್ನು ತ್ಯಜಿಸಿ ಅವನು ಇಂಗ್ಲಂಡಿನಿಂದ ಓಡಿಹೋಗಬೇಕಾಯಿತು.


ಎರಡನೆಯ ಜೇಮ್ಸನು

**ಅನುಕೂಲ ಪರಿಸ್ಥಿತಿ**—ಜೇಮ್ಸನು ಪಟ್ಟಕ್ಕೆ ಬಂದಾಗ ಅವನಿಗೆ ಅನುಕೂಲವಾದ ಪರಿಸ್ಥಿತಿ ಅನಾಯಾಸವಾಗಿ ಉಂಟಾಗಿತ್ತು. ಅವನಿಗೆ ಸ್ವಂತದ ಶಾಶ್ವತ ಸೈನ್ಯವಿದ್ದಿತು. ಫ್ರಾನ್ಸಿನ ೧೪ನೆಯ ಲುಯಿ ಹಣದ ಸಾಹಾಯ್ಯವನ್ನು

ಕೊಡಲೊಪ್ಪಿದ್ದನು. ರಾಯ ಹೌಸ್ ಸಂಚು ಮುರಿದ ಬಳಿಕ ವ್ಹಿಗ್ ಪಕ್ಷವು ವಿಸ್ಖಲಿತವಾಗಿ ಟೋರಿ ಪಕ್ಷದವರ ವರ್ಚಸ್ಸು ಬೆಳೆದಿತ್ತು. ಈ ಟೋರಿ ಪಕ್ಷವು ಆರಂಭದಲ್ಲಿ ಜೇಮ್ಸನಲ್ಲಿ ಸಂಪೂರ್ಣವಾಗಿ ನಂಬುಗೆಯಿಟ್ಟು ಬೆಂಬಲವಿತ್ತಿತು. ಆದರೆ ಅವನು ಸನದಶೀರ ಮಾರ್ಗವನ್ನು ಬಿಟ್ಟು, ಜನತೆಯ ಹಕ್ಕುಗಳನ್ನು ಸೆಳೆದು, ರೋಮನ್ ಕಥಲಿಕ್ ಪಂಥದ ಪ್ರಸಾರವನ್ನು ಮಾಡಲಾರಂಭಿಸಿದನು. ಇದರಿಂದ ಅವನಿಗೆ ಈ ಪಕ್ಷದ ಬೆಂಬಲವು ದೊರೆಯದಂತಾಯ್ತು. ಅವನು ಪಟ್ಟಕ್ಕೆ ಬಂದ ಬಳಿಕ ಕೂಡಿದ ಮೊದಲನೆಯ ಪಾರ್ಲಿಮೆಂಟಿನಲ್ಲಿ ಟೋರಿ ಪಕ್ಷದವರ ವರ್ಚಸ್ಸು ಹೆಚ್ಚಾಗಿದ್ದಿತು, ಆದುದರಿಂದ ಅವನು ಬದುಕಿರುವವರೆಗೆ ಅವನಿಗೆ ಬಹಳವಾಗಿ ವಾರ್ಷಿಕಧನವು ದೊರೆಯಬೇಕೆಂದು ಈ ಪಾರ್ಲಿಮೆಂಟು ನಿರ್ಣಯಿಸಿತು. ಜೇಮ್ಸನು ಚಾರ್ಲಸನ ಕಾಲದಲ್ಲಿದ್ದ ಟೋರಿ ಪಕ್ಷದ ಮಂತ್ರಿಗಳನ್ನು ತನ್ನ ಮಂತ್ರಿಗಳಾಗಿ ನಿಯೋಜಿಸಿದನು.

**ಮನ್‌ಮಥನ ಬಂಡು, ೧೬೮೫**—ಜೇಮ್ಸನಿಗೆ ಪಟ್ಟವು ದೊರೆತುದರಿಂದ ಮನ್‌ಮಥದ ಡ್ಯೂಕನಾದ ಜೇಮ್ಸನಿಗೂ ವ್ಹಿಗ್ ಪಕ್ಷದ ಜನರಿಗೂ ನಿರಾಶೆಯಾಯ್ತು. ರಾಯ ಹೌಸ್ ಸಂಚು ಮುರಿದ ಬಳಿಕ ಮನ್‌ಮಥನು ಹಾಲಂಡಿಗೆ ಓಡಿಹೋದನು. ಅಲ್ಲಿ ಸ್ಕಾಟಲಂಡಿನಿಂದ ಹದ್ದುಪಾರುಮಾಡಲ್ಪಟ್ಟ 'ಡ್ಯೂಕ್ ಆಫ್ ಅಗರ್ಾಯಿಲ್' ಎಂಬ ಸರದಾರನು ಅವನನ್ನು ಕೂಡಿದನು. ಬೇರೆ ಎಷ್ಟೋ ಜನರು ಚಾರ್ಲಸನ ಪೀಡೆಗೆ ಬೇಸತ್ತು ಹಾಲಂಡಿನಲ್ಲಿ ಬಂದಿದ್ದರು. ಅವರು ಇಂಗ್ಲಂಡಿನಲ್ಲಿಯೂ ಸ್ಕಾಟಲಂಡಿನಲ್ಲಿಯೂ ಜೇಮ್ಸನ ವಿರುದ್ಧವಾಗಿ ಬಂಡುಗಳನ್ನು ಹೂಡಿ ಮನ್‌ಮಥನಿಗೆ ಪಟ್ಟಗಟ್ಟಲು ಸಂಚನ್ನು ರಚಿಸಿದರು. ಜೇಮ್ಸನು ರೋಮನ್ ಕ್ಯಾಥಲಿಕನಿದ್ದುದರಿಂದ ಅವನ ವಿರುದ್ಧವಾಗಿ ತಮಗೆ ಇಂಗ್ಲಿಶ್ ಮತ್ತು ಸ್ಕಾಟಿಶ್ ಜನತೆಯಿಂದ ಸಾಹಾಯ್ಯವು ದೊರೆಯಬಹುದೆಂದು ಅವರು ಬಗೆದಿದ್ದರು. ಅಗರ್ಾಯಿಲನು ಸ್ಕಾಟಲಂಡಿಗೆ ಬಂದು ಅಲ್ಲಿಯ ಜನರನ್ನು ಬಂಡುಮಾಡಲು ಪ್ರೇರಿಸಿದನು. ಆದರೆ ಅವನು ಹಿಡಿಯಲ್ಪಟ್ಟು ಶೂಲಕ್ಕೇರಿಸಲ್ಪಟ್ಟನು. ೧೬೮೫ರಲ್ಲಿ (ಜೂನ ತಿಂಗಳಲ್ಲಿ) ಮನ್‌ಮಥನು ಡಾರ್‌ಸೆಟ್‌ಶಾಯರಿಗೆ ಬಂದನು. ಆಗ ಅವನ ಬಳಿಯಲ್ಲಿದ್ದ ಸೈನ್ಯವು ಬಹು ಅಲ್ಪವಾಗಿತ್ತು. 'ಇಂಗ್ಲಂಡಿನ ಧರ್ಮದ, ಕಾಯ್ದೆಗಳ ಮತ್ತು ಇಂಗ್ಲಿಶ್ ಜನರ ಹಕ್ಕುಗಳ ರಕ್ಷಣೆಗೋಸುಗ ನಾನು ಬಂದಿರುವೆನು. ಆದುದರಿಂದ ರೋಮನ್ ಕಥಲಿಕ್ ಪಂಥದವನಾದ ಜೇಮ್ಸನ ವಿರುದ್ಧವಾಗಿ ಪ್ರಾಟೆಸ್ಟಂಟ ಪಂಥದವರು ನನಗೆ ಸಾಹಾಯ್ಯವೀಯಬೇಕು' ಎಂದು ಮನ್‌ಮಥನು ಪ್ರಕಟನೆಯನ್ನು ಪ್ರಸಿದ್ಧಿಸಿದನು. ಆದರೆ

ಆದರಿಂದ ಅಷ್ಟೇನೂ ಉಪಯೋಗವಾಗಲಿಲ್ಲ. ಸರದಾರ ಮತ್ತು ಜಮೀನ್‌ದಾರ ಜನರಲ್ಲಿ ಯಾರೂ ಅವನ ನೆರವಿಗೆ ಹೋಗಲಿಲ್ಲ, ಆದರೆ ಒಕ್ಕಲಿಗರೂ ಕಣಿಗಳಲ್ಲಿ ಕೆಲಸಮಾಡುವ ಕೂಲಿಕಾರರೂ ಅವನಿಗೆ ಸಾಹಾಯ್ಯವಿತ್ತರು. ತನ್ನ ಈ ೫,೦೦೦ ಅನುಯಾಯಿಗಳೊಡನೆ ಮನ್‌ಮಥನು ಬ್ರಿಸ್ಟಲ್ ನಗರದತ್ತ ಸಾಗುತ್ತಿರುವಾಗ **ಜಾನ್ ಚರ್ಚಿಲನ** (ಮುಂದೆ ಇವನು **ಡ್ಯೂಕ ಆಫ್ ಮಾರ್ಲಬರೊ** ಎಂದು ಪ್ರಸಿದ್ಧನಾದನು) ನೇತೃತ್ವದಲ್ಲಿಯ ರಾಜಸೈನ್ಯವು **ಸೆಜಮೂರ** (Sedgemoor) ಎಂಬಲ್ಲಿ ಅವನನ್ನು ಇದಿರಿಸಿ ಸಂಪೂರ್ಣವಾಗಿ ಸೋಲಿಸಿತು (೧೬೮೫ ಜುಲೈ). ಮನ್‌ಮಥನು ಹಿಡಿಯಲ್ಪಟ್ಟು ಮುಂದೆ ಶೂಲಕ್ಕೇರಿಸಲ್ಪಟ್ಟನು.

ಮನ್‌ಮಥನ ಬಂಡು ಈ ಬಗೆಯಾಗಿ ಮುರಿದ ಬಳಿಕ ಅವನಿಗೆ ಸಾಹಾಯ್ಯವಿತ್ತ ಸಾವಿರಾರು ಒಕ್ಕಲಿಗರ ವಿಚಾರಣೆಗೋಸುಗ **ಜೆಫ್ರಿಜನೆಂಬ** ನ್ಯಾಯಾಧೀಶನನ್ನು ಜೇಮ್ಸನು ಕಳಿಹಿದನು. ಜೆಫ್ರಿಜನು ವಿಚಾರಣೆಯ ನಾಟಕವನ್ನು ಮಾಡಿ ೩೦೦ ಜನರಿಗೆ ಮರಣಶಿಕ್ಷೆಯನ್ನು ವಿಧಿಸಿದನು, ಮತ್ತು ೮೦೦ ಜನರನ್ನು ಗುಲಾಮರಾಗಿ ಮಾಡಿ ಜಮೇಕಾ ಮತ್ತು ಬಾರಬೆಡಾಸ್ ಎಂಬ ನಡುಗಡ್ಡೆಗಳಲ್ಲಿಯ ತೋಟಗಳಲ್ಲಿ ಕೆಲಸಮಾಡಲು ಕಳಿಹಿದನು. ಜೆಫ್ರಿಜನ ಈ ಕ್ರೂರ ಕೃತಿಯಿಂದ ಇಂಗ್ಲಿಶ್ ಜನತೆ ಅತ್ಯಂತವಾಗಿ ತ್ವೇಷಗೊಂಡಿತು. ಆದರೆ ಜೇಮ್ಸನು ಸಂತುಷ್ಟನಾಗಿ ಅವನನ್ನು **ಲಾರ್ಡ ಹಾಯ್ ಚಾನ್ಸೆಲರನಾಗಿ** ಮಾಡಿ ಅವನಿಗೆ ಮಂತ್ರಿಪದವನ್ನಿತ್ತನು.

**ಜೇಮ್ಸನ ಅನ್ಯಾಯವೂ ಅನಿಯಂತ್ರಿತವೂ ಆದ ಆಳ್ಕೆ**—ಮನ್‌ಮಥನ ಬಂಡು ಮುರಿಯಿತು, ಇನ್ನು ತಾನು ಅನಿಯಂತ್ರಿತವಾಗಿ ಆಳಬಹುದೆಂದೂ ರೋಮನ್ ಕಥಲಿಕ್ ಪಂಥದ ಪ್ರಸಾರವನ್ನು ಮಾಡಲು ತನಗೆ ಹಗುರಾಗಬಹುದೆಂದೂ ಜೇಮ್ಸನು ಬಗೆದನು. ೧೬೭೩ರಲ್ಲಿ ಆದ ಟೆಸ್ಟ್ ಆಕ್ಟಿನ ಪ್ರತಿಬಂಧದಿಂದ ರೋಮನ ಕ್ಯಾಥಲಿಕ್ ಜನರಿಗೆ ಚರ್ಚಿನಲ್ಲಿಯೂ ರಾಜ್ಯದ ಆಡಳಿತೆಯಲ್ಲಿಯೂ ಅಧಿಕಾರಸ್ಥಳಗಳು ದೊರೆವಂತಿರಲಿಲ್ಲ. ಆದುದರಿಂದ ಈ ಕಾಯ್ದೆಯನ್ನು ರದ್ದುಗೊಳಿಸಬೇಕೆಂದು ಜೇಮ್ಸನು ಬಗೆದನು. ಆದರೆ ಈ ಕಾಯ್ದೆಯನ್ನು ರದ್ದುಗೊಳಿಸಲು ಪಾರ್ಲಿಮೆಂಟಿನ ಸಮ್ಮತಿ ದೊರೆಯಲಾರದೆಂದು ಅವನಿಗೆ ಎನಿಸಿದುದರಿಂದ ಅವನು ಪಾರ್ಲಿಮೆಂಟಿನ ಸಭೆಯನ್ನು ವಿಸರ್ಜಿಸಿದನು ಮತ್ತು ತನ್ನ ಪ್ರೇಮಕ್ಕೆ ಪಾತ್ರರಾದ ಜನರಿಗೆ ಧಾರ್ಮಿಕ ಕಾಯ್ದೆಗಳನ್ನು ಮುರಿವುದರಿಂದ ಆಗುವ ಶಿಕ್ಷೆ ಆಗಬಾರದೆಂದು ಅವರಿಗೆ ಕ್ಷಮಾಪತ್ರಿಕೆಗಳನ್ನು ಕೊಟ್ಟನು. ಈ ಪತ್ರಿಕೆಗಳನ್ನು ಕೊಡಲು ತನಗೆ ಅಧಿಕಾರವುಂಟೆಂಬ ನಿರ್ಣಯವು

ತನಗೆ ನ್ಯಾಯಾಸನದಲ್ಲಿ ದೊರೆಯಬೇಕೆಂದು ಅವನು ಹೇಲ್ಸನೆಂಬ ರೋಮನ ಕಥಲಿಕ್ ಪಂಥದವನಿಗೆ ಸೈನ್ಯದಲ್ಲಿ ಅಧಿಕಾರಸ್ಥಳವನ್ನು ಕೊಟ್ಟನು. ಹೇಲ್ಸನು ರೋಮನ್ ಕಥಲಿಕ್ ಪಂಥದವನಾದುದರಿಂದ ಅವನಿಗೆ ಈ ಅಧಿಕಾರಸ್ಥಳವನ್ನು ಸ್ವೀಕರಿಸಲು ಬಾರದೆಂದು ಅವನ ಮೇಲೆ ಖಟ್ಲೆ ಮಾಡಲ್ಪಟ್ಟಿತು. ಆದರೆ ಹೇಲ್ಸನು ಜೇಮ್ಸನಿಂದ ದೊರೆತ ಕ್ಷಮಾಪತ್ರಿಕೆಯನ್ನು ಆತ್ಮಸಮರ್ಥನೆಗೋಸುಗ ಮುಂದೆ ಮಾಡಿದನು. ಆಗ ಜೇಮ್ಸನಿಗೆ ಅನುಕೂಲನಾಗಿದ್ದ ನ್ಯಾಯಾಧೀಶನು ಜೇಮ್ಸನಿಗೆ ಈ ಬಗೆಯಾದ ಕ್ಷಮಾಪತ್ರಿಕೆಗಳನ್ನು ಕೊಡಲು ಅಧಿಕಾರವು (Dispensing Power) ಉಂಟೆಂಬ ಅಭಿಪ್ರಾಯವಿತ್ತು. ಹೇಲ್ಸನಿಗೆ ಅಧಿಕಾರ ಸ್ಥಳವನ್ನು ಸ್ವೀಕರಿಸಲು ಆತಂಕವಿಲ್ಲವೆಂದು ನಿರ್ಣಯವಿತ್ತನು (೧೬೮೬ ಜೂನ). ಚರ್ಚ್, ವಿಶ್ವವಿದ್ಯಾಲಯ ಮೊದಲಾದುವುಗಳಲ್ಲಿ ಅಧಿಕಾರಸ್ಥಳಗಳು ರೋಮನ್ ಕಥಲಿಕರಿಗೆ ದೊರೆಯಕೂಡದೆಂದು ಪಾರ್ಲಿಮೆಂಟಿನ ಕಾಯ್ದೆ ಇದ್ದರೂ ಜೇಮ್ಸನು ಅವರಿಗೆ ಆ ಅಧಿಕಾರಸ್ಥಳಗಳನ್ನು ಕೊಟ್ಟನು. ಅದರಂತೆ ಅವನು ಟಿರ್ಕೊನೆಲ್ ಎಂಬ ರೋಮನ್ ಕಥಲಿಕ್ ಸರದಾರನನ್ನು ಐರ್ಲಂಡಿನ ಗವರ್ನರನಾಗಿ ನಿಯೋಜಿಸಿದನು, ಮತ್ತು ಸ್ಕಾಟಿಶ್ ಪಾರ್ಲಿಮೆಂಟು ರೋಮನ್ ಕಥಲಿಕರ ವಿರುದ್ಧವಾಗಿ ಮಾಡಿದ ಕಾಯ್ದೆಗಳನ್ನು ಸ್ವಂತದ ಅಧಿಕಾರದಿಂದ ರದ್ದುಗೊಳಿಸಿದನು. ಲಾಂಗ ಪಾರ್ಲಿಮೆಂಟು ವಿಸರ್ಜಿಸಿದ ಹಾಯ್ ಕಮಿಶನ್ ಕೋರ್ಟನ್ನು ಅವನು ಮತ್ತೆ ಪ್ರಾರಂಭಿಸಿ ಜೆಫ್ರಿಜ್‌ನನ್ನು ಅದರ ಅಧ್ಯಕ್ಷನಾಗಿ ನಿಯೋಜಿಸಿದನು. ಧಾರ್ಮಿಕ ವಿಷಯಗಳ ವಿಚಾರಣೆಯನ್ನು ಮಾಡಿ ಶಿಕ್ಷೆಯನ್ನು ಕೊಡುವ ಅಧಿಕಾರವು ಈ ಕೋರ್ಟಿಗೆ ಕೊಡಲ್ಪಟ್ಟಿತು. ಜನರೊಳಗೆ ತನ್ನ ವಿಷಯದಲ್ಲಿ ಭಯವುಂಟಾಗಬೇಕೆಂದು ಅವನು ಲಂಡನಿನಲ್ಲಿ ಶಾಶ್ವತ ಸೈನ್ಯವನ್ನಿಟ್ಟನು.

**ಜೇಮ್ಸನ ಅಪ್ರಿಯತೆ**— ಜೇಮ್ಸನು ಈ ಬಗೆಯಾಗಿ ಅನ್ಯಾಯದ ಮತ್ತು ಸ್ವೈರ ಕೃತ್ಯಗಳನ್ನು ಆರಂಭಿಸಿದುದರಿಂದ ಇಂಗ್ಲಿಶ ಜನರಿಗೆ ಅಪ್ರಿಯನಾದನು. ಅವನು ಪಟ್ಟಕ್ಕೆ ಬಂದಾಗ ಅವನಿಗೆ ಅನುಕೂಲರಾಗಿದ್ದ ಟೋರಿ ಪಕ್ಷದ ಜನರು ಈಗ ಅವನಿಗೆ ವಿರೋಧಿಗಳಾದರು. ಚರ್ಚ್ ಮತ್ತು ವಿದ್ಯಾಲಯಗಳಲ್ಲಿಯ ಅಧಿಕಾರಿಗಳಿಗೆ ಅವನ ವಿಷಯದಲ್ಲಿ ಮಮತೆ ಉಳಿಯಲಿಲ್ಲ. ಸೈನ್ಯದಲ್ಲಿಯೂ ಅಸಂತೋಷವು ಹಬ್ಬಿತು ಮತ್ತು ಸಾಮಾನ್ಯಜನತೆಗೆ ತಿರಸ್ಕಾರ ಹುಟ್ಟಿತು. ೧೪ನೆಯ ಲುಯಿ ೧೫೯೮ನೆಯ ಇಸ್ವಿಯ "ಎಡಿಕ್ಟ ಆಫ್ ನಾಂಟಿಜ್" ಎಂಬ ಜಾಹೀರನಾಮೆಯನ್ನು ೧೬೮೫ರಲ್ಲಿ ರದ್ದುಗೊಳಿಸಿ ಆ ಜಾಹೀರನಾಮೆಯಂತೆ ಫ್ರಾನ್ಸಿನಲ್ಲಿ ಹ್ಯುಗೆನಾಟ್ಸ (ಪ್ರೊಟೆಸ್ಟಂಟ)ರಿಗೆ ದೊರೆಯುತ್ತಿದ್ದ ಧಾರ್ಮಿಕ ಅಸು

ಕೂಲತೆಗಳನ್ನು ನಿಲ್ಲಿಸಿದನು. ಆಗ ೧೪ನೆಯ ಲುಯಿಯ ಹೇಳಿಕೆಯಿಂದ 'ಇಂಗ್ಲಂಡಿನಲ್ಲಿಯೂ ಕಥಲಿಕ್ ಪಂಥದ ಪ್ರಸಾರವನ್ನು ಮಾಡಬೇಕೆಂದೂ ಜೇಮ್ಸನ ವಿಚಾರವಿರಬಹುದೆಂದು ಎಷ್ಟೋ ಜನರಿಗೆ ಸಂಶಯವು ಬರತೊಡಗಿತು. ಜೇಮ್ಸನು ವೃದ್ಧನಾಗಿದ್ದನು. ಆತನಿಗೆ ಪುತ್ರಸಂತಾನವಿರಲಿಲ್ಲ, ಮತ್ತು ಆತನ ತರುವಾಯದಲ್ಲಿ ಪ್ರಾಟೆಸ್ಟಂಟ ಪಂಥದ ಮೇರಿಯೆಂಬ ಆತನ ಮಗಳಿಗೆ (ಹಾಲಂಡಿನ ರಾಜಪುತ್ರ ವಿಲಿಯಮನ ಹೆಂಡತಿ) ಇಂಗ್ಲಂಡಿನ ರಾಜಪದವು ದೊರೆವುದಿತ್ತು. ಆದುದರಿಂದ ಇಂಗ್ಲಿಶ್ ಜನತೆ ಜೇಮ್ಸನ ಎಲ್ಲ ಅನ್ಯಾಯವನ್ನೂ ಸಹಿಸಿಕೊಂಡಿತ್ತು.

ಡಿಕ್ಲೆರೇಶನ್ ಆಫ್ ಇಂಡಲ್ಜನ್ಸ, ೧೬೮೭ ಮತ್ತು ೮೮—ಕಾಯ್ದೆಗಳನ್ನು ರದ್ದುಗೊಳಿಸುವ ಅಧಿಕಾರವು (Suspending Power) ತನಗೆ ಉಂಟೆಂದು ಜೇಮ್ಸನು ಸ್ವಂತದ ಅಧಿಕಾರದಿಂದ "ಡಿಕ್ಲೆರೇಶನ್ ಆಫ್ ಇಂಡಲ್ಜನ್ಸ" ಎಂಬ ಆಜ್ಞಾಪತ್ರಿಕೆಯನ್ನು ಪ್ರಕಟಿಸಿ ಪಾರ್ಲಿಮೆಂಟು ಮಾಡಿದ ಎಲ್ಲ ಧಾರ್ಮಿಕ ಕಾಯ್ದೆಗಳು ರದ್ದುಗೊಳಿಸಲ್ಪಟ್ಟಿರುವುವೆಂದು ಸಾರಿದನು (೧೬೮೭). ಈ ಆಜ್ಞಾಪತ್ರಿಕೆಯಿಂದ ರೋಮನ್ ಕಥಲಿಕ್ ಪಂಥದವರಂತೆ ಪ್ಯೂರಿಟನ್, ಡಿಸೆಂಟರ್ಸ, ನಾನ್‌ಕನ್‌ಫಾರ್ಮಿಸ್ಟ್ಸ ಮೊದಲಾದ ಪ್ರಾಟೆಸ್ಟಂಟ ಪಂಥದ ಉಗ್ರವಾದಿಗಳಿಗೂ ಧಾರ್ಮಿಕ ಸ್ವಾತಂತ್ರ್ಯವು ದೊರೆಯುತ್ತಿತ್ತು. ಆದರೆ ರೋಮನ ಕಥಲಿಕ್ ಜನರಿಗೋಸುಗವೆ ಜೇಮ್ಸನು ಈ ಪತ್ರಿಕೆಯನ್ನು ಪ್ರಕಟಿಸಿದನು, ಮತ್ತು ಅದನ್ನಾದರೂ ಪಾರ್ಲಿಮೆಂಟಿನ ಸತ್ತೆಯನ್ನು ಅವಮಾನಿಸಿ ಮಾಡಿದನು. ಆದುದರಿಂದ ಜೇಮ್ಸನ ಈ ಕೃತಿ ಪ್ಯೂರಿಟನ್ ಜನರಿಗೆ ಸೇರಲಿಲ್ಲ. ಇದಾದ ಬಳಿಕ ಮರು ವರುಷವೆ (೧೬೮೮) ಅವನು ಅದೇ ಪತ್ರಿಕೆಯನ್ನು ಮತ್ತೆ ಪ್ರಕಟಿಸಿ ಮುಂದೆ ಬರುವ ಎರಡು ರವಿವಾರಗಳ ದಿವಸ ಎಲ್ಲ ಚರ್ಚುಗಳಲ್ಲಿಯೂ ಅದು ಓದಲ್ಪಡಬೇಕೆಂದು ಆಜ್ಞೆಯಿತ್ತನು (೧೬೮೮ ಎಪ್ರಿಲ್).

ಏಳು ಬಿಶಪರ ವಿಚಾರಣೆ—ಜೇಮ್ಸನ ಈ ಆಜ್ಞೆ ರಾಜನಿಷ್ಠರಾಗಿದ್ದ ಎಷ್ಟೋ ಟೋರಿ ಪಕ್ಷದ ಜನರಿಗೂ ಅಪ್ರಿಯವಾಯಿತು. ಕಂಟರ್ಬರಿಯ ಆರ್ಚ ಬಿಶಪನಾದ ಸನ್‌ಕ್ರಾಫ್ಟ ಮೊದಲಾದ ಏಳು ಜನ ಬಿಶಪರು ಜೇಮ್ಸನ ಕಡೆಗೆ ವಿನಂತಿಪತ್ರಿಕೆಯನ್ನು ಕಳುಹಿಸಿ ಡಿಕ್ಲೆರೇಶನ್ ಆಫ್ ಇಂಡಲ್ಜನ್ಸ ಪತ್ರಿಕೆಯನ್ನು ಚರ್ಚಿನಲ್ಲಿ ಓದಲು ತಮ್ಮನ್ನು ಒತ್ತಾಯಪಡಿಸಬಾರದೆಂದು ಬೇಡಿಕೊಂಡರು. ಆದರೆ ಜೇಮ್ಸನು ಅದರಿಂದ ಕೋಪಗೊಂಡು ಅವರ ವಿನಂತಿ ಪತ್ರಿಕೆ ರಾಜದ್ರೋಹದ ಪತ್ರಿಕೆಯಾಗಿರುವುದೆಂದು ನಿಶ್ಚಯಿಸಿ ಅವರನ್ನು ರಾಜದ್ರೋಹದ ಆರೋಪಕ್ಕೆ ಗುರಿಮಾಡಿ ನ್ಯಾಯಾಸನಕ್ಕೆಳೆದನು. ಅವನಿಂದ ನಿಯೋ

ಜಿತರಾದ ನ್ಯಾಯಾಧೀಶರ ಮುಂದೆ ವಿಚಾರಣೆ ನಡೆಯಿತು. ಆದರೆ ಜ್ಯೂರಿಯಲ್ಲಿಯ ಜನರು "ಅವರು ನಿರ್ದೋಷಿಗಳೆಂದು" ನಿರ್ಣಯವಿತ್ತರು (೧೬೮೮ ಜೂನ



ಏಳು ಬಿಶಪರು ದೋಷಮುಕ್ತರಾದುದು

೩೦). ಈ ಬಗೆಯಾಗಿ ಈ ಬಿಶಪರು ದೋಷಮುಕ್ತರಾದುದನ್ನು ಕಂಡು ಅವರ ಸನ್ಮಾನಾರ್ಥವಾಗಿ ಎಲ್ಲಿಲ್ಲಿಯೂ ಜನರು ಗುಡಿ ತೋರಣಗಳನ್ನು ಕಟ್ಟಿದರು. ಇದರಿಂದ ಜೇಮ್ಸನು ಬಹಳವಾಗಿ ಕೋಪಗೊಂಡನು.

**ವಿಲಿಯಮನಿಗೆ ನಿಮಂತ್ರಣವು**—ಈ ಏಳು ಜನ ಧರ್ಮಾಧಿಕಾರಿಗಳ ಮುಕ್ತತೆಯಾಗುವ ಮೊದಲು ೨೦ ದಿವಸಗಳ ಹಿಂದೆ ೧೬೮೮ ಜೂನ ೧೦ನೆಯ ತಾರೀಖಿನ ದಿವಸ ಜೇಮ್ಸನಿಗೆ ಮಗನು ಹುಟ್ಟಿದನು.* ಈ ಹುಡುಗನಿಗೆ ಜೇಮ್ಸ

* ಜೇಮ್ಸನು ಕ್ಲ್ಯಾರೆಂಡನನ ಮಗಳಾದ ಆ್ಯನ್ ಹೈಡ್ ಎಂಬವಳನ್ನು ಮದುವೆಯಾಗಿದ್ದನು. ಅವಳಿಂದ ಅವನಿಗೆ ಮೇರಿ ಮತ್ತು ಆ್ಯನ್ ಎಂಬಿಬ್ಬರು ಹೆಣ್ಣುಮಕ್ಕಳಾದರು. ಈ ಸಂತತಿ ೧೬೭೧

ಎಡ್ವರ್ಡ್ ಎಂದು ಹೆಸರು ಇಡಲ್ಪಟ್ಟಿತು. ಜೇಮ್ಸನ ತರುವಾಯದಲ್ಲಿ ಪಟ್ಟವು ಅವನ ಪ್ರಾಟೆಸ್ಟಂಟ ಪಂಥದ ಮೇರಿಯೆಂಬ ಮಗಳಿಗೆ ದೊರೆಯದೆ ಈ ಹುಡುಗನಿಗೆ ದೊರೆಯಬಹುದು, ಅವನು ತನ್ನ ತಂದೆತಾಯಿಗಳಂತೆ ರೋಮನ್ ಕಥಲಿಕ್ ಪಂಥದವನಾಗಬಹುದು, ಮತ್ತು ಇಂಗ್ಲಂಡಿನಲ್ಲಿ ಮತ್ತೆ ರೋಮನ್ ಕಥಲಿಕ್ ಪಂಥದ ಪ್ರಾಬಲ್ಯವೇ ಆಗಬಹುದು ಎಂದು ಇಂಗ್ಲಿಶ್ ಜನರಿಗೆ ಭೀತಿ ಎನಿಸಿತು. ಆದುದರಿಂದ ಇಂಗ್ಲಂಡಿನಲ್ಲಿ ಪ್ರಾಟೆಸ್ಟಂಟ ಪಂಥವು ಬೇರೂರಿ ಉಳಿಯಬೇಕಾದರೆ ಏನು ಮಾಡಬೇಕೆಂಬುದನ್ನು ಕುರಿತು ವ್ಹಿಗ್ ಮತ್ತು ಟೋರಿ ಈ ಎರಡೂ ಪಕ್ಷಗಳ ಪ್ರಮುಖ ಜನರು ವಿಚಾರಮಾಡತೊಡಗಿದರು. ಹಾಲಂಡಿನ ರಾಜಪುತ್ರ ವಿಲಿಯಮನು ಜೇಮ್ಸನ ಅಳಿಯನೂ ಸೋದರಳಿಯನೂ ಆಗಿದ್ದನು. ಅವನು ಪ್ರಾಟೆಸ್ಟಂಟ ಪಂಥದ ಅಭಿಮಾನಿಯಾಗಿದ್ದನು. ಅವನು ೧೪ನೆಯ ಲುಯಿಯ ಶತ್ರುವೂ ಆಗಿದ್ದನು. ವ್ಹಿಗ್ ಮತ್ತು ಟೋರಿ ಪಕ್ಷಗಳ ಕೆಲವು ಜನರು ವಿಲಿಯಮ್ ಮತ್ತು ಮೇರಿ ಇವರಿಗೆ ಇಂಗ್ಲಂಡಿನ ಪ್ರಾಟೆಸ್ಟಂಟ ಪಂಥವನ್ನು ಮತ್ತು ಜನರ ಹಕ್ಕುಗಳನ್ನು ಸಂರಕ್ಷಿಸಲು ಸೈನ್ಯದೊಡನೆ ಇಂಗ್ಲಂಡಿಗೆ ಬರಬೇಕೆಂದು ನಿಮಂತ್ರಣಗಳನ್ನು ಕಳುಹಿದರು. ವಿಲಿಯಮನು "ಯೋಗ್ಯ ಸಂಧಿ ದೊರೆತೊಡನೆ ಶಕ್ಯವಾದಷ್ಟು ಬೇಗನೆ ಇಂಗ್ಲಂಡಿಗೆ ಬರುವೆನು" ಎಂದು ಆಶ್ವಾಸನವನ್ನಿತ್ತನು.

**ವಿಲಿಯಮನು ಇಂಗ್ಲಂಡಿಗೆ ಬರುವನು**—ಕೆಲವು ದಿನಗಳಾದ ಬಳಿಕ ವಿಲಿಯಮನು ೧೫,೦೦೦ ಸೈನಿಕರ ಸೈನ್ಯದೊಡನೆ ಇಂಗ್ಲಂಡಿನ ದಕ್ಷಿಣದಂಡೆಯ ಟೊರ್ಬೆ ಎಂಬ ಬಂದರದಲ್ಲಿ ಬಂದಿಳಿದನು (೧೬೮೮ ನವ್ಹೆಂಬರ). ಅವನಿಗೆ ಸಾಹಾಯ್ಯವೀಯಲು ಜನರು ಸಿದ್ಧರಾದರು. ಅವನನ್ನು ಇದಿರಿಸಲು ಜೇಮ್ಸನ ಬಳಿಯಲ್ಲಿ ನಾಲ್ವತ್ತು ಸಾವಿರ ಸೈನಿಕರಿದ್ದರು. ಆದರೆ ಈ ಸೈನ್ಯವನ್ನು ನಂಬಬಹುದೊ ಹೇಗೆಂಬುದರ ವಿಷಯದಲ್ಲಿ ಅವನಿಗೆ ಸಂಶಯವು ಬರತೊಡಗಿತು. ವಿಲಿಯಮನು ಸೈನ್ಯದೊಡನೆ ಇಂಗ್ಲಂಡಿನ ದಂಡೆಯ ಮೇಲೆ ಬಂದಿಳಿದನೆಂದು ಸುದ್ದಿಯನ್ನು ಕೇಳಿದೊಡನೆ ಜೇಮ್ಸನ ಸೇನಾಪತಿಯಾದ **ಚರ್ಚಿಲ** (ಮಾರ್ಲಬರೊ)ನು ತನ್ನ ಸೈನ್ಯದೊಡನೆ ವಿಲಿಯಮನನ್ನು ಕೂಡಿದನು. ಜೇಮ್ಸನ ಮಗಳಾದ ಆನ್ ಇವಳು ತನ್ನ ತಂದೆಯ ಪಕ್ಷವನ್ನು ಬಿಟ್ಟು ಭಾವನ (ವಿಲಿಯಮನ) ಪಕ್ಷವನ್ನು ಕೂಡಿದಳು. ಅದನ್ನು ಕಂಡು ಕಳೆದ ಮೂರು ವರ್ಷಗಳಲ್ಲಿ ತನ್ನಿಂದಾದ ಅನ್ಯಾಯದ ಕೃತ್ಯಗಳನ್ನು ಜನರು ಮರೆಯಬೇಕೆಂದೂ ತನ್ನನ್ನು ಪಟ್ಟದಿಂದ ತಳ್ಳಬಾರ

---

ರಲ್ಲಿ ಸತ್ತಳು. ಜೇಮ್ಸನು ೧೬೭೩ರಲ್ಲಿ ಮೇರಿ ಡಿ. ಎಸ್ಟಿ, ಮೊಡೆನಾ ಎಂಬ ಕ್ಯಾಥಲಿಕ್ ಪಂಥದ ರಾಜಕನ್ಯೆಯನ್ನು ಮದುವೆಯಾದನು. ಇವಳಿಗೆಯೆ ಮಗನಾದುದು.

ದೆಂದೂ ಜೇಮ್ಸ್ಸನು ಹಾಯ್ ಕಮಿಶನ್ ಕೋರ್ಟನ್ನು ರದ್ದುಗೊಳಿಸಿದನು, ರೋಮನ್ ಕೆಥಲಿಕ್ ಜನರನ್ನು ದೊಡ್ಡ ದೊಡ್ಡ ಅಧಿಕಾರಸ್ಥಳಗಳಿಂದ ತೆಗೆದನು ಮತ್ತು ಆಕ್ಸಫರ್ಡ ವಿಶ್ವವಿದ್ಯಾಲಯದೊಳಗಿನ ಫೆಲೋ ಜನರು ಮತ್ತೆ ತಮ್ಮ ಸ್ಥಳಕ್ಕೆ ಬರಬಹುದೆಂದು ಆಜ್ಞಾಪತ್ರವನ್ನು ಪ್ರಕಟಿಸಿದನು, ಮತ್ತು ಇನ್ನು ಮುಂದೆ ಇಂಗ್ಲಿಶ್ ಜನತೆಯ ಸ್ವಾತಂತ್ರ್ಯದ ಹಕ್ಕುಗಳು ಅಚ್ಚಳಿಯದೆ ಉಳಿವಂತೆ ತಾನು ನೋಡಿಕೊಳ್ಳುವೆನೆಂದೂ ಅಭಿವಚನವನ್ನಿತ್ತನು. ಆದರೆ ಜೇಮ್ಸನ ಮಾತಿನಲ್ಲಿ ಯಾರಿಗೂ ವಿಶ್ವಾಸವಾಗಲಿಲ್ಲ. ತನ್ನ ನೆರವಿಗೆ ಬರಲು ಯಾರೂ ಸಿದ್ಧರಿಲ್ಲವೆಂದು ಕಂಡು ಜೇಮ್ಸನು ತನ್ನ ಹೆಂಡತಿಯನ್ನೂ ಮಗನನ್ನೂ ಇಂಗ್ಲಂಡಿನಿಂದ ಹೊರಗೆ ಕಳುಹಿದನು; ಮತ್ತು ಮುಂದೆ ೧೬೮೮ರಲ್ಲಿ ಡಿಸೆಂಬರ ತಿಂಗಳಲ್ಲಿ ರಾಜ್ಯತ್ಯಾಗವನ್ನು ಮಾಡಿ ಫ್ರಾನ್ಸಿಗೆ ಹೋದನು.

**ಜೇಮ್ಸನೂ ಅವನ ಮಕ್ಕಳೂ**—ಜೇಮ್ಸನು ರಾಜ್ಯವನ್ನು ತ್ಯಜಿಸಿದಬಳಿಕ ಅವನಿಗೆ ೧೪ನೆಯ ಲುಯಿ ಆಶ್ರಯವನ್ನಿತ್ತನು. ಅವನಿಗೆ ಇಂಗ್ಲಂಡಿನ ರಾಜಪದವನ್ನು ಮತ್ತೆ ದೊರಕಿಸಿಕೊಡಲು ಲುಯಿ ಪ್ರಯತ್ನಿಸಿದನು. ಆದರೆ ಯಶವು ದೊರೆಯಲಿಲ್ಲ. ೧೭೦೧ರಲ್ಲಿ ಜೇಮ್ಸನು ಮರಣಹೊಂದಿದನು. ಅವನಿಗೆ **ಅನ್ ಹೈಡ್** ಎಂಬ ಹೆಂಡತಿಯಿಂದ **ಮೇರಿ** ಮತ್ತು **ಅನ** ಎಂಬ ಇಬ್ಬರು ಹೆಣ್ಣುಮಕ್ಕಳಿದ್ದರು. ಅವರು ಇಂಗ್ಲಂಡಿನಲ್ಲಿ ರಾಜ್ಯವಾಳಿದರು. **ಮೇರಿ ಆಫ್ ಮೊಡೇನಾ** ಎಂಬ ಇನ್ನೊಬ್ಬ ಹೆಂಡತಿಯಿಂದ ಜೇಮ್ಸನಿಗೆ **ಜೇಮ್ಸ ಎಡ್ವರ್ಡ** ಎಂಬ ಮಗನಾಗಿದ್ದನು. ಆದರೆ ಅವನ ಇಂಗ್ಲಂಡಿನ ಪಟ್ಟದ ಹಕ್ಕನ್ನು ಯಾರೂ ಒಪ್ಪಿಕೊಳ್ಳಲಿಲ್ಲ. ಇವನು ಜೇಮ್ಸನ ಮಗನೊ ಅಥವಾ ರಾಣಿಯ ಉಡಿಯಲ್ಲಿ ಇಡಲ್ಪಟ್ಟ ಇನ್ನೊಬ್ಬರ ಕೂಸೊ ಎಂಬ ಸಂಶಯವು ಅನೇಕರಿಗೆ ಉಂಟಾದುದರಿಂದ ಜನರು ಅವನನ್ನು **"ಸೋಗುಗಾರ"**ನೆಂದು (The Pretender) ಕರೆಯಲಾರಂಭಿಸಿದರು. ಇಂಗ್ಲಂಡಿನ ರಾಜಪದವನ್ನು ದೊರಕಿಸಲು ಅವನು ೧೭೧೫ರಲ್ಲಿ ಪ್ರಯತ್ನಿಸಿದನು. ಆದರೆ ಅವನ ಪ್ರಯತ್ನವು ನಿಷ್ಫಲವಾಯಿತು. ಅವನಿಗೆ **ಚಾರ್ಲಸ್ ಎಡ್ವರ್ಡ ಸ್ಟುವರ್ಟ** ಎಂಬ ಮಗನಾದನು. ಅವನು ೧೭೪೫ರಲ್ಲಿ ಇಂಗ್ಲಂಡಿನ ಪಟ್ಟವನ್ನು ಪಡೆಯಲು ಪ್ರಯತ್ನಿಸಿದನು. ಅವನ ಪ್ರಯತ್ನವೂ ನಿಷ್ಫಲವಾಯಿತು.

**ರಾಜ್ಯಕ್ರಾಂತಿ**—ಜೇಮ್ಸನು ಇಂಗ್ಲಂಡ ದೇಶವನ್ನು ಬಿಟ್ಟು ಹೋದಬಳಿಕ ವಿಲಿಯಮನು ಸೈನ್ಯದೊಡನೆ ಲಂಡನಿಗೆ ಬಂದನು. ಜನರು ಅವನಿಗೆ ಸ್ವಾಗತವನ್ನು ಮಾಡಿದರು. ಆ ಬಳಿಕ ಪಾರ್ಲಿಮೆಂಟಿನ (ಕನ್ವೆನ್ಶನ್) ಅಧಿವೇಶನವು

ಕೂಡಿತು. ಅದು ಜೇಮ್ಸನು ಮಾಡಿದ ಅನ್ಯಾಯದ ಮತ್ತು ಸ್ವೈರ ಕೃತ್ಯಗಳನ್ನು ನಿಷೇಧಿಸಿತು. ತರುವಾಯದಲ್ಲಿ ಜನತೆಯ ಸ್ವಾತಂತ್ರ್ಯಕ್ಕೆ ಹಾನಿ ತಟ್ಟಬಾರದೆಂದು ಇಂಗ್ಲಿಶ ಜನತೆಯ ಹಕ್ಕುಗಳು ಯಾವುವೆಂಬುದನ್ನು ಮತ್ತೆ ಜಾಹೀರಗೊಳಿಸಬೇಕೆಂದು ಪಾರ್ಲಿಮೆಂಟು "ಡಿಕ್ಲೆರೇಶನ್ ಆಫ್ ರೈಟ್ಸ" ಎಂಬ ಜನತೆಯ ಹಕ್ಕುಗಳ ಪತ್ರಿಕೆಯನ್ನು ಸಿದ್ಧಗೊಳಿಸಿತು (೧೬೮೯ ಜಾನೆವರಿ). ಈ ಪತ್ರಿಕೆಗೆ ವಿಲಿಯಮ್ ಮತ್ತು ಮೇರಿ ಇವರು ಸಮ್ಮತಿಯನ್ನು ಇತ್ತಬಳಿಕ (೧೬೮೯) ಪಾರ್ಲಿಮೆಂಟು ಅವರಿಗೆ ಇಂಗ್ಲಂಡಿನ ರಾಜಪದವನ್ನು ಅರ್ಪಿಸಿತು (೧೬೮೯ ಫೆಬ್ರುವರಿ). ೨ನೆಯ ಜೇಮ್ಸನು ರಾಜ್ಯತ್ಯಾಗವನ್ನು ಮಾಡಿದ್ದರೂ ವಂಶಪರಂಪರೆಯ ಅಧಿಕಾರದಿಂದ ಅವನ ತರುವಾಯದಲ್ಲಿ ಇಂಗ್ಲಂಡಿನ ಪಟ್ಟಕ್ಕೆ ಅವನ ಮಗನಾದ **ಜೇಮ್ಸ ಎಡ್ವರ್ಡ ಸ್ಟುವರ್ಟನದೆ** ಅಧಿಕಾರವಿದ್ದಿತು. ಆದರೆ ಅವನ ಅಧಿಕಾರವನ್ನು ಮಾನ್ಯಮಾಡದೆ ಪಾರ್ಲಿಮೆಂಟು ವಿಲಿಯಮ್ ಮತ್ತು ಮೇರಿ ಇವರಿಗೆ ರಾಜಪದವನ್ನು ಅರ್ಪಿಸಿದುದರಿಂದ ಈ ಸಂಗತಿ **"ರಾಜ್ಯಕ್ರಾಂತಿ"** ಎಂದು ಕರೆಯಲ್ಪಡುತ್ತದೆ.

---

## ಸಾರಾಂಶವು

### ೨ನೆಯ ಜೇಮ್ಸನು (೧೬೮೫—೧೬೮೮).

೨ನೆಯ ಜೇಮ್ಸನ ನೀತಿ—(೧) ರಾಜನ ಅಧಿಕಾರವು ಈಶ್ವರದತ್ತವಾದುದು ಎಂಬ ತತ್ವದಲ್ಲಿ ವಿಶ್ವಾಸವು ಮತ್ತು ಅನಿಯಂತ್ರಿತವಾಗಿ ರಾಜ್ಯವನ್ನು ಆಳುವ ಪ್ರವೃತ್ತಿ.

(೨) ಇಂಗ್ಲಂಡಿನಲ್ಲಿ ರೋಮನ್ ಕೆಥಲಿಕ್ ಪಂಥವನ್ನು ಸ್ಥಾಪಿಸಲು ಯತ್ನಿಸುವುದು.

ಜೇಮ್ಸನ ವಿರುದ್ಧ ಬಂಡುಗಳು.

ಮನ್‌ಮಥನ ಬಂಡು, ಸೆಜಮೂರನ ಕಾಳಗವು (೧೬೮೫). ಬಂಡು ಮುರಿಯಿತು. ನ್ಯಾಯಾಧೀಶ ಜೆಫ್ರಿಜನು ವಿಧಿಸಿದ ಉಗ್ರವಾದ ಶಿಕ್ಷೆಗಳು.

ಜೇಮ್ಸನ ಧಾರ್ಮಿಕ ನೀತಿ.

೧೬೮೫ ಟೆಸ್ಟ ಆಕ್ಟಿನ ವಿರುದ್ಧವಾದ ಗಿಂಡಿನಲ್ಲಿಯೂ ಉಳಿದೆಡೆಗಳಲ್ಲಿಯೂ ರೋಮನ್ ಕೆಥಲಿಕ್ ಪಂಥದವರಿಗೆ ಅಧಿಕಾರಸ್ಥಳಗಳು. ಪಾರ್ಲಿಮೆಂಟಿನ ಆತಂಕವು. ಪಾರ್ಲಿಮೆಂಟು ವಿಸರ್ಜಿಸಲ್ಪಟ್ಟಿತು.

೧೬೮೬ ಧಾರ್ಮಿಕ ವಿಷಯಗಳ ಸಂಬಂಧದಲ್ಲಿ ಹಾಯ್ ಕಮಿಶನ್ ಕೋರ್ಟಿನ ಸ್ಥಾಪನೆ. ರೋಮನ್ ಕೆಥಲಿಕರಿಗೆ ಆಕ್ಸಫರ್ಡ ಮತ್ತು ಕೇಂಬ್ರಿಜ್ ವಿಶ್ವವಿದ್ಯಾಲಯಗಳಲ್ಲಿ ಮಹತ್ವದ ಅಧಿಕಾರಸ್ಥಳಗಳು.

೧೬೮೭ ಡಿಕ್ಲೆರೇಶನ್ ಆಫ್ ಇಂಡಲ್ಜನ್ಸ.

೧೬೮೮ ಎರಡನೆಯ ಡಿಕ್ಲೆರೇಶನ್ ಆಫ್ ಇಂಡಲ್ಜನ್ಸ ಪತ್ರಿಕೆಯನ್ನು ಎಲ್ಲ ಚರ್ಚುಗಳಲ್ಲಿ ಓದಬೇಕೆಂದು ಅಜ್ಞೆ, ಏಳು ಜನ ಬಿಶಪರ ವಿರೋಧವು, ಅವರ ವಿಚಾರಣೆ ಮತ್ತು ಅವರು ನಿರ್ದೋಷಿಗಳೆಂದು ನಿರ್ಣಯ. ಜನತೆಗೆ ಆನಂದವು.

## ಜೇಮ್ಸನು ಮತ್ತು ಪಾರ್ಲಿಮೆಂಟು.

೧೬೮೫ ಮೊದಲನೆಯ ಪಾರ್ಲಿಮೆಂಟು; ಪಾರ್ಲಿಮೆಂಟು ಮಾಡಿದ ಕಾಯ್ದೆಗಳನ್ನು ಲಕ್ಷಿಸದೆ ಜೇಮ್ಸನು ಮನಬಂದಂತೆ ನಡೆದನು. ಪಾರ್ಲಿಮೆಂಟಿನ ವಿರೋಧವು. ಪಾರ್ಲಿಮೆಂಟಿನ ವಿಸರ್ಜನವು.

## ಜೇಮ್ಸನು ಮತ್ತು ಇಂಗ್ಲಂಡಿನ ಜನತೆ.

ಜೇಮ್ಸನ ಅನ್ಯಾಯದ ಕೃತ್ಯಗಳಿಂದ ಇಂಗ್ಲಂಡಿನಲ್ಲಿಯ ಬಹುಜನ ಸಮಾಜದಲ್ಲಿ ಅವನ ವಿಷಯದಲ್ಲಿ ಅಪ್ರೀತಿ. ಸೈನ್ಯದಲ್ಲಿ ಅಸಂತೋಷವು. ೧೪ನೆಯ ಲುಯಿಯ ಮಾತನ್ನು ಕೇಳಿ ಜೇಮ್ಸನು ರೋಮನ್ ಕೆಥಲಿಕ್ ಪಂಥದ ಪ್ರಸಾರವನ್ನು ಮಾಡಲು ಯೋಚಿಸುತ್ತಿರಬಹುದೆಂದು ಜನರಿಗೆ ಸಂಶಯವು.

ವ್ಹಿಗ್ ಮತ್ತು ಟೋರಿ ಪಕ್ಷಗಳ ಮುಂದಾಳುಗಳು ವಿಲಿಯಮನಿಗೆ ನಿಮಂತ್ರಣವನ್ನು ಕಳಿಸಿದರು. ೧೬೮೮ ನವ್ಹೆಂಬರ ೫ನೆಯ ತಾರೀಖಿನ ದಿವಸ ವಿಲಿಯಮನು ಟಾರ್ಬೆ ಬಂದರದಲ್ಲಿ ಬಂದಿಳಿದನು. ಜೇಮ್ಸನು ಫ್ರಾನ್ಸಿಗೆ ಓಡಿಹೋದನು. ರಾಜ್ಯಕ್ರಾಂತಿ.

## ಜೇಮ್ಸನು ಮತ್ತು ಅವನ ಮಕ್ಕಳು.

೨ನೆಯ ಜೇಮ್ಸನು ಫ್ರಾನ್ಸಿನಲ್ಲಿ ೧೭೦೧ರಲ್ಲಿ ಮರಣಹೊಂದಿದನು. ಅವನ ಮಗನಾದ ಜೇಮ್ಸ ಎಡ್ವರ್ಡ ಸ್ಟುವರ್ಟನು ೧೭೧೫ರಲ್ಲಿ ಮತ್ತು ಮೊಮ್ಮಗನಾದ ಚಾರ್ಲಸ ಎಡ್ವರ್ಡ ಸ್ಟುವರ್ಟನು ೧೭೪೫ರಲ್ಲಿ ಇಂಗ್ಲಂಡಿನ ಪಟ್ಟವನ್ನು ದೊರಕಿಸಲು ಪ್ರಯತ್ನಿಸಿದರು. ಆದರೆ ಅವರ ಪ್ರಯತ್ನಗಳು ನಿಷ್ಫಲವಾದುವು.

## ಪಾರ್ಲಿಮೆಂಟು, ವಿಲಿಯಮ ಮತ್ತು ಮೇರಿ.

೧೬೮೮ ಡಿಕ್ಲೆರೇಶನ್ ಆಫ್ ರೈಟ್ಸ. ಅದಕ್ಕೆ ವಿಲಿಯಮ್ ಮತ್ತು ಮೇರಿ ಇವರ ಮಾನ್ಯತೆ. ಪಾರ್ಲಿಮೆಂಟಿನ ಕಾಯ್ದೆಯಿಂದ ಅವರಿಗೆ ರಾಜಪದದ ಪ್ರಾಪ್ತಿ (೧೬೮೯).

# ೧೩ನೆಯ ಪ್ರಕರಣವು

## ೩ನೆಯ ವಿಲಿಯಮ್ ಮತ್ತು ಮೇರಿ

**ವಿಲಿಯಮ್**—ಜನ್ಮವು ೧೬೫೦; ರಾಜ್ಯಾರೋಹಣವು (೩೯ನೆಯ ವರ್ಷದಲ್ಲಿ) ೧೬೮೯, ಮೃತ್ಯು ೧೭೦೨.

**ಮೇರಿ**—ಜನ್ಮವು ೧೬೬೨; ರಾಜ್ಯಾರೋಹಣವು (೨೭ನೆಯ ವರ್ಷದಲ್ಲಿ) ೧೬೮೯; ಮೃತ್ಯು ೧೬೯೪.

(೧೬೮೯—೧೭೦೨).

### ತತ್ಕಾಲೀನ ರಾಜ್ಯಕರ್ತರು

| ಫ್ರಾನ್ಸ | ಸ್ಪೇನ | ಪ್ರಸಿಯಾ | ರಶಿಯಾ |
|---|---|---|---|
| ೧೪ನೆಯ ಲುಯಿ (೧೬೪೩—೧೭೧೫) | ೨ನೆಯ ಚಾರ್ಲಸ | ೧ನೆಯ ಫ್ರೆಡ್‌ರಿಕ್ (೧೬೮೮—೧೭೧೩) | ಪೀಟರ್ ದಿ ಗ್ರೇಟ (೧೬೯೬—೧೭೨೫) |

### ಮಹತ್ವದ ಇಸ್ವಿಗಳು

೧೬೮೯ ಬಿಲ್ ಆಫ್ ರೈಟ್ಸ.
೧೬೯೦ ಬಾಯಿನದ ಕಾಳಗವು.
೧೬೯೨ ಸ್ಟೇನಕರ್ಕದ ಕಾಳಗವು.
೧೬೯೨ ಲಾ ಹೋಗದ ಕಾಳಗವು.
೧೬೯೩ ರಾಷ್ಟ್ರೀಯ ಸಾಲದ ಯೋಜನೆ.
೧೬೯೪ ಬಂಕ ಆಫ್ ಇಂಗ್ಲಂಡಿನ ಸ್ಥಾಪನೆ.
೧೬೯೪ ಮೇರಿರಾಣಿಯ ಮೃತ್ಯು.
೧೬೯೫ ನಾಮೂರದ ಕೋಟೆ ವಶವಾದುದು.
೧೬೯೭ ರಿಜವಿಕದ ಒಪ್ಪಂದವು.
೧೬೯೮ ಡರಾಯನ್ (ಪನಾಮಾ) ಎಂಬಲ್ಲಿಯ ಸ್ಕಾಟಿಶ ಜನರ ವಸಾಹತು ಅಯಶಸ್ವಿಯಾದುದು.
೧೭೦೧ ಆಕ್ಟ ಆಫ್ ಸೆಟ್ಲಮೆಂಟ.
೧೭೦೧ ಫ್ರಾನ್ಸಿನ ವಿರುದ್ಧವಾಗಿ ಇಂಗ್ಲಂಡ್, ಹಾಲಂಡ್ ಮತ್ತು ಆಸ್ಟ್ರಿಯಾ ಇವುಗಳ ಸಂಘವು.
೧೭೦೨ ಸ್ಪೇನದ ಪಟ್ಟದ ಬಾಧ್ಯತೆಗೋಸುಗ ಯುದ್ಧವು.
೧೬೯೬ ವ್ಹಿಗ್ ಪಕ್ಷದ ಮೊದಲನೆಯ ಮಂತ್ರಿಮಂಡಳವು.

**೩ನೆಯ ವಿಲಿಯಮ್ ಮತ್ತು ಮೇರಿ**—೨ನೆಯ ಜೇಮ್ಸನು ರಾಜ್ಯತ್ಯಾಗವನ್ನು ಮಾಡಿದ ಬಳಿಕ ಕನ್ವೆನ್ಶನ್ ಪಾರ್ಲಿಮೆಂಟು ವಿಲಿಯಮ್ ಮತ್ತು

**ಮೇರಿ** ಇವರಿಗೆ ಇಂಗ್ಲಂಡಿನ ರಾಜಪದವನ್ನಿತ್ತಿತು. ವಿಲಿಯಮನು ಪ್ರೊಟೆಸ್ಟಂಟ ಪಂಥದ ಅಭಿಮಾನಿಯಾಗಿದ್ದನು, ಮತ್ತು ಫ್ರಾನ್ಸಿನ ಅರಸನಾದ ೧೪ನೆಯ ಲುಯಿಯ ಶತ್ರುವಾಗಿದ್ದನು. ಸ್ಟುವರ್ಟ ಮನೆತನದೊಡದೆ ಅವನ ರಕ್ತಸಂಬಂಧ ವಿದ್ದಿತು. ಅವನು ೧ನೆಯ ಚಾರ್ಲಸನ ಮೊಮ್ಮಗನಾಗಿದ್ದನು (ಮಗಳ ಮಗನು; ೧೭೬ನೆಯ ಪುಟದ ಮೇಲಿನ ವಂಶವೃಕ್ಷವನ್ನು ನೋಡಿರಿ), ಮತ್ತು ೨ನೆಯ ಜೇಮ್ಸನ ಅಳಿಯನಾಗಿದ್ದನು. ಇಂಗ್ಲಂಡಿನ ಪಟ್ಟಕ್ಕೆ ಅವನಿಗೆ ಎಲ್ಲರಿಗಿಂತ ಹೆಚ್ಚಿನ ಬಾಧ್ಯತೆ ಇರಲಿಲ್ಲ. ಆದರೂ ಮೇರಿಯೊಡನೆ ಅವನಿಗೂ ರಾಜಪದವನ್ನು ಕೊಡುವಾಗ ಪರಕೀಯನೊಬ್ಬನಿಗೆ ರಾಜಪದವನ್ನು ಕೊಡುತ್ತಿರುವೆವೆಂದು ಪಾರ್ಲಿಮೆಂಟಿಗೆ ಎನಿಸಲಿಲ್ಲ.



೩ನೆಯ ವಿಲಿಯಮ್.



ರಾಣಿಮೇರಿ.

**ಬಿಲ್ ಆಫ್ ರೈಟ್ಸ (೧೬೮೯)**—ವಿಲಿಯಮನಿಗೆ ರಾಜಪದವನ್ನು ಕೊಡುವ ಕಾಲದಲ್ಲಿ ಪಾರ್ಲಿಮೆಂಟು ಇಂಗ್ಲಿಶ್ ಜನತೆಯ ನೈಸರ್ಗಿಕ ಅಧಿಕಾರಗಳ ಪತ್ರಿಕೆಯೊಂದನ್ನು (Declaration of Rights) ಸಿದ್ಧಗೊಳಿಸಿ ಅದಕ್ಕೆ ವಿಲಿಯಮನ ಮಾನ್ಯತೆಯನ್ನು ಪಡೆಯಿತು. ಈ ಪತ್ರಿಕೆಗೆ ಕಾಯದೆಯ ಸ್ವರೂ

ಪ್ತವು ಬರಬೇಕೆಂದು ಪಾರ್ಲಿಮೆಂಟು ವಿಲಿಯಮನು ಅರಸನಾದ ಬಳಿಕ **ಬಿಲ್ ಆಫ್ ರೈಟ್ಸ** (Bill of Rights) ಎಂಬ ಕಾಯದೆಯನ್ನು ಮಾಡಿತು. ಈ ಕಾಯದೆಯಲ್ಲಿ ಮುಂದೆ ಹೇಳಿದ ಮಹತ್ವದ ಮಾತುಗಳಿದ್ದುವು:—

(೧) ಪಾರ್ಲಿಮೆಂಟಿನ ಸಮ್ಮತಿ ಇಲ್ಲದೆ ಮೊದಲಿದ್ದ ಕಾಯದೆಗಳನ್ನು ಶಾಶ್ವತವಾಗಿಯಾಗಲಿ ತಾತ್ಪೂರ್ತಿಕವಾಗಿಯಾಗಲಿ ರದ್ದುಗೊಳಿಸಲು ಅರಸನಿಗೆ ಅಧಿಕಾರವಿಲ್ಲ.

(೨) ಪಾರ್ಲಿಮೆಂಟಿನ ಸಭೆಯನ್ನು ಆಗಾಗ ಕರೆದು ರಾಜ್ಯಕಾರಭಾರದ ಕಾರ್ಯದಲ್ಲಿ ಮತ್ತು ಜನತೆಯ ದೂರುಗಳನ್ನು ಕೇಳಿ ಯೋಗ್ಯ ಉಪಾಯ ಗಳನ್ನು ಯೋಚಿಸುವ ಕಾರ್ಯದಲ್ಲಿ ಪಾರ್ಲಿಮೆಂಟಿನ ಆಲೋಚನೆಯನ್ನು ತೆಗೆದು ಕೊಳ್ಳುವುದು ಅರಸನ ಕರ್ತವ್ಯವು.

(೩) ಪಾರ್ಲಿಮೆಂಟಿನಲ್ಲಿಯ ಸದಸ್ಯರ ಭಾಷಣಸ್ವಾತಂತ್ರ್ಯದ ಮೇಲೆ ಯಾವ ಬಗೆಯ ನಿರ್ಬಂಧವನ್ನೂ ಇಡಕೂಡದು.

(೪) ಅರಸನು ಶಾಂತತೆಯ ಕಾಲದಲ್ಲಿ ಪಾರ್ಲಿಮೆಂಟಿನ ಸಮ್ಮತಿ ಇಲ್ಲದೆ ಶಾಶ್ವತ ಸೈನ್ಯವನ್ನು ಇಡಲಾಗದು.

(೫) ಪಾರ್ಲಿಮೆಂಟಿನ ಸಮ್ಮತಿ ಇಲ್ಲದೆ ಅರಸನು ಕರವನ್ನು ಕೂಡಿಸ ಬಾರದು.

(೬) ವಿನಂತಿಪತ್ರಿಕೆಯ ಮುಖಾಂತರವಾಗಿ ತಮ್ಮ ದೂರುಗಳನ್ನು ಅರಸ ನಿಗೆ ಹೇಳಿಕೊಳ್ಳಲು ಪ್ರಜೆಗಳಿಗೆ ಅಧಿಕಾರವಿರಬೇಕು.

(೭) ತಮಗೆ ಯೋಗ್ಯದೋರಿದ ಮನುಷ್ಯನನ್ನು ತಮ್ಮ ಪ್ರತಿನಿಧಿಯಾಗಿ ಪಾರ್ಲಿಮೆಂಟಿನ ಸಭೆಗೆ ಕಳುಹಲು ಜನರಿಗೆ ಪೂರ್ಣ ಅಧಿಕಾರವುಂಟು.

(೮) ಜನರಿಂದ ದಂಡದ ರೂಪದಿಂದ ಬಹಳ ಹಣವನ್ನು ತೆಗೆದುಕೊಳ್ಳ ಬಾರದು.

(೯) ಇಂಗ್ಲಂಡಿನ ಅರಸನೂ ಅರಸಿಯೂ ಪ್ರಾಟೆಸ್ಟಂಟ ಪಂಥದವರೆ ಇರಬೇಕು.

**ಸೈನ್ಯದ ಮೇಲೆ ಪಾರ್ಲಿಮೆಂಟಿನ ಅಧಿಕಾರವು; ಮ್ಯುಟಿನಿ ಅಕ್ಟ, ೧೬೮೯**—ಅರಸನು ಶಾಂತತೆಯ ಸಮಯದಲ್ಲಿ ಶಾಶ್ವತ ಸೈನ್ಯವನ್ನಿಡಲಾಗದೆಂದು ಬಿಲ್ ಆಫ್ ರೈಟ್ಸಿನಲ್ಲಿ ಇದ್ದಿತು. ಆದರೆ ದೇಶದಲ್ಲಿ ಬಂಡುಗಳಾಗಬಾರದೆಂದೂ ಪರರಾಷ್ಟ್ರಗಳೊಡನೆ ಯುದ್ಧವು ಪ್ರಾರಂಭವಾದರೆ ಕಾದಲು ಉಪಯೋಗವಾಗ ಬೇಕೆಂದೂ ಶಾಶ್ವತ ಸೈನ್ಯದ ಆವಶ್ಯಕತೆ ಇದ್ದಿತು. ಆದರೆ ಅರಸನಿಗೆ ಈ ಸೈನ್ಯದ

ದುರುಪಯೋಗವನ್ನು ಮಾಡಿಕೊಳ್ಳಲು ಬರಬಾರದೆಂದು ಮತ್ತು ಸೈನ್ಯದಲ್ಲಿ ಯೋಗ್ಯವಾದ ಶಿಸ್ತು ಉಳಿಯಬೇಕೆಂದು ಪಾರ್ಲಿಮೆಂಟು ಮ್ಯುಟಿನಿ ಅಕ್ಟ (mutiny=ಬಂಡು) ಎಂಬ ಕಾಯದೆಯನ್ನು ಮಾಡಿತು (೧೬೮೯) ಮತ್ತು ಈ ಕಾಯ್ದೆಯ ಅವಧಿ ಒಂದು ವರ್ಷದ ವರೆಗೆ ಇರಬೇಕೆಂದು ನಿಶ್ಚಯಿಸಿತು. ಇದರಿಂದ ಸೈನ್ಯದ ಸಂಬಳದ ಹಣವನ್ನು ಪ್ರತಿವರ್ಷವೂ ದೊರಕಿಸಲು ಈ ಕಾಯ್ದೆಯನ್ನು ಮತ್ತೆ ಮತ್ತೆ ಮಾಡಿಸಿಕೊಳ್ಳುವುದಕ್ಕೆ ಪಾರ್ಲಿಮೆಂಟಿನ ಸಭೆಯನ್ನು ಪ್ರತಿ ವರ್ಷವೂ ಕರೆವುದು ರಾಜನಿಗೆ ಅವಶ್ಯವಾಯಿತು.

**ಬೊಕ್ಕಸದ ಮೇಲೆ ಪಾರ್ಲಿಮೆಂಟಿನ ಅಧಿಕಾರವು (೧೬೮೯)**— ಪಾರ್ಲಿಮೆಂಟಿನ ಸಮ್ಮತಿ ಇಲ್ಲದೆ ಅರಸನು ಕರವನ್ನು ಕೂಡಿಸಕೂಡದೆಂದು ಬಿಲ್ ಆಫ್ ರೈಟ್ಸ ಕಾಯದೆಯಲ್ಲಿದ್ದಿತು. ಆದರೆ ಪಾರ್ಲಿಮೆಂಟಿನ ಸಮ್ಮತಿಯಿಂದ ಕರವನ್ನು ಕೂಡಿಸಿ ಆ ಕರದಿಂದ ಹಣವು ಬಂದಬಳಿಕ ಅದರ ವೆಚ್ಚವನ್ನು ಹೇಗೆ ಮಾಡಬೇಕೆಂಬುದನ್ನು ಅರಸನೆ ನಿಶ್ಚಯಿಸುತ್ತಿದ್ದನು. ಇದನ್ನು ತಡೆಯಬೇಕೆಂದು ಪಾರ್ಲಿಮೆಂಟು ೧೬೮೯ರಲ್ಲಿ ಒಂದು ಹೊಸ ಪದ್ಧತಿಯನ್ನು ಪ್ರಾರಂಭಿಸಿತು. ಅರಸನು ಮಾಡುತ್ತಿರುವ ವೆಚ್ಚದಲ್ಲಿ ಎರಡು ಭಾಗಗಳು ಕಲ್ಪಿಸಲ್ಪಟ್ಟವು. (೧) ಅರಸನ ಮತ್ತು ಅರಸನ ಕುಟುಂಬದೊಳಗಿನ ಜನರ ವೈಯಕ್ತಿಯ ವೆಚ್ಚವು (Civil List) ಮತ್ತು (೨) ರಾಜ್ಯಕಾರಭಾರಕ್ಕೋಸುಗ ಬೇಕಾಗುವ ವೆಚ್ಚವು. ರಾಜ್ಯಕಾರಭಾರಕ್ಕೆ ಮಾಡಬೇಕಾದ ವೆಚ್ಚವನ್ನು ಮತ್ತು ಅದಕ್ಕೋಸುಗ ಕರವನ್ನು ಕೂಡಿಸಿಬರುವ ಉತ್ಪನ್ನವನ್ನು ಮೊದಲಿನ ಪದ್ಧತಿಯಂತೆ ರಾಜನ ಜೀವಮಾನದಲ್ಲಿ ಒಮ್ಮೆಯೆ ಮಂಜೂರ ಮಾಡದೆ ಅದನ್ನು ವರ್ಷವರ್ಷಕ್ಕೆ ಮಂಜೂರ ಮಾಡಬೇಕೆಂಬ ಪದ್ಧತಿ ಪ್ರಾರಂಭವಾಯ್ತು. ಮಂಜೂರ ಮಾಡಿದ ಹಣವನ್ನಾದರೂ ಹೇಗೆ ವೆಚ್ಚ ಮಾಡಬೇಕೆಂಬುದನ್ನು ಪಾರ್ಲಿಮೆಂಟೇ ನಿಶ್ಚಯಿಸುವ ಕ್ರಮವು ಪ್ರಾರಂಭವಾಯ್ತು. ಆದುದರಿಂದ ರಾಜ್ಯಕಾರಭಾರದ ವೆಚ್ಚಕ್ಕೋಸುಗ ಪಾರ್ಲಿಮೆಂಟಿನ ಮಂಜೂರಿಯನ್ನು ದೊರಕಿಸಲು ಪ್ರತಿವರ್ಷವು ಪಾರ್ಲಿಮೆಂಟಿನ ಅಧಿವೇಶನವನ್ನು ಕರೆವುದು ಅರಸನಿಗೆ ಅವಶ್ಯವಾಯಿತು.

**ರಾಜ್ಯಕ್ರಾಂತಿ ಮತ್ತು ಆ ಬಳಿಕ ಆದ ಕಾಯ್ದೆಗಳ ಪರಿಣಾಮವು**— ೧೬೮೮ರಲ್ಲಿ ಆದ ರಾಜ್ಯಕ್ರಾಂತಿಯ ತರುವಾಯದಲ್ಲಿ ಮಾಡಲ್ಪಟ್ಟ ಬಿಲ್ ಆಫ್ ರೈಟ್ಸ ಮತ್ತು ಮ್ಯುಟಿನಿ ಅಕ್ಟ ಈ ಕಾಯದೆಗಳಿಂದ ಮತ್ತು ಬೊಕ್ಕಸದ ಮೇಲೆ ಪಾರ್ಲಿಮೆಂಟಿನ ಅಧಿಕಾರದಿಂದ ಇಂಗ್ಲಂಡಿನಲ್ಲಿ ಕಳೆದ ೫೦ ವರ್ಷಗಳಲ್ಲಿ ರಾಜನ ಮತ್ತು ಪಾರ್ಲಿಮೆಂಟಿನ ನಡುವೆ ನಡೆದಿದ್ದ ಕಲಹವು ನಿಂತಂತಾಗಿ ಪಾರ್ಲಿಮೆಂಟಿನ

ವರ್ಚಸ್ಸು ಸ್ಥಾಪಿಸಲ್ಪಟ್ಟಿತು. ೨ನೆಯ ಜೇಮ್ಸನು ರಾಜ್ಯತ್ಯಾಗವನ್ನು ಮಾಡಿದ ಬಳಿಕ ವಂಶಪರಂಪರೆಯ ಅಧಿಕಾರದಿಂದ ಇಂಗ್ಲಂಡಿನ ಪಟ್ಟವನ್ನು ಅವನ ಮಗನಾದ ಜೇಮ್ಸ್ ಎಡ್ವರ್ಡನಿಗೆ ಕೊಡದೆ ಪಾರ್ಲಿಮೆಂಟು ತನ್ನ ಅಧಿಕಾರದಿಂದ ದೂರದ ಆಪ್ತರಾದ ವಿಲಿಯಮ್ ಮತ್ತು ಮೇರಿ ಇವರಿಗೆ ಕೊಟ್ಟುದರಿಂದ ಇಂಗ್ಲಂಡಿನ ಅರಸನ ರಾಜಪದವು ವಂಶಪರಂಪರೆಯ ಅಧಿಕಾರವನ್ನು ಅವಲಂಬಿಸದೆ ಪಾರ್ಲಿಮೆಂಟ ಸಭೆಯನ್ನು ಅವಲಂಬಿಸಿದೆಂಬ ಮಾತು ನಿಶ್ಚಿತವಾಯಿತು. ಬಿಲ್ ಆಫ್ ರೈಟ್ಸ ಮತ್ತು ಮ್ಯುಟಿನಿ ಅಕ್ಟ ಇವುಗಳಿಂದ ರಾಜ್ಯಕಾರಭಾರದ ಕೆಲಸಗಳಲ್ಲಿಯೂ ಪಾರ್ಲಿಮೆಂಟಿನ ವರ್ಚಸ್ಸು ಸ್ಥಾಪಿಸಲ್ಪಟ್ಟಿತು. ಇದರಿಂದ "ರಾಜನ ಸತ್ತೆ ಈಶ್ವರದತ್ತವಾದುದು" (Divine Right Theory) ಎಂಬ ತತ್ವವು ಅಳಿದು ಪಾರ್ಲಿಮೆಂಟಿನ ತಂತ್ರದಿಂದ ರಾಜ್ಯಕಾರಭಾರವನ್ನು ಸಾಗಿಸುವುದು ರಾಜನಿಗೆ ಅವಶ್ಯವಾಯಿತು. ವಿಲಿಯಮನು ರಾಜನಾದ ಬಳಿಕ ಅವನ ಮಂತ್ರಿಮಂಡಳದಲ್ಲಿ ವ್ಹಿಗ್ ಮತ್ತು ಟೋರಿ ಈ ಎರಡೂ ಪಕ್ಷಗಳ ಪ್ರಮುಖರಿದ್ದರು. ಆದರೆ ಇದರಿಂದ ಮತಭೇದವು ಉಂಟಾಗುತ್ತಿತ್ತು ಮತ್ತು ಒಂದೆ ನೀತಿಯನ್ನು ನಿಶ್ಚಯಿಸುವುದು ಕಠಿಣವಾಗುತ್ತಿತ್ತು. ಆದುದರಿಂದ ತನ್ನ ಮಂತ್ರಿಮಂಡಳದಲ್ಲಿಯ ಮಂತ್ರಿಗಳಲ್ಲಿ ಐಕ್ಯವು ಇರಬೇಕೆಂದು ಮತ್ತು ಅದಕ್ಕೆ ಪಾರ್ಲಿಮೆಂಟಿನ ಬೆಂಬಲವು ದೊರೆಯಬೇಕೆಂದು ವಿಲಿಯಮನು ಪಾರ್ಲಿಮೆಂಟಿನ ಸಭೆಯಲ್ಲಿ ಮತಾಧಿಕ್ಯವಿದ್ದ ಪಕ್ಷಕ್ಕೆ ಮಾನ್ಯರಾದವರನ್ನು ತನ್ನ ಮಂತ್ರಿಮಂಡಳದಲ್ಲಿ ಪ್ರಧಾನರಾಗಿ ನಿಯೋಜಿಸಿದನು (೧೬೯೬). ವಿಲಿಯಮನ ಈ ಕೃತಿಯಿಂದ ಅವನ ಮಂತ್ರಿಗಳಿಗೆ ಪಾರ್ಲಿಮೆಂಟಿನ ಬೆಂಬಲವು ದೊರೆತು ಕಬಿನೆಟಿನ (ಮಂತ್ರಿಮಂಡಳ) ಆಲೋಚನೆಯ ಸಾಹಾಯ್ಯದಿಂದ ರಾಜ್ಯಕಾರಭಾರವನ್ನು ಸಾಗಿಸುವ ಪದ್ಧತಿ ಮುಂದೆ ದೃಢವಾಯಿತು.

**ಟಾಲರೇಶನ್ ಅಕ್ಟ (೧೬೮೯)**—ಪಾರ್ಲಿಮೆಂಟು ೧೬೮೯ರಲ್ಲಿ ಟಾಲರೇಶನ್ ಅಕ್ಟ ಎಂಬ ಕಾಯದೆಯನ್ನು ಮಾಡಿತು. ಈ ಕಾಯದೆಯಿಂದ ಇಂಗ್ಲಂಡಿನ ಎಪಿಸ್ಕೊಪೇಲಿಯನ್ ಪಂಥವನ್ನು ಮನ್ನಿಸದಿದ್ದ ಆದರೆ ಪ್ರಾಟೆಸ್ಟಂಟ ಪಂಥದವರಾದ ಡಿಸೆಂಟರ್ಸ, ನಾನ್ ಕನ್‌ಫಾರ್ಮಿಸ್ಟ್ಸ ಜನರಿಗೆ ಧಾರ್ಮಿಕ ವಿಷಯದಲ್ಲಿ ತಮ್ಮ ಮತದಂತೆ ಸಾರ್ವಜನಿಕ ಪ್ರಾರ್ಥನೆಯನ್ನು ಮಾಡಲು ಮತ್ತು ವರ್ತಿಸಲು ಸ್ವಾತಂತ್ರ್ಯವು ದೊರೆತಿತು. ರೋಮನ್ ಕಥಲಿಕ ಪಂಥದವರಿಗೆ ಈ ಸ್ವಾತಂತ್ರ್ಯವು ದೊರೆಯಲಿಲ್ಲ. ಆದರಿಂದ ಅವರು ಧಾರ್ಮಿಕ ಕಾಯದೆಗಳನ್ನು ಮುರಿದರೆ ಮೊದಲಿನಂತೆ ದಂಡವನ್ನು ಕೊಡಬೇಕಾಗುತ್ತಿತ್ತು.

**ಟ್ರಾಯೆನಿಯಲ್ ಅೕಕ್ಟ, ೧೬೯೪**—ಪಾರ್ಲಿಮೆಂಟು ೧೬೯೪ರಲ್ಲಿ ಟ್ರಾಯೆನಿಯಲ್ ಅಕ್ಟ ಎಂಬ ಕಾಯದೆಯನ್ನು ನಿರ್ಮಿಸಿತು. ಈ ಕಾಯದೆಯಿಂದ ಪಾರ್ಲಿಮೆಂಟಿನ ಚುನಾವಣೆ ಮೂರು ವರ್ಷಗಳಿಗೊಮ್ಮೆ ಆಗಬೇಕೆಂದು ಮತ್ತು ಆ ಮೂರು ವರ್ಷಗಳಲ್ಲಿ ಒಮ್ಮೆಯಾದರೂ ಪಾರ್ಲಿಮೆಂಟಿನ ಅಧಿವೇಶನವು ಸೇರಯಬೇಕೆಂದು ನಿಶ್ಚಿತವಾಯ್ತು. ಅದರಿಂದ ಪಾರ್ಲಿಮೆಂಟಿನ ಸಭೆಯನ್ನು ಕರೆಯದೆ ೧ನೆಯ ಚಾರ್ಲಸನಂತೆ ೧೧ ವರ್ಷಗಳವರೆಗೆ ಅನಿಯಂತ್ರಿತವಾಗಿ ರಾಜ್ಯಕಾರಭಾರವನ್ನು ಮಾಡುವ ಅಥವಾ ಒಮ್ಮೆ ಚುನಾಯಿಸಲ್ಪಟ್ಟ ಪಾರ್ಲಿಮೆಂಟು ಲಾಂಗ ಪಾರ್ಲಿಮೆಂಟಿನಂತೆ ಅಥವಾ ೨ನೆಯ ಚಾರ್ಲಸನ ಆಳ್ಕೆಯಲ್ಲಿಯ ಕವೇಲಿಯರ್ ಪಾರ್ಲಿಮೆಂಟಿನಂತೆ ಸುಮಾರು ೨೦ ವರ್ಷಗಳವರೆಗೆ ಉಳಿವುದು ನಿಂತಿತು, ಮತ್ತು ಪಾರ್ಲಿಮೆಂಟಿನ ಮೇಲೆ ಮತ್ತು ಅಪ್ರತ್ಯಕ್ಷವಾಗಿ ಅರಸನ ಮೇಲೆ ಲೋಕಮತದ ಪ್ರಭಾವವು ಆಗತೊಡಗಿತು.

**ಲೇಖನ ಸ್ವಾತಂತ್ರ್ಯವು**— ಮೊದಲು ಮುದ್ರಣಾಲಯಗಳ ಮೇಲೆ ಮತ್ತು ಅವುಗಳಲ್ಲಿ ಮುದ್ರಿಸಲ್ಪಡುವ ಸಂಗತಿಗಳ ಮೇಲೆ ನಿಯಂತ್ರಣವು ಬಹಳವಾಗಿದ್ದಿತು. ಪ್ರತಿವರ್ಷವು ಪಾರ್ಲಿಮೆಂಟು **ಲಾಯಸೆನ್ಸಿಂಗ ಅೕಕ್ಟ** ಎಂಬ ಕಾಯದೆಯನ್ನು ಮಾಡುತ್ತಿದ್ದಿತು. ಈ ಕಾಯದೆಯಿಂದ ಇಂಗ್ಲಂಡಿನಲ್ಲಿ ಪ್ರಸಿದ್ಧವಾಗುವ ಎಲ್ಲ ಸಂಗತಿಗಳು ಸೂಕ್ಷ್ಮವಾಗಿ ಪರೀಕ್ಷಿಸಲ್ಪಡುತ್ತಿದ್ದುವು. ಅಧಿಕಾರಿಗಳು ಬೇಡವೆಂದ ಸಂಗತಿಗಳು ಮುದ್ರಿಸಲ್ಪಡಬಾರದೆಂಬ ನಿಯಮವಿದ್ದಿತು. ಆದರೆ ಜನರಿಗೆ ಲೇಖನ ಸ್ವಾತಂತ್ರ್ಯವು ದೊರೆಯಬೇಕು ಮತ್ತು ಅದರಿಂದ ರಾಜ್ಯಕಾರಭಾರದ ಮೇಲೆ ಯೋಗ್ಯವಾದ ಟೀಕೆಯಾಗಬೇಕು ಎಂಬ ಉದ್ದೇಶದಿಂದ ಪಾರ್ಲಿಮೆಂಟು ಪ್ರತಿವರ್ಷವೂ ಮಾಡುತ್ತಿದ್ದ ಲಾಯಸೆನ್ಸಿಂಗ ಅಕ್ಟನ್ನು ೧೬೯೫ರಲ್ಲಿ ಮಾಡಲಿಲ್ಲ. ಅದರಿಂದ ಲೇಖನ ಸ್ವಾತಂತ್ರ್ಯದ ಮೇಲಿನ ನಿರ್ಬಂಧವು ತನ್ನಿಂದ ತಾನೆ ಇಲ್ಲದಂತಾಯ್ತು.

**ಅೕಕ್ಟ ಆಫ್ ಸೆಟ್ಲಮೆಂಟ, ೧೭೦೧**— ಪಾರ್ಲಿಮೆಂಟು ೧೬೮೯ರಲ್ಲಿ ವಿಲಿಯಮ್ ಮತ್ತು ಮೇರಿ ಇವರಿಗೆ ರಾಜಪದವನ್ನು ಇತ್ತಿತು. ಇವರು ನಿಪುತ್ರಿಕರಾಗಿ ಮಡಿದರೆ ಮೇರಿಯ ತಂಗಿಯಾದ ಅೕನ್ ಇವಳಿಗೆ ರಾಜಪದವು ದೊರೆಯಬೇಕೆಂದು ನಿಶ್ಚಯಿಸಲ್ಪಟ್ಟಿತು. ೧೬೯೪ರಲ್ಲಿ ಮೇರಿ ನಿಪುತ್ರಿಕೆಯಾಗಿ ಮಡಿದಳು. ಮತ್ತು ೧೭೦೦ರಲ್ಲಿ ಅನ್ ಇವಳ ಮಗನಾದ "ಡ್ಯೂಕ್ ಆಫ್ ಗ್ಲೂಸೆಸ್ಟರ್" ಇವನು ಮಡಿದನು. ಆದುದರಿಂದ ಅನ್ ಇವಳ ತರುವಾಯದಲ್ಲಿ ಪಟ್ಟಕ್ಕೆ ಯಾರು ಬರಬೇಕೆಂಬುದನ್ನು ಕುರಿತು ಯೋಜನೆಯಾಗುವುದು ಅವಶ್ಯವಾಯಿತು.

ಆದುದರಿಂದ ೧೭೦೧ರಲ್ಲಿ ಪಾರ್ಲಿಮೆಂಟು ಆಕ್ಟ ಆಫ್ ಸೆಟ್ಲಮೆಂಟ ಎಂದು ಕಾಯ್ದೆ ಯನ್ನು ಮಾಡಿತು. ಈ ಕಾಯದೆಯಿಂದ ೧ನೆಯ ಜೇಮ್ಸನ ಮೊಮ್ಮಗ ಳಾದ ಹನೋವರದ ಪ್ರಾಟೆಸ್ಟಂಟ ಪಂಥದ ರಾಣಿಯಾದ ಸೋಫಿಯಾ (೧ನೆಯ ಜೇಮ್ಸನ ಎಲಿಝಬೆಥ್ ಎಂಬ ಮಗಳ ಮಗಳು) ಇವಳಿಗೆ ಮತ್ತು ಅವಳ ಪ್ರಾಟೆಸ್ಟಂಟ ಪಂಥದ ವಾರಸದಾರನಿಗೆ ಪಟ್ಟವು ದೊರೆಯಬೇಕೆಂದು ನಿಶ್ಚಯವಾ ಯಿತು. ಸೋಫಿಯಾ ಮತ್ತು ಅವಳ ವಾರಸದಾರರು ಪ್ರಾಟೆಸ್ಟಂಟ ಪಂಥದವ ರಿದ್ದರು. ಸೋಫಿಯಾ ಇವಳಿಗಿಂತ ಸ್ಟುವರ್ಟ ವಂಶಕ್ಕೆ ಸಂಬಂಧಿಸಿದ ಸಮೀಪದ ಕೆಲವು ವಾರಸದಾರರು ಬದುಕಿದ್ದರು. ಆದರೆ ಅವರು ರೋಮನ್ ಕಥಲಿಕ್ ಪಂಥದವರಿದ್ದುದರಿಂದ ಪಾರ್ಲಿಮೆಂಟು ಅವರ ಹಕ್ಕನ್ನು ಮನ್ನಿಸಲಿಲ್ಲ. ಈ ಬಗೆ ಯಾಗಿ ಪ್ರಾಟೆಸ್ಟಂಟ ಪಂಥದವರಿಗೆಯೆ ಇಂಗ್ಲಂಡಿನ ಪಟ್ಟವು ದೊರೆಯಬೇಕು ಮತ್ತು ಅದು ವಂಶಪರಂಪರೆಯ ಹಕ್ಕಿನಿಂದ ದೊರೆಯದೆ ಪಾರ್ಲಿಮೆಂಟಿನ ಕಾಯ್ದೆ ಯಿಂದ ಕೊಡಲ್ಪಡಬೇಕು ಎಂಬ ಮಾತು ಕಾಯ್ದೆಯಿಂದ ನಿಶ್ಚಿತವಾಯ್ತು.

ಈ ಕಾಯ್ದೆಯಲ್ಲಿ ಇನ್ನೊಂದು ಮಹತ್ವದ ಮಾತು ಸೇರಿಸಲ್ಪಟ್ಟಿತು ಮತ್ತು ಇದ ರಿಂದ ನ್ಯಾಯಾಧೀಶರಿಗೆ ಕೆಲಮಟ್ಟಿಗೆ ಸ್ವಾತಂತ್ರ್ಯವು ದೊರೆತಿತು. ನ್ಯಾಯಾಧೀಶ ರನ್ನು ಕೆಲಸದಿಂದ ದೂರಮಾಡುವ ಅಧಿಕಾರವು ರಾಜನಿಗಿದ್ದಿತು. ಆದುದರಿಂದ ನ್ಯಾಯಾಧೀಶರ ಮೇಲೆ ರಾಜನ ವರ್ಚಸ್ಸು ಇರುತ್ತಿತ್ತು. ಈ ಅಧಿಕಾರವನ್ನು ದುರುಪಯೋಗಿಸುವ ಮೋಹವೂ ರಾಜನಿಗೆ ಆಗುತ್ತಿತ್ತು. ೧ನೆಯ ಜೇಮ್ಸನು, ೧ನೆಯ ಚಾರ್ಲಸನು, ೨ನೆಯ ಜೇಮ್ಸನು ನ್ಯಾಯಾಧೀಶರ ಮೇಲೆ ತಮ್ಮ ವರ್ಚ ಸ್ಸನ್ನು ಉಪಯೋಗಿಸಿ ಹ್ಯಾಂಪಡೆನ್, ಹೇಲ್ಸ ಮೊದಲಾದವರ ವಿಷಯದಲ್ಲಿ ತಮಗೆ ಅನುಕೂಲವಾದ ನಿರ್ಣಯವನ್ನು ಮಾಡಿಸಿಕೊಂಡರು. ಇನ್ನುಮುಂದೆ ಹೀಗಾಗಬಾರದೆಂದು ಈ ಕಾಯ್ದೆಯಿಂದ ವ್ಯವಸ್ಥೆಮಾಡಲ್ಪಟ್ಟಿತು. ನ್ಯಾಯಾ ಧೀಶರಿಗೆ ಅರಸನ ಇಚ್ಛೆಯನ್ನು ಅವಲಂಬಿಸಿರುವ ಪ್ರಸಂಗವು ಬರಬಾರದೆಂದು, ನ್ಯಾಯಾಧೀಶರ ನಿಯೋಜನವು ಅವರು ಬದುಕಿರುವ ವರೆಗೆ ಇರಬೇಕು ಮತ್ತು ಪಾರ್ಲಿಮೆಂಟಿನ ಎರಡೂ ಸಭೆಗಳು "ಅವರನ್ನು ಕೆಲಸದಿಂದ ದೂರ ಮಾಡಬೇಕು", ಎಂಬ ನಿರ್ಣಯವನ್ನು ಮಾಡಿದ ಬಳಿಕ ಅದಕ್ಕೆ ರಾಜನ ಸಮ್ಮತಿ ದೊರೆತರೆ ಮಾತ್ರ ನ್ಯಾಯಾಧೀಶರು ಕೆಲಸದಿಂದ ದೂರಮಾಡಲ್ಪಡಬೇಕೆಂದು ನಿಶ್ಚಯಿ ಸಲ್ಪಟ್ಟಿತು.

**ವಿಲಿಯಮನ ಪರರಾಷ್ಟ್ರೀಯ ನೀತಿ**– ವಿಲಿಯಮನು ಹಾಲಂಡಿನ ಲೋಕಸತ್ತಾತ್ಮಕ ರಾಜ್ಯದ ಅಧ್ಯಕ್ಷನಾಗಿರುವಾಗಲೆ ಅವನಿಗೂ ಫ್ರಾನ್ಸಿಗೂ

ವೈರವಿದ್ದಿತು. ಫ್ರಾನ್ಸಿನ ೧೪ನೆಯ ಲುಯಿ ಅತ್ಯಂತ ಮಹತ್ವಾಕಾಂಕ್ಷಿಯಾಗಿದ್ದನು. ಉತ್ತರದ ಕಡೆಯಲ್ಲಿದ್ದ ರ್‍ಹಾಯಿನ್ ನದಿಯವರೆಗೆ ಫ್ರಾನ್ಸಿನ ಸೀಮೆಯನ್ನು ಬೆಳಿಸಬೇಕೆಂದು ಮತ್ತು ಅದಕ್ಕೋಸುಗ ಪ್ಯಾಲಾಟೈನ್, ಲಾರೆನ್, ಸ್ಪ್ಯಾನಿಶ್, ನೆದರಲಂಡ, ಮತ್ತು ಹಾಲಂಡಿನ ದಕ್ಷಿಣಭಾಗ ಈ ಪ್ರಾಂತಗಳನ್ನು ವಶಪಡಿಸಿಕೊಳ್ಳಬೇಕೆಂದು ಅವನ ಇಚ್ಛೆ ಇದ್ದಿತು, ಮತ್ತು ಅದಕ್ಕೋಸುಗ ಅವನ ಪ್ರಯತ್ನಗಳು ನಡೆದಿದ್ದುವು. ಈ ಪ್ರಾಂತಗಳು ಲುಯಿಯ ವಶದಲ್ಲಿ ಹೋದರೆ ಅಖಿಲ ಹಾಲಂಡದೇಶವು ಅವನ ವಶವಾಗಲು ತಡವಾಗದೆಂದು ಕಂಡು ಅವನಿಗೆ ವಿರೋಧ ಮಾಡಲು ವಿಲಿಯಮನು ಸ್ಪೇನ ಮತ್ತು ಜರ್ಮನಿಯೊಳಗಿನ ಸಂಸ್ಥಾನಗಳ ಒಂದು ಸಂಘವನ್ನು ಆಗ್ಸಬರ್ಗ ಎಂಬಲ್ಲಿ ಸ್ಥಾಪಿಸಿದ್ದನು (೧೬೮೮). ಮುಂದೆ ವಿಲಿಯಮನು ಇಂಗ್ಲಂಡಿನ ಅರಸನಾದ ಬಳಿಕ ೧೪ನೆಯ ಲುಯಿಯ ವಿರುದ್ಧವಾಗಿ ಇಂಗ್ಲಂಡ ದೇಶವೂ ಆಗ್ಸಬರ್ಗದ ಸಂಘದಲ್ಲಿ ಸೇರಬಹುದೆಂದು ಅವನಿಗೆ ಆಶೆಯಿದ್ದಿತು. ೨ನೆಯ ಚಾರ್ಲಸ ಮತ್ತು ೨ನೆಯ ಜೇಮ್ಸ ಇವರ ಸಹಾನುಭೂತಿ ಲುಯಿಗೆ ಇದ್ದಿತಾದರೂ ಇಂಗ್ಲಂಡಿನ ಪಾರ್ಲಿಮೆಂಟಿನ ನೀತಿ ಲುಯಿಯ ವಿರುದ್ಧವಾಗಿಯೇ ಇದ್ದಿತು. ಆದುದರಿಂದ ಲುಯಿಯ ವಿರುದ್ಧವಾಗಿ ಇಂಗ್ಲಂಡಿನ ಪಾರ್ಲಿಮೆಂಟಿನ ಮನವನ್ನು ಒಲಿಸುವುದು ವಿಲಿಯಮನಿಗೆ ಕಠಿಣವಾಗಲಿಲ್ಲ. ಇಂಗ್ಲಂಡಿನಲ್ಲಿ ರಾಜ್ಯಕ್ರಾಂತಿಯಾಗಿ ವಿಲಿಯಮನು ಅರಸನಾದ ಬಳಿಕ ೧೪ನೆಯ ಲುಯಿ ೨ನೆಯ ಜೇಮ್ಸನಿಗೆ ಆಶ್ರಯವಿತ್ತನು ಮತ್ತು ಸ್ಕಾಟಲಂಡ ಮತ್ತು ಐರ್ಲಂಡಗಳಲ್ಲಿ ೨ನೆಯ ಜೇಮ್ಸನ ಪಕ್ಷದವರು ನಡೆಯಿಸಿದ್ದ ಬಂಡುಗಳಿಗೆ ಸಹಾಯವಿತ್ತನು. ಆದುದರಿಂದ ಇಂಗ್ಲಂಡು ಫ್ರಾನ್ಸಿನ ವಿರುದ್ಧ ಯುದ್ಧವನ್ನು ಸಾರಿತು (೧೬೮೯).

ಸ್ಕಾಟಲಂಡಿನಲ್ಲಿಯ ಬಂಡು (೧೬೮೯-೯೨) — ಇಂಗ್ಲಂಡಿನಲ್ಲಿ ರಾಜ್ಯಕ್ರಾಂತಿಯಾಗಿ ವಿಲಿಯಮನಿಗೆ ರಾಜಪದವು ದೊರೆತಿತು. ಆದರೆ ಸ್ಕಾಟಲಂಡಿನಲ್ಲಿಯ ಕೆಲವು ಹಾಯ್‌ಲ್ಯಾಂಡರರು ಅದಕ್ಕೆ ಮಾನ್ಯತೆಯನ್ನು ಕೊಡಲಿಲ್ಲ. ೨ನೆಯ ಜೇಮ್ಸನಿಗೆ ಮತ್ತೆ ಪಟ್ಟಗಟ್ಟಬೇಕೆಂದು ಅವರು ವಾಯಕೌಂಟ ಡಂಡಿ ಇವನ ನೇತೃತ್ವದಲ್ಲಿ ಬಂಡನ್ನು ಹೂಡಿದರು. ಸ್ಕಾಟಲಂಡಿನಲ್ಲಿ ಮ್ಯಾಕೆ ಎಂಬವನ ನೇತೃತ್ವದಲ್ಲಿ ರಾಜಪಕ್ಷದ ಸೈನ್ಯವು ಸಿದ್ಧವಿದ್ದಿತು. ಆದರೆ ಡಂಡಿ ಇವನು ಕಿಲಿಕ್ರಾನಕಿಯ ಬಳಿಯಲ್ಲಿ ರಾಜಪಕ್ಷದ ಸೈನ್ಯವನ್ನು ಸೋಲಿಸಿದನು (೧೬೮೯), ಆದರೆ ಆ ಯುದ್ಧದಲ್ಲಿ ಅವನು ಮಡಿದನು. ಡಂಡಿ ಮಡಿದಬಳಿಕ ಹಾಯ್‌ಲ್ಯಾಂಡರರು ಎದೆಗೆಟ್ಟು ಓಡಿಹೋದರು. ಆ ಬಳಿಕ ಸ್ಕಾಟಲಂಡಿನಲ್ಲಿಯ ಎಲ್ಲ ಸರದಾರರು

ವಿಲಿಯಮನ ಸತ್ತೆಗೆ ಮಾನ್ಯತೆಯನ್ನಿತ್ತು ೧೬೯೨ ಜಾನೆವರಿ ೧ನೆಯ ತಾರೀಖಿನ ಒಳಗಾಗಿ ರಾಜನಿಷ್ಠೆಯ ಶಪಥವನ್ನು ಮಾಡಬೇಕೆಂದು ರಾಜಾಜ್ಞೆಯಾಯಿತು. ಈ ರಾಜಾಜ್ಞೆಯಂತೆ ಎಲ್ಲ ಸರದಾರರು ವಿಲಿಯಮನ ಸತ್ತೆಯನ್ನು ಮನ್ನಿಸಿದರು. ಆದರೆ **ಮೆಕ್‌ಡೋನಲ್ಡ** ಕುಟುಂಬದಲ್ಲಿಯ ಸರದಾರರು ನಿಶ್ಚಿತವಾದ ಅವಧಿಯೊಳಗಾಗಿ ಬಂದು ಶಪಥವನ್ನು ಮಾಡದಿದ್ದುದರಿಂದ **ಗ್ಲೆನ್‌ಕೊ** ಎಂಬಲ್ಲಿ ಅವರ ಮತ್ತು ಅವರ ಅನುಯಾಯಿಗಳ ಕೊಲೆ ಮಾಡಲ್ಪಟ್ಟಿತು. ಈ ಬಗೆಯಾಗಿ ಸ್ಕಾಟಲಂಡಿನ ಬಂಡು ಮುರಿಯಿತು.

**ಐರ್ಲಂಡಿನಲ್ಲಿಯ ಬಂಡು (೧೬೮೯-೯೧)**— ಇದೇ ಸಮಯದಲ್ಲಿ ಐರ್ಲಂಡಿನಲ್ಲಿಯೂ ಜೇಮ್ಸನ ಪಕ್ಷದವರು ಬಂಡನ್ನು ಆರಂಭಿಸಿದ್ದರು. ಐರ್ಲಂಡಿನ ಮೂಲನಿವಾಸಿಗಳು ರೋಮನ್ ಕಥಲಿಕ್ ಪಂಥದವರಿದ್ದು ಅವರ ಜನಸಂಖ್ಯೆ ೧೦ ಲಕ್ಷವಿದ್ದಿತು, ಮತ್ತು ಐರ್ಲಂಡಿನಲ್ಲಿಯ ⅓ದಷ್ಟು ಭೂಮಿ ಅವರ ವಶದಲ್ಲಿದ್ದಿತು. ಐರ್ಲಂಡಿನಲ್ಲಿ ಇಂಗ್ಲಂಡ್ ಮತ್ತು ಸ್ಕಾಟಲಂಡ್ ದೇಶಗಳಿಂದ ವಸಾಹತುಗಳನ್ನು ಮಾಡಲು ಬಂದ ಪ್ರಾಟೆಸ್ಟಂಟ ಪಂಥದವರ ಜನಸಂಖ್ಯೆ ೨ ಲಕ್ಷವಿದ್ದಿತು. ಆದರೂ ⅔ದಷ್ಟು ಭೂಮಿ ಇವರ ವಶದಲ್ಲಿದ್ದಿತು. ಇವರ ವಶದಲ್ಲಿದ್ದ ಭೂಮಿ ಮೊದಲು ರೋಮನ್ ಕಥಲಿಕ್ ಜನರ ಭೂಮಿಯಾಗಿತ್ತು; ಆದುದರಿಂದ ರೋಮನ್ ಕಥಲಿಕ್ ಜನರು ಪ್ರಾಟೆಸ್ಟಂಟರ ವಿಷಯದಲ್ಲಿ ದ್ವೇಷವನ್ನು ತಳೆದಿದ್ದರು. ಇಂಗ್ಲಂಡಿನಲ್ಲಿ ರಾಜ್ಯಕ್ರಾಂತಿಯಾಗಿ ವಿಲಿಯಮನು ಅರಸನಾದಬಳಿಕ ಐರಿಶ್ ರೋಮನ್ ಕಥಲಿಕ್ ಜನರು ೨ನೆಯ ಜೇಮ್ಸನಿಗೋಸುಗ ಬಂಡನ್ನು ಹೂಡಿ ಪ್ರಾಟೆಸ್ಟಂಟರ ಮೇಲೆ ದಾಳಿಯನ್ನು ಪ್ರಾರಂಭಿಸಿದರು. ಆಗ ಪ್ರಾಟೆಸ್ಟಂಟರು **ಲಂಡನ್‌ಡೆರಿ** ಮತ್ತು **ಎನಿಸ್‌ಕಿಲೇನ** ಎಂಬಲ್ಲಿಯ ಭದ್ರವಾದ ಕೋಟೆಗಳನ್ನು ಸೇರಿದರು. ಆ ಸಮಯದಲ್ಲಿ **ಟಿರ್ಕೊನೆಲದ ಸರದಾರನು** ಐರ್ಲಂಡಿನ ಲಾರ್ಡ ಡೆಪ್ಯುಟಿಯಾಗಿದ್ದನು. ಅವನು ರೋಮನ್ ಕಥಲಿಕ್ ಪಂಥದವನು. ಅವನ ಸಾಹಾಯ್ಯದಿಂದ ತನಗೆ ಇಂಗ್ಲಂಡಿನ ಪಟ್ಟವು ಮತ್ತೆ ದೊರೆಯಬಹುದೆಂದು ಬಗೆದು ೨ನೆಯ ಜೇಮ್ಸನು ೧೪ನೆಯ ಲುಯಿ ಕೊಟ್ಟ ಫ್ರೆಂಚ ಸೈನ್ಯದೊಡನೆ ಐರ್ಲಂಡಿಗೆ ಬಂದನು (೧೬೮೯ ಮಾರ್ಚ). ಅವನು ಲಂಡನ್‌ಡೆರಿ ಕೋಟೆಯನ್ನು ಮುತ್ತಿ ಅದನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ಒಳಗಿದ್ದ ಪ್ರಾಟೆಸ್ಟಂಟ ಪಂಥದವರು ೧೦೫ ದಿವಸಗಳವರೆಗೆ ಗಟ್ಟಿಯಾಗಿ ಉಳಿದರು. ಕೊನೆಗೆ ಅವರಿಗೆ ಇಂಗ್ಲಂಡಿನಿಂದ ಸೈನ್ಯದ ಸಾಹಾಯ್ಯವು ಬಂದುದರಿಂದ ಜೇಮ್ಸನು ಮುತ್ತಿಗೆಯನ್ನು ಹಿಂತೆಗೆದನು. ಎನಿಸ್‌ಕಿಲೇನ್ ಕೋಟೆ

ಯನ್ನೂ ರೋಮನ್ ಕೆಥಲಿಕರು ಮುತ್ತಿದರು, ಆದರೆ ಒಳಗಿನ ಪ್ರಾಟೆಸ್ಟಂಟ ಪಂಥದವರು ಅವರೊಡನೆ ಕಾದಿ, ಸೋಲಿಸಿ, ಬೆನ್ನಟ್ಟಿ **ನ್ಯೂ ಟೌನ್ ಬಟ್ಲರ್** ಎಂಬಲ್ಲಿ ಅವರನ್ನು ಸಂಪೂರ್ಣವಾಗಿ ಸೋಲಿಸಿದರು. ಆ ಬಳಿಕ ವಿಲಿಯಮನು ಸ್ವತಃ ಐರ್ಲಂಡಿಗೆ ಹೋಗಿ **ಬಾಯಿನ್** ಎಂಬಲ್ಲಿಯ ಯುದ್ಧದಲ್ಲಿ ಜೇಮ್ಸನನ್ನು ಸೋಲಿಸಿದನು (೧೬೯೦ ಜುಲೈ). ಜೇಮ್ಸನು ಸೋತು ಮತ್ತೆ ಫ್ರಾನ್ಸಿಗೆ ಓಡಿ ಹೋದನು. ಐರ್ಲಂಡಿನ ಜನರು ವಿಲಿಯಮನ ಸತ್ತೆಗೆ ಮಾನ್ಯತೆಯನ್ನಿತ್ತರು. **ಲಿಮರಿಕ್** ಎಂಬಲ್ಲಿ ಒಪ್ಪಂದವಾಗಿ ಐರಿಶ್ ರೋಮನ್ ಕಥಲಿಕ್ ಜನರಿಗೆ ಧಾರ್ಮಿಕ ವಿಷಯದಲ್ಲಿ ಸ್ವಾತಂತ್ರ್ಯವಿರಬೇಕೆಂದು ನಿಶ್ಚಯಿಸಲ್ಪಟ್ಟಿತು. ಆದರೆ ಐರ್ಲಂಡಿನ ಪ್ರಾಟೆಸ್ಟಂಟ ಪಂಥದ ಪಾರ್ಲಿಮೆಂಟು ಈ ಒಪ್ಪಂದದಂತೆ ನಡೆದು ಕೊಳ್ಳದೆ ಐರಿಶ್ ರೋಮನ್ ಕಥಲಿಕ್ ಜನರ ಛಲನೆಯನ್ನು ಪ್ರಾರಂಭಿಸಿ ದುದರಿಂದ ಪ್ರಾಟೆಸ್ಟಂಟ ಪಂಥದವರ ವಿಷಯದಲ್ಲಿಯೂ ಇಂಗ್ಲಂಡಿನ ವಿಷಯ ದಲ್ಲಿಯೂ ಅವರ ದ್ವೇಷವು ಬೆಳೆಯುತ್ತಹೋಯಿತು.

**ಫ್ರಾನ್ಸಿನೊಡನೆ ಯುದ್ಧವು (೧೬೮೯-೧೬೯೭)**—ಈ ಯುದ್ಧವು ೮ ವರ್ಷಗಳ ವರೆಗೆ ಸಾಗಿತು. ಈ ಯುದ್ಧವು "ಇಂಗ್ಲಂಡಿನ ಪಟ್ಟಕ್ಕೋಸುಗ ವಾರಸಾ ಹಕ್ಕಿನ ಯುದ್ಧವು" ಎಂದೂ "ಆಗ್ಸ್‌ಬರ್ಗದ ಸಂಘದೊಡನೆ ಯುದ್ಧವು" ಎಂದೂ ಕರೆಯಲ್ಪಡುತ್ತದೆ. ಐರ್ಲಂಡಿನಲ್ಲಿಯ ಬಂಡುಗಾರರಿಗೆ ಸಾಹಾಯ್ಯ ವನ್ನು ಕಳುಹಿ ಇಂಗ್ಲಂಡಿನ ಪದಚ್ಯುತ ರಾಜನಾದ ೨ನೆಯ ಜೇಮ್ಸನಿಗೆ ಮತ್ತೆ ಇಂಗ್ಲಂಡಿನ ಪಟ್ಟವನ್ನು ದೊರಕಿಸಿಕೊಡಬೇಕು, ರ್‍ಹಾಯಿನ್ ನದಿಯವರೆಗೆ ತನ್ನ ರಾಜ್ಯದ ಉತ್ತರ ಸೀಮೆಯನ್ನು ಬೆಳೆಯಿಸಬೇಕು ಮತ್ತು ನೆದರ್ಲಂಡ ಮತ್ತು ಹಾಲಂಡ ಈ ದೇಶಗಳನ್ನು ವಶಪಡಿಸಿಕೊಳ್ಳಬೇಕು ಎಂಬ ಲುಯಿಯ ಉದ್ದೇಶವು ಈ ಯುದ್ಧಕ್ಕೆ ಕಾರಣವಾಯಿತು. ಐರ್ಲಂಡಿನಲ್ಲಿ ಪ್ರಾರಂಭವಾದ ಬಂಡಿಗೆ ೧೪ನೆಯ ಲುಯಿ ಫ್ರೆಂಚ ಸೈನ್ಯದ ಸಾಹಾಯ್ಯವನ್ನು ಕಳುಹಿದ್ದನು. ಅದರಂತೆ ಇಂಗ್ಲಿಶ್ ಮತ್ತು ಡಚ್ ಹಡಗುಪಡೆಗಳನ್ನು ಇದಿರಿಸಲು ಅವನು ಹಡಗುಪಡೆಯ ಅಧಿಪತಿಯಾದ **ಟವರ್‍ಹಾಯಿಲ್** ಎಂಬವನ ನೇತೃತ್ವದಲ್ಲಿ ಫ್ರೆಂಚ ಹಡಗುಪಡೆ ಯನ್ನು ಸಜ್ಜುಗೊಳಿಸಿದ್ದನು. ಇಂಗ್ಲಂಡಿನ ಸೈನ್ಯವನ್ನೂ ಹಡಗುಪಡೆಯನ್ನೂ ಹೀಗೆ ಯುದ್ಧದಲ್ಲಿ ತೊಡಗಿಸಿ ನೆದರ್ಲಂಡ ಮತ್ತು ಹಾಲಂಡ ಈ ದೇಶಗಳನ್ನು ಗೆಲ್ಲಬೇಕೆಂದು ಲುಯಿ ಯೋಜಿಸಿದ್ದನು. ಆದರೆ ಲುಯಿಯ ಈ ಹೊಂಚು ಗೊತ್ತಾದೊಡನೆ ಐರ್ಲಂಡಿನಲ್ಲಿ ಬಾಯಿನದ ಯುದ್ಧದಲ್ಲಿ ಜೇಮ್ಸನನ್ನು ಸೋಲಿ ಸಿದಬಳಿಕ ವಿಲಿಯಮನು **ರಸೆಲ್** ಎಂಬವನ ನೇತೃತ್ವದಲ್ಲಿ ಇಂಗ್ಲಿಶ್ ಮತ್ತು ಡಚ್

ಹಡಗುಪಡೆಗಳನ್ನು ಸಿದ್ಧವಾಗಿಟ್ಟು ಫ್ರೆಂಚ ಸೈನ್ಯವನ್ನು ಇದಿರಿಸಲು ಸೈನ್ಯದೊಡನೆ ನೆದರ್ಲಂಡಿಗೆ ಹೋದನು.




ಇಂಗ್ಲಂಡ್, ಫ್ರಾನ್ಸ ಮತ್ತು ನೆದರಲಂಡ ಇವುಗಳ ದಂಡೆಯ ಮೇಲಿನ ಮಹತ್ವದ ಊರುಗಳು.

ಸಮುದ್ರ ಯುದ್ಧವು—ವಿಲಿಯಮನು ಐರ್ಲಂಡಿನಲ್ಲಿರುವಾಗ ೧೬೯೦ ಜೂನ ೩೦ನೆಯ ತಾರೀಖಿನ ದಿವಸ ಅಡ್ಮಿರಲ್ ಟರ್‌ವ್ಹಾಯಿಲನು ಲಾರ್ಡ ಟಾರಿಂಗ ಟನನ ನೇತೃತ್ವದಲ್ಲಿಯ ಇಂಗ್ಲಿಶ್ ಮತ್ತು ಡಚ್ ಹಡಗುಪಡೆಯನ್ನು ಇಂಗ್ಲಂಡಿನ ದಕ್ಷಿಣ ತೀರದಲ್ಲಿಯ ಬೀಚೀಹೆಡ್ ಎಂಬಲ್ಲಿ ಸೋಲಿಸಿದ್ದನು. ಆ ಬಳಿಕ ಫ್ರೆಂಚ ಹಡಗುಪಡೆ ಯುದ್ಧವನ್ನು ಮಾಡದೆ ತಟಸ್ಥವಾಗಿ ನಿಂತಿತು. ಆದರೆ ೧೬೯೨ ರಲ್ಲಿ ವಿಲಿಯಮನು ನೆದರ್ಲಂಡಿಗೆ ಹೋದುದನ್ನು ಕಂಡು ಇಂಗ್ಲಂಡಿಗೆ ಹಡಗು ಪಡೆಯ ದಾಳಿಯನ್ನಿಕ್ಕಿ ೨ನೆಯ ಜೇಮ್ಸನಿಗೆ ಪಟ್ಟಗಟ್ಟಬೇಕೆಂದು ಲುಯಿ ಯೋಜಿ ಸಿದನು. ಇಂಗ್ಲಂಡಿನ ಸೇನಾಪತಿಯಾದ ಮಾರ್ಲಬರೋ ಮತ್ತು ಕೆಲವು ಮುತ್ಸ ದ್ದಿಗಳು ೨ನೆಯ ಜೇಮ್ಸನೊಡನೆ ಪತ್ರವ್ಯವಹಾರವನ್ನು ನಡಿಸಿದ್ದರು. ಅವರಿಂದ ತನಗೆ ಸಾಹಾಯ್ಯವು ದೊರೆಯಬಹುದೆಂದು ಲುಯಿ ಆಶಿಸಿದ್ದನು. ಆದರೆ ಅಡ್ಮಿ ರಲ್ ರಸೆಲನು ಇಂಗ್ಲಿಶರ ಹಡಗುಪಡೆಯನ್ನು ಉತ್ತಮ ರೀತಿಯಿಂದ ಸಜ್ಜುಗೊಳಿಸಿ ದ್ದುದರಿಂದ ಲುಯಿಯ ಯೋಜನೆ ನಿಷ್ಫಲವಾಯಿತು. ೧೬೯೨ರಲ್ಲಿ ಫ್ರಾನ್ಸಿನ

ಸಮುದ್ರತೀರದಲ್ಲಿಯ **ಲಾ ಹೋಗ್** ಎಂಬಲ್ಲಿ ಇಂಗ್ಲಿಶ್ ಹಡಗುಪಡೆ ಫ್ರೆಂಚ ಹಡಗುಪಡೆಯನ್ನು ಸೋಲಿಸಿ ಇಂಗ್ಲಿಶ್ ಚಾನಲಿನ ಮೇಲೆಯೂ ಸಮುದ್ರದ ಮೇಲೆಯೂ ತನ್ನ ವರ್ಚಸ್ಸನ್ನು ಸ್ಥಾಪಿಸಿತು. ಇಷ್ಟಾದಬಳಿಕ ಇಂಗ್ಲಂಡಿನ ಮೇಲೆ ಫ್ರಾನ್ಸಿನ ಹಡಗುಪಡೆಯ ದಾಳಿಯಾಗುವ ಭೀತಿ ಇಲ್ಲದಂತಾಯ್ತು.

**ನೆದರ್ಲಂಡಿನಲ್ಲಿಯ ಯುದ್ಧವು (೧೬೯೧-೯೭)**—ಇತ್ತ ನೆದರ್ಲಂಡಿನಲ್ಲಿ **ಲಕ್ಷೆಂಬರ್ಗನ** ನೇತೃತ್ವದಲ್ಲಿಯ ಫ್ರೆಂಚ ಸೈನ್ಯದ ಮತ್ತು **ವಿಲಿಯಮನ** ನೇತೃತ್ವದಲ್ಲಿಯ ಇಂಗ್ಲಿಶ್, ಡಚ್, ಸ್ಪ್ಯಾನಿಶ್ ಮತ್ತು ಆಸ್ಟ್ರಿಯನ್ ಈ ಮಿತ್ರರಾಷ್ಟ್ರಗಳ ಸೈನ್ಯದ ನಡುವೆ ಯುದ್ಧವು ನಡೆದಿತ್ತು (೧೬೯೧—೯೭). ೧೬೯೨ರಲ್ಲಿ **ಸ್ಟೇನಕರ್ಕ** ಎಂಬಲ್ಲಿ ಮತ್ತು ೧೬೯೩ರಲ್ಲಿ **ಲಂಡೆನ್** ಎಂಬಲ್ಲಿ ವಿಲಿಯಮನು ಸೋತನು. ಆದರೂ ಅವನು ಧೈರ್ಯಗುಂದಲಿಲ್ಲ. ಮುಂದೆ ೧೬೯೫ರಲ್ಲಿ ಫ್ರೆಂಚರ **ನಾಮೂರ** ಎಂಬ ಕೋಟೆಗೆ ಮುತ್ತಿಗೆಯಿಕ್ಕಿ ಅದನ್ನು ಅವನು ವಶಪಡಿಸಿಕೊಂಡನು. ಆ ಬಳಿಕ ಮುಂದೆ ಎರಡು ವರ್ಷಗಳವರೆಗೆ ಯುದ್ಧವು ನಡೆಯಿತು. ಆದರೆ ಈ ಮಧ್ಯದಲ್ಲಿ ಸ್ಪೇನದ ಪಟ್ಟದ ವಿಷಯದಲ್ಲಿ ಪ್ರಶ್ನೆ ಉದ್ಭವಿಸಿದುದರಿಂದ **ರಿಝ್ವಿಕ್** ಎಂಬಲ್ಲಿ ಒಪ್ಪಂದವಾಗಿ ಈ ಯುದ್ಧವು ನಿಲ್ಲಿಸಲ್ಪಟ್ಟಿತು (೧೬೯೭). ಈ ಒಪ್ಪಂದದಿಂದ ವಿಲಿಯಮನು ಇಂಗ್ಲಂಡಿನ ಅರಸನೆಂದು ಲುಯಿ ಒಪ್ಪಿಕೊಂಡನು.

**ವಿಲಿಯಮನ ಆಳ್ಕೆಯಲ್ಲಿಯ ಉಳಿದ ಕೆಲವು ಸಂಗತಿಗಳು**—ವಿಲಿಯಮನ ಆಳ್ಕೆಯಲ್ಲಿ ಬೇರೆ ಕೆಲವು ಮಹತ್ವದ ಸಂಗತಿಗಳಾದುವು. ಅವು ಯಾವುವೆಂದರೆ **(೧) ರಾಷ್ಟ್ರೀಯ ಸಾಲದ ಯೋಜನೆ. (೨) ಬ್ಯಾಂಕ್ ಆಫ್ ಇಂಗ್ಲಂಡ್ ಸಂಸ್ಥೆಯ ಸ್ಥಾಪನೆ. (೩) ಡರಾಯನ್ ಎಂಬಲ್ಲಿ ಸ್ಕಾಟಿಶ್ ಜನರ ವಸಾಹತು.**

**೧. ರಾಷ್ಟ್ರೀಯ ಸಾಲವು (೧೬೯೩)**—ಸ್ಕಾಟಲಂಡಿನಲ್ಲಿಯ ಮತ್ತು ಐರ್ಲಂಡಿನಲ್ಲಿಯ ಬಂಡುಗಳನ್ನು ಮುರಿಯಲು ಮತ್ತು ಫ್ರಾನ್ಸಿನೊಡನೆ ಯುದ್ಧವನ್ನು ಸಾಗಿಸಲು ಬೇಕಾದ ಹಣವು ರಾಷ್ಟ್ರದ ವಾರ್ಷಿಕ ಉತ್ಪನ್ನದಿಂದ ದೊರೆವುದು ಶಕ್ಯವಿದ್ದಿಲ್ಲ. ಯುದ್ಧ ಮೊದಲಾದುವುಗಳಿಗೆ ಹೆಚ್ಚಿನ ವೆಚ್ಚಕ್ಕೋಸುಗ ಅರಸರು ತಮ್ಮ ಸ್ವಂತದ ಹೊಣೆಯಿಂದ ಶ್ರೀಮಂತರಿಂದ ಸಾಲವನ್ನು ತೆಗೆದುಕೊಳ್ಳುತ್ತಿದ್ದರು. ಆದರೆ ದೇಶದಲ್ಲಿ ಅಸ್ವಸ್ಥತೆ ಇದ್ದಾಗ ಈ ಬಗೆಯ ಸಾಲವನ್ನು ದೊರಕಿಸುವುದು ಕಠಿಣವಾಗುತ್ತಿತ್ತು. ಆದುದರಿಂದ ಈ ಸಾಲವನ್ನು ಅರಸರು ತನ್ನ ಸ್ವಂತದ ಹೊಣೆಯಿಂದ ತೆಗೆದುಕೊಳ್ಳದೆ ಪಾರ್ಲಿಮೆಂಟಿನ ಸಮ್ಮತಿಯನ್ನು ಪಡೆದು ರಾಷ್ಟ್ರಕ್ಕೋಸುಗ ತೆಗೆದುಕೊಳ್ಳಬೇಕೆಂದು ಮೊಂಟಿಗ್ಯೂ

ಎಂಬ ಆರ್ಥಿಕಮಂತ್ರಿಯ ಸೂಚನೆಯಂತೆ ೧೬೯೩ರಲ್ಲಿ ೧೦ ಲಕ್ಷ ಪೌಂಡುಗಳ ಸಾಲವು ತೆಗೆದುಕೊಳ್ಳಲ್ಪಟ್ಟಿತು. ಅರಸನು ಪಾರ್ಲಿಮೆಂಟಿನ ಸಮ್ಮತಿಯನ್ನು ಪಡೆದು ರಾಷ್ಟ್ರಕ್ಕೋಸುಗ ಈ ಸಾಲವನ್ನು ತೆಗೆದುಕೊಂಡನು ಮತ್ತು ಅದನ್ನು ತೀರಿಸಲು ಇಡಿಯ ರಾಷ್ಟ್ರವು ಹೊಣೆಯಾಯ್ತು. ಆದುದರಿಂದ ಅದಕ್ಕೆ **ರಾಷ್ಟ್ರೀಯ ಸಾಲವೆಂದು** ಹೆಸರು ಬಂದಿತು. ವಿಲಿಯಮನ ಆಳ್ಕೆಯಲ್ಲಿ ಫ್ರಾನ್ಸಿನೊಡನೆ ಅವ್ಯಾಹತವಾಗಿ ಯುದ್ಧವನ್ನು ಮಾಡಬೇಕಾದುದರಿಂದ ಈ ರಾಷ್ಟ್ರೀಯ ಸಾಲದ ಹಣವು ೧ ಕೋಟಿ ೭೦ ಲಕ್ಷ ಪೌಂಡುಗಳ ವರೆಗೆ ಬೆಳೆಯಿತು. ಮುಂದೆಯೂ ಇದು ಬೆಳೆಯುತ್ತ ನಡೆದು ೧೯೨೨ರಲ್ಲಿ ಅದು ಸುಮಾರು ೭೯೦ ಕೋಟಿ ಪೌಂಡುಗಳ ವರೆಗೆ ಬೆಳೆಯಿತು. ಈ ಹಣಕ್ಕೆ ಸರಕಾರವು ಬಡ್ಡಿಯನ್ನು ಕೊಡುತ್ತದೆ.

**೨. ಬ್ಯಾಂಕ ಆಫ್ ಇಂಗ್ಲಂಡ್ (೧೬೯೪)**—ರಾಷ್ಟ್ರೀಯ ಸಾಲದ ಯೋಜನೆ ವ್ಯವಹಾರದಲ್ಲಿ ಬಂದಬಳಿಕ ಸರಕಾರಕ್ಕೆ ಅನೇಕ ಜನರಿಂದ ಸಾಲವು ದೊರೆಯಲಾರಂಭಿಸಿತು. ೧೬೯೪ರಲ್ಲಿ ಲಂಡನಿನಲ್ಲಿಯ **ಪೆಟರ್ಸನ್**, ಮತ್ತು ಕೆಲವು ವ್ಯಾಪಾರಸ್ಥರು ಕೂಡಿ '**ಬ್ಯಾಂಕ್ ಆಫ್ ಇಂಗ್ಲಂಡ್**' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಸರಕಾರಕ್ಕೆ ೧೨ ಲಕ್ಷ ಪೌಂಡುಗಳ ಸಾಲವನ್ನು ಕೊಟ್ಟರು. ಸರಕಾರವು ಈ ಬ್ಯಾಂಕಿಗೆ ಮಾನ್ಯತೆಯನ್ನಿತ್ತು ಕೆಲವೊಂದು ನಿಶ್ಚಿತ ಪ್ರಮಾಣದಲ್ಲಿ ಚಾಲತಿ ನೋಟುಗಳನ್ನು (ಹುಂಡಿಗಳನ್ನು) ಹೊರಡಿಸಲು ಅದಕ್ಕೆ ಅಪ್ಪಣೆಯಿತ್ತಿತು. ಬ್ಯಾಂಕ್ ಆಫ್ ಇಂಗ್ಲಂಡ್ ಸಂಸ್ಥೆ ಆಗಿನ ಕಾಲದಲ್ಲಿ ಬಹು ಚಿಕ್ಕದ್ದಿದ್ದಿತು. ಆದರೆ ಈಗ ಅದು ಅತಿಶಯವಾಗಿ ಬೆಳೆದು ಜಗತ್ತಿನಲ್ಲಿಯ ಪ್ರಮುಖ ಬ್ಯಾಂಕುಗಳಲ್ಲಿ ಒಂದಾಗಿರುವುದು. ರಾಷ್ಟ್ರೀಯ ಸಾಲದಲ್ಲಿ, ಮತ್ತು ಸರಕಾರದ ಮೇಲ್ವಿಚಾರಣೆಯಲ್ಲಿ ನಡೆದ ಈ ಬ್ಯಾಂಕಿನಲ್ಲಿ ಜನರು ತಮ್ಮ ಹಣವನ್ನು ತೊಡಗಿಸಲಾರಂಭಿಸಿದುದರಿಂದ ವಿಲಿಯಮನ ರಾಜಪದವು ಸ್ಥಿರವಾಗತೊಡಗಿತು. ಏಕೆಂದರೆ ೨ನೆಯ ಜೇಮ್ಸನಿಗೆ ಮತ್ತೆ ರಾಜಪದವು ಪ್ರಾಪ್ತವಾದರೆ ರಾಷ್ಟ್ರೀಯ ಸಾಲದ ರೂಪದಿಂದ ವಿಲಿಯಮನಿಗೆ ಯುದ್ಧಕ್ಕೋಸುಗ ಕೊಟ್ಟ ಹಣವು ಎಲ್ಲವೂ ಮುಳುಗಬಹುದೆಂದು ಜನರಿಗೆ ಹೆದರಿಕೆಯಾಯಿತು.

**೩. ಡರಾಯನ್ (ಪನಾಮಾ) ಎಂಬಲ್ಲಿ ಸ್ಕಾಟಿಶ ಜನರ ವಸಾಹತು (೧೬೯೮-೯೯)**—'ಬ್ಯಾಂಕ್ ಆಫ್ ಇಂಗ್ಲಂಡ್' ಸಂಸ್ಥೆಯ ಸಂಸ್ಥಾಪಕನಾದ **ಪೆಟರ್ಸನ್** ಎಂಬ ಸ್ಕಾಟಿಶ್ ವ್ಯಾಪಾರಸ್ಥನು ಉತ್ತರ ಮತ್ತು ದಕ್ಷಿಣ ಅಮೇರಿಕೆಯನ್ನು ಜೋಡಿಸುವ ಡರಾಯನ್ (ಪನಾಮಾ) ಸಂಯೋಗ ಭೂಮಿಯ ಮೇಲೆ ಸ್ಕಾಟಿಶ್ ಜನರ ವಸಾಹತನ್ನು ಸ್ಥಾಪಿಸುವ ಯೋಜನೆಯನ್ನು ಮಾಡಿ

ದನು. ಇದು ಮಧ್ಯವರ್ತಿಸ್ಥಾನವಾಗಿದ್ದುದರಿಂದ ಪ್ಯಾಸಿಫಿಕ್ ಮತ್ತು ಅಟ್ಲಾಂಟಿಕ್ ಈ ಎರಡೂ ಮಹಾಸಾಗರಗಳ ಮಾರ್ಗವಾಗಿ ಈ ವಸಾಹತಿಗೆ ಉತ್ತರ ಮತ್ತು ದಕ್ಷಿಣ ಅಮೇರಿಕೆ, ವೆಸ್ಟ ಇಂಡೀಜ ನಡುಗಡ್ಡೆಗಳು, ಆಫ್ರಿಕೆ ಮತ್ತು ಹಿಂದುಸ್ತಾನ ಈ ದೇಶಗಳೊಡನೆ ವ್ಯಾಪಾರಮಾಡಲು ಬರಬಹುದೆಂದು, ಮತ್ತು ಅದರಿಂದ ಈ ವಸಾಹತಿಗೆ ಊರ್ಜಿತಸ್ಥಿತಿ ಪ್ರಾಪ್ತವಾಗಬಹುದೆಂದು ಅವನಿಗೆ ಎನಿಸಿತು. ಈ ಯೋಜನೆಯಂತೆ ಡರಾಯನ್ ಎಂಬಲ್ಲಿ ವಸಾಹತನ್ನು ಸ್ಥಾಪಿಸಲು ೧,೨೦೦ ಸಾಹಸಿಗಳಾದ ಸ್ಕಾಟಿಶ್ ಜನರು ತಮ್ಮ ದೇಶವನ್ನು ಬಿಟ್ಟು ನಡೆದರು. ಆದರೆ ಡರಾಯನಿಗೆ ಬಂದಬಳಿಕ ಅಲ್ಲಿಯ ರೋಗಕಾರಕವಾದ ಹವೆಯಿಂದ ಅವರು ಬಹಳ ಕಷ್ಟವನ್ನು ಅನುಭವಿಸಬೇಕಾಯಿತು. ಈ ವಸಾಹತಿನಿಂದ ತಮ್ಮ ವ್ಯಾಪಾರಕ್ಕೆ ತಡೆಯಾಗಬಹುದೆಂದು ಇಂಗ್ಲಿಶ್ ಮತ್ತು ಡಚ್ ಈಸ್ಟ ಇಂಡಿಯಾ ಕಂಪನಿಗಳಿಗೆ ಭೀತಿ ಎನಿಸಿತು. ಆದುದರಿಂದ ಅವರು ಈ ವಸಾಹತಿನ ವಿರುದ್ಧವಾಗಿ ಅರಸನ ಮತ್ತು ಪಾರ್ಲಿಮೆಂಟಿನ ಸದಸ್ಯರ ಮನಸ್ಸಿನಲ್ಲಿ ವಿಪರೀತ ಭಾವನೆಯನ್ನು ಹುಟ್ಟಿಸಲಾರಂಭಿಸಿದರು. ಅಮೇರಿಕೆಯಲ್ಲಿಯ ಸ್ಪನಿಶ್ ವಸಾಹತುಗಳು ಈ ವಸಾಹತಿನ ವಿಷಯದಲ್ಲಿ ಅಸೂಯೆಯನ್ನು ತಳೆದು ಅದಕ್ಕೆ ಆತಂಕಗಳನ್ನು ಒದಗಿಸತೊಡಗಿದುವು. ಹೀಗೆ ಎಲ್ಲೆಲ್ಲಿಯೂ ಪ್ರತಿಕೂಲ ಪರಿಸ್ಥಿತಿ ಉಂಟಾದುದರಿಂದ ಡರಾಯನಿನ ವಸಾಹತಿನ ಯೋಜನೆ ಅಯಶಸ್ವಿಯಾಯಿತು. ಅದರಲ್ಲಿ ಎಷ್ಟೋ ಪ್ರಾಣಹಾನಿಯಾಗಿ ಸ್ಕಾಟಿಶ್ ಜನರ ೪ ಲಕ್ಷ ಪೌಂಡುಗಳು ವ್ಯರ್ಥವಾಗಿ ಮುಳುಗಿದುವು (೧೬೯೯). ವಿಲಿಯಮನು ಮೊದಲಿನಿಂದಲೂ ಈ ಯೋಜನೆಗೆ ವಿರುದ್ಧನಾಗಿದ್ದನು. ಆದುದರಿಂದ ಅದು ಅಯಶಸ್ವಿಯಾದ ಬಳಿಕ ಅದರ ದೋಷವನ್ನು ಸ್ಕಾಟಿಶ್ ಜನರು ವಿಲಿಯಮನ ಮೇಲೆ ಹೊರಿಸಿದರು.

**ಸ್ಪೇನದ ಪಟ್ಟದ ಪ್ರಶ್ನೆ**—ಸ್ಪೇನದ ಸಾಮ್ರಾಜ್ಯವು ದೊಡ್ಡದಾಗಿದ್ದಿತು. ಈ ಸಾಮ್ರಾಜ್ಯವು ಸ್ಪೇನ, ನೆದರ್ಲಂಡ, ಸಾರ್ಡಿನಿಯಾ ನಡುಗಡ್ಡೆ, ಇಟಲಿಯಲ್ಲಿಯ ನೇಪಲ್ಸ, ಸಿಸಲಿ ಮತ್ತು ಮಿಲಾನ್, ದಕ್ಷಿಣ ಆಫ್ರಿಕೆಯಲ್ಲಿಯ ಸ್ಪನಿಶ್ ವಸಾಹತುಗಳು ಮತ್ತು ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿಯ ಕೆಲವು ನಡುಗಡ್ಡೆಗಳು, ಇಷ್ಟೊಂದು ದೊಡ್ಡ ಪ್ರದೇಶವನ್ನು ಒಳಗೊಂಡಿತ್ತು. ಈ ಸಾಮ್ರಾಜ್ಯವನ್ನು ವೃದ್ಧರಾಜನಾದ **ಎರಡನೆಯ ಚಾರ್ಲಸನು** ಆಳುತ್ತಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಅವನ ಒಬ್ಬ ತಂಗಿ ಫ್ರಾನ್ಸಿನ **೧೪ನೆಯ ಲುಯಿಯನ್ನು** ಮದುವೆಯಾಗಿದ್ದಳು. ಮತ್ತೊಬ್ಬಳು ಆಸ್ಟ್ರಿಯಾ ದೇಶದ ಬಾದಶಹನಾದ **ಲಿಯೋಪೋಲ್ಡನನ್ನು**

ಮದುವೆಯಾಗಿದ್ದಳು. ಚಾರ್ಲಸನ ಮರಣದ ತರುವಾಯದಲ್ಲಿ ಅವನ ರಾಜ್ಯವು ಅವನ ಈ ಇಬ್ಬರು ತಂಗಿಯರಲ್ಲಿ ಒಬ್ಬಳ ವಂಶದವರಿಗೆ ದೊರೆವುದಿತ್ತು. ಆದರೆ ಸ್ಪೇನದ ಈ ದೊಡ್ಡ ಸಾಮ್ರಾಜ್ಯವು ಫ್ರಾನ್ಸಿನ ಅಥವಾ ಆಸ್ಟ್ರಿಯದ ರಾಜಪುತ್ರನಿಗೆ ದೊರೆತರೆ ಇಂದಿಲ್ಲ ನಾಳೆ ಈ ರಾಜ್ಯಗಳು ಒಂದಾಗಿ ಫ್ರಾನ್ಸಿನ ಅಥವಾ ಆಸ್ಟ್ರಿಯದ ರಾಜ್ಯವು ಬಹು ಬಲಾಢ್ಯವಾಗಿ ಯುರೋಪದಲ್ಲಿಯ 'ಸತ್ತೆಯ ಸಮತೂಕವು' (Balance of Power) ಅಳಿಯಬಹುದೆಂದು ಯುರೋಪದ ಇತರ ರಾಷ್ಟ್ರಗಳಿಗೆ ಭಯವುಂಟಾಯ್ತು. ಫ್ರಾನ್ಸು ವಿಶೇಷವಾಗಿ ಬಲಾಢ್ಯವಾಗಿದ್ದುದರಿಂದ ಸ್ಪೇನದ ಪಟ್ಟವು ಫ್ರಾನ್ಸಿನ ರಾಜಪುತ್ರನಿಗಾದರೂ ದೊರೆಯಬಾರದೆಂದು ವಿಲಿಯಮನ ಇಚ್ಛೆ ಇದ್ದಿತು. ಆದುದರಿಂದ ಸ್ಪೇನದ ಸಾಮ್ರಾಜ್ಯವನ್ನು ವಿಭಾಗಿಸಿ ನೆದರ್ಲಂಡನ್ನು ಮತ್ತು ಅಮೇರಿಕೆಯಲ್ಲಿಯ ಸ್ಪ್ಯಾನಿಶ್ ವಸಾಹತುಗಳನ್ನು ಆಸ್ಟ್ರಿಯದ ರಾಜಪುತ್ರನಿಗೆ ಮತ್ತು ಇಟಲಿಯಲ್ಲಿಯ ಸ್ಪೇನದ ವಶದಲ್ಲಿದ್ದ ಪ್ರದೇಶವನ್ನು ಫ್ರಾನ್ಸಿನ ರಾಜಪುತ್ರನಿಗೆ ಕೊಡಬೇಕು ಎಂದು ಒಂದು ಯೋಜನೆಯನ್ನು ವಿಲಿಯಮನು ಸೂಚಿಸಿದನು. ಸ್ಪೇನದ ಸಾಮ್ರಾಜ್ಯಕ್ಕೆ ಇಬ್ಬರು ಬಾಧ್ಯಸ್ಥರಿದ್ದುದರಿಂದ ಅದೆಲ್ಲ ಸಾಮ್ರಾಜ್ಯವು ತನಗೊಬ್ಬನಿಗೇ ದೊರೆವುದು ಶಕ್ಯವಿಲ್ಲೆಂದು ಕಂಡು ಈ ಯೋಜನೆಗೆ ೧೪ನೆಯ ಲುಯಿ ಮತ್ತು ಲಿಯೋಪೋಲ್ಡ ಇವರಿಬ್ಬರೂ ಮಾನ್ಯತೆಯಿತ್ತರು. ಈ ಬಗೆಯಾಗಿ ತನ್ನನ್ನು ಕೇಳದೆ ತ್ರಯಸ್ಥರಾಷ್ಟ್ರಗಳು ತನ್ನ ಸಾಮ್ರಾಜ್ಯವನ್ನು ವಿಭಾಗಿಸಲು ನಿಶ್ಚಯಿಸಿದುದನ್ನು ಕಂಡು ಸ್ಪೇನದ ಅರಸನಾದ ೨ನೆಯ ಚಾರ್ಲಸನಿಗೆ ಕೋಪವು ಬಂದಿತು. ಅವನ ಆರೋಗ್ಯವು ಕೆಡುತ್ತ ಹೋಯಿತು. ಮರಣವು ಸಮೀಪಿಸಲು ಅವನು ಮೃತ್ಯುಪತ್ರವನ್ನು ಸಿದ್ಧಗೊಳಿಸಿದನು (೧೭೦೦); ಅದರಲ್ಲಿ ಅವನು ತನ್ನ ಸಾಮ್ರಾಜ್ಯವನ್ನು ವಿಭಾಗಿಸದೆ ಎಲ್ಲವನ್ನೂ ತನ್ನ ಹಿರಿಯ ತಂಗಿಯ ಮೊಮ್ಮಗನಾದ **ಫಿಲಿಪ್ ಡ್ಯೂಕ್ ಆಫ್ ಅಂಜೊ** (೧೪ನೆಯ ಲುಯಿಯ ಚಿಕ್ಕ ಮೊಮ್ಮಗನು) ಇವನಿಗೆ ಕೊಡಬೇಕು ಮತ್ತು ಫಿಲಿಪನು ಒಪ್ಪದಿದ್ದರೆ ಅದನ್ನು ಲಿಯೋಪೋಲ್ಡನ ಚಿಕ್ಕ ಮಗನಾದ ಆರ್ಚಡ್ಯೂಕ್ **ಚಾರ್ಲಸ್** ಇವನಿಗೆ ಕೊಡಬೇಕೆಂದು ಸೂಚಿಸಿದನು. ಈ ಮೃತ್ಯುಪತ್ರವನ್ನು ಮಾಡಿದ ಬಳಿಕ ೧೭೦೦ರ ನವೆಂಬರ ತಿಂಗಳಲ್ಲಿ ಚಾರ್ಲಸನು ಮರಣಹೊಂದಿದನು. ಮೃತ್ಯುಪತ್ರದಲ್ಲಿಯ ಮೇಲೆ ಹೇಳಿದ ವ್ಯವಸ್ಥೆ ಗೊತ್ತಾದ ಬಳಿಕ ಈ ವಿಷಯದಲ್ಲಿ ಮುಂದೇನು ಮಾಡಬೇಕೆಂಬುದು ಲುಯಿಗೆ ಒಂದು ದೊಡ್ಡ ಪ್ರಶ್ನೆಯಾಯಿತು. ಕೊನೆಗೆ ಲಿಯೋಪೋಲ್ಡ ಮತ್ತು ವಿಲಿಯಮ್ ಇವರೊಡನೆ ಸ್ಪೇನದ ಸಾಮ್ರಾಜ್ಯದ ವಿಭಾಗಣೆಯ ಸಂಬಂಧದಲ್ಲಿ ಮಾಡಿದ ಯೋಜನೆಯನ್ನು ರದ್ದುಗೊಳಿಸಿ ಅವನು

ತನ್ನ ಚಿಕ್ಕ ಮೊಮ್ಮಗನಾದ **ಫಿಲಿಪನನ್ನು** 'ಸ್ಪೇನದ ರಾಜ'ನಾಗಿ ಮಾಡಿ ಅವ ನನ್ನು ಸೈನ್ಯದೊಡನೆ ಸ್ಪೇನಕ್ಕೆ ಕಳುಹಿಸಿದನು.

**ಫ್ರಾನ್ಸಿನ ವಿರುದ್ಧವಾಗಿ ಸಂಘವು**—ಸ್ಪೇನದ ಸಾಮ್ರಾಜ್ಯವು ಅಥವಾ ಅದರಲ್ಲಿಯ ಕೆಲವು ಭಾಗವು ತನ್ನ ಮಗನಿಗೆ ದೊರೆಯಬಹುದೆಂದು ಲಿಯೋ ಪೋಲ್ಡನು ಆಶಿಸಿದ್ದನು. ಆದರೆ ೧೪ನೆಯ ಲುಯಿಯ ಮೇಲೆ ಹೇಳಿದ ಕೃತಿ ಯಿಂದ ಅವನ ಆಶೆ ಬಯಲಾಯ್ತು; ಆದುದರಿಂದ ಅವನು ಲುಯಿಯ ವಿರುದ್ಧ ವಾಗಿ ನಿಂತನು. ಲುಯಿಯ ಮೊಮ್ಮಗನಿಗೆ ಸ್ಪೇನದ ಪಟ್ಟವು ದೊರೆತುದರಿಂದ ಮುಂದೆ ಫ್ರಾನ್ಸ್ ಮತ್ತು ಸ್ಪೇನ ಈ ರಾಷ್ಟ್ರಗಳು ಒಂದಾಗಿ ಫ್ರಾನ್ಸಿನ ರಾಷ್ಟ್ರವು ಅತಿಶಯವಾಗಿ ಪ್ರಬಲವಾಗಬಹುದೆಂದು ಬಗೆದು ವಿಲಿಯಮನು ಲಿಯೋಪೋಲ್ಡ ನಿಗೆ ಸಾಹಾಯ್ಯಮಾಡಲು ನಿಶ್ಚಯಿಸಿದನು. ಇಷ್ಟರಲ್ಲಿ ಇಂಗ್ಲಂಡಿನ ಪದಚ್ಯುತ ರಾಜನಾದ ೨ನೆಯ ಜೇಮ್ಸನು ಮಡಿದನು (೧೭೦೧). ರಿಝುವಿಕದ ಒಪ್ಪಂದದ ಸಮಯದಲ್ಲಿ 'ವಿಲಿಯಮನು ಇಂಗ್ಲಂಡಿನ ರಾಜನು' ಎಂಬ ಮಾತನ್ನು ಲುಯಿ ಒಪ್ಪಿಕೊಂಡಿದ್ದನು. ಹೀಗಿದ್ದರೂ ಈಗ ಅವನು ೨ನೆಯ ಜೇಮ್ಸನ ಮಗನಾದ **ಜೇಮ್ಸ ಎಡ್ವರ್ಡನು** ಇಂಗ್ಲಂಡಿನ ರಾಜನಾದ **೩ನೆಯ ಜೇಮ್ಸನೆಂದು** ಸಾರಿದನು. ಲುಯಿಯ ಈ ಕೃತಿಯಿಂದ ಇಂಗ್ಲಿಶ್ ಜನತೆಯೆಲ್ಲವೂ ಅವನ ವಿರುದ್ಧವಾಗಿ ನಿಂತಿತು. ವಿಲಿಯಮನು ಲುಯಿಯ ವಿರುದ್ಧವಾಗಿ ಇಂಗ್ಲಂಡ್, ಹಾಲಂಡ್, ಆಸ್ಟ್ರಿಯಾ, ಜರ್ಮನಿಯೊಳಗಿನ ಕೆಲವು ಚಿಕ್ಕ ಸಂಸ್ಥಾನಗಳು ಮತ್ತು ಸೆವ್ಹಾಯ ಈ ರಾಷ್ಟ್ರಗಳ ಒಂದು ಸಂಘವನ್ನು (Grand Alliance) ಸ್ಥಾಪಿಸಿದನು (೧೭೦೧). ಮಿತ್ರರಾಷ್ಟ್ರಗಳ ಈ ಸಂಘದ ವಿರುದ್ಧವಾಗಿ ಫ್ರಾನ್ಸ್, ಸ್ಪೇನ ಮತ್ತು ಬವೇರಿಯಾ ಈ ರಾಷ್ಟ್ರಗಳ ಸಂಘವು ನಿರ್ಮಿಸಲ್ಪಟ್ಟಿತು ಮತ್ತು ಸ್ಪೇನದ ಪಟ್ಟಕ್ಕೋಸುಗ ಯುದ್ಧವು ಪ್ರಾರಂಭವಾಯ್ತು (೧೭೦೨).

**ವಿಲಿಯಮನ ವಿಷಯದಲ್ಲಿ ಇಂಗ್ಲಂಡಿನ ಲೋಕಮತವು**—೨ನೆಯ ಜೇಮ್ಸನು ಅನ್ಯಾಯದ ಆಳ್ಕೆಯ ಪರಿಣಾಮವಾಗಿ ವಿಲಿಯಮ ಮತ್ತು ಮೇರಿ ಇವರಿಗೆ ಇಂಗ್ಲಂಡಿನ ರಾಜಪದವು ಪ್ರಾಪ್ತವಾಗಿತ್ತು. ವಿಲಿಯಮನು ಮಿತಭಾ ಷಿಯೂ ಶಾಂತ ಪ್ರಕೃತಿಯವನೂ ಆಗಿದ್ದನು. ಜನರನ್ನು ತನ್ನವರಾಗಿ ಮಾಡಿ ಕೊಳ್ಳುವ ಕಲೆ ಅವನಲ್ಲಿ ಇರಲಿಲ್ಲವಾದುದರಿಂದ ಅವನ ವಿಷಯದಲ್ಲಿ ಎಲ್ಲ ಜನರಲ್ಲಿ ಆತ್ಮೀಯಭಾವನೆ ಇರಲಿಲ್ಲ. ಮೇರಿರಾಣಿ ಲೋಕಪ್ರಿಯೆಯಾಗಿದ್ದಳು. ಅವಳು ಆನಂದವೃತ್ತಿಯವಳೂ ಮಮತೆಯ ಸ್ವಭಾವದವಳೂ ಆಗಿದ್ದುದರಿಂದ ಎಲ್ಲರಿಗೂ ಅವಳ ವಿಷಯದಲ್ಲಿ ಪ್ರೇಮವೂ ಆದರವೂ ಎನಿಸುತ್ತಿದ್ದಿತು. ೧೬೯೪

ರಲ್ಲಿ ಅವಳು ಮಡಿದ ಬಳಿಕ ವಿಲಿಯಮನ ವಿಷಯದಲ್ಲಿ ಅಪ್ರಿಯತೆ ಬೆಳೆಯ ತೊಡಗಿತು ಮತ್ತು ಅವನ ವಿರುದ್ಧವಾಗಿ ಒಳಸಂಚುಗಳು ನಡೆದುವು. ಈ ಸಂಚುಗಳಲ್ಲಿ ರಾಜ್ಯದಲ್ಲಿಯ ದೊಡ್ಡ ದೊಡ್ಡ ಜನರೂ ಸೇರಿದ್ದರು. ಆದರೆ ಅವು ಯಶಸ್ವಿಯಾಗಲಿಲ್ಲ. ಕುಶಲನಾದ ಮುತ್ಸದ್ದಿಯೂ ಪರಾಕ್ರಮಿಯಾದ ಬಂಟನೂ ಎಂದು ವಿಲಿಯಮನು ಪ್ರಸಿದ್ಧಿಯನ್ನು ಪಡೆದಿದ್ದನು. ಅವನು ತನ್ನ ಈ ಗುಣಗಳ ಬಲದಿಂದ ೧೪ನೆಯ ಲುಯಿಯಂತಹ ಮಹತ್ವಾಕಾಂಕ್ಷಿಯೂ ಪ್ರಬಲನೂ ಆದ ಅರಸನ ಆಟವು ಸಾಗದಂತೆ ಮಾಡಿದನು. ಅವನು ಪರಾಕ್ರಮಿಯಾದ ಬಂಟನಿದ್ದುದಲ್ಲದೆ ಅವನ ಉದ್ಯಮಸಾತತ್ಯವೂ (Perseverance) ಹೇಳಿಕೊಳ್ಳುವಂತಹದಿತ್ತು. ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಅವನು ತನ್ನ ಮನಸ್ಸಿನ ಶಾಂತತೆಯನ್ನು ಕಳೆದುಕೊಳ್ಳುತ್ತಿರಲಿಲ್ಲ, ಆದುದರಿಂದ ಅವನ ಪ್ರಯತ್ನಗಳಿಗೆ ಯಶವು ದೊರೆಯುತ್ತಿತ್ತು. ಅವನು ಇಂಗ್ಲಂಡಿನಲ್ಲಿ ೧೩ ವರ್ಷಗಳ ವರೆಗೆ ರಾಜ್ಯವಾಳಿದನು. ಈ ೧೩ ವರ್ಷಗಳಲ್ಲಿ ೧೧ ವರ್ಷಗಳು ಯುದ್ಧದಲ್ಲಿ ಕಳೆದುವು. ತನ್ನ ಆಳ್ಕೆಯ ಕೊನೆಯ ಭಾಗದಲ್ಲಿ ಅವನು ಫ್ರಾನ್ಸಿನ ವಿರುದ್ಧವಾಗಿ ಮಿತ್ರ ರಾಷ್ಟ್ರಗಳ ದೊಡ್ಡದೊಂದು ಸಂಘವನ್ನು ಸ್ಥಾಪಿಸಿದನು. ಆದರಿಂದ ಫ್ರಾನ್ಸಿನೊಡನೆ ಯುದ್ಧವು ಪ್ರಾರಂಭವಾಯ್ತು, ಈ ಯುದ್ಧವು ನಡೆದಿರುವಾಗ ಒಂದು ದಿನ ವಿಲಿಯಮನು ಬೇಟೆಗೆ ಹೋದಾಗ ಕುದುರೆಯ ಮೇಲಿಂದ ಬಿದ್ದು ಮರಣಹೊಂದಿದನು (೧೭೦೨).

---

## ಸಾರಾಂಶವು

೩ನೆಯ ವಿಲಿಯಮನು (೧೬೮೯—೧೭೦೨) ಮತ್ತು ಮೇರಿ (೧೬೮೯—೧೬೯೪).

ವಿಲಿಯಮನ ಅಂತಃಸ್ಥ ನೀತಿ—(೧) ಪಾರ್ಲಿಮೆಂಟು ಮಾಡಿದ ಕಾಯ್ದೆಗಳನ್ನು ಅನುಸರಿಸಿ, ರಾಜ್ಯಮಾಡುವುದು. (೨) ಪಾರ್ಲಿಮೆಂಟಿನಲ್ಲಿಯ ಪ್ರಬಲಪಕ್ಷದ ಜನರನ್ನು ತನ್ನ ಮಂತ್ರಿಮಂಡಲದಲ್ಲಿ ನಿಯೋಜಿಸುವುದು.

೧೬೮೯ ಬಿಲ್ ಆಫ್ ರೈಟ್ಸ ಮತ್ತು ಮ್ಯುಟಿನಿ ಅ್ಯಕ್ಟ; ಮತ್ತು ಇವುಗಳಿಂದ ಜೊಕ್ಕಸದ ಮೇಲೆಯೂ ಸೈನ್ಯದ ಮೇಲೆಯೂ ಪಾರ್ಲಿಮೆಂಟಿನ ನಿಯಂತ್ರಣವು.

೧೬೯೩ ಮೊಂಟಿಗ್ಯು ಎಂಬ ಅರ್ಥಸಚಿವನ ಸೂಚನೆಯಿಂದ ರಾಷ್ಟ್ರೀಯ ಸಾಲದ ಯೋಜನೆ.

೧೬೯೪ ಪೆಟರ್ಸನನ ಸೂಚನೆಯಿಂದ ಬ್ಯಾಂಕ ಆಫ್ ಇಂಗ್ಲಂಡಿನ ಸ್ಥಾಪನೆ. ಟ್ರಾಯೆನಿಯಲ್ ಅ್ಯಕ್ಟ (ಮೂರು ವರ್ಷಗಳಿಗೊಮ್ಮೆ ಪಾರ್ಲಿಮೆಂಟಿನ ಚುನಾವಣೆ).

೧೬೯೯ ಡರಾಯನ್ (ಪನಾಮಾ) ಎಂಬಲ್ಲಿ ವಸಾಹತನ್ನು ಸ್ಥಾಪಿಸಲು ಸ್ಕಾಟಿಶ್ ಜನರ ಯೋಜನೆ. ಅಲ್ಲಿಯ ಅನಾರೋಗ್ಯಕರವಾದ ಹವೆ, ಇಂಗ್ಲಿಶ್ ವ್ಯಾಪಾರಸ್ಥರ ಸ್ಪರ್ಧೆ ಮತ್ತು ರಾಜನ ಮತ್ತು ಪಾರ್ಲಿಮೆಂಟಿನ ಉದಾಸೀನತೆ ಮತ್ತು ಸ್ಪನಿಶ್ ವಸಾಹತುಗಳ ವಿರೋಧ. ಇವುಗಳಿಂದ ಈ ವಸಾಹತು ಅಯಶಸ್ವಿಯಾಯ್ತು.

೧೭೦೧ ಆಕ್ಟ ಆಫ್ ಸೆಟಲ್‌ಮೆಂಟ್. ಅನ್ ಇವಳ ತರುವಾಯದಲ್ಲಿ ಹನೋವರ ವಂಶದ ಪ್ರಾಟೆಸ್ಟಂಟ ಪಂಥದ ವಾರಸದಾರರಲ್ಲಿ ಇಂಗ್ಲಂಡಿನ ಪಟ್ಟವು. ನ್ಯಾಯಾಧೀಶರನ್ನು ಕೆಲಸದಿಂದ ದೂರ ಮಾಡುವುದಿದ್ದರೆ ಪಾರ್ಲಿಮೆಂಟ್ ಮತ್ತು ಅರಸು ಇವರಿಬ್ಬರ ಸಮ್ಮತಿಯೂ ಆವಶ್ಯಕವಾದುದು.

ವಿಲಿಯಮನ ಪರರಾಷ್ಟ್ರೀಯ ನೀತಿ—(೧) ೧೪ನೆಯ ಲುಯಿಯ ಮಹತ್ವಾಕಾಂಕ್ಷೆಯನ್ನು ತಡೆವುದು); (೨) ಹಾಲಂಡನ್ನು ರಕ್ಷಿಸುವುದು; (೩) ಫ್ರಾನ್ಸಿನ ವಿರುದ್ಧವಾಗಿ ಇಂಗ್ಲಂಡ್, ಹಾಲಂಡ್, ಸ್ಪೇನ ಮತ್ತು ಜರ್ಮನಿಯಲ್ಲಿಯ ಕೆಲವು ಸಂಸ್ಥಾನಗಳು ಇವುಗಳ ಸಂಘವನ್ನು (ಆಗ್ಜಬರ್ಗ ಸಂಘ) ಸ್ಥಾಪಿಸುವುದು.

೧೪ನೆಯ ಲುಯಿಯ ಮಹತ್ವಾಕಾಂಕ್ಷೆ—ನೆದರ್ಲಂಡ್ ಮತ್ತು ಹಾಲಂಡ್ ದೇಶಗಳನ್ನು ಗೆದ್ದು ಫ್ರಾನ್ಸಿನ ಉತ್ತರಸೀಮೆಯನ್ನು ಬೆಳೆಯಿಸುವುದು ಮತ್ತು ಫ್ರಾನ್ಸ್ ರಾಷ್ಟ್ರವನ್ನು ಬಲಾಢ್ಯವಾಗಿ ಮಾಡುವುದು. ತನ್ನ ಮಹತ್ವಾಕಾಂಕ್ಷೆಗೆ ಇಂಗ್ಲಂಡಿನಿಂದ ಆತಂಕವೊದಗಬಾರದೆಂದು ಸ್ಕಾಟಲಂಡಿನಲ್ಲಿಯ ಮತ್ತು ಐರ್ಲಂಡಿನಲ್ಲಿಯ ಬಂಡುಗಳಿಗೆ ಸಾಹಾಯ್ಯಮಾಡಿ ಇಂಗ್ಲಂಡನ್ನು ಅತ್ತ ತೊಡಗಿಸಿಡುವುದು; ವಿಲಿಯಮನ ಇಂಗ್ಲಂಡಿನ ಪಟ್ಟದ ಹಕ್ಕನ್ನು ಒಪ್ಪದೆ ಇಂಗ್ಲಂಡಿನ ಮೇಲೆ ಹಡಗುಪಡೆಯ ದಾಳಿಯನ್ನು ಮಾಡುವುದು.

ಸ್ಕಾಟಲಂಡಿನಲ್ಲಿ ಬಂಡು—೧೬೮೯ರಲ್ಲಿ ಕಿಲಿಕ್ರಾನಕಿಯ ಯುದ್ಧದಲ್ಲಿ ಇಂಗ್ಲಿಶ್ ಸೈನ್ಯದ ಪರಾಭವವು; ಆದರೆ ಮುಂದೆ ಸ್ಕಾಟಿಶ್ ಜನರ ಪರಾಭವವು. ೧೬೯೨ ರಲ್ಲಿ ಗ್ಲೆನ್ಕೊ ಎಂಬಲ್ಲಿಯ ಕೊಲೆ.

ಐರ್ಲಂಡಿನಲ್ಲಿ ಬಂಡು— ಬಾಯನ್ ಎಂಬಲ್ಲಿಯ ಕಾಳೆಗದಲ್ಲಿ (೧೬೯೦) ವಿಲಿಯಮನು ಜೇಮ್ಸನನ್ನು ಸೋಲಿಸಿದನು. ಜೇಮ್ಸನು ಫ್ರಾನ್ಸಿಗೆ ಹೋದನು. ಐರ್ಲಂಡಿನಲ್ಲಿಯ ಬಂಡು ಮುರಿಯಲ್ಪಟ್ಟಿತು.

ಫ್ರಾನ್ಸಿನೊಡನೆ ಯುದ್ಧವು (೧೬೮೯—೧೬೯೭)—

ಸಮುದ್ರದ ಮೇಲಿನ ಕಾಳೆಗಗಳು—ಬೀಚೀಹೆಡ್ ಎಂಬಲ್ಲಿ ಫ್ರೆಂಚ್ ಹಡಗುಪಡೆಯ ಅಧಿಪತಿಯಾದ ಟೂರ್ವಿಲನು ಇಂಗ್ಲಿಶ್ ಹಡಗುಪಡೆಯನ್ನು ಸೋಲಿಸಿದನು (೧೬೯೦); ೧೬೯೨ರಲ್ಲಿ ಲಾ ಹೋಗ ಎಂಬಲ್ಲಿ ಇಂಗ್ಲಿಶ್

ಹಡಗುಪಡೆಯ ಅಧಿಪತಿಯಾದ ರಸೆಲನು ಫ್ರೆಂಚ ಹಡಗುಪಡೆಯನ್ನು ಸೋಲಿಸಿದನು, ಇದರಿಂದ ಇಂಗ್ಲಂಡಿನ ಮೇಲೆ ಹಡಗುಪಡೆಯ ದಾಳಿಯನ್ನು ಮಾಡಬೇಕೆಂಬ ಫ್ರಾನ್ಸಿನ ಯೋಜನೆ ಫಲಿಸಲಿಲ್ಲ.

ಭೂಮಿಯ ಮೇಲಿನ ಕಾಳೆಗಗಳು— ಫ್ರೆಂಚ್ ಸೈನ್ಯವು ೧೬೯೨ರಲ್ಲಿ ಸ್ಟೆನ್‌ಕರ್ಕ ಎಂಬಲ್ಲಿ ಮತ್ತು ೧೬೯೩ರಲ್ಲಿ ಲಂಡೆನ್ ಎಂಬಲ್ಲಿ ವಿಲಿಯಮನನ್ನು ಸೋಲಿಸಿತು, ಆದರೆ ವಿಲಿಯಮನು ೧೬೯೫ರಲ್ಲಿ ಫ್ರೆಂಚರನ್ನು ಸೋಲಿಸಿ ನಾಮೂರ ಕೋಟೆಯನ್ನು ವಶಪಡಿಸಿಕೊಂಡನು.

ಮುಂದೆ ಸ್ಪೇನದ ಪಟ್ಟಕ್ಕೆ ಉತ್ತರಾಧಿಕಾರಿ ಯಾರು ಎಂಬ ಪ್ರಶ್ನೆಯ ಕಡೆಗೆ ಯುರೋಪದ ರಾಷ್ಟ್ರಗಳ ಲಕ್ಷ್ಯವು ತಿರುಗಿತಾದುದರಿಂದ ಯುದ್ಧವು ನಿಂತಿತು.

ರಿಝುವಿಕದ ಒಪ್ಪಂದವು, ೧೬೯೭— ವಿಲಿಯಮನು ಇಂಗ್ಲಂಡಿನ ಅರಸನಹುದೆಂದು ಲುಯಿ ಒಪ್ಪಿಕೊಂಡನು.

ಸ್ಪೇನದ ಪಟ್ಟಕ್ಕೆ ಉತ್ತರಾಧಿಕಾರಿ ಯಾರೆಂಬ ಪ್ರಶ್ನೆ— ಸ್ಪೇನದ ವೃದ್ಧನೂ ನಿಪುತ್ರಿಕನೂ ಆದ ಅರಸನ (೨ನೆಯ ಚಾರ್ಲಸನ) ಸಮೀಪದ ಉತ್ತರಾಧಿಕಾರಿಗಳು ಇಬ್ಬರು. ಅವರು ಫ್ರಾನ್ಸ ಮತ್ತು ಆಸ್ಟ್ರಿಯಾ ದೇಶಗಳ ರಾಜಪುತ್ರರು. ಆದರೆ ಅವರಲ್ಲಿ ಒಬ್ಬನಿಗೆ ಸ್ಪೇನದ ಸಾಮ್ರಾಜ್ಯವು ದೊರೆತರೆ ಆಸ್ಟ್ರಿಯಾ ಅಥವಾ ಫ್ರಾನ್ಸು ಬಲು ದೊಡ್ಡದಾಗುವುದೆಂದು ಭೀತಿ. ಆದುದರಿಂದ ಸ್ಪೇನದ ಸಾಮ್ರಾಜ್ಯವನ್ನು ಇವರಿಬ್ಬರಲ್ಲಿ ಹಂಚಲ್ಪಡಬೇಕು, ಮತ್ತು ಅದೆಲ್ಲವನ್ನು ಫ್ರಾನ್ಸಿಗಾಗಲಿ ಆಸ್ಟ್ರಿಯಕ್ಕಾಗಲಿ ಕೂಡಿಸಲಾಗದು ಎಂದು ವಿಲಿಯಮನ ಮತ್ತು ಇತರ ರಾಷ್ಟ್ರಗಳ ಇಚ್ಛೆ; ಅದಕ್ಕೆ ಲುಯಿಯ ಸಮ್ಮತಿ. ಆದರೆ ಸ್ಪೇನದ ಚಾರ್ಲಸರಾಜನ ಮೃತ್ಯುಪತ್ರದಂತೆ ಸ್ಪೇನದ ಸಾಮ್ರಾಜ್ಯವೆಲ್ಲವು ೧೪ನೆಯ ಲುಯಿಯ ಮೊಮ್ಮಗನಾದ ಫಿಲಿಪನಿಗೆ ದೊರೆತುದರಿಂದ ಮತ್ತು ಅದಕ್ಕೆ ೧೪ನೆಯ ಲುಯಿ ಸಮ್ಮತಿಯನ್ನು ಕೊಟ್ಟುದರಿಂದ ಫ್ರಾನ್ಸಿನ ವಿರುದ್ಧವಾಗಿ ಇಂಗ್ಲಂಡ್, ಆಸ್ಟ್ರಿಯಾ, ಹಾಲಂಡ್ ಮತ್ತು ಸೇವಾಯ್ ಈ ರಾಷ್ಟ್ರಗಳ ಸಂಘವು (೧೭೦೧). ಯುದ್ಧವು ಪ್ರಾರಂಭವಾಯಿತು (೧೭೦೨).

ತತ್ಕಾಲೀನ ಪ್ರಸಿದ್ಧ ಪುರುಷರು—

ವಿಲಿಯಮನ ಮಂತ್ರಿಗಳು— ಲಾರ್ಡ ಡನ್ಬಿ, ಜಾರ್ಜ ಸೇವ್ಹಾಯಿಲ್, ಲಾರ್ಡ ಗೊಡೊಲ್ಫಿನ್ ಮತ್ತು ಚಾರ್ಲಸ ಮಾಂಟೆಗ್ಯೂ (ಅರ್ಥಿಕ ಮಂತ್ರಿ).
ರಸೆಲ್ (ಹಡಗುಪಡೆಯ ಮಂತ್ರಿ)
ಮಾರ್ಲಬರೋ (ಯುದ್ಧ ಮಂತ್ರಿ)

ಶಾಸ್ತ್ರವೂ ತತ್ವಜ್ಞಾನವೂ— ಸರ ಐಝ್ಯಾಕ್ ನ್ಯೂಟನ್; ಜಾನ್ ಲಾಕ್.

---

# ೧೪ನೆಯ ಪ್ರಕರಣವು

## ಅನ್

ಜನ್ಮವು ೧೬೬೫; ರಾಜ್ಯಾರೋಹಣವು (೩೭ನೆಯ ವರ್ಷದಲ್ಲಿ) ೧೭೦೨;
ಮೃತ್ಯು ೧೭೧೪
(೧೭೦೨—೧೭೧೪)

### ತತ್ಕಾಲೀನ ರಾಜ್ಯಕರ್ತರು.

| ಫ್ರಾನ್ಸ | ಆಸ್ಟ್ರಿಯಾ | ಸ್ಪೇನ |
| --- | --- | --- |
| ೧೪ನೆಯ ಲುಯಿ (೧೬೪೩-೧೭೧೫) | ಲಿಯೋಪೋಲ್ಡ (೧೭೧೧ರ ವರೆಗೆ) | ೫ನೆಯ ಫಿಲಿಪ್ (೧೪ನೆಯ ಲುಯಿಯ ಮೊಮ್ಮಗನು), (೧೭೦೦-೧೭೪೬) |

### ಮಹತ್ವದ ಇಸ್ವಿಗಳು.

**೧೭೦೪ ಆ್ಯಕ್ಟ ಆಫ್ ಸೆಕ್ಯೂರಿಟಿ.**

**೧೭೦೪ ಬ್ಲೆನ್ಹಿಮದ ಯುದ್ಧವು; ಜಿಬ್ರಾಲ್ಟರದ ಕೋಟೆಯನ್ನು ಇಂಗ್ಲಿಶರು ತೆಗೆದುಕೊಳ್ಳುವರು.**

೧೭೦೬ ರ್ಯಾಮಿಲಿಯಯ ಯುದ್ಧವು.

೧೭೦೭ ಸ್ಕಾಟಿಶ್ ಮತ್ತು ಇಂಗ್ಲಿಶ್ ಪಾರ್ಲಿಮೆಂಟುಗಳ ಏಕೀಕರಣವು.

೧೭೦೮ ಔಡೇನಾರ್ಡದ ಯುದ್ಧವು.

೧೭೧೧ ಟೋರಿ ಮಂತ್ರಿಮಂಡಳವು; ಟೋರಿಪಕ್ಷವು ಮಾರ್ಲಬರೊ ಇವನನ್ನು ಯುದ್ಧದಿಂದ ತಿರುಗಿ ಕರೆಯಿಸಿತು.

೧೭೧೩ ಯುಟ್ರೆಕ್ಟದ ಒಪ್ಪಂದವು.

**ಅನ್ ರಾಣಿ**—ಮೇರಿ ಮತ್ತು ವಿಲಿಯಮ್ ಇವರಿಗೆ ಮಕ್ಕಳಿಲ್ಲದುದರಿಂದ ಆ್ಯಕ್ಟ ಆಫ್ ಸೆಟ್ಲಮೆಂಟಿನಿಂದ ಮೇರಿಯ ತಂಗಿ ಅನ್ ಇವಳು ಇಂಗ್ಲಂಡಿನ ರಾಣಿಯಾದಳು. ಡೆನ್ಮಾರ್ಕದ ರಾಜಪುತ್ರ ಜಾರ್ಜನೊಡನೆ ಅವಳ ಲಗ್ನವಾಯಿತು. ಆದರೆ ಅವನಿಗೆ ಇಂಗ್ಲಂಡಿನ ರಾಜಪದವು ಕೊಡಲ್ಪಡಲಿಲ್ಲ. ಜಾರ್ಜನು ಶಾಂತ ಪ್ರಕೃತಿಯವನಾಗಿದ್ದನು. ಅವನು ರಾಜ್ಯಕಾರಭಾರದಲ್ಲಿ ಯಾವ ಭಾಗವನ್ನೂ ವಹಿಸಲಿಲ್ಲ. 'ಡ್ಯೂಕ್ ಆಫ್ ಕಂಬರಲಂಡ' ಎಂಬ ಪದವಿಯನ್ನು ತಳೆದು ಲಾರ್ಡ ಸಭೆಯಲ್ಲಿ ಅವನು ಸದಸ್ಯನಾಗಿದ್ದನು. ಅನ್ ರಾಣಿ ಧಾರ್ಮಿಕವೃತ್ತಿಯವಳೂ

ಮಮತೆಯುಳ್ಳವಳೂ ಸುಸ್ವಭಾವದವಳೂ ಆಗಿದ್ದಳು. ಆದರೆ ಅವಳು ಬುದ್ಧಿ ವಂತಿಯೂ ಕರ್ತೃತ್ವಶಾಲಿನಿಯೂ ಆಗಿರಲಿಲ್ಲ, ಆದುದರಿಂದ ಅವಳು ಇತರರ ತಂತ್ರದಿಂದಲೆ ರಾಜ್ಯಕಾರಭಾರವನ್ನು ಮಾಡಬೇಕಾಯಿತು. ಆ ಸಮಯದಲ್ಲಿ ರಾಜ್ಯದಲ್ಲಿಯ ಪ್ರಮುಖ ಸೇನಾಪತಿಯೂ ರಾಜಕಾರಣಕುಶಲನೂ ಆದವನೆಂದರೆ ಮಾರ್ಲಬರೊ. ಅವನು ಲೋಭಿಯೂ ಸ್ವಾರ್ಥಿಯೂ ಚಂಚಲವೃತ್ತಿಯವನೂ ಆಗಿದ್ದನು. ಅವನು ೨ನೆಯ ಜೇಮ್ಸನ ವಿಶ್ವಾಸಪಾತ್ರನಾದ ಸೇನಾಪತಿ ಆಗಿದ್ದನಾದರೂ ವಿಲಿಯಮನನ್ನು ಕೂಡಿದನು; ವಿಲಿಯಮನು ಆಳುತ್ತಿರುವಾಗ ೨ನೆಯ ಜೇಮ್ಸನೊಡನೆ ಅವನ ಕಾರಸ್ಥಾನವು ನಡೆದಿದ್ದಿತು. ಆದರೆ ಅನ್ ರಾಣಿಯ ಆಳಿಕೆಯಲ್ಲಿ ಮಾತ್ರ ವಿಲಿಯಮನು ೧೪ನೆಯ ಲುಯಿಯ ವಿರುದ್ಧವಾಗಿ ಆದರಿಸಿದ ನೀತಿಯನ್ನು ಅವನು ಮುಂದೆ ಸಾಗಿಸಿದನು. ಸಾರಾ ಜೆನಿಂಗ್ಸ ಎಂಬವಳು ಮಾರ್ಲಬರೊ ಇವನ ಹೆಂಡತಿ. ಇವಳು ಮಹತ್ವಾಕಾಂಕ್ಷಿಣಿಯೂ ಕಾರಸ್ಥಾನಪ್ರಿಯೆಯೂ ಆಗಿದ್ದಳು. ಅನ್ ರಾಣಿಗೂ ಇವಳಿಗೂ ಸಖ್ಯವಿದ್ದಿತು. ಮತ್ತು ಅವಳ ಮೇಲೆ ಇವಳ ವರ್ಚಸ್ಸು ಬಹಳವಾಗಿದ್ದಿತು. ಆದುದರಿಂದ ಸಾರಾ ಜೆನಿಂಗ್ಸ ಮತ್ತು ಮಾರ್ಲಬರೊ ಇವರ ಆಲೋಚನೆಯಂತೆ ಅನ್ ರಾಣಿ ರಾಜ್ಯಕಾರಭಾರವನ್ನು ಮಾಡಲಾರಂಭಿಸಿದಳು.



ಅನ್ ರಾಣಿ

**ಸ್ಪೇನದ ಪಟ್ಟದ ಉತ್ತರಾಧಿಕಾರಿತ್ವದ ವಿಷಯದಲ್ಲಿ ಯುದ್ಧವು (೧೭೦೨-೧೩)**–ಅನ್ ರಾಣಿ ಪಟ್ಟಕ್ಕೆ ಬಂದಾಗ ಸ್ಪೇನದ ಪಟ್ಟದ ಉತ್ತರಾಧಿಕಾರಿತ್ವದ ವಿಷಯದಲ್ಲಿ ಅದೆ ಯುದ್ಧವು ಪ್ರಾರಂಭವಾಗಿದ್ದಿತು. ೧೪ನೆಯ ಲುಯಿಯ ಮೊಮ್ಮಗನಾದ ಫಿಲಿಪನಿಗೆ ಸ್ಪೇನದ ಪಟ್ಟವು ದೊರೆತರೆ ಫ್ರಾನ್ಸ ಮತ್ತು ಸ್ಪೇನ ಈ ರಾಷ್ಟ್ರಗಳು ಒಂದಾಗಿ ಫ್ರಾನ್ಸಿನ ಸಾಮರ್ಥ್ಯವು ಹೆಚ್ಚಿ ಇತರ ರಾಷ್ಟ್ರಗಳಿಗೆ ಗಂಡಾಂತರವು ಒದಗಬಹುದೆಂಬ ಭೀತಿ ಯುರೋಪದಲ್ಲಿಯ ರಾಷ್ಟ್ರಗಳಿಗಿದ್ದಿತು. ಆದುದರಿಂದ ಫಿಲಿಪನಿಗೆ ಸ್ಪೇನದ ಪಟ್ಟವು ದೊರೆಯದೆ ಆಸ್ಟ್ರಿಯದ ರಾಜನ ಮಗನಾದ ಚಾರ್ಲಸನಿಗೆ ದೊರೆಯಬೇಕೆಂದು ವಿಲಿಯಮನ ಆಳ್ಕೆ

ಯಲ್ಲಿ ಫ್ರಾನ್ಸಿನ ವಿರುದ್ಧವಾಗಿ ಒಂದು ಸಂಘವು ಸ್ಥಾಪಿಸಲ್ಪಟ್ಟಿತ್ತು ಮತ್ತು ಲುಯಿ ತನ್ನ ಮೊಮ್ಮಗನಾದ ಫಿಲಿಪನನ್ನು ಸ್ಪೇನದ ರಾಜನಾಗಿ ಮಾಡಿ ಕಳುಹಿದ ಬಳಿಕ ಯುರೋಪದಲ್ಲಿ ಯುದ್ಧವು ಪ್ರಾರಂಭವಾಯಿತು. ಆದರೆ ಅಷ್ಟರಲ್ಲಿ ವಿಲಿಯಮನು ಮರಣಹೊಂದಿದುದರಿಂದ ಅನ್ ರಾಣಿ ಮಾರ್ಲಬರೊ ಇವನ ಆಲೋಚನೆಯನ್ನನುಸರಿಸಿ ಈ ಯುದ್ಧದಲ್ಲಿ ಭಾಗವನ್ನು ವಹಿಸಲು ನಿಶ್ಚಯಿಸಿ ಮಾರ್ಲಬರೊ ಇವನನ್ನು ಸೇನಾಪತಿಯಾಗಿ ಮಾಡಿ ಕಳುಹಿದಳು. ಆಗ ಮಾರ್ಲಬರೊ ಇವನಿಗೆ ವಯಸ್ಸು ೫೦ ವರ್ಷಗಳಿಗೆ ಮಿಕ್ಕಿದ್ದಿತು; ಆದರೂ ಅವನು ಬಹು ಉತ್ಸಾಹದಿಂದ ಯುದ್ಧವನ್ನು ಸಾಗಿಸಿದನು. ಫ್ರಾನ್ಸಿನ ಪಕ್ಷದಲ್ಲಿ ಬವೇರಿಯಾ ಮತ್ತು ಸ್ಪೇನ ರಾಷ್ಟ್ರಗಳು ಮತ್ತು ಮಿತ್ರ ರಾಷ್ಟ್ರಗಳ ಪಕ್ಷದಲ್ಲಿ ಇಂಗ್ಲಂಡ್, ಹಾಲಂಡ್, ಆಸ್ಟ್ರಿಯಾ, ಸೇವ್ಹಾಯ ಮತ್ತು ಜರ್ಮನಿಯಲ್ಲಿಯ ಕೆಲವು ಸಂಸ್ಥಾನಗಳೂ ಇದ್ದುವು. ಇಂಗ್ಲಂಡಿನ ಪ್ರಸಿದ್ಧ ಸೇನಾಪತಿಯಾದ **ಮಾರ್ಲಬರೊ** ಇವನ ಆಧಿಪತ್ಯದಲ್ಲಿ ಮಿತ್ರರಾಷ್ಟ್ರಗಳ ಸೈನ್ಯವಿದ್ದಿತು ಮತ್ತು **ಸೇವ್ಹಾಯದ ರಾಜಪುತ್ರನಾದ ಯುಜೀನ್** ಎಂಬ ಶೂರ ಸೇನಾಪತಿಯ ಸಾಹಾಯ್ಯವು ಅವನಿಗಿದ್ದಿತು.

**ಜರ್ಮನಿಯಲ್ಲಿಯೂ ನೆದರ್ಲಂಡಿನಲ್ಲಿಯೂ ಮಿತ್ರರಾಷ್ಟ್ರಗಳ ವಿಜಯವು**—ಫ್ರಾನ್ಸಿನ ಉತ್ತರಕ್ಕೆ ರ್‍ಹಾಯಿನ್ ನದಿಯ ವರೆಗೆ ಎಲ್ಲ ಪ್ರದೇಶವನ್ನು ತನ್ನ ವಶದಲ್ಲಿ ತೆಗೆದುಕೊಳ್ಳಬೇಕೆಂದು ಲುಯಿಯ ಮಹತ್ವಾಕಾಂಕ್ಷೆಯಾಗಿದ್ದಿತು. ಅವನು ತನ್ನ ಸೈನ್ಯದ ಒಂದು ಭಾಗವನ್ನು ನೆದರ್ಲಂಡಿಗೆ ಕಳುಹಿದನು, ಮತ್ತು ಎರಡನೆಯ ಭಾಗಕ್ಕೆ ಮಧ್ಯ ಯುರೋಪದಲ್ಲಿ ರಾಜಪುತ್ರ ಯುಜೀನನ ನೇತೃತ್ವದಲ್ಲಿಯ ಆಸ್ಟ್ರಿಯನ್ ಮತ್ತು ಸೇವ್ಹಾಯ್ ಸೈನ್ಯವನ್ನು ಇದಿರಿಸುವ ಕೆಲಸವನ್ನು ಒಪ್ಪಿಸಿ ಅದನ್ನು ಪೂರ್ವ ಸೀಮೆಯ ಮೇಲೆ ಕಳುಹಿದನು. ಲುಯಿಯ ಈ ಯೋಜನೆಯನ್ನು ಕಂಡು ಮಾರ್ಲಬರೊ ಇವನು ತನ್ನ ಸೈನ್ಯವನ್ನು ನೆದರ್ಲಂಡಿಗೆ ಒಯ್ದನು ಮತ್ತು ಡಚ್ ಮತ್ತು ಇಂಗ್ಲಿಶ್ ಸೈನ್ಯಗಳನ್ನು ಒಂದುಗೂಡಿಸಿ ಫ್ರೆಂಚ ಸೈನ್ಯವನ್ನು ಇದಿರಿಸಬೇಕೆಂದು ಯೋಚಿಸಿದನು. ಅವನು ನೆದರ್ಲಂಡಿನಲ್ಲಿಯ ಫ್ರೆಂಚರ ವಶದಲ್ಲಿದ್ದ ಕೆಲವು ಕೋಟೆಗಳನ್ನು ಗೆದ್ದು ಫ್ರೆಂಚ ಸೈನ್ಯವನ್ನು ನೆದರ್ಲಂಡಿನಿಂದ ಹೊರದೂಡಲು ನಿಶ್ಚಯಿಸಿದನು. ಆದರೆ ಇದೆ ಸಮಯದಲ್ಲಿ ಆಸ್ಟ್ರಿಯದ ಸಾಮ್ರಾಜ್ಯದೊಳಗಿನ ಹಂಗೇರಿಯಲ್ಲಿಯ ಜನರು ಬಂಡುಮಾಡಿದುದರಿಂದ ಈ ಸಂಧಿಯ ಲಾಭವನ್ನು ತೆಗೆದುಕೊಂಡು ಫ್ರೆಂಚ ಮತ್ತು ಬವೇರಿಯನ್ ಸೈನ್ಯಗಳು ಆಸ್ಟ್ರಿಯಕ್ಕೆ ದಾಳಿಯಿಕ್ಕಬೇಕೆಂದು ಯೋಚಿಸುತ್ತಿರುವವೆಂಬ ಸುದ್ದಿ ಮಾರ್ಲ

ಬರೊ ಇವನಿಗೆ ಗೊತ್ತಾಯಿತು. ಆಗ ರಾಜಪುತ್ರ **ಯುಜೀನನ** ನೇತೃತ್ವದ ಲ್ಲಿಯ ಆಸ್ಟ್ರಿಯನ್ ಸೈನ್ಯಕ್ಕೆ ಸಾಹಾಯ್ಯಮಾಡಲು ಮಾರ್ಲಬರೊ ಇವನು ತನ್ನ ಸೈನ್ಯವನ್ನು ನೆದರ್ಲಂಡಿನಿಂದ ಮಧ್ಯ ಯುರೋಪಕ್ಕೆ ಒಯ್ದು ಫ್ರೆಂಚ ಮತ್ತು ಬವೇರಿಯನ್ ಸೈನ್ಯಗಳನ್ನು ಬವೇರಿಯಾದಲ್ಲಿ ಡನ್ಯೂಬ ನದಿಯ ತೀರದಲ್ಲಿಯ **ಬ್ಲೆನ್ಹಿಮ್** ಎಂಬಲ್ಲಿ ಇದಿರಿಸಿ ಸೋಲಿಸಿ ದಿಕ್ಕುಪಾಲು ಮಾಡಿದನು (೧೭೦೪). ಈ ಸೋಲಿನಿಂದ ಫ್ರೆಂಚ ಸೈನ್ಯವು ಜರ್ಮನಿಯಿಂದ ಕಾಲ್ದೆಗೆಯಬೇಕಾಯಿತು ಮತ್ತು ಅದರಿಂದ ಆಸ್ಟ್ರಿಯದ ಸಾಮ್ರಾಜ್ಯವು ಸುರಕ್ಷಿತವಾಗಿ ಉಳಿಯಿತು. ಇದಾದ ಬಳಿಕ ಯುಜೀನನು **ಟ್ಯೂರಿನ್** ಎಂಬಲ್ಲಿ ಫ್ರೆಂಚ ಸೈನ್ಯದ ಬಲವನ್ನು ಮುರಿದುದರಿಂದ ಇಟಲಿಯಿಂದಲೂ ಫ್ರೆಂಚ ಸೈನ್ಯವು ಕಾಲ್ದೆಗೆಯಬೇಕಾಯಿತು.

ಬ್ಲೆನ್ಹಿಮದ ಯುದ್ಧದ ತರುವಾಯದಲ್ಲಿ ಮಾರ್ಲಬರೊ ಇವನು ತಿರುಗಿ ನೆದರ್ಲಂಡಿಗೆ ಹೋದನು. ಮತ್ತು ಅವನು ರಮಿಯಿ (Ramillies) ಎಂಬಲ್ಲಿ ಫ್ರೆಂಚ ಸೈನ್ಯವನ್ನು ಸೋಲಿಸಿ ಎರಡನೆಯ ಮಹಾ ವಿಜಯವನ್ನು ಪಡೆದನು (೧೭೦೬). ಅದರಿಂದ ಅಂಟವರ್ಪ ಮತ್ತು ಬ್ರುಸೆಲ್ಸ ಈ ಸ್ಥಳಗಳೂ ನೆದರ್ಲಂಡಿ ನಲ್ಲಿಯ ಬಹು ಭಾಗವೂ ಅವನ ವಶದಲ್ಲಿ ಬಂದುವು. ತರುವಾಯದಲ್ಲಿ ಮಾರ್ಲ ಬರೊ ಇವನು ನೆದರ್ಲಂಡಿನಲ್ಲಿ **ಔಡೆನಾರ್ಡ** (Oudenarde) ಎಂಬಲ್ಲಿ ೧೭೦೮ ರಲ್ಲಿ ವಿಜಯವನ್ನು ಸಂಪಾದಿಸಿ ಫ್ರಾನ್ಸಿನ ಸೀಮೆಯ ಮೇಲಿನ **ಲಿಲಿ** ಎಂಬ ಮಹ ತ್ವದ ಭದ್ರವಾದ ಕೋಟೆಯನ್ನು ವಶಪಡಿಸಿಕೊಂಡನು. ಆ ಬಳಿಕ **ಮಾಲ್‌ಪ್ಲಾಕೆ** (Malplaquet) ಎಂಬಲ್ಲಿ ಮಾರ್ಲಬರೊ ಇವನಿಗೆ ಜಯವು ದೊರೆತಿತು (೧೭೦೯). ಅದರಿಂದ ಇಡಿಯ ನೆದರ್ಲಂಡ್ ಪ್ರಾಂತವು ಅವನ ವಶದಲ್ಲಿ ಬಂದಿತು.

**ಸ್ಪೇನದಲ್ಲಿಯ ಯುದ್ಧಗಳು**— ಲುಯಿ ತನ್ನ ಮೊಮ್ಮಗನಾದ ಫಿಲಿಪನನ್ನು ಸ್ಪೇನದ ರಾಜನಾಗಿ ಮಾಡಿ ಅವನನ್ನು ೧೭೦೧ರಲ್ಲಿ ಸ್ಪೇನಕ್ಕೆ ಕಳುಹಿದನು. ಅಲ್ಲಿಂದ ಅವನನ್ನು ಹೊರದೂಡಲು ಮಿತ್ರರಾಷ್ಟ್ರಗಳು ಯತ್ನಿಸಿದುವು. ೧೭೦೫ ರಲ್ಲಿ **ಬಾರ್ಸಿಲೊನಾ** (Barcelona) ಎಂಬಲ್ಲಿ ಮಿತ್ರರಾಷ್ಟ್ರಗಳ ಸೈನ್ಯಕ್ಕೆ ಜಯವು ದೊರೆತಿತು, ಆದರಿಂದ ಪೋರ್ತುಗಾಲ ರಾಷ್ಟ್ರವೂ ಮಿತ್ರರಾಷ್ಟ್ರಗಳನ್ನು ಕೂಡಿತು. ಆ ಬಳಿಕ ಮಿತ್ರರಾಷ್ಟ್ರಗಳ ಸೈನ್ಯವು ಸ್ಪೇನದ ರಾಜಧಾನಿಯಾದ **ಮಾಡ್ರಿಡ್** ಪಟ್ಟಣವನ್ನೂ ತೆಗೆದುಕೊಂಡಿತು (೧೭೦೭). ಆದರೆ ಮುಂದೆ ಸ್ವಲ್ಪ ದಿನಗಳಲ್ಲಿಯೇ **ಆಲ್ಮಾಂಝಾ** (Almanza) ಎಂಬಲ್ಲಿ ಮಿತ್ರರಾಷ್ಟ್ರಗಳು ಹಿಂದೆ ಗೆಯಬೇಕಾಯ್ತು (೧೭೦೭).

**ಸಮುದ್ರದ ಮೇಲಿನ ಯುದ್ಧಗಳು**— ನೆದರ್ಲಂಡಿನಲ್ಲಿ ಮಿತ್ರರಾಷ್ಟ್ರಗಳಿಗೆ

ಜಯವು ಉಂಟಾಗುತ್ತಿರುವಾಗ ಸಮುದ್ರದ ಮೇಲೆಯೂ ಇಂಗ್ಲಿಷ್ ಹಡಗುಪಡೆ ಜಯಶಾಲಿಯಾಯ್ತು. ಇಂಗ್ಲಿಶ್ ಹಡಗುಪಡೆಯ ಅಧಿಪತಿಯಾದ **ರುಕ್** ಎಂಬವನು ೧೭೦೨ರಲ್ಲಿ ಸ್ಪೇನದ ಪಶ್ಚಿಮ ತೀರದಲ್ಲಿಯ ವ್ಹೀಗೋ ಎಂಬಲ್ಲಿ ಫ್ರೆಂಚ್ ಮತ್ತು ಸ್ಪನಿಶ್ ಹಡಗುಗಳನ್ನು ನಾಶಗೊಳಿಸಿದನು. ಆ ಬಳಿಕ ೧೭೦೪ರಲ್ಲಿ ಅವನು ಸ್ಪೇನದ ದಕ್ಷಿಣತೀರದಲ್ಲಿಯ ಅತ್ಯಂತ ಮಹತ್ವದ **ಜಿಬ್ರಾಲ್ಟರ** ಕೋಟೆಯನ್ನು ವಶಪಡಿಸಿಕೊಂಡನು. ತರುವಾಯದಲ್ಲಿ ೧೭೦೮ರಲ್ಲಿ ಭೂಮಧ್ಯಸಮುದ್ರದಲ್ಲಿಯ **ಮಿನಾರ್ಕಾ** ಎಂಬ ನಡುಗಡ್ಡೆಯನ್ನು ಇಂಗ್ಲಿಶ್ ಹಡಗುಪಡೆ ವಶದಲ್ಲಿ ತೆಗೆದುಕೊಂಡಿತು.

ಯುರೋಪದಲ್ಲಿ ಈ ಯುದ್ಧವು ನಡೆದಿರುವಾಗ ಇಂಗ್ಲಂಡಿನ ಪಾರ್ಲಿಮೆಂಟಿನ ಹೊಸ ಚುನಾವಣೆಯಾಗಿ ಟೋರಿ ಪಕ್ಷದ ಬಹುಮತವಾಯ್ತು (೧೭೧೦). ಈ ಮಧ್ಯದಲ್ಲಿ ಅನ್ ರಾಣಿ ಮತ್ತು ಸಾರಾ ಜೆನಿಂಗ್ಸ (ಮಾರ್ಲಬರೊ ಇವನ ಹೆಂಡತಿ) ಇವರಲ್ಲಿ ಪರಸ್ಪರ ಮನಸ್ತಾಪವುಂಟಾಯ್ತು. ಅನ್ ರಾಣಿ ವ್ಹಿಗ್ ಪಕ್ಷದ ಮಂತ್ರಿಗಳ ಸ್ಥಳದಲ್ಲಿ ಟೋರಿ ಪಕ್ಷದವರನ್ನು ಮಂತ್ರಿಮಂಡಳದಲ್ಲಿ ನಿಯೋಜಿಸಿದಳು. ಟೋರಿ ಪಕ್ಷದವರ ಅಭಿಪ್ರಾಯವು ಯುದ್ಧವನ್ನು ನಿಲ್ಲಿಸಬೇಕೆಂದಿತ್ತು. ಅವರು **ಮಾರ್ಲಬರೊ** ಇವನ ಮೇಲೆ ಲಂಚವನ್ನು ತಿಂದನೆಂಬ ಆರೋಪವನ್ನು ಹೊರಿಸಿ ಸೇನಾಪತಿಪದದಿಂದ ಅವನನ್ನು ತೆಗೆದು **ಅರ್ಮಾಂಡ್** ಎಂಬವನ್ನು ಸೇನಾಪತಿಯಾಗಿ ನಿಯೋಜಿಸಿದರು. ಇತ್ತ ಆಸ್ಟ್ರಿಯದ ಅರಸನಾದ **ಲಿಯೋಪೋಲ್ಡನು** ಮರಣಹೊಂದಿದನು (೧೭೧೧) ಮತ್ತು ಅವನ ಮಗನಾದ **ಚಾರ್ಲಸನು** ಆಸ್ಟ್ರಿಯದ ಅರಸನಾದನು. ಅವನಿಗೆ ಮತ್ತೆ ಸ್ಪೇನದ ಪಟ್ಟವನ್ನು ದೊರಕಿಸಿ ಕೊಡುವುದರಲ್ಲಿ ಮಿತ್ರರಾಷ್ಟ್ರಗಳಿಗೆ ಯಾವ ಲಾಭವೂ ಇರಲಿಲ್ಲ. ನೆದರ್ಲಂಡ ಜರ್ಮನಿಗಳಲ್ಲಿಯ ಯುದ್ಧದಲ್ಲಿಯೂ ಸಮುದ್ರದ ಮೇಲಿನ ಯುದ್ಧದಲ್ಲಿಯೂ ಫ್ರಾನ್ಸಿನ ಪರಾಭವವಾದುದರಿಂದ ೧೪ನೆಯ ಲುಯಿಯೂ ಒಪ್ಪಂದವನ್ನು ಬಯಸುತ್ತಿದ್ದನು. ಈ ಪರಿಸ್ಥಿತಿ ಇದ್ದುದರಿಂದ ಮಿತ್ರರಾಷ್ಟ್ರಗಳು ಹಾಲಂಡಿನಲ್ಲಿ **ಯುಟ್ರೆಕ್ಟ** ಎಂಬಲ್ಲಿ ಫ್ರಾನ್ಸನೊಡನೆ ಒಪ್ಪಂದವನ್ನು ಮಾಡಿದುವು (೧೭೧೩).

**ಯುಟ್ರೆಕ್ಟದ ಒಪ್ಪಂದವು, ೧೭೧೩**—(೧) ಈ ಒಪ್ಪಂದದಿಂದ ೧೪ನೆಯ ಲುಯಿಯ ಮೊಮ್ಮಗನಾದ ಫಿಲಿಪನಿಗೆ ಸ್ಪೇನದ ಪಟ್ಟವೂ ಅಮೇರಿಕೆಯಲ್ಲಿಯ ಸ್ಪನಿಶ್ ವಸಾಹತುಗಳೂ ದೊರೆತುವು, ಆದರೆ ಫ್ರಾನ್ಸಿನ ಪಟ್ಟಕ್ಕೆ ಅವನಿಗೆ ಅಧಿಕಾರವು ಇರಬಾರದೆಂದು ನಿಶ್ಚಯಿಸಲ್ಪಟ್ಟಿತು. (೨) ಆಸ್ಟ್ರಿಯದ ರಾಜನಾದ

ಚಾರ್ಲಸನಿಗೆ ಸ್ಪೇನದ ವಶದಲ್ಲಿದ್ದ ನೆದರ್ಲಂಡ್ ಮತ್ತು ಇಟಲಿಯಲ್ಲಿಯ ಮಿಲನ್, ನೇಪಲ್ಸ, ಮತ್ತು ಸಾರ್ಡೆನಿಯಾ ಈ ಪ್ರದೇಶಗಳು ದೊರೆತುವು. (೩) ಡಚ್ ಜನರಿಗೆ ನೆದರ್ಲಂಡಿನ ಸೀಮೆಯ ಮೇಲಿರುವ ಕೋಟೆಗಳು ದೊರೆತುವು. (೪) ಸೇವ್ಹಾಯದ ರಾಜಪುತ್ರ ಯುಜೇನನಿಗೆ ಸಿಸಲಿ ನಡುಗಡ್ಡೆ ದೊರೆತಿತು. (೫) ಪ್ರಾಟೆಸ್ಟಂಟ ಪಂಥದವರಿಗೆ ಇಂಗ್ಲಂಡಿನ ರಾಜಪದವು ದೊರೆಯಬೇಕೆಂಬ ಮಾತಿಗೆ ಲುಯಿಯ ಸಮ್ಮತಿ ದೊರೆತುದಲ್ಲದೆ ೨ನೆಯ ಜೇಮ್ಸನ ಮಗನಿಗೆ ತಾನು ಸಾಹಾಯ್ಯ ಮಾಡುವುದಿಲ್ಲೆಂದು ಅವನು ಒಪ್ಪಿಕೊಂಡನು. (೬) ಇಂಗ್ಲಂಡಿಗೆ ಫ್ರಾನ್ಸಿನಿಂದ ಅಮೇರಿಕೆಯಲ್ಲಿಯ ನ್ಯೂಫೌಂಡ್‌ಲಂಡ್, ನೋವಾಸ್ಕೊಶಿಯಾ ಮತ್ತು ಸ್ಪೇನದಿಂದ ಭೂಮಧ್ಯಸಮುದ್ರದ ಮೇಲಿನ ಜಿಬ್ರಾಲ್ಟರ ಮತ್ತು ಮಿನಾರ್ಕಾ ಎಂಬ ಮಹತ್ವದ ಸ್ಥಳಗಳು ದೊರೆತುವು. (೭) ಇದಲ್ಲದೆ ಅಮೇರಿಕೆಯೊಳಗಿನ ಸ್ಪೇನದ ವಸಾಹತುಗಳೊಡನೆ ವ್ಯಾಪಾರ ಮಾಡಲು ಪ್ರತಿವರ್ಷವು ಒಂದು ವ್ಯಾಪಾರದ ಹಡಗನ್ನು ಕಳುಹಲು ಇಂಗ್ಲಂಡಿಗೆ ಅಪ್ಪಣೆ ದೊರೆತಿತು.

**ಯುದ್ಧದ ಪರಿಣಾಮವು**— ಈ ಯುದ್ಧದಿಂದ ಯುರೋಪದಲ್ಲಿಯ ಫ್ರಾನ್ಸಿನ ಲಷ್ಕರಿ ಶ್ರೇಷ್ಠತ್ವವು ನಷ್ಟವಾಯಿತು, ಸ್ಪೇನದ ಹಡಗುಪಡೆಯ ಸತ್ತೆ ಕಳೆಗುಂದಲಾರಂಭಿಸಿತು, ಮತ್ತು ಇಂಗ್ಲಂಡಿನ ಹಡಗುಪಡೆಯ ಶ್ರೇಷ್ಠತೆ ಸ್ಥಾಪಿತವಾಯ್ತು. ಇಂಗ್ಲಂಡಿನ ವ್ಯಾಪಾರವೂ ಸಾಮ್ರಾಜ್ಯವೂ ಬೆಳೆಯತೊಡಗಿತು; ಮತ್ತು ಅದರಿಂದ ಇಂಗ್ಲಂಡ್ ಮತ್ತು ಫ್ರಾನ್ಸ ಇವುಗಳ ನಡುವೆ ಸ್ಪರ್ಧೆ ಹುಟ್ಟುವ ಚಿಹ್ನಗಳು ತೋರಲಾರಂಭಿಸಿದುವು.

**ಅನ್ ರಾಣಿಯೂ ಅವಳ ಮಂತ್ರಿಗಳೂ**—ಅನ್ ರಾಣಿ ಪಟ್ಟಕ್ಕೆ ಬಂದಾಗ ಯುರೋಪದಲ್ಲಿ ಫ್ರಾನ್ಸಿನ ವಿರುದ್ಧವಾಗಿ ಯುದ್ಧವು ಅದೆ ಪ್ರಾರಂಭವಾಗಿತ್ತು. ಈ ಯುದ್ಧದಲ್ಲಿ ಭಾಗವಹಿಸಬೇಕೆಂದು ವ್ಹಿಗ್ ಪಕ್ಷದವರ ಮತವಿದ್ದಿತು. ಆದರೆ ಭಾಗವಹಿಸಬಾರದೆಂದು ಟೋರಿ ಪಕ್ಷದವರ ಮತವಿದ್ದಿತು. ಅನ್ ರಾಣಿಯ ಮಂತ್ರಿಮಂಡಳದಲ್ಲಿ ಆ ಕಾಲದಲ್ಲಿ ವ್ಹಿಗ್ ಮತ್ತು ಟೋರಿ ಈ ಎರಡೂ ಪಕ್ಷಗಳ ಜನರಿದ್ದರು. ಅವರಲ್ಲಿ **ಗೊಡೊಲ್ಫಿನ್** ಮತ್ತು **ಮಾರ್ಲಬರೊ** ಇವರು ಪ್ರಮುಖರಿದ್ದರು ಮತ್ತು ಅವರ ಸೂಚನೆಯನ್ನು ಅನುಸರಿಸಿಯೆ ಅನ್ ರಾಣಿ ಈ ಯುದ್ಧದಲ್ಲಿ ಭಾಗವಹಿಸಿದಳು. ಯುದ್ಧವು ನಡೆದಿರುವಾಗ ಒಪ್ಪಂದವನ್ನು ಮಾಡಿಕೊಂಡು ಅದನ್ನು ಬೇಗನೆ ನಿಲ್ಲಿಸಬೇಕೆಂದು **ಹಾರ್ಲೆ** ಮತ್ತು **ಹೆನ್ರಿ ಸೇಂಟ ಜಾನ್** (ಬೊಲಿಂಗಬ್ರುಕ್) ಈ ಇಬ್ಬರು ಟೋರಿ ಪಕ್ಷದ ಮಂತ್ರಿಗಳು ಪ್ರಯತ್ನಿಸುತ್ತಿದ್ದರು. ಆದರೆ ಅವರ ಈ ನೀತಿ ಗೊಡೊಲ್ಫಿನ್ ಮತ್ತು

ಮಾರ್ಲಬರೊ ಇವರಿಗೆ ಸರಿದೋರಲಿಲ್ಲವಾದುದರಿಂದ ಅವರು ಆನ್ ರಾಣಿಯಿಂದ ಅವರನ್ನು ಕೆಲಸದಿಂದ ದೂರಮಾಡಿಸಿದರು (೧೭೦೮), ಮತ್ತು **ವಾಲಪೋಲ್** ಎಂಬವನನ್ನು ಮಂತ್ರಿಮಂಡಳದಲ್ಲಿ ತೆಗೆದುಕೊಂಡರು. ಗೊಡೊಲ್ಫಿನನ ಮಂತ್ರಿ ಮಂಡಳವು ಧಾರ್ಮಿಕ ವಿಷಯದಲ್ಲಿ ಡಿಸೆಂಟರ್ಸ, ನಾನ್‌ಕನ್‌ಫಾರ್ಮಿಸ್ಟ್ಸ ಈ ಪಂಥಗಳ ಜನರಿಗೆ ಸ್ವಾತಂತ್ರ್ಯವನ್ನು ಕೊಡಬೇಕೆಂದು ಅಭಿಪ್ರಾಯವುಳ್ಳದಿತ್ತು. ಆದರೆ ಈ ನೀತಿ ಟೋರಿ ಪಕ್ಷದವರಿಗೆ ಮಾನ್ಯವಿರಲಿಲ್ಲ. ಈ ಸಮಯದಲ್ಲಿ **ಡಾ. ಸಚೆವ್ಹೆರಲ್** ಎಂಬ ಟೋರಿ ಪಕ್ಷದ ಧರ್ಮಾಧಿಕಾರಿಯೊಬ್ಬನು, "ಡಿಸೆಂಟರ್ಸ ಜನರಿಗೆ ಧಾರ್ಮಿಕ ಸ್ವಾತಂತ್ರ್ಯವು ಮತ್ತು ಅನುಕೂಲತೆಗಳು ಕೊಡಲ್ಪಡಬಾರದು. ರಾಜನ ಸತ್ತೆ ಈಶ್ವರದತ್ತವಾದುದೆಂಬ ಮಾತನ್ನು ಪ್ರತಿಯೊಬ್ಬನೂ ಒಪ್ಪಬೇಕು ಮತ್ತು ರಾಜಸತ್ತೆಯನ್ನು ಯಾವನೂ ವಿರೋಧಿಸಲಾಗದು" ಎಂದು ಪ್ರವಚನವನ್ನು ಹೇಳಿದನು, ಮತ್ತು ಮಂತ್ರಿಮಂಡಳದ ನೀತಿಯನ್ನು ಟೀಕಿಸಿದನು (೧೭೦೯). ಬಿಲ್ ಆಫ್ ರೈಟ್ಸ ಕಾಯ್ದೆಯ ವಿರುದ್ಧವಾಗಿ ಈ ಪ್ರವಚನವು ಇರುವುದೆಂಬ ಆರೋಪವನ್ನು ಮಂತ್ರಿಮಂಡಳವು ಡಾ· ಸಚೆವ್ಹೆರಲನ ಮೇಲೆ ಹೊರಿಸಿ ಅವನನ್ನು ನ್ಯಾಯಾಸನದ ವಿಚಾರಣೆಗೆ ಗುರಿಮಾಡಿತು. ಈ ವಿಚಾರಣೆಯಲ್ಲಿ ಡಾ. ಸಚೆವ್ಹೆರಲನು ಅಪರಾಧಿಯೆಂದು ನಿರ್ಣಯವನ್ನು ನ್ಯಾಯಾಸನವು ಇತ್ತಿತು; ಆದರೆ ರಾಜದ್ರೋಹದಂತಹ ಘೋರವಾದ ಅಪರಾಧವಿದ್ದರೂ ಅವನಿಗೆ ಅತ್ಯಂತ ಅಲ್ಪ ಶಿಕ್ಷೆ ಕೊಡಲ್ಪಟ್ಟುದರಿಂದ ಡಾ. ಸಚೆವ್ಹೆರಲನ ನೈತಿಕ ವಿಜಯವಾಯಿತೆಂದು ಜನರ ಅಭಿಪ್ರಾಯವಾಯಿತು. ಆನ್ ರಾಣಿ ಎಪಿಸ್ಕೊಪೇಲಿಯನ್ ಪಂಥದವಳಾಗಿದ್ದಳು. ಅವಳು ಲೋಕಮತದ ಬಲವನ್ನು ಕಂಡು ಗೊಡೊಲ್ಫಿನನ ವ್ಹಿಗ್ ಮಂತ್ರಿಮಂಡಳವನ್ನು ಕೆಲಸದಿಂದ ದೂರಮಾಡಿ ಟೋರಿ ಪಕ್ಷದವರಾದ **ಹಾರ್ಲೆ** ಮತ್ತು **ಹೆನ್ರಿ ಸೇಂಟ ಜಾನ್** (ಬಾಲಿಂಗಬ್ರುಕ್) ಇವರನ್ನು ತನ್ನ ಮಂತ್ರಿಗಳಾಗಿ ನಿಯೋಜಿಸಿದಳು (೧೭೧೦). ಗೊಡೊಲ್ಫಿನ್, ಹಾರ್ಲೆ ಮತ್ತು ಹೆನ್ರಿ ಸೇಂಟ ಜಾನ್ ಈ ವ್ಹಿಗ್ ಮತ್ತು ಟೋರಿ ಪಕ್ಷಗಳ ಮುಂದಾಳುಗಳು ಮಂತ್ರಿಮಂಡಳದಲ್ಲಿರುವಾಗ ಅವರು ೧೭೦೭ರಲ್ಲಿ ಇಂಗ್ಲಿಶ್ ಮತ್ತು ಸ್ಕಾಟಿಶ್ ಪಾರ್ಲಿಮೆಂಟುಗಳ ಏಕೀಕರಣವನ್ನು ಮಾಡಿದ್ದರು.

**ಇಂಗ್ಲಿಶ್ ಮತ್ತು ಸ್ಕಾಟಿಶ್ ಪಾರ್ಲಿಮೆಂಟುಗಳ ಏಕೀಕರಣವು (೧೭೦೭)**–ಸ್ಕಾಟಲಂಡಿನ ರಾಜನಾದ ೬ನೆಯ ಜೇಮ್ಸನು ೧ನೆಯ ಜೇಮ್ಸನೆಂಬ ಅಭಿಧಾನದಿಂದ ಇಂಗ್ಲಂಡಿನ ಪಟ್ಟಕ್ಕೆ ಬಂದ ಸಮಯದಲ್ಲಿ ಇಂಗ್ಲಂಡ್ ಮತ್ತು ಸ್ಕಾಟಲಂಡ್ ಇವುಗಳಲ್ಲಿಯ ಪಾರ್ಲಿಮೆಂಟುಗಳ ಏಕೀಕರಣವು ಮಾಡಲ್ಪಟ್ಟಿರ

ಲಿಲ್ಲ. ಎರಡೂ ದೇಶಗಳಲ್ಲಿ ಬೇರೆ ಬೇರೆ ಪಾರ್ಲಿಮೆಂಟುಗಳಿದ್ದು ಅವು ತಮ್ಮ ತಮ್ಮಷ್ಟಕ್ಕೆ ಕಾಯ್ದೆಕಾನೂನುಗಳನ್ನು ಮಾಡಿಕೊಳ್ಳುತ್ತಿದ್ದುವು. ಸ್ಕಾಟಿಶ್ ವ್ಯಾಪಾರಸ್ಥರಿಗೆ ಇಂಗ್ಲಿಷ್ ವ್ಯಾಪಾರಸ್ಥರಂತೆ ಇಂಗ್ಲಂಡಿನಿಂದ ಅನುಕೂಲತೆಗಳು ದೊರೆಯುತ್ತಿರಲಿಲ್ಲವಾದುದರಿಂದ ಅವರ ವ್ಯಾಪಾರಕ್ಕೆ ಆತಂಕವಾಗುತ್ತಿತ್ತು. ಡರಾಯನ್ (ಪನಾಮಾ) ಎಂಬಲ್ಲಿ ಸ್ಕಾಟಿಶ್ ಜನರು ವಸಾಹತನ್ನು ಸ್ಥಾಪಿಸಬೇಕೆಂಬ ಯೋಜನೆಗೆ ಇಂಗ್ಲಿಶ ವ್ಯಾಪಾರಸ್ಥರ ಸ್ಪರ್ಧೆಯಿಂದ ಇಂಗ್ಲಂಡಿನ ರಾಜನ ಮತ್ತು ಪಾರ್ಲಿಮೆಂಟಿನ ಸಹಾನುಭೂತಿ ದೊರೆಯಲಿಲ್ಲವಾದುದರಿಂದಲೆ ಅಪಯಶವು ಬಂದಿತು (೧೬೯೯) ಎಂದು ಸ್ಕಾಟಿಶ್‌ಜನರ ಅಭಿಪ್ರಾಯವಾಗಿತ್ತು. ಆದುದರಿಂದ ಸ್ಕಾಟಲಂಡಿನ ವ್ಯಾಪಾರವನ್ನೂ ಹಿತಸಂಬಂಧಗಳನ್ನೂ ರಕ್ಷಿಸಿಕೊಳ್ಳಲು ಇಂಗ್ಲಂಡಿನಿಂದ ಬೇರೆಯಾಗಿರುವುದೆ ಅವಶ್ಯವೆಂದು ಸ್ಕಾಟಿಶ್ ಜನರಿಗೆ ಎನಿಸುತ್ತಿತ್ತು. ಈ ಉದ್ದೇಶವನ್ನು ಸಾಧಿಸಲು ಸ್ಕಾಟಿಶ್ ಪಾರ್ಲಿಮೆಂಟು ೧೭೦೪ರಲ್ಲಿ **ಅಕ್ಟ ಆಫ್ ಸೆಕ್ಯೂರಿಟಿ** ಎಂಬ ಕಾಯ್ದೆಯನ್ನು ಮಾಡಿತು. ಇಂಗ್ಲಿಶ್ ವ್ಯಾಪಾರಸ್ಥರಿಗೆ ದೊರೆಯುತ್ತಿದ್ದ ಎಲ್ಲ ಅನುಕೂಲತೆಗಳೂ ಸ್ಕಾಟಿಶ್ ವ್ಯಾಪಾರಸ್ಥರಿಗೆ ಕೊಡಲ್ಪಡದಿದ್ದರೆ ಅನ್ ರಾಣಿಯ ತರುವಾಯದಲ್ಲಿ ಯಾರನ್ನು ಸ್ಕಾಟಲಂಡಿನ ಅರಸನಾಗಿ ನಿಯೋಜಿಸಬೇಕು ಎಂಬುದನ್ನು ಸ್ಕಾಟಿಶ್ ಪಾರ್ಲಿಮೆಂಟು ನಿಶ್ಚಯಿಸಬಹುದೆಂದು ಈ ಕಾಯ್ದೆಯಿಂದ ಗೊತ್ತುಮಾಡಲ್ಪಟ್ಟಿತು. ಸ್ಕಾಟಲಂಡ್ ದೇಶವು ಇಂಗ್ಲಂಡಿನಿಂದ ಬೇರೆಯಾದರೆ ಇವೆರಡೂ ರಾಷ್ಟ್ರಗಳ ನಡುವೆ ವೈರಭಾವವು ಉಂಟಾಗಿ ಮೊದಲಿನಂತೆ ಫ್ರಾನ್ಸ್ ಮತ್ತು ಸ್ಕಾಟಲಂಡ್ ಇವುಗಳಿಗೆ ಪರಸ್ಪರದಿಂದ ಸಾಹಾಯ್ಯವು ದೊರೆತು ಇಂಗ್ಲಂಡಿಗೆ ಆಪತ್ತು ಒದಗಬಹುದೆಂದು ಇಂಗ್ಲಿಶ್ ಜನರಿಗೆ ಎನಿಸಲಾರಂಭಿಸಿತು. ಆದುದರಿಂದ ಇಂಗ್ಲಿಶ್ ಮತ್ತು ಸ್ಕಾಟಿಶ್ ಪಾರ್ಲಿಮೆಂಟುಗಳು ಈ ಪ್ರಶ್ನೆಯನ್ನು ಯೋಗ್ಯವಾಗಿ ವಿಚಾರಿಸಲು ಒಂದು ವಿಚಾರಣಾ ಮಂಡಳವನ್ನು ನಿಯೋಜಿಸಿ ತಮ್ಮ ತಮ್ಮ ಪ್ರತಿನಿಧಿಗಳನ್ನು ಅದಕ್ಕೆ ಕಳಿಸಿದುವು. ಈ ಮಂಡಳವು ಈ ಪ್ರಶ್ನೆಯನ್ನು ಕುರಿತು ಎಲ್ಲ ಬಗೆಯಿಂದಲೂ ಆಲೋಚಿಸಿ ಇಂಗ್ಲಿಶ್ ಮತ್ತು ಸ್ಕಾಟಿಶ್ ಪಾರ್ಲಿಮೆಂಟುಗಳ ಏಕೀಕರಣವನ್ನು ಮಾಡಬೇಕೆಂದು ಸೂಚಿಸಿತು. ಈ ವಿಷಯದಲ್ಲಿ ಎರಡೂ ಪಾರ್ಲಿಮೆಂಟುಗಳು ಈ ಮಂಡಳದ ಸೂಚನೆಯನ್ನನುಸರಿಸಿ ಒಂದು ಕಾಯ್ದೆಯನ್ನು (ಅಕ್ಟ್ ಆಫ್ ಯುನಿಯನ್) ಮಾಡಿದುವು (೧೭೦೭). ಈ ಕಾಯ್ದೆಯಿಂದ:—

(೧) ಇಂಗ್ಲಂಡ್ ಮತ್ತು ಸ್ಕಾಟಲಂಡ್ ಈ ಎರಡೂ ದೇಶಗಳಲ್ಲಿಯ ಪಾರ್ಲಿಮೆಂಟುಗಳ ಏಕೀಕರಣವು ಮಾಡಲ್ಪಟ್ಟಿತು, ಮತ್ತು ಸ್ಕಾಟಲಂಡಿನಿಂದ

ಕಾಮನ್ಸ್ ಸಭೆಗೆ ೪೫ ಸಭಾಸದರು ಮತ್ತು ಲಾರ್ಡ್ಸ ಸಭೆಗೆ ಸ್ಕಾಟಲಂಡಿನಲ್ಲಿಯ ಲಾರ್ಡರು ಆರಿಸಿದ ೧೬ ಲಾರ್ಡರು ಕಳಿಸಲ್ಪಡಬೇಕೆಂದು ನಿಶ್ಚಿಸಲ್ಪಟ್ಟಿತು. (ಸ್ಕಾಟಲಂಡಿನಿಂದ ಕಾಮನ್ಸ ಸಭೆಗೆ ಬರುವ ಸದಸ್ಯರ ಸಂಖ್ಯೆ ಮುಂದೆ ಬೆಳೆದು ಈಗ ಅದು ೭೪ ಆಗಿರುವುದು.)

(೨) ಕಾಯ್ದೆಕಾನೂನುಗಳ ಮತ್ತು ಧಾರ್ಮಿಕ ಪ್ರಶ್ನೆಗಳ ವಿಷಯದಲ್ಲಿ ಸ್ಕಾಟಲಂಡಿನಲ್ಲಿ ಮೊದಲಿದ್ದ ವ್ಯವಸ್ಥೆಯೆ ಉಳಿಯಿತು.

(೩) ಸ್ಕಾಟಲಂಡ್ ಮತ್ತು ಇಂಗ್ಲಂಡ್ ಇವುಗಳ ನಡುವೆ ವ್ಯಾಪಾರವು ನಿರಾತಂಕವಾಗಿ ಸಾಗಬೇಕು ಮತ್ತು ಇಂಗ್ಲಿಶ್ ವಸಾಹತುಗಳಲ್ಲಿ ವ್ಯಾಪಾರಮಾಡಲು ಸ್ಕಾಟಿಶ್ ಜನರಿಗೆ ಸ್ವಾತಂತ್ರ್ಯವಿರಬೇಕು ಎಂದು ನಿಶ್ಚಯವಾಯಿತು.

**ಅನ್ ರಾಣಿಯ ಕೊನೆಯ ದಿನಗಳು**—ಅನ್ ರಾಣಿ ೧೭೧೦ರಲ್ಲಿ ಟೋರಿ ಪಕ್ಷದ ಬಾಲಿಂಗಬ್ರುಕ್ (ಹೆನ್ರಿ ಸೇಂಟ ಜಾನ್) ಮತ್ತು ಹಾರ್ಲೆ ಇವರನ್ನು ತನ್ನ ಮಂತ್ರಿಗಳಾಗಿ ನಿಯೋಜಿಸಿದಳು. ಈ ಮಂತ್ರಿಗಳು ತಮ್ಮ ಕೈಯಲ್ಲಿ ಅಧಿಕಾರವು ಬಂದಬಳಿಕ ಮಾರ್ಲಬರೊ ಇವನ ಮೇಲೆ ಲಂಚವನ್ನು ತಿಂದ ಆರೋಪವನ್ನು ಹೊರಿಸಿ ಅವನನ್ನು ಸೇನಾಪತಿಪದದಿಂದ ದೂರ ಮಾಡಿದರು ಮತ್ತು ಮಂತ್ರಿಯಾದ ವಾಲಪೋಲನನ್ನೂ ಕೆಲಸದಿಂದ ತೆಗೆದರು. ಆ ಬಳಿಕ ಅವರು ಯುಟ್ರೆಕ್ಟ ಎಂಬಲ್ಲಿ ಒಪ್ಪಂದವನ್ನು ಮಾಡಿ ಫ್ರಾನ್ಸಿನೊಡನೆ ನಡೆದ ಯುದ್ಧವನ್ನು ನಿಲ್ಲಿಸಿದರು. ಇಷ್ಟರಲ್ಲಿ ಅನ್ ರಾಣಿಯ ಪ್ರಕೃತಿ ಅಸ್ವಸ್ಥವಾಗಿ ಅವಳು ಬದುಕಬಹುದೊ ಇಲ್ಲವೊ ಎಂಬುದರ ವಿಷಯದಲ್ಲಿ ಸಂಶಯವುಂಟಾಯಿತು. ಅವಳ ತರುವಾಯದಲ್ಲಿ ಪಟ್ಟಕ್ಕೆ ಯಾರು ಬರಬೇಕೆಂಬ ಪ್ರಶ್ನೆ ಹುಟ್ಟಿತು. ಅಕ್ಟ ಆಫ್ ಸೆಟ್ಲಮೆಂಟ ಕಾಯ್ದೆಯಂತೆ (೧೭೦೧) ಅನ್ ರಾಣಿಯ ತರುವಾಯದಲ್ಲಿ ೧ನೆಯ ಜೇಮ್ಸನ ಮೊಮ್ಮಗಳಾದ **ಸೋಫಿಯಾ** ಇವಳ ಮಗನಾದ ಹನೊವರದ **ಜಾರ್ಜ**ನೆ ಇಂಗ್ಲಂಡಿನ ಪಟ್ಟಕ್ಕೆ ಬರುವವನಿದ್ದನು. ಆದರೆ ಅವನು ಸಂಪೂರ್ಣವಾಗಿ ಪರಕೀಯನಾದುದರಿಂದ ಅವನಿಗೆ ಇಂಗ್ಲಂಡಿನ ರಾಜಪದವು ದೊರೆಯಬಾರದೆಂದು ಟೋರಿಪಕ್ಷದ ಅನೇಕ ಜನರ ಅಭಿಪ್ರಾಯವಿದ್ದಿತು. ೨ನೆಯ ಜೇಮ್ಸನ ಮಗನಾದ **ಜೇಮ್ಸ ಎಡ್ವರ್ಡ**ನು ರೋಮನ್ ಕಥಲಿಕ್ ಪಂಥವನ್ನು ಬಿಡಲು ಸಿದ್ಧನಾದರೆ ಅವನಿಗೆ ಇಂಗ್ಲಂಡಿನ ರಾಜಪದವನ್ನು ಕೊಡಬೇಕೆಂದು **ಬಾಲಿಂಗಬ್ರುಕ**ನ ಅಭಿಪ್ರಾಯವಿದ್ದಿತು. ಆದುದರಿಂದ ರೋಮನ್ ಕಥಲಿಕ್ ಪಂಥವನ್ನು ಬಿಡಲು ಜೇಮ್ಸ ಎಡ್ವರ್ಡನ ಮನಸ್ಸನ್ನು ಒಲಿ

ಸಲು ಮತ್ತು ಅಕ್ಟ ಆಫ್ ಸೆಟ್ಲಮೆಂಟ ಕಾಯ್ದೆಯನ್ನು ರದ್ದುಗೊಳಿಸಲು ಬಾಲಿಂಗಬ್ರುಕನು ಪ್ರಯತ್ನಿಸತೊಡಗಿದನು. ಆದರೆ ಈ ವಿಷಯದಲ್ಲಿ ಎಲ್ಲ ವ್ಯವಸ್ಥೆ ಮುಗಿವುದರೊಳಗಾಗಿಯೆ ಅನ್ ರಾಣಿ ಮರಣಹೊಂದಿದಳು (೧೭೧೪). ಆ ಬಳಿಕ ಅಕ್ಟ ಆಫ್ ಸೆಟ್ಲಮೆಂಟ ಕಾಯ್ದೆಯಂತೆ ಜಾರ್ಜನು ಇಂಗ್ಲಂಡಿನ ರಾಜನಾಗಿರುವನೆಂದು ವ್ಹಿಗ್ ಪಕ್ಷದ ಮುಂದಾಳುಗಳು ಪ್ರಕಟಗೊಳಿಸಿದರು. ತಾನು ಯೋಚಿಸಿದ ಯೋಚನೆ ವಿಫಲವಾದುದನ್ನು ಕಂಡು ಬಾಲಿಂಗಬ್ರುಕನು ಇಂಗ್ಲಂಡಿನಿಂದ ಓಡಿಹೋದನು,

---

## ಸಾರಾಂಶವು

### ಅನ್ ರಾಣಿ (೧೭೦೨—೧೭೧೪).

ಅನ್ ರಾಣಿ—

ಮಮತೆಯುಳ್ಳವಳು, ಸುಸ್ವಭಾವದವಳು, ಎಪಿಸ್ಕೊಪೇಲಿಯನ್ ಪಂಥದ ವಿಷಯದಲ್ಲಿ ಅಭಿಮಾನವುಳ್ಳವಳು. ಮಂತ್ರಿಗಳ ಆಲೋಚನೆಯಂತೆ ರಾಜ್ಯಕಾರಭಾರವನ್ನು ಸಾಗಿಸುವುದು ಅವಳ ನೀತಿ. ಸಾರಾ ಜೆನಿಂಗ್ಸ (ಮಾರ್ಲಬರೊ ಇವನ ಹೆಂಡತಿ) ಇವಳ ವರ್ಚಸ್ಸು ೧೭೧೧ರ ವರೆಗೆ ಇದ್ದಿತಾದುದರಿಂದ ರಾಜ್ಯಕಾರಭಾರದಲ್ಲಿ ಅವಳ ಆಲೋಚನೆಯಂತೆ ನಡೆಯುತ್ತಿದ್ದಳು.

ಅನ್ ರಾಣಿಯೂ ಅವಳ ಮಂತ್ರಿಗಳೂ—

ಗೊಡೊಲ್ಫಿನ ಮತ್ತು ಮಾರ್ಲಬರೊ ಇವರ ವ್ಹಿಗ್ ಮಂತ್ರಿಮಂಡಳವು. ಈ ಮಂಡಳದಲ್ಲಿ ಕೆಲವು ಟೋರಿ ಮಂತ್ರಿಗಳು ಇದ್ದರು (೧೭೦೨-೧೭೧೦).

(೧) ಸ್ಪೇನದ ಪಟ್ಟದ ಉತ್ತರಾಧಿಕಾರಿತ್ವದ ವಿಷಯದಲ್ಲಿ ಫ್ರಾನ್ಸಿನ ವಿರುದ್ಧವಾಗಿ ಯುದ್ಧದಲ್ಲಿ ಭಾಗವು ವಹಿಸಲ್ಪಟ್ಟಿತು.

(೨) ಇಂಗ್ಲಿಶ್ ಮತ್ತು ಸ್ಕಾಟಿಶ್ ಪಾರ್ಲಿಮೆಂಟುಗಳ ಏಕೀಕರಣವು (೧೭೦೭); ಲಾರ್ಡ್ಸ ಸಭೆಯಲ್ಲಿ ೧೬ ಮತ್ತು ಕಾಮನ್ಸ ಸಭೆಯಲ್ಲಿ ೪೫ ಸ್ಕಾಟಲಂಡಿನ ಪ್ರತಿನಿಧಿಗಳು. ಸ್ಕಾಟಿಶ್ ವ್ಯಾಪಾರಸ್ಥರಿಗೆ ಇಂಗ್ಲಿಶ್ ವ್ಯಾಪಾರಸ್ಥರಂತೆ ಅನುಕೂಲತೆಗಳು. ಧರ್ಮದ ಮತ್ತು ಕಾಯ್ದೆಕಾನೂನುಗಳ ವಿಷಯದಲ್ಲಿ ಸ್ಕಾಟಲಂಡಿನಲ್ಲಿ ಮೊದಲಿನ ವ್ಯವಸ್ಥೆಯೆ ಮುಂದೆ ಸಾಗಿತು.

(೩) ಜನರಿಗೆ ಧಾರ್ಮಿಕ ಅನುಕೂಲತೆಗಳನ್ನು ಕೊಡಬೇಕೆಂದು ಮಂತ್ರಿಮಂಡಳದ ನೀತಿ. ಇದರ ವಿರುದ್ಧವಾಗಿ ರಾಜನ ಸತ್ತೆ ಈಶ್ವರದತ್ತವಾದುದು ಎಂಬ ತತ್ವದ ಸಮರ್ಥನಕ್ಕೋಸುಗ ಡಾ. ಸಚೆವ್ಹೆರಲ್

ಎಂಬ ಟೋರಿ ಮತದ ಧರ್ಮಾಧಿಕಾರಿಯ ಪ್ರವಚನಗಳು. ಅವನ ವಿಚಾರಣೆ. ಆದರೆ ಲೋಕಮತದ ಒಲವು ಅವನ ಕಡೆಗೆ.

ಬಾಲಿಂಗಬ್ರುಕ್‌ನ ಮಂತ್ರಿಮಂಡಳವು (೧೭೧೦–೧೪).

(೧) ಮಾರ್ಲಬರೊ ಇವನು ಸೇನಾಪತಿ ಪದದಿಂದ ದೂರಮಾಡಲ್ಪಟ್ಟನು.

(೨) ಯುಟ್ರೆಕ್ಟದ ಒಪ್ಪಂದದಿಂದ (೧೭೧೩) ಯುದ್ಧ ಸಮಾಪ್ತಿ.

(೩) ಆನ್ ರಾಣಿಯು ತರುವಾಯದಲ್ಲಿ ೨ನೆಯ ಜೇಮ್ಸ್‌ನ ಮಗನಾದ ಜೇಮ್ಸ್ ಎಡ್ವರ್ಡನಿಗೆ ಪಟ್ಟವು ದೊರೆಯಬೇಕೆಂದು ಬಾಲಿಂಗಬ್ರುಕನ ಕಾರಸ್ಥಾನವು. ಆದರೆ ಯಶಸ್ಸು ದೊರೆಯಲಿಲ್ಲ.

ಪರರಾಷ್ಟ್ರೀಯ ರಾಜಕರಣವು—

ಫ್ರಾನ್ಸಿನ ಸತ್ತೆ ಬೆಳೆಯಬಾರದೆಂದು ಫ್ರಾನ್ಸಿನ ವಿರುದ್ಧವಾಗಿ ಸ್ಪೇನದ ಪಟ್ಟಕ್ಕೆ ಉತ್ತರಾಧಿಕಾರಿತ್ವದ ಸಂಬಂಧದ ಯುದ್ಧದಲ್ಲಿ (೧೭೦೨–೧೭೧೩) ಇಂಗ್ಲಂಡು ಭಾಗವನ್ನು ವಹಿಸಿತು. ಆಸ್ಟ್ರಿಯದ ರಾಜಪುತ್ರನಾದ ಚಾರ್ಲಸನಿಗೆ ಸ್ಪೇನದ ಪಟ್ಟವು ದೊರೆಯಬೇಕೆಂದು ಮಿತ್ರ ರಾಷ್ಟ್ರಗಳ ಮನೀಷೆ.

ಮಿತ್ರ ರಾಷ್ಟ್ರಗಳು—ಇಂಗ್ಲಂಡ್, ಆಸ್ಟ್ರಿಯಾ, ಹಾಲಂಡ್, ಸೆವ್ಹಾಯ್, ಜರ್ಮನಿಯಲ್ಲಿಯ ಕೆಲವು ಸಂಸ್ಥಾನಗಳು ಮತ್ತು ಪೋರ್ತುಗಾಲ. ಇಂಗ್ಲಂಡಿನ ಮಾರ್ಲಬರೊ ಮತ್ತು ಸೆವ್ಹಾಯದ ರಾಜಪುತ್ರ ಯೂಜಿನ್ ಇವರು ಮಿತ್ರ ರಾಷ್ಟ್ರಗಳ ಸೇನಾಪತಿಗಳು.

ಶತ್ರು ರಾಷ್ಟ್ರಗಳು—ಫ್ರಾನ್ಸ್, ಸ್ಪೇನ ಮತ್ತು ಬವೇರಿಯಾ.

ಯುದ್ಧವು—ಮಾರ್ಲಬರೊ ಇವನು ಬವೇರಿಯದಲ್ಲಿಯ ಬ್ಲೆನ್ಹಿಮ್ (೧೭೦೪), ನೆದರ್ಲಂಡಿನಲ್ಲಿಯ ರೆಮಿಲಿಜ್(೧೭೦೬), ಔಡೇನಾರ್ಡ (೧೭೦೮), ಮತ್ತು ಮಾಲ್‌ಪ್ಲಾಕೆ (೧೭೦೯) ಈ ಸ್ಥಳಗಳಲ್ಲಿ ಮತ್ತು ಸೆವ್ಹಾಯದ ರಾಜಪುತ್ರ ಯೂಜಿನನು ಇಟಲಿಯ ಸೀಮೆಯ ಮೇಲಿನ ಟ್ಯೂರಿನ್ ಎಂಬಲ್ಲಿ ಫ್ರೆಂಚ ಸೈನ್ಯವನ್ನು ಸೋಲಿಸಿದರು. ಮಿತ್ರ ರಾಷ್ಟ್ರಗಳು ಸ್ಪೇನದಲ್ಲಿ ಬಾರ್ಸಿಲೋನಾ ಎಂಬಲ್ಲಿ ಜಯವನ್ನು ಸಂಪಾದಿಸಿದರು (೧೭೦೫). ಮತ್ತು ಮಾಡ್ರಿಡ್ ಪಟ್ಟಣವನ್ನು ತೆಗೆದುಕೊಂಡರು, ಆದರೆ ಅಲ್‌ಮಾಂಝಾ ಎಂಬಲ್ಲಿ (೧೭೦೭) ಸೋತುದರಿಂದ ಸ್ಪೇನದಿಂದ ಹಿಂದೆಗೆಯಬೇಕಾಯಿತು.

ಹಡಗುಪಡೆಯ ಅಧಿಪತಿಯಾದ ರುಕ್ ಇವನು ೧೭೦೨ರಲ್ಲಿ ವ್ಹಿಗೋ ಎಂಬಲ್ಲಿ ಸ್ಪೆನಿಶ್ ಮತ್ತು ಫ್ರೆಂಚ ಹಡಗುಗಳನ್ನು ನಾಶಗೊಳಿಸಿದನು ಮತ್ತು ಜಿಬ್ರಾಲ್ಟರ ಕೋಟೆಯನ್ನು ವಶಪಡಿಸಿಕೊಂಡನು (೧೭೦೪). ೧೭೦೮ರಲ್ಲಿ ಇಂಗ್ಲಿಶ ಹಡಗುಪಡೆ ಮಿನೋರ್ಕಾ ನಡುಗಡ್ಡೆಯನ್ನು ವಶಮಾಡಿಕೊಂಡಿತು.

ಒಪ್ಪಂದಕ್ಕೆ ಅನುಕೂಲ ಪರಿಸ್ಥಿತಿ—

ಇಂಗ್ಲಂಡಿನಲ್ಲಿ ೧೭೧೦ರಲ್ಲಿ ಒಪ್ಪಂದಕ್ಕೆ ಅನುಕೂಲವಾದ ಬೊಲಿಂಗಬ್ರುಕನ ಟೋರಿ ಮಂತ್ರಿಮಂಡಳವು. ಲಿಯೊಪೋಲ್ಡನು ಮರಣಹೊಂದಿದುದರಿಂದ ರಾಜಪುತ್ರ ಚಾರ್ಲಸನು ಆಸ್ಟ್ರಿಯದ ರಾಜನಾದನು. ಅವನಿಗೆ ಮತ್ತೆ ಸ್ಪೇನದ ಪಟ್ಟವನ್ನು ದೊರಕಿಸಿ ಕೊಡುವುದರಲ್ಲಿ ಮಿತ್ರರಾಷ್ಟ್ರಗಳ ಹಿತವಿರಲಿಲ್ಲ.

ಯುಟ್ರೆಕ್ಟದ ಒಪ್ಪಂದವು, ೧೭೧೩— ಸ್ಪೇನ ಸಾಮ್ರಾಜ್ಯವು ವಿಭಾಗಿಸಲ್ಪಟ್ಟಿತು. ಸ್ಪೇನದ ರಾಜ್ಯವೂ ವಸಾಹತುಗಳೂ ಫಿಲಿಪನಿಗೆ. ಸ್ಪೇನದ ನೆದರ್ಲಂಡ್ ಮತ್ತು ಇಟಲಿಯ ಪ್ರದೇಶವು ಆಸ್ಟ್ರಿಯದ ರಾಜನಾದ ಚಾರ್ಲಸನಿಗೆ. ಇಂಗ್ಲಂಡಿಗೆ ನ್ಯೂಫೌಂಡಲಂಡ್, ನೋವಾಸ್ಕೋಶಿಯಾ, ಜಿಬ್ರಾಲ್ಟರ ಮತ್ತು ಮಿನೋರ್ಕಾ ಇವುಗಳು ಮತ್ತು ಸ್ಪೇನದ ವಸಾಹತುಗಳೊಡನೆ ವ್ಯಾಪಾರ ಮಾಡಲು ಸ್ವಾತಂತ್ರ್ಯವು.

---

## ೧೫ನೆಯ ಪ್ರಕರಣವು

### ಟ್ಯೂಡರ ಮತ್ತು ಸ್ಟುವರ್ಟ ಕಾಲದಲ್ಲಿಯ ಐರ್ಲಂಡ್

**ಮಧ್ಯಯುಗದಲ್ಲಿಯ ಐರ್ಲಂಡ್** – ಪ್ರಾಚೀನ ಕಾಲದಲ್ಲಿ ಐರ್ಲಂಡಿನಲ್ಲಿ ಕೆಲ್ಟ ಜನರು ವಾಸಿಸುತ್ತಿದ್ದರು. ಇವರು ಕಾಡುಜನರಾಗಿದ್ದು ಅಜ್ಞಾನದೆಸೆಯಲ್ಲಿದ್ದರು. ೫ನೆಯ ಶತಕದಲ್ಲಿ **ಸೇಂಟ ಪೆಟ್ರಿಕ್** ಎಂಬ ಸಾಧು ಐರ್ಲಂಡಿಗೆ ಬಂದು ಅಲ್ಲಿಯ ಜನರಿಗೆ ಕ್ರೈಸ್ತಧರ್ಮದ ದೀಕ್ಷೆಯನ್ನು ಕೊಟ್ಟನು. ಐರ್ಲಂಡಿನ ಜನರು ಧರ್ಮದಿಂದ ಒಂದಾದರೂ ರಾಜಕೀಯ ದೃಷ್ಟಿಯಿಂದ ಅವರಲ್ಲಿ ಏಕೀಕರಣವಾಗಲಿಲ್ಲ. ಐರ್ಲಂಡು ಅನೇಕ ರಾಜ್ಯಗಳಲ್ಲಿ ವಿಭಾಗಿಸಲ್ಪಟ್ಟಿತ್ತು, ಮತ್ತು ಪರಸ್ಪರರಲ್ಲಿ ಯುದ್ಧಗಳಾಗುತ್ತಿದ್ದುವು. ಒಂದು ಯುದ್ಧದಲ್ಲಿ ಅಲ್ಲಿಯ **ಲೀಸ್ಟರ** ಪ್ರಾಂತದ ರಾಜನಾದ **ಡೆರಮಾಂಟ** ಎಂಬವನು ಇಂಗ್ಲಂಡಿನ ರಾಜನಾದ ೨ನೆಯ **ಹೆನ್ರಿಯ** ಸಾಹಾಯ್ಯವನ್ನು ಬೇಡಿದನು. ಹೆನ್ರಿ ತನ್ನ ಸರದಾರನಾದ **ಸ್ಟ್ರಾಂಗಬೊ** ಎಂಬವನನ್ನು ಐರ್ಲಂಡಿಗೆ ಕಳುಹಿದನು. ಅವನು ಅಲ್ಲಿ ಶಾಂತತೆಯನ್ನು ಸ್ಥಾಪಿಸಿದನು. ಆ ಬಳಿಕ ಅಲ್ಲಿಯ ರಾಜರು ಹೆನ್ರಿಯ ಮಾಂಡಲಿಕತ್ವವನ್ನು ಸ್ವೀಕರಿಸಿ (೧೧೭೧) ಅವನನ್ನು **ಐರ್ಲಂಡಿನ ಅಧಿಪತಿ** (Lord of Ireland) ಎಂದು ಸಂಬೋಧಿಸಲಾರಂಭಿಸಿದರು. ಆ ಸಮಯದಲ್ಲಿ **ಪೂರ್ವತೀರದಲ್ಲಿಯ ಡಬ್ಲಿನ್, ಡ್ರಾಘೆಡಾ** ಮತ್ತು ಅವುಗಳ ಸುತ್ತಲಿನ ಕೆಲವು ಪ್ರದೇಶವು ಇಂಗ್ಲಂಡಿನ ವರ್ಚಸ್ಸಿನ ಕೆಳಗೆ ಇದ್ದುವು, ಮತ್ತು ಆ ಭಾಗಕ್ಕೆ **ಪೇಲ್** (Pale ಎಂದರೆ ಅಂಗಳ) ಎಂದರೆ 'ಇಂಗ್ಲಂಡಿನ ಅಂಗಳ' ಎಂದು ಹೆಸರಿದ್ದಿತು.

೨ನೆಯ ಹೆನ್ರಿಯ ಆಳ್ಕೆಯಲ್ಲಿ ಮತ್ತು ಅದರ ತರುವಾಯದಲ್ಲಿ ಎಷ್ಟೋ ಸಾಹಸಿಗರಾದ ಇಂಗ್ಲಿಶ್ ಸರದಾರರು ಐರ್ಲಂಡಿನಲ್ಲಿ ವಸಾಹತುಗಳನ್ನು ಮಾಡಲು ಹೋದರು. ಅವರಲ್ಲಿ ಕೆಲವರು ಪೇಲ್ ಎಂಬ ಭಾಗದಲ್ಲಿಯೂ ಮತ್ತೆ ಕೆಲವರು ಉಳಿದೆಡೆಗಳಲ್ಲಿಯೂ ವಸಾಹತನ್ನು ಮಾಡಿಕೊಂಡರು. ಅಲ್ಲಿ ಹೋದ ಇಂಗ್ಲಿಶ್ ಸರದಾರರ ಮತ್ತು ಸಾಮಾನ್ಯ ಜನರ ಸಂಖ್ಯೆ ಅಲ್ಲಿಯ ಐರಿಶ್ ಜನರ ಸಂಖ್ಯೆಗಿಂತ ಬಹು ಅಲ್ಪವಾಗಿದ್ದಿತು. ಅವರು ಅಲ್ಲಿಯ ಸರದಾರ ಮನೆತನಗಳೊಡನೆ ಲಗ್ನ ಸಂಬಂಧವನ್ನು ಮಾಡಿದರು ಮತ್ತು ಐರಿಶ್ ಭಾಷೆ ನಡತೆ ಸಡಾವಳಿ ಮತ್ತು ಉಡುಪು ಮೊದಲಾದುವನ್ನು ಸ್ವೀಕರಿಸಿದರು. ಆದುದರಿಂದ ಕಾಲಾಂತರದಿಂದ ಅವರೂ ಐರಿಶರಾದರು. ಈ ಐರಿಶ್ ಸರದಾರರು ಇಂಗ್ಲಂಡಿನ ರಾಜನ ವಿರುದ್ಧ

ವಾಗಿಯೂ ಆಗಾಗ ಬಂಡನ್ನು ಹೂಡುತ್ತಿದ್ದರು. ೧೪೬೦ರಲ್ಲಿ **ಐರಿಶ್ ಪಾರ್ಲಿಮೆಂಟ್** ಎಂಬ ಸಂಸ್ಥೆ ಸ್ಥಾಪಿಸಲ್ಪಟ್ಟಿತು.

**ಟ್ಯೂಡರ ಕಾಲದಲ್ಲಿಯ ಐರ್ಲಂಡ್**—೭ನೆಯ ಹೆನ್ರಿ ಐರ್ಲಂಡಿನಲ್ಲಿ ಆಗಾಗ ಆಗುತ್ತಿರುವ ಬಂಡುಗಳನ್ನು ಮುರಿದು ಅಲ್ಲಿ ತನ್ನ ವರ್ಚಸ್ಸನ್ನು ಸಂಪೂರ್ಣವಾಗಿ ನೆಲೆಗೊಳಿಸಲು ಸರ ಎಡ್ವರ್ಡ **ಪಾಯನಿಂಗ್ಸ** ಎಂಬ ಸರದಾರನನ್ನು ಅಲ್ಲಿಯ ಲಾರ್ಡ ಡೆಪ್ಯುಟಿ (ಗವ್ಹರ್ನರ) ಯಾಗಿ ಮಾಡಿ ಕಳುಹಿದನು. ಪಾಯನಿಂಗ್ಸನು ಅಲ್ಲಿ ಬಂಡುಮಾಡುತ್ತಿದ್ದ **ಕಿಲ್ಡೇರದ** ಸರದಾರನನ್ನು ಸೆರೆಹಿಡಿದು ಅವನನ್ನು ಇಂಗ್ಲಂಡಿಗೆ ಕಳುಹಿದನು. ಆ ಬಳಿಕ ಅವನು, "ಐರಿಶ್ ಪಾರ್ಲಿಮೆಂಟು ಇಂಗ್ಲಂಡಿನ ಆರಸನ ಸಮ್ಮತಿ ಇಲ್ಲದೆ ಯಾವ ಕಾಯದೆಯನ್ನೂ ಮಾಡಬಾರದು" ಎಂದು ಒಂದು ಕಾಯದೆಯನ್ನು ಅಲ್ಲಿಯ ಪಾರ್ಲಿಮೆಂಟಿನಿಂದ ಮಾಡಿಸಿಕೊಂಡನು (೧೪೯೪). ಈ ಕಾಯದೆಗೆ **ಪಾಯನಿಂಗ್ಸನ ಕಾಯದೆ** ಎಂದು ಹೆಸರು.

೮ನೆಯ ಹೆನ್ರಿ ಐರ್ಲಂಡಿನ ಕಾರಭಾರದಲ್ಲಿ ಬಹಳವಾಗಿ ಕೈಯಿಕ್ಕಿದನು. ಕಿಲ್ಡೇರದ ಸರದಾರನ ಮಗನು ಬಂಡು ಮಾಡಿದ್ದನು, ಆದರೆ ಅದು ಅಲ್ಪಾವಧಿಯಲ್ಲಿಯೆ ಮುರಿಯಲ್ಪಟ್ಟಿತು. ಬಂಡಿನಲ್ಲಿ ಸೇರಿದ ಜನರ ಭೂಮಿಗಳನ್ನು ಹೆನ್ರಿ ಜಪ್ತಮಾಡಿ ಅವನ್ನು ತನಗೆ ಅನುಕೂಲರಾಗಿದ್ದ ಸರದಾರರಿಗೆ ಕೊಟ್ಟನು. ತರುವಾಯದಲ್ಲಿ ಅವನು **ಐರ್ಲಂಡಿನ** ರಾಜನೆಂದು ಪದವಿಯನ್ನು ತಳೆದನು.

೬ನೆಯ ಎಡ್ವರ್ಡನು ಐರ್ಲಂಡಿನಲ್ಲಿ ಧರ್ಮಸಂಧಾರಣೆಯನ್ನು ಮಾಡಲು ಪ್ರಯತ್ನಿಸಿದನು, ಆದರೆ ಈ ಕೆಲಸದಲ್ಲಿ ಅವನಿಗೆ ಯಶಸ್ಸು ದೊರೆಯಲಿಲ್ಲ. ಮೇರಿ ಮತ್ತು ಎಲಿಝಬೆಥ್ ಇವರ ಆಳ್ಕೆಯಲ್ಲಿ ಇಂಗ್ಲಿಶ ಜನರು ಮನ್‌ಸ್ಟರ ಪ್ರಾಂತದಲ್ಲಿ ವಸಾಹತುಗಳನ್ನು ಸ್ಥಾಪಿಸಿದರು. ಎಲಿಝಬೆಥ್ ಇವಳು ಅಲ್ಲಿ ಪ್ರಾಟೆಸ್ಟಂಟ ಪಂಥವನ್ನು ಸ್ಥಾಪಿಸಲು ಪ್ರಯತ್ನಿಸಿದಳು, ಆದರೆ ಆ ಪ್ರಯತ್ನವು ಯಶಸ್ವಿಯಾಗಲಿಲ್ಲ; ಅಲ್ಲಿಯ ಬಹುಜನಸಮಾಜವು ಕೆಥಲಿಕ್ ಪಂಥವನ್ನೆ ಅಂಟಿಕೊಂಡುಳಿಯಿತು. ೧೫೭೦ರಲ್ಲಿ ಪೋಪನು ಎಲ್ಲಿಝಬೆಥ್ ರಾಣಿಯನ್ನು ಧರ್ಮಬಹಿಷ್ಕೃತೆಯಾಗಿ ಮಾಡಿದ ಬಳಿಕ ಐರಿಶ್ ಜನರು ಮತ್ತೆ ಬಂಡುಗಳನ್ನು ಹೂಡಿದರು (೧೫೭೯). ಆ ಬಳಿಕ ಟಾಯರೋನದ ಸರದಾರನು ಬಂಡುಮಾಡಿದನು (೧೫೯೫—೧೬೦೩). ಎಲಿಝಬೆಥ್ ರಾಣಿ ಎರಡೂ ಬಂಡುಗಳನ್ನು ಮುರಿದಳು ಮತ್ತು ಬಂಡಿನಲ್ಲಿ ಸೇರಿದ ಜನರ ಭೂಮಿಗಳನ್ನು ಜಪ್ತಮಾಡಿ ಅವನ್ನು ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಜನರಿಗೆ ಕೊಟ್ಟಳು.

**ಸ್ಟುವರ್ಟ ಕಾಲದಲ್ಲಿಯ ಐರ್ಲಂಡ್**—ಜೇಮ್ಸನ ಆಳ್ಕೆಯಲ್ಲಿ ಅಲ್ಸ್ಟರ

ಪ್ರಾಂತದ ಕೆಲವು ಸರದಾರರು ಬಂಡನ್ನು ಹೂಡಿದರು. ಆದರೆ ಆ ಬಂಡು ಅತ್ಯಂತ ಉಗ್ರವಾದ ಉಪಾಯದಿಂದ ಮುರಿಯಲ್ಪಟ್ಟಿತು, ಮತ್ತು ಬಂಡಿನಲ್ಲಿ ಸೇರಿದ ಜನರ ಭೂಮಿಗಳು ಜಪ್ತಮಾಡಲ್ಪಟ್ಟು ಅವು ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಮತ್ತು ಸ್ಕಾಟಿಶ್ ಜನರಿಗೆ ಕೊಡಲ್ಪಟ್ಟವು. ಈ ಕಾರಣದಿಂದ ಅಲ್‌ಸ್ಟರ ಪ್ರಾಂತದಲ್ಲಿ ಪ್ರಾಟೆಸ್ಟಂಟ ಪಂಥದವರ ದೊಡ್ಡ ವಸಾಹತು ನಿರ್ಮಿಸಲ್ಪಟ್ಟಿತು.

ಐರಿಶ್ ಕಾಯದೆಯಂತೆ ಅಲ್ಲಿಯ ಭೂಮಿಗಳು ಸರದಾರರ ಅಥವಾ ಜನರ ವ್ಯಕ್ತಿಶಃ ಒಡೆತನಕ್ಕೆ ಒಳಪಟ್ಟಿರದೆ ಅವು ಗುಂಪಿನ ಅಥವಾ ಕುಟುಂಬದಲ್ಲಿಯ ಜನರ ಸಾಮುದಾಯಿಕ ಒಡೆತನಕ್ಕೆ ಅಧೀನವಾಗಿರುತ್ತಿದ್ದುವು. ಆದರೆ ಆ ಭೂಮಿಗಳು ಬಂಡಿನಲ್ಲಿ ಸೇರಿದ ಜನರ ವ್ಯಕ್ತಿಶಃ ಒಡೆತನಕ್ಕೆ ಒಳಪಟ್ಟಿರುವುವೆಂದು ಜಪ್ತಮಾಡಲ್ಪಟ್ಟುದರಿಂದ ಎಷ್ಟೋ ನಿರಪರಾಧಿಗಳಾದ ಜನರು ತಮ್ಮ ಭೂಮಿಗಳಿಗೆ ಎರವಾಗಬೇಕಾಯಿತು. ಇದರಿಂದ ಮತ್ತೆ ಅಲ್ಲಿ ಬಂಡುಗಳು ಪ್ರಾರಂಭವಾದುವು.

೧ನೆಯ ಚಾರ್ಲಸನು ಈ ಬಂಡುಗಳನ್ನು ಮುರಿಯಲು ಸ್ಟ್ರಾಫರ್ಡ ಎಂಬವನನ್ನು ಐರ್ಲಂಡಿಗೆ ಕಳುಹಿದನು (೧೬೩೩–೧೬೪೦). ಸ್ಟ್ರಾಫರ್ಡನು ನಿಷ್ಠುರನಾಗಿದ್ದನು. ಅವನ ನೀತಿ ಬಹು ಉಗ್ರವಾಗಿದ್ದಿತು. ಐರ್ಲಂಡಿನಲ್ಲಿಯ ಬಂಡುಗಳನ್ನು ಮುರಿದು ಅವನು ಮತ್ತೆ ಬಂಡುಗಳು ಉದ್ಭವಿಸಬಾರದೆಂದು ಶಾಶ್ವತ ಸೈನ್ಯವನ್ನು ಸಿದ್ಧಗೊಳಿಸಿದನು. ಬಂಡಿಗೆ ಪ್ರವೃತ್ತರಾದವರ ಭೂಮಿಗಳನ್ನು ಜಪ್ತಗೊಳಿಸಿ ಅವನು ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಮತ್ತು ಸ್ಕಾಟಿಶ್ ಜನರಿಗೆ ಮಾರಿದನು. ಐರ್ಲಂಡಿನ ವ್ಯಾಪಾರವನ್ನು ಬೆಳೆಯಿಸಲು ಅವನು ಐರಿಶ್ ಸಮುದ್ರದಲ್ಲಿಯ ಕಡಲುಗಳ್ಳತನವನ್ನು ನಷ್ಟಗೊಳಿಸಿದನು. ಐರ್ಲಂಡಿನಲ್ಲಿ ನಾರುಬಟ್ಟೆಯನ್ನು ನೇಯುವ ವ್ಯವಸಾಯಕ್ಕೆ ಅವನು ಉತ್ತೇಜನವನ್ನಿತ್ತನು. ಸ್ಟ್ರಾಫರ್ಡನು ಈ ಬಗೆಯಾಗಿ ಕೆಲವು ಹಿತದ ಸಂಗತಿಗಳನ್ನು ಮಾಡಿದ್ದರೂ ಜನರು ಅವನ ನಿಷ್ಠುರ ಮತ್ತು ಉಗ್ರನೀತಿಯಿಂದ ನೊಂದು ಅವನನ್ನು ತಿರಸ್ಕರಿಸತೊಡಗಿದರು.

**ಐರ್ಲಂಡಿನಲ್ಲಿಯ ಬಂಡು (೧೬೪೧-೧೬೫೨)**—೧೬೪೦ರಲ್ಲಿ ಸ್ಟ್ರಾಫರ್ಡನು ಐರ್ಲಂಡಿನಿಂದ ತಿರುಗಿ ಹೋದಬಳಿಕ ಐರಿಶ್ ರೋಮನ ಕಥಲಿಕ ಜನರು ಬಂಡನ್ನು ಹೂಡಿದರು. ಅವರು ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಮತ್ತು ಸ್ಕಾಟಿಶ್ ವಸಾಹತುಗಳಿಗೆ ದಾಳಿಯಿಕ್ಕಿ ಕೊಲೆ ಸುಲಿಗೆಗಳನ್ನು ನಡೆಯಿಸಿದರು. ಈ ಬಂಡನ್ನು ಮುರಿಯಲು ಅಲ್ಲಿದ್ದ ಶಾಶ್ವತ ಸೈನ್ಯವು ಬಹಳವಾಗಿ ಪ್ರಯತ್ನಿಸಿತು. ಆದರೆ ಯಶಸ್ಸು ದೊರಲಿಲ್ಲ. ಇತ್ತ ಇಂಗ್ಲಂಡಿನಲ್ಲಿ ರಾಜನು ಮತ್ತು ಪಾರ್ಲಿ

ಮೆಂಟು ಇವರ ನಡುವೆ ಯುದ್ಧವಾಗಿ ಎಲ್ಲ ಸತ್ತೆ ಪಾರ್ಲಿಮೆಂಟಿನ ಕೈಯಲ್ಲಿ ಬಂದಿತು. ಆಗ ಐರ್ಲಂಡಿನಲ್ಲಿ ಪ್ರಾಟೆಸ್ಟಂಟ ಪಂಥದವರ ಮೇಲೆ ಆಗುತ್ತಿದ್ದ ಅತ್ಯಾಚಾರಗಳನ್ನು ಕಂಡು ಪಾರ್ಲಿಮೆಂಟು ಕ್ರಾಮವೆಲನನ್ನು ಐರ್ಲಂಡಿಗೆ ಕಳುಹಿತು (೧೬೪೯). ಕ್ರಾಮವೆಲನು ಡ್ರಾಘೆಡಾ ಮತ್ತು ವೆಕ್ಸಫರ್ಡ ಕೋಟೆಗಳನ್ನು ಉಧ್ವಸ್ತಗೊಳಿಸಿ ಸಾವಿರಾರು ಕಥಲಿಕ್ ಪಂಥದ ಸೈನಿಕರನ್ನು ಮೃತ್ಯುವಿಗೆ ಗುರಿಮಾಡಿದನು. ಐರ್ಲಂಡಿನಲ್ಲಿಯ ಬಂಡು ಮುರಿಯಿತು. ಆ ಬಳಿಕ ಕ್ರಾಮವೆಲನು ಅಲ್ಲಿ ಐರ್ಟನ್ ಎಂಬವನನ್ನು ನಿಯೋಜಿಸಿ ಇಂಗ್ಲಂಡಿಗೆ ಮರಳಿ ಬಂದನು. ಬಂಡಿನಲ್ಲಿ ಸೇರಿದ ರೋಮನ್ ಕಥಲಿಕ್ ಐರಿಶ್ ಜನರ ಭೂಮಿಗಳು ಜಪ್ತುಮಾಡಲ್ಪಟ್ಟವು ಮತ್ತು ಅವರು ನ್ಯಾಯಬಾಹ್ಯರಾಗಿ (out-law) ಮಾಡಲ್ಪಟ್ಟರು. ಅವರಲ್ಲಿ ಎಷ್ಟೋ ಜನರು ಗುಡ್ಡಗಾಡುಗಳಲ್ಲಿ ಇರಲು ಹೋದರು. ಇವರಿಗೆ ಟೋರಿ ಎಂಬ ಹೆಸರು ಬಂದಿತು. ಐರ್ಲಂಡಿನಲ್ಲಿ ೧೧ ವರ್ಷಗಳ ವರೆಗೆ ಈ ಬಂಡುಗಳು ನಡೆದುದರಿಂದ ಅಲ್ಲಿಯ ಲೋಕಸಂಖ್ಯೆ ಬಹಳವಾಗಿ ಕಡಿಮೆಯಾಗಿದ್ದಿತು. ಸಾಲದುದಕ್ಕೆ ರೋಗಗಳು ಉದ್ಭವಿಸಿದುವು. ಇದರಿಂದ ಎಷ್ಟೋ ಭೂಮಿಗಳು ಬೀಳುಬಿದ್ದುವು. ಅದರಿಂದ ಬರವು ಉಂಟಾಗಿ ಎಷ್ಟೋ ಐರಿಶ್ ರೋಮನ್ ಕಥಲಿಕ ಜನರು ದೇಶತ್ಯಾಗವನ್ನು ಮಾಡಿ ಆಶ್ರಯಕ್ಕೋಸುಗ ಫ್ರಾನ್ಸ, ಸ್ಪೇನ, ಮತ್ತು ಅಮೇರಿಕೆಯಲ್ಲಿಯ ವಸಾಹತುಗಳಲ್ಲಿ ಹೋಗಿ ನಿಂತರು.

**೨ನೆಯ ಚಾರ್ಲಸನ ಮತ್ತು ೨ನೆಯ ಜೇಮ್ಸನ ನೀತಿ**—೨ನೆಯ ಚಾರ್ಲಸನು ಐರ್ಲಂಡಿನಲ್ಲಿ ⅘ ಜನರು ರೋಮನ್ ಕಥಲಿಕ ಪಂಥದವರಿದ್ದುದರಿಂದ ಅವರ ಧಾರ್ಮಿಕ ವಿಷಯದಲ್ಲಿ ಕೈಯಿಕ್ಕಲಿಲ್ಲ. ಆದರೆ ಅಲ್ಲಿ ಇರುತ್ತಿದ್ದ ಪ್ರಾಟೆಸ್ಟಂಟ ಪಂಥದವರು ಇಂಗ್ಲಂಡಿನ ಎಪಿಸ್ಕೊಪೇಲಿಯನ್ ಪಂಥದಂತೆಯೆ ನಡೆಯಬೇಕೆಂದು ಅವನು ನಿಯಮವನ್ನು ಮಾಡಿದನು. ಆದುದರಿಂದ ಎಷ್ಟೋ ಪ್ಯುರಿಟನ್ ಮತ್ತು ಪ್ರೆಸ್ಬಿಟೇರಿಯನ್ ಪಂಥದ ಜನರು ಐರ್ಲಂಡನ್ನು ಬಿಟ್ಟು ಅಮೇರಿಕೆಗೆ ವಸಾಹತನ್ನು ಮಾಡಲು ಹೋದರು. ಇಂಗ್ಲಂಡಿನ ಉದ್ಯೋಗ-ವ್ಯವಸಾಯಗಳಿಗೆ ಉತ್ತೇಜನವು ದೊರೆಯಬೇಕೆಂದು ಐರ್ಲಂಡಿನಲ್ಲಿಯ ಪಕ್ಕಾಮಾಲು ಇಂಗ್ಲಂಡಿಗಾಗಲಿ, ಬ್ರಿಟಿಶ್ ವಸಾಹತುಗಳಿಗಾಗಲಿ ಕಳಿಸಲ್ಪಡಬಾರದೆಂದು ಅವನು ನಿಯಮವನ್ನು ಮಾಡಿದನು. ಆದರಿಂದ ಐರಿಶ್ ಉದ್ಯೋಗ-ವ್ಯವಸಾಯಗಳು ಬೆಳೆಯದೆ ಉಳಿದುವು.

೨ನೆಯ ಜೇಮ್ಸನು ರೋಮನ್ ಕಥಲಿಕ್ ಪಂಥದವನಿದ್ದನು. ಆದುದರಿಂದ ಅವನು ಐರಿಶ್‌ಜನರ ಸಹಾನುಭೂತಿಯನ್ನು ಪಡೆಯಲು **ಟಿರ್ಕೊನೆಲ್** ಎಂಬ

ರೋಮನ್ ಕೆಥಲಿಕ್ ಗೃಹಸ್ಥನನ್ನು ಐರ್ಲಂಡಿನ ಗವ್ಹರ್ನರನಾಗಿ ನಿಯೋಜಿಸಿದನು. ಆತನು ಅಲ್ಲಿಯ ಎಷ್ಟೋ ರೋಮನ್ ಕೆಥಲಿಕರಿಗೆ ಲಷ್ಕರಿ ಮತ್ತು ಮುಲ್ಕೀ ಖಾತೆಗಳಲ್ಲಿ ಅಧಿಕಾರ ಸ್ಥಳಗಳನ್ನು ಕೊಟ್ಟನು.

**೩ನೆಯ ವಿಲಿಯಮ್, ಮೇರಿ ಮತ್ತು ಅನ್ ಇವರ ನೀತಿ**— ಇಂಗ್ಲಂಡಿನಲ್ಲಿ ರಾಜ್ಯಕ್ರಾಂತಿಯಾಗಿ ವಿಲಿಯಮನು ಅರಸನಾದ ಬಳಿಕ ಐರಿಶ್ ಜನರು ೨ನೆಯ ಜೇಮ್ಸನ ಪಕ್ಷವನ್ನು ವಹಿಸಿ ಬಂಡನ್ನು ಹೂಡಿದರು. ಟಿರ್ಕೊನೆಲನು ಬಂಡಿನಲ್ಲಿ ಸೇರಿದನು ಮತ್ತು ಪ್ರಾಟೆಸ್ಟಂಟ ಪಂಥದವರ ಕೋಟೆಗಳನ್ನು ವಶಪಡಿಸಿಕೊಳ್ಳಲು ಸೈನ್ಯವನ್ನು ಕಳುಹಿದನು. ಅಲ್ಸ್ಟರ ಪ್ರಾಂತದಲ್ಲಿಯ ಪ್ರಾಟೆಸ್ಟಂಟ ಪಂಥದವರು **ಲಂಡನಡೆರಿಯ** ಕೋಟೆಯನ್ನು ೧೦೫ ದಿವಸಗಳ ವರೆಗೆ ರಕ್ಷಿಸಿದರು. ಕೊನೆಗೆ ಅವರಿಗೆ ಹೊರಗಿನಿಂದ ಸಾಹಾಯ್ಯವು ದೊರೆತುದರಿಂದ ರೋಮನ್ ಕೆಥಲಿಕ್ ಐರಿಶ್‌ಜನರು ಮುತ್ತಿಗೆಯನ್ನು ಹಿಂತೆಗೆದುಕೊಳ್ಳಬೇಕಾಯಿತು. ಫ್ರೆಂಚರ ಸಾಹಾಯ್ಯವನ್ನು ಪಡೆದು ೨ನೆಯ ಜೇಮ್ಸನೂ ಐರ್ಲಂಡಿಗೆ ಬಂದಿದ್ದನು. ಆದರೆ ೩ನೆಯ ವಿಲಿಯಮನು ಸ್ವತಃ ಐರ್ಲಂಡಿಗೆ ಹೋಗಿ ೧೬೯೦ ರಲ್ಲಿ **ಬಾಯನದ** ಯುದ್ಧದಲ್ಲಿ ಅವನನ್ನು ಸೋಲಿಸಿದನು. ಜೇಮ್ಸನು ಫ್ರಾನ್ಸಿಗೆ ಓಡಿಹೋದನು. ಆ ಬಳಿಕ ಐರ್ಲಂಡಿನಲ್ಲಿಯ ಬೇರೆ ಬೇರೆ ಸ್ಥಳಗಳಲ್ಲಿಯ ಬಂಡುಗಳು ಮುರಿಯಲ್ಪಟ್ಟವು. ಮನ್‌ಸ್ಟರ ಪ್ರಾಂತದಲ್ಲಿಯ **ಲಿಮರಿಕ್** ಎಂಬಲ್ಲಿಯ ಐರಿಶ್‌ಜನರು ಎಷ್ಟೋ ದಿವಸಗಳ ವರೆಗೆ ಗಟ್ಟಿಯಾಗಿ ಉಳಿದರು; ಆದರೆ ಕಡೆಗೆ ಅವರೂ ಸೋತರು (೧೬೯೧).

**ರಾಜ್ಯಕ್ರಾಂತಿಯ ತರುವಾಯದಲ್ಲಿ ಐರ್ಲಂಡ್**— ವಿಲಿಯಮನ ವಿರುದ್ಧವಾಗಿ ಬಂಡಿನಲ್ಲಿ ಸೇರಿದ ಜನರ ಭೂಮಿಗಳು ಜಪ್ತಮಾಡಲ್ಪಟ್ಟು ಅವು ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಮತ್ತು ಸ್ಕಾಟಿಶ್‌ಜನರಿಗೆ ಕೊಡಲ್ಪಟ್ಟವು. ಕಳೆದ ೧೦೦ ವರ್ಷಗಳಲ್ಲಿ ಮೂರು ನಾಲ್ಕು ಸಲ ಐರಿಶ್ ರೋಮನ್ ಕೆಥಲಿಕರ ಭೂಮಿಗಳು ಜಪ್ತಮಾಡಲ್ಪಟ್ಟು ಅವು ಪ್ರಾಟೆಸ್ಟಂಟ ಪಂಥದವರಿಗೆ ಕೊಡಲ್ಪಟ್ಟುದರಿಂದ ಐರ್ಲಂಡಿನಲ್ಲಿಯ ಬಹುಜನ ಸಮಾಜವು ರೋಮನ್ ಕೆಥಲಿಕ್ ಪಂಥದ ಅನುಯಾಯಿಯಾಗಿದ್ದರೂ ಅಲ್ಲಿಯ ಬಹುಶಃ ಎಲ್ಲ ಭೂಮಿಗಳು ಪ್ರಾಟೆಸ್ಟಂಟ ಪಂಥದವರ ವಶಕ್ಕೆ ಬಂದುವು. ಐರಿಶ್ ರೋಮನ್ ಕೆಥಲಿಕ್ ಪಂಥದವರು ರೈತರಾಗಿ, ಕೂಲಿಗಳಾಗಿ, ಕುರಿಕಾಯುವವರಾಗಿ, ದನಗಾಯಿಗಳಾಗಿ ನಿರ್ವಾಹವನ್ನು ಸಾಗಿಸಬೇಕಾಯಿತು. ಅಲ್ಲಿಯ ಪಾರ್ಲಿಮೆಂಟಿನಲ್ಲಿಯೂ ಪ್ರಾಟೆಸ್ಟಂಟ ಪಂಥದವರ ವರ್ಚಸ್ಸೇ ಇದ್ದಿತು. ಈ ಪಾರ್ಲಿಮೆಂಟು ಐರಿಶ್ ರೋಮನ್ ಕೆಥಲಿಕರ

ವಿರುದ್ಧವಾಗಿ ಉಗ್ರವಾದ ಕಾಯ್ದೆಗಳನ್ನು ಮಾಡಿತು. ಈ ಕಾಯ್ದೆಗಳಿಂದ ರೋಮನ್ ಕಥಲಿಕ್ ಐರಿಶ್‌ಜನರಿಗೆ ಅಲ್ಲಿಯ ಪಾರ್ಲಿಮೆಂಟಿನ ಸದಸ್ಯರಾಗಲು ಪಾರ್ಲಿಮೆಂಟಿನ ಚುನಾವಣೆಯ ಕಾಲದಲ್ಲಿ ಮತವನ್ನು ಕೊಡಲು, ವಕೀಲಿಯನ್ನು ಮಾಡಲು, ಧರ್ಮಾಧಿಕಾರಿಗಳಾಗಲು, ಸರಕಾರದಲ್ಲಿ ಅಧಿಕಾರದ ಸ್ಥಳಗಳನ್ನು ಸ್ವೀಕರಿಸಲು ಸಂಪೂರ್ಣವಾಗಿ ಪ್ರತಿಬಂಧವಿದ್ದಿತು. ಈ ಬಗೆಯಾಗಿ ಐರಿಶ್ ರೋಮನ್ ಕಥಲಿಕ್ ಜನರ ಪ್ರಗತಿ ನಿಂತುದರಿಂದ ಅಲ್ಲಿ ಅಸಂತೋಷವು ಹೆಚ್ಚುತ್ತ ಹೋಯಿತು.

---

### ಸಾರಾಂಶವು

ಮಧ್ಯಯುಗದಲ್ಲಿಯ ಐರ್ಲಂಡ್—ಅಲ್ಲಿಯ ಜನರು ಕೆಲ್ಟ ವರ್ಗಕ್ಕೆ ಸೇರಿದವರು. ಸೇಂಟ ಪೆಟ್ರಿಕನು ಐದನೆಯ ಶತಕದಲ್ಲಿ ಅವರಿಗೆ ಕ್ರೈಸ್ತಧರ್ಮದ ದೀಕ್ಷೆಯನ್ನು ಕೊಟ್ಟನು. ಅಲ್ಲಿ ಅನೇಕ ರಾಜ್ಯಗಳು. ಅವುಗಳಲ್ಲಿ ತಮ್ಮ ತಮ್ಮೊಳಗೆ ಯುದ್ಧಗಳು. ಅವರಿಗೆ ೨ನೆಯ ಹೆನ್ರಿಯ ಸಾಹಾಯ್ಯವು ಮತ್ತು ಅಲ್ಲಿ ಅವನ ವರ್ಚಸ್ಸಿಗೆ ಮಾನ್ಯತೆ. ಅಲ್ಲಿ ಇಂಗ್ಲಿಶ್ ಜನರ ವಸಾಹತುಗಳು. ಅವರೂ ಒಂದೆರಡು ತಲೆಗಳಲ್ಲಿ ಸಂಪೂರ್ಣವಾಗಿ ಐರಿಶರಾದರು. ೧೪೬೭ರಲ್ಲಿ ಐರಿಶ್ ಪಾರ್ಲಿಮೆಂಟಿನ ಸ್ಥಾಪನೆ.

ಟ್ಯೂಡರ ಕಾಲದಲ್ಲಿಯ ಐರ್ಲಂಡ್—೭ನೆಯ ಹೆನ್ರಿಯಿಂದ ಕಳಿಸಲ್ಪಟ್ಟ ಪಾಯನಿಂಗ್ಸನು ಬಂಡುಗಳನ್ನು ಮುರಿದನು. ಪಾಯನಿಂಗ್ಸನ ಕಾಯ್ದೆಯಿಂದ ಅಲ್ಲಿಯ ಪಾರ್ಲಿಮೆಂಟು ಇಂಗ್ಲಂಡಿನ ಅರಸನ ವರ್ಚಸ್ಸಿನ ಕೆಳಗೆ ಬಂದಿತು. ೮ನೆಯ ಹೆನ್ರಿ ಅಲ್ಲಿಯ ಬಂಡುಗಳಲ್ಲಿ ಸೇರಿದ ಸರದಾರರ ಭೂಮಿಗಳನ್ನು ಜಪ್ತಮಾಡಿ 'ಐರ್ಲಂಡಿನ ರಾಜನು' ಎಂದು ಬಿರುದನ್ನು ತಳೆದನು. ಮೇರಿ ಮತ್ತು ಎಲಿಝಬೆಥ್ ಇವರ ಆಳ್ಕೆಯಲ್ಲಿ ಮನ್‌ಸ್ಟರ ಪ್ರಾಂತದಲ್ಲಿ ಇಂಗ್ಲಿಶರ ವಸಾಹತು. ೬ನೆಯ ಎಡವರ್ಡನು ಮತ್ತು ಎಲಿಝಬೆಥ್ ರಾಣಿ ಅಲ್ಲಿ ಪ್ರಾಟೆಸ್ಟಂಟ ಪಂಥವನ್ನು ಸ್ಥಾಪಿಸಲು ಪ್ರಯತ್ನಿಸಿದರು. ಅವರ ಪ್ರಯತ್ನಗಳು ಸಫಲವಾಗಲಿಲ್ಲ. ಅಲ್ಲಿಯ ಬಹುಜನಸಮಾಜವು ರೋಮನ್ ಕಥಲಿಕ್ ಪಂಥದ ಅನುಯಾಯಿಯಾಗಿಯೆ ಉಳಿಯಿತು. ಎಲಿಝಬೆಥ್ ರಾಣಿಯ ಕಾಲದಲ್ಲಿ ಅಲ್ಲಿ ಬಂಡು. ಆದರೆ ಅದು ಮುರಿಯಲ್ಪಟ್ಟಿತು.

ಸ್ಟುವರ್ಟಕಾಲದಲ್ಲಿಯ ಐರ್ಲಂಡ್—೧ನೆಯ ಜೇಮ್ಸನ ಕಾಲದಲ್ಲಿ ಅಲ್‌ಸ್ಟರ ಪ್ರಾಂತದಲ್ಲಿ ಬಂಡು. ಅದು ಮುರಿಯಲ್ಪಟ್ಟಿತು. ಬಂಡಿನಲ್ಲಿ ಸೇರಿದವರ ಭೂಮಿಗಳು ಜಪ್ತಮಾಡಲ್ಪಟ್ಟುವು. ಆ ಭೂಮಿಗಳು ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಮತ್ತು ಸ್ಕಾಟಿಶ್ ಜನರಿಗೆ ಕೊಡಲ್ಪಟ್ಟುವು. ಅನೇಕ ನಿರಪರಾಧಿ

ಜನರ ಭೂಮಿಗಳು ಜಪ್ತಾದುದರಿಂದ ಅಸಂತೋಷವು. ೧ನೆಯ ಚಾರ್ಲ ಸನು ಅಲ್ಲಿಯ ಬಂಡನ್ನು ಮುರಿಯಲು ಸ್ಟ್ರಾಫರ್ಡನನ್ನು ಕಳುಹಿಸಿದನು (೧೬೩೩). ಅವನ ನಿಷ್ಠುರವೂ ಉಗ್ರವೂ ಆದ ನೀತಿ, ಭೂಮಿಗಳು ಜಪ್ತಮಾಡ ಲ್ಪಟ್ಟವು, ಶಾಶ್ವತ ಸೈನ್ಯವು, ಆದರಿಂದ ಶಾಂತತೆ, ಆದರೆ ಅವನು ತಿರುಗಿ ಹೋದಬಳಿಕ (೧೬೪೦) ಮತ್ತೆ ಬಂಡು; ಪ್ರಾಟೆಸ್ಟಂಟ ಪಂಥದವರ ಮೇಲೆ ಅತ್ಯಾಚಾರವು. ಕ್ರಾಮವೆಲನು ಬಂದು ಉಗ್ರೋಪಾಯಗಳಿಂದ ಬಂಡನ್ನು ಮುರಿದು ಶಾಂತತೆಯನ್ನು ಸ್ಥಾಪಿಸಿದನು. ರೋಗಗಳ ಪ್ರಾದುರ್ಭಾವವು. ಭೂಮಿಗಳು ಬೀಳುಬಿದ್ದುವು; ಆದರಿಂದ ಬರ; ಅನೇಕರ ದೇಶತ್ಯಾಗ; ೨ನೆಯ ಚಾರ್ಲಸನು ಅವರ ಧರ್ಮದಲ್ಲಿ ಕೈಹಾಕಲಿಲ್ಲ. ಆದರೆ ಪ್ಯುರಿಟನ್ ಮತ್ತು ಪ್ರಾಟೆಸ್ಟಂಟ ಪಂಥದವರು ಎಪಿಸ್ಕೊಪೇಲಿಯನ್ ಪಂಥದವರಂತೆಯೆ ನಡೆಯ ಬೇಕೆಂದು ಅವನ ಆಗ್ರಹವು: ಅಲ್ಲಿಯ ಉದ್ಯೋಗ-ವ್ಯವಸಾಯಗಳ ಬೆಳ ವಣಿಗೆಗೆ ಆತಂಕವು. ೨ನೆಯ ಜೇಮ್ಸನ ಆಳ್ಕೆಯಲ್ಲಿ ರೋಮನ್ ಕಥಲಿಕ್ ಪಂಥದ ಟಿರ್ಕೊನೆಲನು ಗವರ್ನರನು. ೩ನೆಯ ವಿಲಿಯಮನು ಅರಸನಾದ ಬಳಿಕ ಅವನ ವಿರುದ್ಧವಾಗಿ ಬಂಡು. ಪ್ರಾಟೆಸ್ಟಂಟರ ಮೇಲೆ ಅತ್ಯಾಚಾರವು. ಲಂಡನಡೆರಿ ಎಂಬಲ್ಲಿ ಪ್ರಾಟೆಸ್ಟಂಟ ಪಂಥದವರು ಬಂಡುಗಾರರಿಂದ ಆತ್ಮ ರಕ್ಷಣೆಯನ್ನು ಮಾಡಿಕೊಳ್ಳಲು ಪ್ರಯತ್ನಿಸಿದರು. ಅವರಿಗೆ ವಿಲಿಯಮನ ಸಾಹಾಯ್ಯವು; ಬಾಯನ್ ಯುದ್ಧದಲ್ಲಿ ೨ನೆಯ ಜೇಮ್ಸನ ಪರಾಭವವು (೧೬೯೦). ಬಂಡಿನಲ್ಲಿ ಸೇರಿದವರ ಭೂಮಿಗಳು ಜಪ್ತಮಾಡಲ್ಪಟ್ಟು ಪ್ರಾಟೆ ಸ್ಟಂಟ ಪಂಥದವರಿಗೆ ಕೊಡಲ್ಪಟ್ಟುವು. ಬಹುಶಃ ಎಲ್ಲ ಭೂಮಿಗಳು ಪ್ರಾಟೆ ಸ್ಟಂಟ ಪಂಥದವರ ವಶದಲ್ಲಿ. ಅಂತಹ ಇಂತಹ ಕೀಳು ಕೆಲಸಗಳಿಂದ ಐರಿಶ್ ಜನರು ನಿರ್ವಾಹವನ್ನು ಸಾಗಿಸಿಕೊಂಡರು. ಪಾರ್ಲಿಮೆಂಟ ಸಭೆ ಪ್ರಾಟೆ ಸ್ಟಂಟ ಪಂಥದವರ ಕೈಯಲ್ಲಿ. ರೋಮನ್ ಕೆಥಲಿಕ್ ಪಂಥದವರ ವಿರುದ್ಧ ಕಾಯದೆಗಳು. ಪಾರ್ಲಿಮೆಂಟಿನ ಸದಸ್ಯರಾಗಲು, ಚುನಾವಣೆಯ ಕಾಲ ದಲ್ಲಿ ಮತವನ್ನು ಕೊಡಲು, ಮತ್ತು ಅಧಿಕಾರ ಸ್ಥಳಗಳನ್ನು ಸ್ವೀಕರಿಸಲು ರೋಮನ್ ಕೆಥಲಿಕರಿಗೆ ಪ್ರತಿಬಂಧವು. ಇದರಿಂದ ಅಸಂತೋಷವು.

———— ———— ———— ————

# ೧೬ನೆಯ ಪ್ರಕರಣವು

## ಸ್ಟುವರ್ಟಕಾಲದಲ್ಲಿಯ ಇಂಗ್ಲಂಡಿನ ವ್ಯಾಪಾರವು, ವಸಾಹತುಗಳು ಮತ್ತು ವಶದಲ್ಲಿಯ ಪ್ರದೇಶಗಳು.

### ವ್ಯಾಪಾರ.

**ಸ್ಟುವರ್ಟಕಾಲದಲ್ಲಿಯ ರಾಜ್ಯಕರ್ತರ ನೀತಿ**—ಇಂಗ್ಲಂಡಿನ ವ್ಯಾಪಾರದ, ವಸಾಹತುಗಳ ಮತ್ತು ಸಾಮ್ರಾಜ್ಯದ ಅಡಿಗಲ್ಲು ಸ್ಟುವರ್ಟ ವಂಶದವರ ಆಳ್ಕೆಯಲ್ಲಿ ಇಡಲ್ಪಟ್ಟಿತು. ೧೫೮೮ರಲ್ಲಿ ಸ್ಪೇನದ ಅಜಿಂಕ್ಯ ನೌಕಾದಲದ ಪರಾಭವವಾದಬಳಿಕ ಇಂಗ್ಲಂಡಿನ ಸಮುದ್ರದ ಮೇಲಿನ ವರ್ಚಸ್ಸು ಬೆಳೆಯಿತು, ಮತ್ತು ಸಮುದ್ರದಾಚೆಯ ಪ್ರದೇಶಗಳೊಡನೆ ವ್ಯಾಪಾರಮಾಡಲು, ಅಲ್ಲಿ ತಮ್ಮ ವಸಾಹತುಗಳನ್ನು ಮತ್ತು ಸಾಮ್ರಾಜ್ಯವನ್ನು ಸ್ಥಾಪಿಸಲು ಇಂಗ್ಲಿಶ್ ಜನರಲ್ಲಿ ಆಕಾಂಕ್ಷೆ ಹುಟ್ಟಿತು. ಸ್ಟುವರ್ಟರಾಜರ ಕಾಲದಲ್ಲಿ ರಾಜರು ಮತ್ತು ಪಾರ್ಲಿಮೆಂಟು ಇವರ ನಡುವೆ ಕಲಹಗಳಾಗುತ್ತಿದ್ದರೂ ವ್ಯಾಪಾರದ ಮತ್ತು ವಸಾಹತುಗಳ ವೃದ್ಧಿಗೋಸುಗ ಸ್ಟುವರ್ಟರಾಜರ ಮತ್ತು ರಾಷ್ಟ್ರರಕ್ಷಕ ಕ್ರಾಮವೆಲನ ಉತ್ತೇಜನ ವಿದ್ದಿತು.

**ಪೋರ್ತುಗೀಜ ಮತ್ತು ಡಚ್‌ಜನರ ವ್ಯಾಪಾರವು**—ವಾಸ್ಕೋ-ಡಿ-ಗಾಮಾ ಎಂಬ ಪೋರ್ತುಗೀಜನು ಹಿಂದುಸ್ಥಾನದ ಕಡೆಗೆ ಹೋಗುವ ಜಲಮಾರ್ಗವನ್ನು ಶೋಧಿಸಿದಬಳಿಕ (೧೪೯೮) ಪೌರ್ವಾತ್ಯದೇಶಗಳೊಡನೆ ಪೋರ್ತುಗೀಜರ ವ್ಯಾಪಾರವು ಪ್ರಾರಂಭವಾಯಿತು. ಮೆಣಸು, ದಾಲಚಿನ್ನಿ, ಜಾಜಿಕಾಯಿ, ಪತ್ರಿ, ಅಂಟು ಮೊದಲಾದ ಪದಾರ್ಥಗಳು ಆ ಕಾಲದ ವ್ಯಾಪಾರದ ಮುಖ್ಯ ವಸ್ತುಗಳಾಗಿದ್ದುವು. ಮಸಾಲೆ ಮತ್ತು ಇತರ ಪದಾರ್ಥಗಳಿಂದ ತುಂಬಿದ ಹಡಗಗಳು ಲಿಸ್ಬನ್ ಬಂದರಕ್ಕೆ ಬರುತ್ತಿದ್ದುವು. ಅಲ್ಲಿಂದ ಆ ಪದಾರ್ಥಗಳನ್ನು ಯುರೋಪದಲ್ಲಿಯ ಬೇರೆ ಬೇರೆ ರಾಷ್ಟ್ರಗಳಿಗೆ ಒಯ್ಯುವ ಕೆಲಸಗಳನ್ನು ಡಚ್ ವ್ಯಾಪಾರಸ್ಥರು ಮಾಡುತ್ತಿದ್ದರು. ೧೫೮೦ರಲ್ಲಿ ಸ್ಪೇನದ ರಾಜನಾದ ೨ನೆಯ ಫಿಲಿಪನು ಪೋರ್ತುಗಾಲ ದೇಶವನ್ನು ಗೆದ್ದು ವಶಪಡಿಸಿಕೊಂಡುದರಿಂದ ಪೌರ್ವಾತ್ಯ ವ್ಯಾಪಾರದ ವಿಷಯದಲ್ಲಿ ಪೋರ್ತುಗೀಜರ ದುರ್ಲಕ್ಷ್ಯವಾಗತೊಡಗಿತು. ಆ ಬಳಿಕ ೧೫೮೮ರಲ್ಲಿ ಸ್ಪೇನದ ನೌಕಾದಲದ ಪರಾಭವವಾದಬಳಿಕ ಸ್ಪೇನದ ಸಮುದ್ರ ಮೇಲಿನ ಸತ್ತೆ ಕುಗ್ಗಲಾರಂಭಿಸಿತು. ಆಗ ಡಚ್‌ಜನರು ಇದೆ ಯೋಗ್ಯ

ಸಂಧಿಯೆಂದು ಹಿಂದುಸ್ಥಾನ, ಜಾವಾ, ಸುಮಾತ್ರಾ ಮೊದಲಾದ ಮಸಾಲೆಯ ನಡುಗಡ್ಡೆಗಳೊಡನೆ ವ್ಯಾಪಾರವನ್ನಾರಂಭಿಸಿದರು. ಕೆಲವು ವರ್ಷಗಳಲ್ಲಿಯೆ ಹಾಲಂಡಿನ ರಾಜಧಾನಿಯಾದ **ಅಮಸ್ಟರಡಮ್** ಪಟ್ಟಣವು ಎಲ್ಲ ಯುರೋಪಿಯನ್ ರಾಷ್ಟ್ರಗಳ ಕೇಂದ್ರ ವ್ಯಾಪಾರಸ್ಥಳವಾಯಿತು. ವ್ಯಾಪಾರದಿಂದ ಡಚ್ ಜನರು ಈ ಬಗೆಯಾಗಿ ಸಂಪನ್ನರಾದುದನ್ನು ಕಂಡು ಇಂಗ್ಲಂಡ್ ಫ್ರಾನ್ಸ ಮೊದಲಾದ ರಾಷ್ಟ್ರಗಳಿಗೆ ಪೌರ್ವಾತ್ಯ ದೇಶಗಳೊಡನೆ ವ್ಯಾಪಾರಮಾಡಲು ಇಚ್ಛೆಯುಂಟಾಯ್ತು.

**ಇಂಗ್ಲಿಶ್ ಈಸ್ಟ ಇಂಡಿಯಾ ಕಂಪನಿ**–ಪೌರ್ವಾತ್ಯ ದೇಶಗಳೊಡನೆ ವ್ಯಾಪಾರಮಾಡಲು ೧೬೦೦ರಲ್ಲಿ ಕೆಲವು ಇಂಗ್ಲಿಶ್ ವ್ಯಾಪಾರಸ್ಥರು ಇಂಗ್ಲಿಶ್ ಈಸ್ಟ ಇಂಡಿಯಾ ಕಂಪನಿಯನ್ನು ಸ್ಥಾಪಿಸಿದರು. ಆ ಬಳಿಕ ಪೌರ್ವಾತ್ಯ ವ್ಯಾಪಾರದ ವಿಷಯದಲ್ಲಿ ಡಚ್ ಮತ್ತು ಇಂಗ್ಲಿಶ್ ಕಂಪನಿಗಳಲ್ಲಿ ಸ್ಪರ್ಧೆ ಹುಟ್ಟಿತು. ಜಾವಾ ಸುಮಾತ್ರಾ ಮೊದಲಾದ ಮಸಾಲೆಯ ನಡುಗಡ್ಡೆಗಳೊಡನೆ ಡಚ್ ಜನರ ವ್ಯಾಪಾರವು ಬಹಳವಾಗಿದ್ದಿತು. ಆ ಪ್ರದೇಶದಲ್ಲಿ **ಬಟೇವಿಯಾ** ಎಂಬುದು ಅವರ ವ್ಯಾಪಾರದ ಮುಖ್ಯ ಸ್ಥಳವಾಗಿದ್ದಿತು. ಇತ್ತ ಇಂಗ್ಲಿಶ್ ಜನರ ಸ್ಪರ್ಧೆ ಉಂಟಾಗಬಾರದೆಂದು ಡಚ್ ಜನರು ೧೬೨೩ರಲ್ಲಿ **ಅಂಬೋಯನಾ** ಎಂಬಲ್ಲಿ ಅನೇಕ ಇಂಗ್ಲಿಶರನ್ನು ಕೊಂದರು ಮತ್ತು ಉಳಿದವರನ್ನು ಅಲ್ಲಿಂದ ಹೊರ ದೂಡಿದರು. ಆ ಬಳಿಕ ಇಂಗ್ಲಿಶ್ ಈಸ್ಟ ಇಂಡಿಯಾ ಕಂಪನಿ ಡಚ್ ನಡುಗಡ್ಡೆಗಳ ಕಡೆಗೆ ಲಕ್ಷ್ಯವೀಯದೆ ಹಿಂದುಸ್ಥಾನದ ಕಡೆಗೆ ಸಂಪೂರ್ಣವಾಗಿ ಲಕ್ಷ್ಯವನ್ನು ಹೊರಳಿಸಿತು. ಡಚ್ ಜನರ ವ್ಯಾಪಾರವು ಸಂಪೂರ್ಣವಾಗಿ ತಮ್ಮ ವಶದಲ್ಲಿ ಬರಬೇಕೆಂದು ಮತ್ತು ತಮ್ಮ ವ್ಯಾಪಾರವೂ ಸಮುದ್ರ ಮೇಲಿನ ಸತ್ತೆಯೂ ಬೆಳೆಯಬೇಕೆಂದು ೧೬೫೧ರಲ್ಲಿ ಮತ್ತು ೧೬೬೦ರಲ್ಲಿ ಇಂಗ್ಲಿಶರು ನ್ಯಾವಿಗೇಶನ್ ಕಾಯದೆಯನ್ನು (ನೌಕಾನಯನದ ಸಂಬಂಧವಾಗಿ ಕಾಯದೆ) ಮಾಡಿದರು. ಇಂಗ್ಲಂಡಿಗೆ ಮತ್ತು ಇಂಗ್ಲಂಡಿನ ವಸಾಹತುಗಳಿಗೆ ಬರುತ್ತಿರುವ ಸರಕುಗಳು ಇಂಗ್ಲಂಡಿನ ಹಡಗುಗಳಲ್ಲಿ ಇಲ್ಲವೆ ಯಾವ ರಾಷ್ಟ್ರದಲ್ಲಿ ಆ ಸರಕುಗಳು ಹುಟ್ಟುವವು ಆ ರಾಷ್ಟ್ರಗಳ ಹಡಗುಗಳಲ್ಲಿ ಬರಬೇಕೆಂದು ಈ ಕಾಯದೆಯಿಂದ ನಿಯಮವು ಮಾಡಲ್ಪಟ್ಟಿತು. ಪೌರ್ವಾತ್ಯ ವ್ಯಾಪಾರವು ಮತ್ತು ಯುರೋಪದಲ್ಲಿಯ ಬೇರೆ ಬೇರೆ ರಾಷ್ಟ್ರಗಳಲ್ಲಿಯ ಸರಕುಗಳನ್ನು ಒಂದು ರಾಷ್ಟ್ರದಿಂದ ಮತ್ತೊಂದು ರಾಷ್ಟ್ರಕ್ಕೆ ಒಯ್ಯುವ ಕೆಲಸವು ಡಚ್ ವ್ಯಾಪಾರಸ್ಥರ ಕೈಯಲ್ಲಿದ್ದುದರಿಂದ ಈ ನ್ಯಾವಿಗೇಶನ್ ಕಾಯದೆಯಿಂದ ಡಚ್ ಜನರ ವ್ಯಾಪಾರಕ್ಕೆ ಬಲು ದೊಡ್ಡ ಆತಂಕ

ವಾಯಿತು. ಆದರೆ ಈ ಕಾಯದೆಯಿಂದ ಇಂಗ್ಲಂಡಿನ ವ್ಯಾಪಾರಕ್ಕೂ ಹಡಗುಗ ಳನ್ನು ಕಟ್ಟುವ ವ್ಯವಸಾಯಕ್ಕೂ ಉತ್ತೇಜನವು ದೊರೆತಿತು. ಈ ಕಾಯದೆ ರದ್ದಾಗ ಬೇಕೆಂಬ ಉದ್ದೇಶದಿಂದ ಡಚ್ ಜನರು ೧೬೫೨–೫೪ ಮತ್ತು ೧೬೬೫–೬೭ರಲ್ಲಿ ಹೀಗೆ ಇಂಗ್ಲಂಡಿನೊಡನೆ ಎರಡು ಸಲ ಯುದ್ಧಮಾಡಿದರು. ಅದರಿಂದ ಯಾವ ಲಾಭವೂ ಆಗಲಿಲ್ಲ. ಮುಂದೆ ಹಾಲಂಡು ಫ್ರಾನ್ಸಿನೊಡನೆ ಯುದ್ಧಮಾಡಬೇಕಾ ಯಿತು. ಇದರಿಂದ ಹಾಲಂಡಿನ ಸ್ಥಿತಿ ಬಲು ಕೆಟ್ಟಿತು. ಈ ಕಾರಣದಿಂದ ಡಚ್ ಜನರ ವ್ಯಾಪಾರದ ಬಹುಭಾಗವು ಇಂಗ್ಲಿಶರ ಕಡೆಗೆ ಬಂದಿತು. ಮುಂದೆ ಹಾಲಂಡಿನ ವಿಲಿಯಮನು ಇಂಗ್ಲಂಡಿನ ೩ನೆಯ ವಿಲಿಯಮನೆಂದು ಅರಸನಾದ ಬಳಿಕ ಈ ಎರಡು ಪ್ರಾಟೆಸ್ಟಂಟ ಪಂಥದ ರಾಷ್ಟ್ರಗಳಲ್ಲಿ ಸ್ನೇಹವುಂಟಾಗಿ ಅವುಗಳಲ್ಲಿಯ ವ್ಯಾಪಾರದ ಸ್ಪರ್ಧೆ ಕಡಿಮೆಯಾಯಿತು.

**ಹಿಂದುಸ್ಥಾನದಲ್ಲಿಯ ವಖಾರಗಳು**— ಇಂಗ್ಲಿಶ್ ಈಸ್ಟ ಇಂಡಿಯಾ ಕಂಪನಿ ಹಿಂದುಸ್ಥಾನದ ಪಶ್ಚಿಮತೀರದಲ್ಲಿ ತಾಪೀನದಿಯ ಮುಖದ ಬಳಿಯಲ್ಲಿಯ **ಸುರತ** ಎಂಬ ಪ್ರಸಿದ್ಧವಾದ ಬಂದರದಲ್ಲಿ ೧೬೧೨ರಲ್ಲಿ ತನ್ನ ವಖಾರವನ್ನು ಸ್ಥಾಪಿ ಸಿತು. ಆ ಬಳಿಕ ೧೬೩೯ರಲ್ಲಿ ಹಿಂದುಸ್ಥಾನದ ಪೂರ್ವಭಾಗದಲ್ಲಿ ಕಾರೊಮಾಂಡಲ್ ತೀರದ ಮೇಲೆ **ಮದ್ರಾಸದಲ್ಲಿ** ಎರಡನೆಯ ವಖಾರವನ್ನು ಇಟ್ಟಿತು. ಈ ವಖಾ ರದ ರಕ್ಷಣೆಗೋಸುಗ **ಫೋರ್ಟ ಸೇಂಟ್ ಜಾರ್ಜ** ಎಂಬ ಕೋಟೆ ಕಟ್ಟಿಸ ಲ್ಪಟ್ಟಿತು. ೧೬೪೦ರಲ್ಲಿ ಪೋರ್ತುಗಾಲ್ ರಾಷ್ಟ್ರವು ಸ್ಪೇನದಿಂದ ಸ್ವತಂತ್ರವಾಯಿತು, ಮತ್ತು ಮುಂದೆ ಅದು ಇಂಗ್ಲಂಡಿನೊಡನೆ ಸ್ನೇಹವನ್ನು ಮಾಡಿಕೊಂಡಿತು. ೧೬೬೨ ರಲ್ಲಿ ಪೋರ್ತುಗೀಜ ರಾಜಕನ್ಯೆಯಾದ ಕಥರಿನ್ ಬ್ರಿಗಾಂಝಾ ಇವಳನ್ನು ಇಂಗ್ಲಂಡಿನ ರಾಜನಾದ **೨ನೆಯ ಚಾರ್ಲಸನು** ಮದುವೆಯಾದನು. ಆ ಸಮಯ ದಲ್ಲಿ **ಮುಂಬಯಿ** ನಡುಗಡ್ಡೆ ಚಾರ್ಲಸನಿಗೆ ವರದಕ್ಷಿಣೆಯಾಗಿ ದೊರೆಯಿತು. ಚಾರ್ಲಸನು ಈ ನಡುಗಡ್ಡೆಯನ್ನು ೧೬೬೮ರಲ್ಲಿ ಈಸ್ಟ ಇಂಡಿಯಾ ಕಂಪನಿಗೆ ಬಾಡಿಗೆಯಿಂದ ಕೊಟ್ಟನು. ಮುಂಬಯಿ ನಡುಗಡ್ಡೆ ಹಿಂದುಸ್ಥಾನದ ಭೂಮಿ ಯಿಂದ ಒತ್ತಟ್ಟಿಗೆ ಸಿಡಿದು ನಿಂತಿರುವ ಬಂದರವು ಆಗಿರುವುದು. ಇಲ್ಲಿ ಮೊಗಲ ಬಾದಶಹರಿಂದಾಗಲಿ ಮರಾಠರಿಂದಾಗಲಿ ತೊಂದರೆಯಾಗುವ ಸಂಭವವು ಇರ ಲಿಲ್ಲವಾದುದರಿಂದ ಸುರತದ ಬದಲಾಗಿ ಪಶ್ಚಿಮದಂಡೆಯ ಮೇಲೆ ಈ ಸ್ಥಳವೆ ಈಸ್ಟ ಇಂಡಿಯಾ ಕಂಪನಿಯ ಮುಖ್ಯ ಸ್ಥಳವಾಯಿತು. ೧೬೯೦ರಲ್ಲಿ ಬಂಗಾಲದ ಸುಬೇದಾರನು ಈಸ್ಟ ಇಂಡಿಯಾ ಕಂಪನಿಗೆ ಗಂಗಾನದಿಯ ಮುಖದ ಬಳಿಯಲ್ಲಿ ೩ ಹಳ್ಳಿಗಳನ್ನು ಕೊಂಡುಕೊಳ್ಳಲು ಅಪ್ಪಣೆಯನ್ನಿತ್ತುದರಿಂದ ಈಸ್ಟ ಇಂಡಿಯಾ

ಕಂಪನಿ ಅವನ್ನು ಕೊಂಡು ಅಲ್ಲಿ **ಫೋರ್ಟ ವಿಲಿಯಮ್** ಎಂಬ ಕೋಟೆಯನ್ನು ಕಟ್ಟಿಸಿತು. ಈ ಕೋಟೆಯ ಸುತ್ತಲು ಮುಂದೆ ಕಾಲಕ್ರಮದಿಂದ **ಕಲಕತ್ತಾ** ಪಟ್ಟಣವು ನಿರ್ಮಿತವಾಯ್ತು. ಈ ಬಗೆಯಾಗಿ ಮುಂಬಯಿ, ಮದ್ರಾಸ ಮತ್ತು ಕಲಕತ್ತೆ ಇವು ಹಿಂದುಸ್ಥಾನದಲ್ಲಿಯ ಈಸ್ಟ ಇಂಡಿಯಾ ಕಂಪನಿಯ ಮಹತ್ವದ




ಪೌರ್ವಾತ್ಯ ವ್ಯಾಪಾರದ ವಿಷಯದಲ್ಲಿ ಈಸ್ಟ ಇಂಡಿಯಾ ಕಂಪನಿಯ ಪ್ರಾರಂಭದ ಪ್ರಯತ್ನಗಳು

ದೊಡ್ಡ ಸ್ಥಳಗಳಾದುವು, ಮತ್ತು ಇವುಗಳ ಮುಖಾಂತರವಾಗಿ ಮಹರಾಷ್ಟ್ರ, ಕರ್ನಾಟಕ ಮತ್ತು ಬಂಗಾಲ ಇವುಗಳೊಡನೆಯೂ ಇನ್ನುಳಿದ ಪ್ರಾಂತಗಳೊಡನೆಯೂ ವ್ಯಾಪಾರದ ಸಂಬಂಧ ಉಂಟಾಯ್ತು.

**ಫ್ರೆಂಚ ಈಸ್ಟ ಇಂಡಿಯಾ ಕಂಪನಿ**—ಪೋರ್ತುಗೀಜ, ಡಚ್ ಮತ್ತು ಇಂಗ್ಲಿಶ್ ಜನರಂತೆ ಪೌರ್ವಾತ್ಯ ದೇಶಗಳೊಡನೆ ವ್ಯಾಪಾರ ಮಾಡಲು ಫ್ರೆಂಚರು ೧೬೬೪ರಲ್ಲಿ **ಫ್ರೆಂಚ ಈಸ್ಟ ಇಂಡಿಯಾ ಕಂಪನಿಯನ್ನು** ಸ್ಥಾಪಿಸಿದರು. ಈ ಕಂಪನಿಗೆ ಫ್ರಾನ್ಸಿನ ರಾಜನಾದ ೧೪ನೆಯ ಲುಯಿಯ ಪೂರ್ಣವಾದ ಬೆಂಬಲವಿದ್ದಿತು. ೧೬೭೪ರಲ್ಲಿ ಫ್ರೆಂಚರು ಹಿಂದುಸ್ಥಾನದ ಪೂರ್ವತೀರದ ಮೇಲೆ **ಪಾಂಡೆಚರಿ** ಎಂಬಲ್ಲಿ ವ್ಯಾಪಾರ ಕೇಂದ್ರವನ್ನು ಸ್ಥಾಪಿಸಿದರು. ಆ ಬಳಿಕ ಫ್ರೆಂಚ ಮತ್ತು ಇಂಗ್ಲಿಶ್ ಇವರ ನಡುವೆ ವ್ಯಾಪಾರದ ವಿಷಯದಲ್ಲಿ ಸ್ಪರ್ಧೆ ಪ್ರಾರಂಭವಾಗಿ ಕಲಹಗಳು ಹುಟ್ಟಿದುವು.

**ಉಳಿದ ಇಂಗ್ಲಿಶ್ ವ್ಯಾಪಾರದ ಕಂಪನಿಗಳು**—ಈಸ್ಟ ಇಂಡಿಯಾ ಕಂಪನಿಯಂತೆ ಪರದೇಶಗಳೊಡನೆ ವ್ಯಾಪಾರಮಾಡಲು ಮತ್ತೆ ಬೇರೆಬೇರೆ ಕಂಪನಿಗಳು ಇಂಗ್ಲಂಡಿನಲ್ಲಿ ಸ್ಥಾಪಿಸಲ್ಪಟ್ಟುವು. ಬಾಲ್ಟಿಕ್ ಸಮುದ್ರದ ನೆರೆಯಲ್ಲಿಯ ದೇಶಗಳೊಡನೆ ವ್ಯಾಪಾರಮಾಡಲು **ಈಸ್ಟ ಲಂಡ ಕಂಪನಿ** ಸ್ಥಾಪಿಸಲ್ಪಟ್ಟಿತು. ರಶಿಯದೊಡನೆ ವ್ಯಾಪಾರಮಾಡಲು **ಮಾಸ್ಕೋವಿಚ್** ಕಂಪನಿ ಹುಟ್ಟಿತು. ಸಿರಿಯಾ ಮತ್ತು ತುರ್ಕಸ್ಥಾನಗಳೊಂದಿಗೆ ವ್ಯಾಪಾರಮಾಡಲು **ಲೀವ್ಹಂಟ್** ಕಂಪನಿ ಅಸ್ತಿತ್ವದಲ್ಲಿ ಬಂದಿತು. ಆಫ್ರಿಕೆಯ ಪಶ್ಚಿಮ ತೀರದಲ್ಲಿ ನಿಗ್ರೋಜನರನ್ನು ಹಿಡಿದು ಅವರನ್ನು ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿ ಗುಲಾಮರಾಗಿ ಮಾರುವ ವ್ಯಾಪಾರವನ್ನು ಸ್ಪೇನದೇಶವು ಪ್ರಾರಂಭಿಸಿತು. ಹಾಕಿನ್ಸ ಎಂಬ ಇಂಗ್ಲಿಶ್ ಮನುಷ್ಯನೂ ಈ ವ್ಯಾಪಾರವನ್ನು ಆರಂಭಿಸಿದನು. ಹಸ್ತಿದಂತ, ಚಿನ್ನ ಮತ್ತು ಮೆಣಸು ಈ ವಸ್ತುಗಳಿಗೋಸುಗ ಆಫ್ರಿಕೆಯ ಪಶ್ಚಿಮತೀರದೊಡನೆ ಇಂಗ್ಲಿಶ್ ಜನರು ವ್ಯಾಪಾರವನ್ನಾರಂಭಿಸಿದರು. ೧೬೫೧ರಲ್ಲಿ **ಸೇಂಟ ಹೆಲೆನಾ** ಈ ನಡುಗಡ್ಡೆಯಲ್ಲಿ ಇಂಗ್ಲಿಶರು ತಮ್ಮದೊಂದು ಸ್ಥಾನವನ್ನು ಸ್ಥಾಪಿಸಿದರು. ಮುಂದೆ ಅದು ಪೂರ್ವದ ಕಡೆಯ ಜಲಮಾರ್ಗದ ಮೇಲಿನ ಒಂದು ಮಹತ್ವದ ಸ್ಥಾನವಾಯಿತು.

## ವಸಾಹತುಗಳು.

**ವರ್ಜಿನಿಯಾ**—ವ್ಯಾಪಾರದಂತೆ ಇಂಗ್ಲಂಡಿನ ವಸಾಹತುಗಳ ಮತ್ತು ಸಾಮ್ರಾಜ್ಯದ ಅಡಿಗಲ್ಲು ಸ್ಟುವರ್ಟರ ಕಾಲದಲ್ಲಿಯೆ ಸ್ಥಾಪಿಸಲ್ಪಟ್ಟಿತು. ಎಲಿಝಬೆಥ್ ರಾಣಿಯ ಆಳ್ಕೆಯಲ್ಲಿ **ಸರ ವಾಲ್ಟರ ರ್‍ಯಾಲೆ** ಇವನು ಉತ್ತರ ಅಮೇರಿಕೆಯಲ್ಲಿ ೧೫೮೫ರಲ್ಲಿ ಮತ್ತು ೧೫೮೭ರಲ್ಲಿ ವರ್ಜಿನಿಯಾ ಎಂಬ ವಸಾಹತನ್ನು ಸ್ಥಾಪಿಸಲು ಪ್ರಯತ್ನಿಸಿದನು, ಆದರೆ ಅವನಿಗೆ ಯಶವು ದೊರೆಯಲಿಲ್ಲ. ಮುಂದೆ ೧ನೆಯ ಜೇಮ್ಸನ ಆಳ್ಕೆಯಲ್ಲಿ ೧೬೦೭ರಲ್ಲಿ **ಕಪ್ಟನ್ ಸ್ಮಿಥ್** ಎಂಬವನು ಅದೇ ಸ್ಥಳದಲ್ಲಿ ವರ್ಜಿನಿಯಾ ವಸಾಹತನ್ನು ಸ್ಥಾಪಿಸಿದನು. ಈ ಸ್ಥಳದಲ್ಲಿಯ ಹವೆ ರೋಗಕಾರಕವಾಗಿದ್ದಿತು, ಮತ್ತು ವಸಾಹತನ್ನು ಮಾಡಿಕೊಂಡಿದ್ದ ಜನರಿಗೆ ಅಮೇರಿಕೆಯ **ರೆಡ್ ಇಂಡಿಯನ್** ಜನರಿಂದ ಮೊದಮೊದಲು ಬಲು ತೊಂದರೆಯಾಯಿತು, ಮತ್ತು ಅನೇಕ ಕಷ್ಟಗಳನ್ನು ಅವರು ಸಹಿಸಬೇಕಾಯಿತು. ಆದರೆ ಮುಂದೆ ತಂಬಾಕದ ಸಾಗುವಳಿಗೋಸುಗ ಈ ವಸಾಹತು ಪ್ರಸಿದ್ಧಿಯನ್ನು ಪಡೆಯಿತು. ಇಲ್ಲಿಯ ತೋಟಗಳಲ್ಲಿ ಕೆಲಸಮಾಡಲು ಮುಂದೆ ಅಮೇರಿಕೆಯಿಂದ ನಿಗ್ರೋ ಗುಲಾಮರು ತರಲ್ಪಟ್ಟರು.

**ನ್ಯೂ ಇಂಗ್ಲಂಡ್ ವಸಾಹತುಗಳು**—ಇಂಗ್ಲಂಡಿನಲ್ಲಿಯ ಧಾರ್ಮಿಕ ಮತ್ತು ರಾಜಕೀಯ ಪೀಡೆಗೆ ಬೇಸತ್ತು ಪ್ಯುರಿಟನ್ ಜನರು ದೇಶತ್ಯಾಗವನ್ನು ಮಾಡಿ ಉತ್ತರ ಅಮೇರಿಕೆಯಲ್ಲಿ **ಹಡಸನ್** ನದಿಯ ಉತ್ತರಕಡೆಯ ಪ್ರದೇಶ ದಲ್ಲಿ ೧೬೨೦ರಿಂದ್ದ ೧೬೪೦ರ ವರೆಗಿನ ಅವಧಿಯಲ್ಲಿ ನಾಲ್ಕು ವಸಾಹತುಗಳನ್ನು ಸ್ಥಾಪಿಸಿದರು. **ಮಸಾಚುಸೆಟ್ಸ, ನ್ಯೂ ಹೆಂಪ್‌ಶಾಯರ್, ಕನೆಕ್ಟಿಕಟ್** ಮತ್ತು **ರ್‍ಹೋಡ ಐಲಂಡ** ಇವೆ ಆ ನಾಲ್ಕು ವಸಾಹತುಗಳು. ಇವಕ್ಕೆ **ನ್ಯೂ ಇಂಗ್ಲಂಡ್** ವಸಾಹತುಗಳೆಂದು ಹೆಸರು ಬಂದಿತು. ಈ ಪ್ಯುರಿಟನ್ ಜನರಲ್ಲಿ ಪಿಲ್ಗ್ರಿಮ್ ಫಾದರ್ಸ ಇವರು ಮೊದಲು ಬಂದವರು. ಅವರು ಕಾಡ್ ಭೂಶಿರದ ಬಳಿಯಲ್ಲಿ ೧೬೨೦ರಲ್ಲಿ **ನ್ಯೂ ಪ್ಲೀಮಥ್** ಎಂಬ ವಸಾಹತನ್ನು ಸ್ಥಾಪಿಸಿದರು. ಇದುವೆ ಬೆಳೆದು ಮುಂದೆ ಮಸಾಚುಸೆಟ್ಸ ಎಂಬ ವಸಾಹತಾಯಿತು.

**ಉಳಿದ ವಸಾಹತುಗಳು**—ವರ್ಜಿನಿಯಾ ಮತ್ತು ನ್ಯೂ ಇಂಗ್ಲಂಡ ವಸಾಹತುಗಳಂತೆ ಸ್ಟುವರ್ಟರ ಕಾಲದಲ್ಲಿ ಮತ್ತೆ ಬೇರೆ ಕೆಲವು ವಸಾಹತುಗಳು ಸ್ಥಾಪಿಸಲ್ಪಟ್ಟವು. ೧೬೩೨ರಲ್ಲಿ **ಬಾಲ್ಟಿಮೋರ** ಎಂಬ ರೋಮನ್ ಕಥಲಿಕನೊಬ್ಬನು ವರ್ಜಿನಿಯದ ಉತ್ತರಕ್ಕೆ **ಮೇರಿಲಂಡ** ಎಂಬ ವಸಾಹತನ್ನು ಸ್ಥಾಪಿಸಿದನು. ಇಂಗ್ಲಂಡಿನ ಅನೇಕ ರೋಮನ್ ಕಥಲಿಕರು ಈ ವಸಾಹತಿನಲ್ಲಿ ಇರಲು ಹೋದರು. ೧೬೬೩ರಲ್ಲಿ **ಕರೋಲಿನಾ** ಎಂಬ ವಸಾಹತು ಸ್ಥಾಪಿಸಲ್ಪಟ್ಟಿತು. ಇದುವೆ ಮುಂದೆ ಉತ್ತರ ಕರೋಲಿನಾ ದಕ್ಷಿಣ ಕರೋಲಿನಾ ಎಂದು ವಿಭಾಗಿಸಲ್ಪಟ್ಟಿತು. ವಿಲಿಯಮ್ ಪೆನ್ ಎಂಬವನು ಮೇರಿಲಂಡಿನ ಉತ್ತರಕ್ಕೆ **ಪೆನ್‌ಸಿಲ್ವೇನಿಯಾ** ಎಂಬ ವಸಾಹತನ್ನು ಸ್ಥಾಪಿಸಿದನು. ಡಚ್ ಜನರೊಡನೆ ಆದ ಯುದ್ಧದಲ್ಲಿ ಇಂಗ್ಲಿಶರು **ನ್ಯೂ ಆಮಸ್ಟರ್ಡಮ್** ಎಂಬ ವಸಾಹತನ್ನು ಅವರಿಂದ ತೆಗೆದುಕೊಂಡರು. ಬ್ರೇಡಾ ಒಪ್ಪಂದದಿಂದ (೧೬೬೭) ಅದು ಇಂಗ್ಲಿಶರ ಕಡೆಗೆ ಉಳಿಯಿತು. ಚಾರ್ಲಸ ರಾಜನ ತಮ್ಮನಾದ **ಜೇಮ್ಸ್ ಡ್ಯೂಕ್ ಆಫ್ ಯಾರ್ಕ** ಇವನ ಹೆಸರಿನಿಂದ ಅದು ನ್ಯೂ ಯಾರ್ಕ ಎಂದು ಪ್ರಸಿದ್ಧವಾಯ್ತು. ಈ ವಸಾಹತಿಯ ಬಳಿಯಲ್ಲಿಯೆ **ನ್ಯೂ ಜರ್ಸಿ** ಎಂಬ ವಸಾಹತು ಸ್ಥಾಪಿಸಲ್ಪಟ್ಟಿತು. ಮುಂದೆ ೧೭೧೩ರಲ್ಲಿ ಆದ ಯುಟ್ರೆಕ್ಟದ ಒಪ್ಪಂದದಿಂದ **ನೋವಾಸ್ಕೋಶಿಯಾ** ಮತ್ತು **ನ್ಯೂ ಫೌಂಡಲಂಡ** ಎಂಬ ವಸಾಹತುಗಳು ಇಂಗ್ಲಿಶರ ವಶದಲ್ಲಿ ಬಂದುವು.

**ಅಮೇರಿಕೆಯಲ್ಲಿಯ ವಸಾಹತುಗಳು ಮತ್ತು ಮಾತೃಭೂಮಿ**—ಸ್ಟುವರ್ಟರ ಆಳಿಕೆಯಲ್ಲಿ ಉತ್ತರ ಅಮೇರಿಕೆಯ ಪೂರ್ವ ತೀರದ ಮೇಲೆ ಇಂಗ್ಲಿಶರ ೧೨ ವಸಾಹತುಗಳು ಸ್ಥಾಪಿಸಲ್ಪಟ್ಟಿದ್ದುವು. ಈ ವಸಾಹತುಗಳನ್ನು ಎರಡು ವಿಭಾಗ

ಗಳಾಗಿ ಮಾಡಬಹುದು. ಹಡಸನ್ ನದಿಯ ಉತ್ತರ ಕಡೆಯ ವಸಾಹತುಗಳಿಗೆ ನ್ಯೂ ಇಂಗ್ಲಂಡ ವಸಾಹತುಗಳೆಂದು ಹೆಸರು. ಅವುಗಳಲ್ಲಿ ಪ್ಯುರಿಟನ್ ಪಂಥದವರ ವಸತಿ ಇದ್ದಿತು. ಧಾರ್ಮಿಕ ಮತ್ತು ರಾಜಕೀಯ ಪೀಡೆಗಳಿಗೆ ಬೇಸತ್ತ ಈ ಜನರು ಇಂಗ್ಲಂಡನ್ನು ಬಿಟ್ಟು ಇಲ್ಲಿಗೆ ಬಂದಿದ್ದರು. ಅವರು ಸ್ವತಂತ್ರವೃತ್ತಿಯವರಾಗಿದ್ದರು. ತಮ್ಮ ಮೇಲೆ ಮಾತೃಭೂಮಿಯ ನಿಯಂತ್ರಣವಿರಕೂಡದೆಂದು ಅವರಿಗೆ ಎನಿಸುತ್ತಿತ್ತು. ಹಡಸನ್ ನದಿಯ ದಕ್ಷಿಣದ ಕಡೆಯ ವಸಾಹತುಗಳಲ್ಲಿ ಕೆಲವನ್ನು ರಾಜನ ಪ್ರೇಮಕ್ಕೆಪಾತ್ರರಾದವರು ಸ್ಥಾಪಿಸಿದ್ದರು. ಅಲ್ಲಿ ರಾಜಪಕ್ಷದವರು ಮತ್ತೆ ಕೆಲವು ರೋಮನ್ ಕಥಲಿಕ್ ಪಂಥದವರು ಬಂದು ಇದ್ದರು. ಅಲ್ಲಿಯ ಭೂಮಿಗಳನ್ನು ಸಾಗುಗೊಳಿಸಿ ಬೆಳೆಗಳನ್ನು ಬೆಳಿಸಬೇಕೆಂದು ಅಲ್ಲಿಯವರ ವಿಚಾರವು. ಅದರಂತೆ ಅವರು ತಂಬಾಕು, ಹತ್ತಿ, ಸಕ್ಕರೆ ಮೊದಲಾದ ಪದಾರ್ಥಗಳನ್ನು ಸಿದ್ಧಗೊಳಿಸಲಾರಂಭಿಸಿದರು. ಅಮೇರಿಕೆಯಲ್ಲಿಯ ವಸಾಹತುಗಳು ಮಾತೃಭೂಮಿಯ ಲಾಭಕ್ಕೋಸುಗ ಇರುವುವೆಂದು ಆ ಕಾಲದಲ್ಲಿ ಎಲ್ಲ ರಾಷ್ಟ್ರಗಳ ತಿಳಿವಳಿಕೆ ಇದ್ದಿತು. ಆದುದರಿಂದ ಸ್ಪೇನ, ಫ್ರಾನ್ಸ, ಮತ್ತು ಇಂಗ್ಲಂಡ್ ಈ ರಾಷ್ಟ್ರಗಳು ತಮ್ಮ ತಮ್ಮ ವಸಾಹತುಗಳೊಡನೆ ಇತರ ಯಾವ ರಾಷ್ಟ್ರಗಳಿಗೂ ವ್ಯಾಪಾರ ಮಾಡಲು ಕೊಡುತ್ತಿರಲಿಲ್ಲ. ಕ್ರಾಮವೆಲ್ ಮತ್ತು ೨ನೆಯ ಚಾರ್ಲಸ ಇವರ ಆಳ್ಕೆಯಲ್ಲಿ ನ್ಯಾವಿಗೇಶನ್ ಕಾಯದೆ ರೂಢಿಯಲ್ಲಿ ಬಂದಿತು. ಆದುದರಿಂದ ಇಂಗ್ಲಿಶ ವಸಾಹತುಗಳೊಡನೆ ನಡೆಯುತ್ತಿದ್ದ ಸ್ಪನಿಶ್ ಮತ್ತು ಡಚ್ ಜನರ ವ್ಯಾಪಾರವೆಲ್ಲವು ಇಂಗ್ಲಿಶ್ ವ್ಯಾಪಾರಸ್ಥರ ಕೈಯಲ್ಲಿ ಬಂದಿತು. ೧೬೬೦ರಲ್ಲಿ ಕೌನ್ಸಿಲ್ ಆಫ್ ಫಾರಿನ್ ಪ್ಲಂಟೇಶನ್ (Council of Foreign Plantation) ಎಂಬ ಮಂಡಳವೊಂದು ಸ್ಥಾಪಿಸಲ್ಪಟ್ಟಿತು. ಈ ಮಂಡಳವು ವಸಾಹತುಗಳ ಕಾರಭಾರದಲ್ಲಿ ಕೈಹಾಕುತ್ತಿದ್ದುದರಿಂದ ವಸಾಹತುಗಳಿಗೂ ಮಾತೃಭೂಮಿಗೂ ಆಗಾಗ ಕಲಹಗಳುಂಟಾಗುತ್ತಿದ್ದುವು.

**ಅಮೇರಿಕೆಯಲ್ಲಿ ಇತರ ಯುರೋಪಿಯನ್ ರಾಷ್ಟ್ರಗಳ ವಸಾಹತುಗಳು**— ಇಂಗ್ಲಂಡಿನಂತೆ ಸ್ಪೇನ, ಪೋರ್ತುಗಾಲ ಮತ್ತು ಫ್ರಾನ್ಸ ಈ ರಾಷ್ಟ್ರಗಳು ಅಮೇರಿಕೆಯಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿದುವು. ಸ್ಪೇನ ಮತ್ತು ಪೋರ್ತುಗಾಲ ರಾಷ್ಟ್ರಗಳ ವಸಾಹತುಗಳು ದಕ್ಷಿಣ ಮತ್ತು ಮಧ್ಯ ಅಮೇರಿಕೆಯಲ್ಲಿ ಇದ್ದುವು. ಫ್ರೆಂಚರ ವಸಾಹತುಗಳು ಉತ್ತರ ಅಮೇರಿಕೆಯಲ್ಲಿ ಇಂಗ್ಲಿಶ ವಸಾಹತುಗಳ ಉತ್ತರಕ್ಕೂ ದಕ್ಷಿಣಕ್ಕೂ ಇದ್ದುವು. ಆದುದರಿಂದ ಈ ವಸಾಹತುಗಳ ವಿಷಯದಲ್ಲಿ ಫ್ರಾನ್ಸ ಮತ್ತು ಇಂಗ್ಲಂಡ್ ಇವುಗಳಲ್ಲಿ ಸ್ಪರ್ಧೆ ಪ್ರಾರಂಭವಾಯಿತು.

**ವೆಸ್ಟ ಇಂಡೀಜ ನಡುಗಡ್ಡೆಗಳು**—ಮಧ್ಯ ಅಮೇರಿಕೆಯ ಪೂರ್ವಕ್ಕಿರುವ ನಡುಗಡ್ಡೆಗಳಿಗೆ ವೆಸ್ಟ ಇಂಡೀಜ ನಡುಗಡ್ಡೆಗಳೆಂದು ಹೆಸರು. ಈ ನಡುಗಡ್ಡೆಗಳ ಶೋಧವನ್ನು ಮಾಡಿದವರು ಸ್ಪಾನಿಶ್ ಜನರು. ಆದರೆ ಅಲ್ಲಿ ಚಿನ್ನಬೆಳ್ಳಿಗಳು ದೊರೆಯವೆಂದು ಎನಿಸಿದುದರಿಂದ ಅವರು ಅದನ್ನು ದುರ್ಲಕ್ಷಿಸಿದರು. ಆ ಬಳಿಕ ಬಂದ ಡಚ್‌ಜನರ ದೃಷ್ಟಿ ಭೂಮಿಯನ್ನು ಸಾಗುಮಾಡಿ ಬೆಳೆಗಳನ್ನು ಬೆಳೆಸುವುದರ ಕಡೆಗೆ ಇರದೆ ವ್ಯಾಪಾರಮಾಡುವುದರ ಕಡೆಗಿದ್ದುದರಿಂದ ಅವರೂ ಈ ನಡುಗಡ್ಡೆಗಳ ಕಡೆಗೆ ಲಕ್ಷ್ಯವನ್ನು ಕೊಡಲಿಲ್ಲ. ಡಚ್ ಜನರ ತರುವಾಯದಲ್ಲಿ ನೌಕಾಪ್ರವಾಸದಲ್ಲಿ ಮುಂದುವರಿದ ಇಂಗ್ಲಿಶರ ಮತ್ತು ಫ್ರೆಂಚರ ಲಕ್ಷ್ಯವು ಭೂಮಿಗಳನ್ನು ಸಾಗುಮಾಡಿ ಬೆಳೆಗಳನ್ನು ಬೆಳೆಸುವುದರ ಕಡೆಗೂ ವಸಾಹತುಗಳನ್ನು ಸ್ಥಾಪಿಸುವ ಕಡೆಗೂ ಇದ್ದಿತಾದುದರಿಂದ ಈ ನಡುಗಡ್ಡೆಗಳ ಕಡೆಗೆ ಅವರ ಲಕ್ಷ್ಯವು ಹೋಯಿತು. ೧೬೦೫ರಲ್ಲಿ **ಬರಬೆಡೊಸ್** ನಡುಗಡ್ಡೆಯ ಕಡೆಗೆ ಕೆಲವು ಇಂಗ್ಲಿಶ ಪ್ರವಾಸಿಗಳು ಮೊದಲು ತಮ್ಮ ಹಡಗುಗಳನ್ನು ಒಯ್ದರು. ಮುಂದೆ ಕೆಲವು ವರ್ಷಗಳಲ್ಲಿಯೆ ಅವರು ಅಲ್ಲಿ ತಮ್ಮ ಬೀಡನ್ನು ನೆಲೆಗೊಳಿಸಿದರು. ಅದರಂತೆ **ಸೇಂಟ ಕಿಟಸ್, ನೇವಿಸ್, ಬಾರ್ಬುಡಾ, ಅಂಟಿಗ್ವಾ** ಮೊದಲಾದ ನಡುಗಡ್ಡೆಗಳಲ್ಲಿ ಇಂಗ್ಲಿಶರು ತಮ್ಮ ವಸಾಹತುಗಳನ್ನು ಸ್ಥಾಪಿಸಿದರು. ೧೬೫೫ರಲ್ಲಿ ಸಕ್ಕರೆಕ್ಕೋಸುಗ ಪ್ರಸಿದ್ಧವಾದ **ಜಮೇಕಾ** ನಡುಗಡ್ಡೆಯನ್ನೂ ಇಂಗ್ಲಿಶರು ಸ್ಪೇನದಿಂದ ಗೆದ್ದು ತೆಗೆದುಕೊಂಡರು. ವೆಸ್ಟ ಇಂಡೀಜ ನಡುಗಡ್ಡೆಗಳು ಉಷ್ಣಕಟಿಬಂಧದಲ್ಲಿರುವುದರಿಂದ ತಂಬಾಕು ಹತ್ತಿ ಮೊದಲಾದ ಪದಾರ್ಥಗಳು ಅಲ್ಲಿ ಕಸುವಿನಿಂದ ಬೆಳೆಯುತ್ತಿದ್ದುವು. ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿಯ ಮತ್ತು ಅಮೇರಿಕೆಯ ವಸಾಹತುಗಳಲ್ಲಿಯ ಹೊಲದೋಟಗಳಲ್ಲಿ ಕೆಲಸಮಾಡಲು ಆಫ್ರಿಕಾಖಂಡದಿಂದ ಹಿಡಿತಂದ ನಿಗ್ರೋ ಗುಲಾಮರು ಉಪಯೋಗಿಸಲ್ಪಡುತ್ತಿದ್ದರು. ಇದಲ್ಲದೆ ಇಂಗ್ಲಂಡಿನಲ್ಲಿ ಕಠಿಣ ಶಿಕ್ಷೆಗೆ ಗುರಿಯಾದವರು ಇಲ್ಲಿ ಕೆಲಸ ಮಾಡಲು ತರಲ್ಪಡುತ್ತಿದ್ದರು. ಆದುದರಿಂದ ಈ ವಸಾಹತುಗಳು ಬಹು ಲಾಭದಾಯಕವಾಗಿ ಪರಿಣಮಿಸಿದುವು.

**ಉಳಿದ ಸ್ಥಳಗಳು**—ಸ್ಟುವರ್ಟರ ಕಾಲದಲ್ಲಿ ಐರ್ಲಂಡಿನ ಮೇಲೆ ಇಂಗ್ಲಂಡಿನ ವರ್ಚಸ್ಸು ಸಂಪೂರ್ಣವಾಗಿ ನೆಲಸಿತು. ೧೭೧೩ರಲ್ಲಿ ಆದ ಯುಟ್ರೆಕ್ಟದ ಒಪ್ಪಂದದಿಂದ ಯುರೋಪಖಂಡದಲ್ಲಿ ಮಹತ್ವದ ಸ್ಥಳಗಳಾದ **ಜಿಬ್ರಾಲ್ಟರ** ಮತ್ತು **ಮಿನೋರ್ಕಾ** ಎಂಬುವು ಇಂಗ್ಲಿಶರ ವಶದಲ್ಲಿ ಬಂದುವು.

**ಸ್ಟುವರ್ಟರ ಕಾಲದಲ್ಲಿ ಸಾಮ್ರಾಜ್ಯದ ವೃದ್ಧಿ**—ಈ ಬಗೆಯಾಗಿ

ಇಂಗ್ಲಂಡು ಸ್ಟುವರ್ಟರ ಕಾಲದಲ್ಲಿ ವ್ಯಾಪಾರದ, ವಸಾಹತುಗಳ ಮತ್ತು ಗೆದ್ದು ತೆಗೆದುಕೊಂಡ ಪ್ರದೇಶಗಳ ವಿಷಯದಲ್ಲಿ ಬಹು ಪ್ರಮುಖ ಸ್ಥಾನವನ್ನು ಪಡೆದಿತ್ತು. ಆಫ್ರಿಕಾ, ಹಿಂದುಸ್ಥಾನ ಮೊದಲಾದ ದೂರದ ಎಡೆಗಳಲ್ಲಿಯೂ ಇಂಗ್ಲಿಶರು ತಮ್ಮ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಿದರು. ಉತ್ತರ ಅಮೇರಿಕೆಯಲ್ಲಿಯೂ ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿಯೂ ಅವರು ವಸಾಹತುಗಳನ್ನು ಸ್ಥಾಪಿಸಿ ಅಲ್ಲಿಯ ಸಂಪನ್ನವಾದ ಭೂಮಿಗಳನ್ನು ಸಾಗುಗೊಳಿಸಿದರು. ಐರ್ಲಂಡಿನಲ್ಲಿ ತಮ್ಮ ವರ್ಚಸ್ಸನ್ನು ಸಂಪೂರ್ಣವಾಗಿ ನೆಲೆಗೊಳಿಸಿದರು, ಮತ್ತು ಯುರೋಪ ದಲ್ಲಿಯ ಮಹತ್ವದ ಸ್ಥಾನಗಳಾದ ಜಿಬ್ರಾಲ್ಟರ ಮತ್ತು ಮಿನೋರ್ಕಾ ಇವನ್ನು ತಮ್ಮ ವಶದಲ್ಲಿ ತೆಗೆದುಕೊಂಡರು. ನ್ಯಾವಿಗೇಶನ್ ಕಾಯದೆಯನ್ನು ಮಾಡಿ ಅವರು ತಮ್ಮ ವ್ಯಾಪಾರಕ್ಕೂ ಹಡಗುಗಳನ್ನು ಕಟ್ಟುವ ವ್ಯವಸಾಯಕ್ಕೂ ಉತ್ತೇಜನವಿತ್ತರು. ಸಾಮರ್ಥ್ಯ, ಉತ್ಸಾಹ, ಕರ್ತೃತ್ವಶಕ್ತಿ, ಪ್ರಯತ್ನಸಾತತ್ಯ ಈ ಮೊದಲಾದ ಗುಣಗಳಿಂದ ಇಂಗ್ಲಂಡು ವ್ಯಾಪಾರ ವಸಾಹತುಗಳಲ್ಲಿ ತನಗಿಂತ ಮುಂದುವರಿದ ಪೋರ್ತುಗಾಲ, ಸ್ಪೇನ ಮತ್ತು ಹಾಲಂಡ ಈ ರಾಷ್ಟ್ರಗಳನ್ನು ಹಿಂದುಳಿಸಿತು, ಮತ್ತು ಮುಂದುವರಿಯುತ್ತಿದ್ದ ಫ್ರಾನ್ಸಿನೊಡನೆ ಸ್ಪರ್ಧೆಯನ್ನು ಆರಂಭಿಸಿತು.

---

## ಸಾರಾಂಶವು

ಪೋರ್ತುಗೀಜ ಮತ್ತು ಡಚ್‌ಜನರ ವ್ಯಾಪಾರವು—ಪೌರ್ವಾತ್ಯ ದೇಶಗಳ ಕಡೆಯ ಜಲಮಾರ್ಗವನ್ನು ಮೊದಲು ಶೋಧಿಸಿದವರು ಪೋರ್ತುಗೀಜರು. ಮೂರ ಮತ್ತು ಅರಬ ಜನರೊಡನೆ ವ್ಯಾಪಾರ ವಿಷಯಕ ಸ್ಪರ್ಧೆ. ಪೋರ್ತುಗಾಲದ ಮೇಲೆ ಸ್ಪೇನದ ವರ್ಚಸ್ಸು (೧೫೮೦—೧೬೪೦); ಆದರಿಂದ ವ್ಯಾಪಾರದ ಕಡೆಗೆ ದುರ್ಲಕ್ಷ್ಯವು. ಡಚ್ಚರು ತಮ್ಮ ವ್ಯಾಪಾರಾಭಿವೃದ್ಧಿಗೆ ಈ ಸಂಧಿಯನ್ನು ಸಾಧಿಸಿದರು. ಡಚ್ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ. ಜಾವಾ, ಸುಮಾತ್ರಾ ನಡುಗಡ್ಡೆಗಳೊಡನೆ ವ್ಯಾಪಾರವು, ಬಟೇವಿಯಾ ವ್ಯಾಪಾರದ ಕೇಂದ್ರವು. ಯುರೋಪದಲ್ಲಿ ಬೇರೆ ಬೇರೆ ರಾಷ್ಟ್ರಗಳಿಗೆ ಸರಕುಗಳನ್ನು ಮುಟ್ಟಿಸುವ ವ್ಯವಸಾಯವು ಡಚ್ ಜನರ ಕೈಯಲ್ಲಿ.

ಇಂಗ್ಲಿಶರ ವ್ಯಾಪಾರವು—ಇಂಗ್ಲಿಶ್ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ (೧೬೦೦). ಡಚ್ಚರೊಡನೆ ವ್ಯಾಪಾರ ವಿಷಯಕ ಸ್ಪರ್ಧೆ; ಡಚ್ ಜನರ

ವ್ಯಾಪಾರವನ್ನು ಮುಳುಗಿಸಲು ನ್ಯಾವಿಗೇಶನ್ ಕಾಯದೆಗಳು ೧೬೫೧ ಮತ್ತು ೧೬೬೦, ಮತ್ತು ಡಚ್ ಜನರೊಡನೆ ಯುದ್ಧಗಳು ೧೬೫೨—೧೬೫೪; ೧೬೬೫—೬೭. ಜಾವಾ ಸುಮಾತ್ರಾ ನಡುಗಡ್ಡೆಗಳ ಕಡೆಗೆ ಡಚ್ ಜನರ ಲಕ್ಷ್ಯವು. ಹಿಂದುಸ್ಥಾನದ ಕಡೆಗೆ ಇಂಗ್ಲಿಶರ ಲಕ್ಷ್ಯವು.

ಹಿಂದುಸ್ಥಾನದಲ್ಲಿಯ ವ್ಯಾಪಾರಕೇಂದ್ರಗಳು — ೧೬೧೨ರಲ್ಲಿ ಸುರತ, ೧೬೩೯ರಲ್ಲಿ ಮದ್ರಾಸ, ೧೬೬೮ರಲ್ಲಿ ಮುಂಬಯಿ, ೧೬೯೦ರಲ್ಲಿ ಕಲಕತ್ತೆ.

೧೬೬೪ರಲ್ಲಿ ಫ್ರೆಂಚ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ; ಇಂಗ್ಲಿಶರ ಮತ್ತು ಫ್ರೆಂಚರ ನಡುವೆ ಸ್ಪರ್ಧೆ.

ಇಂಗ್ಲಿಶರ ಇತರ ವ್ಯಾಪಾರ ಕಂಪನಿಗಳು — ಬಾಲ್ಟಿಕ್ ಸಮುದ್ರದೊಡನೆ ಈಸ್ಟ ಲ್ಯಾಂಡ ಕಂಪನಿಯು, ರಶಿಯದೊಡನೆ ಮಾಸ್ಕೊವಿಚ್ ಕಂಪನಿಯು, ಸೀರಿಯಾ ಪ್ರಾಂತದೊಡನೆ ಮತ್ತು ತುರ್ಕಸ್ಥಾನದೊಡನೆ ಲೀವ್ಹಂಟ ಕಂಪನಿಯ ವ್ಯಾಪಾರವು.

ವಸಾಹತುಗಳು — ಉತ್ತರ ಅಮೇರಿಕೆಯಲ್ಲಿ.

ವರ್ಜಿನಿಯಾ — ಸರ್ ವಾಲ್ಟರ್ ರಾಲೆ ಇವನು ಇಲ್ಲಿ ವಸಾಹತನ್ನು ಸ್ಥಾಪಿಸಲು ಪ್ರಯತ್ನಿಸಿದುದು ೧೫೮೪. ೧೬೦೭ರಲ್ಲಿ ಸ್ಮಿಥನು ಅಲ್ಲಿ ವಸಾಹತನ್ನು ಸ್ಥಾಪಿಸಿದನು. ತಂಬಾಕು ಹತ್ತಿಗಳ ಸಾಗುವಳಿ.

ನ್ಯೂ ಇಂಗ್ಲಂಡ್ ವಸಾಹತುಗಳು — ೧೬೨೦ರಲ್ಲಿ 'ಪಿಲ್ಗ್ರಿಮ್ ಫಾದರ್ಸ'ರ ಮೆಸಾಚುಸೆಟ್ಸ (ನ್ಯೂಪ್ಲೀಮಥ್) ವಸಾಹತು. ೧೬೨೦ರಿಂದ ೧೬೪೦ ನ್ಯೂ ಹ್ಯಾಂಪಶಾಯರ, ಕನೆಕ್ಟಿಕಟ್, ರ್‍ಹೋಡ ಐಲಂಡ ಈ ವಸಾಹತುಗಳು. ಧಾರ್ಮಿಕ ಮತ್ತು ರಾಜಕೀಯ ಕಾರಣಗಳಿಂದ ಪ್ಯುರಿಟನ್ ಪಂಥದವರು ಇಲ್ಲಿಗೆ ಬಂದರು.

ಇತರ ವಸಾಹತುಗಳು — ಮೇರಿಲ್ಯಾಂಡ (೧೬೩೨); ಕ್ಯಾರೋಲಿನಾ (೧೬೬೩); ಪೆನ್ಸಿಲ್ವ್ಯಾನಿಯಾ; ನ್ಯೂ ಯಾರ್ಕ (ನ್ಯೂ ಆಮ್‌ಸ್ಟರಡಂ) ಬ್ರೇಡಾ ಎಂಬಲ್ಲಿಯ ಒಪ್ಪಂದದಿಂದ; ನ್ಯೂಫೌಂಡಲಂಡ ಮತ್ತು ನೋವ್ಹಾಸ್ಕೊಶಿಯಾ ಇವು ಯುಟ್ರೆಕ್ಟದ ಒಪ್ಪಂದದಿಂದ. ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿ ಬರ್ಮ್ಯುಡಾಸ್, ಜಮೇಕಾ ಮೊದಲಾದ ನಡುಗಡ್ಡೆಗಳು; ಅವುಗಳಲ್ಲಿ ಉಷ್ಣಕಟಿಬಂಧದಲ್ಲಿ ಬೆಳೆವ ಬೆಳೆಗಳ ಸಾಗುವಳಿ ಮತ್ತು ಹೊಲದೋಟಗಳಲ್ಲಿ ಕೆಲಸಮಾಡಲು ನಿಗ್ರೋ ಗುಲಾಮರು ಮತ್ತು ಕಠಿಣ ಶಿಕ್ಷೆಗೆ ಗುರಿಯಾದವರು.

ಇತರ ಯುರೋಪಿಯನ್ ರಾಷ್ಟ್ರಗಳ ವಸಾಹತುಗಳು—ದಕ್ಷಿಣ ಮತ್ತು ಮಧ್ಯ ಅಮೇರಿಕಗಳಲ್ಲಿ ಸ್ಪೇನ ಮತ್ತು ಪೋರ್ತುಗಾಲದ ವಸಾಹತುಗಳು; ಉತ್ತರ ಅಮೇರಿಕೆಯಲ್ಲಿ ಫ್ರಾನ್ಸಿನ ವಸಾಹತುಗಳು—ಕೆನಡಾ, ಲೂಸಿಯಾನಾ.

ವಸಾಹತುಗಳ ವಿಷಯದ ನೀತಿ—ವಸಾಹತುಗಳು ಮಾತೃಭೂಮಿಯ ಲಾಭಕ್ಕೋಸುಗ ಇರುವುವೆಂದು ಎಲ್ಲ ಯುರೋಪಿಯನ್ ರಾಷ್ಟ್ರಗಳ ತಿಳಿವಳಿಕೆ. ಈ ಕಾರಣದಿಂದ ಅವುಗಳ ಮೇಲೆ ವ್ಯಾಪಾರ ವಿಷಯಕ ಮತ್ತು ರಾಜಕೀಯ ನಿಯಂತ್ರಣವು. "ನ್ಯಾವಿಗೇಶನ್" ಕಾಯದೆಗಳು.

---

# ೧೭ನೆಯ ಪ್ರಕರಣವು

## ಸ್ಟುವರ್ಟ ಕಾಲದಲ್ಲಿಯ ಸಾಮಾಜಿಕ ಸ್ಥಿತಿ

### ಲೋಕ ಸಮಾಜವು, ಪಟ್ಟಣಗಳು, ಉದ್ಯೋಗ-ವ್ಯವಸಾಯಗಳು, ಮಾರ್ಗಗಳು, ಮತ್ತು ಪ್ರವಾಸದ ಸಾಧನಗಳು.

**ಲೋಕ ಸಮಾಜವು** — ಸ್ಟುವರ್ಟರ ಕಾಲದಲ್ಲಿ ಇಂಗ್ಲಂಡಿನ ಜನಸಂಖ್ಯೆ ಸುಮಾರು ೬೦ ಲಕ್ಷವಾಗಿದ್ದಿತು. ಅದರಲ್ಲಿ ಸುಮಾರು ೧೫ ಲಕ್ಷ ಜನರು ಪಟ್ಟಣಗಳಲ್ಲಿ ವಾಸಿಸುತ್ತಿದ್ದರು, ಉಳಿದವರು ಹಳ್ಳಿಗಳಲ್ಲಿ ಒಕ್ಕಲತನದಿಂದ ಜೀವನ ವನ್ನು ಸಾಗಿಸುತ್ತಿದ್ದರು. ಸ್ಟುವರ್ಟರ ಕಾಲದಲ್ಲಿ ಪ್ರಾರಂಭದಲ್ಲಿ ಬಹುಜನ ಸಮಾಜದ ಮುಖ್ಯ ವ್ಯವಸಾಯವು ಒಕ್ಕಲತನವೆ ಆಗಿದ್ದಿತು. ಸರದಾರರು (ಲಾರ್ಡ್ಸ್), ಹಳ್ಳಿಗಳಲ್ಲಿಯ ಸುಖವಸ್ತುಜನರು ಮತ್ತು ಭೂಮಿಗಳ ಒಡೆಯರು, ಧರ್ಮಾಧಿಕಾರಿಗಳು, ಪಟ್ಟಣಗಳಲ್ಲಿ ವಾಸಿಸುವ ವ್ಯಾಪಾರಸ್ಥರು, ಕಿರುಕುಳ ಉದ್ಯೋಗ-ವ್ಯವಸಾಯಗಳನ್ನು ಮಾಡುವ ಕೆಲಸಗಾರರು ಮತ್ತು ಒಕ್ಕಲಿಗರು, ಕೂಲಿಕಾರರು, ಈ ಬಗೆಯಾಗಿ ಇಂಗ್ಲಂಡಿನ ಜನರಲ್ಲಿ ಮುಖ್ಯ ವರ್ಗಗಳಾಗಿದ್ದವು. ರಾಜಕೀಯ ಸತ್ತೆ ಸರದಾರರ, ಸುಖವಸ್ತುಜನರ ಮತ್ತು ಧರ್ಮಾಧಿಕಾರಿಗಳ ಕೈಯಲ್ಲಿದ್ದಿತು. ಪಾರ್ಲಿಮೆಂಟಿನ ಸದಸ್ಯರು, ಸೈನ್ಯದಲ್ಲಿಯ ಮತ್ತು ಹಡಗುಪಡೆ ಯಲ್ಲಿಯ ಅಧಿಕಾರಿಗಳು, ಧರ್ಮಾಧಿಕಾರಿಗಳು, ನ್ಯಾಯಾಧೀಶರು ಮತ್ತು ಉಳಿದ ಮುಲ್ಕಿ ಅಧಿಕಾರಿಗಳು ಮೊದಲಾದ ಅಧಿಕಾರಸ್ಥರು ಈ ವರ್ಗಗಳಿಂದಲೆ ಬರು ತ್ತಿದ್ದರು. ವ್ಯಾಪಾರೋದ್ಯೋಗಗಳು ಕ್ರಮದಿಂದ ಬೆಳೆಯುತ್ತ ಹೋದುದರಿಂದ ಮಧ್ಯಮ ವರ್ಗವುಂಟಾಯಿತು. ಮತ್ತು ಈ ವರ್ಗದವರು ಮುಂದೆ ಮುಂದೆ ಪ್ರಗತಿಯನ್ನು ಪಡೆದರು. ಪಾರ್ಲಿಮೆಂಟಿನ ಮೇಲೆ ಈ ವರ್ಗದವರ ವರ್ಚಸ್ಸು ಉಂಟಾಗಲಾರಂಭಿಸಿತು.

**ಪಟ್ಟಣಗಳು** — ಸ್ಟುವರ್ಟರ ಕಾಲದ ಆರಂಭದಲ್ಲಿ ಪಟ್ಟಣಗಳ ಸಂಖ್ಯೆ ಬಹು ಅಲ್ಪವಾಗಿದ್ದಿತು, ಆದರೆ ಮುಂದೆ ಮುಂದೆ ಅದು ಬೆಳೆಯತೊಡಗಿತು. **ಲಂಡನ್** ಪಟ್ಟಣವು ಎಲ್ಲವುಗಳಿಗಿಂತ ದೊಡ್ಡದಾಗಿದ್ದಿತು. ಲಂಡನ್ ಪಟ್ಟಣವು ಪರ ರಾಷ್ಟ್ರೀಯ ವ್ಯಾಪಾರದ, ಉದ್ಯೋಗ-ವ್ಯವಸಾಯಗಳ ಮತ್ತು ರಾಜಧಾನಿಯ ಸ್ಥಳವಾಗಿದ್ದುದರಿಂದ ಅದರ ಮಹತ್ವವು ಬಹಳವಾಗಿ ಹೆಚ್ಚಿತ್ತು. ಆ ಕಾಲದಲ್ಲಿ

ಅದರ ಜನಸಂಖ್ಯೆ ೫ ಲಕ್ಷವಾಗಿದ್ದಿತು, ಮತ್ತು ಈ ಪಟ್ಟಣದೊಳಗಿಂದ ಹರಿವ ಥೇಮ್ಸನದಿಯ ಮೇಲೆ ಆಗ ಒಂದೆ ಒಂದು ಸೇತುವೆ ಇದ್ದಿತು. ಲಂಡ ನಿನ ತರುವಾಯದಲ್ಲಿ ಬ್ರಿಸ್ಟಲ್, ನಾರ್ವಿಚ್ ಇವು ದೊಡ್ಡ ಪಟ್ಟಣಗಳಾಗಿದ್ದುವು. ಬ್ರಿಸ್ಟಲ್ ಪಟ್ಟಣವು ಪಶ್ಚಿಮ ಸಮುದ್ರತೀರದಲ್ಲಿ ಬಂದರವಾಗಿದ್ದು ಪರರಾಷ್ಟ್ರೀಯ ವ್ಯಾಪಾರ ವಿಷಯದಲ್ಲಿ ಪ್ರಸಿದ್ಧವಾಗಿದ್ದಿತು. ನಾರ್ವಿಚ್ ಪಟ್ಟಣವು ಉಣ್ಣೆಯ ವಸ್ತ್ರಗಳನ್ನು ನೇಯುವ ವಿಷಯದಲ್ಲಿ ಹೆಸರಾಗಿತ್ತು. ಈ ಪಟ್ಟಣಗಳಲ್ಲಿ ಪ್ರತಿ ಯೊಂದರಲ್ಲಿ ಜನಸಂಖ್ಯೆ ಸುಮಾರು ೩೦ ಸಾವಿರ ಆಗಿದ್ದಿತು. ಪಟ್ಟಣಗಳೊಳಗಿನ ಬೀದಿಗಳು ಕಿರಿದಾಗಿಯೂ ಅಸ್ವಚ್ಛವಾಗಿಯೂ ಇದ್ದುವು. ಆದುದರಿಂದ ಆಗಾಗ ರೋಗಗಳು ಹುಟ್ಟಿ ಹಬ್ಬುತ್ತಿದ್ದುವು. ರಾತ್ರಿಯಲ್ಲಿ ಪಟ್ಟಣಗಳ ಬೀದಿಗಳಲ್ಲಿ ದೀಪ ಗಳನ್ನು ಹಚ್ಚುವ ರೂಢಿ ಇರಲಿಲ್ಲ. ಕಳವುಸುಲಿಗೆಗಳು ಆಗಾಗ ಆಗುತ್ತಿದ್ದುವು.

**ಉದ್ಯೋಗ-ವ್ಯವಸಾಯಗಳು**—ಟ್ಯೂಡರರ ಕಾಲದಲ್ಲಿ ಒಕ್ಕಲತನವೆ ಬಹುಜನಸಮಾಜದ ಮುಖ್ಯ ವ್ಯವಸಾಯವಾಗಿದ್ದಿತು. ಮುಂದೆ ಮುಂದೆ ಕುರಿ ಗಳನ್ನು ಸಾಕಿ ಉಣ್ಣೆಯನ್ನು ಹುಟ್ಟಿಸುವ ಕೆಲಸದ ಕಡೆಗೆ ಜನರ ಲಕ್ಷ್ಯವು ಹೋಗಲಾರಂಭಿಸಿತು. ಈ ಬಗೆಯಾಗಿ ಹುಟ್ಟಿದ ಉಣ್ಣೆಯಿಂದ ಬಟ್ಟೆಗಳನ್ನು ನೇಯಲು ಅದು ಪರದೇಶಗಳಿಗೆ ಕಳಿಸಲ್ಪಡುತ್ತಿತ್ತು. ಅದರಂತೆಯೆ ಭೂಮಿಗಳಲ್ಲಿ ಬೆಳೆದ ಕಚ್ಚಾವಸ್ತುಗಳು ಪರದೇಶಗಳಿಗೆ ಹೋಗುತ್ತಿದ್ದುವು. ಇಂಗ್ಲಂಡಿನಲ್ಲಿ ಆಗ ಉದ್ಯೋಗ-ವ್ಯವಸಾಯಗಳು ಬಹಳವಾಗಿರಲಿಲ್ಲ. ಆದರೆ ಸ್ಟುವರ್ಟರ ಕಾಲದಲ್ಲಿ ಇಂಗ್ಲಂಡಿನಲ್ಲಿಯೇ ಉದ್ಯೋಗ-ವ್ಯವಸಾಯಗಳನ್ನು ಪ್ರಾರಂಭಿಸಿ ಕಚ್ಚಾವಸ್ತು ಗಳಿಂದ ಪಕ್ಕಾವಸ್ತುಗಳನ್ನು ಸಿದ್ಧಗೊಳಿಸುವುದರ ಕಡೆಗೆ ಜನರ ಲಕ್ಷ್ಯವು ಬರ ತೊಡಗಿತು. ಕೈಮಗ್ಗದ ಮೇಲೆ ಉಣ್ಣೆಯ, ನಾರಿನ ಮತ್ತು ಹತ್ತಿಯ ಬಟ್ಟೆಗಳನ್ನು ನೇಯುವ ವ್ಯವಸಾಯವು ಅಲ್ಲಲ್ಲಿ ಪ್ರಾರಂಭವಾಯ್ತು. ಒಕ್ಕಲಿಗರು ಬಿಡುವಿನ ಕಾಲದಲ್ಲಿ ನೂಲುವ ಮತ್ತು ನೇಯುವ ವ್ಯವಸಾಯಗಳನ್ನು ಮಾಡಲಾರಂಭಿಸಿ ದರು; ಅದರಿಂದ ಎಷ್ಟೋ ಜನರಿಗೆ ಉದ್ಯೋಗವು ದೊರೆತಿತು. ನಾರ್‌ಫಾಕ್, ಸಫಾಕ್, ಮತ್ತು ಯಾರ್ಕ ಈ ಜಿಲ್ಲೆಗಳು ಉಣ್ಣೆಯ ಬಟ್ಟೆಗಳನ್ನು ನೇಯುವ ವ್ಯವ ಸಾಯದಲ್ಲಿ ಮುಂದುವರಿದುವು. ಲಂಕೆಶಾಯರ ಜಿಲ್ಲೆಯಲ್ಲಿ ಹತ್ತಿಯ ಬಟ್ಟೆಯನ್ನು ನೇಯುವ ವ್ಯವಸಾಯವು ಪ್ರಾರಂಭವಾಯ್ತು. ಕಲ್ಲಿದ್ದಲಿಯ ಮತ್ತು ಕಬ್ಬಿಣದ ಕಣಿಗಳು ಈ ಕಾಲದಲ್ಲಿ ಪ್ರಾರಂಭವಾದುವು. ಫ್ರಾನ್ಸಿನಲ್ಲಿಯ ಧಾರ್ಮಿಕ ಉಪ ದ್ರವಕ್ಕೆ ಬೇಸತ್ತು ೧೭ನೆಯ ಶತಕದಲ್ಲಿ ಸುಮಾರು ೭೫ ಸಾವಿರ ಹ್ಯೂಗೆನಾಟ್ ಜನರು (ಫ್ರೆಂಚ ಪ್ರಾಟೆಸ್ಟಂಟ್ಸ) ಫ್ರಾನ್ಸದೇಶವನ್ನು ಬಿಟ್ಟು ಇಂಗ್ಲಂಡಿನಲ್ಲಿ, ಹಾಲಂಡಿ

ನಲ್ಲಿ ಮತ್ತು ಅಮೇರಿಕೆಗಳಲ್ಲಿಯ ವಸಾಹತುಗಳಲ್ಲಿ ಇರಲು ಹೋದರು. ರೇಶಿಮೆಯ ವಸ್ತ್ರಗಳನ್ನು ನೇಯುವುದರಲ್ಲಿಯೂ ಇತರ ಸಣ್ಣ ಪುಟ್ಟ ವ್ಯವಸಾಯಗಳಲ್ಲಿಯೂ ಈ ಜನರು ನಿಷ್ಣಾತರಿದ್ದರು. ಅವರು ಬಂದುದರಿಂದ ಇಂಗ್ಲಂಡಿನಲ್ಲಿ ರೇಶಿಮೆಯ ಒಟ್ಟೆಗಳನ್ನು ನೇಯುವ ವ್ಯವಸಾಯವು ಪ್ರಾರಂಭವಾಯ್ತು ಮತ್ತು ಟೊಪ್ಪಿಗೆ, ಕಾಜಿನ ಸಾಮಾನುಗಳು, ಪಾತ್ರೆಗಳು, ಮಕ್ಕಳ ಆಟಿಗೆಗಳು ಮೊದಲಾದ ಸಣ್ಣ ಪುಟ್ಟ ವ್ಯವಸಾಯಗಳು ಇಂಗ್ಲಂಡಿನಲ್ಲಿ ಪ್ರಾರಂಭವಾದುವು. ೩ನೆಯ ಎಡ್ವರ್ಡನ ಕಾಲದಲ್ಲಿ 'ಜ್ಯೂ'ಜನರಿಗೆ ಇಂಗ್ಲಂಡಿನಲ್ಲಿ ಬಂದಿರಲು ಪ್ರತಿಬಂಧವು ಮಾಡಲ್ಪಟ್ಟಿತ್ತು. ಆದರೆ ಕ್ರಾಮವೆಲನು ಈ ನಿಯಮವನ್ನು ಬದಲಿಸಿದನು. ಆದುದರಿಂದ ಸ್ಪೇನ, ಪೋರ್ತುಗಾಲ ದೇಶಗಳಲ್ಲಿಯ ಧಾರ್ಮಿಕ ಉಪದ್ರವಕ್ಕೆ ಬೇಸತ್ತ ಎಷ್ಟೋ 'ಜ್ಯೂ'ಜನರು ಇಂಗ್ಲಂಡಿನಲ್ಲಿ ಬಂದು ಇರಲಾರಂಭಿಸಿದರು. ಸಹಕಾರ ಸಂಘ, ಬಂಕು, ಮತ್ತು ಹಣಕಾಸಿನ ವ್ಯವಹಾರ ಮೊದಲಾದ ವಿಷಯಗಳಲ್ಲಿ ಜ್ಯೂಜನರು ಕುಶಲರಾಗಿದ್ದರು. ಆದುದರಿಂದ ಅವರ ಬರುವಿಕೆಯಿಂದ ಇಂಗ್ಲಂಡಿನಲ್ಲಿಯ ಉದ್ಯೋಗ-ವ್ಯವಸಾಯಗಳಿಗೂ ವ್ಯಾಪಾರಕ್ಕೂ ಹಣದ ಪೂರೈಕೆಯಾಗಿ ಅವು ಬೆಳೆಯತೊಡಗಿದುವು.

ಮಾರ್ಗಗಳು ಮತ್ತು ಪ್ರವಾಸದ ಸಾಧನಗಳು—ಪೂರ್ವಕಾಲದಲ್ಲಿ ಇಂಗ್ಲಂಡಿನಲ್ಲಿ ಊರಿಂದೂರಿಗೆ ಹೋಗಲು ಮಾರ್ಗಗಳು ಸುಖಕರವಾಗಿರಲಿಲ್ಲ. ಅವು ತಗ್ಗುದಿನ್ನೆಗಳಿಂದ ತುಂಬಿರುತ್ತಿದ್ದುವು. ಮಳೆಗಾಲದಲ್ಲಿ ಕೆಸರಾಗಿ ಚಕ್ಕಡಿಗಳು ಸಿಕ್ಕಿಕೊಳ್ಳುತ್ತಿದ್ದುವು. ಅವುಗಳನ್ನು ಹೊರಗೆ ತೆಗೆಯಬೇಕಾದರೆ ಮತ್ತೆ ಕುದುರೆಗಳನ್ನು ಹೂಡಬೇಕಾಗುತ್ತಿತ್ತು. ದೊಡ್ಡ ದೊಡ್ಡ ಮಾರ್ಗಗಳ ಸ್ಥಿತಿ ಹೀಗಾಗಿದ್ದಿತು. ಹಳ್ಳಿಗಳಿಗೆ ಹೋಗಲಂತೂ ಚಕ್ಕಡಿದಾರಿಗಳು ಇರುತ್ತಿದ್ದಿಲ್ಲ. ಎಲ್ಲ ಕೆಲಸವೂ ಕುದುರೆಗಳಿಂದಲೆ ಸಾಗುತ್ತಿತ್ತು. ದೊಡ್ಡ ದೊಡ್ಡ ಮಾರ್ಗಗಳಲ್ಲಿಯೂ ಕಳ್ಳಕಾಕರ ಉಪದ್ರವವು ಇರುತ್ತಿದ್ದಿತಾದುದರಿಂದ ಒಬ್ಬಿಬ್ಬರೆ ಪ್ರವಾಸ ಮಾಡುವುದು ಸುರಕ್ಷಿತವಾಗಿರಲಿಲ್ಲ. ಶ್ರೀಮಂತರು ತಮ್ಮ ಸ್ವಂತದ ಗಾಡಿಗಳಲ್ಲಿ ಕುಳಿತು ಪ್ರವಾಸಮಾಡುತ್ತಿದ್ದರು. ಆದರೆ ಬಡಜನರು ನಡೆದು ಇಲ್ಲವೆ ನಾಲ್ಕು ಕುದುರೆಗಳಿಂದ ಎಳೆಯಲ್ಪಡುವ ಬಂಡಿಗಳಲ್ಲಿ ಕುಳಿತು ಪ್ರವಾಸಮಾಡುತ್ತಿದ್ದರು. ಮುಂದೆ ಮುಂದೆ ವೇಗದಿಂದ ಮತ್ತು ಸ್ವಲ್ಪ ಬಾಡಿಗೆಯಲ್ಲಿ ಪ್ರವಾಸಮಾಡಲು ಅನುಕೂಲವಾಗುವಂತೆ ದೊಡ್ಡ ದೊಡ್ಡ ಪಟ್ಟಣಗಳಿಂದ ದೊಡ್ಡವಾದ ಪ್ರವಾಸ ಶಕಟಗಳು (Coaches) ನಿಶ್ಚಿತವಾದ ವೇಳೆಗೆ ಹೊರಡಲಾರಂಭಿಸಿದುವು. ಪ್ರವಾಸವು ದೊಡ್ಡದಾಗಿದ್ದರೆ ಅಲ್ಲಲ್ಲಿ ಕುದುರೆಗಳನ್ನು ಬದಲಿಸುತ್ತಿದ್ದರು. ಈ ಶಕಟಗಳು

ದಿವಸಕ್ಕೆ ಸುಮಾರು ೫೦ ಮೈಲುಗಳವರೆಗೆ ಹೋಗುತ್ತಿದ್ದುವು. ಇವು ೧೯ನೆಯ ಶತಕದವರೆಗೆ ಪ್ರಚಾರದಲ್ಲಿದ್ದುವು. ಆಗ ಉಗೆಬಂಡಿಗಳು ಪ್ರಾರಂಭವಾದುದರಿಂದ ಇವು ಕಾಣದಂತಾದುವು. ೧ನೆಯ ಚಾರ್ಲಸನ ಆಳ್ಕೆಯಲ್ಲಿ ಅಂಚೆಯ ಮುಖಾಂತರ ವಾಗಿ ಪತ್ರಗಳನ್ನು ಕಳಿಸುವ ಅನುಕೂಲತೆ ಉಂಟಾಯ್ತು.

## ಮನೋರಂಜನೆಗಳು, ಉಡಿಗೆತೊಡಿಗೆಗಳು, ಕುರುಡುನಂಬುಗೆಗಳು ಮತ್ತು ಉಪಾಹಾರ ಗೃಹಗಳು.

**ಮನೋರಂಜನೆಗಳು**—ಕ್ರಾಮವೆಲನ ಆಳ್ಕೆಯ ಕೊನೆಯವರೆಗೆ ಇಂಗ್ಲಂಡಿನಲ್ಲಿ ಪ್ಯುರಿಟನ್ ಪಂಥದವರ ವರ್ಚಸ್ಸು ಇದ್ದುದರಿಂದ ಹಾಡು, ಕುಣಿತ, ನಾಟಕ, ಆಟ, ಸೊಗಸಿನ ಉಡಿಗೆತೊಡಿಗೆ ಮೊದಲಾದುವು ತ್ಯಾಜ್ಯವೆಂದು ಗಣಿಸಲ್ಪಡುತ್ತಿದ್ದುವು. ಈ ವಿಷಯದಲ್ಲಿ ಕ್ರಾಮವೆಲನ ಆಳ್ಕೆಯಲ್ಲಿ ಪ್ಯುರಿಟನ್ ಮತದ ಪಾರ್ಲಿಮೆಂಟು ಉಗ್ರವಾದ ಕಾಯ್ದೆಗಳನ್ನು ಮಾಡಿತ್ತು. ಆದರೆ ಈ ಕಾಯ್ದೆಗಳಿಂದ ಉಡಿಗೆತೊಡಿಗೆ ಮತ್ತು ಇನ್ನಿತರ ವಿಷಯಗಳಲ್ಲಿ ಮೇಲೆ ಮೇಲೆ ಸಾಧುತನವಿದ್ದಂತೆ ತೋರಿದರೂ ಒಳಗೊಳಗೆ ಡಾಂಭಿಕತೆ ಬೆಳೆದಿತ್ತು. ೨ನೆಯ ಚಾರ್ಲಸನ ಕಾಲದಲ್ಲಿ ಆಟ, ಕುಣಿತ, ನಾಟಕ ಮೊದಲಾದ ಮನೋರಂಜನೆಗಳು ಹೆಚ್ಚಿದುವು, ಮತ್ತು ಬಗೆಬಗೆಯ ಆಟಗಳು ಹುಟ್ಟಿದುವು. ಮೇಲಿನ ವರ್ಗದ ಜನರು ಬೇಟೆ, ಕುದುರೆಯೇರುವುದು, ನಾಟಕ, ಟೇನಿಸ್, ಪಾಲ್‌ಮಾಲ್ ಮೊದಲಾದುವುಗಳಿಂದ ಮನೋರಂಜನೆಯನ್ನು ಮಾಡಿಕೊಳ್ಳುತ್ತಿದ್ದರು. ಮಧ್ಯಮಸ್ಥಿತಿಯ ಜನರು ಫುಟಬಾಲನ್ನು ಆಡುತ್ತಿದ್ದರು. ಈ ಆಟವನ್ನು ಆಗಿನ ಕಾಲದಲ್ಲಿ ಜನರು ಅಡ್ಡಾಡುವ ಬೀದಿಗಳಲ್ಲಿಯೆ ಆಡುತ್ತಿದ್ದರು. ಹುಂಜಗಳನ್ನು ಕಾದಾಡಿಸುವುದು, ಕುಣಿತ, ಬೈಲಾಟ ಮೊದಲಾದುವುಗಳು ಕೆಳಗಿನ ವರ್ಗದವರ ಮನೋರಂಜನೆಯ ಸಾಧನಗಳಾಗಿದ್ದುವು. ಪೂರ್ವಕಾಲದಲ್ಲಿ ನಾಟಕಗಳ ಪ್ರಯೋಗವು ಆಗುವುದಿದ್ದರೆ ಅರಮನೆಗಳ ಇಲ್ಲವೆ ಪ್ರಾಸಾದಗಳ ಅಂಗಣಗಳಲ್ಲಿ ಆಗುತ್ತಿದ್ದಿತು. ಆದರೆ ಈ ಕಾಲದಲ್ಲಿ ನಾಟಕಗೃಹಗಳು ಕಟ್ಟಲ್ಪಟ್ಟುವು. ಟ್ಯೂಡರರ ಕಾಲದಲ್ಲಿ ಸ್ತ್ರೀಪಾತ್ರವನ್ನು ಪುರುಷರು ಧರಿಸುತ್ತಿದ್ದರು, ಆದರೆ ಸ್ಟುವರ್ಟರ ಕಾಲದಲ್ಲಿ ಸ್ತ್ರೀಪಾತ್ರವನ್ನು ಸ್ತ್ರೀಯರೆ ವಹಿಸತೊಡಗಿದರು.

**ಉಡಿಗೆತೊಡಿಗೆ**—ಈ ಕಾಲದಲ್ಲಿ ಗಂಡಸರ ಉಡುಪಿನಲ್ಲಿಯೂ ಎಷ್ಟೋ ಬದಲಾಯಿತು. ಎಲಿಝಬೆಥ್ ರಾಣಿಯ ಕಾಲದಲ್ಲಿಯ ಮೊಳಕಾಲಿನ ವರೆ

ಗಿರುವ ನಿಲುವಂಗಿಗಳು ಸ್ಟುವರ್ಟರ ಕಾಲದಲ್ಲಿ ಕಣ್ಮರೆಯಾದುವು. ಆಗ ಒಂದು ಒಗೆಯ ಉದ್ದವಾದ ಕೋಟು ಮತ್ತು ಜಾಕೀಟು ಪ್ರಚಾರದಲ್ಲಿ ಬಂದುವು. ಕೊರಳ ಸುತ್ತಲು ಉಣ್ಣೆಯ ಕೊರಳುಪಟ್ಟಿಗಳನ್ನು ಜನರು ಉಪಯೋಗಿಸುತ್ತಿದ್ದರು. ತಲೆಯ ಮೇಲಿನ ಕೂದಲನ್ನು ಸಂಪೂರ್ಣವಾಗಿ ಕತ್ತರಿಸಿ ಕೃತ್ರಿಮ ಕೂದಲನ್ನು (Wig) ಉಪಯೋಗಿಸುವ ಪದ್ಧತಿ ಪ್ರಾರಂಭವಾಯಿತು. ಸ್ತ್ರೀಯರ ಉಡುಪಿನಲ್ಲಿಯೂ ಬದಲಾಗುತ್ತಿದ್ದಿತು. ಬಣ್ಣಬಣ್ಣದ, ಚಿತ್ರಚಿತ್ರದ, ಝುಗಗಳನ್ನು ಹೆಣ್ಣುಮಕ್ಕಳು ಉಡತೊಡಗಿದರು. ನಿರಿಗೆಯ ತೋಳುಗಳುಳ್ಳ ರವಿಕೆಗಳನ್ನು ತೊಡತೊಡಗಿದರು. ಉಡಿಗೆತೊಡಿಗೆಯ ವಿಷಯದಲ್ಲಿ ಫ್ರೆಂಚಜನರ ಪದ್ಧತಿಯನ್ನು ಅನುಕರಿಸುವುದರ ಕಡೆಗೆ ಇಂಗ್ಲಿಶ ಜನರ ಒಲವು ಇದ್ದಿತು.

**ಕುರುಡುನಂಬುಗೆಗಳು** — ಮಂತ್ರ, ಮಾಟ, ಜ್ಯೋತಿಷ್ಯ ಮೊದಲಾದುವುಗಳಲ್ಲಿ ಜನರಿಗೆ ನಂಬುಗೆ ಇದ್ದಿತು. ಮಂತ್ರಮಾಟಗಳನ್ನು ಮಾಡಿದ ಅಪರಾಧಕ್ಕಾಗಿ ಎಷ್ಟೋ ಜನರು ಶೂಲಕ್ಕೇರಿಸಲ್ಪಟ್ಟರು.

**ಉಪಾಹಾರ ಗೃಹಗಳು** — ಸ್ಟುವರ್ಟರ ಕಾಲದಲ್ಲಿ ಚಹ, ಕಾಫಿ ಪೇಯಗಳು ಉಪಯೋಗದಲ್ಲಿ ಬಂದುವು. ಆದುದರಿಂದ ಮದ್ಯಪಾನಕ್ಕೆ ಸ್ವಲ್ಪ ಮಟ್ಟಿಗೆ ತಡೆಯುಂಟಾಯ್ತು. ಈ ಪೇಯಗಳನ್ನು ಮಾರುವ ಅಂಗಡಿಗಳು ಅಸ್ತಿತ್ವದಲ್ಲಿ ಬಂದುವು. ಅಲ್ಲಿ ಕುಳಿತು ಜನರು ಮಾತುಕತೆಗಳನ್ನಾಡುತ್ತಲೂ ಹರಟೆಯನ್ನು ಕೊಚ್ಚುತ್ತಲೂ ಜನರ ಹುಳುಕುಗಳನ್ನು ಟೀಕಿಸುತ್ತಲೂ ಕಾಲವನ್ನು ಕಳೆಯುತ್ತಿದ್ದರು. ಅದರಂತೆ ಈ ಸ್ಥಳಗಳಲ್ಲಿ ಸಾಮಾಜಿಕ ಮತ್ತು ರಾಜಕೀಯ ವಿಷಯಗಳ ಚರ್ಚೆಯೂ ಆಗುತ್ತಿದ್ದಿತು. ಇಂತಹ ಚರ್ಚೆ ಅನಾಯಾಸವಾಗಿ ಜನರಿಗೆ ಕೇಳಲು ದೊರೆಯುತ್ತಿತ್ತು. ವಿಶಿಷ್ಟ ಮತದವರು ಮತ್ತು ವಿಶಿಷ್ಟ ವಿಚಾರದವರು ತಮ್ಮ ನಿಶ್ಚಿತವಾದ ಉಪಾಹಾರ ಗೃಹಗಳಲ್ಲಿ ನೆರೆಯುತ್ತಿದ್ದರು. ಇವೆ ಮುಂದೆ ಮುಂದೆ ಕ್ಲಬ್ಬುಗಳಾಗಿ ಅವುಗಳ ಮಹತ್ವವು ಬೆಳೆಯತೊಡಗಿತು.

**ವೃತ್ತಪತ್ರಗಳು** — ೧ನೆಯ ಜೇಮ್ಸನ ಆಳ್ಕೆಯಲ್ಲಿ ರಾಜನು ಮತ್ತು ಪಾರ್ಲಿಮೆಂಟು ಇವರ ನಡುವೆ ಕಲಹವು ಪ್ರಾರಂಭವಾಯ್ತು. ಆ ಸಮಯದಲ್ಲಿ ಸಾಪ್ತಾಹಿಕ ವೃತ್ತಪತ್ರಗಳು ಹೊರಡತೊಡಗಿದುವು. ೨ನೆಯ ಚಾರ್ಲಸನ ಕಾಲದಲ್ಲಿ ಸರಕಾರದ ಅಪ್ಪಣೆಯಿಲ್ಲದೆ ವೃತ್ತಪತ್ರಗಳನ್ನು ಹೊರಡಿಸಲು ಕಾಯ್ದೆಯಿಂದ ಪ್ರತಿಬಂಧವಾಯ್ತು, ಆದರೆ ರಾಜ್ಯಕ್ರಾಂತಿಯ ತರುವಾಯದಲ್ಲಿ ಈ ಪ್ರತಿಬಂಧವು ಹೋಯ್ತು. ಸರಕಾರದ ಸುದ್ದಿಗಳನ್ನೂ ಮಹತ್ವದ ಸಂಗತಿಗಳನ್ನೂ ಸರಕಾರದವರೇ ಪ್ರಕಟಿಸಲು ಅನುಕೂಲವಾಗಬೇಕೆಂದು 'ಲಂಡನ್ ಗಝೆಟ್' ಎಂಬ

ಸರಕಾರದ ಪತ್ರವು ೨ನೆಯ ಚಾರ್ಲ್ಸನ ಆಳ್ಕೆಯಲ್ಲಿ ಹೊರಡಲಾರಂಭವಾಯ್ತು. ಆನ್ ರಾಣಿಯ ಕಾಲದಲ್ಲಿ ಅಡಿಸನ್ ಮತ್ತು ಸ್ಟೀಲ್ ಎಂಬವರು ಸ್ಪೆಕ್ಟೆಟರ ಮತ್ತು ಟಟಲರ ಎಂಬ ಹೊಸ ಬಗೆಯ ಪತ್ರಗಳನ್ನು ಹೊರಡಿಸಿದರು. ಜನರ ಅವಿವೇಕದ ಆಚಾರವಿಚಾರಗಳನ್ನು ಮತ್ತು ಪ್ರಚಲಿತ ವಾಙ್ಮಯವನ್ನು ಕುರಿತು ವಿನೋದಪೂರ್ಣವೂ ಮನೋರಂಜಕವೂ ಆದ ಭಾಷೆಯಲ್ಲಿ ಟೀಕೆ ಇವುಗಳಲ್ಲಿ ಬರುತ್ತಿತ್ತು.

## ಶಿಕ್ಷಣ, ವಾಙ್ಮಯ, ಶಾಸ್ತ್ರ, ಕಲಾಕೌಶಲ್ಯ ಮೊದಲಾದುವು.

**ಶಿಕ್ಷಣವು**—ಸ್ಟುವರ್ಟರ ಕಾಲದಲ್ಲಿ ಶಾಲೆಗಳ ಸಂಖ್ಯೆ ಅಲ್ಪವಾಗಿತ್ತು. ಧರ್ಮಮಠಗಳು ಮುರಿಯಲ್ಪಟ್ಟುದರಿಂದ ಅಲ್ಲಿಯ ಶಾಲೆಗಳು ಬಂದಾದುವು, ಆದುದರಿಂದ ಹಳ್ಳಿಪಳ್ಳಿಗಳಲ್ಲಿಯ ಬಡವರ ಮಕ್ಕಳಿಗೆ ಶಿಕ್ಷಣವು ದೊರೆಯ ದಂತಾಯ್ತು. ಪ್ರಾಥಮಿಕ ಶಾಲೆಗಳು ಕೆಲವೆಡೆಗಳಲ್ಲಿ ಇದ್ದುವು. ಉಚ್ಚ ಶಿಕ್ಷಣಕ್ಕೋಸುಗ ಆಕ್ಸಫೋರ್ಡ ಮತ್ತು ಕೆಂಬ್ರಿಜ್ ವಿಶ್ವವಿದ್ಯಾಲಯಗಳಿದ್ದುವು. ಅಲ್ಲಿ ಶಿಕ್ಷಣವನ್ನು ಪಡೆಯಲು ಬಹಳ ಹಣವನ್ನು ವೆಚ್ಚಮಾಡಬೇಕಾಗುತ್ತಿತ್ತು; ಆದುದರಿಂದ ಶ್ರೀಮಂತರ ಮಕ್ಕಳಷ್ಟೇ ಅಲ್ಲಿಗೆ ವಿದ್ಯಾಭ್ಯಾಸಕ್ಕೋಸುಗ ಹೋಗು ತ್ತಿದ್ದರು. ಅಲ್ಲಿಯ ಶಿಕ್ಷಣವು ಮುಗಿದ ಬಳಿಕ ಅವರು ಫ್ರಾನ್ಸ, ಇಟಲಿ ಮೊದ ಲಾದ ದೇಶಗಳಿಗೆ ಪ್ರವಾಸಮಾಡಿ ಬರುತ್ತಿದ್ದರು. ಈ ಪ್ರವಾಸದಿಂದ ಅವರಿಗೆ ಬೇರೆ ಬೇರೆ ದೇಶಗಳ ನೀತಿರೀತಿಗಳು ಗೊತ್ತಾಗಿ ಅವರು ಬಹುಶ್ರುತರೂ ಚತು ರರೂ ಆಗುತ್ತಿದ್ದರು. ವಿಶ್ವವಿದ್ಯಾಲಯದ ಶಿಕ್ಷಣವನ್ನು ಪೂರ್ಣಗೊಳಿಸಿ ಅಲ್ಲಿಂದ ಹೊರಗೆ ಬಂದವರಿಗೆ ಮುಲ್ಕಿ, ಲಷ್ಕರಿ ಮತ್ತು ಧಾರ್ಮಿಕ ಖಾತೆಗಳಲ್ಲಿ ಬೇರೆ ಬೇರೆ ಅಧಿಕಾರ ಸ್ಥಳಗಳು ದೊರೆಯುತ್ತಿದ್ದುವು. ಯಾವುದಾದರೂ ಒಂದು ವ್ಯವ ಸಾಯದಲ್ಲಿ ತೊಡಗಲಪೇಕ್ಷೆಯುಳ್ಳವರು ಉಮೇದ್ವಾರರಾಗಿ ಒಂದು ಕಾರಖಾನೆ ಯಲ್ಲಾಗಲಿ ಕೈಗಾರಿಕೆಯ ಕೆಲಸವನ್ನು ಮಾಡುವವರ ಬಳಿಯಲ್ಲಾಗಲಿ ಕೆಲಸ ವನ್ನು ಕಲಿಯಲು ಆರೇಳು ವರ್ಷಗಳ ವರೆಗೆ ಇರುತ್ತಿದ್ದರು. ಅಲ್ಲಿ ಯಾವು ದಾದರೂ ಒಂದು ವ್ಯವಸಾಯದ ಜ್ಞಾನವು ತಕ್ಕಷ್ಟಾದ ಬಳಿಕ ಅವರು ಸ್ವತಂತ್ರರಾಗಿ ಆ ವ್ಯವಸಾಯವನ್ನು ಮಾಡಲಾರಂಭಿಸುತ್ತಿದ್ದರು.

ಪೂರ್ವ ಕಾಲದಲ್ಲಿ ಅಡುಗೆ, ಹೊಲಿಗೆ, ಕಸೂತಿ, ಜೇನೆಯವರ ಆರೈಕೆ— ಈ ಮೊದಲಾದುವುಗಳ ಶಿಕ್ಷಣವು ಹೆಣ್ಣುಮಕ್ಕಳಿಗೆ ಮನೆಯಲ್ಲಿಯೇ ದೊರೆಯು ತ್ತಿದ್ದಿತು. ಸ್ಟುವರ್ಟರ ಕಾಲದಲ್ಲಿ ಮೇಲೆ ಹೇಳಿದುವುಗಳಲ್ಲದೆ ಓದುಬರೆಹ,

ಚಿತ್ರಕಲೆ, ಸಂಗೀತ, ಫ್ರೆಂಚ ಭಾಷೆ ಮೊದಲಾದುವುಗಳ ಶಿಕ್ಷಣವೂ ಹೆಣ್ಣು ಮಕ್ಕಳಿಗೆ ಕೊಡಲ್ಪಡುತ್ತಿತ್ತು.

ಕಲಾಕೌಶಲ್ಯಗಳು—೨ನೆಯ ಚಾರ್ಲ್ಸನ ಆಳ್ಕೆಯವರೆಗೆ ಇಂಗ್ಲಿಶ ಜನರ ಮನಸ್ಸಿನ ಮೇಲೆ ಪ್ಯುರಿಟನ್ ಪಂಥದವರ ಪ್ರಭಾವವು ಇದ್ದಿತಾದುದರಿಂದ ಚಿತ್ರಕಲೆ, ಶಿಲ್ಪಕಲೆ ಮೊದಲಾದುವುಗಳ ಪ್ರಗತಿ ಕುಂಠಿತವಾಗಿತ್ತು. ಆದರೆ ೧೬೬೦ರ ತರುವಾಯದಲ್ಲಿ ಇವುಗಳಿಗೆ ಉತ್ತೇಜನವು ದೊರೆಯಲಾರಂಭಿಸಿತು. ೧೬೬೬ರಲ್ಲಿಯ ಅಗ್ನಿಪ್ರಳಯದಿಂದ ಲಂಡನ ಪಟ್ಟಣದಲ್ಲಿ ಸಾವಿರಾರು ಮನೆಗಳು ಸುಟ್ಟುದರಿಂದ ಹೊಸ ಮನೆಗಳು ಕಟ್ಟಲ್ಪಟ್ಟುವು. ಅವುಗಳ ರಚನೆ ಸುಂದರವೂ ಆಗತೊಡಗಿತು. ಕ್ರಿಸ್ಟೋಫರ್ ರೆನ್ ಎಂಬ ಪ್ರಸಿದ್ಧನಾದ ವಾಸ್ತುಶಿಲ್ಪಿ ಇದೆ ಕಾಲದಲ್ಲಿ ಆಗಿ ಹೋದನು. ಅವನ ನೇತೃತ್ವದಲ್ಲಿ ಅನೇಕ ಸುಂದರವಾದ ಕಟ್ಟಡಗಳು ಕಟ್ಟಲ್ಪಟ್ಟುವು. ಅವುಗಳಲ್ಲಿ ಲಂಡನಿನಲ್ಲಿಯ ಸೇಂಟ ಪಾಲನ ಚರ್ಚು ಮುಖ್ಯವಾದುದು.

ಲೇಖಕರೂ ವಾಙ್ಮಯವೂ—ಪ್ರಸಿದ್ಧ ನಾಟಕಕಾರನೂ ಕವಿಯೂ ಆದ ಶೇಕ್ಸಪಿಯರನು ೧ನೆಯ ಜೇಮ್ಸನ ಆಳಿಕೆಯಲ್ಲಿ ಇದ್ದನು. ಬೆನ್ ಜಾನ್‌ಸನ್, ಫ್ಲೆಚರ ಮೊದಲಾದ ನಾಟಕಕಾರರು ಮತ್ತು ಮಿಲ್ಟನ್, ಪೋಪ್, ಡ್ರಾಯಡನ್ ಈ ಕವಿಗಳು ಇದೆ ಸಮಯದಲ್ಲಿ ಜೀವಿಸಿದ್ದರು. ಇದಲ್ಲದೆ, ಜಾನ್ ಬನಿಯನನ 'ಯಾತ್ರಿಕನ ಪ್ರವಾಸವು' ((Pilgrim's Progress), ಸ್ವಿಫ್ಟ, ಅಡಿಸನ್, ಸ್ಟೀಲ್ ಮೊದಲಾದ ಲೇಖಕರ ವಿನೋದಪೂರ್ಣವೂ, ಔಪರೋಧಿಕವೂ, ಮನೋರಂಜಕವೂ ಆದ ಭಾಷೆಯಲ್ಲಿ ಬರೆಯಲ್ಪಟ್ಟ ಲೇಖಗಳು ಇದೆ ಕಾಲದಲ್ಲಿ ಪ್ರಸಿದ್ಧವಾದುವು. ಟ್ಯೂಡರರ ಕಾಲದಲ್ಲಿ ಇಂಗ್ಲಿಶ ಭಾಷೆಯಲ್ಲಿ ಶಾಸ್ತ್ರೀಯ ವಿಷಯಗಳನ್ನು ಕುರಿತು ಗ್ರಂಥರಚನೆಯಾಗಿರಲಿಲ್ಲ, ಆದರೆ ಸ್ಟುವರ್ಟರ ಕಾಲದಲ್ಲಿ ಶಾಸ್ತ್ರೀಯ ವಿಷಯದ ಗ್ರಂಥಗಳು ಹೊರಡಲಾರಂಭಿಸಿದುವು.

ಈ ಕಾಲದಲ್ಲಿ ನ್ಯೂಟನನೆಂಬ ಪ್ರಖ್ಯಾತ ಶಾಸ್ತ್ರಜ್ಞನು ಆಗಿಹೋದನು. ಅವನು ಗುರುತ್ವಾಕರ್ಷಣದ ನಿಯಮವನ್ನು ಶೋಧಿಸಿದನು. ಶಾಸ್ತ್ರೀಯ ಜ್ಞಾನದ ವೃದ್ಧಿಗೋಸುಗ "ರಾಯಲ್ ಸೊಸಾಯಟಿ" ಎಂಬ ಸಂಸ್ಥೆ ೨ನೆಯ ಚಾರ್ಲ್ಸನ ಕಾಲದಲ್ಲಿ ಸ್ಥಾಪಿಸಲ್ಪಟ್ಟಿತು. ನ್ಯೂಟನನು ಅನೇಕ ವರ್ಷಗಳ ವರೆಗೆ ಈ ಸಂಸ್ಥೆಯ ಅಧ್ಯಕ್ಷನಾಗಿದ್ದನು.

———————

## ಸಾರಾಂಶವು

ಲೋಕ ಸಮಾಜವು — ಸರದಾರರು, ದೊಡ್ಡ ದೊಡ್ಡ ಜಮೀನದಾರರು, ಧರ್ಮಾಧಿಕಾರಿಗಳು, ವ್ಯಾಪಾರಸ್ಥರು ಮತ್ತು ಭೂಮಿಗಳಲ್ಲಿ ದುಡಿದ ಒಕ್ಕಲಿಗರು ಮೊದಲಾದ ವರ್ಗಗಳು. ಬಹುಜನ ಸಮಾಜದ ಮುಖ್ಯ ವ್ಯವಸಾಯವು ಒಕ್ಕಲತನವು. ರಾಜಕೀಯ ಸತ್ತೆ ಸರದಾರರ, ದೊಡ್ಡ ದೊಡ್ಡ ಜಮೀನದಾರರ ಮತ್ತು ವ್ಯಾಪಾರಸ್ಥರ ಕೈಯಲ್ಲಿ.

ಪಟ್ಟಣಗಳು — ಪಟ್ಟಣಗಳ ಸಂಖ್ಯೆ ಅಲ್ಪವಾಗಿದ್ದಿತು. ಲಂಡನ್ ಎಲ್ಲಕ್ಕೂ ದೊಡ್ಡ ಪಟ್ಟಣವು. ಬ್ರಿಸ್ಟಲ್ ಮತ್ತು ನಾರ್ವಿಚ್ ಇವು ಪ್ರಮುಖ ಪಟ್ಟಣಗಳು.

ಉದ್ಯೋಗ-ವ್ಯವಸಾಯಗಳು – ಒಕ್ಕಲತನವು ಮುಖ್ಯ ವ್ಯವಸಾಯವು. ಉಣ್ಣೆಯ ಬಟ್ಟೆಗಳ ನೇಯ್ಗೆಯ ಆರಂಭವು ಮತ್ತು ಹ್ಯೂಗೆನಾಟ್ಸ ಜನರು ಇರಲು ಬಂದುದರಿಂದ ಈ ವ್ಯವಸಾಯಕ್ಕೆ ಉತ್ತೇಜನವು, ಮತ್ತು ಬೇರೆ ಅನೇಕ ಕಿರುಕುಳ ವ್ಯವಸಾಯಗಳು. ಹತ್ತಿಯ ಬಟ್ಟೆಗಳ ವ್ಯವಸಾಯದ ಪ್ರಾರಂಭವು. ಇವೆಲ್ಲ ವ್ಯವಸಾಯಗಳು ಗೃಹೋದ್ಯೋಗಗಳಾಗಿದ್ದುವು. ಜ್ಯೂ ಜನರಿಗೆ ಇರಲು ಅಪ್ಪಣೆ ದೊರೆತುದರಿಂದ ವ್ಯಾಪಾರಕ್ಕೂ ಉದ್ಯೋಗ-ವ್ಯವಸಾಯಗಳಿಗೂ ಹಣದ ಪೂರೈಕೆ.

ಮಾರ್ಗಗಳು ಮತ್ತು ಪ್ರವಾಸದ ಸಾಧನಗಳು — ಮಾರ್ಗಗಳು ಸರಿಯಾಗಿರಲಿಲ್ಲ. ಸುರಕ್ಷಿತತೆ ಇರಲಿಲ್ಲ. ಸರಕುಗಳನ್ನು ಒಯ್ಯಲು ನಾಲ್ಕು ಗಾಲಿಗಳ ದೊಡ್ಡ ಬಂಡಿಗಳು. ಪ್ರವಾಸದ ಬಂಡಿಗಳು ದಿವಸಕ್ಕೆ ೫೦ ಮೈಲುಗಳ ವೇಗ ಉಳ್ಳುವು.

ಮನೋರಂಜನೆಗಳು, ಉಡಿಗೆತೊಡಿಗೆಗಳು, ಕುರುಡುನಂಬುಗೆಗಳು, ಉಪಾಹಾರ ಗೃಹಗಳು —

ಮನೋರಂಜನೆ: — ಮೇಲಿನ ವರ್ಗದವರು ಬೇಟೆ, ಕುದುರೆಯೇರುವುದು, ಟೇನಿಸ್, ಪಾಲ್‌ಮಾಲ್, ನಾಟಕಗಳು ಇವುಗಳಿಂದ ಮನೋರಂಜನೆಯನ್ನು ಮಾಡಿಕೊಳ್ಳುತ್ತಿದ್ದರು. ಫುಟಬಾಲ, ಹುಂಜಗಳ ಕಾದಾಟ, ಆಟ, ಕುಣಿತ ಮೊದಲಾದುವುಗಳು ಕೆಳಗಿನ ವರ್ಗದವರ ಮನೋರಂಜನೆಯ ಸಾಧನೆಗಳು.

ಉಡಿಗೆತೊಡಿಗೆಗಳು: — ಮೊಳಕಾಲ ವರೆಗೆ ಬರುವ ನಿಲುವಂಗಿಯ ಸ್ಥಳದಲ್ಲಿ ಈಗ ಕೋಟು. ಕೃತ್ರಿಮ ಕೂದಲಿನ ಟೋಪು.

ಕುರುಡುನಂಬುಗೆಗಳು: — ಮಂತ್ರ, ಮಾಟ, ಜ್ಯೋತಿಷ್ಯ ಮೊದಲಾದುವುಗಳಲ್ಲಿ ಜನರ ನಂಬುಗೆ.

ಉಪಾಹಾರ ಗೃಹಗಳು:—ಕಾಫಿಗೃಹಗಳಿಂದ ಮದ್ಯಪಾನಕ್ಕೆ ಪ್ರತಿಬಂಧವು. ಸಾಮಾಜಿಕ ಮತ್ತು ರಾಜಕೀಯ ವಿಷಯಗಳ ಚರ್ಚೆ ಕಾಫಿಗೃಹಗಳಲ್ಲಿ ಆಗಲಾರಂಭಿಸಿದುದರಿಂದ ಅವುಗಳಿಗೆ ಕ್ಲಬ್‌ಗಳ ಸ್ವರೂಪವು.

ವೃತ್ತಪತ್ರಿಕೆಗಳು—ಸರಕಾರ ಸಂಬಂಧದ ವೃತ್ತವೆಲ್ಲವೂ, ಲಂಡನ್ ಗೆಝೆಟ ನಲ್ಲಿ ಅಡಿಸನ್ ಮತ್ತು ಸ್ಟೀಲ್ ಇವರ ಸ್ಪೆಕ್ಟೆಟರ್' ಮತ್ತು ಟೆಟಲರ್ ಎಂಬ ವೃತ್ತಪತ್ರಗಳು ಮತ್ತು ಅವುಗಳಲ್ಲಿ ವಾಙ್ಮಯ, ರೀತಿನೀತಿ ಇವು ಗಳನ್ನು ಕುರಿತು ವಿನೋದಪೂರ್ಣವೂ ಮನೋರಂಜಕವೂ ಆದ ಭಾಷೆಯಲ್ಲಿ ಟೀಕೆ.

ಶಿಕ್ಷಣ, ವಾಙ್ಮಯ, ಕಲಾಕೌಶಲ್ಯ ಮೊದಲಾದುವು—ಪ್ರಾಥಮಿಕ ಶಾಲೆಗಳಲ್ಲಿ ಪ್ರಾಥಮಿಕಶಿಕ್ಷಣವು. ಉಚ್ಚ ಶಿಕ್ಷಣಕ್ಕೋಸುಗ ಆಕ್ಸಫರ್ಡ ಮತ್ತು ಕೇಂಬ್ರಿಜ್ ವಿಶ್ವವಿದ್ಯಾಲಯಗಳು. ಹೆಣ್ಣುಮಕ್ಕಳಿಗೆ ಓದುಬರೆಹ, ಸಂಗೀತ ಮತ್ತು ಫ್ರೆಂಚ ಭಾಷೆ ಈ ವಿಷಯಗಳಲ್ಲಿಯೂ ಶಿಕ್ಷಣವು. ಕ್ರಿಸ್ಟೋಫರ್ ರೆನನು ಎಷ್ಟೋ ಸುಂದರವಾದ ಇಮಾರತುಗಳನ್ನು ಕಟ್ಟಿಸಿದನು. ಶೇಕ್ಸಪಿಯರ್, ಡ್ರಾಯ್‌ಡನ್, ಮಿಲ್ಟನ್, ಬನಿಯನ್, ಅಡಿಸನ್, ಸ್ಟೀಲ್ ಮೊದಲಾದ ಕವಿ ಗಳು ಮತ್ತು ಲೇಖಕರು. ಶಾಸ್ತ್ರಜ್ಞನಾದ ನ್ಯೂಟನನು.

## ಪರಿಶಿಷ್ಟ ೧.

## ಸ್ಟುವರ್ಟರ ಕಾಲದಲ್ಲಿಯ ಪ್ರಸಿದ್ಧಪುರುಷರು.

ವಿಲಿಯಮ್ ಶೇಕ್ಸಪಿಯರ್ (೧೫೬೪-೧೬೧೬)—ಎಲಿಝಬೆಥ್ ಮತ್ತು ೧ನೆಯ ಜೇಮ್ಸ ಇವರ ಆಳ್ಕೆಯಲ್ಲಿ ಶೇಕ್ಸಪಿಯರನೆಂಬ ಪ್ರಸಿದ್ಧ ಕವಿಯೂ ನಾಟಕ ಕಾರನೂ ಆಗಿಹೋದನು. ಅವನು ಸ್ಟ್ರೆಟಫೋರ್ಡ ಎಂಬಲ್ಲಿ ಹುಟ್ಟಿದನು. ಅವನು ೨೨ನೆಯ ವರ್ಷದವನಾದಾಗ ಲಂಡನ್ನಿಗೆ ಹೋಗಿ ನಾಟಕಮಂಡಳದಲ್ಲಿ ನಟನ ವ್ಯವಸಾಯ ವನ್ನು ಕೈಕೊಂಡನು. ಅಲ್ಲಿರುವಾಗ ಅವನು ಐತಿಹಾಸಿಕ, ಪೌರಾಣಿಕ ಮತ್ತು ಸಾಮಾ ಜಿಕ ಕತೆಗಳ ಆಧಾರದಿಂದ ಸುಮಾರು ೩೫ ನಾಟಕಗಳನ್ನೂ ಕೆಲವು ಕಾವ್ಯಗಳನ್ನೂ ಬರೆ ದನು. ಹೆಮಲೆಟ್, ಆಥೆಲ್ಲೊ, ಮೆಕ್‌ಬೆಥ್, ವೆನಿಸದ ವ್ಯಾಪಾರಸ್ಥನು ಈ ಮೊದಲಾ ದುವು ಅವನ ಪ್ರಮುಖನಾಟಕಗಳು. ಅವನ ನಾಟಕಗಳಲ್ಲಿ ಮಾನವ ಸ್ವಭಾವದ ಯೋಗ್ಯ ವಾದ ಪ್ರತಿಬಿಂಬವೂ ಹಾಸ್ಯ, ಕರುಣ, ಶೃಂಗಾರ, ವೀರ ಮೊದಲಾದ ರಸಗಳ ಶ್ರೇಷ್ಠ ಪ್ರತಿಯ ಪರಿಪೋಷವೂ ಇದ್ದುದರಿಂದ ಜಗತ್ತಿನಲ್ಲಿಯ ಪ್ರತಿಭಾವಂತರಾದ ನಾಟಕಕಾರ ರಲ್ಲಿ ಪ್ರಮುಖನೆಂದು ಅವನ ಕೀರ್ತಿ ಇರುವುದು. ಎಲಿಝಬೆಥ್ ಮತ್ತು ಮೊದಲ ನೆಯ ಜೇಮ್ಸ ಇವರ ಪ್ರೋತ್ಸಾಹನವು ಅವನಿಗಿದ್ದಿತು. ಅವರು ಅವನನ್ನು ಗೌರವಿಸು ತ್ತಿದ್ದರು.

ಸರ್ ವಾಲ್ಟರ್ ರಲೆ (೧೫೫೨-೧೬೧೮)—ಇವನು ಎಲಿಝಬೆಥ್ ಮತ್ತು ೧ನೆಯ ಜೇಮ್ಸ ಇವರ ಕಾಲದಲ್ಲಿಯ ಒಬ್ಬ ಪ್ರಸಿದ್ಧನಾದ ನಾವಿಕನೂ ಸರದಾರನೂ ಲೇಖಕನೂ ಆಗಿದ್ದನು. ಎಲಿಝಬೆಥ್ ರಾಣಿಯ ಆಳ್ಕೆಯಲ್ಲಿ ಅವನು ಎಷ್ಟೋ ಸಮುದ್ರಪ್ರವಾಸವನ್ನು ಮಾಡಿದನು ಮತ್ತು ಉತ್ತರ ಅಮೇರಿಕೆಯಲ್ಲಿ 'ವರ್ಜಿನಿಯಾ' ಎಂಬ ವಸಾಹತನ್ನು ಸ್ಥಾಪಿಸಲು ಯತ್ನಿಸಿದನು (೧೫೮೪). ಅವನು ಅಮೇರಿಕೆಯಿಂದ ತಂಬಾಕು ಆಲುಗಡ್ಡೆಗಳನ್ನು ಇಂಗ್ಲಂಡಿಗೆ ತಂದನು. ಎಲಿಝಬೆಥ್ ರಾಣಿಗೆ ಅವನು ಬೇಕಾದವನಾಗಿದ್ದನು. ಅವಳು ಅವನನ್ನು ಸರದಾರನನ್ನು ಮಾಡಿದಳಲ್ಲದೆ ಐರ್ಲಂಡಿನಲ್ಲಿ ಒಂದು ಜಾಹಗೀರನ್ನೂ ಅವನಿಗೆ ಕೊಟ್ಟಳು. ಸ್ಪೇನದ ಹಡಗುಪಡೆಯನ್ನು ಸೋಲಿಸುವ ಕೆಲಸದಲ್ಲಿ ಇವನು ಭಾಗವನ್ನು ವಹಿಸಿದ್ದನು (೧೫೮೮). ಜೇಮ್ಸನ ಆಳ್ಕೆಯಲ್ಲಿ ಅರಾಬೆಲಾ 'ಸ್ಟುವರ್ಟ' ಇವಳಿಗೆ ಪಟ್ಟವನ್ನು ದೊರಕಿಸಿಕೊಡಲು ರಚಿಸಲ್ಪಟ್ಟ ಸಂಚಿನಲ್ಲಿ ಅವನ ಅಂಗವಿದ್ದಿತೆಂಬ ಅರೋಪದಿಂದ ಅವನಿಗೆ ಮರಣದ ಶಿಕ್ಷೆ ವಿಧಿಸಲ್ಪಟ್ಟಿತ್ತು, ಆದರೆ ಅವನು ಮರಣಕ್ಕೆ ಗುರಿಮಾಡಲ್ಪಡದೆ ಕಾರಾಗೃಹದಲ್ಲಿ ಇಡಲ್ಪಟ್ಟನು. ಅವನು ಕಾರಾಗೃಹದಲ್ಲಿ ಇದ್ದಾಗ 'ಜಗತ್ತಿನ ಇತಿಹಾಸ'ವೆಂಬ ಗ್ರಂಥವನ್ನು ಬರೆದನು. ದಕ್ಷಿಣ ಅಮೇರಿಕೆಯಲ್ಲಿಯ ಗಯಾನಾ ಎಂಬಲ್ಲಿ ಚಿನ್ನದ ಕಣಿಯ ಶೋಧವನ್ನು ತಾನು ಮಾಡುವೆನೆಂದು ಹೇಳಿದುದರಿಂದ ಅವನು ಬಂಧನದಿಂದ ಮುಕ್ತಮಾಡಲ್ಪಟ್ಟು ದಕ್ಷಿಣ ಅಮೇರಿಕೆಗೆ ಕಳಿಸಲ್ಪಟ್ಟನು. ಆದರೆ ಅವನಿಗೆ ಈ ಕಾರ್ಯದಲ್ಲಿ ಯಶವು ದೊರೆಯಲಿಲ್ಲ, ಅವನು ನಷ್ಟಕ್ಕೆ ಗುರಿಯಾದನು. ಮರಳಿ ಬಂದ ಬಳಿಕ ಹಿಂದಿನ ಆರೋಪದಿಂದಲೆ ಅವನು ಶೂಲಕ್ಕೇರಿಸಲ್ಪಟ್ಟನು.

ಸರ ಫ್ರಾನ್ಸಿಸ್ ಬೇಕನ್ (೧೫೬೧-೧೬೨೬)—ಎಲಿಝಬೆಥ್ ಮತ್ತು ೧ನೆಯ ಜೇಮ್ಸ ಇವರ ಆಳ್ಕೆಯಲ್ಲಿ ಇವನು ಒಬ್ಬ ಪ್ರಸಿದ್ಧನಾದ ತತ್ವಜ್ಞಾನಿಯೂ ಮುತ್ಸದ್ದಿಯೂ ರಾಜಕಾರಣಿಯೂ ಆಗಿದ್ದನು. ಕಾಯ್ದೆಯ ಅಭ್ಯಾಸವನ್ನು ಮಾಡಿ ಅವನು ೧೮ನೆಯ ವರ್ಷದಲ್ಲಿ ಬೆರಿಷ್ಟರನಾದನು. ಮುಂದೆ ಪರಿಸಿನಲ್ಲಿಯ ಇಂಗ್ಲಂಡಿನ ರಾಯಭಾರಿ ಕಚೇರಿಯಲ್ಲಿ ಕೆಲವು ವರ್ಷಗಳವರೆಗೆ ಕೆಲಸಮಾಡಿ ಅವನು ಪಾರ್ಲಿಮೆಂಟಿನ ಸದಸ್ಯನಾದನು. ೧ನೆಯ ಜೇಮ್ಸನು ಅವನಿಗೆ ಸರದಾರಿಕೆಯನ್ನು ಕೊಟ್ಟು (೧೬೩೦) ಅವನನ್ನು ಲಾರ್ಡ ಚಾನ್ಸಲರನಾಗಿ ನಿಯೋಜಿಸಿದನು. ಆದರಿಂದ ಅವನು ನ್ಯಾಯಖಾತೆಯಲ್ಲಿಯ ಮುಖ್ಯಾಧಿಕಾರಿಯಾದನು. ಈ ಅಧಿಕಾರದಲ್ಲಿದ್ದಾಗ ಅವನು ಲಂಚವನ್ನು ಸ್ವೀಕರಿಸಿದನೆಂಬ ಆರೋಪದಿಂದ ಪಾರ್ಲಿಮೆಂಟಿನಲ್ಲಿ ವಿಚಾರಣೆಗೆ ಗುರಿಮಾಡಲ್ಪಟ್ಟು ಕೆಲಸದಿಂದ ದೂರ ಮಾಡಲ್ಪಟ್ಟನು. ಅವನು ಜ್ಞಾನದ ಪ್ರಗತಿ (Advancement of Learning), ನಿಬಂಧಗಳು (Essays) ಮೊದಲಾದ ಪುಸ್ತಕಗಳನ್ನು ಬರೆದನು. ಈ ಪುಸ್ತಕಗಳು ಇಂಗ್ಲಿಶ್ ವಾಙ್ಮಯದಲ್ಲಿ ಉತ್ತಮವಾದ ಪುಸ್ತಕಗಳೆಂದು ಗಣಿಸಲ್ಪಟ್ಟಿರುವವು.

ಡ್ಯೂಕ್ ಆಫ್ ಬಕಿಂಗಹಮ್ (೧೫೯೨-೧೬೨೮)—ಇವನು ೧ನೆಯ ಜೇಮ್ಸ ಮತ್ತು ೧ನೆಯ ಚಾರ್ಲಸನ ಮಂತ್ರಿಯಾಗಿದ್ದನು. ಇವನ ಹೆಸರು ಜಾರ್ಜ ವ್ಹಿಲರ್ಸ ಎಂದಿತ್ತು, ಆದರೆ ಅವನನ್ನು ೧ನೆಯ ಜೇಮ್ಸನು ಬಕಿಂಗಹಮದ ಡ್ಯೂಕನಾಗಿ ಮಾಡಿ

ಡನು. ಮುಂದೆ ಅವನು ೧೬೧೬ರಲ್ಲಿ ಜೇಮ್ಸನ ಮಂತ್ರಿಯಾದನು. ಇವನು ಸ್ವಾರ್ಥಿಯೂ ಕಾರ್ಯಸಾಧುವೂ ಆಗಿದ್ದನು. ಎರಡನೆಯವರ ಮನಸ್ಸನ್ನು ನೋಯಿಸಲು ಅವನು ಹಿಂದುಮುಂದು ನೋಡುತ್ತಿರಲಿಲ್ಲ. ಇದರಿಂದ ಅವನು ಜನರ ತಿರಸ್ಕಾರಕ್ಕೆ ಪಾತ್ರನಾದನು. ಮುಂದೆ ಅವನು ೧ನೆಯ ಚಾರ್ಲಸನ ಮಂತ್ರಿಯಾದನು. ಅವನನ್ನು ಮಂತ್ರಿಪದದಿಂದ ದೂರಮಾಡಬೇಕೆಂದು ಪಾರ್ಲಿಮೆಂಟು ರಾಜನನ್ನು ಕೇಳಿತು. ಆದರೆ ರಾಜನಿಗೆ ಅವನಲ್ಲಿ ವಿಶ್ವಾಸವಿದ್ದಿತು; ಅವನ ತಂತ್ರದಿಂದಲೆ ಅವನು ನಡೆಯುತ್ತಿದ್ದನು. ಅವನು ಫ್ರಾನ್ಸಿನಲ್ಲಿಯ ಹ್ಯೂಗೆನಾಟ್ ಜನರಿಗೆ ಅಲ್ಲಿಯ ಅರಸನ ವಿರುದ್ಧವಾಗಿ ಸಾಹಾಯ್ಯವಿತ್ತನು. ಆದರೆ ಅವನಿಗೆ ಅದರಲ್ಲಿ ಯಶಸ್ಸು ಬರಲಿಲ್ಲ. ಜಾನ್ ಫೆಲ್ಬನ್ ಎಂಬ ಅವನ ಶತ್ರುವೊಬ್ಬನು ಅವನನ್ನು ೧೬೨೮ರಲ್ಲಿ ಪೋರ್ಟ್ಸಮಥ್ ಎಂಬಲ್ಲಿ ಕೊಂದನು.

ಸ್ಟ್ರಾಫರ್ಡ (೧೫೯೩-೧೬೪೧)—ಇವನ ಹೆಸರು ಸರ್ ಥಾಮಸ್ ವೆಂಟವರ್ಥ ಎಂದಿದ್ದಿತು, ಇವನು ಬಕಿಂಗಹೆಮನ ಪ್ರತಿಸ್ಪರ್ಧಿಯಾಗಿದ್ದನು. ಬಕಿಂಗಹೆಮನನ್ನು ಮಂತ್ರಿಪದದಿಂದ ದೂರಮಾಡಬೇಕೆಂದು ಕೇಳುವುದರಲ್ಲಿ ಪ್ರಮುಖನಾಗಿದ್ದನು. ಬಕಿಂಗಹೆಮನ ಮರಣದ ತರುವಾಯದಲ್ಲಿ ಚಾರ್ಲಸನು ಅವನನ್ನು ತನ್ನ ಪಕ್ಷಕ್ಕೆ ಒಲಿಸಿಕೊಂಡು, ಅವನಿಗೆ ಮಂತ್ರಿಪದವನ್ನು ಕೊಟ್ಟು (೧೬೨೯) ಅವನನ್ನು ಸ್ಟ್ರಾಫರ್ಡದ ಲಾರ್ಡನಾಗಿ ಮಾಡಿದನು. ೧೬೨೯—೪೦ರ ವರೆಗೆ ಚಾರ್ಲಸನು ಪಾರ್ಲಿಮೆಂಟ ಸಭೆಯನ್ನು ಕರೆಯದೆ ಸ್ಟ್ರಾಫರ್ಡನ ಆಲೋಚನೆಯಂತೆ ಅನಿಯಂತ್ರಿತವಾಗಿ ರಾಜ್ಯಕಾರಭಾರವನ್ನು ಮಾಡುತ್ತ ಜನರ ಮೇಲೆ ತನ್ನ ಅಧಿಕಾರದಿಂದ ಕರಗಳನ್ನು ಹೇರಿದನು. ಚಾರ್ಲಸನು ೧೬೩೩ರಲ್ಲಿ ಸ್ಟ್ರಾಫರ್ಡನನ್ನು ಐರ್ಲಂಡಿನ ಗವ್ಹರ್ನರನನ್ನು ಮಾಡಿ ಅಲ್ಲಿ ಅವನನ್ನು ಕಳುಹಿದನು. ಸ್ಟ್ರಾಫರ್ಡನು ಅಲ್ಲಿ ಶಾಶ್ವತ ಸೈನ್ಯವನ್ನು ನಿರ್ಮಿಸಿ ಉಗ್ರನೀತಿಯನ್ನು ಕೈಕೊಂಡು ಅಲ್ಲಿಯ ಬಂಡುಗಳನ್ನು ಮುರಿದನು. ಸ್ಕಾಟಲಂಡಿನಲ್ಲಿ ಯುದ್ಧವು ಪ್ರಾರಂಭವಾಗಲು ಚಾರ್ಲಸನು ಅವನನ್ನು ಇಂಗ್ಲಂಡಿಗೆ ತಿರುಗಿ ಕರೆಕಳಿಸಿದನು (೧೬೪೦). ೧೬೪೦ರಲ್ಲಿ ಲಾಂಗ ಪಾರ್ಲಿಮೆಂಟು ಅವನ ವಿಚಾರಣೆಯನ್ನು ಮಾಡಿ ದೇಶದ್ರೋಹದ ಆರೋಪದಿಂದ ಅವನನ್ನು ೧೬೪೧ರಲ್ಲಿ ಶೂಲಕ್ಕೇರಿಸಿತು.

ಆರ್ಚಬಿಶಪ್ ಲಾಡ್ (೧೫೭೩-೧೬೪೫)—ಇವನು ಸ್ಟ್ರಾಫರ್ಡನ ಮಿತ್ರನಾಗಿದ್ದನು. ೧೬೩೩ರಲ್ಲಿ ಚಾರ್ಲಸನು ಅವನನ್ನು ಕೆಂಟರ್ಬರಿಯ ಆರ್ಚಬಿಶಪನಾಗಿ ನಿಯೋಜಿಸಿದನು. ಮುಂದೆ ಇವನು ಧಾರ್ಮಿಕ ವಿಷಯದಲ್ಲಿ ರಾಜನ ಮುಖ್ಯಮಂತ್ರಿಯಾದನು. ಇವನು ಎಪಿಸ್ಕೊಪೇಲಿಯನ್ ಪಂಥದ ಅಭಿಮಾನಿಯಾಗಿದ್ದನು. ಇವನನ್ನು ಚಾರ್ಲಸನು ಹಾಯ್‌ಕಮಿಶನರ ಕೋರ್ಟಿನ ಅಧ್ಯಕ್ಷನಾಗಿ ನಿಯೋಗಿಸಿದನು. ಈ ಅಧಿಕಾರದಲ್ಲಿರುವಾಗ ಅವನು ಎಪಿಸ್ಕೊಪೇಲಿಯನ್ ಪಂಥದವರಲ್ಲದ ಪ್ಯುರಿಟನ್ ಜನರನ್ನು ಉಗ್ರವಾದ ಶಿಕ್ಷೆಗೆ ಗುರಿಮಾಡಿದನು. ಇವನ ಸೂಚನೆಯಿಂದಲೆ ಚಾರ್ಲಸನು ಸ್ಕಾಟಲಂಡಿನಲ್ಲಿ ಇಂಗ್ಲಂಡಿನ ಎಪಿಸ್ಕೊಪೇಲಿಯನ್ ಪಂಥವನ್ನು ಮತ್ತು ಪ್ರಾರ್ಥನೆಯ ಪುಸ್ತಕವನ್ನು ಪ್ರಾರಂಭಿಸಲು ಯತ್ನಿಸಿದನು. ಆದರಿಂದ ಸ್ಕಾಟಲಂಡಿನಲ್ಲಿ ಬಂಡುಗಳು ಹುಟ್ಟಿದುವು

ಲಾಂಗ ಪಾರ್ಲಿಮೆಂಟು ಅವನನ್ನು ವಿಚಾರಣೆಗೆ ಗುರಿಮಾಡಿ ದೇಶದ್ರೋಹದ ಆರೋಪದಿಂದ ೧೬೪೫ರಲ್ಲಿ ಶೂಲಕ್ಕೇರಿಸಿತು.

ಜಾನ್ ಹಮ್ಪ್ಟನ್ (೧೫೯೫-೧೬೪೩) — ಜಾನ್ ಹೆಮ್ಪ್ಟನನು ೧ನೆಯ ಚಾರ್ಲ್ಸನ ಆಳ್ಕೆಯಲ್ಲಿ ಪಾರ್ಲಿಮೆಂಟಿನ ಪ್ರಮುಖ ಸದಸ್ಯನಾಗಿದ್ದನು. ಚಾರ್ಲಸನು ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಹಡಗುಗಳಿಗೋಸುಗ ಕರವನ್ನು (Shipmoney) ಕೂಡಿಸಲು ಅವನು ಅದು ಕಾಯ್ದೆಗೆ ವಿರುದ್ಧವಾದುದೆಂದು ಹೇಳಿ ಅದನ್ನು ಕೊಡಲು ಒಪ್ಪಲಿಲ್ಲ. ಈ ಕಾರಣದಿಂದ ಅವನು ವಿಚಾರಣೆಗೆ ಗುರಿಮಾಡಲ್ಪಟ್ಟನು. ಚಾರ್ಲಸನಿಗೆ ಅನುಕೂಲವಾದ ನ್ಯಾಯಾಧೀಶರು ಅವನು ದೋಷಿ ಎಂದು ನಿರ್ಣಯವಿತ್ತರು. ಆದರೆ ಪಾರ್ಲಿಮೆಂಟಿನ ಸತ್ತೆಯನ್ನು ಎತ್ತಿ ಹಿಡಿಯಲು ಅವನು ಪ್ರಯತ್ನಿಸಿದುದರಿಂದ ಅವನು ಲೋಕಪ್ರಿಯನಾದನು. ರಾಜನ ಸ್ವೈರವೂ ಕಾಯದೆಯ ವಿರುದ್ಧವೂ ಆದ ಸತ್ತೆಯನ್ನು ವಿರೋಧಿಸುವ ಪಾರ್ಲಿಮೆಂಟಿನ ಮುಂದಾಳುಗಳಲ್ಲಿ ಇವನೊಬ್ಬನಾಗಿದ್ದನು. ರಾಜನ ಮತ್ತು ಪಾರ್ಲಿಮೆಂಟಿನ ನಡುವೆ ಯುದ್ಧವು ಪ್ರಾರಂಭವಾದಬಳಿಕ ಪಾರ್ಲಿಮೆಂಟಿನ ಪಕ್ಷದಿಂದ ಯುದ್ಧಮಾಡುತ್ತಿರುವಾಗ ೧೬೪೩ರಲ್ಲಿ ಚಾಲ್‌ಗ್ರೀವ್ಹಫೀಲ್ಡಿನ ಕಾಳಗದಲ್ಲಿ ಮರಣಹೊಂದಿದನು.

ಕ್ಲರೆಂಡನ್ (೧೬೦೮-೧೬೭೪) — ಕ್ಲರೆಂಡನನ ಮೊದಲಿನ ಹೆಸರು ಎಡ್ವರ್ಡ ಹಾಯಿಡ್ ಎಂದಿದ್ದಿತು. ಮುಂದೆ ಅವನು ಕ್ಲರೆಂಡನ್ನಿನ ಡ್ಯೂಕನಾಗಿ ಮಾಡಲ್ಪಟ್ಟನು. ೧ನೆಯ ಚಾರ್ಲಸನ ಆಳ್ಕೆಯಲ್ಲಿ ಪಾರ್ಲಿಮೆಂಟಿನ ಸದಸ್ಯನಾಗಿದ್ದು ರಾಜನ ಪಕ್ಷದವನಾಗಿದ್ದನು. ಚಾರ್ಲಸನು ಕೊಲ್ಲಲ್ಪಟ್ಟಬಳಿಕ ಅವನು ಹಾಲಂಡಿಗೆ ಹೋದನು. ರಾಜಪುತ್ರ ಚಾರ್ಲಸನು ಆಗ ಹಾಲಂಡಿನಲ್ಲಿದ್ದನು. ಕ್ಲರೆಂಡನನು ಇಂಗ್ಲಂಡಿನಲ್ಲಿ ಮತ್ತೆ ರಾಜಸತ್ತೆಯನ್ನು ಸ್ಥಾಪಿಸಿ ಇಂಗ್ಲಂಡಿನ ಪಟ್ಟವನ್ನು ರಾಜಪುತ್ರ ಚಾರ್ಲಸನಿಗೆ ದೊರಕಿಸಿಕೊಡಲು ಬಹಳವಾಗಿ ಪ್ರಯತ್ನಿಸಿದನು. ರಾಜಪುತ್ರ ಚಾರ್ಲಸನು ರಾಜನಾದ ಬಳಿಕ ಕ್ಲರೆಂಡನನನ್ನು ಚಾನ್ಸಲರನಾಗಿ ನಿಯೋಜಿಸಿದನು. ಕ್ಲರೆಂಡನನು ರಾಜನ ಪ್ರಮುಖ ಮಂತ್ರಿಯಾದನು. ಅವನ ಹೇಳಿಕೆಯಿಂದಲೆ ಪಾರ್ಲಿಮೆಂಟು ರೋಮನ್ ಕಥಲಿಕ್, ಪ್ಯುರಿಟನ್ ಮತ್ತು ನಾನ್‌ಕನ್‌ಫಾರ್ಮಿಸ್ಟ ಜನರ ವಿರುದ್ಧವಾಗಿ ಕಾಯದೆಗಳನ್ನು ಮಾಡಿದುದರಿಂದ ಈ ಕಾಯದೆಗಳಿಗೆ "ಕ್ಲರೆಂಡನ್ ಕೋಡ್" ಎಂದು ಹೆಸರು ಬಂದಿತು. ಅವನ ಮಗಳಾದ ಅನ್ ಹಾಯಿಡ್ ಇವಳ ಮದುವೆ ಚಾರ್ಲಸನ ತಮ್ಮನಾದ ಜೇಮ್ಸನೊಡನೆ (ಇವನು ಮುಂದೆ ರಾಜನಾದನು) ಆಯಿತು. ಈ ಲಗ್ನದ ಸಂಬಂಧದಿಂದಾದ ಮೇರಿ ಮತ್ತು ಅನ್ ಎಂಬಿಬ್ಬರು ಹೆಣ್ಣುಮಕ್ಕಳು ಮುಂದೆ ಇಂಗ್ಲಂಡಿನಲ್ಲಿ ರಾಜ್ಯವಾಳಿದರು. ೧೬೬೭ರಲ್ಲಿ ಡಚ್ ಜನರೊಡನೆ ಆದ ಯುದ್ಧದಲ್ಲಿ ಅಪಯಶವು ಬಂದುದರಿಂದ ಯುದ್ಧದ ವಿಷಯದಲ್ಲಿ ಯೋಗ್ಯ ವ್ಯವಸ್ಥೆ ಮಾಡಲ್ಪಡಲಿಲ್ಲವೆಂದು ಪಾರ್ಲಿಮೆಂಟು ಕ್ಲರೆಂಡನನನ್ನು ವಿಚಾರಣೆಗೆ ಗುರಿಮಾಡಿತು. ಅದುದರಿಂದ ಅವನು ಇಂಗ್ಲಂಡಿನಿಂದ ಓಡಿಹೋದನು. ಪಾರ್ಲಿಮೆಂಟು ಇವನು ಗಡಿಪಾರುಮಾಡಲ್ಪಟ್ಟಿರುವನೆಂದು ನಿರ್ಣಯ ಮಾಡಿತು. ಕ್ಲರೆಂಡನನು ದೇಶಬಹಿಷ್ಕೃತನಾಗಿದ್ದ ಸಮಯದಲ್ಲಿ ಚಾರ್ಲಸ ಮತ್ತು

ಪಾರ್ಲಿಮೆಂಟ್ ಇವರ ನಡುವೆ ಆದ ಯುದ್ಧವನ್ನು ಕುರಿತು "ಬಂಡಿನ ಇತಿಹಾಸ" ಎಂಬ ಪುಸ್ತಕವನ್ನು ಬರೆದನು.

ಮಾರ್ಲಬರೊ (೧೬೫೦-೧೭೨೨) — ಇವನ ಮೊದಲಿನ ಹೆಸರು ಜಾನ್ ಚರ್ಚಿಲ್ ಎಂದಿದ್ದಿತು. ಮುಂದೆ ಇವನು ಮಾರ್ಲಬರೋವಿನ ಸರದಾರನಾಗಿ ಮಾಡಲ್ಪಟ್ಟನು. ೩ನೆಯ ವಿಲಿಯಮ್ ಮತ್ತು ಆನ್ ಇವರ ಆಳ್ಕೆಯಲ್ಲಿ ಅವನು ಪ್ರಸಿದ್ಧ ಸೇನಾಪತಿಯೂ ಕಾರಸ್ಥಾನಿಯೂ ಆಗಿದ್ದನು. ೨ನೆಯ ಚಾರ್ಲಸನ ಆಳ್ಕೆಯಲ್ಲಿ ಅವನು ಸೈನ್ಯದಲ್ಲಿ ಅಧಿಕಾರ ಸ್ಥಳದಲ್ಲಿ ನಿಯೋಜಿಸಲ್ಪಟ್ಟನು. ೨ನೆಯ ಜೇಮ್ಸನ ಆಳ್ಕೆಯಲ್ಲಿ ಮನ್‌ಮಥನ ಬಂಡನ್ನು ಮುರಿವ ಕೆಲಸದಲ್ಲಿ ಅವನು ಪರಾಕ್ರಮವನ್ನು ಪ್ರದರ್ಶಿಸಿದನು. ಅವನು ಜೇಮ್ಸನ ಪ್ರೇಮಕ್ಕೆ ಪಾತ್ರನಾಗಿದ್ದನು. ಆದರೆ ವಿಲಿಯಮನು ಇಂಗ್ಲಂಡಿಗೆ ಬಂದಬಳಿಕ ಅವನು ಜೇಮ್ಸನ ಪಕ್ಷವನ್ನು ಬಿಟ್ಟು ವಿಲಿಯಮನ ಪಕ್ಷವನ್ನು ಕೂಡಿದನು. ವಿಲಿಯಮನು ಅವನನ್ನು ಸೇನಾಪತಿಯಾಗಿ ನಿಯೋಜಿಸಿದನು. ಆದರೆ ಹೀಗೆ ಸೇನಾಪತಿಯಾಗಿರುವಾಗಲೂ ಅವನು ೨ನೆಯ ಜೇಮ್ಸನೊಡನೆ ಒಳಸಂಚನ್ನು ನಡೆಯಿಸಿದನು. ಅವನ ಹೆಂಡತಿಯಾದ ಸಾರಾ ಜೆನಿಂಗ್ಸ ಇವಳು ಕಾರಸ್ಥಾನಕುಶಲೆಯಾಗಿದ್ದಳು. ಆನ್ ರಾಣಿಯ ಮೇಲೆ ಅವಳ ವರ್ಚಸ್ಸು ಬಹಳವಾಗಿದ್ದಿತು. ಆನ್ ರಾಣಿಯ ಆಳ್ಕೆಯಲ್ಲಿ ಸ್ಪೇನದ ಪಟ್ಟದ ಉತ್ತರಾಧಿಕಾರಿತ್ವದ ವಿಷಯದಲ್ಲಿ ಯುದ್ಧವು ಪ್ರಾರಂಭವಾಗಲು ಮಾರ್ಲಬರೊ ಇವನು ಮಿತ್ರರಾಷ್ಟ್ರಗಳ ಸೈನ್ಯದ ಮುಖ್ಯ ಸೇನಾಪತಿಯಾಗಿ ನಿಯೋಜಿಸಲ್ಪಟ್ಟನು. ಅವನು ಬ್ಲೆನ್‌ಹಿಮ್ (೧೭೦೪), ರೆಮೆಲಿಜ್, ಔಡೇನಾರ್ಡ ಮತ್ತು ಮಾಲ್‌ಪ್ಲಾಕೆ ಈ ಕಾಳೆಗಗಳಲ್ಲಿ ಫ್ರೆಂಚರನ್ನು ಸೋಲಿಸಿದನಾದುದರಿಂದ "ಯಶಸ್ವಿ ಸೇನಾಪತಿ"ಯೆಂದು ಎಲ್ಲೆಲ್ಲಿಯೂ ಅವನ ಕೀರ್ತಿ ಹಬ್ಬಿತು. ಪಾರ್ಲಿಮೆಂಟು ಅವನಿಗೆ "ಬ್ಲೆನಿಮ್ ಹೌಸ್" ಎಂಬ ಪ್ರಾಸಾದವನ್ನು ಕಟ್ಟಿಸಿಕೊಟ್ಟಿತು. ೧೭೧೦ರ ತರುವಾಯ ಟೋರಿ ಪ್ರಧಾನರ ಕೈಯಲ್ಲಿ ಸತ್ತೆ ಹೋಯಿತು, ಮತ್ತು ಸಾರಾ ಜೆನಿಂಗ್ಸ ಮತ್ತು ಆನ್ ರಾಣಿ ಇವರಲ್ಲಿ ವೈಮನಸ್ಯವು ಹುಟ್ಟಿತು. ಆದುದರಿಂದ ಮಾರ್ಲಬರೊ ಅವನು ಸೇನಾಪತಿಪದದಿಂದ ದೂರಮಾಡಲ್ಪಟ್ಟನು (೧೭೧೧). ೧ನೆಯ ಜಾರ್ಜ ರಾಜನು ಅವನನ್ನು ಮುಖ್ಯ ಸೇನಾಪತಿಯಾಗಿ ನಿಯೋಜಿಸಿದನು. ೧೭೨೨ರಲ್ಲಿ ಮಾರ್ಲಬರೊ ಮರಣ ಹೊಂದಿದನು.



## ಪರಿಶಿಷ್ಟ ೨.

### ಸ್ಟುವರ್ಟ ಕಾಲದ ವಿಷಯದಲ್ಲಿ ಮಹತ್ವದ ಪ್ರಶ್ನೆಗಳು.—

೧. "ರಾಜನ ಸತ್ತೆ ಈಶ್ವರದತ್ತವಾದುದು" (Divine Right Theory) ಎಂಬ ತತ್ವದ ಅರ್ಥವೇನು? ಈ ತತ್ವವನ್ನು ಮೊದಲು ಯಾರು ಆದರಿಸಿದರು? ಈ ತತ್ವದಂತೆ ನಡೆಯಲು ಯಾರು ಪ್ರಯತ್ನಿಸಿದರು ಮತ್ತು ಪರಿಣಾಮಗಳೇನಾದುವು?

೨. ಇಂಗ್ಲಂಡಿನ ಪಟ್ಟಕ್ಕೆ ಜೇಮ್ಸನಿಗೆ ವಂಶಪರಂಪರೆಯಿಂದ ಅಧಿಕಾರವಿದ್ದಿತೆಂಬು ದನ್ನು ವಂಶವೃಕ್ಷವನ್ನು ಬರೆದು ತೋರಿಸಿರಿ. ಇಂಗ್ಲಂಡಿನ ಪಟ್ಟಕ್ಕೆ ಮತ್ತೆ ಯಾರಿಗೆ ಅಧಿಕಾರವಿತ್ತೆಂಬುದನ್ನು ವಂಶವೃಕ್ಷದಿಂದ ತೋರಿಸಿರಿ.

೩. ೧ನೆಯ ಚಾರ್ಲಸ್ ಮತ್ತು ಪಾರ್ಲಿಮೆಂಟ್ ಇವರ ನಡುವೆ ಕಲಹವು ಏಕೆ ಉದ್ಭವಿಸಿತು? ಚಾರ್ಲಸನು ಅನಿಯಂತ್ರಿತವಾಗಿ ರಾಜ್ಯಕಾರಭಾರವನ್ನು ಮಾಡಿದುದು ಹೇಗೆ? ಅದರ ಪರಿಣಾಮವೇನಾಯ್ತು?

೪. ಈ ಮುಂದಿನ ಜನರನ್ನು ಕುರಿತು ನಿಮಗೆ ಗೊತ್ತಿದ್ದುದನ್ನು ಬರೆಯಿರಿ:— ಶೇಕ್ಸ್‌ಪೀಯರ್, ಸರ ವಾಲ್ಟರ ರೆಲೆ, ಬಕಿಂಗಹೆಮ್, ಸ್ಟ್ರಾಫರ್ಡ್, ಲಾಡ್, ಬೇಕನ್ ಮತ್ತು ಹಂಪ್‌ಡೆನ್.

೫. ಈ ಮುಂದಿನ ಮಾತುಗಳನ್ನು ಕುರಿತು ಟಿಪ್ಪಣಿಗಳನ್ನು ಬರೆಯಿರಿ:—ಹಾಂಪ ಟನ್ ಕೋರ್ಟ ಪರಿಷತ್ತು, ಗನ್ ಪೌಡರ್ ಸಂಚು, ರೌಂಡ್ ಹೆಡ್ಸ ಮತ್ತು ಕೆವೆಲಿಯರ್ಸ, ಶಿಪ್‌ಮನಿ, ಪಿಟಿಶನ್ ಆಫ್ ರೈಟ್ಸ, ಪ್ರೆಸ್ಬಿಟೀರಿಯನ್ ಪಂಥವು.

೬. ಸ್ಕಾಟಿಶ್‌ಜನರಿಗೆ ಸೇರದಿದ್ದ ಯಾವ ಮಾತುಗಳನ್ನು ೧ನೆಯ ಚಾರ್ಲಸನು ಮಾಡಿದನು, ಮತ್ತು ಅದರ ಪರಿಣಾಮವೇನಾಯಿತು?

೭. 'ಲಾಂಗ ಪಾರ್ಲಿಮೆಂಟ್' ಎಂದರೇನು? ಈ ಪಾರ್ಲಿಮೆಂಟು ಮಾಡಿದ ಮಹ ತ್ವದ ಮಾತುಗಳಾವುವು?

೮. 'ರಂಪ್ ಪಾರ್ಲಿಮೆಂಟ್' ಎಂದರೇನು? ನೀವು ರಂಪ್ ಪಾರ್ಲಿಮೆಂಟಿನ ಸದಸ್ಯರಿರುವಿರೆಂದು ಭಾವಿಸಿ ಕ್ರಾಮವೆಲನು ಈ ಪಾರ್ಲಿಮೆಂಟಿನೊಡನೆ ನಡೆದ ರೀತಿಯನ್ನು ಕುರಿತು ನಿಮ್ಮ ಅಭಿಪ್ರಾಯವನ್ನು ಬರೆಯಿರಿ.

೯. ಕ್ರಾಮವೆಲನ ಕಾರಭಾರವು ಯಶಸ್ವಿಯಾದುದೊ ಇಲ್ಲವೊ ಎಂಬುದನ್ನು ಹೇಳಿರಿ. ಆತನ ಅಂತಃಸ್ಥ ಮತ್ತು ಪರರಾಷ್ಟ್ರೀಯ ನೀತಿಗಳನ್ನು ಕುರಿತು ನಿಮಗೆ ಗೊತ್ತಿದ್ದುದನ್ನು ಬರೆಯಿರಿ.

೧೦. 'ಇಂಪೀಚಮೆಂಟ' ಮತ್ತು 'ಬಿಲ್ ಆಫ್ ಅಟೇಂಡರ್' ಇವುಗಳಲ್ಲಿಯ ಭೇದವೇನು? ಸ್ಟುವರ್ಟರ ಕಾಲದಲ್ಲಿ ಈ ಪದ್ಧತಿಯಂತೆ ಯಾರು ವಿಚಾರಣೆಗೆ ಗುರಿಮಾಡಲ್ಪಟ್ಟರು?

೧೧. ಇಂಗ್ಲಂಡಿನಲ್ಲಿ ೧೬೬೦ರಲ್ಲಿ ಮತ್ತೆ ರಾಜಸತ್ತೆ ಏಕೆ ಸ್ಥಾಪಿಸಲ್ಪಟ್ಟಿತು? ಅದನ್ನು ಸ್ಥಾಪಿಸಲು ಪ್ರಯತ್ನ ಮಾಡಿದವರಾರು?

೧೨. ೨ನೆಯ ಚಾರ್ಲಸನ ಸ್ವಭಾವವನ್ನೂ, ಅವನು ಕೈಕೊಂಡ ನೀತಿಯನ್ನೂ ಕುರಿತು ನಿಮಗೆ ಗೊತ್ತಿದ್ದುದನ್ನು ಬರೆಯಿರಿ, ಮತ್ತು ಅವನ ಆಳ್ಕೆಯಲ್ಲಿ ಮಹತ್ವದ ಮಾತುಗಳಾವುವೆಂಬುದನ್ನು ಹೇಳಿರಿ.

೧೩. ಅಮೇರಿಕೆಯಲ್ಲಿ ಇಂಗ್ಲಂಡಿನ ವಸಾಹತುಗಳಾವುವಿದ್ದುವು? ಮತ್ತು ಅವು ಗಳನ್ನು ಯಾರು ಎಂದು ಸ್ಥಾಪಿಸಿದರು? ಆ ವಸಾಹತುಗಳ ವಿಷಯದಲ್ಲಿ ಇಂಗ್ಲಂಡಿನ ನೀತಿ ಹೇಗಿದ್ದಿತು?

೧೪. ಪೌರ್ವಾತ್ಯ ವ್ಯಾಪಾರದ ವಿಷಯದಲ್ಲಿ ಮೊದಲು ಪ್ರಯತ್ನಿಸಿದ ರಾಷ್ಟ್ರಗಳಾ ವುವು? ಇಂಗ್ಲಂಡು ಮಾಡಿದ ಪ್ರಯತ್ನಗಳಾವುವು? ಮತ್ತು ಅದಕ್ಕೆ ಬಂದ ಆತಂಕಗಳಾವುವು? ಹಿಂದುಸ್ಥಾನದಲ್ಲಿ ಇಂಗ್ಲಿಶರು ಎಲ್ಲಿ ಮತ್ತು ಯಾವಾಗ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಿದರು?

೧೫. ತಮ್ಮ ರಾಷ್ಟ್ರದ ವ್ಯಾಪಾರವು ಬೆಳೆಯಬೇಕೆಂದು ಇಂಗ್ಲಿಶರು ಏನು ಮಾಡಿ ದರು ಮತ್ತು ಯಾವ ಕಾಯದೆಗಳನ್ನು ನಿರ್ಮಿಸಿದರು? ಈ ವಿಷಯದಲ್ಲಿ ಯಾರೊಡನೆ ಅವರು ಯುದ್ಧವನ್ನು ಮಾಡಬೇಕಾಯಿತು, ಮತ್ತು ಅದರ ಪರಿಣಾಮವೇನು?

೧೬. ೨ನೆಯ ಜೇಮ್ಸನ ಆಳ್ಕೆ ಅಪ್ರಿಯವಾಗಲು ಕಾರಣವೇನು? ಜನರಿಗೆ ಸೇರ ದಿದ್ದ ಯಾವ ಮಾತುಗಳನ್ನು ಅವನು ಮಾಡಿದನು ಮತ್ತು ಅದರ ಪರಿ ಣಾಮವೇನು?

೧೭. ಮುಂದಿನ ಮಾತುಗಳನ್ನು ಕುರಿತು ಟಿಪ್ಪಣಿಗಳನ್ನು ಬರೆಯಿರಿ:—ಟೆಸ್ಟ ಆಕ್ಟ, ಡೋವ್ಹರದ ಗುಪ್ತ ಒಪ್ಪಂದವು, ಹೇಬಿಯಸ್ ಕಾರ್ಪಸ್ ಆಕ್ಟ, ಕ್ಲರೆಂಡನ್ ಕೋಡ, ಡಿಕ್ಲರೇಶನ್ ಆಫ್ ಇಂಡಲ್ಜನ್ಸ, ಎಕ್ಸಕ್ಲೂಜನ ಬಿಲ್, ಕೇಬಲ್ ಮಂತ್ರಿಮಂಡಳ, ನವಿಗೇಶನ್ ಆಕ್ಟ, ಕನ್‌ವೆನ್‌ಶನ್ ಪಾರ್ಲಿ ಮೆಂಟ್.

೧೮. ಮುಂದಿನ ಜನರ ವಿಷಯದಲ್ಲಿ ಮಾಹಿತಿಯನ್ನು ಕೊಡಿರಿ:—ಕ್ಲೆರೆಂಡನ್, ಮಾರ್ಲಬರೊ, ೧೪ನೆಯ ಲುಯಿ, ಡೆನ್‌ಬಿ, ಶಾಫ್ಟ್ಸಬರಿ.

೧೯. 'ಬಿಲ್ ಆಫ್ ರೈಟ್ಸ' ಎಂದರೇನು? ಅದರಲ್ಲಿಯ ಮುಖ್ಯ ಕಲಮುಗಳಾ ವುವು? ಆದರಿಂದ ಪರಿಣಾಮುಗಳೇನಾದುವು?

೨೦. ಇಂಗ್ಲಂಡಿನ ಪಟ್ಟಕ್ಕೆ ೩ನೆಯ ವಿಲಿಯಮನಿಗೆ ಅಧಿಕಾರವು ಹೇಗೆ ಉಂಟಾ ಯಿತು ಎಂಬುದನ್ನು ವಂಶವೃಕ್ಷವನ್ನು ಬರೆದು ತೋರಿಸಿರಿ.

೨೧. ೧೬೮೮ರಲ್ಲಿ ಆದ ರಾಜ್ಯಕ್ರಾಂತಿ ಎಂದರೇನು? ಇದಕ್ಕೆ ರಾಜ್ಯಕ್ರಾಂತಿ ಎಂಬ ಹೆಸರು ಏಕೆ ಬಂದಿತು?

೨೨. ವಿಲಿಯಮನು ಫ್ರಾನ್ಸಿನ ವಿರುದ್ಧವಾಗಿ ನೀತಿಯನ್ನೇಕೆ ಕೈಕೊಂಡನು? ಇಂಗ್ಲಂಡಿನ ಪಾರ್ಲಿಮೆಂಟು ಅದಕ್ಕೆ ಏಕೆ ಬೆಂಬಲವಿತ್ತಿತು?

೨೩. ಸ್ಪೇನದ ಪಟ್ಟವನ್ನು ಕುರಿತು ಉದ್ಭವಿಸಿದ ಉತ್ತರಾಧಿಕಾರಿತ್ವದ ಪ್ರಶ್ನದಲ್ಲಿ ಇತರ ಯುರೋಪಿಯನ್ ರಾಷ್ಟ್ರಗಳ ಹಿತಸಂಬಂಧಗಳು ಏನಿದ್ದುವು? ಈ

ವಿಷಯದಲ್ಲಿ ಯುದ್ಧವು ಏಕಾಯಿತು? ಈ ಯುದ್ಧದಲ್ಲಿ ಇಂಗ್ಲಂಡು ಮಾಡಿದ ಕಾರ್ಯವೇನು? ಈ ಯುದ್ಧದಿಂದ ಇಂಗ್ಲಂಡಿಗೆ ಆದ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ಲಾಭಗಳಾವುವು?

೨೪. ಮುಂದಿನ ಮಾತುಗಳನ್ನು ಕುರಿತು ಟಿಪ್ಪಣಿಗಳನ್ನು ಬರೆಯಿರಿ:— ಮ್ಯುಟಿನಿ ಅಕ್ಟ, ಬೆಂಕ ಆಫ್ ಇಂಗ್ಲಂಡ್, ರಾಷ್ಟ್ರೀಯ ಸಾಲವು, ಡರಾಯನ್ (ಪನಾಮಾ) ಎಂಬಲ್ಲಿಯ ಸ್ಕಾಟಿಶ್ ಜನರ ವಸಾಹತು, ಇಂಗ್ಲಿಶ್ ಮತ್ತು ಸ್ಕಾಟಿಶ್ ಪಾರ್ಲಿಮೆಂಟುಗಳ ಏಕೀಕರಣವು, ಅಕ್ಟ ಆಫ್ ಸೆಟ್ಲಮೆಂಟ.

೨೫. ವ್ಹಿಗ್ ಮತ್ತು ಟೋರಿ ಪಕ್ಷಗಳು ಯಾವಾಗ ಮತ್ತು ಹೇಗೆ ಉಂಟಾದುವು? ಈ ಪಕ್ಷಗಳಿಗೆ ಈ ಹೆಸರುಗಳು ಬಂದುದು ಹೇಗೆ?

೨೬. ಟ್ಯೂಡರರ ಮತ್ತು ಸ್ಟುವರ್ಟರ ಕಾಲದಲ್ಲಿ ಐರ್ಲಂಡಿನಲ್ಲಿ ಯಾವ ಪರಿಸ್ಥಿತಿ ಇದ್ದಿತು? ಅಲ್ಲಿ ಅಸಂತೋಷವು ಬೆಳೆಯುತ್ತ ನಡೆದುದೇಕೆ?

೨೭. ಸ್ಟುವರ್ಟರ ಕಾಲದಲ್ಲಿಯ ಇಂಗ್ಲಂಡಿನ ಸಾಮಾಜಿಕ ಸ್ಥಿತಿ, ಉದ್ಯೋಗ-ವ್ಯವಸಾಯಗಳು, ಮನೋರಂಜನೆಗಳು, ಶಿಕ್ಷಣವು ಮತ್ತು ವಾಙ್ಮಯವು ಇವುಗಳನ್ನು ಕುರಿತು ಮಾಹಿತಿಯನ್ನು ಕೊಡಿರಿ.

೨೮. ೩ನೆಯ ವಿಲಿಯಮ್ ಮತ್ತು ಆನ್ ಇವರ ಆಳ್ಕೆಯಲ್ಲಿ ಪಾರ್ಲಿಮೆಂಟ ಸಭೆಯಲ್ಲಿ ಬಹುಮತವಿದ್ದ ಪಕ್ಷದ ತಂತ್ರದಂತೆ ರಾಜ್ಯಕಾರಭಾರವು ಏಕೆ ನಡಿಸಲ್ಪಡಲು ಪ್ರಾರಂಭವಾಯಿತೆಂಬುದನ್ನು ಬರೆಯಿರಿ.

————

# ೧೮ನೆಯ ಪ್ರಕರಣವು

## ೧ನೆಯ ಜಾರ್ಜನು

ಜನ್ಮವು ೧೬೬೦; ರಾಜ್ಯಾರೋಹಣವು (೫೪ನೆಯ ವರ್ಷದಲ್ಲಿ) ೧೭೧೪;
ಮೃತ್ಯು ೧೭೨೭.

(೧೭೧೪—೧೭೨೭)

### ತತ್ಕಾಲೀನ ರಾಜ್ಯಕರ್ತರು.

| ಫ್ರಾನ್ಸ | ಸ್ಪೇನ | ರಶಿಯಾ | ಆಸ್ಟ್ರಿಯಾ |
|---|---|---|---|
| ೧೪ನೆಯ ಲುಯಿ (೧೬೪೩—೧೭೧೫) | ೫ನೆಯ ಫಿಲಿಪ್ | ಪೀಟರ್ ದಿ ಗ್ರೇಟ್ (೧೬೮೨—೧೭೨೫) | ೬ನೆಯ ಚಾರ್ಲಸ್ (೧೭೦೦—೧೭೪೦) |
| ೧೫ನೆಯ ಲುಯಿ (೧೭೧೫—೧೭೭೪) | | | |

### ಮಹತ್ವದ ಇಸ್ವಿಗಳು

೧೭೧೫ ಜೆಕೋಬಾಯಿಟ್ ಬಂಡು.
೧೭೧೬ ಸೆಪ್ಟೆನಿಯಲ್ ಕಾಯ್ದೆ.
೧೭೨೦—೨೧ ಸೌಥ್ ಸೀ ಕಂಪನಿಯ ದಿವಾಳಿ.
೧೭೨೧ ವಾಲಪೋಲನು ಮುಖ್ಯ ಮಂತ್ರಿಯಾದುದು.

೧ನೆಯ ಜಾರ್ಜನು—ಅನ್ ರಾಣಿಯ ಮರಣದ ತರುವಾಯದಲ್ಲಿ ಇಂಗ್ಲಂಡಿನ ಪಟ್ಟಕ್ಕೆ ಅವಳ ಮಲತಮ್ಮನಾದ ಜೇಮ್ಸ ಎಡ್ವರ್ಡನು ಉತ್ತರಾಧಿಕಾರಿಯಾಗಿದ್ದನು. ಆದರೆ ಅವನು ರೋಮನ್ ಕಥಲಿಕ್ ಪಂಥದವನಾಗಿದ್ದುದರಿಂದ ಅವನಿಗೆ ಪಟ್ಟವು ದೊರೆಯಬಾರದೆಂದೂ ಪ್ರಾಟೆಸ್ಟಂಟ ಪಂಥದವರಿಗೆ ಅದು ದೊರೆಯಬೇಕೆಂದೂ ೧೭೦೧ರಲ್ಲಿ ಅಕ್ಟ ಆಫ್ ಸೆಟಲ್‌ಮೆಂಟ ಎಂಬ ಕಾಯ್ದೆ ಮಾಡಲ್ಪಟ್ಟಿತ್ತು. ಈ ಕಾಯ್ದೆಯನ್ನು ರದ್ದುಗೊಳಿಸಿ ಜೇಮ್ಸ ಎಡ್ವರ್ಡನಿಗೆ ಪಟ್ಟಗಟ್ಟಬೇಕೆಂದು ಅನ್ ರಾಣಿಯ ಆಳ್ಕೆಯಲ್ಲಿ ಟೋರಿ ಪಕ್ಷದ ಮಂತ್ರಿಗಳಾದ ಬಾಲಿಂಗಬ್ರೋಕ ಮತ್ತು ಆಕ್ಸಫರ್ಡ ಎಂಬವರು ಪ್ರಯತ್ನವನ್ನು ಮಾಡಿದರು. ಆದರೆ ಅವರಿಗೆ ಯಶವು ಬರಲಿಲ್ಲ. ಅನ್ ರಾಣಿ ಮರಣದ ಸಮಯದಲ್ಲಿ ವ್ಹಿಗ್ ಪಕ್ಷದವರ ಮಂತ್ರಿಗಳಿಗೆ ರಾಜ್ಯಕಾರಭಾರವನ್ನು

ಒಪ್ಪಿಸಿದ್ದಳು. ಈ ವ್ಹಿಗ್ ಪಕ್ಷದವರ ಪ್ರಯತ್ನದಿಂದ ೧ನೆಯ ಜೇಮ್ಸನ ಮೊಮ್ಮಗಳಾದ ಸೋಫಿಯಾ ಎಂಬವಳ ಮಗನಾದ ಜಾರ್ಜನು ಇಂಗ್ಲಂಡಿನ ಅರಸನಾದನು. ಜಾರ್ಜನು ಜರ್ಮನಿಯಲ್ಲಿಯ ಹನೋವರ ಸಂಸ್ಥಾನದ ಅಧಿಪತಿಯಾಗಿದ್ದನು. ಆದುದರಿಂದ ಅವನ ವಂಶಕ್ಕೆ *ಹನೋವರ ವಂಶವೆಂದು ಹೆಸರು ಬಂದಿತು. ಇಂಗ್ಲಂಡಿನಂತಹ ದೊಡ್ಡದೂ ಬಲಾಢ್ಯವೂ ಆದ ದೇಶಕ್ಕೆ ತಾನು ಅರಸನಾಗಿರುವೆನೆಂಬುದನ್ನು ಜಾರ್ಜನು ಅರಿತಿದ್ದರೂ ಅವನ ಒಲವು ಹನೋವರ ಸಂಸ್ಥಾನದ ಕಡೆಗೇ ಇದ್ದಿತು. ಪಟ್ಟಕ್ಕೆ ಬಂದಾಗ ಅವನು ೫೪ ವರ್ಷದವನಾಗಿದ್ದನು. ಅವನು ಶಾಂತ ಸ್ವಭಾವದವನಾಗಿದ್ದನು. ಅವನ ಮುಖಮುದ್ರೆಯೂ ರೀತಿನೀತಿಗಳೂ ಜನರ ಅಂತಃಕರಣವನ್ನು ಆಕರ್ಷಿಸುವಂತಹವು ಇರಲಿಲ್ಲ. ಅವನಿಗೆ ಇಂಗ್ಲಿಶ್ ಭಾಷೆ ಬರುತ್ತಿರಲಿಲ್ಲ, ಮತ್ತು ಇಂಗ್ಲಿಶರ ರೀತಿನೀತಿಗಳು ಗೊತ್ತಿರಲಿಲ್ಲ. ಆದುದರಿಂದ ಇಂಗ್ಲಿಶ್ ಜನರಿಗೂ ಅವನು ತಮ್ಮವನೆಂಬ ಭಾವನೆ ಇರಲಿಲ್ಲ. ಅವನು ಪರಕೀಯನೆಂದೇ ಅವರಿಗೆ ಎನಿಸುತ್ತಿದ್ದಿತು. ಆದರೆ ಅವನಿಗೆ ರಾಜಪದವನ್ನು ಕೊಡದಿದ್ದರೆ ಅದು ರೋಮನ್ ಕಥಲಿಕ್ ಪಂಥದವನಾದ ಜೇಮ್ಸ ಎಡ್ವರ್ಡನಿಗೆ ಹೋಗುವುದೆಂದು ಅವರು ಅವನನ್ನೇ ಇಂಗ್ಲಂಡಿನ ರಾಜನಾಗಿ ಮಾಡಿದರು.

**ವ್ಹಿಗ್ ಪಕ್ಷದ ಪ್ರಾಬಲ್ಯವು**—ಟೋರಿ ಪಕ್ಷದವರು ತನಗೆ ವಿರುದ್ಧವಿದ್ದು ವ್ಹಿಗ್ ಪಕ್ಷದವರ ಪ್ರಯತ್ನದಿಂದ ತನಗೆ ಇಂಗ್ಲಂಡಿನ ಪಟ್ಟವು ದೊರೆತಿತೆಂದು ಜಾರ್ಜನಿಗೆ ಗೊತ್ತಿದ್ದಿತು. ಆದುದರಿಂದ ಅವನೂ ಅವನ ತರುವಾಯದಲ್ಲಿ ಪಟ್ಟಕ್ಕೆ ಬಂದ ಅವನ ಮಗನಾದ ೨ನೆಯ ಜಾರ್ಜನೂ ವ್ಹಿಗ್ ಪಕ್ಷದವರನ್ನೇ ತಮ್ಮ ಮಂತ್ರಿಗಳಾಗಿ ನಿಯೋಜಿಸಿದರು. ಇಂಗ್ಲಂಡಿನಲ್ಲಿ ಪ್ರಾಟೆಸ್ಟಂಟ ಪಂಥವನ್ನೂ ಹನೋವರ ಮನೆತನವನ್ನೂ ಸ್ಥಿರಗೊಳಿಸಬೇಕು ಮತ್ತು ವ್ಯಾಪಾರೋದ್ಯೋಗಗಳಿಗೆ ಉತ್ತೇಜನವೀಯಬೇಕು ಎಂಬುದು ವ್ಹಿಗ್ ಪಕ್ಷದವರ ನೀತಿಯಾಗಿತ್ತು. ಆದುದರಿಂದ ಇಂಗ್ಲಂಡಿನಲ್ಲಿ ಬಹು ಜನ ಸಮಾಜದ ಬೆಂಬಲವು ಈ ಪಕ್ಷದವರಿಗೆ ಇದ್ದಿತು, ಮತ್ತು ಪಾರ್ಲಿಮೆಂಟಿನಲ್ಲಿಯೂ ಈ ಪಕ್ಷದವರ ಬಹುಮತವಿದ್ದಿತು. ಆದುದರಿಂದ ಮುಂದೆ ೫೦ ವರ್ಷಗಳ ವರೆಗೆ ವ್ಹಿಗ್ ಪಕ್ಷದವರದೇ ಪ್ರಾಬಲ್ಯವಿದ್ದಿತು.

**ಜಾರ್ಜನು ಮತ್ತು ಅವನ ವ್ಹಿಗ್ ಮಂತ್ರಿಗಳು**—ಜಾರ್ಜನು ಪಟ್ಟಕ್ಕೆ

---

*ಹನೋವರ ವಂಶವೃಕ್ಷವನ್ನು ಮುಂದಿನ ಪುಟದಲ್ಲಿ ನೋಡಿರಿ.

ಬಂದ ಬಳಿಕ ಟೌನ್‌ಝೆಂಡ, ಸ್ಟೆನಪ್, ಸಂಡರಲಂಡ್ ಮತ್ತು ವಾಲ್‌ಫೋಲ್ ಈ ವ್ಹಿಗ್ ಪಕ್ಷದ ಮುಂದಾಳುಗಳನ್ನು ತನ್ನ ಮಂತ್ರಿಗಳಾಗಿ ನಿಯೋಜಿಸಿದನು. ಟೋರಿ ಪಕ್ಷದ ಬಾಲಿಂಗ್‌ಬ್ರೋಕ್ ಮತ್ತು ಆಕ್ಸಫರ್ಡ ಈ ಮಂತ್ರಿ

---

## ಹೆನೋವರ ವಂಶದ ವಂಶವೃಕ್ಷವು.

ಹೆನೋವರ ವಂಶದ ವಂಶವೃಕ್ಷ (ಕವಲುಗಳನ್ನು ಒಳಸರಿತದಿಂದ ತೋರಿಸಲಾಗಿದೆ; = ಎಂದರೆ ಲಗ್ನ):

- ೧ನೆಯ ಜಾರ್ಜ (೧೭೧೪—೧೭೨೭)
  - ೨ನೆಯ ಜಾರ್ಜ (೧೭೨೭—೧೭೬೦)
    - ಫ್ರೆಡರಿಕ್ (ಸಕ್ಸಗೋಥಾದ ಆಗಸ್ಟಾ ಇವಳೊಡನೆ ಲಗ್ನವು) ಮೃತ್ಯು ೧೭೫೧
      - ೩ನೆಯ ಜಾರ್ಜ (೧೭೬೦—೧೮೨೦)
        - ೪ನೆಯ ಜಾರ್ಜ (೧೮೨೦—೧೮೩೦)
          - ರಾಜಕನ್ಯೆ ಚಾರ್ಲೋಟಿ ಮೃತ್ಯು ೧೮೧೭
        - ಫ್ರೆಡರಿಕ್ (ಡ್ಯೂಕ್ ಆಫ್ ಯಾರ್ಕ) ಮೃತ್ಯು ೧೮೨೭
        - ೪ನೆಯ ವಿಲಿಯಮ ೧೮೩೦—೧೮೩೭
        - ಎಡವರ್ಡ (ಡ್ಯೂಕ್ ಆಫ್ ಕೆಂಟ) ಮೃತ್ಯು ೧೮೨೦
          - ವಿಕ್ಟೋರಿಯಾ ೧೮೩೭—೧೯೦೧ = ಸಕ್ಸೋಬರ್ಗದ ಅಲ್ಬರ್ಟ ಮೃತ್ಯು ೧೮೬೧
            - ೭ನೆಯ ಎಡವರ್ಡ (೧೯೦೧—೧೯೧೦)
              - ೫ನೆಯ ಜಾರ್ಜ ೧೯೧೦—೧೯೩೬
                - ೮ನೆಯ ಎಡವರ್ಡ ೧೯೩೬ (ಜಾನೆವರಿಯಿಂದ ದಿಸೆಂಬರದ ವರೆಗೆ)
                - ೬ನೆಯ ಜಾರ್ಜ ೧೯೩೬ ದಿಸೆಂಬರದಿಂದ
  - ಸೋಫಿಯಾ (ಪ್ರಶಿಯದ ಫ್ರೆಡರಿಕ್ ವಿಲಿಯಮನೊಡನೆ ಲಗ್ನವು)
    - ಫ್ರೆಡರಿಕ್ ದಿ ಗ್ರೇಟ್

ಗಳು ಜೇಮ್ಸ ಎಡ್ವರ್ಡನಿಗೆ ಪಟ್ಟವನ್ನು ದೊರಕಿಸಿಕೊಡಲು ಪ್ರಯತ್ನಿಸಿದರಾದುದ ರಿಂದ ವ್ಹಿಗ್ ಮಂತ್ರಿಗಳು ಪಾರ್ಲಿಮೆಂಟಿನಲ್ಲಿ ಅವರ ಮೇಲೆ ರಾಜದ್ರೋಹದ ಆರೋಪವನ್ನು ಹೊರಿಸಿ ಅವರನ್ನು ವಿಚಾರಣೆಗೆ (Impeachment) ಗುರಿ ಮಾಡಿದರು. ಬಾಲಿಂಗಬ್ರೋಕನು ಫ್ರಾನ್ಸಿಗೆ ಓಡಿಹೋದನು. ಆದರೆ ಆಕ್ಸ ಫರ್ಡನು ಸೆರೆಮನೆಗೆ ಅಟ್ಟಲ್ಪಟ್ಟನು. ಆಕ್ಸಫರ್ಡನು ಟೋರಿ ಪಕ್ಷದಲ್ಲಿ ಬಹು ಲೋಕಪ್ರಿಯನಾಗಿದ್ದನು. ಆದುದರಿಂದ ಅವನು ಸೆರೆಮನೆಗೆ ಅಟ್ಟಲ್ಪಟ್ಟ ಬಳಿಕ ಅಲ್ಲಲ್ಲಿ ದೊಂಬೆಗಳು ಹುಟ್ಟಿದುವು. ಈ ದೊಂಬೆಗಳನ್ನು ಮುರಿಯಲು ವ್ಹಿಗ್ ಮಂತ್ರಿಗಳ ಸೂಚನೆಯನ್ನು ಅನುಸರಿಸಿ ಪಾರ್ಲಿಮೆಂಟು ೧೭೧೫ರಲ್ಲಿ **"ದೊಂಬೆಯ ಕಾಯ್ದೆ"** (Riot Act) ಎಂಬ ಕಾಯ್ದೆಯನ್ನು ಮಾಡಿತು. ಎಲ್ಲಿ ಯಾದರೂ ಒಂದೆಡೆಯಲ್ಲಿ ೧೨ ಜನರಿಗಿಂತ ಹೆಚ್ಚು ಜನರು ನೆರೆದು ಅಲ್ಲಿ ಸಾರ್ವ ಜನಿಕ ಶಾಂತತೆಯ ಭಂಗವಾಗಿ ದೊಂಬೆಯಾಗುವ ಸಂಭವವಿದೆಯೆಂದು ತೋರಿ ದರೆ ಆ ಜನಸಮುದಾಯವನ್ನು ಮುರಿಯಲು ಮ್ಯಾಜಿಸ್ಟ್ರೇಟರಿಗೆ ಅಧಿಕಾರವು ಕೊಡಲ್ಪಟ್ಟಿತು. ಜಾರ್ಜನ ವ್ಹಿಗ್ ಮಂತ್ರಿಗಳಲ್ಲಿ ಪರಸ್ಪರರ ವಿಷಯದಲ್ಲಿ ಮುಂದೆ ಮಾತ್ಸರ್ಯವು ಹುಟ್ಟಲಾರಂಭಿಸಿದುದರಿಂದ ಅವರಲ್ಲಿ ಮನಸ್ತಾಪವು ತಲೆದೋ ರಿತು. ಆದುದರಿಂದ ೧೭೧೭ರಲ್ಲಿ ಟೌನ್‌ಶೆಂಡ ಮತ್ತು ವಾಲ್‌ಪೋಲ್ ಇವರು ಅಧಿಕಾರತ್ಯಾಗವನ್ನು ಮಾಡಿದರು. ಆದರೆ ಮುಂದೆ ೧೭೨೦ರಲ್ಲಿ ಸೌಥ ಸೀ ಕಂಪನಿಯ ದಿವಾಳಿಯಾದ ಬಳಿಕ ಸಂಡರರ್ಲಂಡ್ ಮತ್ತು ಸ್ಟನಪ್ ಇವರು ಮಂತ್ರಿಮಂಡಳದಿಂದ ಹೊರಗೆ ಬರಬೇಕಾಯಿತು. ಆಗ ವಾಲ್‌ಪೋಲನು ಮತ್ತೆ ಮಂತ್ರಿಯಾದನು. ಇಂಗ್ಲಂಡಿನ ರಾಜಕಾರಣದ ಕಡೆಗೆ ಜಾರ್ಜನ ಲಕ್ಷ್ಯವಿರಲಿಲ್ಲ, ಮತ್ತು ಅವನಿಗೆ ಇಂಗ್ಲಿಶ್ ಭಾಷೆಯೂ ಬರುತ್ತಿರಲಿಲ್ಲ. ಆದುದ ರಿಂದ ಅವನು ಎಲ್ಲ ರಾಜ್ಯಕಾರಭಾರವನ್ನು ತನ್ನ ಮಂತ್ರಿಮಂಡಳಕ್ಕೆ ಒಪ್ಪಿಸಿ ದನು ಮತ್ತು ಮಂತ್ರಿಮಂಡಳದ ಸಭೆಗಳಿಗೆ ಬರುವುದನ್ನೂ ಬಿಟ್ಟನು. ಈ ಕಾರಣ ದಿಂದ ಮುಖ್ಯ ಮಂತ್ರಿ ರಾಜನ ಬದಲು ಮಂತ್ರಿಮಂಡಳದ ಸಭೆಗೆ ಅಧ್ಯಕ್ಷ ನಾಗಲು ಆರಂಭಿಸಿದನು. ಅದರಿಂದ ಮಂತ್ರಿಮಂಡಳದವರಿಗೂ ರಾಜ್ಯಕಾರ ಭಾರದ ವಿಷಯದಲ್ಲಿ ಬಿಚ್ಚುಮನಸ್ಸಿನಿಂದ ಚರ್ಚೆಮಾಡಲು ಅನುಕೂಲವಾಯಿತು. ಈ ಸಭೆಗಳು ಅರಮನೆಯ ಒಂದು ಕೋಣೆಯಲ್ಲಿ (Cabinet = ಕೋಣೆ) ನೆರೆಯು ತ್ತಿದ್ದುವು. ಅವುಗಳಲ್ಲಿ ನಿಶ್ಚಯಿಸಲ್ಪಡುವ ನೀತಿ ಎಲ್ಲ ಮಂತ್ರಿಮಂಡಳದ ನೀತಿಯೆಂದು ತಿಳಿಯಲ್ಪಡುತ್ತಿತ್ತು. ೧೭೨೧ರಲ್ಲಿ ವಾಲ್‌ಪೋಲನು ಮುಖ್ಯ ಮಂತ್ರಿಯಾದ ಬಳಿಕ ಈ ಪದ್ಧತಿ ರೂಢವಾದುದರಿಂದ ವಾಲ್‌ಪೋಲನು ಮೊದಲ

ನೆಯ ಮುಖ್ಯ ಮಂತ್ರಿಯೆಂದು (Prime Minister) ಕರೆಯಲ್ಪಟ್ಟನು ಮತ್ತು ಮಂತ್ರಿಮಂಡಳದ ಮುಖಾಂತರವಾಗಿ ನಡೆವ ರಾಜ್ಯಕಾರಭಾರವು **ಕಬಿನೆಟ್** ಪದ್ಧತಿಯ ರಾಜ್ಯಕಾರಭಾರವೆಂದು ಕರೆಯಲ್ಪಡಲಾರಂಭಿಸಿತು.

೧೭೧೫ರಲ್ಲಿಯ **ಜಕೊಬಾಯಿಟ ಜನರ ಬಂಡು**—ಜಾರ್ಜನಿಗೆ ಪಟ್ಟವು ದೊರೆತುದನ್ನು ಕಂಡು ಸ್ಟುವರ್ಟ ವಂಶದ ವಿಷಯದಲ್ಲಿ ಸಹಾನುಭೂತಿಯುಳ್ಳ ಜನರಿಗೆ ನಿರಾಶೆಯಾಯಿತು. ಈ ಜನರು ಜೇಮ್ಸನ ಪಕ್ಷದವರಾದುದರಿಂದ ಅವರಿಗೆ **ಜಕೊಬಾಯಿಟ್ಸ** ಎಂಬ ಹೆಸರು ಬಂದಿತು. ಈ ಜನರು ಜೇಮ್ಸ ಎಡ್ವರ್ಡನಿಗೆ ಪಟ್ಟವನ್ನು ದೊರಕಿಸಿಕೊಡಲು ಸಂಚುಗಳನ್ನು ಪ್ರಾರಂಭಿಸಿದರು. ಜೇಮ್ಸ ಎಡ್ವರ್ಡನು ಆಗ ಫ್ರಾನ್ಸಿನಲ್ಲಿ ಇದ್ದನು. ಅವನಿಗೆ ೧೪ನೆಯ ಲುಯಿಯ ಸಾಹಾಯ್ಯವು ಇದ್ದಿತು. ಇಂಗ್ಲಂಡಿನಿಂದ ಓಡಿಹೋದ ಟೋರಿ ಪಕ್ಷದ ಮಂತ್ರಿ ಬಾಲಿಂಗಬ್ರೋಕನೂ ಫ್ರಾನ್ಸಿಗೆ ಹೋಗಿ ಜೇಮ್ಸನ ಪಕ್ಷವನ್ನು ಹಿಡಿದು ಒಳಸಂಚನ್ನು ಪ್ರಾರಂಭಿಸಿದನು. ಕೊನೆಗೆ ಸ್ಕಾಟಲಂಡಿನ ಉತ್ತರಭಾಗದಲ್ಲಿ **ಅರ್ಲ ಆಫ ಮಾರ್** ಇವನ ನೇತೃತ್ವದಲ್ಲಿ ಮತ್ತು ಇಂಗ್ಲಂಡಿನ ಉತ್ತರಭಾಗದಲ್ಲಿ **ಲಾರ್ಡ ಡರವೆಂಟ ವಾಟರ ಮತ್ತು ಫಾರ್ಸ್ಟರ** ಇವರ ನೇತೃತ್ವದಲ್ಲಿ ಜಕೊಬಾಯಿಟ್ ಜನರು ಬಂಡನ್ನು ಪ್ರಾರಂಭಿಸಿದರು. ಜೇಮ್ಸ ಎಡ್ವರ್ಡನಿಗೆ ಫ್ರಾನ್ಸಿನಿಂದ ಸಾಹಾಯ್ಯವು ದೊರೆಯಬಹುದೆಂದು ಜಕೊಬಾಯಿಟ ಜನರು ಬಗೆದಿದ್ದರು. ಆದರೆ ೧೪ನೆ ಲುಯಿ ಅದೇ ಸಮಯದಲ್ಲಿ ಮರಣಹೊಂದಿದರಿಂದ ಫ್ರಾನ್ಸಿನಿಂದ ಜೇಮ್ಸನಿಗೆ ಸಾಹಾಯ್ಯವು ದೊರೆಯಲಿಲ್ಲ. ಇಂಗ್ಲಂಡಿನ ಉತ್ತರಭಾಗದಲ್ಲಿ **ಪ್ರೆಸ್ಟನ್** ಎಂಬ ಊರಿನ ಬಳಿಯಲ್ಲಿ ಜಕೊಬಾಯಿಟ್ ಜನರು ರಾಜಸೈನ್ಯದಿಂದ ಸೋಲಿಸಲ್ಪಟ್ಟರು (೧೭೧೫). ಸ್ಕಾಟಲಂಡಿನಲ್ಲಿ **ಡ್ಯೂಕ್ ಅಫ್ ಅರ್ಗಾಯಿಲ್** ಇವನ ನೇತೃತ್ವದಲ್ಲಿಯ ರಾಜಸೈನ್ಯಕ್ಕೂ ಅರ್ಲ ಆಫ ಮಾರ್ ಇವನ ನೇತೃತ್ವದಲ್ಲಿಯ ಜಕೊಬಾಯಿಟ ಸೈನ್ಯಕ್ಕೂ **ಶೇರೀಫ ಮೂರ್** ಎಂಬಲ್ಲಿ ಯುದ್ಧವಾಯಿತು (೧೭೧೫). ಈ ಯುದ್ಧದಲ್ಲಿ ಯಾವ ಪಕ್ಷವೂ ಸೋಲಲಿಲ್ಲ. ಆದರೆ ಮುಂದೆ ಮಾರ್ ಇವನ ನೇತೃತ್ವದಲ್ಲಿಯ ಜಕೊಬಾಯಿಟ್ ಸೈನ್ಯವು ಪರ್ಥ ಎಂಬಲ್ಲಿಗೆ ತಿರುಗಿಹೋಯಿತು, ಮತ್ತು ಅನೇಕ ಸೈನಿಕರು ಯುದ್ಧದಿಂದ ಪರಾವೃತ್ತರಾದರು. ಮುಂದೆ ಒಂದು ತಿಂಗಳಾದ ಬಳಿಕ ಜೇಮ್ಸ ಎಡ್ವರ್ಡನು ಫ್ರಾನ್ಸಿನಿಂದ ಸ್ಕಾಟಲಂಡಿಗೆ ಬಂದನು. ಇವನು ಸೋಮಾರಿಯಾಗಿದ್ದನು. ತನ್ನ ಪಕ್ಷದ ಜನರಲ್ಲಿ ಉತ್ಸಾಹವನ್ನು ಹುಟ್ಟಿಸಲು ಇವನಲ್ಲಿ ಸಾಮರ್ಥ್ಯವು ಇರಲಿಲ್ಲ. ತಮ್ಮ ಪಕ್ಷದ ಜನರು ಹಿಂದೆಗೆದುದನ್ನು ಮತ್ತು

ತಮಗೆ ಯಶವು ದೊರೆವ ಸಂಭವವು ಸ್ವಲ್ಪವೂ ಇರಲಿಲ್ಲವೆಂಬುದನ್ನು ಕಂಡು ಅವನೂ ಅರ್ಲ ಆಫ ಮಾರನೂ ಫ್ರಾನ್ಸಿಗೆ ಹೋದರು. ಮುಂದೆ ಈ ಬಂಡಿನಲ್ಲಿ ಭಾಗವನ್ನು ವಹಿಸಿದ ಪ್ರಮುಖ ಜನರು ಶೂಲಕ್ಕೇರಿಸಲ್ಪಟ್ಟರು.

**ಸೆಪ್ಟೇನಿಯಲ್ ಕಾಯ್ದೆ, ೧೭೧೬**—೩ನೆಯ ವಿಲಿಯಮನ ಆಳ್ಕೆಯಲ್ಲಿ ಆದ ಟ್ರಾಯೆನಿಯಲ್ ಕಾಯ್ದೆಯಂತೆ ಒಮ್ಮೆ ಚುನಾಯಿಸಲ್ಪಟ್ಟ ಪಾರ್ಲಿಮೆಂಟು ೩ ವರ್ಷಗಳಿಗಿಂತ ಹೆಚ್ಚಾಗಿ ಅಸ್ತಿತ್ವದಲ್ಲಿ ಇರಲಾಗದೆಂದು ನಿಶ್ಚಯವಾಗಿತ್ತು. ಈ ಕಾಯ್ದೆಯಂತೆ ೧೭೧೮ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆ ಆಗುವುದು ಅವಶ್ಯವಿದ್ದಿತು. ಆದರೆ ಜೇಮ್ಸ್ ಎಡ್ವರ್ಡನಿಗೆ ಪಟ್ಟವನ್ನು ದೊರಕಿಸಿ ಕೊಡುವ ಉದ್ದೇಶದಿಂದ ಸ್ವಲ್ಪ ಕಾಲದ ಹಿಂದೆಯೇ ಬಂಡು ಹೂಡಲ್ಪಟ್ಟುದರಿಂದ ದೇಶದಲ್ಲಿ ಅಸ್ವಸ್ಥತೆ ಇದ್ದಿತು. ಈಗ ಪಾರ್ಲಿಮೆಂಟಿನ ಹೊಸ ಚುನಾವಣೆಯನ್ನು ಮಾಡಿದರೆ ಸ್ಟುವರ್ಟ್ ಮನೆತನದ ಬಗ್ಗೆ ಸಹಾನುಭೂತಿಯುಳ್ಳ ಟೋರಿ ಪಕ್ಷದವರ ಬಹುಮತವಾಗಿ ಹನೋವರ ಮನೆತನಕ್ಕೆ ಅದರಿಂದ ಆಘಾತವು ಒದಗಬಹುದೆಂದು ವ್ಹಿಗ್ ಪಕ್ಷದವರಿಗೆ ತೋರಿತು. ಆದುದರಿಂದ ೧೭೧೮ರಲ್ಲಿ ಹೊಸ ಚುನಾವಣೆಯನ್ನು ಮಾಡದೆ ಪಾರ್ಲಿಮೆಂಟು ತನ್ನ ಅವಧಿಯನ್ನು ಕೆಲಕಾಲ ಬೆಳೆಯಿಸಲು ಅನುಕೂಲವಾಗಬೇಕೆಂದು **ಸೆಪ್ಟೇನಿಯಲ್ ಅಕ್ಟ** (ಸಪ್ತವಾರ್ಷಿಕ ಕಾಯ್ದೆ) ಎಂಬ ಕಾಯ್ದೆಯನ್ನು ಮಾಡಿತು. ಈ ಕಾಯ್ದೆಯಿಂದ ಒಮ್ಮೆ ಚುನಾಯಿಸಲ್ಪಟ್ಟ ಪಾರ್ಲಿಮೆಂಟು ೭ ವರ್ಷಗಳಿಗಿಂತ ಹೆಚ್ಚಾಗಿ ನಡೆಯಕೂಡದೆಂದು ನಿಶ್ಚಯಿಸಲ್ಪಟ್ಟಿತು. ೧೯೧೧ರಲ್ಲಿ ಪಾರ್ಲಿಮೆಂಟಿನ ಅವಧಿ ಐದು ವರ್ಷಗಳಿಗಿಂತ ಹೆಚ್ಚು ಕಾಲವಿರಬಾರದೆಂದು ಕಾಯ್ದೆಯಾಗುವ ವರೆಗೆ ಏಳು ವರ್ಷಗಳ ಅವಧಿ ಅಸ್ತಿತ್ವದಲ್ಲಿ ಉಳಿಯಿತು.

**ಯುರೋಪದಲ್ಲಿಯ ಪರಿಸ್ಥಿತಿ ಮತ್ತು ಇಂಗ್ಲಂಡಿನ ಪರರಾಷ್ಟ್ರೀಯ ನೀತಿ**—ಇಂಗ್ಲಂಡಿನಲ್ಲಿ ಹನೋವರ ವಂಶವು ಸ್ಥಾಪಿಸಲ್ಪಟ್ಟ ಬಳಿಕ ಜರ್ಮನಿಯಲ್ಲಿಯ ಹನೋವರ ಸಂಸ್ಥಾನದ ಹಿತಸಂಬಂಧದ ಸಂರಕ್ಷಣೆಗಾಗಿ ಇಂಗ್ಲಂಡು ಯುರೋಪದ ರಾಜಕಾರಣದ ಕಡೆಗೆ ಹೆಚ್ಚಾಗಿ ಲಕ್ಷ್ಯವನ್ನು ಕೊಡಬೇಕಾಯಿತು! ಈ ಕಾಲದಲ್ಲಿ ಯುರೋಪದಲ್ಲಿಯ ಬೇರೆ ಬೇರೆ ರಾಷ್ಟ್ರಗಳಲ್ಲಿ ತಮ್ಮ ತಮ್ಮ ರಾಜ್ಯವನ್ನು ವಿಸ್ತಾರಗೊಳಿಸಲು ಮತ್ತು ವರ್ಚಸ್ಸನ್ನು ಬೆಳೆಯಿಸಲು ಸ್ಪರ್ಧೆ ಉಂಟಾಗಿತ್ತು ಮತ್ತು ರಾಷ್ಟ್ರಗಳ ಬೇರೆ ಬೇರೆ ಸಂಘಗಳೂ ಸ್ನೇಹದ ಒಪ್ಪಂದಗಳೂ ಆಗಿ ಮುಂದೆ ಅವುಗಳ ನಡುವೆ ಯುದ್ಧಗಳು ಜರುಗಿದುವು. ಆದುದರಿಂದ ಇಂಗ್ಲಂಡು ಕೆಲವು ರಾಷ್ಟ್ರಗಳೊಡನೆ ಸ್ನೇಹದ ಒಪ್ಪಂದಗಳನ್ನು

ಮಾಡಿಕೊಂಡು ಯುದ್ಧಗಳಲ್ಲಿ ಭಾಗವನ್ನು ವಹಿಸಬೇಕಾಯಿತು. ಯುರೋಪ ದಲ್ಲಿಯ ತಮ್ಮ ರಾಜ್ಯವನ್ನು ಬೆಳೆಯಿಸಬೇಕೆಂಬುದೇ ಇಂಗ್ಲಂಡಿನ ಹೊರತು ಇತರ ರಾಷ್ಟ್ರಗಳ ನೀತಿಯಾಗಿದ್ದಿತು, ಮತ್ತು ದೂರದ ವಸಾಹತುಗಳ ಮತ್ತು ಪ್ರದೇಶ ಗಳ ಕಡೆಗೆ ಅವುಗಳ ದುರ್ಲಕ್ಷ್ಯವಿದ್ದಿತು. ಆದುದರಿಂದ ಯುರೋಪದಲ್ಲಿಯ ರಾಷ್ಟ್ರಗಳ ವಶದಲ್ಲಿದ್ದ ಯುರೋಪದಲ್ಲಿಯ ರಾಜ್ಯಗಳ ವಿಸ್ತಾರವು ಹೆಚ್ಚು ಕಡಿಮೆಯಾಗುತ್ತ ನಡೆಯಿತು. ಆದರೆ ಇಂಗ್ಲಂಡಿನ ವಸಾಹತುಗಳ ಮತ್ತು ಪ್ರದೇಶಗಳ ವೃದ್ಧಿಯಾಗುತ್ತ ಹೋಯಿತು.

ಯುರೋಪದಲ್ಲಿ ಆಗ ಆಸ್ಟ್ರಿಯಾ, ರಶಿಯಾ, ಫ್ರಾನ್ಸ್, ಸ್ಪೇನ, ಹಾಲಂಡ ಈ ರಾಷ್ಟ್ರಗಳು ಪ್ರಮುಖವಾಗಿದ್ದುವು. ಆಗ ಜರ್ಮನಿಯು ಏಕೀಕರಣವಾಗಿರದೆ ಅಲ್ಲಿ ಅನೇಕ ಸಂಸ್ಥಾನಗಳಿದ್ದುವು. ಈ ಸಂಸ್ಥಾನಗಳಲ್ಲಿ ಆಸ್ಟ್ರಿಯಾ, ಪ್ರಶಿಯಾ, ಮತ್ತು ಬವೇರಿಯಾ ಇವು ಪ್ರಮುಖವಾಗಿದ್ದು, ಜರ್ಮನಿಯಲ್ಲಿ ತಮ್ಮ ವರ್ಚ ಸ್ಸನ್ನು ಬೆಳೆಯಿಸಲು ಅವುಗಳಲ್ಲಿ ಸ್ಪರ್ಧೆ ನಡೆದಿತ್ತು. ಅವುಗಳಲ್ಲಿ ಆಸ್ಟ್ರಿಯಾ ಸಂಸ್ಥಾನವು ಎಲ್ಲ ಸಂಸ್ಥಾನಗಳಿಗಿಂತ ದೊಡ್ಡದಿದ್ದಿತು, ಮತ್ತು ಅಲ್ಲಿ ಆಳುತ್ತಿರುವ ಹಪಬರ್ಗ ವಂಶದ ರಾಜನೆ ಜರ್ಮನಿಯ ಬಾದಶಹನೆಂದು ಬಹುತರವಾಗಿ ಆರಿಸ ಲ್ಪಡುತ್ತಿದ್ದನು. ಆದರೆ ಜರ್ಮನಿಯಲ್ಲಿಯ ಪ್ರಶಿಯಾ ಸಂಸ್ಥಾನವು ಮುಂದೆ ಬರಲಾರಂಭಿಸಿತ್ತು. ಅಲ್ಲಿಯ ಅರಸನಾದ ಫ್ರೆಡ್ರಿಕ್ ವಿಲಿಯಮನು (೧೭೧೩—೧೭೪೦) ಜರ್ಮನಿಯಲ್ಲಿ ತನ್ನ ವರ್ಚಸ್ಸನ್ನು ಸ್ಥಾಪಿಸಲು ಪ್ರಯತ್ನವನ್ನು ಆರಂಭಿಸಿ ದನು. ಫ್ರೆಡ್ರಿಕ್ ವಿಲಿಯಮನು ಇಂಗ್ಲಂಡಿನ ರಾಜನಾದ ೧ನೆಯ ಜಾರ್ಜನ ಅಳಿಯನಾಗಿದ್ದನು. (ಹನೋವರ ವಂಶವೃಕ್ಷವನ್ನು ೩೨೭ನೆಯ ಪುಟದಲ್ಲಿ ನೋಡಿರಿ.) ಈ ಕಾರಣದಿಂದ ಮತ್ತು ಹನೋವರ ಸಂಸ್ಥಾನವು ಜರ್ಮನಿಯಲ್ಲಿ ಇದ್ದುದರಿಂದ ಇಂಗ್ಲಂಡು ಜರ್ಮನಿಯ ರಾಜಕಾರಣದ ಕಡೆಗೆ ಲಕ್ಷ್ಯವನ್ನು ಕೊಡಬೇಕಾಯಿತು. ರಶಿಯಾದೇಶವು ಹಿಂದುಳಿದುದಾದುದರಿಂದ ಅದಕ್ಕೆ ಯುರೋಪದ ರಾಜಕಾರಣದಲ್ಲಿ ಅಷ್ಟೊಂದು ಮಹತ್ವವಿರಲಿಲ್ಲ. ಆದರೆ ಪೀಟರ ದಿ ಗ್ರೇಟ ಇವನು (೧೬೮೨—೧೭೨೫) ರಶಿಯಾದೇಶದ ಬಾದಶಹನಾದ ಬಳಿಕ ತನ್ನ ರಾಜ್ಯದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು. ಅದರಿಂದ ರಶಿಯದ ಮಹತ್ವವು ಬೆಳೆಯತೊಡಗಿತು. ಸ್ಪೇನದ ರಾಜ್ಯವು ಮೊದಲಿನಂತೆ ಬಲಾಢ್ಯ ವಾಗಿರಲಿಲ್ಲವಾದರೂ ಅದಕ್ಕೆ ಇನ್ನೂ ಮಹತ್ವವಿದ್ದಿತು. ಈ ಸಮಯದಲ್ಲಿ ೫ನೆಯ ಫಿಲಿಪನು (೧೪ನೆಯ ಲುಯಿಯ ಮೊಮ್ಮಗನು) ಸ್ಪೇನದ ಅರಸನಾಗಿದ್ದನು. ಸ್ಪೇನದ ಪಟ್ಟಕ್ಕೋಸುಗ ನಡೆದ ಯುದ್ಧದಲ್ಲಿ ಜಿಬ್ರಾಲ್ಟರ ಮತ್ತು ಮಿನಾರ್ಕಾ

ಇವು ಸ್ಪೇನದ ವಶದಿಂದ ಹೋಗಿದ್ದುವು, ಮತ್ತು ಯುಟ್ರೆಕ್ಟದ ಒಪ್ಪಂದದಿಂದ ಫ್ರಾನ್ಸ್, ಮತ್ತು ಸ್ಪೇನ ಇವು ಒಂದಾಗಬಾರದೆಂದು ಫ್ರಾನ್ಸಿನ ಪಟ್ಟಕ್ಕೆ ಫಿಲಿಪ್ಪನಿಗೆ ಅಧಿಕಾರವಿರಬಾರದೆಂದು ನಿರ್ಣಯವಾಗಿತ್ತು. ಆದರೆ ಸ್ಪೇನವು ಕಳೆದುಕೊಂಡಿದ್ದ ಸ್ಥಳಗಳನ್ನು ತಿರುಗಿ ತೆಗೆದುಕೊಳ್ಳಲು ಮತ್ತು ಯುಟ್ರೆಕ್ಟದ ಒಪ್ಪಂದದಿಂದ ನಿಶ್ಚಯಿಸಲ್ಪಟ್ಟ ವ್ಯವಸ್ಥೆಯನ್ನು ರದ್ದುಗೊಳಿಸಿ ಫ್ರಾನ್ಸಿನ ಪಟ್ಟಕ್ಕೆ ತನ್ನ ಅಧಿಕಾರವನ್ನು ದೃಢಗೊಳಿಸಲು ಫಿಲಿಪನು ಪ್ರಯತ್ನಿಸತೊಡಗಿದನು.

೧೪ನೆಯ ಲುಯಿಯ ಆಳ್ಕೆಯಲ್ಲಿ (೧೬೪೩–೧೭೧೫) ಫ್ರಾನ್ಸಿನ ರಾಜ್ಯವು ಬಲಾಢ್ಯವಾಗಿದ್ದಿತು. ೧೭೧೫ರಲ್ಲಿ ಲುಯಿ ತನ್ನ ವಯಸ್ಸಿನ ೭೭ನೆಯ ವರ್ಷದಲ್ಲಿ ಮರಣಹೊಂದಿದನು. ಆ ಬಳಿಕ ಅವನ ೪ ವರ್ಷದ ಮರಿಮಗನಾದ ಲುಯಿ **೧೫ನೆಯ ಲುಯಿ** ಎಂಬ ಬಿರುದಿನಿಂದ ಫ್ರಾನ್ಸಿನ ರಾಜನಾದನು (೧೭೧೫). ಇವನು ಅಲ್ಪವಯಸ್ಕದವನಾಗಿದ್ದುದರಿಂದ ಅವನ ಚಿಕ್ಕಜ್ಜನಾದ **ಡ್ಯೂಕ್ ಆಫ ಆರ್ಲೆನ್ಸ** ಇವನು ರಾಜಪಾಲಕನಾಗಿದ್ದನು ಮತ್ತು ಅವನ ಕೈಯಲ್ಲಿ ಫ್ರಾನ್ಸಿನ ರಾಜಸೂತ್ರಗಳಿದ್ದುವು. ೧೫ನೆಯ ಲುಯಿ ನಿಪುತ್ರಿಕನಾಗಿ ಮರಣಹೊಂದಿದರೆ ಫ್ರಾನ್ಸಿನ ಪಟ್ಟವು ಡ್ಯೂಕ್ ಆಫ್ ಆರ್ಲೆನ್ಸ ಇವನಿಗೆ ದೊರೆವುದಿದ್ದಿತು; ಆದುದರಿಂದ ಯುಟ್ರೆಕ್ಟದ ಒಪ್ಪಂದದಿಂದ ನಿಶ್ಚಯಿಸಲ್ಪಟ್ಟ ವ್ಯವಸ್ಥೆ ದೃಢವಾಗಿ ಉಳಿಯಬೇಕೆಂದು ಅವನು ಸ್ಪೇನದ ವಿರುದ್ಧವಾಗಿ ಇಂಗ್ಲಂಡ್, ಮತ್ತು ಹಾಲಂಡ್ ಈ ರಾಷ್ಟ್ರಗಳೊಡನೆ ಸ್ನೇಹಸಂಧಿಯನ್ನು ಮಾಡಿಕೊಂಡನು (೧೭೧೮). ಸ್ಪೇನದ ರಾಜನಾದ ಫಿಲಿಪನು ಜೇಮ್ಸ ಎಡ್ವರ್ಡನಿಗೆ ಇಂಗ್ಲಂಡಿನ ಪಟ್ಟವನ್ನು ದೊರಕಿಸಿಕೊಡಲು ಮತ್ತು ಇಂಗ್ಲಂಡಿನ ಮೇಲೆ ಹಡಗುಪಡೆಯ ದಾಳಿಯನ್ನು ಮಾಡಲು ಪ್ರಯತ್ನಿಸಿದನು. ಆದರೆ ಅವನಿಗೆ ಯಶವು ದೊರೆಯಲಿಲ್ಲ.

**ಯುರೋಪದ ರಾಷ್ಟ್ರಗಳ ವಸಾಹತುಗಳು**—೧೮ನೆಯ ಶತಕದ ಪ್ರಾರಂಭದಲ್ಲಿ ವಸಾಹತುಗಳ ವಿಷಯದಲ್ಲಿ ಸ್ಪೇನ ರಾಷ್ಟ್ರವು ಎಲ್ಲರಿಗಿಂತ ಮುಂದುವರಿದಿದ್ದಿತು. ದಕ್ಷಿಣ ಮತ್ತು ಉತ್ತರ ಅಮೇರಿಕೆಯಲ್ಲಿಯ ಎಷ್ಟೋ ಪ್ರದೇಶವು, ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿ ಕೆಲವು ನಡುಗಡ್ಡೆಗಳು ಮತ್ತು ಪೂರ್ವದ ಕಡೆಯ ಫಿಲಿಪಾಯಿನ್ ನಡುಗಡ್ಡೆಗಳು ಸ್ಪೇನದ ವಶದಲ್ಲಿದ್ದುವು. ಇತರ ಯಾವ ರಾಷ್ಟ್ರಕ್ಕೂ ಈ ಪ್ರದೇಶಗಳೊಡನೆ ವ್ಯಾಪಾರ ಮಾಡಲು ಸ್ಪೇನವು ಆಸ್ಪದವನ್ನು ಕೊಡುತ್ತಿರಲಿಲ್ಲ. ಯುಟ್ರೆಕ್ಟದ ಒಪ್ಪಂದದಿಂದ ಇಂಗ್ಲಂಡಿಗೆ ಅಮೇರಿಕೆಯಲ್ಲಿಯ ಸ್ಪೇನದ ವಸಾಹತುಗಳೊಡನೆ ವ್ಯಾಪಾರಮಾಡಲು ಕೆಲವು ಅನುಕೂಲತೆಗಳು ದೊರೆತಿದ್ದುವು. ಪೋರ್ತುಗಾಲದ ವಶದಲ್ಲಿ ದಕ್ಷಿಣ ಅಮೇರಿಕೆಯಲ್ಲಿಯ ಕೆಲವು

ಪ್ರದೇಶವು, ಮತ್ತು ಹಾಲಂಡಿನ ವಶದಲ್ಲಿ ಪೂರ್ವದ ಕಡೆಯ ಮಸಾಲೆಯ ನಡುಗಡ್ಡೆಗಳು ಇದ್ದುವು. ಪೂರ್ವದ ಕಡೆಯ ಜಲಮಾರ್ಗದ ಮೇಲಿನ **ಕೇಪ ಆಫ್ ಗುಡ್ ಹೋಪ್** ಎಂಬ ಅತ್ಯಂತ ಮಹತ್ವದ ಸ್ಥಾನವು ಹಾಲಂಡಿನ ವಶದಲ್ಲಿಯೇ ಇದ್ದಿತು. ಹಿಂದುಸ್ಥಾನದಲ್ಲಿ ಆಗ ಇಂಗ್ಲಂಡಿಗಿಂತ ಫ್ರಾನ್ಸಿನ ಮಹತ್ವವೇ ಹೆಚ್ಚಾಗಿದ್ದಿತು. ಉತ್ತರ ಅಮೇರಿಕೆಯಲ್ಲಿ ಇಂಗ್ಲಂಡ್ ಮತ್ತು ಫ್ರಾನ್ಸ್ ಈ ಎರಡೂ ರಾಷ್ಟ್ರಗಳ ವಸಾಹತುಗಳಿದ್ದುವು ಮತ್ತು ಅವುಗಳ ನಡುವೆ ತೀವ್ರವಾದ ಸ್ಪರ್ಧೆಯಿದ್ದಿತು. ಆದರೆ ಯುಟ್ರೆಕ್ಟದ ಒಪ್ಪಂದವಾದ ಬಳಿಕ ಮುಂದಿನ ಐವತ್ತು ವರ್ಷಗಳಲ್ಲಿ ಇಂಗ್ಲಂಡು ವಸಾಹತುಗಳ ಮತ್ತು ವ್ಯಾಪಾರದ ವಿಷಯಗಳಲ್ಲಿ ತನ್ನ ಮಹತ್ವವನ್ನು ಬಹಳವಾಗಿ ಬೆಳೆಯಿಸಿತು. ವ್ಹಿಗ್ ಪಕ್ಷದ ನೀತಿಯೂ ವ್ಯಾಪಾರೋದ್ಯೋಗಗಳಿಗೆ ಪ್ರೋತ್ಸಾಹವನ್ನು ಕೊಡುವುದಿದ್ದಿತು. ಆದುದರಿಂದ ಎಷ್ಟೋ ಸಾಹಸಿಗಳಾದ ಜನರು ಹೊಸ ಹೊಸ ವ್ಯಾಪಾರದ ಕಂಪನಿಯನ್ನು ಸ್ಥಾಪಿಸಿ ದೂರ ದೂರದ ಪ್ರದೇಶಗಳೊಡನೆ ವ್ಯಾಪಾರವನ್ನು ಆರಂಭಿಸಿದರು.

**ರಾಷ್ಟ್ರೀಯ ಸಾಲವು**—೩ನೆಯ ವಿಲಿಯಮನ ಆಳ್ಕೆಯಲ್ಲಿ ರಾಷ್ಟ್ರೀಯ ಸಾಲದ ಯೋಜನೆ ಹುಟ್ಟಿತು. ವಿಲಿಯಮನು ಪಾರ್ಲಿಮೆಂಟಿನ ಅನುಮತಿಯಿಂದ ಸಾಲವನ್ನು ತೆಗೆದನು. ವಿಲಿಯಮ್ ಮತ್ತು ಅನ್ ಇವರ ಆಳ್ಕೆಯಲ್ಲಿ ಆದ ಯುದ್ಧಗಳಿಂದ ಈ ಸಾಲವು ಬೆಳೆಯುತ್ತ ಹೋಯ್ತು. ೧ನೆಯ ಜಾರ್ಜನ ಆಳ್ಕೆಯಲ್ಲಿ ಈ ಸಾಲದ ಹಣವು ೫ ಕೋಟಿ ಪೌಂಡುಗಳನ್ನು ಮಿಕ್ಕಿತ್ತು. ಈ ರಾಷ್ಟ್ರೀಯ ಸಾಲವು ಈಗಿನ ಮಾನದಿಂದ ಬಹು ಅಲ್ಪವಾಗಿದ್ದರೂ ಆಗಿನ ಮಾನದಿಂದ ಅದು ದೊಡ್ಡದೇ ಆಗಿದ್ದಿತು. ರಾಷ್ಟ್ರದ ವಾರ್ಷಿಕ ಉತ್ಪನ್ನದಲ್ಲಿಯ ಅರ್ಧದಷ್ಟು ಹಣವು (೩೦ ಲಕ್ಷ ಪೌಂಡುಗಳು) ಈ ಸಾಲದ ಬಡ್ಡಿಗೋಸುಗ ವೆಚ್ಚವಾಗುತ್ತಿತ್ತು. ಆದುದರಿಂದ ರಾಷ್ಟ್ರೀಯ ಸಾಲದ ಮತ್ತು ಅದರ ಬಡ್ಡಿಯ ಭಾರವನ್ನು ಹೇಗೆ ಕಡಿಮೆಮಾಡಬೇಕೆಂಬುದು ಮಂತ್ರಿಗಳು ಬಿಡಿಸಬೇಕಾಗಿದ್ದ ಪ್ರಶ್ನೆಯಾಗಿತ್ತು. ಈ ವಿಷಯದಲ್ಲಿ ಮಂತ್ರಿಮಂಡಳದ ಮುಂದೆ ಕೆಲವು ಯೋಜನೆಗಳು ಬಂದುವು, ಅವುಗಳಲ್ಲಿ ಸೌಥ್ ಸೀ ಕಂಪನಿಯ ಯೋಜನೆ ಒಂದಾಗಿದ್ದಿತು.

**ಸೌಥ್ ಸೀ ಕಂಪನಿಯ ದಿವಾಳಿ** (೧೭೨೦-೨೧)—ದಕ್ಷಿಣ ಅಟಲಾಂಟಿಕ್ ಮತ್ತು ಪಸಿಫಿಕ್ ಮಹಾಸಾಗರಗಳಲ್ಲಿಯ ಪ್ರದೇಶಗಳೊಡನೆ ಮತ್ತು ವಿಶೇಷತಃ ಸ್ಪೆನಿಶ್ ವಸಾಹತುಗಳೊಡನೆ ವ್ಯಾಪಾರಮಾಡಲು ೧೭೧೧ರಲ್ಲಿ **'ಸೌಥ್ ಸೀ ಕಂಪನಿ'** ಎಂಬ ಒಂದು ವ್ಯಾಪಾರಮಂಡಳವು ಸ್ಥಾಪಿ

ಸಲ್ಪಟ್ಟಿತ್ತು. ಈ ಕಂಪನಿಯ ವ್ಯಾಪಾರವು ಒಳಿತಾಗಿ ಸಾಗಿತ್ತು. ಈ ವ್ಯಾಪಾರವು ಇದಕ್ಕೂ ಹೆಚ್ಚಾಗಿ ಭರದಿಂದ ನಡೆಯಬೇಕೆಂದು ಈ ಕಂಪನಿ ಹೊಸಹೊಂದು ಯೋಜನೆಯನ್ನು ಮಂತ್ರಿಮಂಡಳಕ್ಕೆ ಸೂಚಿಸಿತು. ಆ ಯೋಜನೆ ಇಂತಿದ್ದಿತು: ದಕ್ಷಿಣ ಸಮುದ್ರದಲ್ಲಿಯ ಪ್ರದೇಶಗಳೊಡನೆ ವ್ಯಾಪಾರಮಾಡಲು ಸೌಥ್ ಸೀ ಕಂಪನಿಗೆ ಸರ್ವಾಧಿಕಾರವು ದೊರೆತರೆ ಆ ಕಂಪನಿ ಸರಕಾರಕ್ಕೆ ೭೦ ಲಕ್ಷ ಪೌಂಡುಗಳ ನಗದು ಹಣವನ್ನು ಕೊಡಬೇಕು ಮತ್ತು ಮುಂದೆ ಶಕ್ಯವಾದರೆ ಅಲ್ಪ ಬಡ್ಡಿಯಿಂದ ಸರಕಾರಕ್ಕೆ ಇನ್ನೂ ಹೆಚ್ಚು ಹಣವನ್ನು ಸಾಲವಾಗಿ ಕೊಡಬೇಕು. ಈ ಯೋಜನೆಯಿಂದ ರಾಷ್ಟ್ರೀಯ ಸಾಲದ ಮತ್ತು ಅದಕ್ಕೋಸುಗ ಕೊಡಬೇಕಾದ ಬಡ್ಡಿಯ ಭಾರವು ಬಹಳವಾಗಿ ಹಗುರಾಗಬಹುದೆಂದು ಬಗೆದು ಮಂತ್ರಿಗಳಾದ **ಸ್ಟೆನಪ್ ಮತ್ತು ಸಂಡರಲಂಡ** ಇವರು ಈ ಯೋಜನೆಗೆ ಮಾನ್ಯತೆಯನ್ನಿತ್ತರು, ಮತ್ತು ದಕ್ಷಿಣ ಸಮುದ್ರದಲ್ಲಿಯ ಪ್ರದೇಶಗಳೊಡನೆ ವ್ಯಾಪಾರಮಾಡಲು ಸೌಥ್ ಸೀ ಕಂಪನಿಗೆ ಸರ್ವಾಧಿಕಾರವನ್ನು ಕೊಟ್ಟರು. ವಾಲಪೋಲನು ಆರ್ಥಿಕ ವಿಷಯದಲ್ಲಿ ನಿಷ್ಣಾತನಿದ್ದನು. ಇಷ್ಟೊಂದು ಹಣವನ್ನು ಸರಕಾರಕ್ಕೆ ಕೊಡುವಷ್ಟು ಸಾಮರ್ಥ್ಯವು ಸೌಥ್ ಸೀ ಕಂಪನಿಗೆ ಇರಲಿಲ್ಲವೆಂಬುದು ಅವನಿಗೆ ಗೊತ್ತಿದ್ದಿತು. ಆದುದರಿಂದ ಅವನು ಈ ಯೋಜನೆಗೆ ವಿರುದ್ಧನಾಗಿದ್ದನು. ಆದರೆ ಅವನು ಮಂತ್ರಿಮಂಡಳದಲ್ಲಿ ಇದ್ದಿಲ್ಲವಾದುದರಿಂದ ಈ ವಿಷಯದಲ್ಲಿ ಅವನಿಗೆ ಏನು ಮಾಡಲೂ ಬರುವಂತಿದ್ದಿಲ್ಲ. ಸಾಮಾನ್ಯ ಜನರು ಮಾತ್ರ ಈ ಯೋಜನೆಯಿಂದ ಮೋಸಹೋದರು. ಸರಕಾರವು ಸೌಥ್ ಸೀ ಕಂಪನಿಯ ಯೋಜನೆಗೆ ಮಾನ್ಯತೆಯನ್ನಿತ್ತುದರಿಂದ ಈ ಕಂಪನಿ ದೃಢವಾದ ಅಡಿಗಲ್ಲ ಮೇಲೆ ನಿಂತಿದೆ, ಈ ಕಂಪನಿಯ ಪ್ರಾಮಾಣಿಕತೆಯ ವಿಷಯದಲ್ಲಿ ಸರಕಾರಕ್ಕೆ ಪೂರ್ಣ ವಿಶ್ವಾಸವಿದೆ. ಆದುದರಿಂದ ಈ ಕಂಪನಿಯ ವ್ಯಾಪಾರವು ಬಹು ಲಾಭದಾಯಕವಾಗಿ ನಡೆದಿದೆ ಎಂದು ಜನರು ಬಗೆದರು. ಅದರಿಂದ ಅದರ ಪತ್ತು ಬಹಳವಾಗಿ ಹೆಚ್ಚಿತು. ದಕ್ಷಿಣ ಸಮುದ್ರದ ಪ್ರದೇಶಗಳಲ್ಲಿ ಈ ಕಂಪನಿಗೆ ಚಿನ್ನದ ಕಣಿಗಳು ದೊರೆತಿವೆಯೆಂದೂ ಸುದ್ದಿಗಳು ಹಬ್ಬತೊಡಗಿದುವು. ಆದುದರಿಂದ ಈ ಕಂಪನಿಯ ಪಾಲುಗಳನ್ನು ಕೊಂಡುಕೊಳ್ಳುವುದರಿಂದ ತಮಗೆ ಬಹು ಲಾಭವಾಗಿ ತಾವು ಒಮ್ಮೆಲೆ ಶ್ರೀಮಂತರಾಗಬಹುದೆಂದು ಬಗೆದು ಸಾವಿರಾರು ಜನರು ತಮ್ಮಲ್ಲಿ ಇದ್ದುದೆಲ್ಲವನ್ನು ಮಾರಿ ಪಾಲುಗಳನ್ನು ಕೊಂಡುಕೊಂಡರು. ಸರಕಾರಕ್ಕೆ ಸಾಲಕೊಟ್ಟ ಜನರಿಗೆ ತಮ್ಮ ಬಾಂಡುಗಳನ್ನು ಸೌಥ್ ಸೀ ಕಂಪನಿಯ ಪಾಲುಗಳಲ್ಲಿ ರೂಪಾಂತರಗೊಳಿಸಲು ಅನುಕೂಲವಾಗಬೇಕೆಂದು ಒಂದು ಕಾಯ್ದೆಯೂ ಮಾಡಲ್ಪಟ್ಟಿತು (೧೭೨೦). ಆದುದರಿಂದ

ಅನೇಕ ಜನರು ತಮ್ಮ ಬಾಂಡುಗಳನ್ನು ಕಂಪನಿಯ ಪಾಲುಗಳಲ್ಲಿ ರೂಪಾಂತರ ಗೊಳಿಸಲಾರಂಭಿಸಿದರು. ಇದರಿಂದ ಕಂಪನಿಯ ಪಾಲುಗಳ ಬೆಲೆ ಬಹಳವಾಗಿ ಹೆಚ್ಚುತ್ತ ಹೋಯಿತು. ೧೦೦ ಪೌಂಡುಗಳ ಪಾಲಿನ ಬೆಲೆ ೧೦೦೦ ಪೌಂಡುಗಳವರೆಗೆ ಹೋಯಿತು. ಪಾಲುಗಳ ಬೆಲೆ ಹೆಚ್ಚಿದುದರಿಂದ ಕಂಪನಿಯ ವ್ಯವಹಾರವು ಬಹು ಊರ್ಜಿತಸ್ಥಿತಿಯಲ್ಲಿ ಇರಬಹುದೆಂದು ಹೊರಗಿನಿಂದ ತೋರಿದರೂ ವಸ್ತುಸ್ಥಿತಿ ಹೀಗಿರಲಿಲ್ಲ. ಆದರೆ ಜನರು ಮಾತ್ರ ಯಾವುದನ್ನೂ ಅರಿಯದಾಗಿದ್ದರು. ಸೌಥ್ ಸೀ ಕಂಪನಿಯ ಹೆಚ್ಚಳವನ್ನು ಕಂಡು ಇತರರು ಹೊಸ ಹೊಸ ಕಂಪನಿ ಗಳನ್ನು ಹೊರಡಿಸಿದರು. ಅವುಗಳಲ್ಲಿ ಕೆಲವು ಕಂಪನಿಗಳ ಉದ್ದೇಶವು ವ್ಯಾಪಾರ ದಿಂದ ಲಾಭವನ್ನು ಪಡೆದುಕೊಳ್ಳುವುದಿದ್ದರೆ ಕೆಲವುಗಳ ಉದ್ದೇಶವು ಜನರನ್ನು ಮೋಸಗೊಳಿಸುವುದೇ ಇದ್ದಿತು. ಆದರೆ ಈ ಎಲ್ಲ ಕಂಪನಿಗಳ ಪಾಲುಗಳೂ ಮಾರಲ್ಪಡಲಾರಂಭಿಸಿದುವು. ಮುಂದೆ ಸ್ವಲ್ಪ ದಿವಸಗಳಲ್ಲಿಯೆ ಕೆಲವು ಕಂಪನಿಗಳು ದಿವಾಳಿತೆಗೆದುವು. ಆ ಬಳಿಕ ಇತರ ಕಂಪನಿಗಳೂ ದಿವಾಳಿತೆಗೆಯಲಾರಂಭಿಸಿ ದುವು. ಹೀಗೆ ಒಂದರ ಹಿಂದೊಂದು ಕಂಪನಿ ಮುಳುಗತೊಡಗಿದುದರಿಂದ ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಇದರ ಪರಿಣಾಮವನ್ನು ಸೌಥ್ ಸೀ ಕಂಪ ನಿಯೂ ಅನುಭವಿಸಬೇಕಾಯಿತು. ಈ ಕಂಪನಿಯ ನೂರರ ಪಾಲು ಸಾವಿರದ ವರೆಗೆ ಹೋದುದು ಅದು ಸ್ವಲ್ಪ ಕಾಲದಲ್ಲಿಯೆ ೧೩೫ಕ್ಕೆ ಇಳಿಯಿತು. ಅದರಿಂದ ಬಹಳ ಬೆಲೆಯನ್ನು ಕೊಟ್ಟು ಪಾಲುಗಳನ್ನು ಕೊಂಡ ಸಾವಿರಾರು ಜನರು ಹಾನಿಗೆ ಗುರಿಯಾದರು. ಮುಂದೆ ಸ್ವಲ್ಪ ಕಾಲದಲ್ಲಿಯೆ ಈ ಕಂಪನಿ ದಿವಾಳಿತೆಗೆಯಿತು (೧೭೨೧). ರಾಷ್ಟ್ರೀಯ ಸಾಲವನ್ನು ತೀರಿಸಲು ಈ ಕಂಪನಿ ೭೦ ಲಕ್ಷ ಪೌಂಡು ಗಳನ್ನು ಸರಕಾರಕ್ಕೆ ಕೊಡಲು ಒಪ್ಪಿಕೊಂಡಿತ್ತು. ಅದನ್ನು ಕೊಡುವುದೂ ಈ ಕಂಪನಿಗಾಗಲಿಲ್ಲ.

ಸೌಥ್ ಸೀ ಕಂಪನಿ ಮುಳುಗಿದುದರಿಂದ ಜನರು ಹಾನಿಗೆ ಗುರಿಯಾಗಲು, ಮಂತ್ರಿಮಂಡಳದ ಮೇಲೆ ಎಲ್ಲೆಲ್ಲಿಯೂ ಟೀಕೆಗೆ ಆರಂಭವಾಯಿತು. ಮಂತ್ರಿ ಮಂಡಳದಲ್ಲಿಯ ಮಂತ್ರಿಗಳು ಲಂಚವನ್ನು ತಿಂದು ಈ ಕಂಪನಿಯ ಪತ್ತನ್ನು ಹೆಚ್ಚಿಸಿದರೆಂದೂ ಜನರು ತಮ್ಮ ತಮ್ಮಲ್ಲಿ ಮಾತಾಡತೊಡಗಿದರು. ಪಾರ್ಲಿಮೆಂಟ ಸಭೆಯಲ್ಲಿ ಮಂತ್ರಿಮಂಡಳದ ಮೇಲೆ ಈ ಬಗೆಯಾದ ಆರೋಪವು ಹೊರಿಸಲ್ಪಟ್ಟು ಆ ವಿಷಯದಲ್ಲಿ ವಿಚಾರಣೆ ನಡೆಯಿತು. ಕೆಲವು ಮಂತ್ರಿಗಳು ದೋಷಿಗಳಾಗಿರುವ ರೆಂದು ಸಿದ್ಧವಾಯಿತು. ಒಬ್ಬ ಮಂತ್ರಿ ಆತ್ಮಹತ್ಯೆಯನ್ನು ಮಾಡಿಕೊಂಡನು, ಸ್ಟ್ಯಾನಪನು ಮರಣಹೊಂದಿದನು ಮತ್ತೆ ಕೆಲವರು ಸೆರೆಮನೆಗೆ ಅಟ್ಟಲ್ಪಟ್ಟರು.

**ವಾಲ್‌ಪೋಲನು ಮುಖ್ಯ ಮಂತ್ರಿ**—ಸೌಥ್ ಸೀ ಕಂಪನಿ ಮುಳುಗಿದ ಬಳಿಕ ಎಲ್ಲೆಲ್ಲಿಯೂ ಉಂಟಾದ ಹಾಹಾಕಾರವನ್ನು ಕಳೆಯಲು ಆವನಾದರೂ ಸಮರ್ಥನಾಗಿದ್ದರೆ ವಾಲ್‌ಪೋಲನೇ ಎಂದು ಜನರಿಗೆ ಎನಿಸಿತು. ಜಾರ್ಜ ರಾಜನು ಅವನನ್ನು ತನ್ನ ಮಂತ್ರಿಯಾಗಿ ನಿಯೋಜಿಸಿ (೧೭೨೧) ಅವನಿಗೆ ಆರ್ಥಿಕ ವಿಷಯಗಳ ವ್ಯವಸ್ಥೆಯನ್ನು ಒಪ್ಪಿಸಿದನು. ಆರ್ಥಿಕ ವಿಷಯದಲ್ಲಿ ವಾಲ್‌ಪೋಲನು ನಿಷ್ಣಾತನಾಗಿದ್ದನು. ಸೌಥ್ ಸೀ ಕಂಪನಿ ಮುಳುಗಿದುದರಿಂದ ಸಾವಿರಾರು ಜನರು ವ್ಯಕ್ತಿಶಃ ಹಾನಿಗೆ ಗುರಿಯಾಗಿದ್ದರೂ ರಾಷ್ಟ್ರದೊಳಗಿನ ಸಂಪತ್ತು ಹೊರಗೆ ಹೋಗಿದಿಲ್ಲವೆಂಬುದನ್ನು ಅವನು ಅರಿತಿದ್ದನು. ಸೌಥ್ ಸೀ ಕಂಪನಿ ಸರಕಾರಕ್ಕೆ ಕೊಡಬೇಕಾದ ಹಣವನ್ನು ಮಾಫಮಾಡಿ ಕಂಪನಿಯ ಡಾಯರೆಕ್ಟರರ ವೈಯಕ್ತಿಕ ಆಸ್ತಿಯನ್ನು ಜಪ್ತಮಾಡಿ ಬಂದ ಹಣವನ್ನು ಕಂಪನಿಯ ಪಾಲುಗಾರರಲ್ಲಿ ಹಂಚಿ ಅವರಿಗಾದ ಹಾನಿಯನ್ನು ಸ್ವಲ್ಪಮಟ್ಟಿಗಾದರೂ ತುಂಬಿಕೊಡಬೇಕೆಂದು ಅವನು ಸೂಚಿಸಿದನು. ವಾಲ್‌ಪೋಲನ ಸೂಚನೆಯಂತೆ ಈ ಬಗೆಯಾದ ವ್ಯವಸ್ಥೆ ಮಾಡಲ್ಪಟ್ಟಿತು. ಕಂಪನಿಯ ಪಾಲುಗಾರರಿಗೆ ೧೦೦ ಪೌಂಡುಗಳ ಪಾಲಿಗಾಗಿ ಮೂರನೆಯ ಭಾಗವು ತಿರುಗಿ ದೊರೆತಿತು. ವಾಲ್‌ಪೋಲನು ಮೊದಲು ಮಂತ್ರಿಮಂಡಳದಲ್ಲಿದ್ದನು. ಆದರೆ ಸ್ಟನಪ್ ಮತ್ತು ಸಂಡರಲಂಡ ಇವರ ಮತ್ತು ಅವನ ನಡುವೆ ಮತೈಕ್ಯವಾಗುತ್ತಿರಲಿಲ್ಲ. ಆದುದರಿಂದ ಅವನು ೧೭೧೭ರಲ್ಲಿ ಅಧಿಕಾರತ್ಯಾಗವನ್ನು ಮಾಡಿದ್ದನು. ಆದರೆ ಈಗ ಈ ಹೊಸ ಮಂತ್ರಿಮಂಡಳದಲ್ಲಿ ಅವನೇ ಪ್ರಮುಖನಾದನು, ಮತ್ತು ಅವನ ಅಭಿಪ್ರಾಯದಂತೆ ರಾಜ್ಯಕಾರಭಾರವು ಸಾಗಿತು. ಆದುದರಿಂದ ಅವನನ್ನು **ಮುಖ್ಯ ಮಂತ್ರಿ** (Prime Minister) ಎಂದು ಜನರು ಕರೆಯಲಾರಂಭಿಸಿದರು. ವಾಲ್‌ಪೋಲನು ಅಷ್ಟೊಂದು ಬುದ್ಧಿವಂತನಾದ ಮುತ್ಸದ್ದಿಯಾಗಿರಲಿಲ್ಲ. ಆದರೆ ಆರ್ಥಿಕ ವಿಷಯದಲ್ಲಿ ಮತ್ತು ರಾಜ್ಯಕಾರಭಾರದ ಕೆಲಸವನ್ನು ಸಾಗಿಸುವುದರಲ್ಲಿ ಮತ್ತು ಎರಡನೆಯವರಿಂದ ಕೆಲಸವನ್ನು ತೆಗೆದುಕೊಳ್ಳುವುದರಲ್ಲಿ ಅವನು ಬಲು ಜಾಣನಾಗಿದ್ದನು. ಆದುದರಿಂದ ಅವನು ರಾಜನ ಮೇಲೆಯೂ ಪಾರ್ಲಿಮೆಂಟಿನ ಮೇಲೆಯೂ ವರ್ಚಸ್ಸನ್ನು ಕೂಡಿದನು ಮತ್ತು ಮುಂದೆ ೨೧ ವರ್ಷಗಳ ವರೆಗೆ ರಾಜ್ಯಕಾರಭಾರದ ಎಲ್ಲ ಸೂತ್ರಗಳನ್ನೂ ತನ್ನ ಕೈಯಲ್ಲಿಟ್ಟುಕೊಂಡನು. ಜಾರ್ಜನು ವಾಲ್‌ಪೋಲನ ಕಾಲದಿಂದ ಮಂತ್ರಿಮಂಡಳದ ಸಭೆಗಳಿಗೆ ಬರುವುದನ್ನು ಬಿಟ್ಟನು. ಆದುದರಿಂದ ಮುಖ್ಯ ಮಂತ್ರಿಯ ಅಧ್ಯಕ್ಷತೆಯಲ್ಲಿ ಮಂತ್ರಿಮಂಡಳದ ಮುಖಾಂತರವಾಗಿ (ಕಬಿನೆಟ್) ರಾಜ್ಯಕಾರಭಾರವನ್ನು ನಡೆಯಿಸುವ ಪದ್ಧತಿ ರೂಢವಾಯ್ತು.

ವಾಲಪೋಲನ ಕೈಯಲ್ಲಿ ರಾಜ್ಯಕಾರಭಾರದ ಸೂತ್ರಗಳು ಬಂದಬಳಿಕ ೬ ವರ್ಷಗಳ ತರುವಾಯದಲ್ಲಿ ೧ನೆಯ ಜಾರ್ಜನು ಹೆನೋವರಕ್ಕೆ ಹೋದಾಗ ಅಲ್ಲಿಯೇ ೧೭೨೭ರಲ್ಲಿ ಮರಣಹೊಂದಿದನು.

---

## ಸಾರಾಂಶವು

### ೧ನೆಯ ಜಾರ್ಜನು (೧೭೧೪—೧೭೨೭).

೧ನೆಯ ಜಾರ್ಜನು—ವ್ಹಿಗ್ ಪಕ್ಷದವರ ಪ್ರಯತ್ನದಿಂದ ಪಟ್ಟವು ದೊರೆತುದರಿಂದ ವ್ಹಿಗ್ ಪಕ್ಷದವರು ಮಂತ್ರಿಗಳಾಗಿ ನಿಯೋಜಿಸಲ್ಪಟ್ಟರು. ಜಾರ್ಜನ ಒಲವು ಹೆನೋವರದ ಕಡೆಗೆ ಮತ್ತು ಇಂಗ್ಲಂಡಿನ ರಾಜ್ಯಕಾರಭಾರದ ಕಡೆಗೆ ದುರ್ಲಕ್ಷ್ಯವು. ವಾಲಪೋಲನು ಮುಖ್ಯಮಂತ್ರಿಯಾದ ಬಳಿಕ (೧೭೨೧) ಮಂತ್ರಿಮಂಡಳದ ಮುಖಾಂತರವಾಗಿ ರಾಜ್ಯಕಾರಭಾರವನ್ನು ನಡೆಸುವ ಪದ್ಧತಿ (ಕೆಬಿನೆಟ್ ಪದ್ಧತಿ) ಪ್ರಚಾರದಲ್ಲಿ ಬಂದಿತು.

ಜಾರ್ಜನ ಮಂತ್ರಿಗಳು—ಸ್ಟೆನಪ್ ಮತ್ತು ಸಂಡರರ್ಲಂಡ (ಮುಖ್ಯಮಂತ್ರಿ, ೧೭೧೪—೧೭೨೦), ವಾಲಪೋಲ (ಮುಖ್ಯಮಂತ್ರಿ, ೧೭೨೧—೧೭೨೭).

ಮಂತ್ರಿಗಳು ಕೈಕೊಂಡ ನೀತಿ—

(೧) ಟೋರಿಪಕ್ಷದ ಬಾಲಿಂಗಬ್ರೋಕ್ ಮತ್ತು ಆಕ್ಸಫರ್ಡ ಇವರ ವಿಚಾರಣೆ. ದೊಂಬೆಗಳು ಮತ್ತು ಅವನ್ನು ಮುರಿಯಲು ದೊಂಬೆಗಳ ಕಾಯ್ದೆ ೧೭೧೫. ಅರ್ಲ ಆಫ್ ಮಾರ್ ಇವನ ನೇತೃತ್ವದಲ್ಲಿ ಜಕೊಬಾಯಿಟ್ ಜನರು ಸ್ಕಾಟಲಂಡಿನಲ್ಲಿ ಬಂಡನ್ನು ಹೂಡಿದರು (೧೭೧೫). ರಾಜಪಕ್ಷದ ಸೇನಾಪತಿ ಅರ್ಗಾಯಿಲ್. ಶೇರಿಫ್‌ಮೂರದ ಕಾಳೆಗದ ಅನಂತರ ಜಕೊಬಾಯಿಟರು ಹಿಂದೆಗೆದರು. ಜೇಮ್ಸ್ ಎಡ್ವರ್ಡನು ಸ್ಕಾಟಲಂಡಿನಲ್ಲಿ ಬಂದನು. ಅದರ ಸಾಕಷ್ಟು ಬೆಂಬಲವಿಲ್ಲದುದರಿಂದ ತಿರುಗಿ ಹೋದನು.

(೨) ಸೆಪ್ಟೇನಿಯಲ್ ಕಾಯ್ದೆಯಿಂದ (೧೭೧೬) ಪಾರ್ಲಿಮೆಂಟಿನ ಅವಧಿ ೭ ವರ್ಷಗಳ ವರೆಗೆ.

(೩) ರಾಷ್ಟ್ರೀಯ ಸಾಲದ ಬಡ್ಡಿಯ ಭಾರವನ್ನು ಕಡಿಮೆಮಾಡಲು ಸೌಥ್ ಸೀ ಕಂಪನಿಯ ಯೋಜನೆ, ಆದರೆ ಕಂಪನಿಯ ದಿವಾಳಿ (೧೭೨೦—೨೧). ಸಾವಿರಾರು ಜನರಿಗೆ ಹಾನಿ. ವಾಲಪೋಲನ ಪ್ರಯತ್ನದಿಂದ ಪರಿಸ್ಥಿತಿ ಸರಿಯಾಯಿತು.

ಯುರೋಪದಲ್ಲಿ ಪರಿಸ್ಥಿತಿ; ಪರರಾಷ್ಟ್ರೀಯ ನೀತಿ—ಹೆನೋವರ ಸಂಸ್ಥಾನಕ್ಕೋಸುಗ ಜರ್ಮನಿಯ ಕಡೆಗೆ ಲಕ್ಷ್ಯವು. ಜರ್ಮನಿಯಲ್ಲಿ ಪ್ರಶಿಯಾ

ಸಂಸ್ಥಾನವು ಮುಂದೆ ಬಂದಿತು. ಅಸ್ಟ್ರಿಯಾದೊಡನೆ ಅದರ ಸ್ಪರ್ಧೆ. ಪೀಟರ ದಿ ಗ್ರೇಟನ ಪ್ರಯತ್ನದಿಂದ ರಶಿಯದ ಮಹತ್ವವು ಹೆಚ್ಚಿತು. ೧೪ನೆಯ ಲುಯಿಯ ಮರಣದ ಅನಂತರದಲ್ಲಿ (೧೭೧೫) ಸ್ಪೇನದ ಫಿಲಿಪನು ಫ್ರಾನ್ಸಿನ ಪಟ್ಟಕ್ಕೆ ತನ್ನ ಅಧಿಕಾರವುಂಟೆಂದು ಹೇಳಿದನು. ಆದುದರಿಂದ ಫ್ರಾನ್ಸಿನಲ್ಲಿಯ ರಾಜಪಾಲಕನಾದ ಆರ್ಲೆನ್ಸನು ಸ್ಪೇನದ ವಿರುದ್ಧವಾಗಿ ಇಂಗ್ಲಂಡ್ ಮತ್ತು ಹಾಲಂಡ್ ಇವುಗಳೊಡನೆ ಒಪ್ಪಂದವನ್ನು ಮಾಡಿಕೊಂಡನು.

ವಸಾಹತುಗಳು—

ಸ್ಪೇನದ ವಶದಲ್ಲಿ—ದಕ್ಷಿಣ ಮತ್ತು ಮಧ್ಯ ಅಮೇರಿಕೆ.

ಪೋರ್ತುಗಾಲ—ದಕ್ಷಿಣ ಅಮೇರಿಕೆ.

ಹಾಲಂಡ್—ಪೂರ್ವದ ಕಡೆಯ ಮಸಾಲೆಯ ನಡುಗಡ್ಡೆಗಳು; ಕೇಪ ಆಫ್ ಗುಡ್ ಹೋಪ್.

ಫ್ರಾನ್ಸ್ ಮತ್ತು ಇಂಗ್ಲಂಡ್—ಉತ್ತರ ಅಮೇರಿಕೆಯಲ್ಲಿ ವಸಾಹತುಗಳು. ಹಿಂದುಸ್ಥಾನದಲ್ಲಿ ವ್ಯಾಪಾರ ಕೇಂದ್ರಗಳು. ಈ ಎರಡೂ ಕಡೆಯಲ್ಲಿ ಅವರವರಲ್ಲಿ ಸ್ಪರ್ಧೆ.

---

# ೧೯ನೆಯ ಪ್ರಕರಣವು

## ೨ನೆಯ ಜಾರ್ಜನು

ಜನ್ಮವು ೧೬೮೩; ರಾಜ್ಯಾರೋಹಣವು (೪೪ನೆಯ ವರ್ಷದಲ್ಲಿ) ೧೭೨೭

ಮೃತ್ಯು ೧೭೬೦.

(೧೭೨೭—೧೭೬೦).

ತತ್ಕಾಲೀನ ರಾಜ್ಯಕರ್ತರು.

| ಫ್ರಾನ್ಸ | ಆಸ್ಟ್ರಿಯಾ | ಪ್ರಶಿಯಾ | ಸ್ಪೇನ | ರಶಿಯಾ |
| --- | --- | --- | --- | --- |
| ೧೫ನೆಯ ಲುಯಿ (೧೭೧೫-೭೪) | ೬ನೆಯ ಚಾರ್ಲಸ ಮೃತ್ಯು ೧೭೪೦ ಮೇರಿಯಾ ಥೆರೆಸಾ | ಫ್ರೆಡ್ರಿಕ್ ವಿಲಿಯಮ (ಮೃತ್ಯು ೧೭೪೦) ಫ್ರೆಡ್ರಿಕ್ ದಿ ಗ್ರೇಟ್ | ೫ನೆಯ ಫಿಲಿಪ್ | ೨ನೆಯ ಪೀಟರ (ಮೃತ್ಯು ೧೭೩೦) |

### ಮಹತ್ವದ ಇಸ್ವಿಗಳು.

೧೭೨೧—೪೨ ವಾಲಪೋಲನು ಮುಖ್ಯಮಂತ್ರಿ.

೧೭೩೯—೪೨ ಸ್ಪೇನದೊಡನೆ ಯುದ್ಧವು.

೧೭೪೦—೪೮ ಆಸ್ಟ್ರಿಯದ ಪಟ್ಟಕ್ಕೋಸುಗ ಯುದ್ಧವು.

೧೭೪೫—೪೬ ಜಕೊಬಾಯಿಟ್ ಬಂಡು.

೧೭೫೨ ಕೆಲೆಂಡರ (ಪಂಚಾಂಗ)ದಲ್ಲಿ ಸುಧಾರಣೆ.

೧೭೫೬—೬೩ ಸಪ್ತ ವಾರ್ಷಿಕ ಯುದ್ಧವು.

**೨ನೆಯ ಜಾರ್ಜನು**—೧ನೆಯ ಜಾರ್ಜನ ತರುವಾಯದಲ್ಲಿ ಅವನ ಮಗನಾದ ಜಾರ್ಜನು ತನ್ನ ವಯಸ್ಸಿನ ೪೪ನೆಯ ವಯಸ್ಸಿನಲ್ಲಿ ೨ನೆಯ ಜಾರ್ಜನೆಂದು ಇಂಗ್ಲಂಡಿನ ಪಟ್ಟಕ್ಕೆ ಬಂದನು. ಅವನಿಗೆ ಇಂಗ್ಲಿಶ್ ಭಾಷೆ ಬರುತ್ತಿತ್ತು ಮತ್ತು ಇಂಗ್ಲಂಡಿನ ರಾಜಕಾರಣದಲ್ಲಿ ಲಕ್ಷ್ಯವನ್ನು ಹಾಕುತ್ತಿದ್ದನು. ತಂದೆಯ ತರುವಾಯದಲ್ಲಿ ಅವನು ಹನೋವರ ಸಂಸ್ಥಾನಕ್ಕೂ ಅರಸನಾದನು, ಆದುದರಿಂದ ಹನೋವರದ ಹಿತಸಂಬಂಧದ ಕಡೆಗೂ ಅವನ ಲಕ್ಷ್ಯವಿದ್ದಿತು. ಅವನು ಪರಾಕ್ರಮಿಯಾದ ಬಂಟನಾಗಿದ್ದನು. ಅವನು ಅರಸನಾದ ಬಳಿಕ ಇಂಗ್ಲಂಡಿನ ಸೈನ್ಯದ ಆಧಿಪತ್ಯವನ್ನು ಸ್ವೀಕರಿಸಿ ಡೆಟಿನ್‌ಜೆನದ ಕಾಳೆಗದಲ್ಲಿ ಫ್ರಾನ್ಸನ್ನು ಸೋಲಿ·

ಸಿದನು. ಅವನು ಕ್ಷುದ್ರ ಮನಸ್ಸಿನವನೂ ಹಟಮಾರಿಯೂ ಆಗಿದ್ದನು. ಜಾರ್ಜ ನಿಗೂ ಅವನ ತಂದೆಗೂ ವೈಮನಸ್ಸಿದ್ದಿತು. ಆದುದರಿಂದ ತನ್ನ ತಂದೆಯ ವಿಶ್ವಾಸದ ಮಂತ್ರಿಯಾದ ವಾಲಪೋಲನನ್ನು ತನ್ನ ಮಂತ್ರಿಯಾಗಿ ಮಾಡಿಕೊಳ್ಳಬಾರದೆಂದು ಅವನ ಇಚ್ಛೆ ಇದ್ದಿತು. ಆದರೆ ಜಾರ್ಜನ ಹೆಂಡತಿ **ಕರೊಲಿನ್** ಇವಳು ತೀಕ್ಷ್ಣ ಬುದ್ಧಿಯವಳೂ ದೂರದರ್ಶಿನಿಯೂ ಆಗಿದ್ದಳು ಮತ್ತು ಜಾರ್ಜನ ಮೇಲೆ ಅವಳ ವರ್ಚಸ್ಸು ಇದ್ದಿತು. **ವಾಲಪೋಲನು** ಬುದ್ಧಿವಂತನೂ ಕರ್ತೃತ್ವಶಾಲಿಯೂ ಆಗಿದ್ದುದರಿಂದ ಅವನನ್ನೇ ಮುಖ್ಯಮಂತ್ರಿಯಾಗಿ ಮಾಡಿಕೊಳ್ಳುವುದುಚಿತವೆಂದು ಅವಳು ಹೇಳಿದುದರಿಂದ ಜಾರ್ಜನು ವಾಲಪೋಲನಿಗೆ ಮುಖ್ಯಮಂತ್ರಿಪದವನ್ನು ಕೊಟ್ಟನು. ೧೭೪೨ರ ವರೆಗೆ ವಾಲಪೋಲನು ಮುಖ್ಯಮಂತ್ರಿಯಾಗಿದ್ದನು. ಅವನ ತರುವಾಯದಲ್ಲಿ ಜಾರ್ಜನ ಆಳ್ಕೆಯಲ್ಲಿ ಬೇರೆ ಕೆಲವರು ಮಂತ್ರಿಗಳಾದರು. ಅವರಲ್ಲಿ **ವಿಲಿಯಮ್ ಪಿಟ್ಟನು** ವಿಶೇಷವಾಗಿ ಪ್ರಸಿದ್ಧನಾಗಿದ್ದನು.

**ವಾಲಪೋಲನ ನೀತಿ** (೧೭೨೧-೧೭೪೨)—೧ನೆಯ ಜಾರ್ಜನ ಆಳ್ಕೆಯಲ್ಲಿ ೧೭೨೧ರಿಂದ ಮತ್ತು ೨ನೆಯ ಜಾರ್ಜನ ಆಳ್ಕೆಯಲ್ಲಿ ಮೊದಲಿನ ೧೫ ವರ್ಷಗಳ ವರೆಗೆ ವಾಲಪೋಲನು ಮುಖ್ಯ ಮಂತ್ರಿಯಾಗಿದ್ದನು. ವಾಲಪೋಲನು ಬುದ್ಧಿವಂತನೂ ಕರ್ತೃತ್ವಶಾಲಿಯೂ ಆಗಿದ್ದನು. ಅವನು ವ್ಹಿಗ್ ಪಕ್ಷದವನು. ಧಾರ್ಮಿಕ ವಿಷಯದಲ್ಲಿ ಅವನು ಉದಾರ ಮತದವನು. ಟೆಸ್ಟ ಮತ್ತು ಕಾರ್ಪೋರೇಶನ್ ಅಕ್ಟುಗಳಿಂದ ಡಿಸೆಂಟರ್ಸ ಜನರಿಗೆ ರಾಜ್ಯಕಾರಭಾರದಲ್ಲಿ ಯಾವ ಅಧಿಕಾರಸ್ಥಳವನ್ನೂ ಸ್ವೀಕರಿಸಲು ಬರುವಂತಿರಲಿಲ್ಲ. ಅವರು ಅಧಿಕಾರ ಸ್ಥಳವನ್ನು ಸ್ವೀಕರಿಸಿದರೆ ಅವರಿಗೆ ಮಾಫಿ ದೊರೆಯಬೇಕೆಂದು ವಾಲಪೋಲನು ಪ್ರತಿವರ್ಷವೂ ಪಾರ್ಲಿಮೆಂಟಿನಲ್ಲಿ **ಇಂಡೆಮ್ನಿಟಿ ಅಕ್ಟನ್ನು** ಪಾಸು ಮಾಡಿಸಿಕೊಳ್ಳುತ್ತಿದ್ದನು. ತನ್ನ ಕೈಯಲ್ಲಿ



ರಾಬರ್ಟ ವಾಲಪೋಲ

ಎಲ್ಲ ಸತ್ತೆ ಇರಬೇಕೆಂದೂ ತನ್ನ ಕೈಕೆಳಗಿನ ಜನರೆಲ್ಲರು ತಾನು ಹೇಳಿದುದನ್ನು ಕೇಳಲೆ ಬೇಕೆಂದೂ ಅವನ ಇಚ್ಛೆ ಇದ್ದಿತು. ತನ್ನ ಕೈಯಲ್ಲಿ ಎಲ್ಲ ಸತ್ತೆ ಉಳಿಯಲು ಪಾರ್ಲಿಮೆಂಟಿನಲ್ಲಿ ತನ್ನ ಪಕ್ಷದವರ ಬಹುಮತವಿರುವದು ಅವಶ್ಯವೆಂಬು

ದನ್ನು ಅವನು ಅರಿತಿದ್ದನು; ಅದನ್ನು ಸಾಧಿಸಲು ಅವನು ಪಾರ್ಲಿಮೆಂಟಿನ ಸದಸ್ಯ ರಿಗೆ ಮತ್ತು ಅವರ ಆಪ್ತೇಷ್ಟರಿಗೆ ಪದವಿಗಳನ್ನೂ ಅಧಿಕಾರ ಸ್ಥಳಗಳನ್ನೂ ಕೊಟ್ಟು ಅವರನ್ನು ತನ್ನ ಕಡೆಗೆ ಒಲಿಸಿಕೊಂಡಿದ್ದನು. ಒಂದು ಬಗೆಯ ಲಂಚದ ಈ ಪದ್ಧತಿ ಆಯೋಗ್ಯವಾದುದೆಂದು ಆ ಕಾಲದಲ್ಲಿ ಜನರು ಬಗೆಯುತ್ತಿರಲಿಲ್ಲ. ಉಳಿದ ಮಂತ್ರಿ ಗಳೂ ತಮ್ಮ ಕೈಯಲ್ಲಿ ಸತ್ತೆಯನ್ನು ಇಟ್ಟುಕೊಳ್ಳಬೇಕೆಂದು ಪ್ರಸಂಗಾನುಸಾರ ವಾಗಿ ಇದೆ ಪದ್ಧತಿಯನ್ನು ಸ್ವೀಕರಿಸುತ್ತಿದ್ದರು. ಆದುದರಿಂದ ಈ ವಿಷಯದಲ್ಲಿ ವಾಲಪೋಲನೊಬ್ಬನಿಗೇ ದೋಷವನ್ನು ಕೊಡುವುದು ಸರಿಯಾದುದಲ್ಲ. ಹಣ ದಿಂದ ಎಲ್ಲರೂ ವಶರಾಗುವರು (Every man has his price) ಎಂದು ಅವನು ಯಾವಾಗಲೂ ಎನ್ನುತ್ತಿದ್ದನು. ಮಂತ್ರಿಮಂಡಳದಲ್ಲಿ ತನ್ನ ವರ್ಚಸ್ಸು ಮತ್ತು ಸತ್ತೆ ಶಾಶ್ವತವಾಗಿ ಉಳಿಯಬೇಕೆಂದು ಅವನು ಮಂತ್ರಿಮಂಡಳದಲ್ಲಿ ತನ ಗಿಂತ ಹೆಚ್ಚಿನ ಬುದ್ಧಿವಂತರನ್ನೂ ಕರ್ತೃತ್ವಶಾಲಿಗಳನ್ನೂ ನಿಯೋಜಿಸಲಿಲ್ಲ. ಯಾರಾದರೂ ತನಗಿಂತ ಹೆಚ್ಚಿನವರಾಗಬಹುದೆಂದು ತೋರಿದೊಡನೆ ಅವರನ್ನು ಮಂತ್ರಿಮಂಡಳದಿಂದ ದೂರಮಾಡುತ್ತಿದ್ದನು. ವಾಲಪೋಲನ ಈ ನೀತಿಯಿಂದ ಸಾಧಾರಣ ತರಗತಿಯ ಜನರ ಬೆಂಬಲವು ಅವನಿಗಿದ್ದರೂ ಅನೇಕ ಬುದ್ಧಿವಂತರು ಆತನ ಶತ್ರುಗಳಾಗಿದ್ದರು. ಬೇರೆ ಬೇರೆ ಖಾತೆಗಳಲ್ಲಿ ಮಿತವ್ಯಯವನ್ನು ಮಾಡಿ ಅವನು ರಾಜ್ಯಕಾರಭಾರದ ವೆಚ್ಚವನ್ನು ಕಡಿಮೆ ಮಾಡಿದನು. ಇಂಗ್ಲಂಡಿನ ಉತ್ಕರ್ಷವಾಗಲು ಮತ್ತು ವೈಭವವು ಬೆಳೆಯಲು ಶಾಂತತೆಯ ನೀತಿಯನ್ನೇ ಕೈ ಕೊಂಡು ಇಂಗ್ಲಂಡಿನ ವ್ಯಾಪಾರವನ್ನೂ ಉದ್ಯೋಗ-ವ್ಯವಸಾಯಗಳನ್ನೂ ಬೆಳೆ ಯಿಸುವುದು ಅವಶ್ಯವೆಂದು ಅವನ ಅಭಿಪ್ರಾಯವಿದ್ದಿತು. ಆದುದರಿಂದ ಅವನು ಅನೇಕ ಆಯಾತ ಮತ್ತು ನಿರ್ಗತ ಮಾಲುಗಳ ಮೇಲಿನ ಜಕಾತಿಯನ್ನು ಕಡಿಮೆ ಮಾಡಿದನು. ಇದರಿಂದ ಇಂಗ್ಲಂಡಿನ ವ್ಯಾಪಾರಕ್ಕೆ ಉತ್ತೇಜನವು ದೊರೆತು ಅದು ಬೆಳೆಯಿತು. ಬಂದರಗಳಲ್ಲಿ ತೆಗೆದುಕೊಳ್ಳಲ್ಪಡುತ್ತಿದ್ದ ಸುಂಕವನ್ನು ತಪ್ಪಿಸಲು ತಂಬಾಕು ಮತ್ತು ಮದ್ಯಗಳು ಕಳವಿನಿಂದ ದೇಶದಲ್ಲಿ ತರಲ್ಪಡುತ್ತಿದ್ದುವು. ಇದನ್ನು ತಡೆಯಲು ವಾಲಪೋಲನು **ಎಕ್ಸೈಜ ಬಿಲ್ಲನ್ನು** ಪಾರ್ಲಿಮೆಂಟಿನಲ್ಲಿ ತಂದನು (೧೭೩೩). ಈ ಯೋಜನೆಯಂತೆ ತಂಬಾಕು ಮದ್ಯಗಳ ಮೇಲೆ ಸುಂಕವನ್ನು ಬಂದರದಲ್ಲಿ ತೆಗೆದುಕೊಳ್ಳದೆ ಅವು ಮಾರಲ್ಪಡುವ ಸಮಯದಲ್ಲಿಯೆ ತೆಗೆದುಕೊಳ್ಳ ಬೇಕು ಮತ್ತು ಅಪ್ಪಣೆ (ಲಾಯಸೆನ್ಸ) ಇಲ್ಲದೆ ಯಾರೂ ಈ ವಸ್ತುಗಳನ್ನು ಮಾರ ಕೂಡದು ಎಂದು ಸೂಚಿಸಲ್ಪಟ್ಟಿತು. ಆದರೆ ಈ ಯೋಜನೆಯಿಂದ ಸರಕಾರದ ಅಧಿಕಾರಿಗಳು ವ್ಯಾಪಾರಸ್ಥರ ಕಾರಭಾರದಲ್ಲಿ ಕೈಹಾಕಲು ಅನುವು ದೊರೆಯ

ಬಹುದೆಂದು ಪಾರ್ಲಿಮೆಂಟಿನಲ್ಲಿ ಈ ಬಿಲ್ಲಿಗೆ ಬಹಳ ವಿರೋಧವಾಯಿತು. ಆದುದ ರಿಂದ ವಾಲಪೋಲನು ಆಗ್ರಹವನ್ನು ಹಿಡಿಯದೆ ಅದನ್ನು ಹಿಂತೆಗೆದುಕೊಂಡನು. ವಾಲಪೋಲನ ಪರರಾಷ್ಟ್ರೀಯ ನೀತಿ ಶಾಂತತೆಯದಿದ್ದಿತು. ಅದಕ್ಕೋಸುಗ ಅವನು ಫ್ರಾನ್ಸಿನೊಡನೆ ಮಿತ್ರತ್ವದ ಒಪ್ಪಂದವನ್ನು ಮಾಡಿಕೊಂಡಿದ್ದನು. ಆದರೆ ಈ ಶಾಂತತೆಯನ್ನು ಬಹುಕಾಲದವರೆಗೆ ಉಳಿಸುವುದಾಗಲಿಲ್ಲ. ಫ್ರಾನ್ಸ್ ಮತ್ತು ಸ್ಪೇನ ಇವುಗಳಲ್ಲಿಯ ಅರಸರು ಬೂರಬಾನ್ ಮನೆತನದವರಿದ್ದರು. ಅವರು ೧೭೩೩ ರಲ್ಲಿ ತಮ್ಮತಮ್ಮಲ್ಲಿ ಮಿತ್ರತ್ವದ ಒಪ್ಪಂದವನ್ನು (Family Compact) ಮಾಡಿ ಕೊಂಡರು. ಮುಂದೆ ಇಂಗ್ಲಂಡಿನ ವ್ಯಾಪಾರಕ್ಕೂ ಅವರಿಂದ ತೊಂದರೆ ಉಂಟಾಗ ಲಾರಂಭಿಸಿತು. ಆದುದರಿಂದ ವಾಲಪೋಲನು ಸ್ಪೇನದೊಡನೆ ಯುದ್ಧವನ್ನು ಮಾಡಬೇಕಾಯಿತು.

**ವ್ಯಾಪಾರದ ಸ್ಪರ್ಧೆ**—ಆ ಕಾಲದಲ್ಲಿ ಅಮೇರಿಕಾಖಂಡದಲ್ಲಿ ಯುರೋ ಪದ ರಾಷ್ಟ್ರಗಳ ಎಷ್ಟೋ ವಸಾಹತುಗಳಿದ್ದುವು. ಅವುಗಳಲ್ಲಿ ಸ್ಪೇನದ ವಶದಲ್ಲಿದ್ದ ವಸಾಹತುಗಳು ಎಲ್ಲವುಗಳಿಗಿಂತ ಹೆಚ್ಚಾಗಿದ್ದುವು ಮತ್ತು ಅಲ್ಲಿಯ ವ್ಯಾಪಾರ ವಾದರೂ ಬಹು ಲಾಭದಾಯಕವಾಗಿತ್ತು. ಆಗಿನ ಕಾಲದಲ್ಲಿ ಪ್ರತಿಯೊಂದು ರಾಷ್ಟ್ರವು ತನ್ನ ವಶದಲ್ಲಿದ್ದ ವಸಾಹತುಗಳು ತನ್ನ ಲಾಭಕ್ಕೋಸುಗವೇ ಇರುತ್ತ ವೆಂದು ತಿಳಿದಿದ್ದಿತು, ಮತ್ತು ಉಳಿದ ಯಾವ ರಾಷ್ಟ್ರಕ್ಕೂ ಅವುಗಳೊಡನೆ ವ್ಯಾಪಾರಮಾಡಲು ಕೊಡುತ್ತಿರಲಿಲ್ಲ. ಅದರಂತೆಯೆ ವಸಾಹತುಗಳಿಗಾದರೂ ತಮ್ಮ ಮಾತೃಭೂಮಿಯ ಹೊರತು ಬೇರೆ ಯಾವ ರಾಷ್ಟ್ರದೊಡನೆಯಾದರೂ ವ್ಯಾಪಾರಮಾಡಲು ಪ್ರತಿಬಂಧವಿದ್ದಿತು. ಆದರೆ ಯುಟ್ರೆಕ್ಟದ ಒಪ್ಪಂದದಿಂದ ಸ್ಪೇನದ ದಕ್ಷಿಣ ಅಮೇರಿಕೆಯಲ್ಲಿಯ ವಸಾಹತುಗಳೊಡನೆ ವ್ಯಾಪಾರಮಾಡಲು ವರ್ಷಕ್ಕೊಮ್ಮೆ ಸರಕುಗಳ ಒಂದು ಹಡಗನ್ನು ಕಳಿಸಲು ಇಂಗ್ಲಂಡಿಗೆ ಅಪ್ಪಣೆ ದೊರೆತಿತ್ತು. ಸ್ಪೇನದ ವಸಾಹತುಗಳೊಡನೆ ಪ್ರಾರಂಭವಾದ ಈ ವ್ಯಾಪಾರದಿಂದ ಬಹಳ ಲಾಭವಾಗುತ್ತಿದ್ದುದರಿಂದ ಕೆಲವು ಇಂಗ್ಲಿಶ್ ವ್ಯಾಪಾರಸ್ಥರು ಯುಟ್ರೆಕ್ಟದ ಒಪ್ಪಂದವನ್ನು ದುರ್ಲಕ್ಷಿಸಿ ಒಂದಕ್ಕಿಂತ ಹೆಚ್ಚು ಹಡಗುಗಳನ್ನು ದಕ್ಷಿಣ ಅಮೇರಿ ಕೆಗೆ ಕಳಿಸುತ್ತಿದ್ದರು, ಮತ್ತು ಅವುಗಳಲ್ಲಿಯ ಸರಕುಗಳನ್ನು ಅಪ್ಪಣೆಯಿದ್ದ ಹಡಗಿ ನಲ್ಲಿ ಒಂದು ರಾತ್ರಿಯಲ್ಲಿಯೇ ತುಂಬಿ ಕಳವಿನಿಂದ ವ್ಯಾಪಾರಮಾಡುತ್ತಿದ್ದರು. ಈ ಕಳವಿನ ವ್ಯಾಪಾರವನ್ನು ತಡೆಯಬೇಕೆಂದು ಸ್ಪೆನಿಶ್ ಅಧಿಕಾರಿಗಳು ಹಡಗು ಗಳನ್ನು ಚೆನ್ನಾಗಿ ಪರೀಕ್ಷಿಸುತ್ತಿದ್ದರು ಮತ್ತು ಅವು ಸ್ಪೇನದ ವಸಾಹತುಗಳೊಡನೆ ವ್ಯಾಪಾರಮಾಡಲು ಬಂದಿರುವುವೆಂದು ಅವರಿಗೆ ತೋರಿದರೆ ಹಡಗುಗಳ ಕಪ್ತಾನ

ರನ್ನೂ ವ್ಯಾಪಾರಸ್ಥರನ್ನೂ ಉಗ್ರವಾದ ಶಿಕ್ಷೆಗೆ ಗುರಿಮಾಡುತ್ತಿದ್ದರು. ಆದುದರಿಂದ ಈ ವ್ಯಾಪಾರದ ವಿಷಯದಲ್ಲಿ ಇಂಗ್ಲಿಶ್ ಮತ್ತು ಸ್ಪನಿಯರ್ಡ ಜನರ ನಡುವೆ ಆಗಾಗ ಕಲಹಗಳು ಒದಗುತ್ತಿದ್ದುವು ಮತ್ತು ವಾಲಪೋಲನ ಕಡೆಗೆ ದೂರುಗಳೂ ಬರುತ್ತಿದ್ದುವು. ಹೀಗಿದ್ದರೂ ವಾಲಪೋಲನು ಸ್ಪೇನದ ವಿರುದ್ಧವಾಗಿ ಶಸ್ತ್ರವೆತ್ತಲು ಮನಸ್ಸುಮಾಡನೆಂದು ಅವನ ವಿರುದ್ಧವಾಗಿ ಜನರು ಟೀಕೆಯನ್ನಾರಂಭಿಸಿದರು. ಈ ಪರಿಸ್ಥಿತಿಯಲ್ಲಿ **ಜೆಂಕಿನ್ಸನೆಂಬ** ಒಂದು ಹಡಗಿನ ಕಪ್ತಾನನು ಇಂಗ್ಲಂಡಿಗೆ ಬಂದು ಸ್ಪನಿಶ್ ಅಧಿಕಾರಿಗಳು ಇಂಗ್ಲಿಶ್ ವ್ಯಾಪಾರದ ಹಡಗುಗಳ ಮೇಲಿನ ಜನರನ್ನು ಹಿಂಸಿಸುವರೆಂದು ದೂರುಹೇಳಿದನು. ಸ್ಪನಿಶ್ ಅಧಿಕಾರಿಗಳು ತನ್ನ ಹಡಗನ್ನು ಪರೀಕ್ಷಿಸುತ್ತಿರುವಾಗ ಅದರ ಮೇಲಿನ ಜನರನ್ನು ಬಹಳವಾಗಿ ಹಿಂಸಿಸಿದರೆಂದೂ ಮತ್ತು ತನ್ನ ಕಿವಿಯನ್ನು ಕೊಯ್ದರೆಂದೂ ಅವನು ಹೇಳಿದನು. ಜೆಂಕಿನ್ಸನ ಮಾತನ್ನು ಎಲ್ಲರು ನಂಬಿದರು, ಮತ್ತು ವಾಲಪೋಲನ ಶಾಂತತೆಯ ನೀತಿಯ ವಿರುದ್ಧವಾಗಿ ಪಾರ್ಲಿಮೆಂಟಿನಲ್ಲಿಯೂ ಟೀಕೆಯಾಗತೊಡಗಿತು. ಆದುದರಿಂದ ತನ್ನ ಮುಖ್ಯ ಮಂತ್ರಿಪದವನ್ನು ಕಾಯ್ದುಕೊಳ್ಳಲು ವಾಲಪೋಲನು ಸ್ಪೇನದ ವಿರುದ್ಧವಾಗಿ ಯುದ್ಧವನ್ನು ಸಾರಿದನು (೧೭೩೯).

**ಸ್ಪೇನದೊಡನೆ ಯುದ್ಧವು (೧೭೩೯-೧೭೪೨)**—ಸ್ಪೇನದ ವಿರುದ್ಧವಾಗಿ ಯುದ್ಧವು ಸಾರಲ್ಪಡಲು ಜನರಿಗೆ ಬಹು ಆನಂದವಾಯ್ತು. ವಾಲಪೋಲನು **ಅಡಮಿರಲ್ ವರ್ನಾನ್** ಮತ್ತು **ವೆಂಟವರ್ಥ** ಇವರ ನೇತೃತ್ವದಲ್ಲಿ ಸ್ಪೇನದ ಅಮೇರಿಕೆಯ ವಸಾಹತುಗಳ ಕಡೆಗೆ ಹಡಗುಪಡೆಯನ್ನು ಕಳಿಹಿದನು. ಮಧ್ಯ ಅಮೇರಿಕೆಯಲ್ಲಿಯ **ಕಾರ್ಥಾಜೇನಾ** ಎಂಬ ಸ್ಪನಿಶ್ ಪಟ್ಟಣವನ್ನು ತೆಗೆದುಕೊಳ್ಳಬೇಕೆಂದು ಈ ಹಡಗುಪಡೆಯ ಉದ್ದೇಶವು. ಆದರೆ ವರ್ನಾನ್ ಮತ್ತು ವೆಂಟವರ್ಥ್ ಇವರಿಬ್ಬರೂ ಅಯೋಗ್ಯರಾಗಿದ್ದರು, ಇದಲ್ಲದೆ ಒಬ್ಬರೊಬ್ಬರದು ಕೂಡುತ್ತಿರಲಿಲ್ಲ. ಆದುದರಿಂದ ಆ ಪಟ್ಟಣವನ್ನು ತೆಗೆದುಕೊಳ್ಳಲು ಅವರಿಗೆ ಶಕ್ಯವಾಗಲಿಲ್ಲ, ಯುದ್ಧದಲ್ಲಿ ಅವರು ಸೋತರು. ಈ ಸುದ್ದಿ ಗೊತ್ತಾದೊಡನೆ ಇಂಗ್ಲಂಡು **ಅನ್ಸನ್** ಎಂಬವನನ್ನು ವರ್ನಾನನ ನೆರವಿಗೆ ಕೆಲವು ಹಡಗುಗಳೊಡನೆ ಕಳಿಹಿತ್ತು. ಆದರೆ ಇವನಿಗೂ ಯಶವು ದೊರೆಯಲಿಲ್ಲ.

**ವಾಲಪೋಲನು ಮುಖ್ಯ ಮಂತ್ರಿಪದವನ್ನು ತ್ಯಜಿಸುವನು**—ಸ್ಪೇನದೊಡನೆ ನಡೆದ ಈ ಯುದ್ಧದಲ್ಲಿ ವಾಲಪೋಲನಿಂದ ಸರಿಯಾದ ವ್ಯವಸ್ಥೆಯನ್ನು ಇಡುವುದಾಗಲಿಲ್ಲವಾದುದರಿಂದ ಇಂಗ್ಲಂಡಿಗೆ ಅಪಯಶವು ಬಂದಿತೆಂದು ಜನರು ಟೀಕೆಯನ್ನು ಮಾಡತೊಡಗಿದರು; ಅದರಿಂದ ಅವನ ಲೋಕಪ್ರಿಯತೆ ಅಳಿಯ



ಗ್ರೀನಲಂಡ
ಫ್ರೆಂಚ
ವೆಸ್ಟ ಇಂಡೀಜ
ನಡುಗಡ್ಡೆಗಳು
ಆಫ್ರಿಕಾ
ಪೋರ್ತುಗೀಜ
ಯುರೋಪಿಯನ್ ರಾಷ್ಟ್ರಗಳ
ಇಂಗ್ಲಂಡ
ಸ್ಪೇನ
ಪೋರ್ಚುಗಾಲ
ಫ್ರಾನ್ಸ
ಮಿಶ್ರ.

ಲ್ಲಾರಂಭಿಸಿತು; ಕೆರೋಲಿನ್ ರಾಣಿ ೧೭೩೭ರಲ್ಲಿ ಮರಣಹೊಂದಿದ್ದಳು, ಆದುದರಿಂದ ಜಾರ್ಜನ ಮೇಲಿದ್ದ ಅವನ ವರ್ಚಸ್ಸೂ ಕಡಿಮೆಯಾಗಿತ್ತು. ಎಲ್ಲ ಸತ್ತೆಯನ್ನು ತನ್ನ ಕೈಯಲ್ಲಿಟ್ಟುಕೊಳ್ಳಬೇಕೆಂಬ ಮತ್ತು ತನಗಿಂತ ಹೆಚ್ಚಿನ ಯೋಗ್ಯತೆಯವರನ್ನು ತನ್ನ ಮಂತ್ರಿಮಂಡಳದಲ್ಲಿ ತೆಗೆದುಕೊಳ್ಳಲಾಗದೆಂಬ ಅವನ ನೀತಿಯಿಂದ ವ್ಹಿಗ್ ಪಕ್ಷದಲ್ಲಿಯ ಕೆಲವು ಕರ್ತೃತ್ವಶಾಲಿಗಳೂ ಬುದ್ಧಿವಂತರೂ ಆದ ಜನರಲ್ಲಿ ಅಸಂತೋಷವು ಹುಟ್ಟಿತು. ಅವರಲ್ಲಿ ತರುಣಜನರ ಮುಂದಾಳು **ವಿಲಿಯಮ ಪಿಟ್** ಎಂಬವನಿದ್ದನು. ಅವನಿಗೆ ವಾಲಪೋಲನ ನೀತಿಯೂ ಲಂಚಗುಳಿತನವೂ ಸೇರುತ್ತಿರಲಿಲ್ಲ. ಟೋರಿ ಪಕ್ಷದ ಜನರಂತು ಮೊದಲೇ ವಾಲಪೋಲನ ವಿರೋಧಿಗಳಾಗಿದ್ದರು. ೧೭೪೧ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಯ್ತು. ಆಗ ಪಾರ್ಲಿಮೆಂಟಿನಲ್ಲಿ ಬಹುಮತವು ತನಗೆ ವಿರುದ್ಧವಾಗಿದೆಂದು ಅವನಿಗೆ ತೋರಿದುದರಿಂದ ಅವನು ಮುಖ್ಯಮಂತ್ರಿಪದವನ್ನು ತ್ಯಜಿಸಿದನು (೧೭೪೨). ರಾಜನು ಆ ಬಳಿಕ ಅವನನ್ನು **ಆರ್‌ಫೋರ್ಡಿನ ಅರ್ಲನಾಗಿ** ಮಾಡಿದನು. ವಾಲಪೋಲನು ಮುಂದೆ ಮೂರು ವರ್ಷಗಳಿದ್ದು ಮರಣಹೊಂದಿದನು (೧೭೪೫).

**ಆಸ್ಟ್ರಿಯದ ಪಟ್ಟಕ್ಕೋಸುಗ ಯುದ್ಧವು (೧೭೪೦-೧೭೪೮)**— ಇತ್ತ ಸ್ಪೇನದೊಡನೆ ಇಂಗ್ಲಂಡಿನ ಯುದ್ಧವು ನಡೆದಿರುವಾಗ ಅತ್ತ ಆಸ್ಟ್ರಿಯದ ಪಟ್ಟಕ್ಕೋಸುಗ ಯುದ್ಧವು ಪ್ರಾರಂಭವಾಯ್ತು (೧೭೪೦). ಹನೋವರ ಸಂಸ್ಥಾನದ ರಕ್ಷಣೆಗೋಸುಗ ಇಂಗ್ಲಂಡು ಅದರಲ್ಲಿ ಸೇರಬೇಕಾಯ್ತು. ಆಸ್ಟ್ರಿಯದ ಬಾದಶಹನಾದ ೬ನೆಯ ಚಾರ್ಲಸನಿಗೆ ಗಂಡು ಮಕ್ಕಳಿದ್ದಿಲ್ಲ. ಮೇರಿಯಾ ಥೆರೆಸಾ ಎಂಬೊಬ್ಬ ಮಗಳಿದ್ದಳು. ಅವಳೇ ತನ್ನ ತರುವಾಯದಲ್ಲಿ ರಾಜ್ಯವಾಳಬೇಕೆಂದು ಅವನ ಇಚ್ಛೆಯಿದ್ದಿತು. ಆದರೆ ಆಸ್ಟ್ರಿಯದ ಕಾಯ್ದೆಯಂತೆ ಹೆಂಗುಸಿಗೆ ರಾಜ್ಯವಾಳಲು ಅಧಿಕಾರವಿರಲಿಲ್ಲ. ಆದುದರಿಂದ ಮುಂದೆ ತೊಂದರೆಯಾಗಬಾರದೆಂದು ಅವನು ಮೊದಲೆ **ಮೇರಿಯಾ ಥೆರೆಸಾ** ಇವಳನ್ನು ತನ್ನ ಅಖಿಲ ರಾಜ್ಯಕ್ಕೆ ಉತ್ತರಾಧಿಕಾರಿಣಿಯಾಗಿ ನಿಯೋಜಿಸಿದ್ದನು, ಮತ್ತು ಇದಕ್ಕೆ ಇತರ ಯುರೋಪಿಯನ್ ರಾಷ್ಟ್ರಗಳ ಸಮ್ಮತಿಯನ್ನೂ (Pragmatic Sanction) ದೊರಕಿಸಿದ್ದನು (೧೭೨೪). ಆಸ್ಟ್ರಿಯದ ಸಾಮ್ರಾಜ್ಯವು ಬಲು ದೊಡ್ಡದಿದ್ದಿತು. ಅದರಲ್ಲಿ ಹಂಗೇರಿ, ಸಿಲಿಸಿಯಾ, ಬೊಹೇಮಿಯಾ, ಆಸ್ಟ್ರಿಯನ್ ನೆದರ್ಲಂಡ್ ಮೊದಲಾದ ಪ್ರದೇಶಗಳಿದ್ದುವು. ಆಸ್ಟ್ರಿಯದ ಬಾದಶಹನು ೧೭೪೦ರಲ್ಲಿ ಮರಣಹೊಂದಿದನು. ಅವನ ಮರಣದ ಸುದ್ದಿಯನ್ನು ಕೇಳಿದೊಡನೆ ಪ್ರಶಿಯದ ಅರಸನಾದ **"ಫ್ರೆಡರಿಕ್ ದಿ ಗ್ರೇಟ"** ಇವನು ಸಿಲಿಸಿಯಾ (Silesia) ಪ್ರಾಂತಕ್ಕೆ

ದಾಳಿಯಿಕ್ಕಿ ಅದನ್ನು ತನ್ನ ವಶದಲ್ಲಿ ತೆಗೆದುಕೊಂಡನು (೧೭೪೦). ಬವೇರಿಯಾ ಸಂಸ್ಥಾನದ ಅಧಿಪತಿಯಂತು ಬೊಹೇಮಿಯಾ ಪ್ರಾಂತಕ್ಕೂ ಆಸ್ಟ್ರಿಯದ ರಾಜ್ಯಕ್ಕೂ ತನ್ನ ಅಧಿಕಾರವನ್ನು ಹೇಳತೊಡಗಿದನು. ಫ್ರಾನ್ಸ್ ಮತ್ತು ಸ್ಪೇನ ರಾಷ್ಟ್ರಗಳ ಬೆಂಬಲವು ಅವನಿಗಿದ್ದಿತು.

ಮಹತ್ವಾಕಾಂಕ್ಷಿಯಾದ ಫ್ರೆಡರಿಕ್ ದಿ ಗ್ರೇಟ (ಪ್ರಶಿಯದ ಅರಸನು) ಇವನಿಂದ ಹನೋವರ ಸಂಸ್ಥಾನವನ್ನು ಸಂರಕ್ಷಿಸಲು ಇಂಗ್ಲಂಡು ಮೇರಿಯಾ ಥೆರೆಸಾ ಇವಳ ಪಕ್ಷವನ್ನು ಸ್ವೀಕರಿಸಿ ಅವಳಿಗೆ ಹಣದ ಮತ್ತು ಸೈನ್ಯದ ಸಾಹಾಯ್ಯವನ್ನು ಕಳಿಸಿತು. ಇಂಗ್ಲಂಡಿನ ರಾಜನಾದ ೨ನೆಯ ಜಾರ್ಜನು ಸ್ವತಃ ಸೈನ್ಯದೊಡನೆ ಈ ಕಾಳೆಗಕ್ಕೆ ಹೋದನು ಮತ್ತು **ಡೆಟಿನ್‌ಜೆನ್** (ಬವೇರಿಯದಲ್ಲಿ) ಎಂಬಲ್ಲಿ ಫ್ರೆಂಚ ಸೈನ್ಯವನ್ನು ಸೋಲಿಸಿದನು (೧೭೪೩). ಮುಂದೆ ೧೭೪೫ರಲ್ಲಿ ಫ್ರೆಂಚರು **ಡ್ಯೂಕ್ ಆಫ ಕಂಬರರ್ಲಂಡ** ಇವನ ನೇತೃತ್ವದಲ್ಲಿಯ ಇಂಗ್ಲಿಶ್ ಸೈನ್ಯವನ್ನು ಬೆಲ್ಜಿಮಿನಲ್ಲಿಯ **ಫಾಂಟನ್ವಾ** (Fontenoy) ಎಂಬಲ್ಲಿ ಸೋಲಿಸಿದರು. ೨ನೆಯ ಜೇಮ್ಸನ ಮೊಮ್ಮಗನಾದ **ಚಾರ್ಲಸ ಎಡ್ವರ್ಡನು** ಸ್ಕಾಟಲಂಡಿಗೆ ಹೋಗಿ ಜಕೊಬಾಯಿಟ ಜನರ ಸಾಹಾಯ್ಯದಿಂದ ಬಂಡನ್ನು ಹೂಡಿದನು (೧೭೪೫ – ೪೬), ಆದರೆ ಅವನಿಗೆ ಯಶವು ದೊರೆಯಲಿಲ್ಲ. ಫ್ರಾನ್ಸಿಗೆ ಅವನು ತಿರುಗಿ ಹೋಗಬೇಕಾಯಿತು. ಸಮುದ್ರದ ಮೇಲೆಯೂ ಇಂಗ್ಲಂಡಿನ ಹಡಗುಪಡೆಯ ಸೇನಾಪತಿಗಳಾದ **ಅನ್ಸನ್** ಮತ್ತು **ಹಾಕ್** ಇವರು ಫ್ರೆಂಚ ಹಡಗುಪಡೆಯನ್ನು ಸೋಲಿಸಿದರು (೧೭೪೭). ಕೊನೆಯಲ್ಲಿ ೧೭೪೮ರಲ್ಲಿ **ಏಕ್ಸ-ಲಾ-ಶಾಪೆಲ್** (Aix-la-Chapelle) ಎಂಬಲ್ಲಿ ಒಪ್ಪಂದವಾಗಿ ಈ ಯುದ್ಧವು ನಿಂತಿತು. ಈ ಒಪ್ಪಂದದಿಂದ ಫ್ರೆಡ್ರಿಕ್ ದಿ ಗ್ರೇಟ ಇವನಿಗೆ ಸಿಲಿಸಿಯಾ ಪ್ರಾಂತವು ದೊರೆತಿತು, ಮತ್ತು ಆಸ್ಟ್ರಿಯದ ಪಟ್ಟಕ್ಕೆ ಮೇರಿಯಾ ಥೆರೆಸಾ ಇವಳ ಅಧಿಕಾರವು ಮಾನ್ಯಮಾಡಲ್ಪಟ್ಟಿತು.

**ಜಕೊಬಾಯಿಟ್ ಬಂಡು (೧೭೪೫-೧೭೪೬)**—೨ನೆಯ ಜೇಮ್ಸನ ಮಗನಾದ ಜೇಮ್ಸ ಎಡ್ವರ್ಡನು ಫ್ರಾನ್ಸಿನಲ್ಲಿ ಇದ್ದನು. ಇಂಗ್ಲಂಡಿನ ಪಟ್ಟವನ್ನು ದೊರಕಿಸುವ ಆಶೆಯನ್ನು ಅವನು ಬಿಟ್ಟಿರಲಿಲ್ಲ. ಆಸ್ಟ್ರಿಯದ ಪಟ್ಟಕ್ಕೋಸುಗ ನಡೆದ ಯುದ್ಧದಲ್ಲಿ ಇಂಗ್ಲಿಶ್ ಸೈನ್ಯವು ಇಂಗ್ಲಂಡಿನ ಹೊರಗೆ ತೊಡಗಿದ್ದಿತು. ಆದುದರಿಂದ ಇಂಗ್ಲಂಡಿನಲ್ಲಿ ಬಂಡನ್ನು ಹೂಡಲು ಅದೇ ಯೋಗ್ಯವಾದ ಸಂಧಿಯೆಂದು ಅವನಿಗೆ ತೋರಿತು. ಇಂಗ್ಲಂಡಿನಲ್ಲಿಯ ಮತ್ತು ಸ್ಕಾಟಲಂಡಿನಲ್ಲಿಯ ಜಕೊಬಾಯಿಟ ಜನರು ತನ್ನನ್ನು ಕೂಡುವರೆಂದು ಅವನು ಬಗೆದಿದ್ದನು. ಜೇಮ್ಸ

ಎಡ್ವರ್ಡನು ಈ ಸಮಯದಲ್ಲಿ ಮುಪ್ಪಿನವನಾದುದರಿಂದ್ಧ ಅವನ ಮಗನಾದ **ಚಾರ್ಲಸ ಎಡ್ವರ್ಡನು** ೧೭೪೫ರಲ್ಲಿ ಒಮ್ಮಿಂದೊಮ್ಮೆ ಸ್ಕಾಟಲಂಡಿನ ಪಶ್ಚಿಮ ದಂಡೆಗೆ ಬಂದಿಳಿದನು, ಮತ್ತು ಅಲ್ಲಿ ಬಂಡನ್ನು ಹೂಡಿದನು. ಅವನು ತರುಣನು, ಕುಶಾಗ್ರಬುದ್ಧಿಯವನು, ಹೊಸ ಹುರುಪಿನವನು ಮತ್ತು ಸುಂದರನು ಆಗಿದ್ದನು. ಅವನ ರೀತಿನೀತಿಗಳಾದರೂ ರಾಜಪುತ್ರನಿಗೆ ಶೋಭಿಸುವಂತಹುವಿದ್ದುವು. ಆದುದರಿಂದ ಸ್ಕಾಟಲಂಡಿನಲ್ಲಿಯ ಹಾಯಲಂಡರ್ಸ ಮತ್ತು ಜಕೊಬಾಯಿಟ್ ಜನರ ಮೇಲೆ ಅವನ ವರ್ಚಸ್ಸು ಸಹಜವಾಗಿ ಉಂಟಾಯಿತು. ಅವರು ಅವನಿಗೆ ಸಾಹಾಯ್ಯಮಾಡಲು ಒಪ್ಪಿದರು. ಆ ಬಳಿಕ ಅವನು ತನ್ನ ಈ ಅನುಯಾಯಿಗಳೊಡನೆ ದಕ್ಷಿಣದ ಕಡೆಗೆ ಸಾಗಿ **ಎಡಿನ್‌ಬರೋ** ಪಟ್ಟಣವನ್ನು ತೆಗೆದುಕೊಂಡನು. ಚಾರ್ಲಸ್ ಎಡ್ವರ್ಡನು ಸ್ಕಾಟಲಂಡಿನಲ್ಲಿ ಬಂಡನ್ನು ಪ್ರಾರಂಭಿಸಿದುದನ್ನು ಕೇಳಿದೊಡನೆ **ಸರ್ ಜಾನ್ ಕೋಪ್** ಎಂಬ ರಾಜಪಕ್ಷದ ಸರದಾರನು ಅವನ ಮೇಲೆ ಏರಿಹೋದನು. ಆದರೆ **ಪ್ರೆಸ್ಟನ್ ಪನ್** ಎಂಬಲ್ಲಿ ಕೋಪನ ಸೈನ್ಯವು ಸೋತಿತು. ಆ ಬಳಿಕ ಇಂಗ್ಲಂಡಿನ ಜಕೊಬಾಯಿಟ ಜನರ ಸಾಹಾಯ್ಯವು ತನಗೆ ದೊರೆಯಬಹುದೆಂದು ಮತ್ತು ತಾನು ಲಂಡನ್ ಪಟ್ಟಣವನ್ನು ಸುಲಭವಾಗಿ ತೆಗೆದುಕೊಳ್ಳಬಹುದೆಂದು ಬಗೆದು ಚಾರ್ಲಸ ಎಡ್ವರ್ಡನು ತನ್ನ ಹಾಯಲಂಡರ್ಸ ಅನುಯಾಯಿಗಳೊಡನೆ ಲಂಡನಿನ ಕಡೆಗೆ ಹೊರಟು ಇಂಗ್ಲಂಡಿನ ಪಶ್ಚಿಮ ಭಾಗದಲ್ಲಿಯ ಕಾರ್ಲೆಸ್ಲೀ, ಪ್ರೆಸ್ಟನ್ ಈ ಮಾರ್ಗದಿಂದ ಡರ್ಬಿಯವರೆಗೆ ಬಂದನು. ಹೀಗೆ ಬರುವಾಗ ಅವನಿಗೆ ಯಾರಿಂದಲೂ ವಿರೋಧವು ಉಂಟಾಗಲಿಲ್ಲ. ಇಂಗ್ಲಂಡಿನಲ್ಲಿಯ ಜಕೊಬಾಯಿಟ ಜನರಿಂದ ತನಗೆ ಸಾಹಾಯ್ಯವು ದೊರೆಯಬಹುದೆಂದು ಆತನು ಬಗೆದಿದ್ದನು, ಆದರೆ ಹಾಗಾಗಲಿಲ್ಲ. ಸ್ಕಾಟಲಂಡಿನಿಂದ ತಾವು ದೂರ ಬಂದಿರುವೆವು, ಮತ್ತು ಮುಂದೆ ಹಾಗೇ ಸಾಗುವುವೆಂದರೆ ಗಂಡಾಂತರವನ್ನು ತಮ್ಮ ಮೈಮೇಲೆ ತಂದುಕೊಂಡಂತೆಯೇ ಸೈಯೆಂದು ಹಾಯಲಂಡರ್ಸ ಜನರು ಮುಂದೆ ಸಾಗಲು ಒಪ್ಪಲಿಲ್ಲ. ಆದುದರಿಂದ ನಿರ್ವಾಹವಿಲ್ಲದೆ ಅವನು ತಿರುಗಿ ಬರಬೇಕಾಯಿತು.

ಇತ್ತ ಚಾರ್ಲಸ ಎಡ್ವರ್ಡನು ಇಂಗ್ಲಂಡಿಗೆ ದಾಳಿಯನ್ನು ತಂದಿರುವುದನ್ನು ಕಂಡು ಅವನನ್ನು ಇದಿರಿಸಲು ಸೈನ್ಯವು ಸಿದ್ಧಗೊಳಿಸಲ್ಪಟ್ಟಿತು, ಮತ್ತು ಇಂಗ್ಲಂಡಿನ ಹೊರಗೆ ಹೋದ ಕಂಬರ್ಲಂಡನಿಗೆ ತನ್ನ ಸೈನ್ಯದೊಡನೆ ತಿರುಗಿ ಬರಬೇಕೆಂದು ಆಜ್ಞೆ ಹೋಯಿತು. ಲಂಡನ್ ಪಟ್ಟಣದ ರಕ್ಷಣೆಗೋಸುಗ ೨ನೆಯ ಜಾರ್ಜನು ಸೈನ್ಯದೊಡನೆ ಸಿದ್ಧನಾದನು. ಆದರೆ ಚಾರ್ಲಸ ಎಡ್ವರ್ಡನು ಈ ಮೊದಲೆ

ತಿರುಗಿ ಹೊರಟಿದ್ದನು. ಅವನು ಸ್ಕಾಟಲಂಡಿನಲ್ಲಿ ಬಂದಬಳಿಕ ರಾಜಪಕ್ಷದ ಸೈನ್ಯವು **ಫಾಲ್ಕರ್ಕ** ಎಂಬಲ್ಲಿ ಅವನನ್ನು ಇದಿರಿಸಿತು. ಆದರೆ ಈ ಕಾಳೆಗದಲ್ಲಿ ಚಾರ್ಲಸ ಎಡ್ವರ್ಡನಿಗೆ ಜಯವು ದೊರೆತಿತು. ಇತ್ತ ಡ್ಯೂಕ್ ಆಫ್ ಕಂಬರ್ಲಂಡನು ಅವನನ್ನು ಬೆನ್ನಟ್ಟಿ ಬಂದನು. ಆದುದರಿಂದ ಅವನು ಸ್ಕಾಟಲಂಡಿನ ಉತ್ತರ ಭಾಗಕ್ಕೆ ಹೋದನು. ಕಂಬರಲಂಡನು ಅವನನ್ನು ಹಿಂಬಾಲಿಸಿದನು. ಕೊನೆಗೆ **ಕಲೊಡೆನ್ ಮೂರ್** ಎಂಬಲ್ಲಿ ತುಮುಲವಾದ ಯುದ್ಧವಾಗಿ ಚಾರ್ಲಸ್ ಎಡ್ವರ್ಡನ ಸೈನ್ಯವು ಸಂಪೂರ್ಣವಾಗಿ ಸೋತಿತು (೧೭೪೬ ಎಪ್ರಿಲ್). ಚಾರ್ಲಸ ಎಡ್ವರ್ಡನು ಜೀವವನ್ನು ಉಳಿಸಿಕೊಳ್ಳಲು ಓಡಿಹೋದನು. ಇತ್ತ ಕಂಬರ್ಲಂಡನು ಎಡ್ವರ್ಡನ ಸೈನ್ಯದವರಲ್ಲಿ ಕೈಗೆ ಸಿಕ್ಕವರನ್ನು ಅತ್ಯಂತ ಉಗ್ರವಾದ ಶಿಕ್ಷೆಗೆ ಗುರಿಮಾಡಿದನು, ಮತ್ತು ಚಾರ್ಲಸ್ ಎಡ್ವರ್ಡನನ್ನು ಹಿಡಿದು ಕೊಟ್ಟವರಿಗೆ ಮೂರು ಸಾವಿರ ಪೌಂಡುಗಳ ಇನಾಮನ್ನು ಇಟ್ಟನು. ಚಾರ್ಲಸನು ಕಷ್ಟಗಳನ್ನು ಸಹಿಸುತ್ತ ಹೇಗೋ ಸಮುದ್ರತೀರದ ವರೆಗೆ ಬಂದು ಅಲ್ಲಿಂದ ಫ್ರಾನ್ಸಿಗೆ ಓಡಿಹೋದನು.

ಈ ಬಗೆಯಾಗಿ ಈ ಬಂಡು ಮುರಿಯಲ್ಪಟ್ಟ ಬಳಿಕ ಸ್ಟುವರ್ಟ ವಂಶದವರು ಇಂಗ್ಲಂಡಿನ ಪಟ್ಟವನ್ನು ದೊರಕಿಸಲು ಮುಂದೆ ಪ್ರಯತ್ನವನ್ನೆ ಮಾಡಲಿಲ್ಲ. ಜೇಮ್ಸ್ ಎಡ್ವರ್ಡನು ೧೭೬೬ರಲ್ಲಿ ಮರಣಹೊಂದಿದನು. ಚಾರ್ಲಸ್ ಎಡ್ವರ್ಡನು ತನ್ನ ಕೊನೆಯ ದಿವಸಗಳನ್ನು ಬಹು ಕಷ್ಟದಲ್ಲಿ ಕಳೆಯಬೇಕಾಯಿತು. ಅವನು ಮದ್ಯಪಾನದ ವ್ಯಸನಕ್ಕೆ ಸಿಲುಕಿದುದರಿಂದ ಅವನ ಪ್ರಕೃತಿ ಕೆಟ್ಟು ರೋಗಕ್ಕೆ ಗುರಿಯಾದನು, ಮತ್ತು ಅದರಲ್ಲಿಯೇ ಅವನ ಅಂತವಾಯಿತು (೧೭೮೮). ಅವನ ತಮ್ಮನಾದ ಹೆನ್ರಿ ಬೆನಿಡಿಕ್ಟ ಸ್ಟುವರ್ಟನೂ ೧೮೦೭ರಲ್ಲಿ ಮರಣಹೊಂದಿದನು. ಆ ಬಳಿಕ ಸ್ಟುವರ್ಟ ವಂಶದಲ್ಲಿ ಇಂಗ್ಲಂಡಿನ ಪಟ್ಟಕ್ಕೆ ಅಧಿಕಾರವನ್ನು ಹೇಳುವವರು ಯಾರೂ ಉಳಿಯಲಿಲ್ಲ.

**ಜಾರ್ಜನು ಮತ್ತು ಅವನ ಮಂತ್ರಿಗಳು**—ಜಾರ್ಜನ ಆಳ್ಕೆಯಲ್ಲಿ ಮೊದಲಿನ ೧೫ ವರ್ಷಗಳ ವರೆಗೆ **ವಾಲಪೋಲನು** ಮುಖ್ಯಮಂತ್ರಿಯಾಗಿದ್ದನು. ೧೭೪೨ರಲ್ಲಿ ವಾಲಪೋಲನು ಅಧಿಕಾರವನ್ನು ತ್ಯಜಿಸಿದ ಬಳಿಕ ಮುಂದಿನ ೧೮ ವರ್ಷಗಳಲ್ಲಿ ಜಾರ್ಜನು ನಾಲ್ಕೈದು ಜನರನ್ನು ಮುಖ್ಯಮಂತ್ರಿಗಳಾಗಿ ನಿಯೋಜಿಸಿದನು. ಅವರಲ್ಲಿ **ಹೆನ್ರಿ ಪೆಲ್‌ಹಮ್** (೧೭೪೪—೧೭೫೪) ಮತ್ತು **ವಿಲಿಯಮ್ ಪಿಟ್** (೧೭೫೭—೧೭೬೧) ಇವರು ಮುಖ್ಯರಾಗಿದ್ದರು.

**ಹೆನ್ರಿ ಪೆಲ್‌ಹಮ್**—ಇವನು ವ್ಹಿಗ್ ಪಕ್ಷದವನು. ಇವನು ಕುಶಾಗ್ರಬುದ್ಧಿಯವನೂ ಕರ್ತೃತ್ವಶಾಲಿಯೂ ಆಗಿದ್ದನು. ವಾಲಪೋಲನ ರಾಜ್ಯಕಾರ

ಭಾರದ ಪದ್ಧತಿ ಇವನಿಗೆ ಸಂಪೂರ್ಣವಾಗಿ ಗೊತ್ತಿದ್ದಿತು. ಆದರೆ ತನಗಿಂತ ಹೆಚ್ಚಿನ ಯೋಗ್ಯತೆಯವರನ್ನು ಮಂತ್ರಿಮಂಡಳದಲ್ಲಿ ನಿಯೋಜಿಸಕೂಡದೆಂಬ ವಾಲಪೋಲನ ನೀತಿಯನ್ನು ಪೆಲ್‌ಹಮನು ಸ್ವೀಕರಿಸಲಿಲ್ಲ. ಅದರಿಂದ ತನ್ನ ಮರಣಕಾಲದವರೆಗೆ ಪಾರ್ಲಿಮೆಂಟಿನಲ್ಲಿ ತನ್ನ ವರ್ಚಸ್ಸನ್ನು ಕಾಯ್ದುಕೊಂಡಿರುವುದು ಅವನಿಗೆ ಶಕ್ಯವಾಯ್ತು (೧೭೪೪—೫೪). ಅವನ ಮಂತ್ರಿಮಂಡಳದಲ್ಲಿ ಮುಂದೆ ಪ್ರಸಿದ್ಧಿಗೆ ಬಂದ ವಿಲಿಯಮ್ ಪಿಟ್ಟನೂ ಒಬ್ಬ ಮಂತ್ರಿಯಾಗಿದ್ದನು. ಹೆನ್ರಿ ಪೆಲ್‌ಹಮನು ಮುಖ್ಯ ಮಂತ್ರಿಯಾಗಿರುವಾಗ ಅವನು ಆಸ್ಟ್ರಿಯದ ಪಟ್ಟಕ್ಕೋಸುಗ ನಡೆದ ಯುದ್ಧದ ಕಡೆಗೂ ಚಾರ್ಲಸ್ ಎಡ್ವರ್ಡನ ಬಂಡಿನ ಕಡೆಗೂ ಲಕ್ಷ್ಯವನ್ನು ಕೊಡಬೇಕಾಯ್ತು. ಅವನು ರಾಷ್ಟ್ರೀಯ ಸಾಲದ ಮೇಲಿನ ಬಡ್ಡಿಯ ದರವನ್ನು ಕಡಿಮೆಮಾಡಿ ಸರಕಾರದ ವೆಚ್ಚವನ್ನು ಬಹಳವಾಗಿ ಉಳಿಸಿದನು ಮತ್ತು ಕಲೆಂಡರಿನಲ್ಲಿ (ಪಂಚಾಂಗದಲ್ಲಿ) ಸುಧಾರಣೆಯನ್ನು ಮಾಡಿದನು.

**ರಾಷ್ಟ್ರೀಯ ಸಾಲದ ಏಕೀಕರಣವು (ಕನ್‌ಸೋಲ್ಸ), ೧೭೫೧—** ರಾಷ್ಟ್ರೀಯ ಸಾಲದ ಒಟ್ಟು ಹಣವು ೭॥ ಕೋಟಿ ಪೌಂಡುಗಳಷ್ಟು ಇದ್ದಿತು. ೩ನೆಯ ವಿಲಿಯಮನ ಆಳ್ಕೆಯಿಂದ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಬಡ್ಡಿಯ ದರದಿಂದ ಈ ಸಾಲದ ಹಣವು ತರಲ್ಪಟ್ಟಿತ್ತು; ಈ ಸಾಲದ ಮೇಲೆ ನೂರಕ್ಕೆ ವರ್ಷಕ್ಕೆ ೫ರಿಂದ ೮ರ ವರೆಗೆ ಬಡ್ಡಿಯನ್ನು ಕೊಡಬೇಕಾಗುತ್ತಿತ್ತು. ರಾಷ್ಟ್ರೀಯ ಸಾಲದ ಮೇಲಿನ ಬಡ್ಡಿಯ ಭಾರವನ್ನು ಕಡಿಮೆಮಾಡಲು ಪೆಲ್‌ಹಮನು ಬೇರೆ ಬೇರೆ ಕಾಲದಲ್ಲಿ ತಂದ ರಾಷ್ಟ್ರೀಯ ಸಾಲವನ್ನು ಒಂದುಗೊಳಿಸಿ ಅದರ ಮೇಲೆ ನೂರಕ್ಕೆ ವರ್ಷಕ್ಕೆ ೩ರಂತೆ ಬಡ್ಡಿಯನ್ನು ಕೊಡಲಾಗುವುದೆಂದು ಪ್ರಕಟಗೊಳಿಸಿದನು. ಸರಕಾರದ ಪತ್ತು ಚೆನ್ನಾಗಿದ್ದಿತಾದುದರಿಂದ ಈ ಕಡಿಮೆಯ ಬಡ್ಡಿಯ ದರದಿಂದಲೂ ಸರಕಾರದಲ್ಲಿ ಹಣವನ್ನಿಡಲು ಜನರು ಸಿದ್ಧರಾದರು. ಬಡ್ಡಿಯ ದರವು ಕಡಿಮೆಯಾದುದರಿಂದ ಸರಕಾರದ ವೆಚ್ಚದಲ್ಲಿಯೂ ಉಳಿತಾಯವಾಯ್ತು. ಬೇರೆ ಬೇರೆ ಕಾಲದಲ್ಲಿ ತಂದ ರಾಷ್ಟ್ರೀಯ ಸಾಲವು ಒಂದುಗೊಳಿಸಲ್ಪಟ್ಟುದರಿಂದ ಅದಕ್ಕೆ **ಕನ್‌ಸೋಲ್ಸ** ಎಂದು ಹೆಸರು ಬಂದಿತು.

**ಕಲೆಂಡರಿನಲ್ಲಿ (ಪಂಚಾಂಗದಲ್ಲಿ) ಸುಧಾರಣೆ, ೧೭೫೨—** ಪೂರ್ವಕಾಲದಲ್ಲಿ ರೋಮದಲ್ಲಿ ವರ್ಷಕ್ಕೆ ಸೌರಮಾಸದಿಂದ ೩೬೫ ದಿವಸಗಳು ಮತ್ತು ೬ ಗಂಟೆಗಳು ಎಂಬ ಲೆಕ್ಕದಿಂದ ಕಾಲಗಣನೆ ಮಾಡಲ್ಪಡುತ್ತಿತ್ತು. ಈ ಪದ್ಧತಿಯನ್ನು ರೋಮದಲ್ಲಿ ಜ್ಯೂಲಿಯಸ್ ಸೀಝರನು ಆರಂಭಿಸಿದ್ದನು. ಆದುದರಿಂದ ಈ ಕಾಲಗಣನೆಯ ಪದ್ಧತಿಗೆ **ಜ್ಯೂಲಿಯಸ್** ಪದ್ಧತಿಯೆಂದು ಹೆಸರು

ಉಂಟಾಯ್ತು. ಇಂಗ್ಲಂಡಿನಲ್ಲಿಯೂ ಇದೇ ಪದ್ಧತಿಯಿಂದ ಕಾಲಗಣನೆ ಮಾಡಲ್ಪಡುತಿತ್ತು. ಆದರೆ ಮುಂದೆ ಕೆಲವು ಶತಕಗಳಾದ ಬಳಿಕ ವರ್ಷದ ಈ ಪ್ರಮಾಣವು ತಪ್ಪಾದುದೆಂದೂ ಕೆಲವು ಮಿನಿಟುಗಳಿಂದ ಅದು ಕಡಿಮೆಯಾದುದೆಂದೂ ಗೊತ್ತಾಯ್ತು. ಆದರೆ ಈ ತಪ್ಪು ಬೆಳೆಯುತ್ತ ನಡೆದು ೧೬ನೆಯ ಶತಕದವರೆಗೆ ೧೦ ದಿವಸಗಳು ಕಡಿಮೆಯಾಗಿದ್ದುವು. **ಪೋಪ್ ೧೩ನೆಯ ಗ್ರೆಗರಿ** ಇವನು ಈ ತಪ್ಪನ್ನು ಸರಿಗೊಳಿಸಿದನು (೧೫೮೨), ಮತ್ತು ಇಂತಹ ತಪ್ಪು ಮುಂದೆ ಆಗಬಾರದೆಂದು ೧೦೦ ವರ್ಷಗಳಿಗೊಮ್ಮೆ ಒಂದು ದಿವಸವನ್ನು ಹೆಚ್ಚಾಗಿ ಹಿಡಿಯಬೇಕೆಂದು ಪ್ರಮಾಣವನ್ನು ನಿರ್ಣಯಿಸಿದನು. ಈ ಹೊಸ ಪದ್ಧತಿಗೆ **ಗ್ರೆಗೇರಿಯನ್ ಪದ್ಧತಿ**ಯೆಂದು ಹೆಸರುಬಂದಿತು. ಯುರೋಪದಲ್ಲಿಯ ಎಷ್ಟೋ ರಾಷ್ಟ್ರಗಳು ಗ್ರೆಗೇರಿಯನ್ ಪದ್ಧತಿಯನ್ನು ಅನುಸರಿಸಿ ತಮ್ಮ ತಮ್ಮ ಕಲೆಂಡರುಗಳಲ್ಲಿ ಸುಧಾರಣೆಯನ್ನು ಮಾಡಿದುವು, ಆದರೆ ಇಂಗ್ಲಂಡಿನಲ್ಲಿ ಮಾತ್ರ ಹಳೆಯ ಪದ್ಧತಿಯೇ ಪ್ರಚಾರದಲ್ಲಿತ್ತು. ಆದುದರಿಂದ ೧೮ನೆಯ ಶತಕದಲ್ಲಿ ೧೧ ದಿವಸಗಳು ಕಡಿಮೆಯಾಗಿದ್ದುವು. ಪೆಲ್‌ಹಮನ ಮಂತ್ರಿಮಂಡಳವು ಕಲೆಂಡರಿನಲ್ಲಿ ಸುಧಾರಣೆಯನ್ನು ಮಾಡಲು ನಿಶ್ಚಯಿಸಿತು. ಈ ಕಾರಣದಿಂದ ೧೭೫೨ ಸೆಪ್ಟೆಂಬರ ತಿಂಗಳಿನ ೨ನೆಯ ತಾರೀಖಿನ ಮರುದಿನವು ೩ನೆಯ ಸೆಪ್ಟೆಂಬರ ಎಂದು ಕರೆಯಲ್ಪಡದೆ ೧೪ನೆಯ ಸೆಪ್ಟೆಂಬರ್ ಎಂದು ಕರೆಯಲ್ಪಟ್ಟಿತು.

ಈ ಮೊದಲು ಇಂಗ್ಲಂಡಿನಲ್ಲಿ ಮಾರ್ಚ ೨೫ನೆಯ ತಾರೀಖು ವರ್ಷಾರಂಭದ ದಿನವೆಂದು ತಿಳಿಯಲ್ಪಡುತ್ತಿತ್ತು. ಅದರ ಬದಲು ಗ್ರೆಗೇರಿಯನ್ ಪದ್ಧತಿಯಂತೆ ಜಾನೆವರಿ ೧ನೆಯ ತಾರೀಖು ವರ್ಷಾರಂಭದ ದಿನವೆಂದು ತಿಳಿಯಲ್ಪಡಬೇಕೆಂದು ನಿಶ್ಚಯಿಸಲ್ಪಟ್ಟಿತು.

**ವಿಲಿಯಮ್ ಪಿಟ್** (ದೊಡ್ಡವನು) (೧೭೦೮-೧೭೭೮)—ಹೆನ್ರಿ ಪೆಲ್‌ಹಮನು ೧೭೫೪ರಲ್ಲಿ ಮಡಿದನು. ಆ ತರುವಾಯದಲ್ಲಿ ಮೂರು ವರ್ಷಗಳಾದ ಬಳಿಕ **ವಿಲಿಯಮ್ ಪಿಟ್** ಇವನು ಒಬ್ಬ ಪ್ರಮುಖ ಮಂತ್ರಿಯಾದನು (೧೭೫೭—೧೭೬೧). ಪಿಟ್ಟನು ತನ್ನ ವಯಸ್ಸಿನ ೨೭ನೆಯ ವರ್ಷದಲ್ಲಿ ಕಾಮನ್ಸ ಸಭೆಯ ಸದಸ್ಯನಾಗಿ ಆರಿಸಲ್ಪಟ್ಟನು (೧೭೩೫). ಆಗ ವಾಲ್‌ಪೋಲನು ಮುಖ್ಯ ಮಂತ್ರಿಯಾಗಿದ್ದನು. ಪಿಟ್ಟನು ವ್ಹಿಗ್‌ಪಕ್ಷದವನು. ಅವನಿಗೆ ವಾಲ್‌ಪೋಲನ ಲಂಚದ ಪದ್ಧತಿಯೂ ಎಲ್ಲ ಸತ್ತೆಯನ್ನು ತನ್ನ ಕೈಯಲ್ಲಿಯೇ ಇಟ್ಟುಕೊಳ್ಳಬೇಕೆಂಬ ಆತುರತೆಯೂ ಅವನಿಗೆ ಸಮ್ಮತವಾಗಿರಲಿಲ್ಲ ಮತ್ತು ಇಂಗ್ಲಂಡಿನ ಹಿತಕ್ಕಿಂತ ಹನೋವರದ ಹಿತದ ಕಡೆಗೆ ಹೆಚ್ಚಾಗಿ ಲಕ್ಷ್ಯವನ್ನು ಕೊಡುವ ಅವನ ಪದ್ಧ

ತಿಯೂ ಸೇರುತ್ತಿರಲಿಲ್ಲ. ಆದುದರಿಂದ ಪಿಟ್ಟನು ವಾಲ್‌ಪೋಲನ ನೀತಿಯನ್ನು ಟೀಕಿಸಿದ್ದನು. ಅವನು ಉತ್ತಮ ವಕ್ತೃವಾಗಿದ್ದನು. ಅವನು ತನ್ನ ದೇಶಪ್ರೀತಿ, ನಿಸ್ಪೃಹತೆ, ನಿರ್ದಾಕ್ಷಿಣ್ಯದಿಂದ ಯೋಗ್ಯ ಟೀಕೆಯನ್ನು ಮಾಡುವ ಗುಣ ಇವು ಗಳಿಂದ ಲೋಕಾದರಕ್ಕೆ ಪಾತ್ರನಾಗಿದ್ದನು. ಆ ಕಾಲದ ಚುನಾವಣೆಯ ಪದ್ಧತಿ ಯಿಂದ ಬಹುಶಃ ಧನಾಢ್ಯರು ಮತ್ತು ಜಮೀನದಾರರು ಇದ್ದವರೇ ಪಾರ್ಲಿ ಮೆಂಟಿನ ಕಾಮನ್ಸಸಭೆಯ (ಲೋಕಸಭೆಯ) ಸದಸ್ಯರಾಗಿ ಆರಿಸಲ್ಪಡುತ್ತಿದ್ದರು, ಆದುದರಿಂದ ಕಾಮನ್ಸಸಭೆಯಲ್ಲಿ ಅವನಿಗೆ ಬಹುಮತವಿದ್ದಿಲ್ಲ. ಆದರೆ ಸಾಮಾನ್ಯ ಜನರ ಬೆಂಬಲವು ಅವನಿಗಿದ್ದಿತು. ಆದುದರಿಂದ ಜನರು ಅವನನ್ನು **ಲೋಕನಾಯಕ** ನೆಂದು (The Great Commoner) ಕರೆಯುತ್ತಿದ್ದರು. ವಾಲ್‌ಪೋಲನ ಅಧಿಕಾರತ್ಯಾಗದ ತರುವಾಯದಲ್ಲಿ ಎರಡು ವರ್ಷಗಳಾದ ಬಳಿಕ ಹೆನ್ರಿ ಪೆಲ್ ಹಮನು ಮುಖ್ಯ ಮಂತ್ರಿಯಾದನು (೧೭೪೪–೧೭೫೪). ಪಿಟ್ಟನ ಕುಶಾಗ್ರ ಬುದ್ಧಿಯನ್ನೂ ಕರ್ತೃತ್ವಶಕ್ತಿಯನ್ನೂ ಜನರು ಅವನಲ್ಲಿಟ್ಟ ವಿಶ್ವಾಸವನ್ನೂ ಕಂಡು ಪೆಲ್‌ಹಮನು ಅವನನ್ನು ತನ್ನ ಮಂತ್ರಿಮಂಡಳದಲ್ಲಿ ತೆಗೆದುಕೊಂಡನು. ಪೆಲ್ ಹಮನ ಬಂಧುವಾದ ಡ್ಯೂಕ್ ಆಫ್ ನ್ಯೂಕಸಲ್ ಇವನು ಈ ಮಂತ್ರಿ ಮಂಡಳದಲ್ಲಿದ್ದನು. ಪೆಲ್‌ಹಮನು ಮಡಿದ ಬಳಿಕ (೧೭೫೪) ಡ್ಯೂಕ್ ಆಫ್ ನ್ಯೂಕಸಲನು ಮುಖ್ಯಮಂತ್ರಿಯಾದನು. ಆದರೆ ಅವನು ಲೋಭಿಯೂ ಕ್ಷುದ್ರ ಬುದ್ಧಿಯವನೂ ಅಯೋಗ್ಯನೂ ಆಗಿದ್ದನು. ಅವನಿಗೂ ಪಿಟ್ಟನಿಗೂ ಕೂಡಿ ನಡೆಯಲಿಲ್ಲ, ಆದುದರಿಂದ ಪಿಟ್ಟನು ಮಿತ್ರಮಂಡಳದಿಂದ ಹೊರಗೆ ಬಂದನು (೧೭೫೪). ಮುಂದೆ ೧೭೫೬ರಲ್ಲಿ 'ಸಪ್ತವಾರ್ಷಿಕ' ಯುದ್ಧವು ಪ್ರಾರಂಭವಾಯ್ತು. ಆ ಯುದ್ಧದಲ್ಲಿ ಫ್ರಾನ್ಸಿನಿಂದ ಇಂಗ್ಲಂಡಿಗೆ ಯುರೋಪದಲ್ಲಿ, ಸಮುದ್ರದ ಮೇಲೆ ಮತ್ತು ಅಮೇರಿಕೆಯಲ್ಲಿ ಸೋಲು ಬರಲಾರಂಭಿಸಿತು. ಪಿಟ್ಟನಂತಹ ಯೋಗ್ಯನೂ ಕರ್ತೃತ್ವಶಾಲಿಯೂ ಆದ ಪುರುಷನು ಮಂತ್ರಿಮಂಡಳದಲ್ಲಿ ಇದ್ದ ಹೊರ್ತು ಇಂಗ್ಲಂಡಿಗೆ ಜಯವು ದೊರೆಯಲಾರದೆಂದು ಎಲ್ಲರಿಗೂ ಎನಿಸತೊಡ ಗಿತು. ಈ ಬಿಕ್ಕಟ್ಟಿನ ಪ್ರಸಂಗದಲ್ಲಿ ತಮ್ಮ ತಮ್ಮಲ್ಲಿಯ ಮತಭೇದಗಳನ್ನು ಬದಿ ಗೊತ್ತಿ **ಪಿಟ್** ಮತ್ತು **ನ್ಯೂಕಸಲ್** ಇವರು ಮಂತ್ರಿಮಂಡಳವನ್ನು ರಚಿಸಿದರು (೧೭೫೭–೧೭೬೧). ಈ ಮಂತ್ರಿಮಂಡಳದಲ್ಲಿ ಪಿಟ್ಟನ ಕಡೆಗೆ ಪರರಾಷ್ಟ್ರೀಯ ಖಾತೆ ಮತ್ತು ಯುದ್ಧದ ವ್ಯವಸ್ಥೆ ಇದ್ದುವು.

**ಸಪ್ತವಾರ್ಷಿಕ ಯುದ್ಧವು (೧೭೫೬-೧೭೬೩), ಕಾರಣಗಳು—** ೧೭೫೬ರಲ್ಲಿ ಸಪ್ತವಾರ್ಷಿಕ ಯುದ್ಧವು ಪ್ರಾರಂಭವಾಯ್ತು. ಈ ಯುದ್ಧದಲ್ಲಿ

ಯುರೋಪದೊಳಗಿನ ಅನೇಕ ರಾಷ್ಟ್ರಗಳು ಸೇರಿದ್ದುವು. ಈ ಯುದ್ಧವು ಪ್ರಾರಂಭವಾಗಲು ಕಾರಣಗಳು ಕೆಳಗಿನಂತಿದ್ದುವು:—

(೧) ಜರ್ಮನಿಯಲ್ಲಿ ವರ್ಚಸ್ಸಿಗೋಸುಗ ಆಸ್ಟ್ರಿಯಾ ಮತ್ತು ಪ್ರಶಿಯಾ ಈ ಎರಡು ರಾಷ್ಟ್ರಗಳ ನಡುವೆ ಸ್ಪರ್ಧೆಯಿದ್ದಿತು. ಏಕ್ಸ-ಲಾ-ಶಾಪೆಲದ ಒಪ್ಪಂದ ದಿಂದ ಆಸ್ಟ್ರಿಯಾ ರಾಜ್ಯದಲ್ಲಿಯ ಸಿಲಿಸಿಯಾ ಪ್ರಾಂತವು ಪ್ರಶಿಯದ ರಾಜನಾದ ಫ್ರೆಡರಿಕ್-ದಿ-ಗ್ರೇಟ ಇವನಿಗೆ ಕೊಡಲ್ಪಟ್ಟಿತ್ತು. ಅದನ್ನು ಮತ್ತೆ ತನ್ನ ವಶದಲ್ಲಿ ತೆಗೆದು ಕೊಳ್ಳಬೇಕೆಂದು ಮೇರಿಯಾ ಥೆರೆಸಾ ಇವಳು ಬಯಸುತ್ತಿದ್ದಳು. ಫ್ರೆಡರಿಕ್-ದಿ-ಗ್ರೇಟ ಇವನು ಇಂಗ್ಲಂಡಿನ ಅರಸನಾದ ಜಾರ್ಜನ ಸೋದರಳಿಯನು. ಆದುದ ರಿಂದ ಇಂಗ್ಲಂಡಿನಿಂದ ತನಗೆ ಸಾಹಾಯ್ಯವು ದೊರೆಯದೆಂದು ಬಗೆದು ಮೇರಿಯಾ ಥೆರೆಸಾ ಇವಳು ಇಂಗ್ಲಂಡಿನ ಶತ್ರುವಾದ ಫ್ರಾನ್ಸಿನೊಡನೆ ಒಪ್ಪಂದವನ್ನು ಮಾಡಿ ಕೊಂಡಳು. (೨) ಫ್ರೆಡರಿಕ್-ದಿ-ಗ್ರೇಟ ಇವನು ಬಹು ಮಹತ್ವಾಕಾಂಕ್ಷಿಯಾಗಿ ದ್ದನು, ಮತ್ತು ಯುರೋಪದಲ್ಲಿ ತನ್ನ ರಾಷ್ಟ್ರವನ್ನು ಬಲಾಢ್ಯಗೊಳಿಸಲು ಅವನು ಪ್ರಯತ್ನಿಸುತ್ತಿದ್ದನು. ಆ ರಾಷ್ಟ್ರವು ಪ್ರಬಲವಾದರೆ ಅದರಿಂದ ತಮಗೆ ಗಂಡಾಂತ ರವು ಒದಗದಿರದೆಂದು ರಶಿಯಾ ಮತ್ತು ಫ್ರಾನ್ಸ್ ಈ ರಾಷ್ಟ್ರಗಳು ಆಸ್ಟ್ರಿಯ ದೊಡನೆ ಒಪ್ಪಂದವನ್ನು ಮಾಡಿಕೊಂಡುವು. ಆದುದರಿಂದ ಪ್ರಶಿಯವು ಇಂಗ್ಲಂಡಿ ನೊಡನೆ ಸಖ್ಯವನ್ನು ಮಾಡಿಕೊಳ್ಳಲು ಯತ್ನಿಸಿತು. ಫ್ರಾನ್ಸಿನಿಂದ ಹನೋವರಕ್ಕೆ ಆಘಾತವು ಒದಗಬಾರದೆಂದು ಇಂಗ್ಲಂಡು ಪ್ರಶಿಯದೊಡನೆ ಸಖ್ಯವನ್ನು ಮಾಡಿತು. (೩) ಫ್ರಾನ್ಸ್ ಮತ್ತು ಇಂಗ್ಲಂಡ್ ಇವುಗಳ ನಡುವೆ ಅಮೇರಿಕಾ ಮತ್ತು ಹಿಂದುಸ್ಥಾನ ಇವುಗಳಲ್ಲಿಯ ವ್ಯಾಪಾರಕ್ಕಾಗಿ, ವಸಾಹತುಗಳಿಗಾಗಿ ಮತ್ತು ವಶದಲ್ಲಿಯ ಪ್ರದೇಶಗಳಿಗಾಗಿ ಸ್ಪರ್ಧೆಯಿದ್ದಿತು. ಉತ್ತರ ಅಮೇರಿಕೆಯಲ್ಲಿ ಪಶ್ಚಿ ಮದ ಕಡೆಯ ಅಲಘನಿ ಪರ್ವತ ಮತ್ತು ಪೂರ್ವದ ಕಡೆಯ ಅಟಲಾಂಟಿಕ ಮಹಾ ಸಾಗರ ಇವುಗಳ ನಡುವಿನ ಪ್ರದೇಶದಲ್ಲಿ ಇಂಗ್ಲಂಡಿನ ವಸಾಹತುಗಳಿದ್ದುವು. ಈ ವಸಾಹತುಗಳ ಉತ್ತರಕ್ಕೆ ಇರುವ ಕನಡಾ ಎಂಬುದು ಫ್ರೆಂಚರ ವಸಾಹತಾ ಗಿದ್ದಿತು, ಮತ್ತು ಅದರಲ್ಲಿ ಕ್ವೆಬೆಕ್ ಮತ್ತು ಮಾಂಟ್ರೆಲ್ ಎಂಬುವು ಮಹತ್ವದ ಸ್ಥಳಗಳಿದ್ದುವು. ಇಂಗ್ಲಿಶ್ ವಸಾಹತುಗಳ ದಕ್ಷಿಣಕ್ಕೆ ಮಿಸಿಸಿಪಿ ನದಿಯ ಮುಖದ ಬಳಿಯಲ್ಲಿ ಫ್ರೆಂಚರ ಲ್ಯುಸಿಯಾನಾ ಎಂಬ ವಸಾಹತು ಇದ್ದಿತು. ಉತ್ತರ ಅಮೇರಿಕೆಯಲ್ಲಿದ್ದ ಫ್ರೆಂಚ್ ಮತ್ತು ಇಂಗ್ಲಿಶ್ ವಸಾಹತುಗಳು ರೆಡ್ ಇಂಡಿಯನಾ ಜನರೊಡನೆ ವ್ಯಾಪಾರ ಮಾಡುತ್ತಿದ್ದುವು. ಈ ಎಲ್ಲ ವ್ಯಾಪಾರವು ತಮ್ಮ ಅಧೀ ನತೆಯಲ್ಲಿಯೆ ಇರಬೇಕೆಂದು ಮತ್ತು ಪಶ್ಚಿಮದಲ್ಲಿಯ ಇಂಗ್ಲಿಶ್ ವಸಾಹತುಗಳ

ಬೆಳೆವಣಿಗೆಗೆ ತಡೆಯನ್ನೊದಗಿಸಿ ಆ ಎಲ್ಲ ಪ್ರದೇಶವನ್ನು ತನ್ನ ವಶದಲ್ಲಿ ತಂದು ಕೊಳ್ಳಬೇಕೆಂದು ಫ್ರೆಂಚರು ಅಲೆಗನೀಜ ಪರ್ವತದ ಪಶ್ಚಿಮದ ಕಡೆಯ ಸೇಂಟ್ ಲಾರೆನ್ಸ, ಓಹಿಯೊ ಮತ್ತು ಮಿಸಿಸಿಪಿ ಈ ಹೊಳೆಗಳ ದಡಗಳ ಗುಂಟ ಕೋಟೆಗಳನ್ನು ಕಟ್ಟಿಸಿದರು. ಇಂಗ್ಲಿಶ್ ವಸಾಹತುಗಳೂ ಅಲೆಗನೀಜ ಪರ್ವತದ ಆಚೆಯ ಪ್ರದೇಶವನ್ನು ತಮ್ಮ ವಶದಲ್ಲಿ ತೆಗೆದುಕೊಂಡು ರೆಡ್ ಇಂಡಿಯನರೊಡನೆ ವ್ಯಾಪಾರ ವನ್ನು ಮಾಡಲು ಪ್ರಯತ್ನವನ್ನಾರಂಭಿಸಿದುವು. ಈ ಕಾರಣದಿಂದ ಫ್ರೆಂಚ್ ಮತ್ತು ಇಂಗ್ಲಿಶ್ ವಸಾಹತುಗಳ ನಡುವೆ ಕಲಹಗಳು ಆರಂಭವಾದುವು. ಹಿಂದು ಸ್ಥಾನದಲ್ಲಿಯೂ ಫ್ರೆಂಚರ ಮತ್ತು ಇಂಗ್ಲಿಶರ ವ್ಯಾಪಾರದ ಕಂಪನಿಗಳಿದ್ದುವು ಮತ್ತು ಅವುಗಳ ನಡುವೆ ತೀವ್ರ ಸ್ಪರ್ಧೆಯಿದ್ದಿತು. ವ್ಯಾಪಾರದಂತೆ ಅಲ್ಲಿಯ ಪ್ರದೇಶಗಳನ್ನೂ ತಮ್ಮ ವಶದಲ್ಲಿ ತಂದುಕೊಂಡು ಅಲ್ಲಿ ರಾಜ್ಯವನ್ನು ಸ್ಥಾಪಿಸ ಬೇಕೆಂದು ಈ ಕಂಪನಿಗಳು ಹಿಂದುಸ್ಥಾನದ ರಾಜರಾಜರಲ್ಲಿ ನಡೆಯುತ್ತಿದ್ದ ಯುದ್ಧ ಗಳಲ್ಲಿ ಭಾಗವನ್ನು ವಹಿಸುತ್ತಿದ್ದುವು. ಹೀಗೆ ಯುರೋಪದಲ್ಲಿ ಆಸ್ಟ್ರಿಯಾ ಮತ್ತು ಪ್ರಶಿಯಾ ಈ ರಾಷ್ಟ್ರಗಳ ನಡುವಿನ ಸ್ಪರ್ಧೆ, ಪ್ರಶಿಯದ ಮಹತ್ವಾಕಾಂಕ್ಷೆಯಿಂದ ಇತರ ರಾಷ್ಟ್ರಗಳಿಗೆ ಉಂಟಾದ ಭೀತಿ ಮತ್ತು ಅಮೇರಿಕೆಯಲ್ಲಿಯೂ ಹಿಂದು ಸ್ಥಾನದಲ್ಲಿಯೂ ಫ್ರಾನ್ಸ್ ಮತ್ತು ಇಂಗ್ಲಂಡ್ ಇವುಗಳ ನಡುವಿನ ಅಹಮಹಮಿಕೆ, ಈ ಎಲ್ಲ ಕಾರಣಗಳಿಂದ ೧೭೫೬ರಲ್ಲಿ ಯುದ್ಧವು ಆರಂಭವಾಯ್ತು.

ಯುದ್ಧವು—೧೭೫೬ರಲ್ಲಿ ಫ್ರೆಂಚ ಹಡಗುಪಡೆ ಇಂಗ್ಲಿಶರ ವಶದಲ್ಲಿದ್ದ ಭೂಮಧ್ಯಸಮುದ್ರದಲ್ಲಿಯ ಮಿನೋರ್ಕಾ ಎಂಬ ನಡುಗಡ್ಡೆಯನ್ನು ಗೆದ್ದು ತೆಗೆದುಕೊಂಡಿತು. ಇಂಗ್ಲಿಶ್ ಅಡಮಿರಲ್ ಬಿಂಗ ಇವನು ಅದನ್ನು ತಿರುಗಿ ತೆಗೆದುಕೊಳ್ಳಲು ಸಮರ್ಥನಾಗಲಿಲ್ಲ. ಇದೇ ವರ್ಷದಲ್ಲಿ ಆಸ್ಟ್ರಿಯಾ, ರಶಿಯಾ, ಮತ್ತು ಫ್ರಾನ್ಸ್ ಈ ರಾಷ್ಟ್ರಗಳು ಮೂರು ಕಡೆಗಳಿಂದ ಪ್ರಶಿಯವನ್ನು ಮುತ್ತಿ ಫ್ರೆಡರಿಕ್ ದಿ ಗ್ರೇಟ್ ಇವನನ್ನು ಸೋಲಿಸಿದುವು. ಆದರೆ ಅವನು ಧೈರ್ಯಗುಂದ ಲಿಲ್ಲ. ಆ ಬಳಿಕ ಫ್ರಾನ್ಸು ಹನೋವರ ಸಂಸ್ಥಾನದ ಮೇಲೆ ದಾಳಿಮಾಡಿ ಜಾರ್ಜ ರಾಜನ ಚಿಕ್ಕ ಮಗನಾದ ಡ್ಯೂಕ್ ಅಫ್ ಕಂಬರ್‌ಲಂಡ ಇವನನ್ನು ಸೋಲಿಸಿತು. ಆತನು ಫ್ರೆಂಚರಿಗೆ ಶರಣುಹೊಗಬೇಕಾಯ್ತು ಮತ್ತು ಕ್ಲೋಸ್ಟರ ಸೆವೆನ್ ಎಂಬಲ್ಲಿ ಅಪಮಾನಕರವಾದ ಒಪ್ಪಂದಕ್ಕೆ ಒಪ್ಪಿಗೆಯನ್ನೀಯಬೇಕಾಯ್ತು. ಫ್ರೆಂಚರು ಹನೋವರನ್ನು ತಮ್ಮ ವಶದಲ್ಲಿ ತೆಗೆದುಕೊಂಡರು (೧೭೫೭). ಅಮೇ ರಿಕೆಯಲ್ಲಿ ಫ್ರೆಂಚರ ಮತ್ತು ಇಂಗ್ಲಿಶರ ನಡುವೆ ಆದ ಯುದ್ಧದಲ್ಲಿಯೂ ಇಂಗ್ಲಿಶ್ ವಸಾಹತುಗಳು ಸೋತುವು. ೧೭೫೪ರಲ್ಲಿ ಫ್ರೆಂಚರ ಡೂಕೆನಿ ಎಂಬ ಕೋಟೆ

ಯನ್ನು ತೆಗೆದುಕೊಳ್ಳಲು ಇಂಗ್ಲಿಶ್ ವಸಾಹತುಗಳ ಸೇನಾಪತಿಯಾದ **ವಾಶಿಂಗ್ಟನನು** ಯತ್ನಿಸಿದ್ದನು. ಆದರೆ ಅವನಿಗೆ ಯಶವು ದೊರೆಯಲಿಲ್ಲ. ಆ ಬಳಿಕ ಇಂಗ್ಲಂಡಿನಿಂದ ಬಂದ ಸೇನಾಪತಿ **ಬ್ರೆಡಾಕನು** ಆ ಕೋಟೆಯನ್ನು ತೆಗೆದುಕೊಳ್ಳಲು ೧೭೫೫ರಲ್ಲಿ ಪ್ರಯತ್ನಿಸಿದನು. ಆದರೆ ಪ್ರಯತ್ನವು ವಿಫಲವಾಯ್ತು; ಅವನೇ ಯುದ್ಧದಲ್ಲಿ ಕೊಲ್ಲಲ್ಪಟ್ಟನು. ಆದರೆ ಫ್ರೆಂಚರು ಮಾತ್ರ ಇಂಗ್ಲಿಶರ ಆಸ್ವೇಗೊ ಮತ್ತು ಫೋರ್ಟ್ ವಿಲಿಯಮ್ ಹೆನ್ರಿ ಎಂಬ ಎರಡು ಕೋಟೆಗಳನ್ನು ತೆಗೆದು ಕೊಂಡರು. ಆ ಬಳಿಕ ಇಂಗ್ಲಿಶರು ಸೇಂಟ ಲಾರೆನ್ಸ ನದಿಯ ಮುಖದ ಬಳಿಯಲ್ಲಿಯ ಕೇಪ್ ಬ್ರಿಟನ್ ನಡುಗಡ್ಡೆಯಲ್ಲಿಯ ಫ್ರೆಂಚರ ಲುಯಿಸ್‌ಬರ್ಗ ಕೋಟೆಯನ್ನು ತೆಗೆದುಕೊಳ್ಳಲು ಯತ್ನಿಸಿದರು, ಆದರೆ ಇಲ್ಲಿಯೂ ಯಶವು ದೊರೆಯಲಿಲ್ಲ (೧೭೫೭).

**ಪಿಟ್ಟನು ಯುದ್ಧಮಂತ್ರಿಯಾಗುವನು**—ಈ ಸಮಯದಲ್ಲಿ ಡ್ಯೂಕ್ ಆಫ್ ನ್ಯೂ ಕಸಲ್ ಇವನು ಮುಖ್ಯ ಮಂತ್ರಿಯಾಗಿದ್ದನು. ಆದರೆ ಯುದ್ಧದ ಆರಂಭದಿಂದ ಇಂಗ್ಲಿಶರಿಗೆ ಎಲ್ಲೆಲ್ಲಿಯೂ ಸೋಲು ಬಂದುದರಿಂದ ಯುದ್ಧದ ವಿಷಯದಲ್ಲಿ ಸರಿಯಾದ ವ್ಯವಸ್ಥೆ ಆಗುತ್ತಿರುವುದಿಲ್ಲವೆಂದು ಮಂತ್ರಿಮಂಡಳದ ವಿರುದ್ಧವಾಗಿ ಜನರಲ್ಲಿ ಅಸಂತೋಷವು ಹಬ್ಬಿತು. **ವಿಲಿಯಮ್ ಪಿಟ್ಟನು** ಮಂತ್ರಿಮಂಡಳದಲ್ಲಿ ಸೇರಿಸಲ್ಪಡಬೇಕು ಮತ್ತು ಯುದ್ಧದ ಎಲ್ಲ ವ್ಯವಸ್ಥೆ ಅವನಿಗೆ ಒಪ್ಪಿಸಲ್ಪಡಬೇಕು ಎಂದು ಜನರು ಎನ್ನತೊಡಗಿದರು. ಇಂಗ್ಲಂಡಿಗೆ ಬಿಕ್ಕಟ್ಟಿನ ಪ್ರಸಂಗವು ಬಂದಿತ್ತು. ಆದುದರಿಂದ ತಮ್ಮತಮ್ಮೊಳಗಿನ ಮತಭೇದವನ್ನು ಬದಿಗಿರಿಸಿ ನ್ಯೂ ಕಸಲ್ ಮತ್ತು ಪಿಟ್ ಇವರು ಏಕಮತದಿಂದ ಕೆಲಸ ಮಾಡಲು ನಿಶ್ಚಯಿಸಿದರು, ಮತ್ತು ಪಿಟ್ಟನು ಮಂತ್ರಿಮಂಡಳದಲ್ಲಿ ಹೋದನು. ಯುದ್ಧದ ಎಲ್ಲ ವ್ಯವಸ್ಥೆ ಪಿಟ್ಟನಿಗೆ ಒಪ್ಪಿಸಲ್ಪಟ್ಟಿತು. ಪಿಟ್ಟನು ಈ ಬಿಕ್ಕಟ್ಟಿನ ಪರಿಸ್ಥಿತಿಯನ್ನು ಇದಿರಿಸಿ ಯುದ್ಧವನ್ನು ಯಶಸ್ವಿಗೊಳಿಸಲು ಅತ್ಯಂತವಾಗಿ ಪ್ರಯತ್ನಿಸಿದನು. ವಸಾಹತುಗಳಲ್ಲಿಯೂ ಸಮುದ್ರದ ಮೇಲೆಯೂ ದೊರೆಯಬಹುದಾದ ವಿಜಯದಿಂದಲೇ ಇಂಗ್ಲಂಡಿಗೆ ಶ್ರೇಷ್ಠತ್ವವು ಲಭಿಸಬಲ್ಲುದೆಂದು ಬಗೆದು ಅವನು ಅಮೇರಿಕಾ ಹಿಂದುಸ್ಥಾನಗಳಲ್ಲಿ ಮತ್ತು ಸಮುದ್ರದ ಮೇಲೆ ನಡೆದ ಯುದ್ಧಗಳ ನೇತೃತ್ವವನ್ನು ವಹಿಸಲು ಯೋಗ್ಯರಾದ ಸೇನಾಪತಿಗಳನ್ನು ನಿಯೋಜಿಸಿ ಅವರಿಗೆ ಯುದ್ಧಸಾಮಗ್ರಿಗಳನ್ನೂ ಸೈನಿಕರನ್ನೂ ಪೂರೈಸಿದನು. ಫ್ರಾನ್ಸಿಗೆ ಅಮೇರಿಕಾ ಹಿಂದುಸ್ಥಾನಗಳಲ್ಲಿ ನಡೆದ ಯುದ್ಧದ ಕಡೆಗೆ ಲಕ್ಷ್ಯವನ್ನು ಪೂರೈಸಲು ಅವಕಾಶವು ದೊರೆಯಬಾರದೆಂದು ಮತ್ತು ಅದನ್ನು ಯುರೋಪದಲ್ಲಿ

ಯುದ್ಧದಲ್ಲಿ ತೊಡಗಿಸಿಡಬೇಕೆಂದು ಅವನು ಫ್ರೆಡರಿಕ್ ದಿ ಗ್ರೇಟ್ ಇವನಿಗೆ ಬೇಕಾದಷ್ಟು ಹಣದ ಸಾಹಾಯ್ಯವನ್ನು ಮಾಡಿದನು. ಅವನು ಇಂಗ್ಲಂಡಿನ ಸೈನ್ಯವನ್ನು ಫ್ರೆಡರಿಕ್ ದಿ ಗ್ರೇಟ್ ಇವನ ಮುಖ್ಯ ಸೇನಾಪತಿಯಾದ ಫರ್ಡಿನಾಂಡ ಆಫ್ ಬ್ರನ್ಸವಿಕ್ ಇವನ ಅಧಿಕಾರಕ್ಕೆ ಒಳಪಡಿಸಲು ಹಿಂಜರಿಯಲಿಲ್ಲ. ಪಿಟ್ಟನ ಈ ಉಪಾಯದಿಂದ ಯುದ್ಧದ ಸ್ವರೂಪವು ಬದಲಾಯಿತು. ಇಂಗ್ಲಂಡಿಗೆ ಮತ್ತು ಫ್ರೆಡ್ರಿಕನಿಗೆ ಜಯವು ದೊರೆಯಲಾರಂಭಿಸಿತು.

ಯುರೋಪದಲ್ಲಿ ಇಂಗ್ಲಂಡ್ ಮತ್ತು ಪ್ರಶಿಯಾ ಇವುಗಳಿಗೆ ಜಯವು—೧೭೫೯ರಲ್ಲಿ ಡ್ಯೂಕ್ ಆಫ್ ಬ್ರನ್ಸವಿಕ್ ಇವನ ನೇತೃತ್ವದಲ್ಲಿಯ ಇಂಗ್ಲಿಶ್ ಮತ್ತು ಪ್ರಶಿಯನ್ ಸೈನ್ಯಗಳು ಮಿನ್‌ಡೇನದ ಯುದ್ಧದಲ್ಲಿ ಫ್ರೆಂಚ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿದುವು. ಅದರಿಂದ ಹೆನೋವರ ಸಂಸ್ಥಾನವು ಫ್ರೆಂಚರ ವಶದಿಂದ ತಿರುಗಿ ಬಂದಿತು. ಈ ಪರಾಭವದ ತರುವಾಯದಲ್ಲಿ ಫ್ರೆಂಚ ಸೈನ್ಯವು ಜರ್ಮನಿಯೊಳಗಿಂದ ಕಾಲ್ದೆಗೆಯ ಬೇಕಾಯಿತು. ಫ್ರೆಡರಿಕ್ ದಿ ಗ್ರೇಟ್ ಇವನು ರಶಿಯನ್ ಮತ್ತು ಆಸ್ಟ್ರಿಯನ್ ಸೈನ್ಯಗಳನ್ನು ಬೇರೆ ಬೇರೆ ಸ್ಥಳಗಳಲ್ಲಿ ಇದಿರಿಸಿ ಅವುಗಳನ್ನು ಸೋಲಿಸಿದನು.

ಇದೇ ಸಮಯದಲ್ಲಿ ಇಂಗ್ಲಂಡಿನ ಮೇಲೆ ಹಡಗುಪಡೆಯ ದಾಳಿಯನ್ನು ಮಾಡಲು ಟೂಲೋನ ಎಂಬಲ್ಲಿದ್ದ ಫ್ರೆಂಚ ಹಡಗುಪಡೆ ಜಿಬ್ರಾಲ್ಟರ್ ಸಾಮುದ್ರಧುನಿಯೊಳಗಿಂದ ಅಟ್ಲಾಂಟಿಕ್ ಮಹಾಸಾಗರದೊಳಗೆ ಬಂದಿತು, ಆದರೆ ಪೋರ್ತುಗಾಲದ ದಂಡೆಯ ಮೇಲಿನ ಲಗಾಸ್ ಎಂಬಲ್ಲಿ ಬಾಸ್ಕವೆನನು ಅದನ್ನು ಸೋಲಿಸಿದನು (೧೭೫೯). ಆ ಬಳಿಕ ಇಂಗ್ಲಿಶ ಸೇನಾಪತಿಯಾದ ಹಾಕೆ ಎಂಬವನು ಕ್ವಿಬೆರಾನ್ ಆಖಾತದಲ್ಲಿಯೂ (ಫ್ರಾನ್ಸ) ಫ್ರೆಂಚ ಹಡಗುಪಡೆಯನ್ನು ಸೋಲಿಸಿದುದರಿಂದ ಫ್ರಾನ್ಸಿನಿಂದ ಹಡಗುಪಡೆಯ ದಾಳಿ ಬರುವ ಭೀತಿ ತಪ್ಪಿತು ಮತ್ತು ಸಮುದ್ರದ ಮೇಲೆ ಇಂಗ್ಲಂಡಿನ ವರ್ಚಸ್ಸು ನೆಲೆಗೊಂಡಿತು.

ಕನಡಾ ಪ್ರಾಂತವು ಗೆಲ್ಲಲ್ಪಟ್ಟಿತು (೧೭೫೮-೧೭೬೦)—ಅಮೇರಿಕೆಯಲ್ಲಿಯ ಫ್ರೆಂಚರ ವಸಾಹತುಗಳನ್ನು ತೆಗೆದುಕೊಳ್ಳಲು ಪಿಟ್ಟನು ಸೈನ್ಯವನ್ನು ಕಳುಹಿದನು. ಈ ಸೈನ್ಯವು ೧೭೫೮ರಲ್ಲಿ ಡೂಕೇನ್ ಮತ್ತು ಲುಯಿಸ್‌ಬರ್ಗ ಎಂಬ ಮಹತ್ವದ ಕೋಟೆಗಳನ್ನು ತೆಗೆದುಕೊಂಡಿತು. ಆ ಬಳಿಕ ವುಲ್ಫನೆಂಬ ಸಾಹಸಿಯಾದ ಸೇನಾಪತಿ ಕನಡಾ ಪ್ರಾಂತದಲ್ಲಿಯ ಕ್ವಿಬೆಕ್ ಎಂಬ ಮಹತ್ವದ ಕೋಟೆಯನ್ನು ಮುತ್ತಿದನು. ಫ್ರೆಂಚ ಸೇನಾಪತಿಯಾದ ಮಾಂಟಕಾಮನು ತನ್ನ ಹತ್ತು ಸಾವಿರ ಸೈನಿಕರೊಡನೆ ಈ ಕೋಟೆಯ ಸಂರಕ್ಷಣೆಗಾಗಿ

ಇದ್ದನು. ಆದರೆ ವುಲ್ಫನು ಯಾರಿಗೂ ಗೊತ್ತಾಗದಂತೆ ತನ್ನ ಸೈನ್ಯವನ್ನು ರಾತ್ರಿಯಲ್ಲಿ ಆ ಕೋಟೆಯ ಅಭೇದ್ಯವಾದ ಗೋಡೆಗಳ ಮೇಲಿಂದ ಒಳಗೆ ಒಯ್ದನು.



ಜನರಲ್ ವುಲ್ಫ.

ಹೀಗೆ ಒಮ್ಮಿಂದೊಮ್ಮೆ ಬಂದ ಈ ಸೈನ್ಯವನ್ನು ಕಂಡು ಫ್ರೆಂಚ ಸೈನಿಕರು ಗೊಂದಲದಲ್ಲಿ ಬಿದ್ದರು. ಎರಡೂ ಸೈನ್ಯಗಳ ನಡುವೆ ಯುದ್ಧವಾಗಿ ಇಂಗ್ಲಿಶರಿಗೆ ಜಯವು ದೊರೆತಿತು (೧೭೫೯). ಕ್ವಿಬೆಕ್ ಕೋಟೆ ಇಂಗ್ಲಿಶರ ವಶದಲ್ಲಿ ಬಂದಿತು. ಈ ಯುದ್ಧದಲ್ಲಿ ವುಲ್ಫ ಮತ್ತು ಮಾಂಟಕಾಮ್ ಈ ಸೇನಾಪತಿಗಳಿಬ್ಬರೂ

ಮುಡಿದರು. ಮುಂದೆ ಒಂದು ತಿಂಗಳಿನ ತರುವಾಯದಲ್ಲಿ ಕೆನಡಾ ಪ್ರಾಂತದಲ್ಲಿಯ **ಮಾಂಟ್ರೇಲ್** ಎಂಬ ಇನ್ನೊಂದು ಮಹತ್ವದ ಸ್ಥಳವನ್ನು ಇಂಗ್ಲಿಶ ಸೈನ್ಯವು ತೆಗೆದುಕೊಂಡುದರಿಂದ ಅಖಿಲ ಕನಡಾ ಪ್ರಾಂತವು ಇಂಗ್ಲಿಶರ ವಶದಲ್ಲಿ ಬಂದಿತು.

**ವೆಸ್ಟ ಇಂಡೀಜ ಮತ್ತು ಇತರ ನಡುಗಡ್ಡೆಗಳು**–ಇತ್ತ ಸಮುದ್ರದ ಮೇಲೆಯೂ ಇಂಗ್ಲಿಶ್ ಹಡಗುಪಡೆ ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿ ಫ್ರೆಂಚರ ವಶದಲ್ಲಿದ್ದ ಮಾರ್ಟಿನಿಕ್ ಮತ್ತು ಸೇಂಟ ಲ್ಯೂಕಾ (೧೭೬೨) ಈ ನಡುಗಡ್ಡೆಗಳನ್ನು ತೆಗೆದುಕೊಂಡಿತು. ೧೭೬೨ರಲ್ಲಿ ಸ್ಪೇನ ರಾಷ್ಟ್ರವು ಇಂಗ್ಲಂಡಿನ ವಿರುದ್ಧವಾಗಿ ಯುದ್ಧವನ್ನು ಸಾರಿತು. ಆ ಯುದ್ಧದ ಪರಿಣಾಮವಾಗಿ ಕ್ಯೂಬಾ ಮತ್ತು ಫಿಲಿಪಾಯಿನ್ ನಡುಗಡ್ಡೆಗಳು ಇಂಗ್ಲಿಶರ ವಶದಲ್ಲಿ ಬಂದುವು (೧೭೬೨).

ಇತ್ತ ಹಿಂದುಸ್ಥಾನದಲ್ಲಿಯೂ ಇಂಗ್ಲಿಶರಿಗೆ ಜಯವು ದೊರೆತಿತು. ೧೭೫೭ರಲ್ಲಿ ಕ್ಲೈವನು ಪ್ಲಾಸಿಯ ಯುದ್ಧದಲ್ಲಿ ಬಂಗಾಲದ ನವಾಬನಾದ ಸುರಾಜ ಉದ್ದೌಲನನ್ನು ಸೋಲಿಸಿದನು. ಇದರ ಪರಿಣಾಮದಿಂದ ಬಂಗಾಲ ಪ್ರಾಂತದಲ್ಲಿ ಇಂಗ್ಲಿಶರ ವರ್ಚಸ್ಸು ಸ್ಥಾಪಿಸಲ್ಪಟ್ಟು ಹಿಂದುಸ್ಥಾನದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ಅಡಿಗಲ್ಲು ಇಡಲ್ಪಟ್ಟಿತು. ಯುರೋಪದಲ್ಲಿ ಫ್ರಾನ್ಸ್ ಮತ್ತು ಇಂಗ್ಲಂಡ್ ಈ ರಾಷ್ಟ್ರಗಳ ನಡುವೆ ನಡಿಯುತ್ತಿದ್ದ ಯುದ್ಧದ ಸಂಧಿಯನ್ನು ಸಾಧಿಸಿ ದಕ್ಷಿಣ ಹಿಂದುಸ್ಥಾನದಲ್ಲಿಯ ಇಂಗ್ಲಿಶ್ ಜನರ ವರ್ಚಸ್ಸನ್ನು ಕುಗ್ಗಿಸಲು ಡೂಪ್ಲೆಯ ತರುವಾಯದಲ್ಲಿ ಬಂದ ಲಾಲಿ ಎಂಬ ಫ್ರೆಂಚ ಗವ್ಹರ್ನರನು ಪ್ರಯತ್ನವನ್ನು ಆರಂಭಿಸಿದನು; ಆದರೆ ಲಾಲಿ ಡೂಪ್ಲೆಯಂತೆ ಕರ್ತೃತ್ವಶಾಲಿಯೂ ಯುಕ್ತಿವಂತನೂ ಆಗಿರಲಿಲ್ಲ, ಇದಲ್ಲದೆ ಅವನಿಗೆ ಹಿಂದುಸ್ಥಾನದ ಪರಿಸ್ಥಿತಿಯೂ ಗೊತ್ತಿರಲಿಲ್ಲ. ಆದುದರಿಂದ ಅವನ ಉದ್ದೇಶವು ನೆರವೇರಲಿಲ್ಲ. ಅವನು **ಫೋರ್ಟ ಸೇಂಟ್ ಡೆವಿಡ್** ಕೋಟೆಯನ್ನು ತೆಗೆದುಕೊಂಡು ಮದ್ರಾಸದ **ಫೋರ್ಟ ಸೇಂಟ ಜಾರ್ಜ** ಕೋಟೆಗೆ ಮುತ್ತಿಗೆಯಿಕ್ಕಿದನು. ಆದರೆ ಅದೇ ಸಮಯದಲ್ಲಿ ಯುರೋಪದಿಂದ ಇಂಗ್ಲಿಶ್ ಹಡಗುಪಡೆ ಬಂದುದರಿಂದ ಫ್ರೆಂಚರು ಹಿಂದೆಗೆಯಬೇಕಾಯಿತು. ಮುಂದೆ ೧೭೬೦ರಲ್ಲಿ ಆದ **ವಾಂಡಿವಾಶದ** ಕಾಳೆಗದಲ್ಲಿ ಇಂಗ್ಲಿಶ್ ಸೇನಾಪತಿ **ಕರ್ನಲ್ ಕೂಟನು** ಫ್ರೆಂಚರನ್ನು ಸೋಲಿಸಿದನು, ಮತ್ತು ೧೭೬೧ರಲ್ಲಿ ಹಿಂದುಸ್ಥಾನದ ಪೂರ್ವದಂಡೆಯ ಮೇಲಿನ ಫ್ರೆಂಚರ ಮಹತ್ವದ ಸ್ಥಳವಾದ ಪಾಂಡಿಚೆರಿಯನ್ನು ತೆಗೆದುಕೊಂಡನು. ಈ ಬಗೆಯಾಗಿ ಹಿಂದುಸ್ಥಾನದಲ್ಲಿ ಫ್ರೆಂಚರ ಸತ್ತೆ ಸಂಪೂರ್ಣವಾಗಿ ನಷ್ಟವಾಯಿತು ಮತ್ತು ಪೂರ್ವ ದಂಡೆಯ ಮೇಲೆ ಇಂಗ್ಲಿಶರ ವರ್ಚಸ್ಸು ನೆಲೆಗೊಂಡಿತು.

ಈ ಸಪ್ತವಾರ್ಷಿಕ ಯುದ್ಧವು ನಡೆದಿರುವಾಗ ೧೭೬೦ರಲ್ಲಿ ಅಕ್ಟೋಬರ ತಿಂಗಳಲ್ಲಿ ೨ನೆಯ ಜಾರ್ಜನು ಮಡಿದನು. ಜಾರ್ಜನ ಹಿರಿಯ ಮಗನಾದ ಫ್ರೆಡ್ರಿಕನು ತಂದೆಗಿಂತ ಮೊದಲೆ ಸತ್ತಿದ್ದನಾದುದರಿಂದ ಫ್ರೆಡ್ರಿಕನ ಮಗನಾದ ಜಾರ್ಜನು ೩ನೆಯ ಜಾರ್ಜನೆಂದು ಇಂಗ್ಲಂಡಿನ ಪಟ್ಟಕ್ಕೆ ಬಂದನು. ಪಿಟ್ಟನ ವಿಷಯದಲ್ಲಿ ಅವನಿಗೆ ಅಪ್ರೀತಿ ಇದ್ದುದರಿಂದ ಅವನು ಪಿಟ್ಟನ ಆಲೋಚನೆಯನ್ನು ಅನುಸರಿಸಲು ಒಪ್ಪಲಿಲ್ಲ. ಆದುದರಿಂದ ಪಿಟ್ಟನು ೧೭೬೧ರಲ್ಲಿ ಅಧಿಕಾರವನ್ನು ತ್ಯಜಿಸಿದನು. ಆ ಬಳಿಕ ಡ್ಯೂಕ್ ಆಫ್ ನ್ಯೂ ಕೆಸಲನೂ ಅಧಿಕಾರವನ್ನು ತ್ಯಜಿಸಿದನು. ಆಗ ಜಾರ್ಜನು ತನಗೆ ಬೇಕಾದವನಾದ ಬ್ಯೂಟ ಎಂಬವನನ್ನು ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು (೧೭೬೧). ಬ್ಯೂಟನು ಮಂತ್ರಿಯಾಗಿರುವಾಗಲೆ ಪೆರಿಸಿನಲ್ಲಿ ಒಪ್ಪಂದವಾಗಿ ಸಪ್ತವಾರ್ಷಿಕ ಯುದ್ಧವು ನಿಂತಿತು.

**ಪೆರಿಸಿನ ಒಪ್ಪಂದವು (೧೭೬೩)**—ಈ ಒಪ್ಪಂದದಿಂದ ಇಂಗ್ಲಂಡಿಗೆ ಫ್ರಾನ್ಸಿನಿಂದ ಕೆನಡಾ ಪ್ರಾಂತವು ಮತ್ತು ಕೇಪ್ ಬ್ರಿಟನ್ ನಡುಗಡ್ಡೆ, ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿಯ ಕೆಲವು ನಡುಗಡ್ಡೆಗಳು, ಮತ್ತು ಭೂಮಧ್ಯಸಮುದ್ರದಲ್ಲಿಯ ಮಿನೋರ್ಕಾ ನಡುಗಡ್ಡೆ ದೊರೆತುವು. ಆದರೆ ಹಿಂದುಸ್ಥಾನದಲ್ಲಿಯ ಪಾಂಡಿಚೆರಿ ಮತ್ತು ಇತರ ಫ್ರೆಂಚ ಸ್ಥಳಗಳು ಫ್ರಾನ್ಸಿಗೆ ತಿರುಗಿ ದೊರೆತುವು. ಇಂಗ್ಲಂಡಿಗೆ ಸ್ಪೇನದಿಂದ ಫ್ಲಾರಿಡಾ ಎಂಬ ವಸಾಹತು ದೊರೆತಿತು. ಆದರೆ ಕ್ಯೂಬಾ ಮತ್ತು ಫಿಲಿಪಾಯಿನ ನಡುಗಡ್ಡೆಗಳನ್ನು ಇಂಗ್ಲಂಡು ಸ್ಪೇನಕ್ಕೆ ತಿರುಗಿ ಕೊಡಬೇಕಾಯಿತು.

---

## ಸಾರಾಂಶವು.

### ೨ನೆಯ ಜಾರ್ಜನು (೧೭೨೭—೧೭೬೦).

೨ನೆಯ ಜಾರ್ಜನ ನೀತಿ—(೧) ಮಂತ್ರಿಮಂಡಳಕ್ಕೆ ರಾಜ್ಯಕಾರಭಾರವನ್ನು ಒಪ್ಪಿಸುವುದು.

(೨) ಪರರಾಷ್ಟ್ರೀಯ ವಿಷಯದಲ್ಲಿ ಹೆನೋವರದ ಹಿತಸಂಬಂಧವನ್ನು ಕಾಯ್ದುಕೊಳ್ಳುವುದು.

ಜಾರ್ಜನ ಪ್ರಮುಖರಾದ ಮುಖ್ಯ ಮಂತ್ರಿಗಳು—

ವಾಲಪೋಲ್ (೧೭೨೧-೧೭೪೨)—ವ್ಹಿಗ್ ಪಕ್ಷದ ಮಂತ್ರಿ. ಶಾಂತತೆಯ ನೀತಿ. ಇಂಗ್ಲಂಡಿನ ವ್ಯಾಪಾರೋದ್ಯೋಗಗಳಿಗೆ ಇವನ ಉತ್ತೇಜನವು. ತನ್ನ ವರ್ಚಸ್ಸು

ಉಳಿಯಬೇಕೆಂದೂ ಎಲ್ಲ ಸತ್ತೆ ತನ್ನ ಕೈಯಲ್ಲಿರಬೇಕೆಂದೂ ತನಗಿಂತ ಬುದ್ಧಿವಂತರೂ ಕರ್ತೃತ್ವಶಾಲಿಗಳೂ ಆದವರನ್ನು ಮಂತ್ರಿಮಂಡಳದಲ್ಲಿ ನಿಯೋಜಿಸದಿರುವುದು. ಆದರಿಂದ ವ್ಹಿಗ್ ಪಕ್ಷದಲ್ಲಿಯೂ ಅವನ ವಿಷಯದಲ್ಲಿ ಅಪ್ರಿಯತೆ. ವಿಲಿಯಮ್ ಪಿಟ್ಟನು ಅವನ ವಿರೋಧಕರಲ್ಲಿ ಒಬ್ಬನು. ೧೭೩೯ರಲ್ಲಿ ಸ್ಪೇನದೊಡನೆ ಯುದ್ಧವು ಮತ್ತು ಆದರಲ್ಲಿ ಅಪಯಶವು. ಈ ಕಾರಣದಿಂದ ಪಾರ್ಲಿಮೆಂಟಿನ ಹೊಸ ಚುನಾವಣೆ. ಅದರಲ್ಲಿ ಬಹುಮತವು ಅವನ ವಿರುದ್ಧವಾದುದು. ಆದುದರಿಂದ ಅವನು ಮುಖ್ಯ ಮಂತ್ರಿಪದವನ್ನು ತ್ಯಜಿಸಿದನು (೧೭೪೨).

ಹೆನ್ರಿ ಪೆಲ್‌ಹಮ್ (೧೭೪೪-೧೭೫೪)—ಕುಶಾಗ್ರ ಬುದ್ಧಿಯವನು ಮತ್ತು ಕರ್ತೃತ್ವಶಾಲಿ. ಇವನು ಪಿಟ್ಟನನ್ನು ತನ್ನ ಮಂತ್ರಿಮಂಡಳದಲ್ಲಿ ತೆಗೆದುಕೊಂಡನು. ಆಸ್ಟ್ರಿಯದ ಪಟ್ಟಕ್ಕೋಸುಗ ಯುದ್ಧವು; ಜಕೊಬಾಯಿಟ್ ಬಂಡು. ರಾಷ್ಟ್ರೀಯ ಸಾಲದ ಮೇಲಿನ ಬಡ್ಡಿಯ ದರವು ಕಡಿಮೆ ಮಾಡಲ್ಪಟ್ಟಿತು (೧೭೫೧). ಕೆಲೆಂಡರಿನಲ್ಲಿ ಸುಧಾರಣೆ.

ಡ್ಯೂಕ್ ಆಫ್ ನ್ಯೂ ಕೆಸಲ್ (೧೭೫೪-೫೬)—ಇವನು ಹೆನ್ರಿ ಪೆಲ್‌ಹಮನ ಬಂಧು. ಯೋಗ್ಯತೆಯಿಲ್ಲದವನು. ಪಿಟ್ಟನಿಗೂ ಇವನಿಗೂ ಮತಭೇದವು. ಸಪ್ತವಾರ್ಷಿಕ ಯುದ್ಧದ ಪ್ರಾರಂಭವು.

ಡ್ಯೂಕ್ ಆಫ್ ನ್ಯೂ ಕೆಸಲ್ ಮತ್ತು ಪಿಟ್. (೧೭೫೭-೬೧)—ಸಪ್ತವಾರ್ಷಿಕ ಯುದ್ಧದಲ್ಲಿ ಇಂಗ್ಲಂಡಿಗೆ ಸೋಲು ಬರಲಾರಂಭಿಸಿತು, ಆದುದರಿಂದ ಯುದ್ಧದ ವ್ಯವಸ್ಥೆ ಪಿಟ್ಟನ ಕಡೆಗೆ. ಪಿಟ್ಟನು ಲೋಕಪ್ರಿಯನು, ಆದುದರಿಂದ ಅವನು ಲೋಕನಾಯಕನು (The Great Commoner). ಪಿಟ್ಟನ ಜಾಣತನದ ವ್ಯವಸ್ಥೆಯಿಂದ ಯುದ್ಧದಲ್ಲಿ ಇಂಗ್ಲಂಡಿಗೆ ವಿಜಯವು.

ಸ್ಪೇನದೊಡನೆ ಯುದ್ಧವು (೧೭೩೯-೪೨)—ದಕ್ಷಿಣ ಅಮೇರಿಕೆಯಲ್ಲಿಯ ಸ್ಪೇನದ ವಸಾಹತುಗಳೊಡನೆ ವ್ಯಾಪಾರದ ವಿಷಯದಲ್ಲಿ ಇಂಗ್ಲಿಶ್ ವ್ಯಾಪಾರಸ್ಥರ ಮತ್ತು ಸ್ಪೆನಿಯರ್ಡರ ನಡುವೆ ಕಲಹವು ಮತ್ತು ಜೆಂಕಿನ್ಸನ ಪ್ರಕರಣವು. ಅದರಿಂದ ಯುದ್ಧವು. ವರ್ನಾನ್ ಮತ್ತು ವೆಂಟವರ್ಥ ಇವರಿಗೆ ಅಪಯಶ.

ಆಸ್ಟ್ರಿಯದ ಪಟ್ಟಕ್ಕೋಸುಗ ಯುದ್ಧವು (೧೭೪೦-೪೮)—ಮೇರಿಯಾ ಥೆರೆಸಾ ಇವಳಿಗೆ ಆಸ್ಟ್ರಿಯದ ಪಟ್ಟವು ದೊರೆಯಬಾರದೆಂದು ಪ್ರಶಿಯಾ, ಫ್ರಾನ್ಸ್, ಬವೇರಿಯಾ ಮೊದಲಾದ ರಾಷ್ಟ್ರಗಳ ಪ್ರಯತ್ನವು. ಪ್ರಶಿಯದ ರಾಜನಾದ ಫ್ರೆಡರಿಕ್ ದಿ ಗ್ರೇಟ ಇವನು ಸಿಲಿಸಿಯಾ ಪ್ರಾಂತವನ್ನು ವಶಮಾಡಿಕೊಂಡನು. ಇಂಗ್ಲಿಶರು ಆಸ್ಟ್ರಿಯದ ಪಕ್ಷಕ್ಕೆ. ೧೭೪೩ರಲ್ಲಿ ಡೆಟಿನ್‌ಜೆನದ ಯುದ್ಧದಲ್ಲಿ ಜಾರ್ಜ ರಾಜನು ಫ್ರೆಂಚರನ್ನು ಸೋಲಿಸಿದನು, ಆದರೆ ೧೭೪೫ರಲ್ಲಿ

ಫೊಂಟೆನ್ವಾ ಎಂಬಲ್ಲಿಯ ಯುದ್ಧದಲ್ಲಿ ಫ್ರೆಂಚರು ಇಂಗ್ಲಿಶರನ್ನು ಸೋಲಿಸಿದರು. ಎಕ್ಸ-ಲಾ-ಶಾಪೇಲಾ ಒಪ್ಪಂದದಿಂದ (೧೭೪೮) ಯುದ್ಧವು ನಿಂತಿತು. ಮೇರಿಯಾ ಥೆರೆಸಾ ಇವಳಿಗೆ ಆಸ್ಟ್ರಿಯದ ಪಟ್ಟವು. ಸಿಲಿಸಿಯಾ ಪ್ರಾಂತವು ಫ್ರೆಡರಿಕ್ ದಿ ಗ್ರೇಟನಿಗೆ.

ಜೆಕೊಬಾಯಿಟ ಬಂಡು (೧೭೪೫-೪೬)—ಚಾರ್ಲ್ಸ ಎಡವರ್ಡನು (೨ನೆಯ ಜೇಮ್ಸನ ಮೊಮ್ಮಗನು) ಸ್ಕಾಟಲಂಡಿನಲ್ಲಿ ಬಂಡನ್ನು ಹೂಡಿ ಎಡಿಂಬರೊ ಪಟ್ಟಣವನ್ನು ತೆಗೆದುಕೊಂಡನು ಮತ್ತು ಪ್ರೆಸ್ಟನ್ ಪೆನ್ ಎಂಬಲ್ಲಿ ಸರ್ ಜಾನ್ ಕೋಪನನ್ನು ಸೋಲಿಸಿದನು. ತರುವಾಯದಲ್ಲಿ ಇಂಗ್ಲಂಡಿನ ಮೇಲೆ ದಾಳಿಯನ್ನು ತಂದನು, ಆದರೆ ಡರ್ಬಿಯ ವರೆಗೆ ಬಂದ ಬಳಿಕ ಅವನು ತಿರುಗಿದನು; ಮಾರ್ಗದಲ್ಲಿ ಅವನಿಗೆ ಫಾಲ್‌ಕರ್ಕ ಎಂಬಲ್ಲಿ ಜಯವು ದೊರೆತಿತು, ಆದರೆ ಸ್ಕಾಟಲಂಡಿನ ಉತ್ತರ ಭಾಗದಲ್ಲಿ ಕಲೋಡನ್ ಮೂರ ಎಂಬಲ್ಲಿ ಡ್ಯೂಕ್ ಆಫ್ ಕಂಬರಲಂಡನು (ಜಾರ್ಜನ ಚಿಕ್ಕ ಮಗನು) ಅವನನ್ನು ಸೋಲಿಸಿದನು (೧೭೪೬).

ಸಪ್ತವಾರ್ಷಿಕ ಯುದ್ಧವು (೧೭೫೬-೧೭೬೩)—

ಕಾರಣಗಳು—(೧) ಫ್ರಾನ್ಸ್ ಮತ್ತು ಇಂಗ್ಲಂಡ್ ಇವುಗಳ ನಡುವೆ ಅಮೇರಿಕಾ ಹಿಂದುಸ್ಥಾನಗಳಲ್ಲಿಯ ವಸಾಹತುಗಳು, ವ್ಯಾಪಾರವು ಮತ್ತು ವಶದಲ್ಲಿಯ ಪ್ರದೇಶಗಳು ಈ ವಿಷಯದಲ್ಲಿ ಸ್ಪರ್ಧೆ. (೨) ಜರ್ಮನಿಯಲ್ಲಿಯ ವರ್ಚಸ್ಸಿನ ವಿಷಯದಲ್ಲಿ ಆಸ್ಟ್ರಿಯಾ ಮತ್ತು ಪ್ರಶಿಯಾ ಇವುಗಳ ನಡುವೆ ಸ್ಪರ್ಧೆ. (೩) ಪ್ರಶಿಯದ ರಾಜನಾದ ಫ್ರೆಡರಿಕ್ ದಿ ಗ್ರೇಟ ಇವನ ಬೆಳೆಯುತ್ತಿರುವ ಸತ್ತೆಯಿಂದ ಇತರ ಯುರೋಪಿಯನ್ ರಾಷ್ಟ್ರಗಳಿಗೆ ಹೆದರಿಕೆ.

ಮಿತ್ರರಾಷ್ಟ್ರಗಳು ಮತ್ತು ಶತ್ರುರಾಷ್ಟ್ರಗಳು—ಇಂಗ್ಲಂಡ್ ಮತ್ತು ಪ್ರಶಿಯ. ಇವುಗಳ ವಿರುದ್ಧವಾಗಿ ಫ್ರಾನ್ಸ್, ಆಸ್ಟ್ರಿಯಾ, ರಶಿಯಾ, ಸ್ಪೇನ ಮೊದಲಾದ ರಾಷ್ಟ್ರಗಳು.

ಯುದ್ಧವು ಪ್ರಾರಂಭದಲ್ಲಿ ಅಮೇರಿಕೆಯಲ್ಲಿ ಇಂಗ್ಲಿಶರಿಗೆ ಪರಾಭವವು. ಯುರೋಪದಲ್ಲಿಯ ಮಿನೋರ್ಕಾ ನಡುಗಡ್ಡೆಯನ್ನು ಫ್ರೆಂಚರು ತೆಗೆದು ಕೊಂಡರು (೧೭೫೬). ಶತ್ರುರಾಷ್ಟ್ರಗಳು ಪ್ರಶಿಯವನ್ನು ಸೋಲಿಸುವರು (೧೭೫೬), ಮತ್ತು ೧೭೫೭ರಲ್ಲಿ ಕ್ಲೋಸ್ಟರ ಸೆವನ್ ಎಂಬಲ್ಲಿ ಇಂಗ್ಲಿಶರ ಪರಾಭವವು ಮತ್ತು ಹನೋವರವು ಫ್ರೆಂಚರ ವಶದಲ್ಲಿ ಹೋಗುವುದು.

೧೭೫೭ರಲ್ಲಿ ಪಿಟ್ಟನು ಯುದ್ಧಮಂತ್ರಿಯಾದ ಬಳಿಕ ಇಂಗ್ಲಿಶರು ಅಮೇರಿಕೆಯಲ್ಲಿಯ ಫ್ರೆಂಚರ ಡೂಕೇನ್ ಮತ್ತು ಲುಯಿಸ್‌ಬರ್ಗ ಕೋಟೆಗಳನ್ನು ತೆಗೆದು ಕೊಂಡರು (೧೭೫೮). ವುಲ್ಫನು ಕ್ವಿಬೆಕನ್ನು ತೆಗೆದುಕೊಂಡನು (೧೭೫೯). ಆ ಬಳಿಕ ೧೭೬೦ರಲ್ಲಿ ಮಾಂಟ್ರೇಲ್ ಕೋಟೆಯನ್ನು ಇಂಗ್ಲಿಶರು ವಶಮಾಡಿ

ಕೊಂಡ ಬಳಿಕ ಇಡಿಯ ಕೆನಡಾ ಪ್ರಾಂತವು ಇಂಗ್ಲಿಶರ ವಶದಲ್ಲಿ ಬಂದಿತು; ಆ ತರುವಾಯದಲ್ಲಿ ಫ್ರಾನ್ಸ್ ಮತ್ತು ಸ್ಪೇನ ಇವುಗಳ ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿಯ ಕೆಲವು ನಡುಗಡ್ಡೆಗಳನ್ನು ಇಂಗ್ಲಿಶರು ತೆಗೆದು ಕೊಂಡರು (೧೭೫೮—೧೭೬೨).

ಹಿಂದುಸ್ಥಾನದಲ್ಲಿ ಕ್ಲೈವನು ಪ್ಲಾಸಿಯ ಯುದ್ಧದಲ್ಲಿ (೧೭೫೭) ಬಂಗಾಲ ಪ್ರಾಂತವನ್ನು ತನ್ನ ವರ್ಚಸ್ಸಿನ ಕೆಳಗೆ ತಂದನು, ಮತ್ತು ಸರ್ ಆಯರ್ ಕೂಟನು ವಾಂಡಿವಾಶದ ಯುದ್ಧದಿಂದ (೧೭೬೦) ಪೂರ್ವ ದಂಡೆಯ ಮೇಲೆ ಇಂಗ್ಲಿಶರ ವರ್ಚಸ್ಸನ್ನು ಸ್ಥಾಪಿಸಿದನು.

ಯುರೋಪದಲ್ಲಿ ಲಗೊಸ ಎಂಬಲ್ಲಿ ಹಾಕ್ ಇವನು ಕ್ವಿಬೆರಾನಿನ ಆಖಾತದಲ್ಲಿ ಫ್ರೆಂಚರ ಹಡಗುಪಡೆಯನ್ನು ಸೋಲಿಸಿದನು (೧೭೫೯); ಮಿನ್‌ಡೇನ ಎಂಬಲ್ಲಿ (೧೭೫೯) ಬ್ರನ್ಸವಿಕನ ನೇತೃತ್ವದಲ್ಲಿ ಇಂಗ್ಲಿಶ್ ಮತ್ತು ಪ್ರಶಿಯನ್ ಸೈನ್ಯಗಳು ಫ್ರಾನ್ಸನ್ನು ಸೋಲಿಸಿ ಹನೋವರ ಪ್ರಾಂತವನ್ನು ಸಂಪಾದಿಸಿದುವು.

ಪೆರಿಸಿನ ಒಪ್ಪಂದವು (೧೭೬೩)—ಇಂಗ್ಲಂಡಿಗೆ ಕೆನಡಾ, ಕೇಪ್ ಬ್ರಿಟನ್ ನಡುಗಡ್ಡೆ, ಕೆಲವು ವೆಸ್ಟ ಇಂಡೀಜ ನಡುಗಡ್ಡೆಗಳು, ಫ್ಲಾರಿಡಾ ಇವು ದೊರೆತುವು. ಆದರೆ ಪಾಂಡಿಚೆರಿಯನ್ನು ಫ್ರಾನ್ಸಿಗೆ ಮತ್ತು ಕ್ಯೂಬಾ, ಹವಾನಾ ಈ ನಡುಗಡ್ಡೆಗಳನ್ನು ಸ್ಪೇನಕ್ಕೆ ತಿರುಗಿ ಕೊಡಬೇಕಾಯ್ತು.

———————

# ೨೦ನೆಯ ಪ್ರಕರಣವು

## ೩ನೆಯ ಜಾರ್ಜನು

ಜನ್ಮವು ೧೭೩೮; ರಾಜ್ಯಾರೋಹಣವು (೨೨ನೆಯ ವರ್ಷದಲ್ಲಿ) ೧೭೬೦;

ಮೃತ್ಯು ೧೮೨೦.

(೧೭೬೦—೧೮೨೦).

### ತಾತ್ಕಾಲೀನ ರಾಜ್ಯಕರ್ತರು

| ಫ್ರಾನ್ಸ | ಆಸ್ಟ್ರಿಯಾ | ರಶಿಯಾ | ಸ್ಪೇನ |
|---|---|---|---|
| ೧೫ನೆಯ ಲುಯಿ | ೧ನೆಯ ಫ್ರಾನ್ಸಿಸ್ | ಎಲಿಝಬೆಥ್ | ೧ನೆಯ |
| (೧೭೧೫—೭೪) | ಮೃ. ೧೭೬೫ | ಮೃ. ೧೭೬೨ | ಆಲೆಕ್ಝಾಂಡರ |
| ೧೬ನೆಯ ಲುಯಿ | ೨ನೆಯ ಜೋಸೆಫ್ | ೩ನೆಯ ಪೀಟರ | ೩ನೆಯ ಚಾರ್ಲಸ |
| ೧೭೭೪—೯೩ | ಮೃ. ೧೭೯೦ | ಮೃ. ೧೭೬೨ | ಮೃ. ೧೭೮೮ |
| ೧೭ನೆಯ ಲುಯಿ | ಲಿಓಪೋಲ್ಡ | ೨ನೆಯ ಕಥ | ೪ನೆಯ ಚಾರ್ಲಸ |
| (ಕಾರಾಗೃಹದಲ್ಲಿ) | ಮೃ. ೧೭೯೨ | ರಾಯಿನ್ | ೧೭೮೮—೧೮೦೮ |
| ಮೃತ್ಯು ೧೭೯೫ | | | |
| ೧೮ನೆಯ ಲುಯಿ ರಾಜ್ಯಾ | ೨ನೆಯ ಫ್ರಾನ್ಸಿಸ್ | ಪಾಲ್ | ಜೋಸೆಫ್ ಬೋನಾ |
| ರೋಹಣವು ೧೮೧೪ | | ಮೃತ್ಯು ೧೮೦೧ | ಪಾರ್ಟ |
| | | | ೧೮೦೮—೧೮೧೩ |

### ಮಹತ್ವದ ಇಸ್ವಿಗಳು.

೧೭೬೩ ಪ್ಯಾರಿಸಿನ ಒಪ್ಪಂದವು.

೧೭೬೫ ಸ್ಟ್ಯಾಂಪ ಆಕ್ಟ.

೧೭೬೩—೧೭೭೪ ವಿಲ್ಕ್ಸನ ಪ್ರಕರಣವು.

೧೭೭೫—೧೭೮೩ ಅಮೇರಿಕೆಯಲ್ಲಿಯ ಇಂಗ್ಲಿಶ್ ವಸಾಹತುಗಳೊಡನೆ ಯುದ್ಧವು.

೧೭೮೩ ವರ್ಸೆಲ್ಸಿನ ಒಪ್ಪಂದವು.

೧೭೮೪ ಪಿಟ್ಟನ ಇಂಡಿಯಾ ಬಿಲ್.

೧೭೮೯ ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿ.

೧೭೯೨ ಫ್ರಾನ್ಸಿನಲ್ಲಿ ಲೋಕಸತ್ತಾತ್ಮಕ ರಾಜ್ಯವು.

೧೭೯೩—೧೮೦೨ } ಫ್ರಾನ್ಸಿನೊಡನೆ ಯುದ್ಧವು.
೧೮೦೩—೧೮೧೫ }

೧೮೦೦ ಐರಿಶ್ ಮತ್ತು ಇಂಗ್ಲಿಶ್ ಪಾರ್ಲಿಮೆಂಟುಗಳ ಏಕೀಕರಣ.
೧೮೦೫ ಟ್ರೆಫಲ್ಗಾರ ಮತ್ತು ಆಸ್ಟ್ರೆಲಿಟ್ಝು ಎಂಬಲ್ಲಿ ಯುದ್ಧಗಳು.
೧೮೦೬ ಬರ್ಲಿನ್ ಡಿಕ್ರಿ ಮತ್ತು ಆರ್ಡರ್ಸ್ ಇನ್ ಕೌನ್ಸಿಲ್.
೧೮೦೭ ಗುಲಾಮರ ವ್ಯಾಪಾರಕ್ಕೆ ತಡೆ.
೧೮೦೮–೧೪ ಪೆನಿನ್ಸ್ಯುಲರ ಯುದ್ಧವು.
೧೮೧೫ ವಾಟರಲೂ ಯುದ್ಧವು; ನೆಪೋಲಿಯನನ ಪರಾಭವವು.

**೩ನೆಯ ಜಾರ್ಜನು**—೨ನೆಯ ಜಾರ್ಜನ ಹಿರಿಯ ಮಗನಾದ ಫ್ರೆಡರಿಕನು ೧೭೫೧ರಲ್ಲಿ ಮಡಿದುದರಿಂದ ಫ್ರೆಡರಿಕನ ಮಗನಾದ ಜಾರ್ಜನು ೩ನೆಯ ಜಾರ್ಜನೆಂದು ಇಂಗ್ಲಂಡಿನ ಪಟ್ಟಕ್ಕೆ ಬಂದನು. ಆಗ ಅವನ ವಯಸ್ಸು ೨೨ ಇದ್ದಿತು. ಅವನ ಬಾಲ್ಯ ಶಿಕ್ಷಣವೆಲ್ಲವು ಅವನ ತಾಯಿಯಾದ ಆಗಸ್ಟಾ ಇವಳ ನೇತೃತ್ವದಲ್ಲಿ ಆಯ್ತು. ಆಗಸ್ಟಾ ಇವಳು ಮಹತ್ವಾಕಾಂಕ್ಷಿಣಿಯೂ ಕರ್ತೃತ್ವಶಾಲಿನಿಯೂ ಆಗಿದ್ದಳು. ಜಾರ್ಜನು ರಾಜ್ಯಕಾರಭಾರವನ್ನು ಮಂತ್ರಿಮಂಡಳಕ್ಕೊಪ್ಪಿಸದೆ ಅವನೇ ಅದನ್ನು ಸಾಗಿಸಬೇಕೆಂದು ಅವಳ ಮನೀಷೆ. "ಜಾರ್ಜನೆ, ನೀನು ನಿಜವಾದ ರಾಜನಾಗು" ಎಂದು ಜಾರ್ಜನಿಗೆ ಅವಳ ಉಪದೇಶವಿದ್ದಿತು. ಜಾರ್ಜನೂ ಆ ಉಪದೇಶದಂತೆ ನಡೆಯಲು ನಿಶ್ಚಯಿಸಿದನು. ೧ನೆಯ ಮತ್ತು ೨ನೆಯ ಜಾರ್ಜರಿಗೆ ಇಂಗ್ಲಂಡಿಗಿಂತ ಹನೋವರವು ತಮ್ಮದೆಂದು ಎನಿಸುತ್ತಿತ್ತು. ಇಂಗ್ಲಂಡಿನ ಜನತೆಗಾದರೂ ಅವರು ಪರಕೀಯರೆಂಬ ಭಾವನೆಯೆ ಇದ್ದಿತು. ಅದರೆ ೩ನೆಯ ಜಾರ್ಜನು ಇಂಗ್ಲಂಡಿನಲ್ಲಿಯೆ ಹುಟ್ಟಿದ್ದನು, ಆದುದರಿಂದ ಅವನ ವಿಷಯದಲ್ಲಿ ಅವರಿಗೆ ಅಭಿಮಾನವಿದ್ದಿತು. ಅವನಿಗೆ ಇಂಗ್ಲಿಶ್ ಭಾಷೆ ಚೆನ್ನಾಗಿ ಬರುತ್ತಿತ್ತು. ಆದುದರಿಂದ ಎಲ್ಲರಿಗೂ ಅವನ ವಿಷಯದಲ್ಲಿ ಪ್ರೇಮವೂ ಮಮತೆಯೂ ಎನಿಸುತ್ತಿತ್ತು. ಜಾರ್ಜನಲ್ಲಿ ಇರಬೇಕಾದಷ್ಟು ಮನೋಬಲವೂ ಬುದ್ಧಿಬಲವೂ ಇರಲಿಲ್ಲ; ಕೆಲಮಟ್ಟಿಗೆ ಅವನು ಹಟಮಾರಿಯೂ ಆಗಿದ್ದನು; ಜನರಿಗೆ ಅಪ್ರಿಯವಾದ ಕೆಲವು ಕೃತಿಗಳೂ ಅವನಿಂದಾದುವು. ಹೀಗಿದ್ದರೂ ಅವನು ತನ್ನ ನಿಷ್ಕಲಂಕ ಶೀಲದಿಂದಲೂ ಸಾದಾ (Simple) ವೃತ್ತಿಯಿಂದಲೂ ಜನರಿಗೆ ಬೇಕಾದವನಾಗಿದ್ದನು.


೩ನೆಯ ಜಾರ್ಜನು

**ಜಾರ್ಜನ ನೀತಿ**— ಎಲ್ಲ ಸತ್ತೆ ತನ್ನ ಕೈಯಲ್ಲಿರಬೇಕೆಂದೂ ಮಂತ್ರಿಗಳು ತನ್ನ ತಂತ್ರಕ್ಕೆ ಅಧೀನರಾಗಿ ರಾಜ್ಯಕಾರಭಾರವನ್ನು ಸಾಗಿಸಬೇಕೆಂದೂ ಜಾರ್ಜನ ಮನೀಷೆಯಾಗಿತ್ತು. ಆದರೆ ಅದಕ್ಕೆ ಕೆಲವು ಆತಂಕಗಳಿದ್ದುವು. ಪಾರ್ಲಿಮೆಂಟಿನಲ್ಲಿ ಕಳೆದ ೪೫ ವರ್ಷಗಳಿಂದ ವ್ಹಿಗ್ ಪಕ್ಷದವರ ಬಹುಮತವಿದ್ದಿತು ಮತ್ತು ಅದರಿಂದ ರಾಜ್ಯಕಾರಭಾರದ ಸೂತ್ರಗಳೆಲ್ಲವೂ ಈ ಪಕ್ಷದ ಮಂತ್ರಿಗಳ ಕೈಯಲ್ಲಿದ್ದುವು. ಆದುದರಿಂದ ವ್ಹಿಗ್ ಪಕ್ಷದ ಮಂತ್ರಿಗಳನ್ನು ದೂರಗೊಳಿಸಿ ಟೋರಿ ಪಕ್ಷದ ಪ್ರಮುಖ ಜನರನ್ನು ತನ್ನವರಾಗಿ ಮಾಡಿಕೊಂಡ ಹೊರ್ತು ತನ್ನ ಮನೀಷೆ ಪೂರ್ಣವಾಗದೆಂದು ಅವನು ತಿಳಿದಿದ್ದನು. ಇಂಗ್ಲಂಡಿನಲ್ಲಿ ಹನೋವರ ವಂಶವು ಸ್ಥಾಪಿತವಾದಂದಿನಿಂದ ಟೋರಿ ಪಕ್ಷವು ಹಿಂದೆ ಉಳಿದಿದ್ದಿತು. ಈ ಪಕ್ಷದವರ ಒಲವು ಸ್ಟುವರ್ಟರ ಕಡೆಗೆ ಇದ್ದಿತು, ಮತ್ತು ಅವರಲ್ಲಿ ಕೆಲವರು (ಜಕೊಬೈಟ್ಸ) ಸ್ಟುವರ್ಟ ವಂಶದವರಿಗೆ ಇಂಗ್ಲಂಡಿನ ಪಟ್ಟವನ್ನು ದೊರಕಿಸಿಕೊಡಲು ಪ್ರಯತ್ನವನ್ನೂ ಮಾಡಿದ್ದರು, ಆದರೂ ಈ ಪಕ್ಷದ ಬಹುಜನ ಸಮಾಜವು ಈ ವಿಷಯದಲ್ಲಿ ಉದಾಸೀನತೆಯನ್ನೇ ತಳೆದಿದ್ದಿತು. ರಾಜಪದದ ವಿಷಯದಲ್ಲಿ ಟೋರಿ ಪಕ್ಷದವರಿಗೆ ಆದರವೆನಿಸುತ್ತಿತ್ತು. ಆದುದರಿಂದ ಅದರ ಉಪಯೋಗವನ್ನು ಮಾಡಿಕೊಳ್ಳಬೇಕೆಂದು ಆ ಪಕ್ಷದವರಲ್ಲಿ ತನ್ನ ಮನಸ್ಸಿನಂತೆ ನಡೆವ ಪ್ರಮುಖ ಜನರನ್ನು ಜಾರ್ಜನು ಮಂತ್ರಿಗಳಾಗಿ ನಿಯೋಜಿಸಬೇಕೆಂದು ನಿಶ್ಚಯಿಸಿದನು. ಪಾರ್ಲಿಮೆಂಟಿನಲ್ಲಿ ವ್ಹಿಗ್ ಪಕ್ಷದ ಬಹುಮತವಿದ್ದಿತು. ಆದರೆ ಈ ಪಕ್ಷದಲ್ಲಿ ಒಡಕು ಹುಟ್ಟಿ ಅನೇಕ ಉಪಪಕ್ಷಗಳಾಗಿದ್ದುವು ಮತ್ತು ಕೆಲವರು ಜಾರ್ಜನು ಹೇಳಿದಂತೆ ನಡಿಯಲು ಸಿದ್ಧರಾಗಿದ್ದರು. ಪಾರ್ಲಿಮೆಂಟಿನಲ್ಲಿ ರಾಜನಿಗೆ ಬೆಂಬಲವೀವ ಟೋರಿ ಮತ್ತು ವ್ಹಿಗ್ ಪಕ್ಷಗಳ ಜನರದೊಂದು ಪಕ್ಷವು ಮೆಲ್ಲಮೆಲ್ಲನೆ ಹುಟ್ಟಿತು. ಆ ಪಕ್ಷದವರಿಗೆ "ರಾಜನಮಿತ್ರರು" (The King's friends) ಎಂದು ಹೆಸರುಂಟಾಯ್ತು.

**ಜಾರ್ಜನು ಮತ್ತು ಅವನ ಮಂತ್ರಿಗಳು**—ಜಾರ್ಜನು ಪಟ್ಟಕ್ಕೆ ಬಂದಾಗ ವ್ಹಿಗ್ ಪಕ್ಷದ ಪಿಟ್ಟನು ಮುಖ್ಯ ಮಂತ್ರಿಯಾಗಿದ್ದನು. ಅವನು ರಾಜನ ಮನಸ್ಸಿನಂತೆ ನಡೆವ ಮನುಷ್ಯನಾಗಿರಲಿಲ್ಲ. ಅವನನ್ನು ಮಂತ್ರಿಪದದಿಂದ ದೂರಗೊಳಿಸಿದ ಹೊರತು ತನ್ನ ಕೈಯಲ್ಲಿ ಸತ್ತೆ ಬಾರದೆಂದು ಜಾರ್ಜನಿಗೆ ಎನಿಸಿದುದರಿಂದ ಅದನ್ನು ಹೇಗೆ ಮಾಡಬೇಕೆಂಬ ವಿವೇಚನೆಯಲ್ಲಿ ತೊಡಗಿದನು. ಆ ಕಾಲದಲ್ಲಿ ಸಪ್ತವಾರ್ಷಿಕ ಯುದ್ಧವು ನಡೆದಿದ್ದಿತು, ಮತ್ತು ಸ್ಪೇನವು ಫ್ರಾನ್ಸಿನೊಡನೆ ಒಪ್ಪಂದವನ್ನು ಮಾಡಿಕೊಂಡಿದೆಯೆಂದು ಪಿಟ್ಟನಿಗೆ ತಿಳಿಯಲು ಅವನು ಸ್ಪೇನದ ವಿರುದ್ಧವಾಗಿ ಯುದ್ಧವನ್ನು ಸಾರಬೇಕೆಂದು ಜಾರ್ಜನಿಗೆ ಸೂಚಿಸಿದನು. ಆದರೆ ಜಾರ್ಜನು

ಅವನ ಸೂಚನೆಗೆ ಕಿವಿಗೊಡಲಿಲ್ಲ. ಆದುದರಿಂದ ಪಿಟ್ಟನು ಅಧಿಕಾರತ್ಯಾಗವನ್ನು ಮಾಡಿದನು (೧೭೬೧). ಆ ಬಳಿಕ ಜಾರ್ಜನು ತನ್ನ ವಿಶ್ವಾಸದಲ್ಲಿಯ **ಲಾರ್ಡ ಬ್ಯೂಟ** ಎಂಬ ಟೋರಿ ಸರದಾರನನ್ನು ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು. ಇತ್ತ ಸ್ಪೇನವು ಫ್ರಾನ್ಸಿನೊಡನೆ ಒಪ್ಪಂದವನ್ನು ಮಾಡಿಕೊಂಡು ಇಂಗ್ಲಂಡಿನೊಡನೆ ಪ್ರತ್ಯಕ್ಷವಾಗಿ ಯುದ್ಧವನ್ನು ಪ್ರಾರಂಭಿಸಿದುದರಿಂದ ಬ್ಯೂಟನು ಸ್ಪೇನದ ವಿರುದ್ಧವಾಗಿ ಯುದ್ಧವನ್ನು ಸಾರಬೇಕಾಯಿತು. ಕೊನೆಗೆ ಬ್ಯೂಟನ ಮಂತ್ರಿಮಂಡಳವು ಸಪ್ತವಾರ್ಷಿಕ ಯುದ್ಧವನ್ನು ನಿಲ್ಲಿಸಿ **ಪರಿಸಿನಲ್ಲಿ** ಒಪ್ಪಂದವನ್ನು ಮಾಡಿಕೊಂಡಿತು (೧೭೬೩). ಆದರೆ ಈ ಒಪ್ಪಂದದಿಂದ ಇಂಗ್ಲಂಡಿಗೆ ಲಾಭವನ್ನು ಮಾಡಿಕೊಳ್ಳುವುದು ಬ್ಯೂಟನಿಂದ ಆಗಲಿಲ್ಲವೆಂದು ವ್ಹಿಗ್ ಪಕ್ಷದ ಜನರು ಅವನ ವಿರುದ್ಧವಾಗಿ ಕೂಗಲಾರಂಭಿಸಿದರು. ಪಾರ್ಲಿಮೆಂಟಿನಲ್ಲಿಯ ಬಹುಮತವು ಬ್ಯೂಟನ ವಿರುದ್ಧವಿದ್ದಿತು. ಆದುದರಿಂದ ಅವನು ಅಧಿಕಾರತ್ಯಾಗವನ್ನು ಮಾಡಬೇಕಾಯಿತು (೧೭೭೩).

ಈ ವೇಳೆಯಲ್ಲಿ ಪಾರ್ಲಿಮೆಂಟಿನಲ್ಲಿ ವ್ಹಿಗ್ ಪಕ್ಷದವರ ಬಹುಮತವಿದ್ದರೂ ಅವರಲ್ಲಿ ಒಕ್ಕಟ್ಟು ಇರಲಿಲ್ಲ. ಅನೇಕ ಉಪಪಕ್ಷಗಳು ಅವರಲ್ಲಿ ಉಂಟಾಗಿದ್ದುವು. ಜಾರ್ಜನು ಈ ವ್ಹಿಗ್ ಪಕ್ಷಕ್ಕೆ ಸೇರಿದ ಗ್ರೆನ್‌ವಿಲ್ (೧೭೬೩-೬೫), ರಾಕಿಂಗಹಮ್ (೧೭೬೬), ವಿಲಿಯಮ್ ಪಿಟ್ (ಇವನು ಚಥಮದ ಅರ್ಲನಾಗಿ ಮಾಡಲ್ಪಟ್ಟನು. ೧೭೬೬-೬೮) ಮತ್ತು ಗ್ರೆಫ್ಟನ್ ಈ ಜನರನ್ನು ಒಬ್ಬರ ತರುವಾಯದಲ್ಲಿ ಒಬ್ಬರಂತೆ ತನ್ನ ಮುಖ್ಯ ಮಂತ್ರಿಗಳಾಗಿ ಮಾಡಿದನು. ವಿಲಿಯಮ್ ಪಿಟ್ಟನು ಈಗ ವೃದ್ಧನಾಗಿದ್ದನು ಮತ್ತು ಅವನ ದೇಹಪ್ರಕೃತಿ ಸರಿಯಾಗಿರಲಿಲ್ಲ. ಆದುದರಿಂದ ಅವನಿಗೆ ರಾಜ್ಯಕಾರಭಾರದಲ್ಲಿ ಬಹಳವಾಗಿ ಭಾಗವನ್ನು ವಹಿಸುವುದು ಶಕ್ಯವಾಗಿರಲಿಲ್ಲ. ಅವನು ಅರ್ಲನಾಗಿ ಲಾರ್ಡ ಸಭೆಯ ಸದಸ್ಯನಾದುದರಿಂದ ಕಾಮನ್ಸ ಸಭೆಯಲ್ಲಿ ಅವನ ವರ್ಚಸ್ಸು ಕಡಿಮೆಯಾಗಿದ್ದಿತು. ಈ ಏಳು ವರ್ಷಗಳಲ್ಲಿ (೧೭೬೩-೧೭೭೦) ವ್ಹಿಗ್ ಪಕ್ಷದ ಪ್ರಮುಖರು ಮಂತ್ರಿಗಳಿರುವಾಗ ವಿಲ್ಕ್ಸನ ಪ್ರಕರಣವು ಉದ್ಭವಿಸಿದ್ದಿತು, ಮತ್ತು ಅಮೇರಿಕೆಯಲ್ಲಿಯ ವಸಾಹತುಗಳಿಗೂ ಇಂಗ್ಲಂಡಿಗೂ ಕಲಹವು ಹುಟ್ಟಿತು. ಈ ಕಾರಣದಿಂದ ವ್ಹಿಗ್ ಪಕ್ಷದ ಲೋಕಪ್ರಿಯತೆ ಕಡಿಮೆಯಾಯಿತು. ಕೊನೆಗೆ ೧೭೭೦ರಲ್ಲಿ ಜಾರ್ಜನು ಟೋರಿ ಪಕ್ಷದ ಲಾರ್ಡ ನಾರ್ಥನನ್ನು ತನ್ನ ಮುಖ್ಯ ಮಂತ್ರಿಯಾಗಿ ಮಾಡಿಕೊಂಡನು. ಲಾರ್ಡ ನಾರ್ಥನು ಮುಂದೆ ೧೨ ವರ್ಷಗಳವರೆಗೆ (೧೭೭೦-೧೭೮೨) ಮುಖ್ಯ ಮಂತ್ರಿಯಾಗಿದ್ದನು. ಅವನು ರಾಜನ

ಮನಸ್ಸಿನಂತೆ ನಡೆಯುತ್ತಿದ್ದನಾದುದರಿಂದ ಎಲ್ಲ ರಾಜ್ಯಕಾರಭಾರವು ರಾಜನ ವಿಚಾರದಂತೆಯೆ ನಡೆಯುತ್ತಿದ್ದಿತು. ನಾರ್ಥನು ಮುಖ್ಯ ಮಂತ್ರಿಯಾಗಿರುವಾಗ ಇಂಗ್ಲಂಡಿಗೆ ಮತ್ತು ಅಮೇರಿಕೆಯಲ್ಲಿಯ ವಸಾಹತುಗಳಿಗೆ ಯುದ್ಧವು ಪ್ರಾರಂಭವಾಯ್ತು ಮತ್ತು ಅದರಲ್ಲಿ ಇಂಗ್ಲಂಡಿಗೆ ಅಪಯಶವು ಬಂದಿತು. ಆದುದರಿಂದ ನಾರ್ಥನ ವಿರುದ್ಧವಾಗಿ ಕೂಗು ಎದ್ದಿತು. ಆದುದರಿಂದ ಜಾರ್ಜನು ಅವನನ್ನು ಮಂತ್ರಿಪದದಿಂದ ದೂರಗೊಳಿಸಿದನು ಮತ್ತು ವಿಲಿಯಮ್ ಪಿಟ್ಟನು (ಅರ್ಲ ಆಫ್ ಚೆಥಮ್) ೧೭೭೮ರಲ್ಲಿ ಮರಣಹೊಂದಿದುದರಿಂದ **ರಾಕಿಂಗಹಮ್** ಎಂಬ ವ್ಹಿಗ್ ಪಕ್ಷದವನನ್ನು ಮುಖ್ಯ ಮಂತ್ರಿಯಾಗಿ ನಿಯೋಜಿಸಿ ಆತನ ಮಂತ್ರಿಮಂಡಳದಲ್ಲಿ ವ್ಹಿಗ್ ಪಕ್ಷದ **ಫಾಕ್ಸ** ಮತ್ತು ಟೋರಿ ಪಕ್ಷದ **ನಾರ್ಥ** ಇವರನ್ನು ಮಂತ್ರಿಗಳಾಗಿ ನಿಯೋಜಿಸಿದನು. ಆದರೆ ಅವರಲ್ಲಿ ಮತಭೇದವಾಗ ತೊಡಗಿತು. ಆದುದರಿಂದ ಜಾರ್ಜನು ಆ ಮಂತ್ರಿಮಂಡಳವನ್ನು ಮುರಿದು ವಿಲಿಯಮ್ ಪಿಟ್ಟನ (ಹಿರಿಯನು) ಮಗನಾದ **ವಿಲಿಯಮ್ ಪಿಟ್ಟನನ್ನು** (ಕಿರಿಯನು) ತನ್ನ ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು. ಇವನು **ಟೋರಿ ಪಕ್ಷದವನಿದ್ದನು.** ಆಗ ಅವನಿಗೆ ೨೪ ವರ್ಷಗಳು. ಅವನು ತನ್ನ ತಂದೆಯಂತೆ ಕುಶಾಗ್ರಬುದ್ಧಿಯವನೂ ಕರ್ತೃತ್ವಶಾಲಿಯೂ ಆಗಿದ್ದನು. ಪಾರ್ಲಿಮೆಂಟಿನಲ್ಲಿ ಅವನ ವರ್ಚಸ್ಸಿದ್ದಿತು ಮತ್ತು ರಾಜನಿಗೆ ಅವನಲ್ಲಿ ವಿಶ್ವಾಸವೂ ಇದ್ದಿತು. ಆದುದರಿಂದ ಬಹುಕಾಲದವರೆಗೆ ಮುಖ್ಯ ಮಂತ್ರಿಯಾಗಿ ರಾಜ್ಯಕಾರಭಾರವನ್ನು ಸಾಗಿಸಲು ಅವನಿಗೆ ಶಕ್ಯವಾಯಿತು.

**ವಿಲ್ಕಸ ಪ್ರಕರಣವು** (೧೭೬೩-೧೭೭೪)—ಬ್ಯೂಟನು ಮುಖ್ಯ ಮಂತ್ರಿಯಾಗಿರುವಾಗ ಅವನು ಪರಿಸಿನಲ್ಲಿ ಒಪ್ಪಂದವನ್ನು ಮಾಡಿ ಸಪ್ತವಾರ್ಷಿಕ ಯುದ್ಧವನ್ನು ನಿಲ್ಲಿಸಿದನು. ಈ ಯುದ್ಧದಿಂದ ಇಂಗ್ಲಂಡಿಗೆ ಹಣದ ಹಾನಿ ಬಹಳವಾಗಿದ್ದಿತು. ಈ ಯುದ್ಧದಲ್ಲಿ ಶತ್ರುರಾಷ್ಟ್ರಗಳು ಸಂಪೂರ್ಣವಾಗಿ ಸೋತಿದ್ದುವು. ಆದರೆ ಬ್ಯೂಟನು ಪರಿಸಿನ ಒಪ್ಪಂದದಿಂದ ಇಂಗ್ಲಂಡಿಗೆ ಲಾಭವನ್ನು ಮಾಡಿಕೊಳ್ಳಲಿಲ್ಲವೆಂದು ವ್ಹಿಗ್ ಪಕ್ಷದ ಜನರು ಅವನ ವಿರುದ್ಧವಾಗಿ ಕೂಗೆಬ್ಬಿಸಿದ್ದರು; ಆದರೆ ಜಾರ್ಜನು ಪಾರ್ಲಿಮೆಂಟಿನ ಅಧಿವೇಶನವು ಪ್ರಾರಂಭವಾಗುವ ಸಮಯದಲ್ಲಿ ಮಾಡಿದ ಭಾಷಣದಲ್ಲಿ "ಈ ಒಪ್ಪಂದದಿಂದ ಇಂಗ್ಲಂಡಿಗೆ ಲಾಭವಾಗಿದೆ" ಎಂದು ವಿಧಾನವನ್ನು ಮಾಡಿದನು. ಇದರ ವಿರುದ್ಧವಾಗಿ ಈ ಒಪ್ಪಂದದಿಂದ ಇಂಗ್ಲಂಡಿಗೆ ಲಾಭವಾಗಲಿಲ್ಲವೆಂದು ವ್ಹಿಗ್ ಪಕ್ಷದವರಲ್ಲಿ ಅನೇಕರ ಮತವಿದ್ದಿತು. **ಜಾರ್ಜ ವಿಲ್ಕಸ** ಎಂಬ ವ್ಹಿಗ್ ಪಕ್ಷದವನೊಬ್ಬನು ಪಾರ್ಲಿಮೆಂಟಿನ ಸದಸ್ಯನಾಗಿದ್ದನು. ಅವನು **ನಾರ್ಥ ಬ್ರಿಟನ್** ಎಂಬ ವೃತ್ತಪತ್ರದ ಸಂಪಾದ

ಕನೂ ಆಗಿದ್ದನು. ಅವನು ತನ್ನ ವೃತ್ತಪತ್ರದ ೪೫ನೆಯ ಸಂಚಿಕೆಯಲ್ಲಿ ಈ ಒಪ್ಪಂದದ ವಿಷಯದಲ್ಲಿ ರಾಜನು ಮಾಡಿದ ಭಾಷಣವನ್ನು ಉಗ್ರವಾಗಿ ಟೀಕಿಸಿದನು. ಆ ಸಮಯದಲ್ಲಿ ಬ್ಯೂಟನು ಅಧಿಕಾರತ್ಯಾಗಮಾಡಿದ್ದುದರಿಂದ ಗ್ರೆನ್‌ವಿಲನು ಮುಖ್ಯ ಮಂತ್ರಿಯಾಗಿದ್ದನು. ಅವನು ರಾಜನ ಮಾತನ್ನು ಕೇಳಿ ನಾರ್ಥ ಬ್ರಿಟನ್ ವೃತ್ತಪತ್ರದ ಸಂಪಾದಕನನ್ನು, ಮುದ್ರಕನನ್ನು ಮತ್ತು ಪ್ರಕಾಶಕನನ್ನು ಸೆರೆಹಿಡಿಯಲು ಆಜ್ಞಾಪತ್ರವನ್ನು (ವಾರಂಟ) ಹೊರಡಿಸಿ ವಿಲ್ಕ್ಸನನ್ನೂ ಅವನ ಸಹಾಯಕರನ್ನೂ ಸೆರೆಮನೆಯಲ್ಲಿರಿಸಿದನು. ಈ ಆಜ್ಞಾಪತ್ರದಲ್ಲಿ ಯಾರ ಹೆಸರೂ ಬರೆಯಲ್ಪಟ್ಟಿರಲಿಲ್ಲ. ಆದುದರಿಂದ ಅದಕ್ಕೆ ಸಾಮಾನ್ಯ ಆಜ್ಞಾಪತ್ರವೆಂದು (General Warrant) ಹೆಸರು ಬಂದಿತು. ಆದರೆ ತಾನು ಪಾರ್ಲಿಮೆಂಟಿನ ಸದಸ್ಯನಾದುದರಿಂದ ತನ್ನ ಮೇಲಿನ ಆರೋಪವು ನಿಶ್ಚಿತವಾಗುವವರೆಗೆ ತನ್ನನ್ನು ಸೆರೆಮನೆಯಲ್ಲಿಡಲು ಬರುವುದಿಲ್ಲವೆಂದೂ ಸಾಮಾನ್ಯ ಆಜ್ಞಾಪತ್ರವನ್ನು ಹೊರಡಿಸುವುದೆ ನ್ಯಾಯಬದ್ಧವಲ್ಲವೆಂದೂ ವಿಲ್ಕ್ಸನು ಕೋರ್ಟಿನಲ್ಲಿ ಹೇಳಿದನು. ಮುಖ್ಯ ನ್ಯಾಯಾಧೀಶನಿಗೆ ಅವನ ಹೇಳಿಕೆ ಮಾನ್ಯವಾಯಿತು ಮತ್ತು ವಿಲ್ಕ್ಸನು ಪಾರ್ಲಿಮೆಂಟಿನ ಸದಸ್ಯನಿದ್ದುದರಿಂದ ಅವನ ಬಿಡುಗಡೆಯಾಯ್ತು. ಆ ಬಳಿಕ ಸಾಮಾನ್ಯ ಆಜ್ಞಾಪತ್ರವನ್ನು ಹೊರಡಿಸುವುದು ಕಾಯದೆ ವಿರುದ್ಧವಾದುದೆಂದು ನಿರ್ಣಯಿಸಲ್ಪಟ್ಟಿತು, ಮತ್ತು ವಿಲ್ಕ್ಸನಿಗೆ ಆದ ಹಾನಿ ತುಂಬಿ ಬರಲು ಕೆಲವು ಹಣವು ದೊರೆತಿತು. ಆದರೆ ಮುಂದೆ ರಾಜನ ಮಾನಹಾನಿಯನ್ನು ಮಾಡಿದನೆಂಬ ಆರೋಪವನ್ನಿಟ್ಟು ಮಂತ್ರಿಮಂಡಳವು ವಿಲ್ಕ್ಸನ ವಿಚಾರಣೆಯನ್ನು ಆರಂಭಿಸಿತು. ಇತ್ತ ಪಾರ್ಲಿಮೆಂಟು ನಾರ್ಥ ಬ್ರಿಟನ್ ಪತ್ರದ ೪೫ನೆಯ ಸಂಚಿಕೆಯಲ್ಲಿ ಅಸತ್ಯವೂ ಅಯೋಗ್ಯವೂ ರಾಜನಿಗೆ ಅಪಮಾನಕರವೂ ಆದ ವೃತ್ತವು ಪ್ರಸಿದ್ಧವಾಗಿರುವುದೆಂಬ ನಿರ್ಣಯವನ್ನು ಮಾಡಿ ಅವನನ್ನು ಕಾಮನ್ಸ ಸಭೆಯಿಂದ ಹೊರದೂಡಿತು. ರಾಜನ ಮಾನಹಾನಿಯನ್ನು ಮಾಡಿದ ಆರೋಪವು ಸಿದ್ಧವಾಗಿ ನ್ಯಾಯಕೋರ್ಟು ವಿಲ್ಕ್ಸನನ್ನು ದೋಷಿಯೆಂದು ನಿರ್ಣಯಿಸಿತು. ಅವನು ಶಿಕ್ಷೆಯನ್ನು ತಪ್ಪಿಸಿಕೊಳ್ಳುವುದಕ್ಕೆ ಫ್ರಾನ್ಸಿಗೆ ಓಡಿಹೋದನು (೧೭೬೪).

ಪಾರ್ಲಿಮೆಂಟಿನಲ್ಲಿಯ ಭಾಷಣಗಳನ್ನು ಪ್ರಸಿದ್ಧಿಸಿ ಯಾರೂ ಅವನ್ನು ಉಗ್ರವಾಗಿ ಟೀಕಿಸಕೂಡದೆಂದು ಗ್ರೆನ್‌ವಿಲನು ಅನೇಕ ವೃತ್ತಪತ್ರಗಳ ಸಂಪಾದಕರಿಗೆ ಎಚ್ಚರಿಕೆಯನ್ನು ಕೊಟ್ಟನು. ಆದರೆ ಇದರಿಂದ ತಮ್ಮ ಅಧಿಕಾರದ ಮೇಲೆ ಗದೆ ಬರುತ್ತಿದೆಂದು ಜನರಿಗೆ ಎನಿಸಿದುದರಿಂದ ಎಲ್ಲೆಲ್ಲಿಯೂ ಅಸಂತೋಷವು ಹಬ್ಬತೊಡಗಿತು. ಈ ಅಧಿಕಾರದ ರಕ್ಷಣೆಗೋಸುಗವೆ ವಿಲ್ಕ್ಸನಿಗೆ ದೇಶತ್ಯಾಗಮಾಡುವ

ಪ್ರಸಂಗವು ಒದಗಿತೆಂದು ಅವನ ಲೋಕಪ್ರಿಯತೆ ಬೆಳೆಯತೊಡಗಿತು. ಅವನ ಮಿತ್ರರು ಅವನಿಗೆ ಇಂಗ್ಲಂಡಿಗೆ ತಿರುಗಿ ಬರಲು ಕರೆಕಳುಹಿದರು. ಅವನು ಇಂಗ್ಲಂಡಿಗೆ ತಿರುಗಿ ಬಂದೊಡನೆ ಮಂತ್ರಿಮಂಡಳವು, ನ್ಯಾಯಕೋರ್ಟು ಅವನು ದೋಷಿ ಎಂದು ನಿರ್ಣಯಿಸಿ ಶಿಕ್ಷೆಯನ್ನು ಹೇಳಿದುದರಿಂದ, ಅವನನ್ನು ಕಾರಾಗೃಹ ಕ್ಕಟ್ಟಿತು. ಆದರೆ ಇದರಿಂದ ಅವನ ಲೋಕಪ್ರಿಯತೆ ಮತ್ತಷ್ಟು ಹೆಚ್ಚಿತು. ಇಷ್ಟರಲ್ಲಿಯ ಪಾರ್ಲಿಮೆಂಟಿನ ಹೊಸ ಚುನಾವಣೆ ಬಂದಿತು. ಆಗ ಮಿಡಲ್ ಸೆಕ್ಸ ಪರಗಣೆ ಅವನನ್ನು ತನ್ನ ಪ್ರತಿನಿಧಿಯಾಗಿ ಕಾಮನ್ಸಸಭೆಗೆ ಆರಿಸಿತು (೧೭೬೮); ಆದರೆ ಮಂತ್ರಿಮಂಡಳದ ಸೂಚನೆಯಿಂದ ಕಾಮನ್ಸಸಭೆ ಅವನ ಚುನಾವಣೆಯನ್ನು ರದ್ದುಗೊಳಿಸಿತು ಮತ್ತು ಅವನ ಸ್ಥಳದಲ್ಲಿ ಇನ್ನೊಬ್ಬನನ್ನು ಪ್ರತಿನಿಧಿಯಾಗಿ ಆರಿಸಬೇಕೆಂದು ಮಿಡಲ್‌ಸೆಕ್ಸ ಪರಗಣೆಯ ಜನರಿಗೆ ಸೂಚಿಸಿತು. ಆದರೆ ಅಲ್ಲಿಯ ಜನರು ಈ ಸೂಚನೆಯನ್ನು ಸ್ವೀಕರಿಸಲು ಒಪ್ಪದೆ ವಿಲ್ಕ್ಸನನ್ನೇ ತಮ್ಮ ಪ್ರತಿನಿಧಿಯಾಗಿ ಮತ್ತೆ ಆರಿಸಿದರು. ಹೀಗೆ ಮೂರು ಸಲವಾಯ್ತು. ಆಗ ಕಾಮನ್ಸಸಭೆ ವಿಲ್ಕ್ಸನ ಪ್ರತಿಸ್ಪರ್ಧಿಯಾದ **ಕರ್ನಲ್ ಲಟ್ರೆಲ್** ಎಂಬವನಿಗೆ ಮತಗಳು ಕಡಿಮೆ ಇದ್ದರೂ ಅವನೆ ಆರಿಸಲ್ಪಟ್ಟನೆಂದು ಪ್ರಕಟಗೊಳಿಸಿತು. ಆದರೆ ಇದರಿಂದ ಎಲ್ಲೆಲ್ಲಿಯೂ ಅಸಂತೋಷವು ಹುಟ್ಟಿ ಜನರು ಗೊಂದಲವನ್ನೆಬ್ಬಿಸಿದರು. ತಮಗೆ ಬೇಕಾದವರನ್ನು ಆರಿಸಿಕೊಡಲು ಅಧಿಕಾರವುಂಟೆಂದೂ ಈ ಅಧಿಕಾರದ ಮೇಲೆ ಮಂತ್ರಿಮಂಡಳವು ಗದೆಯನ್ನೆತ್ತಿದೆಯೆಂದೂ **"ಜ್ಯುನಿಯಸನ ಪತ್ರಗಳು"** ಎಂಬ ಹೆಸರಿನಿಂದ ಕೆಲವು ಜನರು ಮಂತ್ರಿಮಂಡಳವನ್ನು ಉಗ್ರವಾಗಿ ಟೀಕಿಸಿದರು (೧೭೬೯). ವಿಲ್ಕ್ಸನು ಜನರ ಹಕ್ಕುಗಳ ರಕ್ಷಕನೆಂದು ಅವನ ಲೋಕಪ್ರಿಯತೆ ಹೆಚ್ಚುತ್ತ ಹೋಯಿತು. ಜನರು ಅವನನ್ನು ಆಲ್ಡರಮನ್, ಶೆರೀಫ ಮತ್ತು ಲಂಡನ ಪಟ್ಟಣದ ಮೇಯರ (ಮುಖ್ಯ ಅಧಿಕಾರಿ)ನಾಗಿ ಮಾಡಿದರು. ಆ ಬಳಿಕ ೧೭೭೪ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಯಿತು. ಆಗ ಜನರು ಮತ್ತೆ ಅವನನ್ನು ತಮ್ಮ ಪ್ರತಿನಿಧಿಯಾಗಿ ಆರಿಸಿದರು. ಈ ಸಲ ಮಾತ್ರ ಕಾಮನ್ಸಸಭೆ ಅವನ ಚುನಾವಣೆಯನ್ನು ರದ್ದುಗೊಳಿಸಲಿಲ್ಲ.

ಈ ಬಗೆಯಾಗಿ ವಿಲ್ಕ್ಸನ ಪ್ರಕರಣದಿಂದ (೧) ಸಾಮಾನ್ಯ ಆಜ್ಞಾಪತ್ರವನ್ನು ಹೊರಡಿಸುವುದು ಕಾಯ್ದೆಗೆ ವಿರುದ್ಧವಾದುದೆಂದೂ (೨) ತಮಗೆ ಬೇಕಾದವರನ್ನು ತಮ್ಮ ಪ್ರತಿನಿಧಿಯಾಗಿ ಆರಿಸಿಕೊಳ್ಳಲು ಜನರಿಗೆ ಅಧಿಕಾರವುಂಟೆಂದೂ ಸಿದ್ಧವಾಯ್ತು. ವೃತ್ತಪತ್ರಗಳು ಪಾರ್ಲಿಮೆಂಟಿನಲ್ಲಿ ಆದ ಭಾಷಣಗಳನ್ನು ಪ್ರಕಟಿಸಿ ಅವುಗಳನ್ನು ಚರ್ಚಿಸತೊಡಗಿದುವು. ಇದರಿಂದ ಪಾರ್ಲಿಮೆಂಟ್ ಸಭೆಯಲ್ಲಿಯ

ಕಾರ್ಯಕಲಾಪಗಳ ವಿಷಯದಲ್ಲಿ ಜನರಿಗೆ ಮಾಹಿತಿ ದೊರೆಯಲಾರಂಭಿಸಿತು. ಮತ್ತು ಸದಸ್ಯರ ಮೇಲೆ ಲೋಕಮತದ ವರ್ಚಸ್ಸೂ ನಿಯಂತ್ರಣವೂ ಉಂಟಾಗ ತೊಡಗಿದುವು.

**ಉತ್ತರ ಅಮೇರಿಕೆಯಲ್ಲಿಯ ಇಂಗ್ಲಂಡಿನ ವಸಾಹತುಗಳು ಮತ್ತು ಮಾತೃಭೂಮಿಯೊಡನೆ ಅವುಗಳ ಸಂಬಂಧವು:**—ಉತ್ತರ ಅಮೇರಿಕೆಯಲ್ಲಿ ಸೇಂಟ ಲಾರೆನ್ಸ ನದಿಯ ದಕ್ಷಿಣಕ್ಕೆ ಪೂರ್ವ ದಂಡೆಯ ಮೇಲೆ ಇಂಗ್ಲಂಡಿನ ೧೩ ವಸಾಹತುಗಳಿದ್ದುವು. ವರ್ಜಿನಿಯಾ, ರ್‍ಹೋಡ ಐಲಂಡ್, ಮೆಸಾಚುಸೆಟ್ಸ, ಮೇನ್, ಕನೆಕ್ಟಿಕಟ್, ಅಕಡಿಯಾ, ಕೆರೋಲಿನಾ, ನ್ಯೂಯಾರ್ಕ, ಡೆಲಾವೆಅರ, ಮೇರಿಲಂಡ, ನ್ಯೂಜರ್ಸಿ, ಪೆನ್‌ಸಿಲ್ವನಿಯಾ ಮತ್ತು ಜಾರ್ಜಿಯಾ ಇವೇ ಆ ವಸಾಹತುಗಳು. ಇವುಗಳಲ್ಲಿ ವರ್ಜಿನಿಯಾ ವಸಾಹತು ಮೊದಲು ಸ್ಥಾಪಿಸಲ್ಪಟ್ಟಿತು (೧೬೦೭). ಉಳಿದ ವಸಾಹತುಗಳು ಮುಂದಿನ ೧೫೫ ವರ್ಷಗಳಲ್ಲಿ ಸ್ಥಾಪಿಸಲ್ಪಟ್ಟುವು. ಅವುಗಳಲ್ಲಿ ಕೆಲವನ್ನು ಇಂಗ್ಲಂಡಿನಲ್ಲಿಯ ಧಾರ್ಮಿಕ ಮತ್ತು ರಾಜಕೀಯ ಉಪದ್ರವಕ್ಕೆ ಬೇಸತ್ತು ಬಂದ ಜನರು ಸ್ಥಾಪಿಸಿದ್ದರು. ಇನ್ನು ಕೆಲವು ವ್ಯಾಪಾರಕ್ಕೋಸುಗ ಸ್ಥಾಪಿಸಲ್ಪಟ್ಟಿದ್ದುವು. ನ್ಯೂಯಾರ್ಕ ಮತ್ತು ಅಕಡಿಯಾ ವಸಾಹತುಗಳು ಮೊದಲು ಡಚ್ಚರ ಮತ್ತು ಫ್ರೆಂಚರ ವಶದಲ್ಲಿದ್ದುವು. ಅವನ್ನು ಇಂಗ್ಲಿಶರು ಹಿಂದುಗಡೆಯಿಂದ ಗೆದ್ದು ತೆಗೆದುಕೊಂಡರು. ಅಮೇರಿಕೆಯಲ್ಲಿಯ ಇಂಗ್ಲಿಶ ವಸಾಹತುಗಳಲ್ಲಿ ಪ್ಯುರಿಟನ್, ರೋಮನ್ ಕಥಲಿಕ್, ಡಿಸೆಂಟರ್ಸ ಮೊದಲಾದ ಬೇರೆ ಬೇರೆ ಪಂಥದ ಜನರಿದ್ದರು. ಯುರೋಪದಲ್ಲಿಯ ಇತರ ರಾಷ್ಟ್ರಗಳಿಂದಲೂ ಅಲ್ಲಿಯ ಧಾರ್ಮಿಕ ಮತ್ತು ರಾಜಕೀಯ ಉಪದ್ರವಕ್ಕೆ ಬೇಸತ್ತು ಜನರು ಈ ವಸಾಹತುಗಳಲ್ಲಿ ಬಂದು ವಾಸಮಾಡಿದರು. ಈ ವಸಾಹತುಗಳಿಗೆ ತಮ್ಮ ತಮ್ಮ ವ್ಯವಸ್ಥೆಯನ್ನು ಮಾಡಿಕೊಳ್ಳಲು ಇಂಗ್ಲಂಡಿನ ರಾಜನಿಂದ ಬೇರೆ ಬೇರೆ ಸನದುಗಳು ದೊರೆತಿದ್ದುವು, ಮತ್ತು ಅಲ್ಲಿಯ ರಾಜ್ಯಕಾರಭಾರದ ಮೇಲೆ ನಿಯಂತ್ರಣವನ್ನಿಡಲು ಇಂಗ್ಲಂಡಿನ ರಾಜನಿಂದ ಗವ್ಹರ್ನರರು ನಿಯೋಜಿಸಲ್ಪಡುತ್ತಿದ್ದರು. ವಸಾಹತುಗಳು ಮಾತೃಭೂಮಿಯ ಲಾಭಕ್ಕೋಸುಗ ಇರುವುವೆಂದು ಆ ಕಾಲದಲ್ಲಿ ಯುರೋಪದಲ್ಲಿಯ ಎಲ್ಲ ರಾಷ್ಟ್ರಗಳು ತಿಳಿದಿದ್ದುವು. ಆದುದರಿಂದ ಈ ವಸಾಹತುಗಳ ವ್ಯಾಪಾರದ ಮೇಲೆ ಇಂಗ್ಲಂಡು ನಿಯಂತ್ರಣವನ್ನು ಇಟ್ಟಿತ್ತು. ಈ ವಸಾಹತುಗಳು ಇಂಗ್ಲಂಡಿನ ಹೊರತು ಇತರ ಯಾವ ರಾಷ್ಟ್ರಗಳೊಡನೆಯೂ ಅವುಗಳ ವಸಾಹತುಗಳೊಡನೆಯೂ ವ್ಯಾಪಾರಮಾಡಕೂಡದೆಂದು ನಿರ್ಬಂಧವಿದ್ದಿತು. ಅದ

ರಂತೆ ಇತರ ಯಾವ ರಾಷ್ಟ್ರಕ್ಕೂ ಇಂಗ್ಲಂಡು ತನ್ನ ವಸಾಹತುಗಳೊಡನೆ ವ್ಯಾಪಾರ ಮಾಡಲು ಕೊಡುತ್ತಿರಲಿಲ್ಲ. ವಸಾಹತುಗಳಲ್ಲಿ ಕೇವಲವಾಗಿ ಕಚ್ಚಾ ಮಾಲನ್ನು ಹುಟ್ಟಿಸಬೇಕು ಮತ್ತು ಪಕ್ಕಾಮಾಲನ್ನು ಮಾಡಕೂಡದೆಂದು ನಿಯಮ ವಿದ್ದಿತು. ಆದುದರಿಂದ ವಸಾಹತುಗಳು ತಮ್ಮ ಕಚ್ಚಾಮಾಲನ್ನು ಇಂಗ್ಲಂಡಿಗೆ ಕಳಿಸಬೇಕಾಗುತ್ತಿತ್ತು ಮತ್ತು ಪಕ್ಕಾಮಾಲುಗಳಿಗೋಸುಗ ಇಂಗ್ಲಂಡನ್ನು ಅವ ಲಂಬಿಸಿರಬೇಕಾಗುತ್ತಿತ್ತು. ತಮ್ಮ ವ್ಯಾಪಾರದ ಮೇಲೆ ಹೀಗೆ ನಿಯಂತ್ರಣವಿರು ವುದು ವಸಾಹತುಗಳಲ್ಲಿಯ ಜನರಿಗೆ ಸೇರುತ್ತಿರಲಿಲ್ಲ. ಆದರೆ ನೆರೆಯಲ್ಲಿಯೆ ಇದ್ದ ಫ್ರೆಂಚ ವಸಾಹತುಗಳೊಡನೆ ಯಾವಾಗಲೂ ಕಲಹಗಳು ಉದ್ಭವಿಸುತ್ತಿರುವುದ ರಿಂದಲೂ ಫ್ರೆಂಚ ಜನರ ದಾಳಿಯ ಭೀತಿ ಅವುಗಳಿಗೆ ಇದ್ದುದರಿಂದಲೂ ಇಂಗ್ಲಂ ಡನ್ನು—ಮಾತೃಭೂಮಿಯನ್ನು—ವಿರೋಧಿಸುವ ಧೈರ್ಯವು ಆ ವಸಾಹತುಗಳಿಗೆ ಇರಲಿಲ್ಲ. ಇಷ್ಟೇ ಅಲ್ಲ, ಫ್ರೆಂಚ ಜನರೊಡನೆ ಯುದ್ಧದ ಪ್ರಸಂಗವು ಒದಗಿದರೆ ಇಂಗ್ಲಂಡಿನ ಸಾಹಾಯ್ಯವನ್ನು ಅವು ಅಪೇಕ್ಷಿಸುತ್ತಿದ್ದುವು; ಮತ್ತು ಪರ ಶತ್ರು ಗಳಿಂದ ಅವುಗಳನ್ನು ಸಂರಕ್ಷಿಸುವ ಹೊಣೆ ತನ್ನದಿದೆ ಎಂದು ಇಂಗ್ಲಂಡಿಗೂ ಎನಿಸು ತ್ತಿತ್ತು. ಆದರೆ ಸಪ್ತವಾರ್ಷಿಕ ಯುದ್ಧದಲ್ಲಿ ಫ್ರೆಂಚರು ಸೋತು ಅವರ ಉತ್ತರ ಅಮೇರಿಕೆಯಲ್ಲಿಯ ವಸಾಹತುಗಳು ಇಂಗ್ಲಂಡಿನ ವಶದಲ್ಲಿ ಬಂದ ಬಳಿಕ (೧೭೬೩) ಫ್ರೆಂಚರಿಂದ ಭೀತಿ ತಪ್ಪಿತು ಮತ್ತು ವಸಾಹತುಗಳಿಗೆ ಇಂಗ್ಲಂಡನ್ನು ವಿರೋಧಿಸಲು ಧೈರ್ಯವು ಬರತೊಡಗಿತು.

**ವಸಾಹತುಗಳ ಮೇಲೆ ಕರವು**—ಸಪ್ತವಾರ್ಷಿಕ ಯುದ್ಧದಲ್ಲಿ ಫ್ರೆಂಚ ಜನರಿಂದ ವಸಾಹತುಗಳ ಸಂರಕ್ಷಣೆಯನ್ನು ಮಾಡಲು ಇಂಗ್ಲಂಡು ಬಹಳ ಹಣ ವನ್ನು ವೆಚ್ಚಮಾಡಬೇಕಾಯಿತು. ಆ ಹಣವನ್ನು ವಸಾಹತುಗಳಿಂದ ಪಡೆಯಲು **ಗ್ರೆನ್‌ವಿಲನ** ಸೂಚನೆಯಿಂದ ಪಾರ್ಲಿಮೆಂಟು ೧೭೬೫ರಲ್ಲಿ "ಸ್ಟಂಪ ಅಕ್ಟ" ಎಂಬ ಕಾಯ್ದೆಯನ್ನು ಮಾಡಿತು. ಈ ಕಾಯ್ದೆಯಿಂದ ವಸಾಹತುಗಳಲ್ಲಿ ಆಗುತ್ತಿದ್ದ ಖರೀದಿಪತ್ರ, ಒತ್ತೆಪತ್ರ, ಕರಾರುನಾಮೆ, ಮೊದಲಾದ ಎಲ್ಲ ಕಾಗದ ಪತ್ರಗಳು ಸ್ಟ್ಯಾಂಪಿಸ ಕಾಗದದ ಮೇಲೆಯೆ ಬರೆಯಲ್ಪಡಬೇಕೆಂದು ನಿಶ್ಚ ಯಿಸಲ್ಪಟ್ಟಿತು. ಈ ಸ್ಟ್ಯಾಂಪಿನ ಕಾಗದವು ಇಂಗ್ಲಂಡಿನಿಂದ ಕಳಿಸ ಲ್ಪಡುತ್ತಿತ್ತು. ಅಮೇರಿಕೆಯಲ್ಲಿಯ ವಸಾಹತುಗಳ ಏಕೀಕರಣವು ಆಗಿರ ಲಿಲ್ಲವಾದುದರಿಂದ ಎಲ್ಲ ವಸಾಹತುಗಳಿಗೋಸುಗ ಕಾಯ್ದೆಯನ್ನು ಮಾಡುವ ಒಂದು ಕಾಯ್ದೆಮಂಡಳವು ಅಲ್ಲಿ ಇರಲಿಲ್ಲ. ಆದರೆ ಬೇರೆ ಬೇರೆ ವಸಾಹತುಗಳಲ್ಲಿ ಬೇರೆ ಬೇರೆ ಕಾಯ್ದೆ ಮಂಡಳಗಳು ಇದ್ದುವು. ಇಂಗ್ಲಂಡಿನ

ಪಾರ್ಲಿಮೆಂಟು ಯಾವುದಾದರೊಂದು ಕಾಯ್ದೆಯನ್ನು ಮಾಡಿದರೆ ಅದು ಎಲ್ಲ ವಸಾಹತುಗಳಿಗೆ ಅನ್ವಯಿಸಬಹುದೆಂಬ ಅಭಿಪ್ರಾಯವನ್ನು ತಳೆದು ಈ ಕಾಯ್ದೆಯನ್ನು ಪಾರ್ಲಿಮೆಂಟು ಮಾಡಿತು. ಆದರೆ ಈ ಕಾಯ್ದೆಯ ವಿರುದ್ಧವಾಗಿ ವಸಾಹತುಗಳಲ್ಲಿ ಅಸಂತೋಷವು ಬಹಳವಾಗಿ ಹಬ್ಬಿತು. "ಇಂಗ್ಲಂಡಿನ ಪಾರ್ಲಿಮೆಂಟಿನಲ್ಲಿ ನಮ್ಮ ಪ್ರತಿನಿಧಿಗಳಿಲ್ಲ, ಆದುದರಿಂದ ನಮ್ಮ ಸಮ್ಮತಿ ಇಲ್ಲದೆ ನಮ್ಮ ಮೇಲೆ ಈ ಕಾಯ್ದೆಯಿಂದ ಕರವನ್ನು ಹೇರುವ ಅಧಿಕಾರವು ಪಾರ್ಲಿಮೆಂಟಿಗೆ ಹುಟ್ಟದು", ಎಂದು ವಸಾಹತುಗಳಲ್ಲಿಯ ಜನರು ಹೇಳುತ್ತ ಕರವು ರದ್ದಾದ ಹೊರತು ಇಂಗ್ಲಂಡಿನೊಡನೆ ವ್ಯಾಪಾರವನ್ನು ಮಾಡಕೂಡದೆಂದು ನಿಶ್ಚಯಿಸಿದರು. ವಸಾಹತುಗಳ ಸಮ್ಮತಿ ಇಲ್ಲದೆ ಅವುಗಳ ಮೇಲೆ ಕರವನ್ನು ಹೇರುವುದು ಯೋಗ್ಯವಲ್ಲವಾದುದರಿಂದ ಅದನ್ನು ರದ್ದುಮಾಡಬೇಕೆಂದು ಇಂಗ್ಲಂಡಿನಲ್ಲಿಯ ವಿಲಿಯಮ್ ಪಿಟ್ (ಹಿರಿಯನು), ಎಡ್‌ಮಂಡ್ ಬರ್ಕ ಮೊದಲಾದ ಮುತ್ಸದ್ದಿಗಳು ಪಾರ್ಲಿಮೆಂಟಿನ ಸಭೆಯಲ್ಲಿ ಭಾಷಣಗಳನ್ನು ಮಾಡಿದರು. ಈ ಭಾಷಣಗಳ ಪರಿಣಾಮವಾಗಿ ಗ್ರೆನ್‌ವಿಲ್ಲನ ತರುವಾಯದಲ್ಲಿ ಬಂದ **ರಾಕಿಂಗಹಮ**ನೆಂಬ ಮುಖ್ಯ ಮಂತ್ರಿ ಸ್ಟಂಪ ಅಕ್ಟನ್ನು ರದ್ದುಗೊಳಿಸಿದನು (೧೭೬೬); ಆದರೆ ವಸಾಹತುಗಳ ಮೇಲೆ ಕರವನ್ನು ಕೂಡಿಸಲು ಇಂಗ್ಲಂಡಿಗೆ ಅಧಿಕಾರವುಂಟೆಂದು ಸಾರಿದನು. ಆ ಬಳಿಕ **ಟಾವುನ್‌ಶೆಂಡ್** ಎಂಬ ಆರ್ಥಿಕಮಂತ್ರಿ ವಸಾಹತುಗಳಿಗೆ ಹೋಗುವ ಸರಕುಗಳಲ್ಲಿ **ಚಹ, ಕಾಜು** ಮತ್ತು **ಕಾಗದ** ಈ ವಸ್ತುಗಳ ಮೇಲೆ ಕರವನ್ನು ಕೂಡಿಸಿದನು. ಆದರೆ ಸ್ಟಂಪ ಅಕ್ಟಿನಂತೆ ಈ ಕರದ ವಿಷಯದಲ್ಲಿಯೂ ವಸಾಹತುಗಳಲ್ಲಿ ತೀವ್ರವಾದ ಅಸಂತೋಷವು ಹಬ್ಬಿತು. "ಇಂಗ್ಲಂಡಿನ ಪಾರ್ಲಿಮೆಂಟಿನಲ್ಲಿ ನಮ್ಮ ಪ್ರತಿನಿಧಿಗಳು ಇಲ್ಲದುದರಿಂದ ಈ ಕರವನ್ನು ಕೂಡಿಸಲು ಇಂಗ್ಲಂಡಿಗೆ ಅಧಿಕಾರವಿಲ್ಲ"ವೆಂದು ಅವು ಎನ್ನ ತೊಡಗಿದುವು. ವಸಾಹತುಗಳಲ್ಲಿಯ ಈ ಅಸಂತೋಷವನ್ನು ಕಂಡು ಮುಖ್ಯ ಮಂತ್ರಿ **ಲಾರ್ಡ ನಾರ್ಥನು** ಚಹದ ಮೇಲಿನ ಕರವೊಂದನ್ನು ಉಳಿದು ಮಿಕ್ಕ ಎಲ್ಲ ಪದಾರ್ಥಗಳ ಮೇಲಿನ ಕರಗಳನ್ನು ರದ್ದುಗೊಳಿಸಿದನು, ಆದರೆ ವಸಾಹತುಗಳ ಮೇಲೆ ಕರವನ್ನು ಕೂಡಿಸಲು ಇಂಗ್ಲಂಡಿಗೆ ಅಧಿಕಾರವಿದೆಂಬುದನ್ನು ಸೂಚಿಸಲು **ಚಹದ ಮೇಲಿನ ಕರ**ವನ್ನು ರದ್ದುಗೊಳಿಸಲಿಲ್ಲ (೧೭೭೦). ಆದರೆ ಇದರಿಂದ ವಸಾಹತುಗಳಲ್ಲಿಯ ಜನರಿಗೆ ಸಮಾಧಾನವಾಗದೆ ಅಸಂತೋಷವು ಹಬ್ಬಿ ಅಲ್ಲಲ್ಲಿ ದೊಂಬೆಗಳಾಗತೊಡಗಿದುವು.

ತಮ್ಮ ಮೇಲೆ ಕರವನ್ನು ಹೇರಲು ಇಂಗ್ಲಂಡು ಪ್ರಯತ್ನಿಸುತ್ತಿದ್ದುದನ್ನು

ನೋಡಿ ವಸಾಹತುಗಳ ಬಂದರಗಳಲ್ಲಿ ಹಡಗುಗಳೊಳಗಿಂದ ಚಹವನ್ನೇ ಕೆಳಗೆ ಇಳಿಸ ಬಾರದೆಂದು ಕೆಲವು ವಸಾಹತುಗಾರರು ನಿಶ್ಚಯಿಸಿದರು. ೧೭೭೩ರಲ್ಲಿ ಚಹದಿಂದ ತುಂಬಿದ ಈಸ್ಟ ಇಂಡಿಯಾ ಕಂಪನಿಯ ಒಂದು ಹಡಗು ಮೆಸಾಚುಸೆಟ್ಸ ವಸಾಹತಿನಲ್ಲಿಯ **ಬೋಸ್ಟನ್** ಬಂದರದಲ್ಲಿ ಬಂದಿತು. ಆಗ ಅಲ್ಲಿಯ ಕೆಲವು ವಸಾಹತುಗಾರರು ತಮ್ಮನ್ನು ಯಾರೂ ಗುರುತಿಸಬಾರದೆಂದು ರೆಡ್ ಇಂಡಿಯನ್ ಕೂಲಿಗಳ ವೇಷವನ್ನು ತಳೆದು ಹಡಗನ್ನೇರಿ ಚಹದ ಪೆಟ್ಟಿಗೆಗಳನ್ನು ಸಮುದ್ರದಲ್ಲಿ ಉರುಳಿಸಿದರು. ಮೆಸಾಚುಸೆಟ್ಸ ವಸಾಹತಿನಲ್ಲಿಯ ಜನರ ಈ ಅತ್ಯಾಚಾರವನ್ನು ಕಂಡು ಅವರನ್ನು ಶಿಕ್ಷಿಸಲು ಇಂಗ್ಲಂಡಿನ ಮಂತ್ರಿಮಂಡಳವು ಬೋಸ್ಟನ ಬಂದರವನ್ನು ಬಂದು ಮಾಡಿತು, ಮತ್ತು ಮೆಸಾಚುಸೆಟ್ಸ ವಸಾಹತಿನ ಸನದನ್ನು ರದ್ದುಗೊಳಿಸಿ (೧೭೭೪) ಅಲ್ಲಿ ತಲೆಯೆತ್ತಲು ಹವಣಿಸುತ್ತಿದ್ದ ಬಂಡುಗಳನ್ನು ಮುರಿಯಲು ಇಂಗ್ಲಂಡಿನಿಂದ ಅಮೇರಿಕೆಗೆ ಸೈನ್ಯವನ್ನು ಕಳಿಸಿತು.

**ವಸಾಹತುಗಳು ತಮ್ಮ ಸ್ವಾತಂತ್ರ್ಯವನ್ನು ಸಾರುವುವು** (೪ನೆಯ ಜುಲೈ ೧೭೭೬) — ಹೀಗೆ ಇಂಗ್ಲಂಡು ಮತ್ತು ವಸಾಹತುಗಳ ನಡುವೆ ವೈಮನಸ್ಸು ಹುಟ್ಟಿದುದರಿಂದ ವಸಾಹತುಗಳು **ಫಿಲಾಡೆಲ್ಫಿಯಾ** ಎಂಬಲ್ಲಿ ತಮ್ಮ ಪ್ರತಿನಿಧಿಗಳ ಕಾಂಗ್ರೆಸ್ಸನ್ನು (ಪರಿಷತ್ತನ್ನು) ನೆರೆಯಿಸಿ (೧೭೭೪) ತಮ್ಮ ಸಮ್ಮತಿ ಇಲ್ಲದೆ ತಮ್ಮ ಮೇಲೆ ಕರವನ್ನು ಕೂಡಿಸಲು ಇಂಗ್ಲಂಡಿಗೆ ಅಧಿಕಾರವಿಲ್ಲವೆಂದು ನಿರ್ಣಯಿಸಿ ಹಾಗೆ ಇಂಗ್ಲಂಡಿಗೆ ತಿಳಿಸಿದುವು, ಮತ್ತು ಈ ವ್ಯಾಜ್ಯವು ಸಾಮೋಪಚಾರದಿಂದ ಬಗೆಹರಿಯದಿದ್ದರೆ ಇಂಗ್ಲಂಡನ್ನು ವಿರೋಧಿಸಲು ಬರಬೇಕೆಂದು ಸೈನ್ಯವನ್ನು ಸಿದ್ಧಗೊಳಿಸಲಾರಂಭಿಸಿದುವು. **ಬೆಂಜಾಮಿನ್ ಫ್ರಂಕಲಿನ್** ಎಂಬವನೊಬ್ಬ ವಸಾಹತಿನಲ್ಲಿಯ ಮುತ್ಸದ್ದಿ ಮೆಸಾಚುಸೆಟ್ಸ ಸಂಸ್ಥಾನದ ಪ್ರತಿನಿಧಿಯಾಗಿ ಇಂಗ್ಲಂಡಿನಲ್ಲಿ ಇದ್ದನು. ಅವನು ಸಾಮೋಪಚಾರದಿಂದ ಈ ಪ್ರಶ್ನೆಯನ್ನು ಬಿಡಿಸಲು ಬಹಳವಾಗಿ ಪ್ರಯತ್ನಿಸಿದನಾದರೂ ಯಶವು ದೊರೆಯಲಿಲ್ಲ. **ಅರ್ಲ ಆಫ್ ಚಥಮ್** (ಹಿರಿಯ ಪಿಟ್ಟನು) ಮತ್ತು **ಬರ್ಕ** ಈ ಮುತ್ಸದ್ದಿಗಳಿಬ್ಬರೂ ವಸಾಹತುಗಳ ಸಮ್ಮತಿ ಇಲ್ಲದೆ ಅವುಗಳ ಮೇಲೆ ಕರವನ್ನು ಕೂಡಿಸಬಾರದು, ಚಹದ ಮೇಲಿನ ಕರವನ್ನು ರದ್ದುಗೊಳಿಸಿ ಈ ಪ್ರಶ್ನೆಯನ್ನು ಸಾಮೋಪಚಾರದಿಂದ ಬಗೆಹರಿಸಬೇಕು ಎಂದು ಬಹಳವಾಗಿ ಪ್ರಯತ್ನಿಸಿದರು. ಆದರೆ ಜಾರ್ಜ ರಾಜನು ಮತ್ತು ಮುಖ್ಯ ಮಂತ್ರಿ ಲಾರ್ಡ ನಾರ್ಥನು ಅವರ ಮಾತಿಗೆ ಕಿವಿಗೊಡಲಿಲ್ಲ. ಈ ಪ್ರಶ್ನೆ ಬಗೆಹರಿಯದೆ ವಸಾಹತುಗಳ ಮತ್ತು ಇಂಗ್ಲಂಡಿನ ನಡುವೆ ಯುದ್ಧವು ಪ್ರಾರಂಭವಾಯ್ತು (೧೭೭೫). ವಸಾಹತುಗಳಲ್ಲಿಯ ಜನರು ಫಿಲಾಡೆಲ್ಫಿಯ

ದಲ್ಲಿ ಮತ್ತೊಂದು ಕಾಂಗ್ರೆಸ್ಸನ್ನು ನೆರೆಯಿಸಿ **ಜಾರ್ಜ ವಾಶಿಂಗ್ಟನನನ್ನು** ತಮ್ಮ ಸೈನ್ಯದ ಮುಖ್ಯ ಸೇನಾಪತಿಯಾಗಿ ನಿಯೋಜಿಸಿದರು (೧೭೭೫). ಈ ಬಗೆಯಾಗಿ ತಮ್ಮ ಮೇಲೆ ಕರವನ್ನು ಹೇರಲು ಮಾತೃಭೂಮಿ ಯುದ್ಧವನ್ನಾರಂಭಿಸಿತು ಮತ್ತು ಇನ್ನು ಸಾಮೋಪಚಾರದಿಂದ ಈ ಪ್ರಶ್ನೆ ಬಗೆಹರಿವಂತಿಲ್ಲ ಎಂದು ಕಂಡು ವಸಾಹತುಗಳಲ್ಲಿಯ ಜನರು ೩ನೆಯ ಕಾಂಗ್ರೆಸ್ಸನ್ನು ಫಿಲಾಡೆಲ್ಫಿಯದಲ್ಲಿ ನೆರೆಯಿಸಿ ತಮ್ಮ ಸ್ವಾತಂತ್ರ್ಯವನ್ನು ಸಾರಿದರು (೪ ಜುಲೈ ೧೭೭೬).

**ಅಮೇರಿಕೆಯಲ್ಲಿಯ ವಸಾಹತುಗಳೊಡನೆ ಇಂಗ್ಲಂಡಿನ ಯುದ್ಧವು (೧೭೭೫-೧೭೮೩)** — ಬೋಸ್ಟನ್ ಬಂದರವನ್ನು ಭದ್ರಗೊಳಿಸಿ ಅಲ್ಲಿಗೆ ಇಂಗ್ಲಂಡು ಮೊದಲು ತನ್ನ ಸೈನ್ಯವನ್ನು ಕಳಿಸಿದುದರಿಂದ ಬೋಸ್ಟನಿನ ಬಳಿಯಲ್ಲಿಯ **ಲೆಗ್ಸಿಂಗ್‌ಟನ್** ಎಂಬಲ್ಲಿ ವಸಾಹತುಗಳ ಸೈನ್ಯಕ್ಕೂ ಇಂಗ್ಲಿಶ್ ಸೈನ್ಯಕ್ಕೂ ಕಾಳೆಗವಾಯ್ತು. ಅದರಲ್ಲಿ ಇಂಗ್ಲಿಶ್ ಸೈನ್ಯವು ಸೋತಿತು (೧೭೭೫). ಆದರೆ ಮುಂದೆ ಸ್ವಲ್ಪ ಕಾಲದಲ್ಲಿಯೆ **ಕಂಬರಹಿಲ್** ಎಂಬಲ್ಲಿ ೨ನೆಯ ಯುದ್ಧವಾಯಿತು (೧೭೭೫). ಅದರಲ್ಲಿ ಇಂಗ್ಲಿಶ್ ಸೇನಾಪತಿಯಾದ ಗೇಜನು ಜಯವನ್ನು ಸಂಪಾದಿಸಿದನು; ಆದರೆ ಯುದ್ಧದಲ್ಲಿ ಅನೇಕ ಇಂಗ್ಲಿಶ್ ಸೈನಿಕರು ಸತ್ತರು. ಬೋಸ್ಟನಿನ ಬಳಿಯಲ್ಲಿ ಯುದ್ಧವು ಪ್ರಾರಂಭವಾದ ಬಳಿಕ ಯುದ್ಧದ ಬೇಗೆ ಅಲ್ಪ ಕಾಲದಲ್ಲಿಯೆ ಎಲ್ಲ ವಸಾಹತುಗಳಲ್ಲಿ ಹಬ್ಬಿತು, ಮತ್ತು ಅಲ್ಲಲ್ಲಿ ಎರಡೂ ಸೈನ್ಯಗಳ ನಡುವೆ ಕದನಗಳು ಪ್ರಾರಂಭವಾದುವು. ಸೇನಾಪತಿಯಾದ ಜಾರ್ಜ ವಾಶಿಂಗ್ಟನನು ಶಾಂತವೃತ್ತಿಯವನೂ ಶೂರನೂ ಸಾಹಸಿಯೂ ದೃಢನಿಶ್ಚಯಿಯೂ ಕರ್ತೃತ್ವಶಾಲಿಯೂ ಆಗಿದ್ದನು. ಅವನು ಮೊದಲು ಸಪ್ತವಾರ್ಷಿಕ ಯುದ್ಧದಲ್ಲಿ ಫ್ರೆಂಚರ ವಿರುದ್ಧವಾಗಿ ಕಾದಿ ಶೂರನಾದ ಯೋಧನೆಂದು ಕೀರ್ತಿಯನ್ನು ಸಂಪಾದಿಸಿ



ಜಾರ್ಜ ವಾಶಿಂಗ್ಟನನು

ದ್ದನು. ವಸಾಹತುಗಳಲ್ಲಿಯ ಎಲ್ಲ ಜನರಿಗೆ ಅವನ ವಿಷಯದಲ್ಲಿ ಆದರವೆನಿಸುತ್ತಿತ್ತು. ಅವನು ವಸಾಹತುಗಳ ಸೈನ್ಯದಲ್ಲಿ ಉತ್ಸಾಹವನ್ನು ಹುಟ್ಟಿಸಿ ಶಿಸ್ತನ್ನು ನೆಲೆಗೊಳಿಸಿದನು. ಯುದ್ಧವು ಪ್ರಾರಂಭವಾದ ಬಳಿಕ ವಸಾಹತುಗಳ ಜನರು ಕನಡಾ ವಸಾಹತಿಗೆ ದಾಳಿಯಿಕ್ಕಿ ಅಲ್ಲಿಯ ಫ್ರೆಂಚ ಜನರನ್ನು ತಮ್ಮ ಪಕ್ಷಕ್ಕೆ ಒಲಿಸಿಕೊಳ್ಳಲು ಪ್ರಯತ್ನಿಸಿದರು. ಆದರೆ ಇಂಗ್ಲಂಡು ಫ್ರೆಂಚರಿಗೆ ರೋಮನ್ ಕಥಲಿಕ್ ಪಂಥದಂತೆ ಇರಲು ಸ್ವಾತಂತ್ರ್ಯವನ್ನಿತ್ತುದರಿಂದ (೧೭೭೪) ಅವರು ವಸಾಹತುಗಳ ಜನರನ್ನು ಕೂಡಿಕೊಳ್ಳಲಿಲ್ಲ. ವಸಾಹತುಗಳ ಸೈನ್ಯವು ಪರಾಭವ ಹೊಂದಿ ಅಲ್ಲಿಂದ ತಿರುಗಿ ಬರಬೇಕಾಯಿತು (೧೭೭೬).

ಆ ಬಳಿಕ ಹೌ ಎಂಬವನು ಇಂಗ್ಲಿಶ ಸೈನ್ಯದ ಸೇನಾಪತಿಯಾಗಿ ನಿಯೋಜಿಸಲ್ಪಟ್ಟನು. ಅವನು ಬೋಸ್ಟನ್ ಬಂದರವನ್ನು ಬಿಟ್ಟುಬಿಟ್ಟನು, ಮತ್ತು ನೋವಾ ಸ್ಕೋಶಿಯದಲ್ಲಿಯ ಹಲಿಫಕ್ಸ ಎಂಬಲ್ಲಿ ಹೋದನು (೧೭೭೬). ಅನಂತರದಲ್ಲಿ ವಸಾಹತುಗಳು ತಮ್ಮ ಸ್ವಾತಂತ್ರ್ಯವನ್ನು ಸಾರಿದ ಬಳಿಕ (೪ನೆಯ ಜುಲೈ ೧೭೭೬) ಯುದ್ಧಕ್ಕೆ ತೇಜವು ಬಂದಿತು. ಹಲಿಫಕ್ಸದಿಂದ ತಿರುಗಿ ಬಂದು ಹೌ ಇವನು ೧೭೭೬ರ ಅಗಸ್ಟ ತಿಂಗಳಲ್ಲಿ ಬ್ರುಕ್‌ಲಿನ್ (ನ್ಯೂಯಾರ್ಕದ ಬಳಿಯಲ್ಲಿ) ಎಂಬಲ್ಲಿ ವಾಶಿಂಗ್ಟನನ ಸೈನ್ಯವನ್ನು ಸೋಲಿಸಿದನು. ಆ ಬಳಿಕ ೧೭೭೭ರ ಮಾರ್ಚ ಎಪ್ರಿಲ್ ತಿಂಗಳಗಳಲ್ಲಿ ಅವನು ಬ್ರಂಡಿ ವಾಯಿನ್ ಎಂಬಲ್ಲಿ ವಾಶಿಂಗ್ಟನನನ್ನು ಸೋಲಿಸಿದನು ಮತ್ತು ಫಿಲಾಡೆಲ್ಫಿಯಾ ಪಟ್ಟಣವನ್ನು ವಶಮಾಡಿಕೊಂಡನು. ಇತ್ತ ಹೌ ಇವನ ಸೈನ್ಯವನ್ನು ಕೂಡಲು ಜನರಲ್ ಬರಗಾಯಿನ್ ಇವನು ಕನಡಾ ಪ್ರಾಂತದಿಂದ ದಕ್ಷಿಣದಕಡೆಗೆ ಹೊರಟನು. ಆದರೆ ಅವನಿಗೆ ಯಶವು ಬರಲಿಲ್ಲ. ೧೭೭೭ರ ಅಕ್ಟೋಬರ ತಿಂಗಳಲ್ಲಿ ಅವನು ಅಮೇರಿಕನ್ ಸೇನಾಪತಿಯಾದ ಗೇಟ್ಸ ಇವನಿಗೆ ಸಾರಾಟೋಗಾ ಎಂಬಲ್ಲಿ ಶರಣುಹೊಗಬೇಕಾಯ್ತು. ಈ ವಿಜಯದಿಂದ ಯುದ್ಧದ ಸ್ವರೂಪವು ಬದಲಾಯಿತು. ಇಂಗ್ಲಿಶ್ ಸೈನ್ಯವು ಸೋತುದನ್ನು ಕಂಡು ಫ್ರಾನ್ಸು ವಸಾಹತುಗಳ ಸ್ವಾತಂತ್ರ್ಯವನ್ನು ಮಾನ್ಯ ಮಾಡಿತು ಮತ್ತು ಅವುಗಳಿಗೆ ಪ್ರತ್ಯಕ್ಷವಾಗಿ ಸಾಹಾಯ್ಯಮಾಡಲು ನಿಶ್ಚಯಿಸಿ ೧೭೭೮ರ ಫೆಬ್ರುವರಿಯಲ್ಲಿ ವಸಾಹತುಗಳೊಡನೆ ಒಪ್ಪಂದವನ್ನು ಮಾಡಿ ಇಂಗ್ಲಂಡಿನ ವಿರುದ್ಧವಾಗಿ ಯುದ್ಧವನ್ನು ಸಾರಿತು. ಈ ಒಪ್ಪಂದದಿಂದ ಫ್ರಾನ್ಸು ಫ್ರೆಂಚ ಹಡಗುಪಡೆಯನ್ನು ಸಿದ್ಧವಾಗಿಟ್ಟು ಇಂಗ್ಲಂಡಿನಿಂದ ಅಮೇರಿಕೆಯಲ್ಲಿಯ ಇಂಗ್ಲಿಶ್ ಸೈನ್ಯದ ಸಾಹಾಯ್ಯಕ್ಕೋಸುಗ ಬರುವ ದಂಡನ್ನು ತಡೆಯಲು ಒಪ್ಪಿಕೊಂಡಿತು, ಮತ್ತು ಶಸ್ತ್ರಾಸ್ತ್ರಗಳನ್ನು ಮತ್ತು ಮದ್ದುಗುಂಡುಗಳನ್ನು ವಸಾಹತುಗಳಿಗೆ

ಕೊಡಲು ನಿಶ್ಚಯಿಸಿತು. ಆ ಬಳಿಕ ೧೭೭೯ರಲ್ಲಿ ಸ್ಪೇನ ದೇಶವು ಮತ್ತು ೧೭೮೦ ರಲ್ಲಿ ಹಾಲಂಡ ದೇಶವು ಇಂಗ್ಲಂಡಿನ ವಿರುದ್ಧವಾಗಿ ಯುದ್ಧವನ್ನು ಸಾರಿದುವು.

ಇಂಗ್ಲಂಡಿನ ಸೈನ್ಯವು ಅಮೇರಿಕೆಯಲ್ಲಿ ಸೋಲುತ್ತಿರುವುದು ಮತ್ತು ವಸಾಹತುಗಳಿಗೆ ಫ್ರಾನ್ಸಿನ ಸಾಹಾಯ್ಯವು ದೊರೆಯುತ್ತಿರುವುದು ಎಂಬುದನ್ನು ಕಂಡು ವಸಾಹತುಗಳ ಸ್ವಾತಂತ್ರ್ಯಕ್ಕೆ ಮಾನ್ಯತೆಯನ್ನಿತ್ತು ಯುದ್ಧವನ್ನು ನಿಲ್ಲಿಸಬೇಕೆಂದು ಪಾರ್ಲಿಮೆಂಟಿನ ಮುಂದೆ ಸೂಚನೆ ತರಲ್ಪಟ್ಟಿತು. ಆದರೆ ಚಥಮನು (ಪಿಟ್) ಈ ಸೂಚನೆಯನ್ನು ವಿರೋಧಿಸಿದನು. "ವಸಾಹತುಗಳಿಗೆ ಬೇಕಾದುದನ್ನು ಕೊಡಬಹುದು, ಆದರೆ ಅವುಗಳನ್ನು ಬ್ರಿಟಿಶ್ ಸಾಮ್ರಾಜ್ಯದಿಂದ ಅಗಲಗೊಡಬಾರದು" ಎಂದು ಅವನು ಪಾರ್ಲಿಮೆಂಟಿನಲ್ಲಿ ಭಾಷಣ ಮಾಡುತ್ತಿರುವಾಗ ಮೂರ್ಛೆ ಬಂದು ಬಿದ್ದನು. ಮುಂದೆ ಕೆಲದಿನಗಳಲ್ಲಿ ಅವನು ಮಡಿದನು (೧೭೭೮).

ಫ್ರಾನ್ಸ್, ಸ್ಪೇನ, ಹಾಲಂಡ ಈ ರಾಷ್ಟ್ರಗಳು ಇಂಗ್ಲಂಡಿನ ವಿರುದ್ಧವಾಗಿ ವಸಾಹತುಗಳಿಗೆ ಸಾಹಾಯ್ಯಮಾಡಲು ನಿಶ್ಚಯಿಸಿದುದರಿಂದ ಪರಿಸ್ಥಿತಿ ಬಿಕ್ಕಟ್ಟಿನದ್ದಾಯಿತು. ಆದರೆ ಅಂತಹ ಪರಿಸ್ಥಿತಿಯಲ್ಲಿಯೂ ಇಂಗ್ಲಿಶ್ ಸೇನಾಪತಿಯಾದ **ಲಾರ್ಡ ಕಾರ್ನವಾಲಿಸನು** ವಸಾಹತುಗಳ ಸೇನಾಪತಿಯಾದ ಗೇಟ್ಸನನ್ನು **ಕಮ್‌ಡೇನ್** ಎಂಬಲ್ಲಿ ಸೋಲಿಸಿ ಕರೋಲಿನಾ ವಸಾಹತನ್ನು ಗೆದ್ದು ವಶದಲ್ಲಿ ತೆಗೆದುಕೊಂಡನು. ಆದರೆ ಮುಂದೆ ವರ್ಜಿನಿಯಾ ವಸಾಹತನ್ನು ಗೆಲ್ಲಲು ಪ್ರಯತ್ನಿಸುತ್ತಿದ್ದ **ಕಾರ್ನವಾಲಿಸನಿಗೆ** ಜಯವು ದೊರೆಯದೆ ಅವನು ೧೭೮೧ ಅಕ್ಟೋಬರದಲ್ಲಿ **ಯಾರ್ಕ ಟೌನಿನ** ಬಳಿಯಲ್ಲಿ ತನ್ನ ಎಲ್ಲ ಸೈನ್ಯದೊಡನೆ ವಸಾಹತುಗಳ ಮತ್ತು ಫ್ರೆಂಚರ ಸೈನ್ಯಕ್ಕೆ ಶರಣುಹೊಗಬೇಕಾಯಿತು.

**ಸಮುದ್ರದ ಮೇಲಿನ ಕಾಳೆಗಗಳು**—ಈ ಕಾಳೆಗಗಳು ಕೇವಲ ಅಮೇರಿಕೆಯ ಸಮುದ್ರದಲ್ಲಿಯಷ್ಟೇ ನಡೆಯಲಿಲ್ಲ. ಸ್ಪೆನಿಯರ್ಡರು ಮತ್ತು ಫ್ರೆಂಚಜನರು ಜಿಬ್ರಾಲ್ಟರ ಕೋಟೆಯನ್ನು ಇಂಗ್ಲಿಶರಿಂದ ತೆಗೆದುಕೊಳ್ಳಲು ಬಹಳವಾಗಿ ಪ್ರಯತ್ನಿಸಿದರು ಆದರೆ ಜನರಲ್ **ಏಲಿಯಟ್** ಎಂಬ ಸರದಾರನು ಆ ಕೋಟೆಯನ್ನು ಮೂರುವರೆ ವರ್ಷಗಳವರೆಗೆ ಕಾದಿ ರಕ್ಷಿಸಿದನು. ಸ್ಪೆನಿಯರ್ಡರು ಅದನ್ನು ತೆಗೆದುಕೊಳ್ಳುವ ಹವ್ಯಾಸವನ್ನು ಬಿಟ್ಟರು (೧೭೮೨). ಅದರಂತೆ ೧೭೮೨ರಲ್ಲಿ **ರಾಡ್ನಿ** ಎಂಬ ಹಡಗುಪಡೆಯ ಸೇನಾಪತಿ ವೆಸ್ಟ ಇಂಡೀಜ ನಡುಗಡ್ಡೆಗಳ ಬಳಿಯಲ್ಲಿ ಫ್ರೆಂಚ ಹಡಗುಪಡೆಯನ್ನು ಸೋಲಿಸಿದನು. ಹೀಗೆ ಸಮುದ್ರದ ಮೇಲೆ ಇಂಗ್ಲಿಶರಿಗೆ ಜಯವು ದೊರೆತರೂ ಅಮೇರಿಕೆಯಲ್ಲಿ ಸೋತುದರಿಂದ ಅವರು ವಸಾಹತುಗಳ ಸ್ವಾತಂತ್ರ್ಯವನ್ನು ಒಪ್ಪಬೇಕಾಯಿತು.




ಮಾತೃಭೂಮಿಯೊಡನೆ ಅಮೇರಿಕೆಯ ಉಪನಿವೇಶಗಳ ಯುದ್ಧವು.
(೧೭೭೫-೧೭೮೩)

**ವರ್ಸೇಲ್ಸಿನ ಒಪ್ಪಂದವು (೧೭೮೩)**—ಕೊನೆಗೆ ಫ್ರಾನ್ಸಿನಲ್ಲಿ ವರ್ಸೇಲ್ಸ್ ಎಂಬಲ್ಲಿ ಒಪ್ಪಂದವಾಗಿ ಯುದ್ಧವು ನಿಂತಿತು (೧೭೮೩). ಈ ಒಪ್ಪಂದದಿಂದ (೧) ಇಂಗ್ಲಂಡು ಅಮೇರಿಕನ್ ವಸಾಹತುಗಳ ಸ್ವಾತಂತ್ರ್ಯವನ್ನು ಒಪ್ಪಿಕೊಂಡಿತು. (೨) ಮಿನೋರ್ಕಾ ಮತ್ತು ಫ್ಲಾರಿಡಾ ಈ ಎರಡು ಸ್ಥಳಗಳು ಸ್ಪೇನಕ್ಕೆ ತಿರುಗಿ ಕೊಡಲ್ಪಟ್ಟುವು. ಮತ್ತು (೩) ಸೆನೆಗಲ್ ಪ್ರಾಂತವೂ ಗೋರಿ, ಟೊಬಗೊ ಈ ನಡುಗಡ್ಡೆಗಳೂ ಫ್ರಾನ್ಸಿಗೆ ತಿರುಗಿ ದೊರೆತುವು.

**ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ರಾಷ್ಟ್ರದ ಸ್ಥಾಪನೆ**—ಈ ಬಗೆಯಾಗಿ ಅಮೇರಿಕೆಯಲ್ಲಿಯ ಇಂಗ್ಲಂಡಿನ ವಸಾಹತುಗಳು ಮಾತೃಭೂಮಿಯಿಂದ ಅಗಲಿ ಸ್ವತಂತ್ರವಾಗಿ "ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು" ಎಂಬ ತಮ್ಮದೊಂದು ಲೋಕಸತ್ತಾತ್ಮಕ ರಾಜ್ಯವನ್ನು ಸ್ಥಾಪಿಸಿದುವು. ಇಂಗ್ಲಂಡಿನೊಡನೆ ಆದ ಯುದ್ಧದಲ್ಲಿ **ಜಾರ್ಜ ವಾಶಿಂಗ್ಟನನು** ವಸಾಹತುಗಳ ಸೇನಾಪತಿಯಾಗಿದ್ದನು. ಅವನ ವಿಷಯದಲ್ಲಿ ಎಲ್ಲರಿಗೂ ಪ್ರೇಮವೂ ಆದರವೂ ವಿಶ್ವಾಸವೂ ಇದ್ದುವು. ಆದುದರಿಂದ ಅವನನ್ನೆ ಅವು ತಮ್ಮ ಲೋಕಸತ್ತಾತ್ಮಕ ರಾಜ್ಯದ ಮೊದಲನೆಯ ಅಧ್ಯಕ್ಷನಾಗಿ ಆರಿಸಿದುವು. ಈ ರಾಜ್ಯವು ಸ್ಥಾಪಿಸಲ್ಪಟ್ಟ ಸಮಯದಲ್ಲಿ ಅದರಲ್ಲಿ ೧೩ ವಸಾಹತುಗಳು (ಸಂಸ್ಥಾನಗಳು) ಇದ್ದುವು, ಆದರೆ ಮುಂದೆ ಅಲಘನೀಜ ಪರ್ವತದ ಪಶ್ಚಿಮದ ಪ್ರದೇಶದಲ್ಲಿ ಮತ್ತೆ ಕೆಲವು ಸಂಸ್ಥಾನಗಳು ಸ್ಥಾಪಿಸಲ್ಪಟ್ಟು ಅವು ಈ ಸಂಸ್ಥಾನಗಳಲ್ಲಿ ಸೇರಿದುವು. ಈಗ ಆ ಲೋಕಸತ್ತಾತ್ಮಕ ರಾಜ್ಯದಲ್ಲಿ ೪೮ ಸಂಸ್ಥಾನಗಳುಂಟು.

**ವಸಾಹತುಗಳಲ್ಲಿಯ ರಾಜನಿಷ್ಠ ಜನರು**—ವಸಾಹತುಗಳು ಇಂಗ್ಲಂಡಿನಿಂದ ಅಗಲಬಾರದೆಂದು ಹೇಳುವ ಎಷ್ಟೋ ರಾಜನಿಷ್ಠ ಜನರು ವಸಾಹತುಗಳಲ್ಲಿದ್ದರು. ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಸ್ವತಂತ್ರ ರಾಷ್ಟ್ರವು ಆದ ಬಳಿಕ ಈ ಜನರು ವಸಾಹತುಗಳನ್ನು ಬಿಟ್ಟು ಇಂಗ್ಲಂಡಿನ ವರ್ಚಸ್ಸಿನ ಕೆಳಗಿದ್ದ ಕೆನಡಾ ವಸಾಹತಿಗೆ ಇರಲು ಹೋದರು.

**ಗಾರ್ಡನನ ಬಂಡು (೧೭೮೦)**—೧೭೭೮ರಲ್ಲಿ ಪಾರ್ಲಿಮೆಂಟು ಒಂದು ಕಾಯದೆಯನ್ನು ಮಾಡಿ ರೋಮನ್ ಕಥಲಿಕ್ ಜನರ ವಿರುದ್ಧವಾಗಿದ್ದ ಕೆಲವು ಉಗ್ರವಾದ ಕಾಯದೆಗಳನ್ನು ರದ್ದುಗೊಳಿಸಿತು. ಈ ಕಾಯದೆಗಳು ರದ್ದಾದುದರಿಂದ ರೋಮನ್ ಕಥಲಿಕ್ ಜನರಿಗೆ ಭೂಮಿಗಳನ್ನು ಕೊಳ್ಳುವುದು, ತಮ್ಮ ಪಂಥದ ನಿಯಮಗಳಂತೆ ಪ್ರಾರ್ಥನೆ ಮಾಡುವುದು ಮೊದಲಾದುವುಗಳಿಗೆ ಇದ್ದ ಪ್ರತಿಬಂಧವು ದೂರಾಯಿತು. ಆದರೆ ರೋಮನ್ ಕಥಲಿಕರಿಗೆ ಈ ಅನು

ಕೂಲತೆಗಳು ದೊರೆತುದರಿಂದ ಇಂಗ್ಲಂಡ್ ಮತ್ತು ಸ್ಕಾಟಲಂಡ್‌ಗಳಲ್ಲಿ ಈ ಹೊಸ ಕಾಯದೆಯ ವಿರುದ್ಧವಾಗಿ ಆಂದೋಲನವು ಹುಟ್ಟಿತು, ಮತ್ತು ಅಲ್ಲಲ್ಲಿ ದಂಗೆಗಳಾಗ ತೊಡಗಿದುವು. ಲಂಡನಿನಲ್ಲಿಯೆ **ಜಾರ್ಜ ಗಾರ್ಡನ್** ಎಂಬ ಪಾರ್ಲಿಮೆಂಟಿನ ಸದಸ್ಯನ ನೇತೃತ್ವದಲ್ಲಿ ಸುಮಾರು ೬೦ ಸಾವಿರ ಜನರು ನೆರೆದರು. ಇವರು ಅಲ್ಲಲ್ಲಿ ದಂಗೆಗಳನ್ನು ಮಾಡಿದರು, ಮತ್ತು ಕಥಲಿಕರ ದೇವಾಲಯಗಳನ್ನೂ ಮನೆಗಳನ್ನೂ ಅಂಗಡಿಗಳನ್ನೂ ಸುಟ್ಟರು ಮತ್ತು ಬೆಂಕ್ ಆಫ್ ಇಂಗ್ಲಂಡಿನ ಮೇಲೆಯೂ ದಾಳಿಯನ್ನಿಕ್ಕಿದರು. ಲಂಡನಿನಲ್ಲಿಯೆ ಹುಟ್ಟಿದ ಈ ಬಂಡನ್ನು ಮುರಿಯಲು ಸರಕಾರವು ಉಗ್ರವಾದ ಉಪಾಯವನ್ನು ಯೋಜಿಸಬೇಕಾಯಿತು. ಬಂಡುಗಾರರ ಮೇಲೆ ಗುಂಡುಗಳು ಹಾರಿಸಲ್ಪಟ್ಟುವು. ೨೦೦-೩೫೦ ಜನರು ಮರಣಕ್ಕೆ ಗುರಿಯಾದ ಬಳಿಕ ಬಂಡು ಮುರಿಯಿತು. ಜಾರ್ಜ ಗಾರ್ಡನನು ಸೆರೆಯಲ್ಲಿಡಲ್ಪಟ್ಟನು ಮತ್ತು ಅವನ ಅನುಯಾಯಿಗಳು ಉಗ್ರವಾದ ಶಿಕ್ಷೆಗೆ ಗುರಿಮಾಡಲ್ಪಟ್ಟರು.

**ವಿಲಿಯಮ್ ಪಿಟ್ಟನು (ಕಿರಿಯನು) ಮುಖ್ಯ ಮಂತ್ರಿ** (೧೭೮೩-೧೮೦೧; ಮತ್ತು ೧೮೦೪-೧೮೦೬)—ವಿಲಿಯಮ್ ಪಿಟ್ಟನು (ಹಿರಿಯನು) ೧೭೭೮ರಲ್ಲಿ ಮರಣಹೊಂದಿದನು. ಆ ಬಳಿಕ ಜಾರ್ಜ ರಾಜನು ೧೭೮೩ರಲ್ಲಿ ಅವನ ಚಿಕ್ಕ ಮಗನಾದ **ವಿಲಿಯಮ್ ಪಿಟ್ಟನನ್ನು** (ಕಿರಿಯನು) ತನ್ನ ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು. ಪಿಟ್ಟನು ಆಗ ೨೪ ವರ್ಷದವನಾಗಿದ್ದನು. ಅವನು ಟೋರಿ ಪಕ್ಷದವನಾಗಿದ್ದು ಎರಡು ವರ್ಷಗಳ ಹಿಂದೆ ಪಾರ್ಲಿಮೆಂಟಿನ ಸದಸ್ಯನಾಗಿದ್ದನು. ಅವನು ಕುಶಾಗ್ರಬುದ್ಧಿಯವನೂ ಕರ್ತೃತ್ವಶಾಲಿಯೂ ಆದುದರಿಂದ ಚಿಕ್ಕ ವಯಸ್ಸಿನವನಾಗಿದ್ದರೂ ಅಲ್ಪ ಕಾಲದಲ್ಲಿಯೆ ಎಲ್ಲರ ಮೇಲೆ ತನ್ನ ವರ್ಚಸ್ಸನ್ನು ಕೂಡಿಸಿದ್ದನು. ಈ ಸಮಯದಲ್ಲಿ ಕಾಮನ್ಸ ಸಭೆಯಲ್ಲಿ ವ್ಹಿಗ್ ಪಕ್ಷದವರ ಬಹುಮತವಿದ್ದಿತು, ಮತ್ತು ಫಾಕ್ಸನಂತಹ ಉತ್ತಮ ವಾಗ್ಮಿಗಳು ಆ ಪಕ್ಷದ ಮುಂದಾಳುಗಳಾಗಿದ್ದರು. ಆದುದರಿಂದ ಆ ಪಕ್ಷದ ವಿರೋಧವನ್ನು ದುರ್ಲಕ್ಷಿಸಿ ರಾಜ್ಯಕಾರಭಾರವನ್ನು



ವಿಲಿಯಮ್ ಪಿಟ್ (ಕಿರಿಯನು)

ನಡೆಯಿಸುವುದು ಬಹು ಕಠಿಣವಾದ ಕೆಲಸವಾಗಿತ್ತು. ಕಾಮನ್ಸ ಸಭೆಯಲ್ಲಿ ತನ್ನ ಪಕ್ಷದ ಬಹುಮತವು ಇರದಿದ್ದರೂ ಲೋಕಮತವು ತನಗೆ ಅನುಕೂಲವಾಗಿತ್ತೆಂದು ಪಿಟ್ಟನು ಮನಗಂಡಿದ್ದನು. ಆದುದರಿಂದ ಅವನು ಪಾರ್ಲಿಮೆಂಟ ಸಭೆಯನ್ನು ವಿಸರ್ಜಿಸಿ ಹೊಸ ಚುನಾವಣೆಯನ್ನು ಮಾಡಬೇಕೆಂದು ಜಾರ್ಜ ರಾಜನಿಗೆ ಸೂಚಿಸಿದನು. ೧೭೮೪ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಗಿ ಅದರಲ್ಲಿ ಪಿಟ್ಟನ ಅಪೇಕ್ಷೆಯಂತೆ ಟೋರಿ ಪಕ್ಷದ ಬಹುಮತವಾಯಿತು.

**ಪಿಟ್ಟನ ನೀತಿಯೂ ಸುಧಾರಣೆಗಳೂ**— ಪಿಟ್ಟನ ನೀತಿಯೂ ಮತಗಳೂ ಉದಾರವಾಗಿದ್ದುವು. ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ವಿಷಯಗಳಲ್ಲಿ ಇಂಗ್ಲಂಡಿನಲ್ಲಿ ಸುಧಾರಣೆಯಾಗಬೇಕೆಂದು, ಐರ್ಲಂಡಿನೊಡನೆ ಮಿತ್ರತ್ವವಿರಬೇಕೆಂದು ಮತ್ತು ಹಿಂದುಸ್ಥಾನದ ರಾಜ್ಯಕಾರಭಾರದಲ್ಲಿ ಚೆನ್ನಾದ ವ್ಯವಸ್ಥೆಯನ್ನು ಉಂಟುಮಾಡಬೇಕೆಂದು ಅವನಿಗೆ ಎನಿಸುತ್ತಿತ್ತು. ಈ ಎಲ್ಲ ವಿಷಯಗಳಲ್ಲಿ ಅವನು ಅನೇಕ ಸುಧಾರಣೆಗಳನ್ನು ಮಾಡಿದನು. ೧೭೯೩ರಿಂದ ಇಂಗ್ಲಂಡಿಗೆ ಫ್ರಾನ್ಸಿನೊಡನೆ ಯುದ್ಧಮಾಡಬೇಕಾದುದರಿಂದ ಅವನು ತನ್ನ ಎಲ್ಲ ಲಕ್ಷ್ಯವನ್ನು ಅತ್ತಕಡೆಗೆ ಪೂರೈಸಬೇಕಾಯಿತು. ಆದುದರಿಂದ ಇನ್ನೂ ಎಷ್ಟೋ ಸುಧಾರಣೆಗಳನ್ನು ಮಾಡುವುದು ಹಾಗೆ ಉಳಿಯಿತು.

**ಹಿಂದುಸ್ಥಾನದ ವಿಷಯದಲ್ಲಿ ಪಿಟ್ಟನು ಕೈಕೊಂಡ ನೀತಿ**— ಕ್ಲೈವ ಮತ್ತು ವಾರನ್ ಹೆಸ್ಟಿಂಗ್ಸ ಇವರ ಪ್ರಯತ್ನಗಳಿಂದ ಹಿಂದುಸ್ಥಾನದಲ್ಲಿಯ ಎಷ್ಟೋ ಪ್ರದೇಶವು ಇಂಗ್ಲಿಶರ ವರ್ಚಸ್ಸಿಗೊಳಗಾಗಿತ್ತು. ಲಾರ್ಡ ನಾರ್ಥನು ಮುಖ್ಯ ಮಂತ್ರಿಯಾಗಿರುವಾಗ ೧೭೭೩ರಲ್ಲಿ ಹಿಂದುಸ್ಥಾನದ ರಾಜ್ಯವ್ಯವಸ್ಥೆಗೋಸುಗ ರೆಗ್ಯುಲೇಟಿಂಗ ಅಕ್ಟ ಎಂಬ ಕಾಯದೆಯನ್ನು ಪಾರ್ಲಿಮೆಂಟು ಮಾಡಿತ್ತು. ಈ ಕಾಯದೆಯಿಂದ ಬಂಗಾಲದ ಗವರ್ನರನು ಗವರ್ನರ ಜನರಲನಾಗಿ ನಿಯೋಜಿಸಲ್ಪಟ್ಟು ಮುಂಬಯಿ ಮತ್ತು ಮದ್ರಾಸ ಇವುಗಳ ಗವರ್ನರರು ಅವನಿಗೆ ಅಧೀನರಾಗಿರಬೇಕೆಂದು ನಿರ್ಣಯಿಸಲ್ಪಟ್ಟಿತು. ಆದರೆ ಹಿಂದುಸ್ಥಾನದ ಎಲ್ಲ ರಾಜ್ಯಕಾರಭಾರವು ಈಸ್ಟ ಇಂಡಿಯಾ ಕಂಪನಿಯ ಬೋರ್ಡ ಆಫ್ ಡಾಯರೆಕ್ಟರ್ಸ ಇವರ ತಂತ್ರದಿಂದ ನಡೆಯುತ್ತಿದ್ದಿತು. ವಾರನ್ ಹೆಸ್ಟಿಂಗ್ಸನು ಗವರ್ನರ ಜನರಲನಾಗಿರುವಾಗ ಹಿಂದುಸ್ಥಾನದ ರಾಜ್ಯಕಾರಭಾರದ ವಿಷಯದಲ್ಲಿ ಎಷ್ಟೋ ದೂರುಗಳು ಬರತೊಡಗಿದುವು. ಹಿಂದುಸ್ಥಾನದೊಡನೆ ವ್ಯಾಪಾರವು ಬಲು ದೊಡ್ಡ ಪ್ರಮಾಣದಲ್ಲಿ ನಡೆದಿದ್ದಿತು. ಉತ್ತರ ಅಮೇರಿಕೆಯಲ್ಲಿಯ ಇಂಗ್ಲಿಶ ವಸಾಹತುಗಳು ಸ್ವತಂತ್ರವಾದ ಬಳಿಕ (೧೭೮೩) ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಗ್ರೇಟ್

ಬ್ರಿಟನಿನ ಹೊರಗಿನ ಬಹುದೊಡ್ಡ ಪ್ರದೇಶವೆಂದರೆ ಹಿಂದುಸ್ಥಾನದಲ್ಲಿಯ ಪ್ರದೇಶವೆ ಆಗಿದ್ದಿತು. ಆದುದರಿಂದ ಸ್ವಾಭಾವಿಕವಾಗಿ ಹಿಂದುಸ್ಥಾನದ ಕಡೆಗೆ ಇಂಗ್ಲಂಡಿನ ಪಾರ್ಲಿಮೆಂಟಿನ ಲಕ್ಷ್ಯವು ಹೊರಳಿತು. ಅಲ್ಲಿಯ ರಾಜ್ಯಕಾರಭಾರದ ಮೇಲೆ ಇಂಗ್ಲಂಡಿನ ಮಂತ್ರಿಮಂಡಳದ ನಿಯಂತ್ರಣವಿರಬೇಕೆಂದು ಪಿಟ್ಟನ ಸೂಚನೆಯಂತೆ ಪಾರ್ಲಿಮೆಂಟು ಒಂದು ಕಾಯದೆಯನ್ನು ಮಾಡಿತು (೧೭೮೪). ಅದಕ್ಕೆ **"ಪಿಟ್ಟನ ಇಂಡಿಯಾ ಬಿಲ್"** ಎಂದು ಹೆಸರು. ಈ ಕಾಯದೆಯಿಂದ ಈಸ್ಟ ಇಂಡಿಯಾ ಕಂಪನಿಯ ವ್ಯಾಪಾರದಲ್ಲಿ ಕೈಯಿಕ್ಕದೆ ಕಂಪನಿಯ ರಾಜ್ಯಕಾರಭಾರದ ಮೇಲೆ ನಿಯಂತ್ರಣವನ್ನಿಡಲು **"ಬೋರ್ಡ ಆಫ್ ಕಂಟ್ರೋಲ್"** ಎಂಬ ಆರು ಸದಸ್ಯರ ಮಂಡಳವೊಂದು ಸ್ಥಾಪಿಸಲ್ಪಟ್ಟಿತು. ೧೮೫೮ರ ವರೆಗೆ ಈ ಮಂಡಳವೆ ಹಿಂದುಸ್ಥಾನದ ರಾಜಕೀಯ ಕಾರಭಾರದ ಮೇಲೆ ನಿಯಂತ್ರಣವನ್ನು ಇಡುತ್ತಿತ್ತು.

ಹಿಂದುಸ್ಥಾನದ ಮೊದಲನೆಯ ಗವರ್ನರ ಜನರಲನಾದ ವಾರನ್ ಹೆಸ್ಟಿಂಗ್ಸನು ತಿರುಗಿ ಬಂದ ಬಳಿಕ ಕಾಮನ್ಸ ಸಭೆಯಲ್ಲಿಯ ಕೆಲವು ಸದಸ್ಯರು ಅವನು ಹಿಂದುಸ್ಥಾನದಲ್ಲಿ ಒತ್ತಾಯದ ಮತ್ತು ಕಾಯದೆಗೆ ವಿರುದ್ಧವಾದ ಕೃತ್ಯಗಳನ್ನು ಮಾಡಿದನೆಂಬ ಆರೋಪವನ್ನು ಅವನ ಮೇಲೆ ಹೊರಿಸಿ, ಲಾರ್ಡ್ಸ ಸಭೆಯಲ್ಲಿ ಅವನ ವಿಚಾರಣೆಯನ್ನು (Impeachment) ಪ್ರಾರಂಭಿಸಿದರು. ೯ ವರ್ಷಗಳ ವರೆಗೆ (೧೭೮೬—೯೫) ಈ ವಿಚಾರಣೆ ನಡೆಯಿತು. ಕೊನೆಗೆ ಅವನು ನಿರ್ದೋಷಿ ಎಂದು ನಿರ್ಣಯಿಸಲ್ಪಟ್ಟಿತು.

**ಐರ್ಲಂಡಿನ ವಿಷಯದಲ್ಲಿ ಪಿಟ್ಟನ ನೀತಿ—**೧೬೮೯ರಲ್ಲಿ ಐರ್ಲಂಡಿನಲ್ಲಿಯ ಬಂಡು ಮುರಿದ ಬಳಿಕ ಅಲ್ಲಿಯ ಸ್ಥಿತಿ ಬಿಕ್ಕಟ್ಟಿನದಾಗುತ್ತ ಹೋಯಿತು. ಐರ್ಲಂಡಿನಲ್ಲಿಯ ಬಹುಜನ ಸಮಾಜವು ರೋಮನ್ ಕಥಲಿಕ್ ಪಂಥದ ಅನುಯಾಯಿಯಾಗಿದ್ದರು. ಆ ಜನರಿಗೆ ಐರಿಶ್ ಪಾರ್ಲಿಮೆಂಟಿನ ಸದಸ್ಯರಾಗಲು ಪ್ರತಿಬಂಧವಿದ್ದಿತು. ಇಷ್ಟೇ ಅಲ್ಲ, ಚುನಾವಣೆಯ ಕಾಲದಲ್ಲಿ ಮತವನ್ನು ಕೊಡಲೂ ಅವರಿಗೆ ಅಧಿಕಾರವಿರಲಿಲ್ಲ. ಆದುದರಿಂದ ಅಲ್ಲಿಯ ಪಾರ್ಲಿಮೆಂಟಿನ ಸದಸ್ಯರೆಲ್ಲರು ಪ್ರಾಟೆಸ್ಟಂಟ ಪಂಥದವರಾಗಿದ್ದು, ಅಲ್ಪ ಸಂಖ್ಯಾಕರಾದ ಪ್ರಾಟೆಸ್ಟಂಟ ಪಂಥದವರಿಂದಲೆ ಆರಿಸಲ್ಪಡುತ್ತಿದ್ದರು. ಪ್ರಾಟೆಸ್ಟಂಟ ಪಂಥದ ಈ ಐರಿಶ್ ಪಾರ್ಲಿಮೆಂಟು ರೋಮನ್ ಕಥಲಿಕ್ ಪಂಥದ ಐರಿಶ್ ಜನರ ವಿರುದ್ಧವಾಗಿ ಅನೇಕ ಉಗ್ರವಾದ ಕಾಯದೆಗಳನ್ನು ಮಾಡಿತು. ರಾಜ್ಯಕಾರಭಾರದಲ್ಲಿಯ ಮಹತ್ವದ ಅಧಿಕಾರ ಸ್ಥಳಗಳಲ್ಲಿ ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಜನರು ನಿಯೋ

ಜಿಸಲ್ಪಡುತ್ತಿದ್ದರು. ಐರಿಶ್ ರೋಮನ್ ಕೆಥಲಿಕ್ ಜನರ ಆರ್ಥಿಕ ಸ್ಥಿತಿ ಬಹಳವಾಗಿ ಕೆಟ್ಟಿತ್ತು. ಅಲ್ಲಿಯ ಬಹುಶಃ ಎಲ್ಲ ಭೂಮಿಗಳು ಇಂಗ್ಲಿಶ್ ಜನರ ವಶದಲ್ಲಿದ್ದುವು. ಭೂಮಿಗಳ ಒಡೆಯರಾದ ಈ ಇಂಗ್ಲಿಶರಲ್ಲಿ ಅನೇಕರು ಇಂಗ್ಲಂಡಿನಲ್ಲಿ ಇರುತ್ತಿದ್ದು ಐರಿಶ್ ಒಕ್ಕಲಿಗರಿಂದ ಲಾವಣಿಯ ರೂಪವಾಗಿ ಬಹಳ ಹಣವನ್ನು ತೆಗೆದುಕೊಳ್ಳುತ್ತಿದ್ದರು. ಅಲ್ಲಿಯ ಬಹುಜನ ಸಮಾಜವು ರೋಮನ ಕೆಥಲಿಕ್ ಪಂಥದ ಅನುಯಾಯಿಯಾಗಿದ್ದರೂ ಪ್ರಾಟೆಸ್ಟಂಟ ಪಂಥದ ಚರ್ಚಿನ ವ್ಯವಸ್ಥೆಗೋಸುಗ "ಥೈಥ" ಎಂಬ ಕರವನ್ನು ಅದು ಕೊಡಬೇಕಾಗುತ್ತಿದ್ದಿತು. ಇಂಗ್ಲಂಡಿನ ಉದ್ಯೋಗ-ವ್ಯವಸಾಯಗಳು ಬೆಳೆಯಬೇಕೆಂದು ಇಂಗ್ಲಂಡಿನ ಪಾರ್ಲಿಮೆಂಟು ಐರ್ಲಂಡಿನ ಮೇಲೆ ಅನೇಕ ನಿರ್ಬಂಧಗಳನ್ನು ಹಾಕಿದ್ದಿತು. ಇದು ಐರ್ಲಂಡಿನಲ್ಲಿಯ ಪ್ರಾಟೆಸ್ಟಂಟ ಪಂಥದವರಿಗೂ ಮಾನ್ಯವಾಗಿರಲಿಲ್ಲ. ಆದರೆ ಪಾಯನಿಂಗ್ಸನ ಕಾಯದೆಯಂತೆ ಐರಿಶ್ ಪಾರ್ಲಿಮೆಂಟಿಗೆ ಇಂಗ್ಲಂಡಿನ ಪ್ರಿವಿ ಕೌನ್ಸಿಲಿನ ಸಮ್ಮತಿ ಇಲ್ಲದೆ ಯಾವ ಕಾಯದೆಯನ್ನು ಮಾಡಲೂ ಅಧಿಕಾರವಿದ್ದಿಲ್ಲವಾದುದರಿಂದ ಈ ವಿಷಯದಲ್ಲಿ ಅದಕ್ಕೆ ಏನು ಮಾಡಲೂ ಬರುವಂತಿರಲಿಲ್ಲ. ಈ ಬಗೆಯಾಗಿ ಐರ್ಲಂಡಿನಲ್ಲಿ ರೋಮನ್ ಕಥಲಿಕ್ ಮತ್ತು ಪ್ರಾಟೆಸ್ಟಂಟ ಈ ಎರಡೂ ಪಕ್ಷಗಳ ಜನರಲ್ಲಿ ಅಸಂತೋಷವು ಹಬ್ಬಿತು. ಐರ್ಲಂಡಿನಲ್ಲಿಯ ಸ್ಥಿತಿಯನ್ನು ಸುಧಾರಿಸಬೇಕೆಂದು **ಹೆನ್ರಿ ಗ್ರಟನ್** ಎಂಬ ಪ್ರಾಟೆಸ್ಟಂಟ ಐರಿಶ್ ಪುರುಷನು ಆಂದೋಲನವನ್ನು ಆರಂಭಿಸಿದನು. ಅದೇ ಸಮಯದಲ್ಲಿ ಇಂಗ್ಲಂಡ್ ಮತ್ತು ಅಮೇರಿಕೆಯ ವಸಾಹತುಗಳ ನಡುವೆ ಯುದ್ಧವು ಆರಂಭವಾಗಿದ್ದುದರಿಂದ ಐರ್ಲಂಡಿನ ವಿಷಯದಲ್ಲಿ ಸಾಮೋಪಚಾರದ ನೀತಿ ಸ್ವೀಕರಿಸಲ್ಪಟ್ಟು ಕೆಲವು ಸುಧಾರಣೆಗಳು ಮಾಡಲ್ಪಟ್ಟುವು. ಐರ್ಲಂಡಿನ ಉದ್ಯೋಗ-ವ್ಯವಸಾಯಗಳ ಮೇಲಿದ್ದ ನಿರ್ಬಂಧಗಳು ದೂರಮಾಡಲ್ಪಟ್ಟುವು. ಪಾಯನಿಂಗ್ಸ ಕಾಯ್ದೆ ರದ್ದುಗೊಳಿಸಲ್ಪಟ್ಟಿತು, ಮತ್ತು ಐರಿಶ್ ಪಾರ್ಲಿಮೆಂಟಿಗೆ ಐರ್ಲಂಡಿನ ಅಂತಃಸ್ಥ ಕಾರಭಾರದ ವಿಷಯದಲ್ಲಿ ಕಾಯ್ದೆಗಳನ್ನು ಮಾಡಲು ಅಧಿಕಾರವು ಕೊಡಲ್ಪಟ್ಟಿತು (೧೭೮೨). ಆದರೆ ಈ ಸುಧಾರಣೆಗಳಿಂದ ಐರ್ಲಂಡದಲ್ಲಿಯ ಪ್ರಾಟೆಸ್ಟಂಟ ಪಂಥದವರ ಸಮಾಧಾನವಾದರೂ ಅಲ್ಲಿಯ ರೋಮನ್ ಕಥಲಿಕ್ ಪಂಥದ ಬಹುಜನ ಸಮಾಜದ ಅಸಂತೋಷವು ಇಲ್ಲದಾಗಲಿಲ್ಲ. ೧೭೮೯ರಲ್ಲಿ ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾದಬಳಿಕ ಐರ್ಲಂಡಿನಲ್ಲಿ ಕ್ರಾಂತಿಕಾರಕ ವಿಚಾರಗಳು ಹಬ್ಬಲಾರಂಭಿಸಿದುವು. ರೋಮನ್ ಕಥಲಿಕ್ ಜನರ ಮೇಲೆ ಇದ್ದ ನಿರ್ಬಂಧಗಳೆಲ್ಲವೂ ದೂರವಾಗಬೇಕೆಂಬ ಉದ್ದೇಶದಿಂದ **ವುಲ್ಫ ಟೋನ** ಎಂಬವನು "ಯುನೈಟೆಡ್

**ಐರಿಶ್ ಮೆನ್"** (ಸಂಘಟಿತ ಐರಿಶ್ ಪ್ರಜೆಗಳು) ಎಂಬ ಸಂಘವನ್ನು ಸ್ಥಾಪಿಸಿದನು (೧೭೯೧). ಈ ಸಂಘವು ಅಲ್ಪಕಾಲದಲ್ಲಿ ಲೋಕಪ್ರಿಯವಾಯಿತು ಮತ್ತು ಅದರ ಸದಸ್ಯರ ಸಂಖ್ಯೆಯೂ ಅಲ್ಪಕಾಲದಲ್ಲಿಯೆ ಹೆಚ್ಚಿತು. ಇದನ್ನು ಕಂಡು ಐರ್ಲಂಡಿನಲ್ಲಿ ಕ್ರಾಂತಿಕಾರಕ ವಿಚಾರಗಳು ಹಬ್ಬಬಾರದೆಂದೂ ಅಲ್ಲಿಯ ಜನರನ್ನು ತನ್ನ ಕಡೆಗೆ ಒಲಿಸಿಕೊಳ್ಳಬೇಕೆಂದೂ ಪಿಟ್ಟನ ಸೂಚನೆಯಂತೆ ಐರಿಶ್ ಪಾರ್ಲಿಮೆಂಟು ಅಲ್ಲಿಯ ರೋಮನ್ ಕಥಲಿಕ್ ಜನರಿಗೆ ಪಾರ್ಲಿಮೆಂಟಿನ ಚುನಾವಣಿಯಲ್ಲಿ ಮತವನ್ನು ಕೊಡಲು ಅಧಿಕಾರವನ್ನಿತ್ತಿತು (೧೭೯೩). ಆದರೆ ರೋಮನ್ ಕಥಲಿಕರಿಗೆ ಐರಿಶ್ ಪಾರ್ಲಿಮೆಂಟಿನ ಸದಸ್ಯರಾಗಲು ಬರುತ್ತಿದ್ದಿಲ್ಲವಾದುದರಿಂದ ಅವರಿಗೆ ಈ ಮತಾಧಿಕಾರದಿಂದ ಸಮಾಧಾನವಾಗಲಿಲ್ಲ. ಅವರಲ್ಲಿ ಅಸಂತೋಷವು ಹೆಚ್ಚುತ್ತ ಹೋಯಿತು, ಮತ್ತು "ಯುನೈಟೆಡ್ ಐರಿಶ್ ಮೆನ್" ಸಂಘವು ಒಂದು ಗುಪ್ತ ಅರಾಜಕ ಮಂಡಳವಾಗಿ ರೂಪಾಂತರವನ್ನು ಹೊಂದಿತು. ಗ್ರೇಟ್ ಬ್ರಿಟನಿನ ಸಂಬಂಧವನ್ನು ಹರಿದೊಗೆದು ಐರ್ಲಂಡಿನಲ್ಲಿ ಸ್ವತಂತ್ರ ಲೋಕಸತ್ತಾಕ ರಾಜ್ಯವನ್ನು ಸ್ಥಾಪಿಸಬೇಕೆಂಬ ಉದ್ದೇಶವು ಈ ಗುಪ್ತ ಸಂಘದವರದಿದ್ದಿತು. ಈ ಸಂಘದವರು ಫ್ರಾನ್ಸಿನೊಡನೆ ಒಳಸಂಚನ್ನು ರಚಿಸಿ ೧೭೯೮ರಲ್ಲಿ ಬಂಡನ್ನು ಹೂಡಿದರು. ಈ ಬಂಡಿನಲ್ಲಿ ಅನೇಕ ಜನರು ಕೂಡಿದರು. ಆದರೆ **ವ್ಹಿನೇಗಾರ ಹಿಲ್** ಎಂಬಲ್ಲಿ ಬಂಡುಗಾರರು ಸೋಲಿಸಲ್ಪಟ್ಟರು. ಈ ಬಗೆಯಾಗಿ ಬಂಡು ಮುರಿಯಿತು.

**ಐರಿಶ್ ಮತ್ತು ಬ್ರಿಟಿಶ್ ಪಾರ್ಲಿಮೆಂಟುಗಳ ಏಕೀಕರಣವು (೧೮೦೦)**— ಐರ್ಲಂಡಿನಲ್ಲಿಯ ಈ ಬಂಡು ಮುರಿದ ಬಳಿಕ ಮತ್ತೆ ಅಲ್ಲಿ ಬಂಡುಗಳು ಆಗಬಾರದೆಂದು ಮತ್ತು ಇಂಗ್ಲಂಡ್ ಮತ್ತು ಐರ್ಲಂಡ್ ಇವುಗಳಲ್ಲಿ ಮಿತ್ರತ್ವವು ಉಳಿಯಬೇಕೆಂದು ಎರಡೂ ದೇಶಗಳ ಪಾರ್ಲಿಮೆಂಟುಗಳ ಏಕೀಕರಣವನ್ನು ಮಾಡುವುದು ವಿಹಿತವೆಂದು ಪಿಟ್ಟನ ಅಭಿಪ್ರಾಯವಾಯಿತು. ಆದರೆ ಐರ್ಲಂಡಿನಲ್ಲಿಯ ಪ್ರಾಟೆಸ್ಟಂಟ ಮತ್ತು ರೋಮನ್ ಕಥಲಿಕ್ ಈ ಎರಡೂ ಪಂಥಗಳ ಜನರು ಏಕೀಕರಣದ ತತ್ವಕ್ಕೆ ವಿರುದ್ಧವಾಗಿದ್ದರು. ಆಗ ಪಿಟ್ಟನು ಪ್ರಾಟೆಸ್ಟಂಟ ಪಂಥದವರಲ್ಲಿ ಕೆಲವರಿಗೆ ಲಾರ್ಡ ಪದವಿಯನ್ನು ಕೊಟ್ಟು ಸನ್ಮಾನದ ಸ್ಥಳಗಳ ಆಶೆಯನ್ನು ತೋರಿಸಿದನು, ಮತ್ತು ರೋಮನ್ ಕಥಲಿಕ್ ಜನರಿಗೆ ಅವರ ಮೇಲಿನ ಎಲ್ಲ ಧಾರ್ಮಿಕ ನಿರ್ಬಂಧಗಳು ದೂರಮಾಡಲ್ಪಡುವುವೆಂದೂ ಪಾರ್ಲಿಮೆಂಟಿನ ಸದಸ್ಯರಾಗಲು ಅವರಿಗೆ ಅಧಿಕಾರವು ಕೊಡಲ್ಪಡುವುದೆಂದೂ ಆಶೆತೋರಿಸಿದನು. ಆದುದರಿಂದ **ಬ್ರಿಟಿಶ್ ಮತ್ತು ಐರಿಶ್ ಪಾರ್ಲಿಮೆಂಟುಗಳ ಏಕೀ**

ಕರಣವಾಗಬೇಕೆಂದು ಎರಡೂ ಪಾರ್ಲಿಮೆಂಟುಗಳಲ್ಲಿ ಕಾಯದೆ ಪಾಸಾಯಿತು (೧೮೦೦). ಈ ಕಾಯದೆಯಿಂದ್ದ ಲಾರ್ಡ್ಸ ಸಭೆಯಲ್ಲಿ ನಾಲ್ವರು ಐರಿಶ್ ಬಿಶಪರು ಮತ್ತು ಐರ್ಲಂಡಿನಲ್ಲಿಯ ಲಾರ್ಡರಿಂದ ಆರಿಸಲ್ಪಟ್ಟ ೨೮ ಜನ ಲಾರ್ಡರು ಮತ್ತು ಕಾಮನ್ಸ ಸಭೆಯಲ್ಲಿ ೧೦೦ ಸದಸ್ಯರು ಐರ್ಲಂಡಿನಿಂದ ಬರಲಾರಂಭಿಸಿದರು. ಐರ್ಲಂಡ್ ಮತ್ತು ಇಂಗ್ಲಂಡ್ ಈ ಎರಡೂ ದೇಶಗಳಲ್ಲಿ ಅನಿರ್ಬಂಧ ವ್ಯಾಪಾರವು ಪ್ರಾರಂಭವಾಯಿತು.

ಐರ್ಲಂಡಿನ ರೋಮನ್ ಕಥಲಿಕ್ ಜನರ ಮೇಲಿನ ಧಾರ್ಮಿಕ ನಿರ್ಬಂಧ ಗಳೆಲ್ಲವೂ ದೂರವಾಗಿ ಪಾರ್ಲಿಮೆಂಟಿನ ಸದಸ್ಯರಾಗಲು ಅವರಿಗೆ ಅಧಿಕಾರವು ದೊರೆಯಬಹುದೆಂದು ಪಿಟ್ಟನು ಹೇಳಿದ್ದರೂ ತನ್ನ ವಚನವನ್ನು ಪೂರ್ಣಮಾಡಲು ಅವನಿಗೆ ಶಕ್ಯವಾಗಲಿಲ್ಲ. ಈ ಮಾತಿಗೆ ಅಪ್ಪಣೆಯನ್ನಿತ್ತರೆ ರಾಜ್ಯಾರೋಹಣದ ಸಮಯದ್ದಲ್ಲಿ ತಾನು ಮಾಡಿದ ಶಪಥದ ವಿರುದ್ಧವಾಗಿ ನಡೆದಂತಾಗುವುದೆಂದು ಬಗೆದು ಜಾರ್ಜ ರಾಜನು ಪಿಟ್ಟನ ಈ ಸೂಚನೆಗೆ ವಿರೋಧವನ್ನು ತಳೆದುದರಿಂದ ಪಿಟ್ಟನು ೧೮೦೧ರಲ್ಲಿ ಅಧಿಕಾರ ತ್ಯಾಗವನ್ನು ಮಾಡಿದ್ದನು. ಮುಂದೆ ೨೮ ವರ್ಷ ಗಳ ತರುವಾಯದಲ್ಲಿ ೧೮೨೯ರಲ್ಲಿ ರೋಮನ್ ಕಥಲಿಕ್ ಜನರ ಮೇಲಿನ ನಿರ್ಬಂಧಗಳೆಲ್ಲವೂ ದೂರಮಾಡಲ್ಪಟ್ಟುವು.

**ಪಿಟ್ಟನ ಆರ್ಥಿಕ ಮತ್ತು ವ್ಯಾಪಾರ ವಿಷಯಕ ಸುಧಾರಣೆಗಳು—** ಸಪ್ತ ವಾರ್ಷಿಕ ಯುದ್ಧದಿಂದಲೂ ಅಮೇರಿಕನ್ ವಸಾಹತುಗಳೊಡನೆ ನಡೆದ ಯುದ್ಧದಿಂದಲೂ ಇಂಗ್ಲಂಡಿನ ರಾಷ್ಟ್ರೀಯ ಸಾಲವು ಬೆಳೆದು ಅದು ೨೪ ಕೋಟಿ ಪೌಂಡುಗಳಾಗಿತ್ತು. ಅದರಂತೆಯೆ ರಾಷ್ಟ್ರದ ಉತ್ಪನ್ನಕ್ಕಿಂತ ವೆಚ್ಚವು ಹೆಚ್ಚಾಗಿ ದ್ದಿತು, ಆದುದರಿಂದ ಆಯವ್ಯಯಗಳನ್ನು ಬಾಯಿಗೂಡಿಸುವುದಕ್ಕಾಗಿ ಸಾಲ ವನ್ನು ಮಾಡಬೇಕಾಗುತ್ತಿತ್ತು. ಆದರಿಂದ ರಾಷ್ಟ್ರೀಯ ಸಾಲವು ಬೆಳೆಯುತ್ತ ಹೋಯಿತು. ಇದನ್ನು ತಡೆಯಬೇಕೆಂದು ಪಿಟ್ಟನು ಎಷ್ಟೋ ನಿರುಪಯುಕ್ತವಾದ ಸ್ಥಳಗಳನ್ನು ಕಡಿಮೆಮಾಡಿ ರಾಜ್ಯಕಾರಭಾರದ ವೆಚ್ಚದಲ್ಲಿ ಬಹುಮಟ್ಟಿಗೆ ಮಿತ ವ್ಯಯವನ್ನು ಮಾಡಿದನು. ಇದರಿಂದ ಕೆಲವರ್ಷಗಳಲ್ಲಿಯೆ ಉತ್ಪನ್ನಕ್ಕಿಂತ ವೆಚ್ಚವು ಕಡಿಮೆಯಾಗಿ ಉಳಿದ ಹಣದಿಂದ ರಾಷ್ಟ್ರೀಯ ಸಾಲವನ್ನು ಸ್ವಲ್ಪ ಮಟ್ಟಿಗೆ ಕಡಿಮೆಮಾಡಲು ಅನುವಾಯಿತು.

ಆ ಕಾಲದಲ್ಲಿ ಆಯಾತ ಮಾಲುಗಳ ಮೇಲೆ ತೆಗೆದುಕೊಳ್ಳಲ್ಪಡುತ್ತಿರುವ ಸುಂಕದ ಪ್ರಮಾಣವು ಹೆಚ್ಚಾಗಿದ್ದಿತಾದುದರಿಂದ ಅದನ್ನು ತಪ್ಪಿಸಲು ಕಳ್ಳ ವ್ಯಾಪಾರವು (Smuggling) ನಡೆಯುತ್ತಿತ್ತು. ಇದನ್ನು ತಡೆಯಬೇಕೆಂದು

ಮತ್ತು ಬಡಜನರಿಗೆ ಈ ಸುಂಕದ ಭಾರವು ಕಡಿಮೆಯಾಗಬೇಕೆಂದು ಪಿಟ್ಟನು ಬಡಜನರಿಗೆ ಅವಶ್ಯವಾಗಿದ್ದ ಚಹ ಸಕ್ಕರೆಗಳಂತಹ ಎಷ್ಟೋ ವಸ್ತುಗಳ ಮೇಲಿನ ಆಯಾತದ ಸುಂಕವನ್ನು ಕಡಿಮೆಮಾಡಿದನು ಮತ್ತು ರೇಶಿಮೆ ಮೊದಲಾದ ವಿಲಾಸದ ವಸ್ತುಗಳ ಮೇಲಿನ ಕರವನ್ನು ಹೆಚ್ಚಿಸಿದನು. ೧೭೮೬ರಲ್ಲಿ ಅವನು ಫ್ರಾನ್ಸಿನೊಡನೆ ವ್ಯಾಪಾರದ ಒಪ್ಪಂದವನ್ನು ಮಾಡಿ ಫ್ರಾನ್ಸಿನಿಂದ ಬರುತ್ತಿರುವ ಕೆಲವು ವಸ್ತುಗಳ ಮೇಲಿನ ಸುಂಕವನ್ನು ಕಡಿಮೆಮಾಡಿ ಇಂಗ್ಲಿಶ್ ವಸ್ತುಗಳ ವ್ಯಾಪಾರಕ್ಕೆ ಫ್ರಾನ್ಸಿನಲ್ಲಿ ಅನುವು ದೊರೆವಂತೆ ಮಾಡಿದನು.

**ಅಡಾಮ್ ಸ್ಮಿಥ್**—ಅಡಾಮ್ ಸ್ಮಿಥನೆಂಬ ಸ್ಕಾಟಿಶ್ ಪ್ರೊಫೆಸರನೊಬ್ಬನು **"ರಾಷ್ಟ್ರಗಳ ಸಂಪತ್ತು"** (The Wealth of Nations) ಎಂಬ ಅರ್ಥಶಾಸ್ತ್ರದ ಪುಸ್ತಕವನ್ನು ೧೭೭೬ರಲ್ಲಿ ಬರೆದಿದ್ದನು. ಈ ಪುಸ್ತಕದಲ್ಲಿ ಅವನು ರಾಷ್ಟ್ರಗಳ ಸಂಪತ್ತೆಂದರೆ ಕೇವಲವಾಗಿ ಬೆಳ್ಳಿಬಂಗಾರಗಳಷ್ಟೇ ಆಗಿರದೆ ಅದರಲ್ಲಿ ಅನ್ನ ವಸ್ತ್ರ ಮತ್ತು ಇತರ ಅನೇಕ ಉಪಯುಕ್ತ ವಸ್ತುಗಳ ಸಮಾವೇಶವು ಆಗುವುದೆಂದು ಹೇಳಿದ್ದನು. ಆದುದರಿಂದ ಪ್ರತಿಯೊಂದು ರಾಷ್ಟ್ರವು ಆ ಕಾಲದ ತಿಳಿವಳಿಕೆಯಂತೆ ತನ್ನಲ್ಲಿಂದ ವಿಧವಿಧದ ವಸ್ತುಗಳು ಪರದೇಶಗಳಿಗೆ ಹೋಗಬೇಕು ಮತ್ತು ಅವುಗಳಿಗೆ ಪ್ರತಿಯಾಗಿ ಬೆಳ್ಳಿಬಂಗಾರಗಳಷ್ಟೇ ತನ್ನಲ್ಲಿ ಬರಬೇಕು ಎಂಬ ಅಭಿಪ್ರಾಯವನ್ನು ಇಟ್ಟುಕೊಳ್ಳದೆ ಎಲ್ಲ ಬಗೆಯ ವಸ್ತುಗಳನ್ನು ತನ್ನಲ್ಲಿ ಬರಗೊಡಬೇಕು, ಮತ್ತು ವ್ಯಾಪಾರದ ವಿಷಯದಲ್ಲಿದ್ದ ನಿರ್ಬಂಧಗಳನ್ನು ದೂರಮಾಡಬೇಕು. ಹೀಗೆ ಮಾಡಿದರೆ ಲಾಭವಾಗುವುದು ಎಂಬ ತತ್ವವನ್ನು ಅವನು ಪ್ರತಿಪಾದಿಸಿದನು. ಪಿಟ್ಟನ ಮನಸ್ಸಿನ ಮೇಲೆ ಈ ತತ್ವದ ಪರಿಣಾಮವು ಬಹಳವಾಗಿತ್ತು.

**ಔದ್ಯೋಗಿಕ ಕ್ರಾಂತಿ**—೩ನೆಯ ಜಾರ್ಜನ ಆಳ್ಕೆಯಲ್ಲಿ ಅನೇಕ ಹೊಸ ಶೋಧಗಳಾದುವು. **ಹಾಗ್ರೀವ್ಜ** (೧೭೬೪) ಮತ್ತು **ಆರ್ಕರೈಟ** (೧೭೭೯) ಎಂಬವರು ಅರಳಿಯಿಂದ ನೂಲನ್ನು ತೆಗೆವ ಯಂತ್ರಗಳನ್ನು ಶೋಧಿಸಿದರು, ಮತ್ತು **ಕಾರ್ಟರೈಟ** ಎಂಬವನು ನೀರಿನ ಅಥವಾ ಉಗಿಯ ಶಕ್ತಿಯಿಂದ ನಡೆವ ನೇಯುವ ಯಂತ್ರವನ್ನು ನಿರ್ಮಿಸಿದನು (೧೭೮೫). **ಜೇಮ್ಸ ವಟ್** ಎಂಬವನು ಉಗೆಯಿಂದ ನಡೆವ ಯಂತ್ರವನ್ನು ಶೋಧಿಸಿದನು (೧೭೬೯). ಅದೆ ಸಮಯದಲ್ಲಿ ಕಬ್ಬಿಣದ ಮತ್ತು ಕಲ್ಲಿದ್ದಲಿಯ ಕಣಿಗಳು ಇಂಗ್ಲಂಡಿನಲ್ಲಿ ಶೋಧಿಸಲ್ಪಟ್ಟುವು. ಉಗೆಯ ಇಂಜಿನುಗಳು ನೂಲುವ ಮತ್ತು ನೇಯುವ ಯಂತ್ರಗಳಿಗೆ ಉಪಯೋಗಿಸಲ್ಪಡತೊಡಗಿದುವು. ಆದುದರಿಂದ ಸ್ವಲ್ಪ ವೇಳೆಯಲ್ಲಿ ಮತ್ತು ಕಡಿಮೆ ವೆಚ್ಚದಿಂದ ಎಷ್ಟೋ ಮಾಲು ಹುಟ್ಟಲಾರಂಭಿಸಿತು. ಇದರಿಂದ ಮೊದಲಿ

ನಿಂದ ನಡೆಯುತ್ತ ಬಂದ ಚಿಕ್ಕ ಪುಟ್ಟ ಉದ್ಯೋಗ ವ್ಯವಸಾಯಗಳ ಬದಲು ಈಗ ಕಾರಖಾನೆಗಳೂ ಗಿರಣಿಗಳೂ ಪ್ರಾರಂಭವಾಗಿ ದೊಡ್ಡ ಪ್ರಮಾಣದಲ್ಲಿ ಪಕ್ಕಾಮಾಲು ಹುಟ್ಟತೊಡಗಿತು. ಮಾರ್ಗಗಳು ಮತ್ತು ಕಾಲುವೆಗಳು ಸುಧಾರಿಸಲ್ಪಟ್ಟು ಹುಟ್ಟಿದ ಮಾಲನ್ನು ದೇಶದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಯ್ಯಲು ಶಕ್ಯವಾಯಿತು. ಅದರಂತೆ ಯುರೋಪದ ಭಿನ್ನ ಭಿನ್ನ ರಾಷ್ಟ್ರಗಳೊಡನೆಯೂ ಹಿಂದುಸ್ಥಾನ ಮೊದಲಾದ ಪೌರ್ವಾತ್ಯ ದೇಶಗಳೊಡನೆಯೂ ದೊಡ್ಡ ಪ್ರಮಾಣದಲ್ಲಿ ವ್ಯಾಪಾರವು ಪ್ರಾರಂಭವಾಗಿ ಇಂಗ್ಲಂಡಿನ ಉದ್ಯೋಗ ವ್ಯವಸಾಯಗಳಿಗೆ ಉತ್ತೇಜನವು ದೊರೆತು ಇಂಗ್ಲಂಡಿನ ಸಂಪತ್ತು ಬೆಳೆಯತೊಡಗಿತು.

ಸೆರೆಮನೆಯಲ್ಲಿ ಸುಧಾರಣೆ—ಆಗಿನ ಕಾಲದ ಸೆರೆಮನೆಗಳು ಅಸ್ವಚ್ಛವೂ ಹವೆ ಇಲ್ಲದುವೂ ಆಗಿದ್ದುವಲ್ಲದೆ ಬಗೆಬಗೆಯ ರೋಗಗಳಿಗೆ ಆಗರಗಳೂ ಆಗಿದ್ದುವು. ಚಿಕ್ಕಪುಟ್ಟ ಅಪರಾಧಗಳಿಗೋಸುಗ ಅಪರಾಧಿಗಳು ಉಗ್ರವಾದ ಶಿಕ್ಷೆಗೆ ಗುರಿಮಾಡಲ್ಪಟ್ಟು ಕಾರಾಗೃಹಗಳಿಗೆ ಅಟ್ಟಲ್ಪಡುತ್ತಿದ್ದರು. ಈ ಕಾರಾಗೃಹಗಳಲ್ಲಿ ಇರುವುದರಿಂದ ಅವರ ಶೀಲವು ಸ್ವಲ್ಪವೂ ಸುಧಾರಿಸದೆ ತಿರುಗಿ ಬರುವುದರೊಳಗಾಗಿ ಅವರ ಮನುಷ್ಯತ್ವವು ಅಳಿದು ನೀಚಪ್ರವೃತ್ತಿ ದೃಢವಾಗುತ್ತಿತ್ತು. ಇದರಿಂದ ಅಪರಾಧಿಗಳ ಸಂಖ್ಯೆ ಬೆಳೆಯುತ್ತೇ ಹೋಗುತ್ತಿದ್ದಿತು. ಆದುದರಿಂದ ಸೆರೆಮನೆಗಳೆಂದರೆ ಅಪರಾಧಿಗಳ ಮೇಲಿನ ಸೇಡು ತೀರಿಸಿಕೊಳ್ಳುವ ಸ್ಥಳಗಳಾಗಿರದೆ ಅವರನ್ನು ಸುಧಾರಿಸಿ ಸನ್ಮಾರ್ಗಕ್ಕೆ ತರುವ ಸ್ಥಳಗಳಾಗಿವೆಯೆಂದು ತಿಳಿಯಲ್ಪಡಬೇಕು ಮತ್ತು ಅಲ್ಲಿ ಸತ್‌ಪ್ರವೃತ್ತಿಗೆ ಅನುಕೂಲವಾದ ವಾತಾವರಣವು ಕಲ್ಪಿಸಲ್ಪಡಬೇಕು ಎಂದು ಜಾನ್ ಹಾವರ್ಡನೆಂಬ ಉದಾರಾಂತಃಕರಣಿಯೊಬ್ಬನು ಬಹಳವಾಗಿ ಪ್ರಯತ್ನಿಸಿದನು. ಇದರಿಂದ ಸೆರೆಮನೆಯಲ್ಲಿ ಯೋಗ್ಯವಾದ ಸುಧಾರಣೆಗಳು ಆದುವು.

ಗುಲಾಮಗಿರಿಯನ್ನು ತಡೆಯಲು ಪ್ರಯತ್ನವು—೧೬ನೆಯ ಶತಕದಲ್ಲಿ ಆಫ್ರಿಕಾಖಂಡದಿಂದ ನೀಗ್ರೋ ಜನರನ್ನು ಹಿಡಿದು ತಂದು ಅವರನ್ನು ಅಮೇರಿಕೆಯಲ್ಲಿ ಮತ್ತು ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿ ಗುಲಾಮರಾಗಿ ಮಾರುವ ವ್ಯವಸಾಯವನ್ನು ಪೋರ್ತುಗೀಜರು ಮತ್ತು ಸ್ಪನಿಶ್ ಜನರು ಪ್ರಾರಂಭಿಸಿದ್ದರು. ಎಲಿಝಬೆಥ್ ರಾಣಿಯ ಆಳ್ಕೆಯಲ್ಲಿ ಇಂಗ್ಲಂಡಿನಲ್ಲಿಯ ಕೆಲವು ಜನರು ಈ ವ್ಯಾಪಾರದಲ್ಲಿ ತೊಡಗಿದರು. ಗುಲಾಮಗಿರಿಯ ಪದ್ಧತಿ ಅಯೋಗ್ಯವಾದುದೆಂದು ಆ ಕಾಲದಲ್ಲಿಯ ಜನರು ತಿಳಿದಿರಲಿಲ್ಲ. ಆದರೆ ಮುಂದೆ ಮುಂದೆ ಅದು ಅಯೋಗ್ಯವೆಂಬ ಭಾವನೆ ಜನರಲ್ಲಿ ಹುಟ್ಟತೊಡಗಿತು. ಗುಲಾಮರ ವ್ಯಾಪಾರ

ವನ್ನು ಮತ್ತು ಗುಲಾಮಗಿರಿಯ ಪದ್ಧತಿಯನ್ನು ತಡೆಯಲು **ವಿಲಿಯಮ್ ವಿಲ್ಬರ್‌ಫೋರ್ಸ** ಎಂಬವನು ಪ್ರಯತ್ನವನ್ನಾರಂಭಿಸಿದನು. ಅವನು ಪಿಟ್ಟನ ಮಿತ್ರನಾಗಿದ್ದನು ಮತ್ತು ಅವನಿಗೆ ಆತನ ಬೆಂಬಲವಿದ್ದಿತು. ಆದುದರಿಂದ ಅವನು ೧೭೮೮ರಲ್ಲಿ ಗುಲಾಮರ ವ್ಯಾಪಾರವನ್ನು ತಡೆಯಲು ಪಾರ್ಲಿಮೆಂಟಿನಲ್ಲಿ ಒಂದು ಬಿಲ್ಲನ್ನು ತಂದನು. ಆದರೆ ಆ ವ್ಯಾಪಾರದಿಂದ ಶ್ರೀಮಂತರಾದವರ ಮಿತ್ರರು ಪಾರ್ಲಿಮೆಂಟಿನಲ್ಲಿ ಸದಸ್ಯರಾಗಿದ್ದುದರಿಂದ ಆ ಬಿಲ್ಲು ಆಗ ಪಾಸಾಗಲಿಲ್ಲ. ಆದರೂ ವಿಲ್ಬರ್‌ಫೋರ್ಸನು ತನ್ನ ಪ್ರಯತ್ನವನ್ನು ಬಿಡಲಿಲ್ಲ. ಕೊನೆಗೆ ಅವನ ಪ್ರಯತ್ನಕ್ಕೆ ಯಶವು ದೊರೆತಿತು. ೧೮೦೭ರಲ್ಲಿ ಪಾರ್ಲಿಮೆಂಟು ಕಾಯ್ದೆಯನ್ನು ಮಾಡಿ ಗುಲಾಮರ ವ್ಯಾಪಾರವನ್ನು ತಡೆಯಿತು. ಈ ಕಾಯ್ದೆಯಿಂದ ಗುಲಾಮಗಿರಿಯ ಪದ್ಧತಿ ತಡೆಯಲ್ಪಡಲಿಲ್ಲ. ಆದರೆ ಅದು ಮುಂದೆ ೧೮೩೩ರಲ್ಲಿ ಪಾರ್ಲಿಮೆಂಟಿನ ಕಾಯ್ದೆಯಿಂದ ತಡೆಯಲ್ಪಟ್ಟಿತು.

**ಪಾರ್ಲಿಮೆಂಟಿನ ಚುನಾವಣಿಯ ಪದ್ಧತಿಯಲ್ಲಿ ಸುಧಾರಣೆಯ ಆವಶ್ಯಕತೆ**—ಆ ಕಾಲದಲ್ಲಿ ಪಾರ್ಲಿಮೆಂಟಿನ ಚುನಾವಣಿಯ ಪದ್ಧತಿ ಬಹು ಸದೋಷವಾಗಿದ್ದಿತ್ತು. ಯಾವ ಸ್ಥಳಗಳಿಂದ ಪ್ರತಿನಿಧಿಗಳು ಬರಬೇಕು ಮತ್ತು ಅವರು ಯಾರಿಂದ ಆರಿಸಲ್ಪಡಬೇಕು ಎಂಬುದು ೩೦೦ ವರ್ಷಗಳ ಹಿಂದೆಯೆ ನಿರ್ಣಯಿಸಲ್ಪಟ್ಟಿತ್ತು. ಮುಂದೆ ಅದರಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ವ್ಯಾಪಾರೋದ್ಯೋಗಗಳಿಂದ ಹೊಸದಾಗಿ ಮುಂದುವರಿದ ಪಟ್ಟಣಗಳ ಪ್ರತಿನಿಧಿಗಳು ಪಾರ್ಲಿಮೆಂಟಿನ ಸಭೆಯಲ್ಲಿ ಇರಲೆ ಇಲ್ಲ. ಆದುದರಿಂದ ಈ ವಿಷಯದಲ್ಲಿ ಸುಧಾರಣೆಯನ್ನು ಮಾಡಬೇಕೆಂದು ಪಿಟ್ಟನು ಯೋಚಿಸಿದನು. ಆದರೆ ಅದೇ ಕಾಲದಲ್ಲಿ (೧೭೮೯) ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾಗಿ ಆ ವಿಷಯದಲ್ಲಿ ಅವನ ಲಕ್ಷ್ಯವು ತೊಡಗಿದುದರಿಂದ ಯಾವ ಸುಧಾರಣೆಯನ್ನು ಮಾಡುವುದೂ ಅವನಿಗೆ ಶಕ್ಯವಾಗಲಿಲ್ಲ.

**ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿಯ ಕಾರಣಗಳು**—೧೭೮೯ರಲ್ಲಿ ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾಯಿತು. ಆ **ಒಳಿಕ** ಕ್ರಾಂತಿಕಾರಕ ವಿಚಾರಗಳನ್ನು ಇಂಗ್ಲಂಡಿನಲ್ಲಿಯೂ ಹಬ್ಬಿಸಲು ಪ್ರಯತ್ನಗಳು ಪ್ರಾರಂಭವಾದುವು. ಆದುದರಿಂದ ಇಂಗ್ಲಂಡು ತನ್ನ ಲಕ್ಷ್ಯವನ್ನು ಫ್ರಾನ್ಸಿನ ರಾಜ್ಯಕ್ರಾಂತಿಯ ಕಡೆಗೆ ತೊಡಗಿಸಬೇಕಾಗಿ ಬಂದಿತು, ಮತ್ತು ಫ್ರಾನ್ಸಿನೊಡನೆ ಯುದ್ಧವನ್ನು ಹೂಡಬೇಕಾಯಿತು. ಈ ರಾಜ್ಯಕ್ರಾಂತಿ ಆಗಲು ಅನೇಕ ಸಂಗತಿಗಳು ಕಾರಣವಾಗಿದ್ದುವು:—

(೧) **ಸಾಮಾಜಿಕ ಕಾರಣಗಳು**—ಫ್ರಾನ್ಸಿನಲ್ಲಿಯ ಜನರಲ್ಲಿ ಆ ಕಾಲ

ದಲ್ಲಿ ಅನೇಕ ವರ್ಗಗಳು ಆಗಿದ್ದುವು; (ಅ) ಸರದಾರರು, (ಆ) ಧರ್ಮಾಧಿಕಾರಿಗಳು, (ಇ) ವ್ಯಾಪಾರೋದ್ಯೋಗಗಳಲ್ಲಿ ತೊಡಗಿದವರು, (ಈ) ಒಕ್ಕಲಿಗರು ಮತ್ತು ಕೂಲಿಕಾರರು ಇವೆ ಆ ವರ್ಗಗಳು. ಇವುಗಳಲ್ಲಿ ಮೊದಲನೆಯ ಎರಡು ವರ್ಗಗಳಿಗೆ ಕೆಲವು ವಿಶೇಷವಾದ ಹಕ್ಕುಗಳಿದ್ದುವಲ್ಲದೆ ಆ ವರ್ಗದವರು ಕರವನ್ನು ಕೊಡಬೇಕಾಗುತ್ತಿದ್ದಿಲ್ಲ. ಫ್ರಾನ್ಸಿನಲ್ಲಿಯ ಬಹುಶಃ ಎಲ್ಲ ಭೂಮಿಗಳು ಈ ವರ್ಗದವರ ವಶದಲ್ಲಿಯೆ ಇದ್ದುವು. ಆದರೂ ಅವರು ಕರವನ್ನು ಕೊಡಬೇಕಾಗುತ್ತಿದ್ದಿಲ್ಲ. ಭೂಮಿಗಳಲ್ಲಿ ದುಡಿವ ರೈತರ ಮೇಲೆಯೂ ಕೂಲಿಕಾರರ ಮೇಲೆಯೂ ಕರದ ಭಾರವು ಬೀಳುತ್ತಿದ್ದಿತು. ಸರದಾರರು ಮತ್ತು ಧರ್ಮಾಧಿಕಾರಿಗಳು ಆಲಸ್ಯದಲ್ಲಿಯೂ ವಿಲಾಸದಲ್ಲಿಯೂ ತಮ್ಮ ಕಾಲವನ್ನು ನೂಕುತ್ತಿದ್ದರು. ವ್ಯಾಪಾರೋದ್ಯೋಗದಿಂದ ಜೀವಿಸುವ ಮೂರನೆಯ ವರ್ಗದವರು ಮೊದಲಿನ ಎರಡು ವರ್ಗಗಳ ಜನರಿಗಿಂತ ಸಿರಿವಂತರಾಗಿದ್ದರು. ಆದರೆ ಫ್ರಾನ್ಸಿನಲ್ಲಿ ಭೂಮಿಗಳು ಈ ವರ್ಗದವರ ವಶದಲ್ಲಿ ಇದ್ದಿಲ್ಲವಾದುದರಿಂದ ಸರದಾರರಿಗೆ ಮತ್ತು ಧರ್ಮಾಧಿಕಾರಿಗಳಿಗೆ ದೊರೆವ ಮಾನವು ಇವರಿಗೆ ಸಮಾಜದಲ್ಲಿ ಇರಲಿಲ್ಲ. ನಾಲ್ಕನೆಯ ವರ್ಗದವರಾದ ಒಕ್ಕಲಿಗರ ಮತ್ತು ಕೂಲಿಕಾರರ ಸ್ಥಿತಿ ಬಹು ಕಷ್ಟಕರವಾಗಿದ್ದಿತು. ದೊಡ್ಡ ದೊಡ್ಡ ಸರದಾರರು ಈ ವರ್ಗದವರಿಂದ ತಮ್ಮ ಭೂಮಿಗಳಿಗೋಸುಗ ಲಾವಣಿಯನ್ನು ತೆಗೆದುಕೊಳ್ಳುತ್ತಿದ್ದರು, ಧರ್ಮಾಧಿಕಾರಿಗಳು ಚರ್ಚುಗಳ ವ್ಯವಸ್ಥೆಗೋಸುಗ ಇವರಿಂದ ಬಹಳವಾಗಿ ಹಣವನ್ನು ತೆಗೆದುಕೊಳ್ಳುತ್ತಿದ್ದರು, ಮತ್ತು ಸರಕಾರದವರೂ ಈ ವರ್ಗದವರ ಮೇಲೆಯೆ ಬಹುಶಃ ಎಲ್ಲ ಕರಗಳನ್ನೂ ಹೇರುತ್ತಿದ್ದರು. ಇದಲ್ಲದೆ ಫ್ಯೂಡಲ್ ಪದ್ಧತಿಯನ್ನು ಅನುಸರಿಸಿ ಈ ವರ್ಗದವರು ತಮ್ಮ ಭೂಮಿಗಳ ಒಡೆಯರಿಗೆ ಕಾಣಿಕೆಗಳನ್ನೂ ಕರಗಳನ್ನೂ ಕೊಡಬೇಕಾಗುತ್ತಿದ್ದಿತು. ಸಮಾಜದಲ್ಲಿಯ ಇತರ ವರ್ಗಗಳು ಈ ವರ್ಗವನ್ನು ತುಚ್ಛವಾಗಿ ಎಣಿಸುತ್ತಿದ್ದುವು. ಈ ಎಲ್ಲ ಕಾರಣಗಳಿಂದ ಈ ವರ್ಗದವರ ಸ್ಥಿತಿ ಅತ್ಯಂತ ಕಷ್ಟಕರವಾಗಿದ್ದಿತು. ಅವರು ಯಾವಾಗಲೂ ಅದನ್ನು ಹೇಗೆ ನೀಗಿಸಬೇಕೆಂಬ ಯೋಜನೆಯಲ್ಲಿ ಇರುತ್ತಿದ್ದರು.

(೨) **ರಾಜಕೀಯ ಕಾರಣಗಳು**—ಫ್ರಾನ್ಸಿನಲ್ಲಿ ಮೊದಲು ಫ್ಯೂಡಲ್ ಪದ್ಧತಿ ಇದ್ದಿತು, ಆದುದರಿಂದ ಸರದಾರರ ವರ್ಗಕ್ಕೆ ದೇಶರಕ್ಷಣದ ಮತ್ತು ಜಹಾಗೀರಿಗಳ ರಾಜ್ಯಕಾರಭಾರದ ವಿಷಯಗಳಲ್ಲಿ ಅದು ಮಾಡುತ್ತಿದ್ದ ಕಾರ್ಯಕ್ಕೋಸುಗ ವಿಶೇಷವಾದ ಹಕ್ಕುಗಳು ಇದ್ದುವು. ಆದರೆ ಮುಂದೆ ಈ ಸ್ಥಿತಿಯಲ್ಲಿ ಬದಲಾಗುತ್ತ ಹೋಯಿತು. ೧೪ನೆಯ ಲುಯಿ ಬಹು ಮಹತ್ವಾಕಾಂಕ್ಷಿ

ಯಾದ ರಾಜನಾಗಿದ್ದನು (೧೭೪೩—೧೭೧೫). ಆತನು ರಾಜ್ಯಕಾರಭಾರದ ಎಲ್ಲ ಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡು ತನಗೆ ಅಂಕಿತರಾಗಿದ್ದ ಅಧಿಕಾರಿಗಳ ಸಾಹಾಯ್ಯದಿಂದ ರಾಜ್ಯಕಾರಭಾರವನ್ನು ಮಾಡುತ್ತಿದ್ದನು. ಆದುದರಿಂದ ಫ್ಯೂಡಲ್ ಪದ್ಧತಿಯ ಜಹಾಗೀರದಾರರು ಹೆಸರಿಗೆ ಜಹಾಗೀರದಾರರಾಗಿದ್ದು ತಮ್ಮ ಜಹಾಗೀರಿಗಳ ಭೂಮಿಗಳಿಂದ ದೊರೆವ ಹಣದಿಂದ ವಿಲಾಸದಲ್ಲಿಯೂ ಆಲಸ್ಯದಲ್ಲಿಯೂ ಆಯುಷ್ಯವನ್ನು ಕಳೆಯಲಾರಂಭಿಸಿದರು. ಈ ವರ್ಗದಲ್ಲಿಯ ಕೆಲವರಿಗೆ ಸೈನ್ಯ, ಹಡಗುಪಡೆ ಮೊದಲಾದುವುಗಳಲ್ಲಿ ಮಹತ್ವದ ಅಧಿಕಾರದ ಮತ್ತು ಸನ್ಮಾನದ ಸ್ಥಳಗಳು ದೊರೆಯುತ್ತಿದ್ದುವು, ಆದರೆ ರಾಜ್ಯಕಾರಭಾರದ ನೀತಿಯನ್ನು ನಿಶ್ಚಯಿಸಲು ಅವರಿಗೆ ಅಧಿಕಾರವಿದ್ದಿಲ್ಲ. ಇಂಗ್ಲಂಡಿನ ಪಾರ್ಲಿಮೆಂಟಿನಂತೆ ಫ್ರಾನ್ಸಿನಲ್ಲಿಯೂ **ಸ್ಟೇಟ್ಸ ಜನರಲ್** ಎಂಬ ಸಭೆ ಮೊದಲು ಇದ್ದಿತು, ಮತ್ತು ಆ ಸಭೆಯಲ್ಲಿ ಸರದಾರರ, ಧರ್ಮಾಧಿಕಾರಿಗಳ ಮತ್ತು ಮೂರನೆಯ ವರ್ಗದವರ ಪ್ರತಿನಿಧಿಗಳು ಇರುತ್ತಿದ್ದರು. ಅವರ ಬೇರೆ ಬೇರೆ ಸಭೆಗಳಿದ್ದುವು. ಆದರೆ ೧೬೧೬ರಿಂದ ಈ ಸ್ಟೇಟ್ಸ ಜನರಲ್ ಸಭೆ ಕರೆಯಲ್ಪಟ್ಟಿರಲೆ ಇಲ್ಲ. ಆದುದರಿಂದ ಫ್ರಾನ್ಸಿನ ರಾಜ್ಯಕಾರಭಾರದಲ್ಲಿ ಅಲ್ಲಿಯ ಜನರದು ಯಾವ ಬಗೆಯ ಅಂಗವೂ ಇರಲಿಲ್ಲ. ಎಲ್ಲ ರಾಜ್ಯಕಾರಭಾರವು ರಾಜನ ತಂತ್ರದಂತೆ ನಡೆಯುತ್ತಿದ್ದಿತು, ಮತ್ತು ಅದು ಸ್ವೈರವಾಗಿದ್ದುದರಿಂದ ಜನರಿಗೆ ಕಷ್ಟಕರವಾಗಿತ್ತು.

(೩) **ವಿಚಾರಕ್ರಾಂತಿ**—ಇದೇ ಸಮಯದಲ್ಲಿ ಫ್ರಾನ್ಸಿನಲ್ಲಿ ಹೊಸದೊಂದು ಲೇಖಕವರ್ಗವು ಹುಟ್ಟಿದ್ದಿತು. ಅನಿಯಂತ್ರಿತನಾದ ರಾಜನು ಮಾಡುತ್ತಿರುವ ರಾಜಸತ್ತೆಯ ದುರುಪಯೋಗವನ್ನು, ಸರದಾರ ವರ್ಗದವರಿಗೆ ಇರುತ್ತಿದ್ದ ವಿಶಿಷ್ಟವಾದ ಫ್ಯೂಡಲ್ ಹಕ್ಕುಗಳನ್ನು, ಧರ್ಮಾಧಿಕಾರಿಗಳ ವಿಲಾಸವನ್ನು ಮತ್ತು ಧಾರ್ಮಿಕ ವಿಷಯಗಳ ದುರ್ಲಕ್ಷ್ಯವನ್ನು ಈ ಲೇಖಕ ವರ್ಗವು ತೀವ್ರವಾಗಿ ಟೀಕಿಸಲಾರಂಭಿಸಿತು. ಫ್ರಾನ್ಸಿನಲ್ಲಿ ಸ್ವಾತಂತ್ರ್ಯ, ಸಮತೆ ಮತ್ತು ವಿಶ್ವಬಂಧುತ್ವ ಇವುಗಳ ಸ್ಥಾಪನೆಯಾಗುವುದು ಅವಶ್ಯವೆಂಬ ಮಾತನ್ನು ಈ ಲೇಖಕರು ಜನರ ಮುಂದಿಟ್ಟರು. ಈ ಲೇಖಕರಲ್ಲಿ **ವಾಲ್‌ಟೆರ್** ಮತ್ತು **ರೂಸೊ** ಇವರು ಪ್ರಮುಖರಾಗಿದ್ದರು. ವಾಲ್‌ಟೆರನು ಜನರ ಧಾರ್ಮಿಕ ವಿಚಾರಗಳಲ್ಲಿ ಮತ್ತು ರೂಸೊ ಜನರ ಸಾಮಾಜಿಕ ಮತ್ತು ರಾಜಕೀಯ ವಿಚಾರಗಳಲ್ಲಿ ಕ್ರಾಂತಿಯನ್ನು ಒದಗಿಸಿದರು.

ಇಂಗ್ಲಂಡು ತನ್ನ ಅಮೇರಿಕೆಯಲ್ಲಿಯ ವಸಾಹತುಗಳೊಡನೆ ಯುದ್ಧದಲ್ಲಿ ತೊಡಗಿದಾಗ ಫ್ರೆಂಚ ಜನರು ಈ ವಸಾಹತುಗಳಿಗೆ ಸಾಹಾಯ್ಯವನ್ನು ಮಾಡಿದ್ದರು. ಅಮೇರಿಕೆಯಲ್ಲಿಯ ವಸಾಹತುಗಳು ಸ್ವಾತಂತ್ರ್ಯವನ್ನು ಸಾರಿ ಲೋಕಸತ್ತಾ-


ವಾಲ್‌ಟೇರ್


ರೂಸೊ

ರಾಜ್ಯವನ್ನು ಸ್ಥಾಪಿಸಿದ್ದುವು. ತಾವಾದರೂ ಹಾಗೆಯೆ ಮಾಡಬೇಕೆಂದು ಫ್ರೆಂಚ ಜನರು ಎಣಿಸಿದರು.

(೪) ಆರ್ಥಿಕ ಸ್ಥಿತಿ—ಫ್ರಾನ್ಸಿನಲ್ಲಿ ಆರ್ಥಿಕ ಸ್ಥಿತಿ ಬಹಳವಾಗಿ ಕೆಟ್ಟಿದ್ದಿತು. ೧೪ನೆಯ ಲುಯಿಯ ಮಹತ್ವಾಕಾಂಕ್ಷೆಯ ನೀತಿಯಿಂದ ಫ್ರಾನ್ಸು ಅನೇಕ ಯುದ್ಧಗಳನ್ನು ಮಾಡಬೇಕಾಯಿತು, ಮತ್ತು ೧೫ನೆಯ ಮತ್ತು ೧೬ನೆಯ ಲುಯಿಯ ಆಳ್ಕೆಯಲ್ಲಿಯೂ ಫ್ರಾನ್ಸು ಅನೇಕ ಯುದ್ಧಗಳಲ್ಲಿ ಭಾಗವನ್ನು ವಹಿಸಬೇಕಾಯಿತು. ಅದರಿಂದ ಫ್ರಾನ್ಸಿನ ಸಾಲವು ಒಂದೆ ಸವನೆ ಬೆಳೆಯುತ್ತ ನಡೆಯಿತು. ದರಬಾರದ ವೆಚ್ಚವು ಬಹಳವಾಗಿ ಬೆಳೆದಿತ್ತು. ಫ್ರಾನ್ಸಿನ ಸಾಮಾನ್ಯ ವೆಚ್ಚವೆ ಉತ್ಪನ್ನಕ್ಕಿಂತ ಹೆಚ್ಚಿಗೆ ಇದ್ದುದರಿಂದ ಆಯವ್ಯಯಗಳನ್ನು ಬಾಯಿಗೂಡಿಸಲು ಹೊಸ ಸಾಲವನ್ನು ಮಾಡಬೇಕಾಗುತ್ತಿತ್ತು. ಆದುದರಿಂದ ಯುದ್ಧಕ್ಕೋಸುಗ ಆದ ಸಾಲವು ಕಡಿಮೆಯಾಗದೆ ಮಿತಿಮೀರಿ ಬೆಳೆಯಿತು. ಫ್ರಾನ್ಸಿನ ಸಾಂಪತ್ತಿಕ ಸ್ಥಿತಿ ಹೀಗೆ ಕೆಟ್ಟಿರುವಾಗ ಅದನ್ನು ಸುಧಾರಿಸಲು ದರಬಾರದ ವೆಚ್ಚವನ್ನು ಕಡಿಮೆ ಮಾಡುವುದು ಮತ್ತು ಸರದಾರರು ಮತ್ತು ಧರ್ಮಾಧಿಕಾರಿಗಳು ತಮ್ಮ ವಿಶೇಷವಾದ ಫ್ಯೂಡಲ್ ಹಕ್ಕುಗಳನ್ನು ಬಿಟ್ಟು ಉಳಿದವರಂತೆ ಕರಗಳನ್ನು ಕೊಡಲು ಸಿದ್ಧರಾಗುವುದು ಅವಶ್ಯವಾಗಿತ್ತು, ಆದರೆ ಅವರ ದುರಾಗ್ರಹದಿಂದ ಈ ವಿಷಯದಲ್ಲಿ ಸುಧಾರಣೆಯಾಗಲು ಶಕ್ಯವಾಗಲಿಲ್ಲ. ಆದುದರಿಂದ ಸಾಲದ

ಎಲ್ಲ ಭಾರವು ಕೆಳಗಿನ ವರ್ಗದವರ ಮೇಲೆ ಬಿದ್ದು ಅವರ ಸ್ಥಿತಿ ಬಹಳವಾಗಿ ಕೆಟ್ಟಿತು.

**ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿ**—ಫ್ರಾನ್ಸಿನ ಆರ್ಥಿಕ ಸ್ಥಿತಿ ಹೀಗಿದ್ದುದರಿಂದ ಅದನ್ನು ಸುಧಾರಿಸಲು ಏನು ಮಾಡಬೇಕೆಂಬುದನ್ನು ನಿಶ್ಚಯಿಸಲು ೧೬ನೆಯ ಲುಯಿ ತನ್ನ ಮಂತ್ರಿಗಳ ಸೂಚನೆಯಂತೆ ಸ್ಟೇಟ್ಸ ಜನರಲ್ ಸಭೆಯನ್ನು ಕರೆದನು (೧೭೮೯). ೧೬೧೬ರಿಂದ ಈ ವರೆಗೆ (೧೭೩ ವರ್ಷಗಳ ವರೆಗೆ) ಈ ಸಭೆ ಕರೆಯಲ್ಪಟ್ಟಿರಲಿಲ್ಲ. ಫ್ರಾನ್ಸಿನ ಪಾರ್ಲಿಮೆಂಟಿನಲ್ಲಿ ಸರದಾರರ ಸಭೆ, ಧರ್ಮಾಧಿಕಾರಿಗಳ ಸಭೆ ಮತ್ತು ಕೆಳಗಿನ ವರ್ಗದವರ ಸಭೆ ಎಂದು ಮೂರು ಭಾಗಗಳಿದ್ದು ಅವುಗಳ ಅಧಿವೇಶನಗಳು ಬೇರೆಬೇರೆ ಸಭಾಗೃಹಗಳಲ್ಲಿ ನೆರೆಯುತ್ತಿದ್ದುವು. ಆದರೆ ಈ ಅಧಿವೇಶನದ ಕಾಲದಲ್ಲಿ ಮಾತ್ರ ಮೊದಲಿನ ಪ್ರಘಾತವನ್ನು ಬಿಟ್ಟು ಎಲ್ಲರೂ ಒಂದೆ ಸಭಾಗೃಹದಲ್ಲಿ ನೆರೆದು ರಾಷ್ಟ್ರದ ಪರಿಸ್ಥಿತಿಯನ್ನು ಆಲೋಚಿಸಬೇಕೆಂದು ಕೆಳಗಿನ ವರ್ಗದ ಸದಸ್ಯರು ಆಗ್ರಹವನ್ನು ಹಿಡಿದರು. ಇದಕ್ಕೆ ಸರದಾರರ ಮತ್ತು ಧರ್ಮಾಧಿಕಾರಿಗಳ ವಿರೋಧವಿದ್ದಿತಾದರೂ ಅಧಿವೇಶನವು ಒಂದೆ ಸಭಾಗೃಹದಲ್ಲಿ ನೆರೆಯಿಸಲ್ಪಟ್ಟಿತು, ಮತ್ತು ಈ ಸಂಯುಕ್ತ ಸಭೆಗೆ ರಾಷ್ಟ್ರೀಯ ಸಭೆ (National Assembly) ಎಂದು ಹೆಸರು ಕೊಡಲ್ಪಟ್ಟಿತು. ಈ ಅಧಿವೇಶನವು ಸರದಾರರ ಮತ್ತು ಧರ್ಮಾಧಿಕಾರಿಗಳ ಫ್ಯೂಡಲ್ ಹಕ್ಕುಗಳನ್ನು ರದ್ದುಗೊಳಿಸಿ ಕಾಯದೆಯ ದೃಷ್ಟಿಯಿಂದ ಎಲ್ಲರೂ ಸಮಾನರಾಗಿರುವರೆಂದು ಸಾರಿತು. ಅದರಂತೆ ರಾಜನ ಕೈಯಲ್ಲಿದ್ದ ಅನಿಯಂತ್ರಿತ ಸತ್ತೆಯನ್ನು ನಷ್ಟಗೊಳಿಸಲು ಪ್ರಯತ್ನವು ಮಾಡಲ್ಪಟ್ಟಿತು. ಆಗ ಸೈನ್ಯದ ಸಾಹಾಯ್ಯದಿಂದ ಈ ಪ್ರಯತ್ನವನ್ನು ವಿರೋಧಿಸಬೇಕೆಂದು ರಾಜನು ಬಗೆದನು.

ರಾಷ್ಟ್ರೀಯ ಸಭೆಯಿಂದ ಫ್ರಾನ್ಸಿನ ರಾಜ್ಯಘಟನೆಯಲ್ಲಿ ಮೇಲೆ ಹೇಳಿದ ಸುಧಾರಣೆಗಳು ಆಗುತ್ತಿದ್ದರೂ ದುಃಖದಲ್ಲಿಯೂ ಕಷ್ಟಪ್ರದವಾದ ಸ್ಥಿತಿಯಲ್ಲಿಯೂ ನರಳುತ್ತಿದ್ದ ಮತ್ತು ಕೂಳಿಲ್ಲದೆ ಬಳಲುತ್ತಿದ್ದ ಬಡಜನರಿಗೆ ಅವುಗಳಿಂದ ಸಮಾಧಾನವಾಗಲಿಲ್ಲ. ರಾಜನ, ಸರದಾರರ ಮತ್ತು ಧರ್ಮಾಧಿಕಾರಿಗಳ ಸ್ವೈರವೂ ಸ್ವಾರ್ಥಪೂರ್ಣವೂ ಆದ ವರ್ತನದಿಂದ ತಮಗೆ ಕಷ್ಟಪ್ರದವಾದ ಸ್ಥಿತಿ ಬಂದಿರುವುದೆಂದು ಬಗೆದು ಪರಿಸಿನಲ್ಲಿಯ ಸಾವಿರಾರು ಜನರು ದಂಗೆಯನ್ನಾರಂಭಿಸಿದರು, ಮತ್ತು ಸರದಾರರ ಮೇಲೆಯೂ ಧರ್ಮಾಧಿಕಾರಿಗಳ ಮೇಲೆಯೂ ಅತ್ಯಾಚಾರವನ್ನು ಮಾಡತೊಡಗಿದರು. ರಾಜನ ಅನಿಯಂತ್ರಿತವೂ ಸ್ವೈರವೂ ಆದ ಸತ್ತೆಯ ವಿರುದ್ಧವಾಗಿ ಯತ್ನಿಸುತ್ತಿದ್ದ ಜನರು ಪರಿಸಿನಲ್ಲಿಯ ಬಸ್ಟೀಲ ಎಂಬ ಸೆರೆಮನೆಯಲ್ಲಿ ಇಡ

ಲ್ಪಡುತ್ತಿದ್ದರು. ಆದುದರಿಂದ ಈ ಕ್ರಾಂತಿಕಾರಕ ಜನರು ೧೭೮೯ರಲ್ಲಿ ಜುಲೈ ೧೪ನೆಯ ತಾರೀಖಿನ ದಿವಸ ಬಸ್ಟೀಲ ಸೆರೆಮನೆಯನ್ನು ಒಡೆದು ಒಳಹೊಕ್ಕು ಸೆರೆಯಲ್ಲಿ ಕೊಳೆಯುತ್ತಿದ್ದ ಜನರನ್ನು ಮುಕ್ತಗೊಳಿಸಿದರು. ಪರಿಸಿನಲ್ಲಿಯ ಜನರ ಈ ಉದಾಹರಣೆಯನ್ನು ಕಂಡು ಫ್ರಾನ್ಸಿನಲ್ಲಿ ಎಲ್ಲೆಲ್ಲಿಯೂ ಜನರು ದೊಂಬೆಗಳನ್ನು ಆರಂಭಿಸಿದರು. ಸರದಾರ ವರ್ಗದ ಜನರ ಕೊಲೆಯಾಗತೊಡಗಿತು, ಮತ್ತು ಅವರ ಮನೆಮಾರುಗಳು ಬೆಂಕಿಗೆ ಆಹುತಿಯಾಗಲಾರಂಭಿಸಿದುವು. ಹೀಗೆ ತಮ್ಮ ಜೀವಿತವೂ ಆಸ್ತಿಯೂ ಗಂಡಾಂತರದಲ್ಲಿ ಬಿದ್ದುದನ್ನು ಕಂಡು ಸರದಾರ ವರ್ಗದ ಜನರು ಫ್ರಾನ್ಸಿನಿಂದ ಇತರ ದೇಶಗಳಿಗೆ ಓಡಿಹೋಗಲಾರಂಭಿಸಿದರು. ಫ್ರಾನ್ಸಿನ ಅರಸನಾದ ೧೬ನೆಯ ಲುಯಿ ವರ್ಸೇಲ್ಸಿನಲ್ಲಿಯ ತನ್ನ ಅರಮನೆಯಲ್ಲಿ ಇರುತ್ತಿದ್ದನು. ಪರಿಸಿನಲ್ಲಿಯ ಕ್ರಾಂತಿಕಾರಿಗಳು ೧೭೮೯ ಅಕ್ಟೋಬರ ತಿಂಗಳಲ್ಲಿ ಅವನನ್ನೂ ಅವನ ಕುಟುಂಬದ ಎಲ್ಲ ಜನರನ್ನೂ ಹಿಡಿದು ಪರಿಸಿಗೆ ಎಳೆತಂದು ಸೆರೆಯಲ್ಲಿಟ್ಟರು. ಈ ಬಗೆಯಾಗಿ ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾಗಿ ಎಲ್ಲೆಲ್ಲಿಯೂ ಅವ್ಯವಸ್ಥೆಯೂ ಸ್ವೈರವೃತ್ತಿಯೂ ದೃಗ್ಗೋಚರವಾದುವು (೧೭೮೯).

**ಫ್ರಾನ್ಸಿನಲ್ಲಿಯ ಸ್ಥಿತ್ಯಂತರಗಳು (೧೭೮೯-೧೮೧೫)**—ಫ್ರಾನ್ಸಿನಲ್ಲಿಯ ಕ್ರಾಂತಿಕಾರಕ ಜನರಿಂದ ತನ್ನ ಜೀವಿತಕ್ಕೆ ಅಪಾಯವಾಗಬಹುದೆಂಬ ಭೀತಿಯಿಂದ ೧೬ನೆಯ ಲುಯಿ ತನ್ನ ಕುಟುಂಬದ ಜನರೊಡನೆ ಫ್ರಾನ್ಸಿನಿಂದ ಆಸ್ಟ್ರಿಯಾ ದೇಶಕ್ಕೆ ಓಡಿಹೋಗಲು ಪ್ರಯತ್ನಿಸಿದನು (೧೭೯೧). ಆದರೆ ಅವನಿಗೆ ಯಶವು ದೊರೆಯದೆ ಅವನು ಹಿಡಿಯಲ್ಪಟ್ಟು ಸೆರೆಮನೆಯಲ್ಲಿಡಲ್ಪಟ್ಟನು. ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾದುದರಿಂದ ಅನೇಕ ಸರದಾರರು ತಮ್ಮ ಕುಟುಂಬದ ಜನರೊಡನೆ ಆಸ್ಟ್ರಿಯಾ ಮತ್ತು ಪ್ರಶಿಯಾ ದೇಶಗಳಿಗೆ ಹೋಗಿದ್ದರು. ಅವರ ಸೂಚನೆಯಿಂದ ಫ್ರಾನ್ಸಿನಲ್ಲಿಯ ಕ್ರಾಂತಿಕಾರಿಗಳೊಡನೆ ಯುದ್ಧವನ್ನು ಮಾಡಲು ಆಸ್ಟ್ರಿಯಾ ಮತ್ತು ಪ್ರಶಿಯಾ ರಾಷ್ಟ್ರಗಳು ತಮ್ಮ ಸೈನ್ಯವನ್ನು ಸಿದ್ಧಗೊಳಿಸಿದುವು. ಈ ಶತ್ರುಗಳನ್ನಿದಿರಿಸಲು ಕ್ರಾಂತಿಕಾರಿಗಳು ತಮ್ಮ ಸೈನ್ಯವನ್ನು ಸಿದ್ಧಗೊಳಿಸಿ ಫ್ರಾನ್ಸಿನ ಉತ್ತರ ಸೀಮೆಯ ಕಡೆಗೆ ಒಯ್ದರು. ಈ ಫ್ರೆಂಚ ಸೈನ್ಯದಲ್ಲಿ ಮಾರ್ಸೆಲ್ಸಿನಿಂದ ಬಂದ ಹಲವು ದಲವು ಇದ್ದಿತು. ಈ ದಲವು ಉತ್ತರ ಸೀಮೆಯ ಕಡೆಗೆ ಹೋಗುತ್ತಿರುವಾಗ ಹಾಡುತ್ತಿದ್ದ **ಮಾರ್ಸೆಲೀಜ** ಎಂಬ ಗೀತವು ಮುಂದೆ ಫ್ರಾನ್ಸಿನ ರಾಷ್ಟ್ರಗೀತವಾಯಿತು. ಆಸ್ಟ್ರಿಯಾ ಮತ್ತು ಪ್ರಶಿಯಾ ರಾಷ್ಟ್ರಗಳ ವಿರುದ್ಧವಾಗಿ ಫ್ರಾನ್ಸು ಯುದ್ಧವನ್ನು ಸಾರಿತು. ಫ್ರಾನ್ಸಿನ ರಾಷ್ಟ್ರೀಯ ಸಭೆ ಕ್ರಾಂತಿಕಾರಿಗಳ ವರ್ಚಸ್ಸಿಗೆ ವಶವಾಗಿ ಫ್ರಾನ್ಸಿನ ರಾಜನು ಪದಚ್ಯುತನಾಗಿ ಮಾಡಲ್ಪಟ್ಟಿರುವ

ನೆಂದೂ ಫ್ರಾನ್ಸಿನಲ್ಲಿ ಲೋಕಸತ್ತಾತ್ಮಕ ರಾಜ್ಯವು ಸ್ಥಾಪಿಸಲ್ಪಟ್ಟಿತೆಂದೂ ಸಾರಿತು (೧೭೯೨). ಅದರಂತೆ ಯುರೋಪದಲ್ಲಿಯ ಇತರ ರಾಷ್ಟ್ರಗಳು ಫ್ರಾನ್ಸಿನ ಅನುಕರಣೆಯನ್ನು ಮಾಡಿ ಅಲ್ಲಿ ಲೋಕಸತ್ತಾತ್ಮಕ ರಾಜ್ಯವನ್ನು ಸ್ಥಾಪಿಸಲು ಪ್ರಯತ್ನಿಸಿದರೆ ಫ್ರಾನ್ಸಿನಿಂದ ಸಾಹಾಯ್ಯವು ದೊರೆಯಬಹುದೆಂದು ಈ ಸಭೆ ಸಾರಿತು. ಫ್ರಾನ್ಸಿನಲ್ಲಿಯ ಎಲ್ಲ ಸತ್ತೆ ಕ್ರಾಂತಿಕಾರಿಗಳ ಕೈಯಲ್ಲಿ ಹೋಯಿತು ಮತ್ತು ಅವರು ಮಾಡಬಾರದ ಕೃತ್ಯಗಳನ್ನು ಮಾಡತೊಡಗಿದರು. ರಾಬಸಪೇಯರ್ ಮತ್ತು ಡೆಂಟನ್ ಎಂಬವರು ಕ್ರಾಂತಿಕಾರಿಗಳ ನಾಯಕರಾಗಿದ್ದರು. ಸರದಾರರ ವಿಷಯದಲ್ಲಿಯೂ ರಾಜನ ವಿಷಯದಲ್ಲಿಯೂ ಪ್ರೇಮಾದರಗಳು ಯಾರಿಗಾದರೂ ಇವೆ ಎಂಬ ಸಂಶಯವು ಬಂದೊಡನೆ ಕ್ರಾಂತಿಕಾರಿಗಳು ಅವರನ್ನು ಸೆರೆಹಿಡಿದು ಅವರ ಕೊಲೆಯನ್ನು ಮಾಡಲಾರಂಭಿಸಿದರು. ಒಂದು ವರ್ಷದಲ್ಲಿ ಸುಮಾರು ೨೦ ಸಾವಿರ ಜನರು ಕ್ರಾಂತಿಕಾರಿಗಳಿಂದ ಶೂಲಕ್ಕೇರಿಸಲ್ಪಟ್ಟರು. ೧೭೯೩ರಲ್ಲಿ ಫ್ರಾನ್ಸಿನ ರಾಜನಾದ ೧೬ನೆಯ ಲುಯಿ ರಾಜನೂ ಅಂಟೊನೀಟ ರಾಣಿಯೂ ಶೂಲಕ್ಕೇರಿಸಲ್ಪಟ್ಟರು.

ಫ್ರಾನ್ಸಿನಲ್ಲಿ ನಡೆದ ಅತ್ಯಾಚಾರದಿಂದಲೂ ಇತರ ರಾಷ್ಟ್ರಗಳಲ್ಲಿ ಕ್ರಾಂತಿಕಾರಕ ವಿಚಾರಗಳನ್ನು ಪಸರಿಸುವ ಕ್ರಾಂತಿಕಾರಿಗಳ ಪ್ರಯತ್ನದಿಂದಲೂ ಅಪಾಯವನ್ನು ಶಂಕಿಸಿ ೧೭೯೨ರಲ್ಲಿ ಆಸ್ಟ್ರಿಯಾ ಮತ್ತು ಪ್ರಶಿಯಾ ರಾಷ್ಟ್ರಗಳು ಫ್ರಾನ್ಸಿನ ವಿರುದ್ಧವಾಗಿ ಯುದ್ಧವನ್ನು ಸಾರಿದುವು, ಮತ್ತು ೧೭೯೩ರಲ್ಲಿ ಇಂಗ್ಲಂಡೂ ಫ್ರಾನ್ಸಿನೊಡನೆ ಯುದ್ಧವನ್ನು ಪ್ರಾರಂಭಿಸಿತು. ಫ್ರಾನ್ಸು ಇತರ ರಾಷ್ಟ್ರಗಳೊಡನೆ ಯುದ್ಧವನ್ನು ಪ್ರಾರಂಭಿಸಿದ ಬಳಿಕ ಉಗ್ರಪಕ್ಷದ ಕ್ರಾಂತಿಕಾರಿಗಳಲ್ಲಿ ಒಡಕು ಹುಟ್ಟಿ ಬೇರೆ ಬೇರೆ ಪಕ್ಷಗಳಾಗಿ ಅವರ ಸತ್ತೆ ಕುಗ್ಗಲಾರಂಭಿಸಿತು. ತನ್ನ ಕೈಯಲ್ಲಿ ಎಲ್ಲ ಸತ್ತೆಯನ್ನು ಇಟ್ಟುಕೊಳ್ಳಲು ರಾಬಸ್‌ಪೇಯರನು ಡಂಟನನನ್ನು ಶೂಲಕ್ಕೇರಿಸಿದನು. ಆದರೆ ಮುಂದೆ ರಾಬಸ್‌ಪೇಯರನನ್ನು ಅವನ ಶತ್ರುಗಳು ಶೂಲಕ್ಕೇರಿಸಿದರು. ಆ ಬಳಿಕ ಮಂದಪಕ್ಷದ ಕ್ರಾಂತಿಕಾರಿಗಳ ಕೈಯಲ್ಲಿ ಎಲ್ಲ ಸತ್ತೆ ಹೋಯಿತು. ಈ ಪಕ್ಷದವರು ಫ್ರಾನ್ಸಿನ ಲೋಕಸತ್ತಾತ್ಮಕ ರಾಜ್ಯದ ಆಡಳಿತವನ್ನು ನಡೆಯಿಸಲು, ಮತ್ತು ಶತ್ರುರಾಷ್ಟ್ರಗಳೊಡನೆ ಪ್ರಾರಂಭವಾದ ಯುದ್ಧಗಳನ್ನು ಮುಂದೆ ಸಾಗಿಸಲು, 'ಡಿರೆಕ್ಟರಿ' ಎಂಬ ಐದು ಸದಸ್ಯರ ಮಂಡಳವನ್ನು ಸ್ಥಾಪಿಸಿದರು (೧೭೯೫).

೧೭೯೫ರಿಂದ ೯೯ರ ವರೆಗೆ ಈ ಡಿರೆಕ್ಟರಿಯ ಕೈಯಲ್ಲಿ ಸತ್ತೆ ಇದ್ದಿತು. ಆದರೆ ಮುಂದೆ ಫ್ರಾನ್ಸಿನ ಶತ್ರುಗಳೊಡನೆ ನಡೆದ ಯುದ್ಧಗಳಲ್ಲಿ ತನ್ನ ಪರಾಕ್ರಮದಿಂದ

ಪ್ರಸಿದ್ಧಿಯನ್ನು ಪಡೆದ ಸೇನಾಪತಿಯಾದ ನೆಪೋಲಿಯನನು ಡಿರೆಕ್ಟರಿಯ ಸತ್ತೆಯನ್ನು ಸೆಳೆದು '**ಕಾನ್ಸಲ್**' ಅಥವಾ '**ಲೋಕಪ್ರತಿನಿಧಿ**' ಎಂಬ ಬಿರುದನ್ನು ತಳೆದು ತಾನೆ ರಾಜ್ಯಕಾರಭಾರವನ್ನು ಮಾಡಲಾರಂಭಿಸಿದನು. ಅವನು ರಾಜ್ಯಕಾರಭಾರದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು. ಅವನು ಕಾಯ್ದೆಗಳನ್ನು ಸಂಗ್ರಹಿಸಿ ಅವುಗಳಿಗೆ ವ್ಯವಸ್ಥಿತವಾದ ಸ್ವರೂಪವನ್ನು ಒದಗಿಸಿದನು, ಶಿಕ್ಷಣವಿಷಯದಲ್ಲಿ ಸುಧಾರಣೆಗಳನ್ನು ಮಾಡಿ ಹೊಸ ಶಾಲೆಗಳನ್ನೂ ಕಾಲೇಜುಗಳನ್ನೂ ಸ್ಥಾಪಿಸಿದನು. 'ಬಂಕ್ ಆಫ್ ಫ್ರಾನ್ಸ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಫ್ರಾನ್ಸಿನ ಆರ್ಥಿಕ ಸ್ಥಿತಿಯನ್ನು ಸುಧಾರಿಸಿದನು ಮತ್ತು ಹೊಸ ಮಾರ್ಗಗಳನ್ನೂ ಕಾಲಿವೆಗಳನ್ನೂ ಸಿದ್ಧಗೊಳಿಸಿದನು. ಇದರಿಂದ ವ್ಯಾಪಾರಕ್ಕೆ ಉತ್ತೇಜನವು ದೊರೆತಿತು. ಫ್ರಾನ್ಸಿನ ಬಾದಶಹನಾಗಬೇಕೆಂದು ನೆಪೋಲಿಯನನ ಮಹತ್ವಾಕಾಂಕ್ಷೆ ಇದ್ದಿತು. ಆದುದರಿಂದ ಅವನು ೧೮೦೪ರಲ್ಲಿ ಪೋಪನಿಂದ ಪರಿಸಿನಲ್ಲಿ ಫ್ರಾನ್ಸಿನ ಬಾದಶಹನೆಂದು ರಾಜ್ಯಾಭಿಷೇಕವನ್ನು ಮಾಡಿಸಿಕೊಂಡನು. ಫ್ರಾನ್ಸಿನ ಅಂತಃಸ್ಥ ರಾಜ್ಯಕಾರಭಾರದಲ್ಲಿ ಈ ಬಗೆಯ ಸ್ಥಿತ್ಯಂತರವು ಆಗುತ್ತಿರುವಾಗ ಫ್ರಾನ್ಸು ಇಂಗ್ಲಂಡಿನೊಡನೆಯೂ ಇತರ ಯುರೋಪಿಯನ್ ರಾಷ್ಟ್ರಗಳೊಡನೆಯೂ ೧೭೯೩ರಿಂದ ಯುದ್ಧವನ್ನು ಮಾಡಬೇಕಾಯಿತು. ಆ ಯುದ್ಧವನ್ನು ನೆಪೋಲಿಯನನು ೧೮೧೫ರ ವರೆಗೆ ಸಾಗಿಸಿದನು.

**ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿಯ ವಿಷಯದಲ್ಲಿ ಇಂಗ್ಲಂಡಿನಲ್ಲಿಯ ಲೋಕಮತವು**–ಫ್ರಾನ್ಸಿನಲ್ಲಿ ನಡೆದ ಈ ರಾಜ್ಯಕ್ರಾಂತಿಯ ಕಡೆಗೆ ಇಂಗ್ಲಿಶ ಜನರ ಲಕ್ಷ್ಯವು ಸಹಜವಾಗಿ ಎಳೆಯಲ್ಪಟ್ಟಿತು ಮತ್ತು ತಮ್ಮ ಸ್ವೈರ ವರ್ತನದ ರಾಜ್ಯಕರ್ತರ ವಿರುದ್ಧವಾಗಿ ಫ್ರೆಂಚರು ನಡೆಯಿಸಿದ ಆಂದೋಲನಕ್ಕೆ ಮೊದಲು ಅವರ ಸಹಾನುಭೂತಿಯೂ ದೊರೆತಿದ್ದಿತು. ಫ್ರಾನ್ಸಿನ ಬೂರಬಾನ್ ವಂಶದವರ (ಫ್ರಾನ್ಸಿನ ರಾಜ್ಯವಂಶವು) ಸಾಮ್ರಾಜ್ಯ ತೃಷ್ಣೆಯ ಮೂಲಕವಾಗಿ ಇಂಗ್ಲಂಡು ಆಗಾಗ ಯುದ್ಧದಲ್ಲಿ ತೊಡಗಬೇಕಾಗುತ್ತಿತ್ತು. ಆದುದರಿಂದ ರಾಜ್ಯಕ್ರಾಂತಿಯ ತರುವಾಯದಲ್ಲಿ ಅಲ್ಲಿಯೂ ಇಂಗ್ಲಂಡಿನಂತೆ ಲೋಕಮತದಿಂದ ನಡೆವ ರಾಜ್ಯಪದ್ಧತಿ ಸ್ಥಾಪಿಸಲ್ಪಟ್ಟರೆ ಫ್ರಾನ್ಸ್ ಮತ್ತು ಇಂಗ್ಲಂಡ್ ಇವುಗಳಲ್ಲಿ ಪರಸ್ಪರ ಮಿತ್ರತ್ವವು ಉಳಿಯಲು ಅನುಕೂಲವಾಗಬಹುದೆಂದು ಇಂಗ್ಲಿಶ ಜನರು ಬಗೆದರು. ವ್ಹಿಗ್‌ಪಕ್ಷದ ನಾಯಕನಾದ ಫಾಕ್ಸನು ಮತ್ತು ಅವನ ಕೆಲವು ಅನುಯಾಯಿಗಳು ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯನ್ನು ಮಾಡಿದ ಕ್ರಾಂತಿಕಾರಿಗಳನ್ನು ಅಭಿನಂದಿಸಿದರು. ಇಂಗ್ಲಂಡಿನ ಮುಖ್ಯ ಮಂತ್ರಿಯೂ ಟೋರಿ ಪಕ್ಷದ ನಾಯಕನೂ ಆದ

ಪಿಟ್ಟನು ಕೂಡ ರಾಜ್ಯಕ್ರಾಂತಿಗೆ ವಿರುದ್ಧನಾಗಿರಲಿಲ್ಲ. ಆದರೆ ಕ್ರಾಂತಿಕಾರಿಗಳು ಫ್ರಾನ್ಸಿನಲ್ಲಿ ಮಾಡಿದ ಅತ್ಯಾಚಾರಗಳು ಮತ್ತು ಕ್ರಾಂತಿಕಾರಕ ವಿಚಾರಗಳನ್ನು ಇತರ ರಾಷ್ಟ್ರಗಳಲ್ಲಿಯೂ ಹಬ್ಬಿಸಲು ಅವರು ಮಾಡುತ್ತಿರುವ ಪ್ರಯತ್ನಗಳು ಜನರಿಗೆ ಗೊತ್ತಾಗತೊಡಗಿದುವು. ಆದುದರಿಂದ ಫ್ರಾನ್ಸಿನ ರಾಜ್ಯಕ್ರಾಂತಿಯ ವಿಷಯದಲ್ಲಿ ಜನರಲ್ಲಿ ಮೊದಮೊದಲು ಹುಟ್ಟಿದ ಸಹಾನುಭೂತಿ ಕಡಿಮೆಯಾಗಲಾರಂಭಿಸಿತು. ಈ ರಾಜ್ಯಕ್ರಾಂತಿಯಾಗಿ ೨ ವರ್ಷಗಳಾಗಿರಲಿಲ್ಲ, ಅಷ್ಟರಲ್ಲಿಯೆ ೧೭೯೦ನೆಯ ಇಸ್ವಿಯ ನವೆಂಬರ ತಿಂಗಳಲ್ಲಿ ಬರ್ಕನೆಂಬ ವ್ಹಿಗ್‌ಪಕ್ಷದ ಪ್ರಮುಖ ಪುರುಷನು **"ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿಯ ವಿಷಯದಲ್ಲಿ ಕೆಲವು ವಿಚಾರಗಳು"** (Reflections on the Revolution in France) ಎಂಬ ಪುಸ್ತಕವನ್ನು ಬರೆದು ರಾಜ್ಯಕ್ರಾಂತಿಯ ವಿರುದ್ಧವಾಗಿ ತನ್ನ ಮತವನ್ನು ವ್ಯಕ್ತಗೊಳಿಸಿದನು. ಪರಂಪರಾಗತವಾದ ರೂಢಿಗೆ ಯೋಗ್ಯವಾದ ಮಾನವನ್ನಿತ್ತು ಪರಂಪರೆಯನ್ನು ಅನುಸರಿಸಿಯೆ ಹೊಸ ಸುಧಾರಣೆಗಳನ್ನು ಮಾಡಿದರೆ ಅವು ಚಿರಸ್ಥಾಯಿಯಾಗ ಬಲ್ಲುವೆಂದು ತನ್ನ ಮತವನ್ನು ಆ ಗ್ರಂಥದಲ್ಲಿ ಅವನು ಸ್ಪಷ್ಟವಾಗಿ ವ್ಯಕ್ತಗೊಳಿಸಿ ದನು. ಫ್ರಾನ್ಸಿನ ರಾಜ್ಯಕ್ರಾಂತಿಯ ವಿರುದ್ಧವಾಗಿ ಲೋಕಮತವನ್ನು ಸಿದ್ಧಗೊಳಿ ಸುವ ಕಾರ್ಯದಲ್ಲಿ ಈ ಗ್ರಂಥದಿಂದ ಬಹಳ ಸಾಹಾಯ್ಯವಾಯಿತು.

**ಫ್ರಾನ್ಸಿನೊಡನೆ ಯುದ್ಧವು ಪ್ರಾರಂಭವಾಗುವುದು (೧೭೯೩)**— ಯುರೋಪದ ಇತರ ರಾಷ್ಟ್ರಗಳಲ್ಲಿಯ ಜನರು ಫ್ರೆಂಚ ಜನರ ಅನುಕರಣವನ್ನು ಮಾಡಿ ತಮ್ಮ ತಮ್ಮ ರಾಷ್ಟ್ರಗಳಲ್ಲಿ ರಾಜ್ಯಕ್ರಾಂತಿಯನ್ನು ಮಾಡಿದರೆ ಅದಕ್ಕೆ ಫ್ರಾನ್ಸಿನಿಂದ ಸಾಹಾಯ್ಯವು ದೊರೆಯಬಹುದೆಂದು ಫ್ರಾನ್ಸಿನಲ್ಲಿಯ ಕ್ರಾಂತಿ ಕಾರಿಗಳು ಪ್ರಕಟಿಸಿದ್ದರು. ಅದರಿಂದ ಯುರೋಪದಲ್ಲಿಯ ಆಸ್ಟ್ರಿಯಾ ಮತ್ತು ಪ್ರಶಿಯಾ ಈ ರಾಷ್ಟ್ರಗಳು ಫ್ರಾನ್ಸಿನ ವಿರುದ್ಧವಾಗಿ ಯುದ್ಧವನ್ನು ಸಾರಿದುವು (೧೭೯೨). ಆ ಬಳಿಕ ಫ್ರಾನ್ಸು ಆಸ್ಟ್ರಿಯದ ವಶದಲ್ಲಿದ್ದ ನೆದರ್ಲಂಡ (ಬೆಲ್‌ಜಮ್) ಪ್ರಾಂತಕ್ಕೆ ದಾಳಿಯಿಕ್ಕಿ ಅದನ್ನು ತನ್ನ ವಶದಲ್ಲಿ ತೆಗೆದುಕೊಂಡಿತು, ಮತ್ತು ಹಾಲಂಡಿನ ಮೇಲೆ ದಾಳಿಯಿಕ್ಕಬೇಕೆಂದು ಯೋಚಿಸಿತು ಮತ್ತು ಈ ಮೊದಲೆ ಆದ ಒಪ್ಪಂದಗಳನ್ನು ಲೆಕ್ಕಿಸದೆ **ಶೇಲ್ಡಟ್** ನದಿ ಯುರೋಪದಲ್ಲಿಯ ಎಲ್ಲ ರಾಷ್ಟ್ರಗಳಿಗೆ ವ್ಯಾಪಾರಕ್ಕೋಸುಗ ಉಪಯೋಗಿಸಲ್ಪಡಲು ಪ್ರತಿಬಂಧವಿಲ್ಲವೆಂದು ಸಾರಿತು. ಆದರೆ ಅದರಿಂದ ಹಾಲಂಡ್ ಮತ್ತು ಇಂಗ್ಲಂಡ್, ಇವುಗಳ ವ್ಯಾಪಾರಕ್ಕೆ ತೊಂದರೆಯಾಗತೊಡಗಿತು. ಇಂಗ್ಲಂಡಿನಲ್ಲಿ ಕ್ರಾಂತಿಕಾರಕ ವಿಚಾರಗಳನ್ನು ಹಬ್ಬಿ ಸಲು ಫ್ರೆಂಚ ಕ್ರಾಂತಿಕಾರಿಗಳಾದ ಜನರ ಪ್ರೋತ್ಸಾಹನದಿಂದ ಕೆಲವು ಸಂಘಗಳು

ಸ್ಥಾಪಿಸಲ್ಪಟ್ಟುವು. ಆದುದರಿಂದ ಇಂಗ್ಲಂಡು, ಆಸ್ಟ್ರಿಯಾ, ಪ್ರಶಿಯಾ, ಹಾಲಂಡ್, ಸ್ಪೇನ ಈ ರಾಷ್ಟ್ರಗಳೊಡನೆ ಫ್ರಾನ್ಸಿನ ವಿರುದ್ಧವಾಗಿ ಒಂದು ಸಂಘವನ್ನು ಸ್ಥಾಪಿಸಿತು. ಆಗ ಫ್ರಾನ್ಸು ಇಂಗ್ಲಂಡಿನೊಡನೆ ಯುದ್ಧವನ್ನು ಸಾರಿತು (೧೭೯೩). ಈ ಯುದ್ಧವು ೧೮೦೨ರ ವರೆಗೆ ಸಾಗಿತು. ನಡುವೆ ೧೮೦೨ರಲ್ಲಿ ಮಾರ್ಚ ತಿಂಗಳಲ್ಲಿ ಒಪ್ಪಂದವಾಗಿದ್ದಿತು. ಆದರೆ ಮತ್ತೆ ಯುದ್ಧವು ಪ್ರಾರಂಭವಾಯಿತು (ಮೇ ೧೮೦೩). ಯುದ್ಧವು ಪ್ರಾರಂಭವಾದ ಸಮಯದಲ್ಲಿ ಫ್ರಾನ್ಸಿನ ಬಳಿಯಲ್ಲಿ ಐದು ಲಕ್ಷ ಸೈನಿಕರೂ ೮೩ ಹಡಗುಗಳೂ ಇದ್ದುವು ಮತ್ತು ಇಂಗ್ಲಂಡಿನ ಬಳಿಯಲ್ಲಿ ೩೦ ಸಾವಿರ ಸೈನಿಕರು ಮಾತ್ರ ಇದ್ದರು, ಆದರೆ ಹಡಗುಗಳ ಸಂಖ್ಯೆ ೧೫೩ ಇದ್ದಿತು. ಈ ಬಗೆಯಾಗಿ ಇಂಗ್ಲಂಡು ಸಮುದ್ರದ ಮೇಲೆ ಬಲಾಢ್ಯವಾಗಿದ್ದಿತು, ಫ್ರಾನ್ಸು ಭೂಮಿಯ ಮೇಲೆ ಪ್ರಬಲವಾಗಿದ್ದಿತು. ಇಂಗ್ಲಂಡು ನಡುಗಡ್ಡೆಯಾದುದರಿಂದ ದೊಡ್ಡ ಹಡಗುಪಡೆ ಇಲ್ಲದೆ ಇಂಗ್ಲಂಡಿಗೆ ದಾಳಿಯಿಕ್ಕಲು ಫ್ರಾನ್ಸಿಗೆ ಶಕ್ಯವಿರಲಿಲ್ಲ. ಅದರಂತೆ ಫ್ರಾನ್ಸಿನ ಸೈನ್ಯವು ದೊಡ್ಡದಾಗಿದ್ದುದರಿಂದ ಇತರ ರಾಷ್ಟ್ರಗಳ ಸಾಹಾಯ್ಯವಿಲ್ಲದೆ ಭೂಮಿಯ ಮೇಲೆ ಫ್ರಾನ್ಸನ್ನು ಸೋಲಿಸುವುದು ಕಠಿಣವಾದ ಕೆಲಸವಾಗಿದ್ದಿತು. ಯುದ್ಧವು ಪ್ರಾರಂಭವಾದಾಗ **ವಿಲಿಯಮ್ ಪಿಟ್ಟನು** (ಕಿರಿಯನು) ಮುಖ್ಯ ಮಂತ್ರಿಯಾಗಿದ್ದನು ಮತ್ತು ಅವನು ಫ್ರಾನ್ಸಿನ ವಿರುದ್ಧವಾಗಿ ಮಿತ್ರರಾಷ್ಟ್ರಗಳ ಸಂಘವೊಂದನ್ನು ಏರ್ಪಡಿಸಿ ಅದಕ್ಕೆ ಸೈನ್ಯದ ಮತ್ತು ಹಣದ ಸಾಹಾಯ್ಯವನ್ನು ಕಳಿಸಲು ನಿಶ್ಚಯಿಸಿ ಇಂಗ್ಲಿಶ್ ಸೈನ್ಯವನ್ನು ಹಾಲಂಡಿಗೆ ಕಳುಹಿದನು (೧೭೯೩). ಅದರಂತೆಯೆ ಭೂಮಧ್ಯಸಮುದ್ರದಲ್ಲಿಯೂ ಇಂಗ್ಲಂಡಿನ ವರ್ಚಸ್ಸನ್ನು ಸ್ಥಾಪಿಸಲು ಕೆಲವು ಇಂಗ್ಲಿಶ ಹಡಗುಗಳನ್ನು ಅವನು ಅತ್ತಕಡೆಗೆ ಕಳಿಸಿದನು.

**ಭೂಮಿಯ ಮೇಲೆ ಮಿತ್ರರಾಷ್ಟ್ರಗಳ ಪರಾಭವವು**—೧೭೯೩ರಲ್ಲಿ ಇಂಗ್ಲಿಶ್ ಹಡಗುಪಡೆ ಫ್ರಾನ್ಸಿನ ದಕ್ಷಿಣ ತೀರದಲ್ಲಿಯೂ **ಟೂಲೋನ** ಬಂದರವನ್ನು ತೆಗೆದುಕೊಳ್ಳಲು ಪ್ರಯತ್ನಿಸಿತು. ಆದರೆ **ನೆಪೋಲಿಯನ್ ಬೋನಾಪಾರ್ಟ**ನೆಂಬ ತರುಣ ಫ್ರೆಂಚ ಸರದಾರನ ಪರಾಕ್ರಮದ ಮೂಲಕವಾಗಿ ಅದನ್ನು ತೆಗೆದುಕೊಳ್ಳುವುದು ಇಂಗ್ಲಿಶರಿಗೆ ಶಕ್ಯವಾಗಲಿಲ್ಲ. ಆ ಬಳಿಕ **ಲಾರ್ಡ ಹೌ** ಇವನು ಫ್ರೆಂಚ ಹಡಗುಪಡೆಯನ್ನು **ಅಶಾಂಟ** ಎಂಬಲ್ಲಿ ಸೋಲಿಸಿದನು. ಆದರೆ ಮಿತ್ರರಾಷ್ಟ್ರಗಳು ಭೂಮಿಯ ಮೇಲೆ ಸೋತುವು. ೧೭೯೫ರಲ್ಲಿ ಫ್ರೆಂಚ ಸೈನ್ಯವು ಇಂಗ್ಲಿಶ ಸೈನ್ಯವನ್ನು ಹಾಲಂಡಿನಿಂದ ಹೊರಗಟ್ಟಿ ಆ ದೇಶದಲ್ಲಿ ತನ್ನ ವರ್ಚಸ್ಸನ್ನು ನೆಲೆಗೊಳಿಸಿತು. ಆದುದರಿಂದ ಹಾಲಂಡು ಫ್ರಾನ್ಸಿನೊಡನೆ ಮಿತ್ರತ್ವದ ಒಪ್ಪಂದವನ್ನು ಮಾಡಿಕೊಂಡಿತು. ಆಗ ಇಂಗ್ಲಂಡು ಡಚ್‌ಜನರ ವಶದಲ್ಲಿದ್ದ ಕೇಫ ಆಫ್ ಗುಡ್

ಹೋಪನ್ನು (೧೭೯೫) ಮತ್ತು ಸಿಂಹಲದ್ವೀಪವನ್ನು (೧೭೯೬) ಗೆದ್ದು ತೆಗೆದು ಕೊಂಡಿತು. ಹಾಲಂಡಿನಂತೆ ಪ್ರಶಿಯಾ ಮತ್ತು ಸ್ಪೇನ ಈ ರಾಷ್ಟ್ರಗಳೂ ಫ್ರಾನ್ಸಿ ನೊಡನೆ ಒಪ್ಪಂದವನ್ನು ಮಾಡಿಕೊಂಡುವು (೧೭೯೫). ಆ ಬಳಿಕ ಇಟಲಿಯಲ್ಲಿಯ ಆಸ್ಟ್ರಿಯದ ವರ್ಚಸ್ಸನ್ನು ನಷ್ಟಗೊಳಿಸಲು ಡಿರೆಕ್ಟರಿಯಿಂದ ನೆಪೋಲಿಯನ್ ಬೋನಾಪಾರ್ಟನು ಕಳಿಸಲ್ಪಟ್ಟನು. ಈ ಯುದ್ಧದಲ್ಲಿ ನೆಪೋಲಿಯನನು ಇಟ ಲಿಯ ಉತ್ತರ ಭಾಗದಿಂದ ಆಸ್ಟ್ರಿಯನ್ ಸೈನ್ಯವನ್ನು ಹೊರಗಟ್ಟಿದನು. ಕೆಂಪೋ ಫಾರ್ಮಿಯೋ ಎಂಬಲ್ಲಿ ಆಸ್ಟ್ರಿಯಾ ದೇಶವು ಒಪ್ಪಂದವನ್ನು ಮಾಡಿಕೊಳ್ಳ ಬೇಕಾಯಿತು (೧೭೯೭). ಆ ಬಳಿಕ ನೆಪೋಲಿಯನನು ರೋಮದವರೆಗೆ ಹೋಗಿ ಪೋಪನೊಡನೆ ಒಪ್ಪಂದವನ್ನು ಮಾಡಿಕೊಂಡು ಇಟಲಿಯ ಉತ್ತರ ಭಾಗದಲ್ಲಿ ಫ್ರೆಂಚರ ವರ್ಚಸ್ಸನ್ನು ನೆಲೆಗೊಳಿಸಿದನು. ಆಸ್ಟ್ರಿಯದೊಡನೆ ಆದ ಯುದ್ಧದಲ್ಲಿ ಯಶಸ್ಸನ್ನು ಸಂಪಾದಿಸಿ ನೆಪೋಲಿಯನನು ಬಹು ಪ್ರಸಿದ್ಧನಾದನು. ಡಿರೆಕ್ಟರ ಅವನನ್ನು ಫ್ರೆಂಚ ಸೈನ್ಯದ ಮುಖ್ಯ ಸೇನಾಪತಿಯಾಗಿ ನಿಯೋಜಿಸಿತು.

**ಸಮುದ್ರದ ಮೇಲೆ ಇಂಗ್ಲಂಡಿನ ಹಡಗುಪಡೆಯ ವಿಜಯವು**— ಹಾಲಂಡ್, ಸ್ಪೇನ, ಪ್ರಶಿಯಾ, ಆಸ್ಟ್ರಿಯಾ ಈ ರಾಷ್ಟ್ರಗಳನ್ನು ಫ್ರಾನ್ಸು ಸೋಲಿಸಿ ದುದರಿಂದ ಅವು ಫ್ರಾನ್ಸಿನೊಡನೆ ಒಪ್ಪಂದವನ್ನು ಮಾಡಿಕೊಳ್ಳಬೇಕಾಯಿತು. ಆದುದರಿಂದ ಫ್ರಾನ್ಸಿನ ವಿರುದ್ಧವಾಗಿ ಇಂಗ್ಲಂಡು ಸ್ಥಾಪಿಸಿದ ಮಿತ್ರರಾಷ್ಟ್ರಗಳ ಸಂಘವು ನಷ್ಟವಾಯಿತು. ತರುವಾಯದಲ್ಲಿ ತನ್ನ ವರ್ಚಸ್ಸಿನ ಕೆಳಗಿದ್ದ ಸ್ಪೇನ ಮತ್ತು ಹಾಲಂಡ್ ಈ ರಾಷ್ಟ್ರಗಳ ಹಡಗುಪಡೆಗಳ ಸಾಹಾಯ್ಯದಿಂದ ಇಂಗ್ಲಂಡಿನ ಮೇಲೆ ಹಡಗುಪಡೆಯ ದಾಳಿಯಿಕ್ಕಲು ಫ್ರಾನ್ಸು ನಿಶ್ಚಯಿಸಿತು. ಫ್ರೆಂಚ ಜನರ ಪ್ರೇರಣೆಯಿಂದ ಐರ್ಲಂಡಿನಲ್ಲಿ ಬಂಡುಗಳು ತಲೆದೋರಿದುವು ಮತ್ತು ಇಂಗ್ಲಂಡಿ ನಲ್ಲಿಯೂ ಅಸ್ವಸ್ಥತೆ ಹುಟ್ಟಿತು. ಇಂಗ್ಲಂಡಿನಲ್ಲಿ ಈ ಬಗೆಯಾಗಿ ಬಿಕ್ಕಟ್ಟಿನ ಪರಿಸ್ಥಿತಿ ಒದಗಲು ಇಂಗ್ಲಿಶ್ ಹಡಗುಪಡೆ ಕಲ್ಪನಾತೀತವಾದ ಮಹತ್ವದ ಕಾರ್ಯ ವನ್ನು ಮಾಡಿತು. ೧೭೯೭ರಲ್ಲಿ ಫೆಬ್ರುವರಿ ತಿಂಗಳಲ್ಲಿ ಅಡ್ಮಿರಲ್ ಜರ್ವಿಸ್ ಮತ್ತು ಕಮಂಡರ ನೆಲ್ಸನ್ ಇವರು ಸೇಂಟ ವಿನ್‌ಸೆಂಟ್ ಎಂಬಲ್ಲಿ ಸ್ಪಾನಿಶ್ ಹಡಗುಪಡೆಯನ್ನು ಸೋಲಿಸಿದರು. ಅದರಂತೆ ಅದೇ ವರ್ಷದ ಅಕ್ಟೋಬರ ತಿಂಗಳಲ್ಲಿ ಅಡ್ಮಿರಲ್ ಡಂಕನನು ಕೆಂಪರಡೌನ್ ಎಂಬಲ್ಲಿ ಡಚ್ ಹಡಗುಪಡೆಯನ್ನು ಸೋಲಿಸಿದನು. ಈ ವಿಜಯಗಳು ದೊರೆತುದರಿಂದ ಇಂಗ್ಲಂಡಿನ ಮೇಲೆ ಹಡಗುಪಡೆಯ ದಾಳಿ ಬರುವ ಭೀತಿ ತಪ್ಪಿತು, ಮತ್ತು ಸಮುದ್ರದ ಮೇಲೆ ಇಂಗ್ಲಂಡಿನ ವರ್ಚಸ್ಸು ಉಳಿಯಿತು.

ಇಂಗ್ಲಂಡ್ ಮತ್ತು ಐರ್ಲಂಡ್‌ಗಳಲ್ಲಿಯ ಅಸ್ವಸ್ಥತೆ—ಮೇಲೆ ಹೇಳಿದ ಹಡಗುಪಡೆಯ ಯುದ್ಧವು ನಡೆದಿರುವಾಗ ಸ್ಪಿಟ್‌ಹೆಡ್ ಮತ್ತು ನೋರ ಎಂಬ




ಇಂಗ್ಲಂಡ್, ಫ್ರಾನ್ಸ ಮತ್ತು ನೆದರಲಂಡ ಇವುಗಳ ದಂಡೆಯ ಮೇಲಿನ ಮಹತ್ವದ ಊರುಗಳು.

ಲ್ಲಿಯ ಇಂಗ್ಲಿಶ್ ಹಡಗುಪಡೆಯಲ್ಲಿಯ ನಾವಿಕರು ತಮಗೆ ಕೊಡಲ್ಪಡುತ್ತಿರುವ ಅನ್ನವು ಕೆಟ್ಟುದಾಗಿರುವುದೆಂದೂ ಸಂಬಳವು ಅಲ್ಪವಾಗಿರುವುದೆಂದೂ ತಮ್ಮನ್ನು ಅಧಿಕಾರಿಗಳು ಕೆಟ್ಟ ರೀತಿಯಿಂದ ನಡೆಯಿಸಿಕೊಳ್ಳುವರೆಂದೂ ಬಂಡನ್ನು ಹೂಡಿದರು (೧೭೯೭). ಉಗ್ರೋಪಾಯಗಳಿಂದ ಈ ಬಂಡು ಮುರಿಯಲ್ಪಟ್ಟಿತು. ಆದರೆ ನಾವಿಕರಲ್ಲಿ ಅಸಂತೋಷವು ಇಲ್ಲದಾಗಬೇಕೆಂದು ಅನೇಕ ಸುಧಾರಣೆಗಳು ಮಾಡಲ್ಪಟ್ಟುವು. ಇತ್ತ ಐರ್ಲಂಡಿನಲ್ಲಿ ಬಂಡುಗಳು ಹುಟ್ಟಿದ್ದುವು. ಬಂಡುಗಾರರಿಗೆ ನೆರವಾಗಲು ಫ್ರಾನ್ಸು ಸೈನ್ಯವನ್ನೂ ಹಡಗುಗಳನ್ನೂ ಕಳಿಸಿತು (೧೭೯೭). ಆದರೆ ಇಂಗ್ಲಿಶ್ ಹಡಗುಪಡೆಯ ಪ್ರಾಬಲ್ಯವನ್ನು ಕಂಡು ಅವು ತಿರುಗಬೇಕಾಯಿತು.

ಇಜಿಪ್ತದ ಮೇಲೆ ನೆಪೋಲಿಯನನ ದಾಳಿ (೧೭೯೮)—ಸ್ಪೆನಿಶ್

ಮತ್ತು ಡಚ್ ಹಡಗುಪಡೆಗಳ ಸಾಹಾಯ್ಯದಿಂದ ಇಂಗ್ಲಂಡಿಗೆ ದಾಳಿಯಿಕ್ಕಲು ಫ್ರಾನ್ಸು ಮಾಡಿದ ಪ್ರಯತ್ನವು ಅಯಶಸ್ವಿಯಾಯಿತು. ಆದುದರಿಂದ ಇಜಿಪ್ತ, ಸಿರಿಯಾ ಮತ್ತು ಹಿಂದುಸ್ಥಾನ ಈ ದೇಶಗಳನ್ನು ಗೆದ್ದು ಹಿಂದುಸ್ಥಾನದಲ್ಲಿಯ ಇಂಗ್ಲಿಶರ ಮಹತ್ವವನ್ನೂ ವರ್ಚಸ್ಸನ್ನೂ ನಷ್ಟಗೊಳಿಸಿ ಪೂರ್ವದ ಕಡೆಯಲ್ಲಿ ಫ್ರೆಂಚರ ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂದು ನೆಪೋಲಿಯಸನು ಬಗೆದನು. ಫ್ರಾನ್ಸಿನ ಡಿರೆಕ್ಟರಿಗೂ ಈ ಯೋಜನೆ ಮಾನ್ಯವಾಯಿತು ಮತ್ತು ಈ ಕೆಲಸವನ್ನು ನೆರವೇರಿಸಲು ಅದು ನೆಪೋಲಿಯನನನ್ನು ನಿಯೋಜಿಸಿತು. ನೆಪೋಲಿಯನನು ತನ್ನ ಹಡಗುಪಡೆಯನ್ನು ಇಜಿಪ್ತದ ಕಡೆಗೆ ತಿರುಗಿಸಿದನು ಮತ್ತು ಮಾರ್ಗದಲ್ಲಿ ಮಾಲ್ಟಾ ನಡುಗಡ್ಡೆಯನ್ನು ತೆಗೆದುಕೊಂಡನು. ನೆಪೋಲಿಯನನ ಈ ಚಲನವಲನದ ವಾರ್ತೆಯನ್ನು ಕೇಳಿ ಇಂಗ್ಲಂಡಿನ ಹಡಗುಪಡೆಯ ಸೇನಾಪತಿಯಾದ **ನೆಲ್ಸನನು** ನೆಪೋಲಿಯನನನ್ನು ಬೆನ್ನಟ್ಟಿ ಬಂದನು, ಮತ್ತು ನೆಪೋಲಿಯನನು ಇಜಿಪ್ತದಲ್ಲಿ ಇರುವಾಗ ಫ್ರೆಂಚ ಹಡಗುಪಡೆಯನ್ನು ಅಬೂಕರ ಆಖಾತದಲ್ಲಿ ನಾಯಿಲ್ ನದಿಯ ಮುಖದ ಬಳಿಯಲ್ಲಿ ೧೭೯೮, ಆಗಸ್ಟ ೧ನೆಯ ತಾರೀಖಿನ ದಿವಸ ಸೋಲಿಸಿದನು. ಈ ಯುದ್ಧಕ್ಕೆ **ನಾಯಿಲ್ ಯುದ್ಧವೆಂದು** ಹೆಸರು. ಫ್ರೆಂಚ ಹಡಗುಪಡೆಯ ಈ ಪರಾಭವದಿಂದ ನೆಪೋಲಿಯನನಿಗೆ ಫ್ರಾನ್ಸಿನ ಸಂಬಂಧವು ತಪ್ಪಿದಂತಾಯ್ತು. ಇಂತಹ ಬಿಕ್ಕಟ್ಟಿನ ಸ್ಥಿತಿಯಲ್ಲಿಯೂ ನೆಪೋಲಿಯನನು ೧೭೯೮ರಲ್ಲಿ **ಪಿರಮಿಡಸ್** ಯುದ್ಧದಲ್ಲಿ ಬಲಾಢ್ಯವಾದ ಇಜಿಪ್ಶಿಯನ್ ಸೈನ್ಯವನ್ನು ಸೋಲಿಸಿ ತುರ್ಕಸ್ಥಾನದ ವಶದಲ್ಲಿದ್ದ ಇಜಿಪ್ತದ ಮೇಲೆ ತನ್ನ ವರ್ಚಸ್ವವನ್ನು ಸ್ಥಾಪಿಸಿದನು. ಆ ಬಳಿಕ ಅವನು ಸಿರಿಯಾ ಪ್ರಾಂತಕ್ಕೆ ದಾಳಿಯಿಕ್ಕಿದನು. ಫ್ರಾನ್ಸಿನೊಡನೆ ತಪ್ಪಿದ ಸಂಬಂಧವನ್ನು ಮತ್ತೆ ಕೂಡಿಸಲು ಏಕರ ಎಂಬ ಬಂದರವನ್ನು ತೆಗೆದುಕೊಳ್ಳಲು ನೆಪೋಲಿಯನನು ಪ್ರಯತ್ನಿಸಿದನು. ಆದರೆ ಸರ್ ಸಿಡನೆ ಸ್ಮಿಥ್ ಎಂಬವನು ಈ ಸ್ಥಳವನ್ನು ಸಂರಕ್ಷಿಸಿದುದರಿಂದ ನೆಪೋಲಿಯನನಿಗೆ ಯಶವು ದೊರೆಯಲಿಲ್ಲ (೧೭೯೯).

ನೆಪೋಲಿಯನನು ಇಜಿಪ್ತದಲ್ಲಿದ್ದಾಗ ಯುರೋಪದಲ್ಲಿ ಇಂಗ್ಲಂಡ್, ರಶಿಯಾ, ಆಸ್ಟ್ರಿಯಾ, ಟರ್ಕಿ, ಮೊದಲಾದ ರಾಷ್ಟ್ರಗಳು ಫ್ರಾನ್ಸಿನ ವಿರುದ್ಧವಾಗಿ ಮತ್ತೊಂದು ಸಂಘವನ್ನು ಸ್ಥಾಪಿಸಿದುವು (೧೭೯೯). ಈ ಸಂಘವು ೧೭೯೯ರಲ್ಲಿ ಜರ್ಮನಿ, ಇಟಲಿ, ಮತ್ತು ಹಾಲಂಡ್, ಇವುಗಳಲ್ಲಿದ್ದ ಫ್ರೆಂಚ ಸೈನ್ಯವನ್ನು ಹೊಡೆದಟ್ಟಿದುವು. ಯುರೋಪದಲ್ಲಿ ಎಲ್ಲೆಲ್ಲಿಯೂ ಫ್ರೆಂಚ ಸೈನ್ಯವು ಸೋಲುತ್ತಿರುವುದೆಂಬ ವಾರ್ತೆಯನ್ನು ಕೇಳಿ ನೆಪೋಲಿಯನನು ಹಿಂದುಸ್ಥಾನದ ಕಡೆಗೆ ಹೋಗ

ಬೇಕೆಂಬ ಆಲೋಚನೆಯನ್ನು ಬಿಟ್ಟು ಇಂಗ್ಲಿಶ್ ಹಡಗುಪಡೆಯನ್ನು ತಪ್ಪಿಸಿ ತನ್ನ ಅನುಯಾಯಿಗಳೊಡನೆ ೧೭೯೯, ೯ನೆಯ ಅಕ್ಟೋಬರ ದಿವಸ ಫ್ರಾನ್ಸಿನಲ್ಲಿ ಬಂದಿಳಿದನು.

ನೆಪೋಲಿಯನನು ಫ್ರಾನ್ಸದೇಶವನ್ನು ಬಿಟ್ಟು ಹೊರಗೆ ಹೋದಾಗ ಯುರೋಪದಲ್ಲಿ ಎಲ್ಲೆಲ್ಲಿಯೂ ಫ್ರಾನ್ಸಿಗೆ ಅಪಜಯವು ಬಂದುದರಿಂದ ಡಿರೆಕ್ಟರಿಯ ಲೋಕಪ್ರಿಯತೆ ನಷ್ಟವಾಗಿತ್ತು, ಮತ್ತು ಯುರೋಪದಲ್ಲಿ ಫ್ರಾನ್ಸಿನ ವರ್ಚಸ್ಸನ್ನು ಮತ್ತೆ ಸ್ಥಾಪಿಸಲು ಯಾವನಾದರೂ ಸಮರ್ಥನಾಗಿದ್ದರೆ ಅವನು ನೆಪೋಲಿಯನನೆ ಎಂದು ಜನರಿಗೆ ಎನಿಸುತ್ತಿತ್ತು. ಕಳೆದ ೧೦ ವರ್ಷಗಳಲ್ಲಿ ಫ್ರಾನ್ಸಿನಲ್ಲಿ ಉಂಟಾಗಿದ್ದ ಅರಾಜಕತೆಗೆ ಬೇಸತ್ತ ಜನರಿಗೆ ಏಕಮುಖಿಯಾದ ಸತ್ತೆ ಸ್ಥಾಪಿಸಲ್ಪಡುವುದು ಬೇಕಾಗಿದ್ದಿತು. ಜನರಿಗೆ ತನ್ನ ವಿಷಯದಲ್ಲಿ ವಿಶ್ವಾಸವಿದ್ದುದನ್ನು ಕಂಡು ನೆಪೋಲಿಯನನು ಡಿರೆಕ್ಟರಿಯ (೫ ಜನ ಮಂಡಳದ) ಸತ್ತೆಯನ್ನು ನಷ್ಟಗೊಳಿಸಿ ಫ್ರಾನ್ಸಿನ ರಾಜ್ಯಕಾರಭಾರದ ಎಲ್ಲ ಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ಫ್ರಾನ್ಸಿನ ಲೋಕಸತ್ತಾತ್ಮಕ ರಾಜ್ಯದ **ಕಾನ್‌ಸಲ್** (ಅಧ್ಯಕ್ಷ) ಎಂಬ ಪ್ರಾಚೀನ ರೋಮನ್ ಜನರ ಕಾಲದ ಬಿರುದನ್ನು ಅವನು ಧರಿಸಿದನು (೧೭೯೯). ನೆಪೋಲಿಯನನು ಫ್ರಾನ್ಸಿನ ಮುಖ್ಯ ಸೇನಾಪತಿಯಾಗಿದ್ದನು ಮತ್ತು ಕಾನ್‌ಸಲನಾದುದರಿಂದ ರಾಜ್ಯಕಾರಭಾರದ ಎಲ್ಲ ಸೂತ್ರಗಳೂ ಅವನ ಕೈಯಲ್ಲಿ ಬಂದುವು. ಆದರೆ ಇಷ್ಟರಿಂದ ಅವನಿಗೆ ಸಮಾಧಾನವಾಗಲಿಲ್ಲ. ೧೮೦೪ರಲ್ಲಿ ಅವನು **ರೋಮದ ಪೋಪನನ್ನು** ಪರಿಸ್ ನಗರಕ್ಕೆ ಕರೆಯಿಸಿ ಅವನಿಂದ **ರಾಜ್ಯಾಭಿಷೇಕವನ್ನು** ಮಾಡಿಸಿಕೊಂಡನು ಮತ್ತು **ಫ್ರೆಂಚರ ಬಾದಶಹನೆಂದು** ಬಿರುದನ್ನು ಧರಿಸಿದನು. ಈ ಬಗೆಯಾಗಿ ಫ್ರಾನ್ಸಿನಲ್ಲಿ ಲೋಕಸತ್ತಾತ್ಮಕ ರಾಜ್ಯಪದ್ಧತಿ ನಷ್ಟವಾಗಿ ಅಲ್ಲಿ ಮತ್ತೆ ಏಕತಂತ್ರಿಯಾದ ರಾಜಸತ್ತೆ ಸ್ಥಾಪಿತವಾಯಿತು.

**ನೆಪೋಲಿಯನನು ಮಿತ್ರರಾಷ್ಟ್ರಗಳನ್ನು ಸೋಲಿಸುವನು**—ನೆಪೋಲಿಯನನು ಇಜಿಪ್ತದಲ್ಲಿ ಇರುವಾಗ ಫ್ರಾನ್ಸಿನ ವಿರುದ್ಧವಾಗಿ ಇಂಗ್ಲಂಡ್, ರಶಿಯಾ, ಆಸ್ಟ್ರಿಯಾ ಮತ್ತು ತುರ್ಕಸ್ಥಾನ ಈ ರಾಷ್ಟ್ರಗಳ ಎರಡನೆಯ ಸಂಘವು ಸ್ಥಾಪಿಸಲ್ಪಟ್ಟಿತ್ತು, ಮತ್ತು ಇಟಲಿಯ ಉತ್ತರ ಭಾಗದಲ್ಲಿ ಫ್ರೆಂಚರ ವರ್ಚಸ್ಸು ನಷ್ಟವಾಗಿ ಮತ್ತೆ ಆಸ್ಟ್ರಿಯದ ವರ್ಚಸ್ಸು ಸ್ಥಾಪಿಸಲ್ಪಟ್ಟಿತ್ತು. ಆದುದರಿಂದ ಅಲ್ಲಿ ಫ್ರೆಂಚ ಜನರ ವರ್ಚಸ್ಸನ್ನು ತಿರುಗಿ ಸ್ಥಾಪಿಸಲು ಆಸ್ಟ್ರಿಯದ ವಿರುದ್ಧವಾಗಿ ಸೈನ್ಯವನ್ನು ಕಳಿಸಲು ನೆಪೋಲಿಯನನು ನಿಶ್ಚಯಿಸಿದನು. ಅವನು **ಮೋರೋ** ಎಂಬ ಸೇನಾಪತಿಯನ್ನು ಜರ್ಮನಿಯಲ್ಲಿಯ ಆಸ್ಟ್ರಿಯ ವಶದಲ್ಲಿದ್ದ ಪ್ರದೇಶವನ್ನು

ತೆಗೆದುಕೊಳ್ಳಲು ಕಳುಹಿದನು ಮತ್ತು ತಾನು ಇಟಲಿಗೆ ದಂಡೆತ್ತಿ ಹೋದನು. ನೆಪೋಲಿಯನನು ೧೮೦೦ರಲ್ಲಿ (೧೪ನೆಯ ಜೂನ) **ಮೊರೆಂಗೊ** ಎಂಬಲ್ಲಿಯ ಯುದ್ಧದಲ್ಲಿ ಆಸ್ಟ್ರಿಯನ್ ಸೈನ್ಯವನ್ನು ಸೋಲಿಸಿದನು ಮತ್ತು ಇಟಲಿಯ ಉತ್ತರ ಭಾಗದಲ್ಲಿ ತನ್ನ ವರ್ಚಸ್ಸನ್ನು ಸ್ಥಾಪಿಸಿದನು. ಇತ್ತ ಜರ್ಮನಿಯಲ್ಲಿ ಹೋದ ಮೋರೋ ಇವನು **ಹೊಯೆನ್‌ಲಿಂಡೆನಿನ** ಯುದ್ಧದಲ್ಲಿ (೧೮೦೦ ಡಿಸೆಂಬರ) ಆಸ್ಟ್ರಿಯನ್ ಸೈನ್ಯವನ್ನು ಸೋಲಿಸಿ ರ್‍ಹೈನ್ ನದಿಯ ದಕ್ಷಿಣದ ಪ್ರದೇಶದ ಮೇಲೆ ಫ್ರಾನ್ಸಿನ ವರ್ಚಸ್ಸನ್ನು ನೆಲೆಗೊಳಿಸಿದನು. ಈ ಬಗೆಯಾಗಿ ಆಸ್ಟ್ರಿಯಕ್ಕೆ ಪರಾಭವವು ಒದಗಿದುದರಿಂದ ಆಸ್ಟ್ರಿಯವು **ಲ್ಯೂನೆವ್ಹಿಲ್** ಎಂಬಲ್ಲಿ ನೆಪೋಲಿಯನನೊಡನೆ ಒಪ್ಪಂದವನ್ನು ಮಾಡಿಕೊಂಡಿತು (೧೮೦೧). ಈ ಮೊದಲು ರಶಿಯಾ ದೇಶವೂ ಫ್ರಾನ್ಸಿನ ವಿರುದ್ಧವಾಗಿ ಸ್ಥಾಪಿತವಾದ ಸಂಘದಿಂದ ಒಡೆದು ಹೊರಗೆ ಬಂದು ಡೆನ್ಮಾರ್ಕ ಮತ್ತು ಸ್ವೀಡನ್ ಈ ರಾಷ್ಟ್ರಗಳೊಡನೆ ಸಶಸ್ತ್ರ ತಟಸ್ಥತೆಯ (Armed Neutrality) ಒಪ್ಪಂದವನ್ನು ಮಾಡಿಕೊಂಡಿತ್ತು (೧೮೦೦). ಆದರೆ ಈ ರಾಷ್ಟ್ರಗಳ ಹಡಗುಗಳಲ್ಲಿ ಫ್ರೆಂಚರ ಮಾಲು ಇರುವದೊ ಹೇಗೆಂಬದನ್ನೂ ಮತ್ತು ಈ ರಾಷ್ಟ್ರಗಳಿಂದ ಫ್ರಾನ್ಸಿಗೆ ಯುದ್ಧಸಾಮಗ್ರಿಗಳ ಸಾಹಾಯ್ಯವಾಗುತ್ತಿರುವದೊ ಹೇಗೆಂಬುದನ್ನೂ ನೋಡಲು ಆ ರಾಷ್ಟ್ರಗಳ ಹಡಗುಗಳನ್ನು ಪರೀಕ್ಷಿಸಲು ಇಂಗ್ಲಂಡು ಆಗ್ರಹವನ್ನು ತೊಟ್ಟಿತು. ಆದರೆ ಡೆನ್ಮಾರ್ಕ, ಸ್ವೀಡನ್ ಮತ್ತು ರಶಿಯಾ ಇವು ಈ ಆಗ್ರಹವನ್ನು ವಿರೋಧಿಸಿದುದರಿಂದ ಇಂಗ್ಲಂಡಿಗೂ ಅವುಗಳಿಗೂ ವೈಮನಸ್ಸು ಉಂಟಾಯಿತು. ಇಂಗ್ಲಿಶ್ ಹಡಗು ಪಡೆಯ ಸೇನಾಪತಿಗಳಾದ **ಪಾರ್ಕರ್** ಮತ್ತು **ನೆಲ್ಸನ್** ಇವರು **ಕೊಪೆನ್‌ಹೇಗದ** ಯುದ್ಧದಲ್ಲಿ (೧೮೦೧) ಡೆನ್ಮಾರ್ಕದ ಹಡಗುಪಡೆಯನ್ನು ಸೋಲಿಸಿದರು.


ನೆಪೋಲಿಯನ್ ಬೋನಾಪಾರ್ಟನು

ಭೂಮಧ್ಯಸಮುದ್ರದಲ್ಲಿಯ ಮಾಲ್ಟಾ ನಡುಗಡ್ಡೆಯನ್ನು ಇಂಗ್ಲಿಶ ಹಡಗು ಪಡೆ ಗೆದ್ದು ತೆಗೆದುಕೊಂಡಿತು (೧೮೦೦). ಇತ್ತ ಇಜಿಪ್ತದಲ್ಲಿ ಇದ್ದ ಫ್ರೆಂಚ ಸೈನ್ಯವನ್ನು ಅಂಬರಕ್ರೊಂಬಿ ಇವನು ಅಲೆಕ್ಝಾಂಡ್ರಾ ಎಂಬಲ್ಲಿಯ ಯುದ್ಧದಲ್ಲಿ ಸೋಲಿಸಿದನು. ಆದುದರಿಂದ ಫ್ರೆಂಚ ಸೈನ್ಯವು ಇಜಿಪ್ತವನ್ನು ಬಿಟ್ಟು ಬರಬೇಕಾಯಿತು.

ನೆಪೋಲಿಯನನ ಕಾಲದಲ್ಲಿ ಭೂಮಿಯ ಮೇಲೆಯೂ ಸಮುದ್ರದ ಮೇಲೆಯೂ ಆದ ಕಾಳಗಗಳ ಸ್ಥಳಗಳನ್ನು ತೋರಿಸುವ ನಕ್ಷೆ.

**ಅಮೀನ್ಸಿನ ಒಪ್ಪಂದವು (೧೮೦೨)**—ಈ ಬಗೆಯಾಗಿ ಫ್ರಾನ್ಸಿನ ವಿರುದ್ಧವಾಗಿ ಸ್ಥಾಪಿಸಲ್ಪಟ್ಟಿದ್ದ ಸಂಘದೊಳಗಿನ ಇತರ ರಾಷ್ಟ್ರಗಳೊಡನೆ ಫ್ರಾನ್ಸು ಒಪ್ಪಂದವನ್ನು ಮಾಡಿಕೊಂಡುದರಿಂದ ಇಂಗ್ಲಂಡಿಗೆ ಯಾರ ಸಾಹಾ

ಯ್ಯವೂ ದೊರೆಯದಂತಾಯಿತು. ಆದರೆ ಸಮುದ್ರದ ಮೇಲೆ ಇಂಗ್ಲಂಡಿನ ಸತ್ತೆ ಪ್ರಬಲವಾಗಿದ್ದುದರಿಂದ ದೊಡ್ಡ ಹಡಗುಪಡೆಯನ್ನು ಸಿದ್ಧವಾಗಿಟ್ಟ ಹೊರತು ಇಂಗ್ಲಂಡನ್ನು ಸೋಲಿಸುವುದು ಫ್ರಾನ್ಸಿಗೆ ಶಕ್ಯವಾಗಿರಲಿಲ್ಲ. ಅದರಂತೆ ಭೂಮಿಯ ಮೇಲೆ ಫ್ರೆಂಚರ ಸತ್ತೆ ಬಲಾಢ್ಯವಾಗಿದ್ದುದರಿಂದ ಇತರ ರಾಷ್ಟ್ರಗಳ ಸಾಹಾಯ್ಯವಿಲ್ಲದೆ ಫ್ರಾನ್ಸನ್ನು ಸೋಲಿಸಲು ಇಂಗ್ಲಂಡಿಗೆ ಶಕ್ಯವಾಗಿರಲಿಲ್ಲ. ಆದುದರಿಂದ ಪ್ರಾರಂಭವಾದ ಈ ಯುದ್ಧವನ್ನು ನಿಲ್ಲಿಸಲು ಎರಡೂ ರಾಷ್ಟ್ರಗಳು ೧೮೦೨ರಲ್ಲಿ ಮಾರ್ಚ ತಿಂಗಳಲ್ಲಿ **ಅಮಿಯನ್ಸ್** ಎಂಬಲ್ಲಿ (ಫ್ರಾನ್ಸಿನ ವಾಯವ್ಯ ಭಾಗದಲ್ಲಿಯ ಪಟ್ಟಣವು) ಒಪ್ಪಂದವನ್ನು ಮಾಡಿಕೊಂಡುವು. ಈ ಒಪ್ಪಂದ ದಿಂದ ಇಂಗ್ಲಂಡು ಫ್ರಾನ್ಸಿನ ಲೋಕಸತ್ತಾತ್ಮಕ ರಾಜ್ಯವನ್ನೂ ಅದಕ್ಕೆ ನೆಪೋಲಿ ಯನನು ಅಧ್ಯಕ್ಷನೆಂಬುದನ್ನೂ ಒಪ್ಪಿಕೊಂಡಿತು. ಅದರಂತೆ ಒಬ್ಬರೊಬ್ಬರು ಗೆದ್ದು ತೆಗೆದುಕೊಂಡ ಪ್ರದೇಶಗಳನ್ನೂ ತಿರುಗಿ ಕೊಡಬೇಕು ಎಂದು ನಿಶ್ಚಯಿಸಲ್ಪಟ್ಟಿತು.

**ಪಿಟ್ಟನ ಅಂತಃಸ್ಥ ನೀತಿ**—ಫ್ರಾನ್ಸಿನೊಡನೆ ಯುದ್ಧವು ನಡೆದಿರುವಾಗ ಇಂಗ್ಲಂಡಿನಲ್ಲಿ ಮತ್ತು ಐರ್ಲಂಡಿನಲ್ಲಿ ಕ್ರಾಂತಿಕಾರಕ ವಿಚಾರಗಳನ್ನು ಹಬ್ಬಿಸುವ ಕ್ರಮವು ನಡೆದಿದ್ದಿತು. ಇದರಿಂದ ಇಂಗ್ಲಂಡಿಗೆ ದಾರುಣವಾದ ಪರಿಸ್ಥಿತಿ ಒದಗ ಬಹುದೆಂದು ಬಗೆದು ಪಿಟ್ಟನು ಕ್ರಾಂತಿಕಾರಿಗಳ ಪ್ರಯತ್ನಗಳನ್ನು ಹತ್ತಿಕ್ಕಲು ಉಗ್ರವಾದ ಕಾಯ್ದೆಗಳನ್ನು ಮಾಡಬೇಕಾಯ್ತು. ೧೭೯೩ರಲ್ಲಿ ಅವನು 'ಏಲಿ ಯನ್ ಅಕ್ಟ' (Alien=ಪರಕೀಯ) ಎಂಬ ಕಾಯ್ದೆಯನ್ನು ಮಾಡಿ ಕ್ರಾಂತಿ ಕಾರಕ ಫ್ರೆಂಚ ಜನರಿಗೆ ಇಂಗ್ಲಂಡಿನಲ್ಲಿ ಒರಲು ಪ್ರತಿಬಂಧವನ್ನು ಮಾಡಿದನು. ಆ ಬಳಿಕ 'ಟ್ರೀಟರ್ಸ ಕಾರೆಸ್‌ಪಾಂಡೆನ್ಸ ಬಿಲ್' (ರಾಜದ್ರೋಹಿ ಪತ್ರ ವ್ಯವಹಾರದ ಬಿಲ್ಲು), ಸಭಾಪ್ರತಿಬಂಧಕದ ಕಾಯ್ದೆ ಇವು ಪಾಸುಮಾಡ ಲ್ಪಟ್ಟವು. ೧೭೯೪ರಲ್ಲಿ ಹೇಬಿಯಸ್ ಕಾರ್ಪಸ್ ಅಕ್ಟು ತಾತ್ಪೂರ್ತಿಕವಾಗಿ ರದ್ದುಮಾಡಲ್ಪಡಬೇಕೆಂಬ ಕಾಯ್ದೆಯನ್ನು ಪಿಟ್ಟನು ಪಾರ್ಲಿಮೆಂಟಿನಿಂದ ಮಾಡಿ ಸಿದನು. ಇಂಗ್ಲಂಡಿನ ಆರ್ಥಿಕ ಸ್ಥಿತಿ ಬಿಕ್ಕಟ್ಟಿನದಾಗಬಾರದೆಂದು ಆ ವಿಷಯದ ಲ್ಲಿಯೂ ಪಿಟ್ಟನಿಗೆ ಕಾಯ್ದೆಯನ್ನು ಮಾಡಬೇಕಾಯಿತು. ೧೭೯೭ರಲ್ಲಿ ಇಂಗ್ಲಂಡಿನ ಮೇಲೆ ಫ್ರಾನ್ಸಿನ ದಾಳಿ ಬರಬಹುದೆಂಬ ಭೀತಿಯಿಂದ ಬಂಗಾರದ ನಾಣ್ಯಗಳನ್ನು ಸುರಕ್ಷಿತವಾಗಿಡಬೇಕೆಂದು ಜನರು ಅವನ್ನು ಹುಗಿದಿಡಲು ಆರಂಭಿಸಿದುದರಿಂದ ಸರಾಫಕಟ್ಟೆಯಲ್ಲಿ ಬಂಗಾರದ ನಾಣ್ಯಗಳ ಕೊರತೆಯಾ ಯಿತು ಮತ್ತು ಬೆಂಕ್ ಆಫ್ ಇಂಗ್ಲಂಡಿನ ಕಡೆಗೆ ರೋಖ ಹಣಕ್ಕೋಸುಗ ಜನ ರಿಂದ ಬೇಡಿಕೆಗಳು ಬರಲು ಪ್ರಾರಂಭಿಸಿದುವು. ಈ ಪರಿಸ್ಥಿತಿಯನ್ನಿದಿರಿಸಲು ರೋಖ

ಹಣವನ್ನು ಕೊಡುವುದನ್ನು ಬ್ಯಾಂಕು ತಾತ್ಕಾಲಿಕವಾಗಿ ನಿಲ್ಲಿಸಬೇಕೆಂದು ಪಿಟ್ಟನು ಕಾಯ್ದೆಯನ್ನು ಮಾಡಿದನು. ಅದರಂತೆ ಪ್ರಾಪ್ತಿಯ ಮೇಲೆಯೂ ಕರವು ಕೂಡಿಸಲ್ಪಟ್ಟಿತು (೧೭೯೮). ಈ ಎಲ್ಲ ಕಾಯ್ದೆಗಳಿಂದ ಇಂಗ್ಲಂಡಿಗೆ ಆರ್ಥಿಕ ಬಿಕ್ಕಟ್ಟಿನೊಳಗಿಂದ ಪಾರಾಗಲು ಶಕ್ಯವಾಯಿತು.

ಪಿಟ್ಟನು ಐರ್ಲಂಡಿನ ಕಡೆಗೂ ಲಕ್ಷ್ಯವನ್ನು ಪೂರೈಸಬೇಕಾಯಿತು. ಐರ್ಲಂಡಿನಲ್ಲಿ ಆಗಾಗ ಬಂಡುಗಳು ಏಳುತ್ತಿದ್ದುವು. ಹೀಗಾಗಬಾರದೆಂದು ಅವನು ಇಂಗ್ಲಿಶ್ ಮತ್ತು ಐರಿಶ್ ಪಾರ್ಲಿಮೆಂಟುಗಳ ಏಕೀಕರಣವನ್ನು ಮಾಡಬೇಕೆಂದು ಕಾಯ್ದೆಯನ್ನು ೧೮೦೦ರಲ್ಲಿ ಮಾಡಿದನು. ಆದರೆ ಐರಿಶ್ ಜನರಿಗೆ ಕೊಟ್ಟ ವಚನದಂತೆ "ರೋಮನ್ ಕಥಲಿಕರ ಮೇಲಿನ ಧಾರ್ಮಿಕ ನಿರ್ಬಂಧಗಳನ್ನು ತೆಗೆದೊಗೆಯಲು" ೩ನೆಯ ಜಾರ್ಜ ರಾಜನು ತನ್ನ ಸಮ್ಮತಿಯನ್ನು ಕೊಡಲಿಲ್ಲವಾದುದರಿಂದ ಪಿಟ್ಟನು ಮುಖ್ಯ ಮಂತ್ರಿಪದವನ್ನು ತ್ಯಜಿಸಬೇಕಾಯಿತು (೧೮೦೧).

ಫ್ರಾನ್ಸಿನೊಡನೆ ಮತ್ತೆ ಯುದ್ಧವು— ಪಿಟ್ಟನ ತರುವಾಯದಲ್ಲಿ ಅಡಿಂಗ್ಟನನು ಮುಖ್ಯ ಮಂತ್ರಿಯಾಗಿರುವಾಗ ಅಮಿಯನ್ಸಿನ ಒಪ್ಪಂದವಾಗಿ (೧೮೦೨ ಮಾರ್ಚ) ಫ್ರಾನ್ಸಿನೊಡನೆ ನಡೆದ ಯುದ್ಧವು ನಿಲ್ಲಿಸಲ್ಪಟ್ಟಿತು. ಈ ಒಪ್ಪಂದವಾಗಿದ್ದರೂ ಮತ್ತೆ ಯುದ್ಧವು ಪ್ರಾರಂಭವಾದರೆ ಯಾವ ಕೊರತೆಯೂ ಉಂಟಾಗಬಾರದೆಂದು ಎರಡೂ ರಾಷ್ಟ್ರಗಳು ಯುದ್ಧಸಾಮಗ್ರಿಗಳನ್ನು ಕೂಡಿಸಲು ಪ್ರಯತ್ನಿಸತೊಡಗಿದುವು. ೧೮೦೩ರಲ್ಲಿ ಮೇ ತಿಂಗಳಲ್ಲಿ ಮತ್ತೆ ಯುದ್ಧವು ಪ್ರಾರಂಭವಾಯ್ತು.

ಇಂಗ್ಲಂಡಿನ ಮೇಲೆ ದಾಳಿಯಿಕ್ಕಲು ನೆಪೋಲಿಯನನು ಫ್ರಾನ್ಸಿನ ದಂಡೆಯ ಮೇಲೆ ದೊಡ್ಡದಾದ ಸೈನ್ಯವನ್ನು ಕೂಡಿಸಿದನು ಮತ್ತು ಇಂಗ್ಲಿಶ್ ಚಾನಲಿನ ಮೇಲೆ ವರ್ಚಸ್ಸನ್ನು ಸ್ಥಾಪಿಸಿ ಆ ಸೈನ್ಯವನ್ನು ಇಂಗ್ಲಂಡಿಗೆ ಒಯ್ಯಲು ಅನುಕೂಲವಾಗಬೇಕೆಂದು ತನ್ನ ಹಡಗುಪಡೆಯನ್ನು ಸಜ್ಜುಗೊಳಿಸಲಾರಂಭಿಸಿದನು. ನೆಪೋಲಿಯನನ ಈ ಸಿದ್ಧತೆಯ ವೃತ್ತಾಂತವು ಗೊತ್ತಾದೊಡನೆ ಇಂಗ್ಲಿಶ್ ಜನತೆಯಲ್ಲಿ ಬಹಳವಾಗಿ ಉತ್ಸಾಹವು ಹುಟ್ಟಿತು, ಮತ್ತು ಫ್ರಾನ್ಸಿನಿಂದ ಆಗಬಹುದಾದ ದಾಳಿಯ ಪ್ರತೀಕಾರವನ್ನು ಮಾಡಲು ಅನುಕೂಲವಾಗಬೇಕೆಂದು ಮೂರು ಲಕ್ಷ ಜನರು ಸ್ವಯಂಸ್ಫೂರ್ತಿಯಿಂದ ಸೈನಿಕರಾಗಲು ತಮ್ಮ ಹೆಸರುಗಳನ್ನು ಕೊಟ್ಟರು. ಇಂಗ್ಲಂಡಿನ ಹಡಗುಪಡೆಯಲ್ಲಿಯೂ ಮತ್ತೆ ಕೆಲವು ಹೊಸ ಹಡಗುಗಳ ಸಮಾವೇಶವಾಯಿತು.

ಈ ಸಮಯದಲ್ಲಿ ಅಡಿಂಗ್ಟನನು ಮುಖ್ಯ ಮಂತ್ರಿಯಾಗಿದ್ದನು. ಆದರೆ ಪಿಟ್ಟನು ಮುಖ್ಯ ಮಂತ್ರಿಯಾದ ಹೊರತು ಇಂಗ್ಲಂಡಿನ ಸ್ಥಿತಿ ಸರಿಯಾಗದೆಂದು ಬಗೆದು ಜಾರ್ಜ ರಾಜನು ಈ ಬಿಕ್ಕಟ್ಟಿನ ಪ್ರಸಂಗದಲ್ಲಿ ಅವನನ್ನೆ ಮುಖ್ಯ ಮಂತ್ರಿಯಾಗಿ ನಿಯೋಗಿಸಿದನು (೧೮೦೪). ಪಿಟ್ಟನು ಈ ಯುದ್ಧದ ವಿಷಯದಲ್ಲಿ ಸರಿಯಾದ ವ್ಯವಸ್ಥೆಯನ್ನು ಮಾಡಿದನು.

ನೆಪೋಲಿಯನನು ಸ್ಪನಿಶ್ ಮತ್ತು ಫ್ರೆಂಚ ಹಡಗುಗಳನ್ನು ಒಂದುಗೂಡಿಸಿ ಇಂಗ್ಲಂಡಿಗೆ ದಾಳಿಯಿಕ್ಕಲು ಯೋಚಿಸಿದನು. ಫ್ರಾನ್ಸಿನ ಈ ಹಡಗುಪಡೆಯನ್ನು ಇದಿರಿಸಲು ನೆಲ್ಸನನ ನೇತೃತ್ವದಲ್ಲಿ ಇಂಗ್ಲಿಶ ಹಡಗುಪಡೆ ಸಿದ್ಧವಾಗಿದ್ದಿತು. ಈ ಎರಡು ಹಡಗುಪಡೆಗಳು ಟ್ರಾಫಲ್ಗಾರದಲ್ಲಿ (ಸ್ಪೇನದ ದಂಡೆಯ ಮೇಲೆ) ಇದಿರಾದುವು (೨೧ ಅಕ್ಟೋಬರ ೧೮೦೫). ನೆಲ್ಸನನು ಫ್ರೆಂಚ ಹಡಗುಪಡೆಯನ್ನು ಸೋಲಿಸಿದನು. ಆದರೆ ಯುದ್ಧದಲ್ಲಿ ನೆಲ್ಸನನು ಗುಂಡು ತಗಲಿ ಮರಣಹೊಂದಿದನು. ಟ್ರಾಫಲ್ಗಾರದ ವಿಜಯದಿಂದ ಇಂಗ್ಲಂಡಿನ ಸಮುದ್ರದ ಮೇಲಿನ ವರ್ಚಸ್ಸು ಸ್ಥಿರವಾಗಿ ಉಳಿದುದಲ್ಲದೆ ಇಂಗ್ಲಂಡಿನ ಮೇಲೆ ಹಡಗುಪಡೆಯ ದಾಳಿಯನ್ನು ಮಾಡಬೇಕೆಂಬ ನೆಪೋಲಿಯನನ ಆಶೆ ನಷ್ಟವಾಯಿತು. ಈ ಹಡಗುಪಡೆಯ ಯುದ್ಧದಲ್ಲಿ ನೆಪೋಲಿಯನನ ಪರಾಭವವಾದಂತೆ ಭೂಮಿಯ ಮೇಲೆಯೂ ಅವನ ಪರಾಭವವಾಗಬೇಕೆಂದು ಪಿಟ್ಟನು ಫ್ರಾನ್ಸಿನ ವಿರುದ್ಧವಾಗಿ ಇಂಗ್ಲಂಡ್, ಆಸ್ಟ್ರಿಯಾ, ರಶಿಯಾ ಮತ್ತು ಸ್ವೀಡನ್ ಈ ರಾಷ್ಟ್ರಗಳ ಸಂಘವನ್ನು ೩ನೆಯ ಸಲ ಸ್ಥಾಪಿಸಿದನು (೧೮೦೫). ತನ್ನ ವಿರುದ್ಧವಾಗಿ ಈ ಸಂಘವು ಸ್ಥಾಪಿಸಲ್ಪಟ್ಟುದನ್ನು ಕೇಳಿದೊಡನೆ ನೆಪೋಲಿಯನನು ದೊಡ್ಡ ಸೈನ್ಯದೊಡನೆ ಆಸ್ಟ್ರಿಯದ ಮೇಲೆ ದಂಡೆತ್ತಿ ಹೋಗಿ ವಿಯೆನ್ನಾ ಪಟ್ಟಣದ ಬಳಿಯಲ್ಲಿಯ 'ಆಸ್ಟೈಲಿಟ್ಝ' ಎಂಬಲ್ಲಿ ಆಸ್ಟ್ರಿಯಾ ಮತ್ತು ರಶಿಯಾ ಇವುಗಳ ಸಂಯುಕ್ತ ಸೈನ್ಯಗಳನ್ನು ಸೋಲಿಸಿದನು (ಡಿಸೆಂಬರ ೧೮೦೫). ಈ ಪರಾಭವದ ತರುವಾಯದಲ್ಲಿ ರಶಿಯನ್ ಸೈನ್ಯವು ಹಿಂದೆಗೆಯಿತು. ಆಸ್ಟೈಲಿಟ್ಝದ ವಿಜಯದಿಂದ ಜರ್ಮನಿಯಲ್ಲಿಯ ಬಹು ದೊಡ್ಡ


ನೆಲ್ಸನ್

ಪ್ರದೇಶವು ನೆಪೋಲಿಯನನ ವರ್ಚಸ್ಸಿಗೆ ಒಳಗಾಯಿತು. ಆ ಬಳಿಕ ನೆಪೋಲಿಯ ನನು ವಿಯೆನ್ನಾ ಪಟ್ಟಣಕ್ಕೆ ಹೋಗಿ ಆಸ್ಟ್ರಿಯಕ್ಕೆ ಒಪ್ಪಂದವನ್ನು ಮಾಡಿಕೊಳ್ಳಲು ಅವಶ್ಯಗೊಳಿಸಿದನು. ಈ ಒಪ್ಪಂದದಿಂದ ಆಸ್ಟ್ರಿಯದ ರಾಜನಾದ ೨ನೆಯ ಫ್ರಾನ್ಸಿಸನು ಕಳೆದ ಸಾವಿರ ವರ್ಷಗಳಿಂದ ತನ್ನ ವಂಶದವರಲ್ಲಿ ನಡೆದುಬಂದ **"ಜರ್ಮನ್ ಸಾಮ್ರಾಜ್ಯದ (ಪವಿತ್ರ ರೋಮನ್ ಸಾಮ್ರಾಜ್ಯದ) ಬಾದಶಹ"**ನೆಂಬ ಬಿರುದನ್ನು ಬಿಟ್ಟು **"ಆಸ್ಟ್ರಿಯದ ಬಾದಶಹ"**ನೆಂಬ ಹೊಸ ಬಿರುದನ್ನು ಧರಿಸಲು ಒಪ್ಪಿಕೊಂಡನು. ಆಸ್ಟ್ರೆಲಿಟ್ಝದಲ್ಲಿ ಮಿತ್ರರಾಷ್ಟ್ರಗಳು ಸೋತುದನ್ನು ಕೇಳಿ ಪಿಟ್ಟನು ಬಲು ನಿರಾಶೆಗೊಂಡು ಮುಂದೆ ಕೆಲವು ದಿನಗಳಲ್ಲಿಯೆ ಮರಣಹೊಂದಿದನು (ಜಾನೆವರಿ ೧೮೦೬).

**ಇಂಗ್ಲಂಡಿನ ಮುಖ್ಯ ಮಂತ್ರಿಗಳು (೧೮೦೬-೧೮೨೦)**—ಪಿಟ್ಟನು ಕರ್ತೃತ್ವಶಾಲಿಯಾದ ಮುತ್ಸದ್ದಿಯಾಗಿದ್ದನು. ಅವನು ಫ್ರಾನ್ಸಿನ ವಿರುದ್ಧವಾಗಿ ಯುರೋಪದಲ್ಲಿಯ ರಾಷ್ಟ್ರಗಳ ಸಂಘವನ್ನು ಸ್ಥಾಪಿಸಿದನು, ಅಲ್ಲಲ್ಲಿ ನಡೆದ ಯುದ್ಧಗಳ ನೇತೃತ್ವವನ್ನು ವಹಿಸಲು ಯೋಗ್ಯರಾದ ಜನರನ್ನು ಆರಿಸಿ ಕಳಿಸಿದನು, ಈ ಮಹಾ ಯುದ್ಧವು ನಡೆದಾಗ ಇಂಗ್ಲಂಡಿನಲ್ಲಿ ಕ್ರಾಂತಿಕಾರಕ ಆಂದೋಲನವು ಹಬ್ಬಬಾರದೆಂದು ಬಹುದಕ್ಷತೆಯನ್ನು ವಹಿಸಿದನು ಮತ್ತು ಇಂಗ್ಲಂಡಿನ ಆರ್ಥಿಕ ಸ್ಥಿತಿಯನ್ನು ಸಮಾಧಾನಕಾರಕವಾಗಿಡಲು ಪ್ರಯತ್ನಿಸಿದನು. ಇವೆಲ್ಲವು ಅವನ ಮಹತ್ವದ ಕಾರ್ಯಗಳು. ಪಿಟ್ಟನ ತರುವಾಯದಲ್ಲಿ ಗ್ರೆನ್‌ವಿಲನು (೧೮೦೬—೭) ಮುಖ್ಯಮಂತ್ರಿಯಾದನು. ಇವನ ಮಂತ್ರಿಮಂಡಳದಲ್ಲಿ ವ್ಹಿಗ್ ಪಕ್ಷದ ಮುಂದಾಳುವಾದ ಫಾಕ್ಸನೂ ಒಬ್ಬ ಮಂತ್ರಿಯಾಗಿದ್ದನು. ಗ್ರೆನ್‌ವಿಲನು ೧೮೦೬ರಲ್ಲಿ ಮರಣಹೊಂದಿದನು. ಅವನ ತರುವಾಯದಲ್ಲಿ ಪೋರ್ಟಲಂಡ (೧೮೦೭—೯), ಪರ್ಸಿವಲ್ (೧೮೦೯—೧೨) ಮತ್ತು ಲಿವರ್‌ಪೂಲ್ ಎಂಬವರು ಮುಖ್ಯ ಮಂತ್ರಿಗಳಾದರು ಮತ್ತು ಅವರು ನೆಪೋಲಿಯನನೊಡನೆ ಯುದ್ಧವನ್ನು ಸಾಗಿಸಿದರು.

**ಯುರೋಪದಲ್ಲಿ ನೆಪೋಲಿಯನನ ವರ್ಚಸ್ಸು**—ನೆಪೋಲಿಯನನು ಆಸ್ಟ್ರಿಯವನ್ನು ಸೋಲಿಸಿದ ಬಳಿಕ ಪ್ರಶಿಯದ ಮೇಲೆ ದಂಡೆತ್ತಿಹೋಗಿ **ಯೇನಾ** ಎಂಬಲ್ಲಿಯ ಯುದ್ಧದಲ್ಲಿ ಪ್ರಶಿಯನ್ ಸೈನ್ಯವನ್ನು ಸೋಲಿಸಿದನು (೧೮೦೬). ಆ ಬಳಿಕ ಅವನು ಬರ್ಲಿನ್ ಪಟ್ಟಣವನ್ನು ಪ್ರವೇಶಿಸಿದನು. ಆಗ ಪ್ರಶಿಯದ ರಾಜನಾದ ಫ್ರೆಡ್ರಿಕನು ಅಲ್ಲಿಂದ ಓಡಿಹೋಗಿ ರಶಿಯದ ಬಾದಶಹನನ್ನು ಆಶ್ರಯಿಸಿದನು. ಆ ಬಳಿಕ ನೆಪೋಲಿಯನನು ರಶಿಯಾ ದೇಶಕ್ಕೆ ದಾಳಿಯಿಕ್ಕಿ **ಫ್ರೀಡ್‌ಲಂಡ್** ಎಂಬಲ್ಲಿ ರಶಿಯದ ಬಾದಶಹನಾದ ಅಲೆಕ್ಸಾಂಡರನನ್ನು ಸೋಲಿಸಿ

ದನು. ಅಲೆಕ್ಝಾಂಡರನು **ಟಿಲ್‌ಸಿಟ್** ಎಂಬಲ್ಲಿ ಒಪ್ಪಂದವನ್ನು ಮಾಡಿಕೊಂಡನು (೧೮೦೭). ಈ ಒಪ್ಪಂದದಿಂದ ಅಲೆಕ್ಝಾಂಡರನು ನೆಪೋಲಿಯನನು ಬರ್ಲಿನಿನಲ್ಲಿ ಪ್ರಕಟಿಸಿದ "ಬರ್ಲಿನ್ ಡಿಕ್ರಿ"ಯಂತೆ ನಡೆಯಲು ಒಪ್ಪಿಕೊಂಡನು.

**ಬರ್ಲಿನ್‌ಡಿಕ್ರಿ, ಮಿಲನ್‌ಡಿಕ್ರಿ ಮತ್ತು ಆರ್ಡರ್ಸ-ಇನ್-ಕೌನ್ಸಿಲ್**— ನೆಪೋಲಿಯನನು ಇಂಗ್ಲಂಡಿನ ಮಿತ್ರರಾಷ್ಟ್ರಗಳನ್ನು ಸೋಲಿಸಿದ್ದನು. ಆದರೆ ಅವನ ಹಡಗುಪಡೆ ಪ್ರಬಲವಾಗಿರಲಿಲ್ಲವಾದುದರಿಂದ ಇಂಗ್ಲಂಡನ್ನು ಸೋಲಿಸಲು ಅವನಿಗೆ ಶಕ್ಯವಾಗಲಿಲ್ಲ. ಇಂಗ್ಲಂಡಿನಂತಹ ಸಮುದ್ರವೇಷ್ಟಿತ ರಾಷ್ಟ್ರವನ್ನು ಹೇಗೆ ಸೋಲಿಸಬೇಕೆಂಬುದು ಅವನಿಗೆ ತಿಳಿಯದಂತಾಯಿತು. ಇಂಗ್ಲಂಡಿನ ಸಮುದ್ರದ ಮೇಲಿನ ವರ್ಚಸ್ಸು ವ್ಯಾಪಾರವನ್ನು ಮತ್ತು ಆ ವ್ಯಾಪಾರದಿಂದ ಪೋಷಿತ ವಾದ ಹಡಗುಪಡೆಯನ್ನು ಅವಲಂಬಿಸಿತ್ತೆಂಬುದು ಅವನಿಗೆ ಗೊತ್ತಿದ್ದಿತು. ಆದುದರಿಂದ ಅವನು ಪರರಾಷ್ಟ್ರಗಳೊಡನಿದ್ದ ಇಂಗ್ಲಂಡಿನ ವ್ಯಾಪಾರವನ್ನು ತಡೆ ಯಲು ಯತ್ನಿಸಿದನು. ಅವನು ತನ್ನ ವರ್ಚಸ್ಸಿಗೆ ಒಳಗಾಗಿದ್ದ ಯಾವ ರಾಷ್ಟ್ರವೂ ಇಂಗ್ಲಂಡಿನೊಡನೆ ಅಥವಾ ಇಂಗ್ಲಂಡಿನ ವಸಾಹತುಗಳೊಡನೆ ವ್ಯಾಪಾರವನ್ನು ಮಾಡಕೂಡದೆಂದು ಪ್ರಕಟನೆಯನ್ನು ಬರ್ಲಿನಿನಲ್ಲಿ ಪ್ರಕಟಿಸಿದನು (೧೮೦೬). ಇದೇ **"ಬರ್ಲಿನ್ ಡಿಕ್ರಿ"**. ಈ ಸಮಯದಲ್ಲಿ ಯುರೋಪದಲ್ಲಿಯ ಬಹುಶಃ ಎಲ್ಲ ರಾಷ್ಟ್ರಗಳು ನೆಪೋಲಿಯನನ ವರ್ಚಸ್ಸಿಗೆ ಒಳಗಾಗಿದ್ದುದರಿಂದ ಈ ಡಿಕ್ರಿಯಿಂದ ಇಂಗ್ಲಂಡಿನ ವ್ಯಾಪಾರವನ್ನು ತಡೆಯಲು ತನಗೆ ಶಕ್ಯವಾಗಬಹುದೆಂದು ನೆಪೋಲಿ ಯನನು ಬಗೆದಿದ್ದನು. ಬರ್ಲಿನ್ ಡಿಕ್ರಿಯಿಂದ ವ್ಯಾಪಾರ ವಿಷಯಕವಾಗಿ ವ್ಯವ ಹಾರದಲ್ಲಿ ಬಂದ ಹೊಸ ಪದ್ಧತಿಗೆ "ಕಾಂಟಿನೆಂಟಲ್ ಪದ್ಧತಿ" ಎಂದು ಹೆಸರು.

ನೆಪೋಲಿಯನನ ಬರ್ಲಿನ ಡಿಕ್ರಿಗೆ ಉತ್ತರವೆಂದು ಇಂಗ್ಲಂಡೂ ಒಂದು ಪ್ರಕ ಟನೆಯನ್ನು ಪ್ರಕಟಿಸಿತು. ತಟಸ್ಥ ರಾಷ್ಟ್ರಗಳು ನೆಪೋಲಿಯನನ ವರ್ಚಸ್ಸಿಗೊಳ ಗಾಗಿದ್ದ ರಾಷ್ಟ್ರಗಳಿಗೆ ಕಳಿಸುವ ಎಲ್ಲ ಮಾಲು ಮೊದಲು ಇಂಗ್ಲಂಡಿನ ಬಂದರಕ್ಕೆ ಬರಬೇಕು, ಹಾಗೆ ಬಾರದಿದ್ದರೆ ಆ ಮಾಲು ಜಪ್ತಮಾಡಲ್ಪಡುವುದು ಎಂದು ಇಂಗ್ಲಂಡು ಪ್ರಕಟಿಸಿತು. ಇಂಗ್ಲಂಡಿನ ಈ ಪ್ರಕಟನೆಗೆ **"ಆರ್ಡರ್ಸ-ಇನ್-ಕೌನ್ಸಿಲ್"** ಎಂಬ ಹೆಸರು (೧೮೦೭).

ಆ ತರುವಾಯದಲ್ಲಿ ನೆಪೋಲಿಯನನು ತಟಸ್ಥ ರಾಷ್ಟ್ರಗಳ ವ್ಯಾಪಾರದ ಹಡಗುಗಳು ಇಂಗ್ಲಂಡಿನ ಬಂದರಕ್ಕೆ ಹೋದರೆ ಅವು ತನ್ನಿಂದ ಜಪ್ತಮಾಡಲ್ಪ ಡುವುವೆಂದು **ಪ್ರಕಟನೆಯನ್ನು ಮಿಲನದಲ್ಲಿ** ಪ್ರಸಿದ್ಧಿಸಿದನು (೧೮೦೭ ಡಿಸೆಂಬರ).

ಫ್ರಾನ್ಸ್ ಮತ್ತು ಇಂಗ್ಲಂಡ್ ಇವು ಪ್ರಸಿದ್ಧಿಸಿದ ಈ ಪ್ರಕಟನೆಗಳು ಒಂದ ಕ್ಕೊಂದು ವಿರುದ್ಧವಾಗಿದ್ದುದರಿಂದ ಒಂದು ರಾಷ್ಟ್ರದ ಪ್ರಕಟನೆಯಂತೆ ನಡೆದರೆ ಇನ್ನೊಂದು ರಾಷ್ಟ್ರದಿಂದ ತಟಸ್ಥ ರಾಷ್ಟ್ರಗಳ ಮಾಲು ಜಪ್ತಗೊಳಿಸಲ್ಪಡುತ್ತಿತ್ತು. ಆದರಿಂದ ತಟಸ್ಥ ರಾಷ್ಟ್ರಗಳು ವ್ಯಾಪಾರಮಾಡುವುದು ಅಶಕ್ಯವಾಯಿತು.

ಸಮುದ್ರದ ಮೇಲೆ ಇಂಗ್ಲಂಡಿನ ವಿಜಯವು—ಡೆನ್ಮಾರ್ಕವು ನೆಪೋಲಿ ಯನನ ವರ್ಚಸ್ಸಿಗೊಳಗಾಗಿದ್ದಿತು. ಆ ರಾಷ್ಟ್ರದ ಹಡಗುಪಡೆಯ ಸಾಹಾಯ್ಯ ದಿಂದ ಇಂಗ್ಲಂಡಿನ ಮೇಲೆ ದಾಳಿಯಿಕ್ಕಲು ನೆಪೋಲಿಯನನು ಹವಣಿಸಿದನು. ನೆಪೋಲಿಯನನ ಈ ಹವಣಿಕೆ ಕೈಗೂಡದಂತೆ ಮಾಡಲು ಇಂಗ್ಲಂಡು ಡೆನ್ಮಾರ್ಕದ ಕಡೆಗೆ ತನ್ನ ಹಡಗುಪಡೆಯನ್ನು ಕಳಿಸಿತು ಮತ್ತು ಡೆನ್ಮಾರ್ಕವು ತನ್ನ ಯುದ್ಧದ ಹಡಗುಗಳನ್ನು ತನ್ನ ವಶಕ್ಕೆ ಕೊಡಬೇಕೆಂದು ಸೂಚಿಸಿತು. ಆದರೆ ಡೆನ್ಮಾರ್ಕವು ಹಾಗೆ ಮಾಡಲು ಒಪ್ಪಲಿಲ್ಲವಾದುದರಿಂದ ಇಂಗ್ಲಿಶ್ ಹಡಗುಪಡೆ **ಕೋಪೆನ್ ಹೆಗನಿಗೆ** ದಾಳಿಯಿಕ್ಕಿ ಡ್ಯಾನಿಶ್ ಹಡಗುಗಳನ್ನು ತನ್ನ ವಶಕ್ಕೆ ತೆಗೆದು ಕೊಂಡಿತು.

ಫ್ರಾನ್ಸಿನ ಮತ್ತು ಫ್ರಾನ್ಸಿಗೆ ಅಂಕಿತವಾದ ರಾಷ್ಟ್ರಗಳ ವಶದಲ್ಲಿ ಯುರೋಪದ ಮತ್ತು ಪೌರ್ವಾತ್ಯ ದೇಶಗಳ ಅನೇಕ ಸ್ಥಳಗಳಿದ್ದುವು. ಅವುಗಳಲ್ಲಿ ಕೆಲವನ್ನು ಇಂಗ್ಲಂಡು ಗೆದ್ದು ತನ್ನ ವಶದಲ್ಲಿ ತೆಗೆದುಕೊಂಡಿತು. ಇಂಗ್ಲಂಡು ೧೮೦೬ರಲ್ಲಿ ಕೇಪ್ ಆಫ್ ಗುಡ್ ಹೋಪ್, ೧೮೦೭ರಲ್ಲಿ ಯುರೋಪದಲ್ಲಿಯ ಹೆಲಿಗೋಲಂಡ ಇವುಗಳನ್ನು ತೆಗೆದುಕೊಂಡಿತು, ಮತ್ತು ೧೮೧೦ರಲ್ಲಿ ಪೂರ್ವದ ಕಡೆಯ ಮಾರಿಶಸ್ ನಡುಗಡ್ಡೆಯನ್ನು ವಶಪಡಿಸಿಕೊಂಡಿತು.

ನೆಪೋಲಿಯನನ ವಿರುದ್ಧವಾಗಿ ಯುರೋಪದ ರಾಷ್ಟ್ರಗಳ ಅಸಂ ತೋಷವು – ನೆಪೋಲಿಯನನು "ಬರ್ಲಿನ ಡಿಕ್ರಿ"ಯನ್ನು ಪ್ರಕಟಿಸಿ, ಇಂಗ್ಲಂಡಿನ ವ್ಯಾಪಾರವನ್ನು ಕುಗ್ಗಿಸಲು ಪ್ರಯತ್ನಿಸಿದನು, ಆದರೆ ಅವನಿಗೆ ಯಶವು ದೊರೆಯ ಲಿಲ್ಲ. ಸಮುದ್ರದ ಮೇಲೆ ಇಂಗ್ಲಂಡಿನ ವರ್ಚಸ್ಸು ಇದ್ದುದರಿಂದ ಯುರೋಪದ ರಾಷ್ಟ್ರಗಳಿಗೆ ತೊಂದರೆಯಾಯಿತು. ಯುರೋಪದ ರಾಷ್ಟ್ರಗಳ ವ್ಯಾಪಾರವು ನಿಂತಿತು ಮತ್ತು ಎಲ್ಲಲ್ಲಿಯೂ ದುಷ್ಕಾಳದ ಚಿಹ್ನಗಳು ತಲೆದೋರಿದುವು, ಮತ್ತು ಜನರು ಕಷ್ಟಕ್ಕೆ ಗುರಿಯಾದರು. ನೆಪೋಲಿಯನನ ಪ್ರಕಟನೆಯನ್ನು ಮನ್ನಿಸ ಕೂಡದೆಂದು ಎಲ್ಲ ರಾಷ್ಟ್ರಗಳಿಗೂ ಎನಿಸತೊಡಗಿತು. ಕೆಲವು ರಾಷ್ಟ್ರಗಳು ಇಂಗ್ಲಂಡಿನೊಡನೆ ಸಖ್ಯವನ್ನು ಮಾಡಿಕೊಂಡು ಅದರೊಡನೆ ಮತ್ತೆ ವ್ಯಾಪಾರ ವನ್ನು ಪ್ರಾರಂಭಿಸಿದುವು.

ನೆಪೋಲಿಯನನ ಪ್ರಕಟನೆಯ ವಿರುದ್ಧವಾಗಿ ವರ್ತಿಸಲು ಪೋರ್ತುಗಾಲ ದೇಶವು ಮೊದಲು ಮುಂದಾಯಿತು, ಮತ್ತು ಇಂಗ್ಲಂಡಿನೊಡನೆ ವ್ಯಾಪಾರ ಮಾಡಲು ಪ್ರಾರಂಭಿಸಿತು. ನೆಪೋಲಿಯನನಿಗೆ ಇದು ಗೊತ್ತಾದೊಡನೆ ಪೋರ್ತುಗೀಜ ಬಂದರಗಳನ್ನು ತನ್ನ ವಶದಲ್ಲಿ ತೆಗೆದುಕೊಳ್ಳಲು ಅವನು ಅಲ್ಲಿಗೆ ತನ್ನ ಸೈನ್ಯವನ್ನು ಕಳಿಸಿ ಆ ದೇಶವನ್ನು ತನ್ನ ವಶದಲ್ಲಿ ತೆಗೆದುಕೊಂಡನು (೧೮೦೮).

ಪೋರ್ತುಗಾಲದಂತೆ ಸ್ಪೇನದ ದೇಶವನ್ನೂ ವಶದಲ್ಲಿ ತೆಗೆದುಕೊಳ್ಳಲು ನೆಪೋಲಿಯನನು ಯೋಚಿಸಿದನು. ೧೮೦೮ರಲ್ಲಿ ಸ್ಪೇನದ ರಾಜನ ಮತ್ತು ರಾಜಪುತ್ರನ ನಡುವೆ ಕಲಹವು ಹುಟ್ಟಿದ್ದಿತು. ಅದರ ಯೋಗ್ಯ ನಿರ್ಣಯವನ್ನು ಕೊಡುವ ಕೆಲಸವು ನೆಪೋಲಿಯನನಿಗೆ ಒಪ್ಪಿಸಲ್ಪಟ್ಟಿತ್ತು. ನೆಪೋಲಿಯನನು ಸ್ಪೇನದ ರಾಜನಿಗೆ ರಾಜತ್ಯಾಗವನ್ನು ಮಾಡಲು ಅಗತ್ಯಪಡಿಸಿ ತನ್ನ ತಮ್ಮನಾದ ಜೋಸೆಫ್ ಬೋನಾಪಾರ್ಟನನ್ನು ಸ್ಪೇನದ ರಾಜನ್ನಾಗಿ ಮಾಡಿದನು. ನೆಪೋಲಿಯನನ ಈ ಅನ್ಯಾಯದ ಕೃತಿಯನ್ನು ಕಂಡು ಸ್ಪನಿಯರ್ಡರು ತ್ವೇಷಗೊಂಡು ಫ್ರಾನ್ಸಿನ ವಿರುದ್ಧವಾಗಿ ಬಂಡನ್ನು ಹೂಡಿದರು (೧೮೦೮).

**ಪೆನಿನ್‌ಸುಲರ (ಸ್ಪೇನ ಮತ್ತು ಪೋರ್ತುಗಾಲ ದ್ವೀಪಕಲ್ಪಗಳಲ್ಲಿಯ) ಯುದ್ಧವು (೧೮೦೮-೧೮೧೪)**—ಪೋರ್ತುಗೀಜ ಮತ್ತು ಸ್ಪನಿಯರ್ಡ ಜನರು ಫ್ರಾನ್ಸಿನೊಡನೆ ಯುದ್ಧವನ್ನು ಆರಂಭಿಸಿದ ಒಳಿಕ ಅವರಿಗೆ ಸಾಹಾಯ್ಯಮಾಡಲು **ಸರ್ ಆರ್ಥರ ವೆಲೆಸ್ಲಿ** ಮತ್ತು **ಸರ್ ಜಾನ್ ಮೂರ್** ಇವರ ನಾಯಕತ್ವದಲ್ಲಿ ಇಂಗ್ಲಂಡು ಒಂದು ದಂಡನ್ನು ಕಳಿಸಿತು. ಸರ್ ಆರ್ಥರ್ ವೆಲೆಸ್ಲಿ ಇವನು ಪೋರ್ತುಗಾಲದಲ್ಲಿಯ **ವಿಮೇರಿಯಾ** ಎಂಬಲ್ಲಿ ಫ್ರೆಂಚ ಸೈನ್ಯವನ್ನು ಸೋಲಿಸಿದನು. ಸರ್ ಜಾನ್ ಮೂರನು ಸ್ಪೇನಕ್ಕೆ ದಂಡೆತ್ತಿ ಹೋದನು. ಆದರೆ ಶತ್ರುಗಳ ಸೈನ್ಯವು ಹೆಚ್ಚಾಗಿದ್ದುದರಿಂದ ಅವನು ಸ್ಪೇನದ ವಾಯುವ್ಯ ದಂಡೆಯ ಮೇಲೆ **ಕೊರುನ್ನಾ** ಎಂಬ ಸ್ಥಳಕ್ಕೆ ತಿರುಗಿಬಂದನು. ಆದರೆ ಫ್ರೆಂಚ ಸೈನ್ಯವು ಅವನನ್ನು ಬೆನ್ನಟ್ಟಿ ಬಂದುದರಿಂದ ಅಲ್ಲಿ ಯುದ್ಧವಾಯ್ತು. ಇಂಗ್ಲಿಶರಿಗೆ ಜಯವು ದೊರೆತಿತು, ಆದರೆ ಸರ್ ಜಾನ್ ಮೂರನು ಆ ಯುದ್ಧದಲ್ಲಿ ಕೊಲ್ಲಲ್ಪಟ್ಟನು.

ಮುಂದೆ ಸರ್ ಆರ್ಥರ ವೆಲೆಸ್ಲಿ ಇವನು ದೃಢ ನಿಶ್ಚಯದಿಂದ ಆ ಯುದ್ಧವನ್ನು ಮುಂದೆ ಸಾಗಿಸಿದನು. ಅವನು ಸ್ಪೇನಕ್ಕೆ ಹೋಗಿ **ಟಲಾವ್ಹೆರಾ** ಎಂಬಲ್ಲಿ ಪರಾಕ್ರಮದಿಂದ ಕಾದಿ ಫ್ರೆಂಚ ಸೈನ್ಯವನ್ನು ಸೋಲಿಸಿದನು (೧೮೦೯). ಈ ವಿಜಯದ ಮೂಲಕವಾಗಿ ಅವನು **ಡ್ಯೂಕ್ ಆಫ್ ವೆಲಿಂಗ್ಟನ**ನಾಗಿ ಮಾಡಲ್ಪಟ್ಟನು. ಆ ಬಳಿಕ ೧೮೧೦ರಲ್ಲಿ ಹಿಂದುರುಗಿ ಬಂದು ಪೋರ್ತುಗಾಲದ ದಂಡೆಯ

ಮೇಲಿನ **ಟಾರೆಸ್ ವೆಡ್ರಾಸ್** ಎಂಬಲ್ಲಿ ಸೈನ್ಯಸಹಿತವಾಗಿ ಬೀಡುಬಿಟ್ಟನು. ಫ್ರೆಂಚ ಸೈನ್ಯವು ಅವನನ್ನು ಬೆನ್ನಟ್ಟಿ ಬರುತ್ತಿದ್ದಿತು. ಅದು ಇಂಗ್ಲಿಶ ಸೈನ್ಯವನ್ನು ಪೋರ್ತುಗಾಲದಿಂದ ಹೊರದೂಡಲು ಪ್ರಯತ್ನಿಸಿತು, ಆದರೆ ಅದಕ್ಕೆ ಯಶವು ದೊರೆಯಲಿಲ್ಲ. ತರುವಾಯದಲ್ಲಿ ವೆಲಿಂಗ್ಟನನು ಮತ್ತೆ ಸ್ಪೇನದಲ್ಲಿ ಹೋಗಿ **ಸಲಾಮಾಂಕಾ** ಎಂಬಲ್ಲಿ ಫ್ರೆಂಚ ಸೈನ್ಯವನ್ನು ಸೋಲಿಸಿದನು (೧೮೧೨). ಆ ಬಳಿಕ ಅವನು ಸ್ಪೇನದ ರಾಜಧಾನಿಯಾದ **ಮಾಡ್ರಿಡ್** ಪಟ್ಟಣವನ್ನು ವಶಮಾಡಿಕೊಂಡನು; ಆಗ ಜೋಸೆಫ್ ನೆಪೋಲಿಯನನು ರಾಜತ್ಯಾಗಮಾಡಿ ಸ್ಪೇನದಿಂದ ಓಡಿಹೋದನು. ವೆಲಿಂಗ್ಟನನು ಫ್ರೆಂಚ ಸೈನ್ಯವನ್ನು ಬೆನ್ನಟ್ಟಿ **ವಿಟೋರಿಯಾ** ಎಂಬಲ್ಲಿ ಅದನ್ನು ಸಂಪೂರ್ಣವಾಗಿ ಸೋಲಿಸಿದನು (೧೮೧೩), ಮತ್ತು ಫ್ರಾನ್ಸಿನ ದಕ್ಷಿಣ ಭಾಗದಲ್ಲಿಯ **ಟುಲೂಜ** ಎಂಬಲ್ಲಿಯೂ ಫ್ರೆಂಚ ಸೈನ್ಯವನ್ನು ಸೋಲಿಸಿದನು (೧೮೧೪).

**ರಶಿಯದ ಮೇಲೆ ನೆಪೋಲಿಯನನ ದಾಳಿ (೧೮೧೨)**–**ಟಿಲಸಿಟದ** ಒಪ್ಪಂದದಿಂದ ರಶಿಯದ ಬಾದಶಹನಾದ **ಅಲೆಕ್ಝಾಂಡರನು** ನೆಪೋಲಿಯನನ "ಬರ್ಲಿನ್ ಡಿಕ್ರಿ"ಯಂತೆ ನಡೆಯಲು ಒಪ್ಪಿಕೊಂಡಿದ್ದನು. ಆದರೆ ಅದರಿಂದ ವ್ಯಾಪಾರದ ವಿಷಯದಲ್ಲಿ ರಶಿಯಕ್ಕೆ ಬಲು ತೊಂದರೆಯಾದುದರಿಂದ ಅವನು ಒಂದು ಪ್ರಕಟನೆಯನ್ನು ಹೊರಡಿಸಿದನು (೧೮೧೦, ಡಿಸೆಂಬರ ೩೧). ಅದರಲ್ಲಿ ಅವನು ನೆಪೋಲಿಯನನ ಪ್ರಕಟನೆಯನ್ನು ಮನ್ನಿಸುವುದು ಅಶಕ್ಯವೆಂದು ಸಾರಿದನು. ಝಾರನ ಈ ಪ್ರಕಟನೆಯನ್ನು ಕಂಡು ನೆಪೋಲಿಯನನು ಕೋಪಗೊಂಡು ರಶಿಯದ ಸೊಕ್ಕನ್ನು ಮುರಿಯಲು ೫ ಲಕ್ಷ ಸೈನಿಕರೊಡನೆ ರಶಿಯಕ್ಕೆ ದಾಳಿಯಿಕ್ಕಲು ನಡೆದನು. ರಶಿಯನ್ ಸೈನ್ಯವು ಹಿಂದೆ ಸರಿಯಿತು, ಮತ್ತು ನೆಪೋಲಿಯನನು ರಶಿಯದ ರಾಜಧಾನಿಯಾದ **ಮಾಸ್ಕೋ** ಪಟ್ಟಣದ ಬಳಿಗೆ ಬಂದನು. ಆದರೆ ಅವನಿಗೆ ಆಶ್ರಯವು ದೊರೆಯಬಾರದೆಂದು ಹಿಂದೆ ಸರಿಯುತ್ತಿದ್ದ ರಶಿಯನ್ ಸೈನ್ಯವು ಆ ಪಟ್ಟಣವನ್ನು ಸುಟ್ಟು ಹಾಳುಗೆಡವಿತು. ಆಗ ಚಳಿಗಾಲವಿದ್ದುದರಿಂದ ಮಾಸ್ಕೋ ಪಟ್ಟಣದ ಹೊರತು ಫ್ರೆಂಚ ಸೈನ್ಯಕ್ಕೆ ವಿಶ್ರಾಂತಿಯನ್ನು ತೆಗೆದುಕೊಳ್ಳಲು ಬೇರೊಂದು ಸ್ಥಳವಿರಲಿಲ್ಲ. ಹೀಗೆ ಮಾಸ್ಕೋ ಪಟ್ಟಣವು ಹಾಳಾದುದರಿಂದ ನೆಪೋಲಿಯನನು ನಿರ್ವಾಹವಿಲ್ಲದೆ ತನ್ನ ಸೈನ್ಯಕ್ಕೆ ಅಲ್ಲಿಂದ ತಿರುಗಲು ಆಜ್ಞೆಯಿತ್ತನು. ಈ ಸೈನ್ಯವು ತಿರುಗಿ ಬರುತ್ತಿರುವಾಗ ಚಳಿಯಿಂದ ಕಷ್ಟಕ್ಕೆ ಗುರಿಯಾಯ್ತು. ರಶಿಯನ್ ಸೈನ್ಯವು ಅಲ್ಲಲ್ಲಿ ಆಯಕಟ್ಟಿನ ಸ್ಥಳಗಳಲ್ಲಿ ಅದನ್ನು ಇದಿರಿಸಿ ತೊಂದರೆ ಕೊಡುತ್ತಿದ್ದುದರಿಂದ ಅನೇಕ ಸೈನಿಕರು ಮೃತ್ಯುವಿಗೆ ಗುರಿಯಾದರು.

ನೆಪೋಲಿಯನನು ರಶಿಯಕ್ಕೆ ದಾಳಿಯನ್ನು ಒಯ್ದಿರಲು ಇತ್ತ ಇಂಗ್ಲಂಡು ಅವನ ವಿರುದ್ಧವಾಗಿ ಇಂಗ್ಲಂಡ್, ರಶಿಯಾ, ಪ್ರಶಿಯಾ, ಆಸ್ಟ್ರಿಯಾ, ಸ್ವೀಡನ್ ಈ ರಾಷ್ಟ್ರಗಳ ನಾಲ್ಕನೆಯ ಸಂಘವನ್ನು ಸ್ಥಾಪಿಸಿತು. ರಶಿಯದ ದಾಳಿಯಲ್ಲಿ ನೆಪೋಲಿಯನನ ೫ ಲಕ್ಷ ಸೈನಿಕರಲ್ಲಿ ೪ ಲಕ್ಷ ಸೈನಿಕರು ಮರಣಹೊಂದಿದ್ದರು. ನೆಪೋಲಿಯನನ ಮುಯ್ಯನ್ನು ತೀರಿಸಲು ಇದೇ ಸಮಯವೆಂದು ಬಗೆದು ಹಿಂತಿರುಗಿ ಬರುತ್ತಿದ್ದ ಫ್ರೆಂಚ ಸೈನ್ಯದ ಮೇಲೆ ರಶಿಯಾ, ಆಸ್ಟ್ರಿಯಾ ಮತ್ತು ಪ್ರಶಿಯಾ ಈ ರಾಷ್ಟ್ರಗಳ ಸೈನ್ಯಗಳು 'ಲಿಪ್ಝಿಗ್' ಎಂಬಲ್ಲಿ ನುಗ್ಗಿ ಅದನ್ನು ಸೋಲಿಸಿದುವು (ಅಕ್ಟೋಬರ ೧೮೧೩). ಆಗ ನೆಪೋಲಿಯನನು ಪರಿಸಿನ ಕಡೆಗೆ ಓಡಿಬರಬೇಕಾಯಿತು.

**ನೆಪೋಲಿಯನನು ರಾಜಪದವನ್ನು ಬಿಡುವನು** (೬ ಎಪ್ರಿಲ್ ೧೮೧೪) — ನೆಪೋಲಿಯನನು ಪರಿಸಿನ ಕಡೆಗೆ ಓಡಿಬರುತ್ತಿರುವಾಗ ರಶಿಯನ್ ಮತ್ತು ಪ್ರಶಿಯನ್ ಸೈನ್ಯಗಳು ಅವನನ್ನು ಬೆನ್ನಟ್ಟಿದುವು ಮತ್ತು ೧೮೧೪ರ ಮಾರ್ಚ ೩೧ನೆಯ ದಿವಸ ಪರಿಸಿಗೆ ಬಂದುವು. ಇತ್ತ ಡ್ಯೂಕ್ ಆಫ್ ವೆಲಿಂಗ್ಟನ್ ಇವನೂ ಸ್ಪೇನದಿಂದ ಫ್ರೆಂಚ ಸೈನ್ಯವನ್ನು ಹೊಡೆದಟ್ಟಿ ತನ್ನ ಸೈನ್ಯದೊಡನೆ ಪರಿಸ್ ಪಟ್ಟಣದ ಬಳಿಯಲ್ಲಿ ಬರುತ್ತಿದ್ದನು. ತನ್ನ ಎಲ್ಲ ಸೈನ್ಯವು ಹಾಳಾಯಿತು ಮತ್ತು ಶತ್ರುಸೈನ್ಯವು ಪರಿಸಿನ ಬಳಿಗೆ ಬಂದಿತು ಮತ್ತು ಅದನ್ನು ತಡೆಯಲು ತನಗೆ ಶಕ್ಯವಿರಲಿಲ್ಲ ಎಂಬುದನ್ನು ಕಂಡು ನೆಪೋಲಿಯನನು ತಾನು ರಾಜಪದವನ್ನು ಬಿಟ್ಟಿರುವೆನೆಂದು ಪ್ರಕಟಗೊಳಿಸಿದನು (೬ ಎಪ್ರಿಲ್ ೧೮೧೪). ಕೂಡಲೆ ಮಿತ್ರರಾಷ್ಟ್ರಗಳು ನೆಪೋಲಿಯನನನ್ನು ಸೆರೆಹಿಡಿದು ಅವನನ್ನು ಎಲ್ಬಾ ನಡುಗಡ್ಡೆಯಲ್ಲಿ ಇಡಲು ನಿಶ್ಚಯಿಸಿ ೧೬ನೆಯ ಲುಯಿಯ ಮಗನಾದ ೧೭ನೆಯ ಲುಯಿ ಮರಣಹೊಂದಿದುದರಿಂದ ೧೬ನೆಯ ಲುಯಿಯ ತಮ್ಮನಾದ ಲುಯಿಗೆ ೧೮ನೆಯ ಲುಯಿಯೆಂದು ಪಟ್ಟಗಟ್ಟಿದುವು.

**ವಿಯೆನ್ನಾ ಪಟ್ಟಣದಲ್ಲಿಯ ಪರಿಷತ್ತು** — ಒಂದೇ ಸವನೆ ೨೧ ವರ್ಷಗಳವರೆಗೆ ಯುರೋಪದಲ್ಲಿ ಯುದ್ಧವು ನಡೆದಿದ್ದಿತು. ಈಗ ನೆಪೋಲಿಯನನ ಪರಾಭವವಾದ ಬಳಿಕ ಯುರೋಪಿಯನ್ ರಾಷ್ಟ್ರಗಳನ್ನು ಮತ್ತೆ ಹೇಗೆ ವ್ಯವಸ್ಥೆಗೊಳಿಸಬೇಕು ಎಂಬುದನ್ನು ಕುರಿತು ಆಲೋಚಿಸಲು ವಿಯೆನ್ನಾ ಪಟ್ಟಣದಲ್ಲಿ ಎಲ್ಲ ಯುರೋಪಿಯನ್ ರಾಷ್ಟ್ರಗಳ ಪರಿಷತ್ತು ನೆರೆಯಿತು. ಆದರೆ ಈ ಪರಿಷತ್ತು ನಡೆದಿರುವಾಗ ನೆಪೋಲಿಯನನು ಎಲ್ಬಾ ನಡುಗಡ್ಡೆಯಿಂದ ಜಾರಿ ಫ್ರಾನ್ಸಿನ ದಂಡೆಯ ಮೇಲೆ ಬಂದಿರುವನೆಂದು ಸುದ್ದಿ ಬಂದಿತು. ಆದುದರಿಂದ ಮಿತ್ರರಾಷ್ಟ್ರಗಳು ಪರಿಷತ್ತನ್ನು



ಡ್ಯೂಕ್ ಆಫ್ ವೆಲಿಂಗ್ಟನ್

ಮುರಿದು ನೆಪೋಲಿಯನನ ಕಡೆಗೆ ಮತ್ತೆ ಲಕ್ಷ್ಯವನ್ನು ಕೊಡಬೇಕಾಯಿತು.

ನೆಪೋಲಿಯನನು ಜಾರಿ ಬಂದುದು—ಫ್ರಾನ್ಸಿನ ದಂಡೆಗೆ ನೆಪೋಲಿಯನನು ಬಂದೊಡನೆ ಅವನ ಅತ್ಯಂತ ವಿಶ್ವಾಸಿಕರಾದ ಸಾವಿರಾರು ಸೈನಿಕರು

ಅವನನ್ನು ಕೂಡಿದರು. ಇತ್ತ ೧೮ನೆಯ ಲುಯಿ ನೆಪೋಲಿಯನನೊಡನೆ ಯುದ್ಧ ಮಾಡಲು ಸೈನಿಕರು ಸಿದ್ಧರಿಲ್ಲದುದನ್ನು ಕಂಡು ಫ್ರಾನ್ಸಿನಿಂದ ಓಡಿಹೋದನು ಮತ್ತು ನೆಪೋಲಿಯನನು ಪರಿಸ್ ಪಟ್ಟಣವನ್ನು ಪ್ರವೇಶಿಸಿದನು (ಮಾರ್ಚ್ ೧೮೧೫). ಮಿತ್ರರಾಷ್ಟ್ರಗಳು ತಮ್ಮ ಸೈನ್ಯಗಳನ್ನು ಫ್ರಾನ್ಸಿನ ಕಡೆಗೆ ಕಳುಹಿದುವು. ಬೆಲ್ಜಿಮಿನಲ್ಲಿ ಡ್ಯೂಕ್ ಆಫ್ ವೆಲಿಂಗ್ಟನನ ನಾಯಕತ್ವದಲ್ಲಿ ಇಂಗ್ಲಿಶ್, ಡಚ್ ಮತ್ತು ಹನೊವೇರಿಯನ್ ಸೈನ್ಯಗಳು ಸಿದ್ಧವಾಗಿದ್ದುವು ಮತ್ತು ಈ ಸೈನ್ಯಗಳನ್ನು ಕೂಡಿಕೊಳ್ಳಲು ತನ್ನ ಪ್ರಶಿಯನ್ ಸೈನ್ಯದೊಡನೆ ಪ್ರಶಿಯನ್ ಸೇನಾಪತಿಯಾದ ಬ್ಲುಚರನು ಬರುತ್ತಿದ್ದನು. ಈ ಇಬ್ಬರು ಸೇನಾಪತಿಗಳ ಸೈನ್ಯಗಳು ಒಂದನ್ನೊಂದು ಕೂಡುವ ಮೊದಲೆ ಅವುಗಳನ್ನು ಬೇರೆ ಬೇರೆ ಸ್ಥಳಗಳಲ್ಲಿ ಇದಿರಿಸಿ ಸೋಲಿಸಲು ನಿಶ್ಚಯಿಸಿ ನೆಪೋಲಿಯನನು ಒಂದು ಲಕ್ಷ ಸೈನಿಕರೊಡನೆ ಬೆಲ್ಜಿಮಿನ ಕಡೆಗೆ ಹೊರಟನು.

**ವಾಟರ್ಲೂ ಯುದ್ಧವು (೧೮೧೫)**—ನೆಪೋಲಿಯನನು ವಾಡಿಕೆಯಂತೆ ಬಹು ಚಪಲತೆಯಿಂದ ಬ್ಲುಚರನ ನಾಯಕತ್ವದಲ್ಲಿಯ ಪ್ರಶಿಯನ್ ಸೈನ್ಯವನ್ನು ಇದಿರಿಸಿ ಲಿನಯಿ (Ligny) ಎಂಬಲ್ಲಿ ಸೋಲಿಸಿದನು (೧೬ ಜೂನ ೧೮೧೫). ಆ ಬಳಿಕ ಅವನು ವೆಲಿಂಗ್ಟನನನ್ನು ಇದಿರಿಸಲು ನಡೆದನು. ವೆಲಿಂಗ್ಟನನು ವಾಟರ್ಲೂ ಎಂಬಲ್ಲಿ (ಬೆಲ್ಜಿಮಿನಲ್ಲಿ) ಭದ್ರವಾದ ಸ್ಥಳದಲ್ಲಿ ನಿಂತು ಫ್ರೆಂಚಸೈನ್ಯವನ್ನು ಇದಿರಿಸಲು ಸಿದ್ಧನಾಗಿದ್ದನು. ನೆಪೋಲಿಯನನು ವೆಲಿಂಗ್ಟನನನ್ನು ಸೋಲಿಸಿ ಅಲ್ಲಿಂದ ಅವನನ್ನು ಹೊರದೂಡಲು ಬಹಳವಾಗಿ ಪ್ರಯತ್ನಿಸಿದನು. ಆದರೆ ಅವನ ಪ್ರಯತ್ನವು ನಿಷ್ಫಲವಾಯಿತು. ಸಾಯಂಕಾಲದ ವರೆಗೆ ಎರಡೂ ಪಕ್ಷಗಳ ಬಲವು ಸಮಾನವಾಗಿದ್ದಿತು. ಆದರೆ ಸಾಯಂಕಾಲವಾಗಲು ಒಮ್ಮೆಂದೊಮ್ಮೆ ಇಂಗ್ಲಿಶ್ ಸೈನ್ಯಕ್ಕೆ ಪ್ರಶಿಯನ್ ಸೈನ್ಯದ ಸಾಹಾಯ್ಯವು ಬಂದಿತು. ಒಂದು ಬದಿಯಲ್ಲಿ ಪ್ರಶಿಯನ್ ಸೈನ್ಯವು ಇನ್ನೊಂದು ಬದಿಯಲ್ಲಿ ಇಂಗ್ಲಿಶ್ ಸೈನ್ಯವು ಹೀಗೆ ಎರಡು ಸೈನ್ಯಗಳ ನಡುವೆ ಸಿಕ್ಕಿದುದರಿಂದ ನೆಪೋಲಿಯನನು ಸಂಪೂರ್ಣವಾಗಿ ಸೋತನು (೧೮ ಜೂನ ೧೮೧೫). ನೆಪೋಲಿಯನನು ಹೀಗೆ ಪರಾಭವ ಹೊಂದಿ ಪೆರಿಸಿನ ಕಡೆಗೆ ಓಡಿಹೋದನು. ಮಿತ್ರರಾಷ್ಟ್ರಗಳ ಸೈನ್ಯಗಳು ಅವನನ್ನು ಬೆನ್ನಟ್ಟಿದುವು. ಅವನು ಶತ್ರುಗಳ ವಶನಾದನು. ಶತ್ರುಗಳು ಅವನನ್ನು ಸೇಂಟ ಹೆಲಿನಾ ನಡುಗಡ್ಡೆಯಲ್ಲಿ ಸೆರೆಯಲ್ಲಿಟ್ಟರು (೧೮೧೫). ಈ ಸ್ಥಳದಲ್ಲಿ ನೆಪೋಲಿಯನನು ೧೮೨೧ರ ವರೆಗೆ ಬದುಕಿದ್ದನು.

**ಪೆರಿಸಿನ ಒಪ್ಪಂದವು (೧೮೧೫)**—ನೆಪೋಲಿಯನನ ಪರಾಭವವಾದ ಬಳಿಕ ವಿಯೆನ್ನಾ ಪಟ್ಟಣದಲ್ಲಿ ನೆರೆದ ಪರಿಷತ್ತಿನ ಕೆಲಸವು ಪೆರಿಸಿನಲ್ಲಿ ಕೊನೆ

ಗೊಂಡು ಒಪ್ಪಂದವಾಯ್ತು. ಈ ಒಪ್ಪಂದದಿಂದ ಕೆಳಗಿನ ವ್ಯವಸ್ಥೆ ಮಾಡ ಲ್ಪಟ್ಟಿತು:—

ಫ್ರಾನ್ಸ್—ಫ್ರಾನ್ಸಿನ ಪಟ್ಟವು ೧೮ನೆಯ ಲುಯಿಗೆ ಕೊಡಲ್ಪಟ್ಟಿತು ಮತ್ತು ಫ್ರಾನ್ಸಿಗೆ ಅದರ ಈಶಾನ್ಯ ಭಾಗದಲ್ಲಿದ್ದ ಆಲಸೇಸ್ ಮತ್ತು ಲಾರೆನ್ ಪ್ರಾಂತ ಗಳು ಕೊಡಲ್ಪಟ್ಟುವು.

ಇಂಗ್ಲಂಡ್—ಇಂಗ್ಲಂಡಿಗೆ ಡಚ್ ಜನರ ಕೇಪ್ ಆಫ್ ಗುಡ್ ಹೋಪ್, ಸಿಂಹಲದ್ವೀಪ, ಸಿಂಗಾಪೂರ, ಗಾಯನಾ, ಫ್ರಾನ್ಸಿನ ಮಾರಿಶಸ್ ಮತ್ತು ಮಾಲ್ಟಾ, ಡೆನ್ಮಾರ್ಕದ ಹೆಲಿಗೊಲಂಡ ಈ ಸ್ಥಳಗಳು ದೊರೆತುವು. ಇದರಿಂದ ಬ್ರಿಟಿಶ್ ಸಾಮ್ರಾಜ್ಯವು ಬೆಳೆಯಿತು ಮತ್ತು ಸಮುದ್ರದ ಮೇಲೆ ಅದರ ವರ್ಚಸ್ಸು ಶಾಶ್ವತ ವಾಗಿ ಅದರ ವ್ಯಾಪಾರವು ಬೆಳೆಯಲು ಅನುಕೂಲವಾಯ್ತು.

ಇತರ ರಾಷ್ಟ್ರಗಳು—ಇಟಲಿ ಮತ್ತೆ ಮೊದಲಿನಂತೆ ಅನೇಕ ಭಾಗಗಳಾಗಿ ವಿಭಾಗಿಸಲ್ಪಟ್ಟಿತ್ತು. ಅದರ ಉತ್ತರಭಾಗದ ವೇನಿಸ್ ಮತ್ತು ಲಾಂಬರ್ಡಿ ಈ ಸಂಸ್ಥಾನಗಳು ಆಸ್ಟ್ರಿಯದ ವರ್ಚಸ್ಸಿನ ಕೆಳಗೆ ಬಂದುವು, ಮತ್ತು ಮಧ್ಯ ಮತ್ತು ದಕ್ಷಿಣ ಭಾಗಗಳ ಸಂಸ್ಥಾನಗಳು ಪರಕೀಯ ರಾಜ್ಯಕರ್ತರ ವಶದಲ್ಲಿ ಉಳಿದುವು. ಮಧ್ಯ ಇಟಲಿಯಲ್ಲಿಯ ಪೋಪನ ಸಂಸ್ಥಾನವು ಮತ್ತು ವಾಯವ್ಯ ಭಾಗದ ಪಿಡ್ಮಾಂಟ ಸಂಸ್ಥಾನವು ಇಷ್ಟು ಮಾತ್ರ ಇಟಾಲಿಯನ್ ರಾಜ್ಯಕರ್ತರ ವಶದಲ್ಲಿ ಇದ್ದುವು. ಪೋಲಂಡಿನ ಎಷ್ಟೋ ಭಾಗವು ರಶಿಯದ ವರ್ಚಸ್ಸಿನ ಕೆಳಗೆ ಬಂದಿತು. ಜರ್ಮನಿಯಲ್ಲಿಯ ಮೊದಲಿನ ನೂರು ಸಂಸ್ಥಾನಗಳು ಇಲ್ಲದಾಗಿ ೩೮ ಸಂಸ್ಥಾನ ಗಳು ಮಾತ್ರ ಉಳಿದುವು, ಮತ್ತು ಅವುಗಳಲ್ಲಿ ಎಷ್ಟೊ ಸಂಸ್ಥಾನಗಳು ಆಸ್ಟ್ರಿಯದ ನೇತೃತ್ವದ ಕೆಳಗೆ ತಮ್ಮದೊಂದು ಸಂಘವನ್ನು ಸ್ಥಾಪಿಸಿದುವು. ಆಸ್ಟ್ರಿಯದ ವಶದಲ್ಲಿದ್ದ ನೆದರ್ಲಂಡ್ ಪ್ರಾಂತವು ಹಾಲಂಡಿಗೆ ಕೂಡಿಸಲ್ಪಟ್ಟಿತು.

**ಯುರೋಪದ ಮೇಲೆ ಮತ್ತು ಇತರ ಎಲ್ಲ ದೇಶಗಳ ಮೇಲೆ ಫ್ರೆಂಚ ರಾಜ್ಯಕ್ರಾಂತಿಯಿಂದಾದ ಶಾಶ್ವತ ಪರಿಣಾಮಗಳು**—ಪರಿಸಿನ ಒಪ್ಪಂದ ವನ್ನು ಮಾಡಲು ನೆರೆದ ಯುರೋಪಿಯನ್ ರಾಷ್ಟ್ರಗಳ ಪ್ರತಿನಿಧಿಗಳ ನೀತಿ ಪ್ರತಿ ಗಾಮಿಯಾಗಿದ್ದಿತು. ಅವರು ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾಗುವ ಮೊದಲು ಇದ್ದ ಯುರೋಪದ ಸ್ಥಿತಿಯನ್ನು ತಿರುಗಿ ತರಲು ಮತ್ತು ಫ್ರಾನ್ಸಿನ ರಾಜ್ಯಕ್ರಾಂತಿ ಯಿಂದ ಉಂಟಾದ ಲೋಕನಿಯಂತ್ರಿತ ರಾಜ್ಯಪದ್ಧತಿ, ರಾಷ್ಟ್ರೀಯತ್ವ, ಸ್ವಾತಂತ್ರ್ಯ ಸಮತೆ ಮೊದಲಾದ ಕಲ್ಪನೆಗಳನ್ನು ಹತ್ತಿಕ್ಕಲು ಯತ್ನಿಸಿದರು; ಆದರೆ ಅವರಿಗೆ ಈ ಕಾರ್ಯದಲ್ಲಿ ಯಶವು ದೊರೆಯಲಿಲ್ಲ. ಮೇಲೆ ಹೇಳಿದ ಕಲ್ಪನೆಗಳಿಗೆ ಮೂರ್ತ

ಸ್ವರೂಪವನ್ನು ಕೊಡಲು ಯುರೋಪದಲ್ಲಿಯ ಬೇರೆಬೇರೆ ರಾಷ್ಟ್ರಗಳಲ್ಲಿ ಮುಂದಿನ ೬೦—೭೦ ವರ್ಷಗಳಲ್ಲಿ ಅನೇಕ ಆಂದೋಲನಗಳಾದುವು:—

(೧) ಪ್ರಜಾಪ್ರಭುತ್ವವು (ಲೋಕನಿಯಂತ್ರಿತ ರಾಜ್ಯಪದ್ಧತಿ)—ಇಂಗ್ಲಂಡಿನ ಹೊರತು ಯುರೋಪದಲ್ಲಿಯ ಇತರ ದೇಶಗಳಲ್ಲಿ ತಮ್ಮ ದೇಶದ ರಾಜ್ಯಕಾರ ಭಾರದ ಮೇಲೆ ಜನತೆಯ ನಿಯಂತ್ರಣವಿರಲಿಲ್ಲ; ಅದನ್ನು ಪಡೆಯಲು ೧೮೩೦ರಲ್ಲಿ ಮತ್ತು ೧೮೪೮ರಲ್ಲಿ ಫ್ರಾನ್ಸ್, ಇಟಲಿ ಮತ್ತು ಜರ್ಮನಿ ಈ ದೇಶಗಳಲ್ಲಿ ಆಂದೋಲನ ಗಳಾದುವು ಮತ್ತು ೧೮೭೧ರಲ್ಲಿ ಫ್ರಾನ್ಸಿನಲ್ಲಿ ಲೋಕಸತ್ತಾತ್ಮಕ ರಾಜ್ಯಪದ್ಧತಿ ಸ್ಥಾಪಿಸಲ್ಪಟ್ಟಿತು. ಇಂಗ್ಲಂಡದಲ್ಲಿಯೂ ರಾಜ್ಯಕಾರಭಾರದ ಮೇಲೆ ಸಾಮಾನ್ಯ ಜನರ ನಿಯಂತ್ರಣವು ಇರಬೇಕೆಂದು ೧೮೩೨ರಲ್ಲಿ, ೧೮೬೭ರಲ್ಲಿ, ೧೮೮೪ರಲ್ಲಿ ಪಾರ್ಲಿಮೆಂಟಿನ ಸುಧಾರಣೆಯ ಕಾಯ್ದೆಗಳು ಪಾಸಾಗಿ ಪಾರ್ಲಿಮೆಂಟಿನ ಚುನಾ ವಣೆಯ ಕಾಲದಲ್ಲಿ ಮತವನ್ನು ಕೊಡುವ ಹಕ್ಕು ಒಡಜನರಿಗೂ ಕೊಡಲ್ಪಟ್ಟಿತು. ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಕೆನಡಾ, ನ್ಯೂಝೀಲಂಡ್, ನ್ಯೂಫೌಂಡಲಂಡ್, ಆಸ್ಟ್ರೇಲಿಯಾ ಮತ್ತು ದಕ್ಷಿಣ ಆಫ್ರಿಕಾ ಈ ವಸಾಹತುಗಳಿಗೆ ಸ್ವರಾಜ್ಯದ ಹಕ್ಕು ಗಳು ಕೊಡಲ್ಪಟ್ಟುವು.

(೨) ರಾಷ್ಟ್ರೀಯತ್ವವು ತಮ್ಮ ಮೇಲಿನ ಪರಕೀಯ ರಾಷ್ಟ್ರಗಳ ಸತ್ತೆ ಯನ್ನು ಕಳೆದುಕೊಳ್ಳಲು ಭಿನ್ನಭಿನ್ನ ದೇಶಗಳು ಪ್ರಯತ್ನಿಸಿದುವು. ಇಟಲಿ ಆಸ್ಟ್ರಿಯದ ಸತ್ತೆಯನ್ನು ೧೮೬೧ರಲ್ಲಿ ತೆಗೆದೊಗೆದು ಏಕೀಕರಣವನ್ನು ಮಾಡಿ ಕೊಂಡಿತು; ಪ್ರಶಿಯದ ನೇತೃತ್ವದಲ್ಲಿ ೧೮೭೧ರಲ್ಲಿ ಜರ್ಮನ್ ಸಾಮ್ರಾಜ್ಯದ ಸ್ಥಾಪನೆಯಾಯ್ತು; ಮತ್ತು ದಕ್ಷಿಣ ಮತ್ತು ಮಧ್ಯ ಅಮೇರಿಕೆಯಲ್ಲಿಯ ಸ್ಪೇನದ ವಸಾಹತುಗಳು ೧೮೨೧ರಲ್ಲಿ ಮಾತೃಭೂಮಿಯಿಂದ ಸ್ವತಂತ್ರವಾದುವು.

(೩) ಸ್ವಾತಂತ್ರ್ಯವೂ ಸಮತೆಯೂ—ಸರಂಜಾಮಿ (ಫ್ಯೂಡಲ್) ಪದ್ಧತಿ ನಷ್ಟವಾಗಿ ಸರದಾರರು ಮತ್ತು ಧರ್ಮಾಧಿಕಾರಿಗಳು ಉಪಭೋಗಿಸುತ್ತಿದ್ದ ವಿಶಿಷ್ಟವಾದ ಹಕ್ಕುಗಳು ಇಲ್ಲದಾದುವು; ಒಕ್ಕಲಿಗನು ಅರ್ಧಮರ್ದ ದಾಸ್ಯದಲ್ಲಿ (Serfdom) ಇರುತ್ತಿದ್ದನು, ಈಗ ಅವನು ಮುಕ್ತನಾದನು. ಸರ್ವಾಧಿಕಾರದ ಪದ್ಧತಿ ಅಳಿಯಿತು; ಮತ್ತು ದೇಶದಲ್ಲಿಯ ಅಂತರ್ಗತ ವ್ಯಾಪಾರದ ಮೇಲೆ ಇರು ತ್ತಿದ್ದ ನಿರ್ಬಂಧಗಳು ಹೋದುವು. ಇದರಿಂದ ವ್ಯಾಪಾರಿವರ್ಗವು ಸ್ವತಂತ್ರವಾಗಿ ಅದಕ್ಕೆ ದೇಶದ ರಾಜ್ಯಕಾರಭಾರದಲ್ಲಿ ಭಾಗವನ್ನು ವಹಿಸಲು ಶಕ್ಯವಾಯ್ತು. ದೇಶದಲ್ಲಿಯ ಉಚ್ಚ ನೀಚ ವರ್ಗಗಳ ವಿಷಮತೆ ನಷ್ಟವಾಗಿ ಕಾಯ್ದೆಯ ದೃಷ್ಟಿ ಯಿಂದ ಎಲ್ಲರೂ ಸಮಾನರೆಂಬ ಭಾವನೆ ದೃಢವಾಗಲಾರಂಭಿಸಿತು. ಗುಲಾಮ

ಗಿರಿಯ ಪದ್ಧತಿ ಅನ್ಯಾಯವಾದುದೆಂಬ ಅಭಿಪ್ರಾಯವು ಜನರಲ್ಲಿ ಹಬ್ಬತೊಡ ಗಿತು ಮತ್ತು ಅದನ್ನು ಕಾಯ್ದೆಯಿಂದ ನಷ್ಟಗೊಳಿಸಲು ಬೇರೆ ಬೇರೆ ರಾಷ್ಟ್ರಗಳಲ್ಲಿ ಪ್ರಯತ್ನಗಳಾಗತೊಡಗಿದುವು.

(೪) **ಮೆಟ್ರಿಕ್ ಪದ್ಧತಿ**—ತೂಕದ ಕಲ್ಲುಗಳ ಮತ್ತು ಮಾಪುಗಳ ವಿಷಯ ದಲ್ಲಿ ದಶಕ ಪರಿಮಾಣವನ್ನು ಅವಲಂಬಿಸಿದ ಮತ್ತು ಫ್ರಾನ್ಸಿನಲ್ಲಿ ಪ್ರಾರಂಭವಾದ ಪದ್ಧತಿ ಇಂಗ್ಲಂಡಿನ ಹೊರತು ಯುರೋಪದಲ್ಲಿಯ ಬಹುಶಃ ಎಲ್ಲ ರಾಷ್ಟ್ರಗಳಲ್ಲಿ ಸ್ವೀಕರಿಸಲ್ಪಟ್ಟಿತು.

ಯುದ್ಧದ ತರುವಾಯದಲ್ಲಿ—ನೆಪೋಲಿಯನನೊಡನೆ ನಡೆದ ಯುದ್ಧವು ನಿಂತಬಳಿಕ ಸಾವಿರಾರು ಸೈನಿಕರು ಮತ್ತು ನಾವಿಕರು ಕೆಲಸದಿಂದ ದೂರ ಮಾಡ ಲ್ಪಟ್ಟರು. ಅದರಿಂದ ಎಲ್ಲೆಲ್ಲಿಯೂ ನಿರುದ್ಯೋಗತೆ ಬೆಳೆದು ರಾಷ್ಟ್ರದ ಬಹುಜನ ಸಮಾಜದ ಸ್ಥಿತಿ ಬಹಳವಾಗಿ ಕೆಟ್ಟಿತು. ಈ ಯುದ್ಧದಿಂದ ಇಂಗ್ಲಂಡಿನ ರಾಷ್ಟ್ರೀಯ ಸಾಲವು ಮುಮ್ಮಡಿ ಬೆಳೆಯಿತು. ಕೂಲಿಕಾರರಿಗೆ ಕೆಲಸವು ದೊರೆಯದಂತಾಯ್ತು. ಇದರಿಂದ ಎಲ್ಲೆಡೆಗಳಲ್ಲಿಯೂ ಅಸಂತೋಷವೂ ಅಸಮಾಧಾನವೂ ಹಬ್ಬಿದುದರಿಂದ ಸುಧಾರಣೆಯನ್ನು ಮಾಡಿದ ಹೊರತು ಅಸಂತೋಷವು ಮರೆಯಾಗದೆಂದು ಎಲ್ಲ ರಿಗೂ ಎನಿಸಿತು.

ಧಾನ್ಯದ ಕಾಯ್ದೆ (೧೮೧೫)—ನೆಪೋಲಿಯನನೊಡನೆ ಯುದ್ಧವು ನಡೆದಾಗ ಧಾನ್ಯಕ್ಕೋಸುಗ ಪರರಾಷ್ಟ್ರಗಳನ್ನು ಅವಲಂಬಿಸುವ ಪ್ರಸಂಗವು ಬರ ಬಾರದೆಂದು ಒಕ್ಕಲಿಗರಿಗೂ ಜಮೀನುದಾರರಿಗೂ ಧಾನ್ಯವನ್ನು ಬೆಳೆಯಿಸಲು ಸರ ಕಾರವು ಉತ್ತೇಜನವನ್ನಿತ್ತಿತು. ಯುದ್ಧದ ಕಾಲದಲ್ಲಿ ಧಾನ್ಯವು ತುಟ್ಟಿಯಾದು ದರಿಂದ ಧಾನ್ಯಕ್ಕೆ ಬಹಳ ಬೆಲೆ ಬರುತ್ತಿದ್ದಿತು; ಆದರೆ ಯುದ್ಧವು ಮುಗಿದ ಬಳಿಕ ಪರದೇಶಗಳಿಂದ ಬರುವ ಧಾನ್ಯದ ಸ್ಪರ್ಧೆಯ ತೀವ್ರತೆ ಇಂಗ್ಲಂಡಿನಲ್ಲಿಯ ಧಾನ್ಯ ವನ್ನು ಬೆಳೆಯಿಸುವ ಒಕ್ಕಲಿಗರಿಗೂ ಜಮೀನುದಾರರಿಗೂ ಎನಿಸಬಾರದೆಂದು ಮತ್ತು ಅವರಿಗೆ ಹಾನಿಯಾಗಬಾರದೆಂದು ಪಾರ್ಲಿಮೆಂಟು ಧಾನ್ಯದ ವಿಷಯದಲ್ಲಿ ಕಾಯ್ದೆಯೊಂದನ್ನು ಮಾಡಿತು (೧೮೧೫). ಈ ಕಾಯ್ದೆಯಿಂದ ಇಂಗ್ಲಂಡಿನಲ್ಲಿಯ ಧಾನ್ಯ (ಗೋದಿ) ದರವು ಒಂದು ಕ್ವಾರ್ಟರಿಗೆ ೮೦ ಶಿಲಿಂಗುಗಳಾಗುವವರೆಗೆ ಪರದೇಶಗಳಿಂದ ಇಂಗ್ಲಂಡಿನಲ್ಲಿ ಧಾನ್ಯವನ್ನು ತರಕೂಡದೆಂದು ನಿರ್ಣಯಿಸಲ್ಪ ಟ್ಟಿತು. ಈ ದರವು ಬಹಳ ತುಟ್ಟಿಯಾಗಿದ್ದಿತು. ಬರಗಾಲದಲ್ಲಿಯೂ ತುಟ್ಟಿಯ ಕಾಲದಲ್ಲಿಯೂ ಧಾನ್ಯವು ಕ್ವಚಿತ್ತಾಗಿ ಇಷ್ಟು ತುಟ್ಟಿಯಾಗುತ್ತಿದ್ದಿತು; ಮತ್ತು ಅದು ಇಷ್ಟು ತುಟ್ಟಿಯಾದರೂ ಸಾಕಷ್ಟು ಇರುತ್ತಿರಲಿಲ್ಲ. ಆದುದರಿಂದ ದೇಶ

ದಲ್ಲಿ ಧಾನ್ಯದ ಸಮೃದ್ಧಿ ಇರಬೇಕು, ಆದರೆ ಅದರಿಂದ ದೇಶದಲ್ಲಿಯ ಜಮೀನು ದಾರರಿಗೂ ಒಕ್ಕಲಿಗರಿಗೂ ಹಾನಿಯಾಗಬಾರದು ಎಂದು ಪರಕೀಯ ಧಾನ್ಯದ ಮೇಲೆ ಸುಂಕವು ಬಹಳವಾಗಿ ಕೂಡಿಸಲ್ಪಟ್ಟಿತು. ಈ ಯೋಜನೆಯಿಂದ ಧಾನ್ಯ ವನ್ನು ಬೆಳೆಯಿಸುವ ಜಮೀನುದಾರರಿಗೆ ಲಾಭವಾದರೂ ಧಾನ್ಯವು ಬಹಳ ತುಟ್ಟಿ ಯಾದುದರಿಂದ ಬಡಜನರ ಸ್ಥಿತಿ ಕೆಟ್ಟಿತು.

ಈ ಪರಿಸ್ಥಿತಿಯಲ್ಲಿ ೧೮೨೦ರ ಜಾನೆವರಿ ೨೯ನೆಯ ದಿವಸ ೩ನೆಯ ಜಾರ್ಜನು ಮರಣಹೊಂದಿದನು.

---

## ಸಾರಾಂಶವು

### ೩ನೆಯ ಜಾರ್ಜ (೧೭೬೦—೧೮೨೦).

೩ನೆಯ ಜಾರ್ಜನ ನೀತಿ— ತನ್ನ ಕೈಯಲ್ಲಿಯ ಸತ್ತೆ ಇರಬೇಕು ಮತ್ತು ಮಂತ್ರಿ ಮಂಡಳವು ತನ್ನ ತಂತ್ರದಂತೆ ನಡೆಯಬೇಕು, ಎಂಬ ಇಚ್ಛೆ. ಅದಕ್ಕೋಸುಗ ಅವನು ತನ್ನ ಆಳ್ಕೆಯ ಮೊದಲಿನ ೧೦ ವರ್ಷಗಳಲ್ಲಿ ವ್ಹಿಗ್‌ಪಕ್ಷದ ಮಹತ್ವವನ್ನು ಮತ್ತು ವರ್ಚಸ್ಸನ್ನು ಕಡಿಮೆಮಾಡಿದನು. ಮತ್ತು ಟೋರಿಪಕ್ಷದ ಪ್ರಮುಖ ರನ್ನು ಮುಖ್ಯ ಮಂತ್ರಿಗಳಾಗಿ ಮಾಡಿಕೊಂಡನು.

೩ನೆಯ ಜಾರ್ಜನು ಮತ್ತು ಅವನ ಮುಖ್ಯ ಮಂತ್ರಿಗಳು—

೧೭೬೦—೬೧ ವಿಲಿಯಮ್ ಪಿಟ್ (ಹಿರಿಯನು), ವ್ಹಿಗ್.

೧೭೬೧—೬೩ ಲಾರ್ಡ ಬ್ಯೂಟ್ (ಟೋರಿ). ಪ್ಯಾರಿಸಿನ ಒಪ್ಪಂದದಿಂದ ಸಪ್ತ ವಾರ್ಷಿಕ ಯುದ್ಧದ ಸಮಾಪ್ತಿ. ಒಪ್ಪಂದವು ಜನರಿಗೆ ಅಪ್ರಿಯವು.

೧೭೬೩—೭೦ ವ್ಹಿಗ್‌ಪಕ್ಷದ ಗ್ರೆನ್‌ವಿಲ್ (೧೭೬೩—೬೫), ರಾಕಿಂಗಹಮ್ (೧೭೬೫—೬೬), ವಿಲಿಯಮ್ ಪಿಟ್ (ಹಿರಿಯನು)—ಅರ್ಲ ಆಫ್ ಚೆಥಮ (೧೭೬೬—೬೮), ಗ್ರೆಫ್ಟನ್ (೧೭೬೮—೭೦) ಇವರು ಮುಖ್ಯ ಮಂತ್ರಿಗಳು. ಈ ಕಾಲದಲ್ಲಿ ವಿಲ್ಕ್ಸನ ಪ್ರಕರಣವು, ಅಮೇರಿಕೆಯಲ್ಲಿಯ ವಸಾಹತುಗಳೊಡನೆ ಕಲಹದ ಪ್ರಾರಂಭವು.

೧೭೭೦—೮೨ ಲಾರ್ಡ ನಾರ್ಥ (ಟೋರಿ)—ಅಮೇರಿಕೆಯಲ್ಲಿಯ ವಸಾಹತುಗಳೊಡನೆ ಯುದ್ಧವು, ಅದರಲ್ಲಿ ಇಂಗ್ಲಂಡಿಗೆ ಅಪಯಶವು.

೧೭೮೨—೮೩ ಫಾಕ್ಸ (ವ್ಹಿಗ್) ಮತ್ತು ನಾರ್ಥ (ಟೋರಿ) ಇವರ ಮಿಶ್ರ ಮಂತ್ರಿ ಮಂಡಳವು.

೧೭೮೩—೧೮೦೧ ಮತ್ತು ೧೮೦೪—೬. ವಿಲಿಯಮ್ ಪಿಟ್ (ಕಿರಿಯನು), ಟೋರಿ. ಪಿಟ್ಟನ ಇಂಡಿಯಾ ಬಿಲ್ಲು. ಅವನ ಆರ್ಥಿಕ ಮತ್ತು ವ್ಯಾಪಾರ ವಿಷಯ ಸುಧಾರಣೆಗಳು, ಕಾರಾಗೃಹದ ಸುಧಾರಣೆಯಾಗಬೇಕೆಂದು ಪ್ರಯತ್ನಿಸುವ ಹೊವರ್ಡನಿಗೆ ಮತ್ತು ಗುಲಾಮರ ವ್ಯಾಪಾರವು ಇಲ್ಲದಂತಾಗಬೇಕೆಂದು ಪ್ರಯತ್ನಿಸುವ ವಿಲ್ಬರ್‌ಫೋರ್ಸನಿಗೆ ಅವನ ಪ್ರೋತ್ಸಾಹನವು. ಫ್ರಾನ್ಸಿನೊಡನೆ ನಡೆದ ಯುದ್ಧದ ವಿಷಯದಲ್ಲಿ ಯೋಗ್ಯವಾದ ವ್ಯವಸ್ಥೆಯನ್ನಿಡಬೇಕು, ಮತ್ತು ನೆಪೋಲಿಯನನ ಯೋಚನೆಗಳನ್ನು ಗಾಳಿಗೂಡಿಸಬೇಕು, ಮತ್ತು ಕ್ರಾಂತಿಕಾರಕ ವಿಚಾರಗಳು ಇಂಗ್ಲಂಡಿನಲ್ಲಿ ಹಬ್ಬಬಾರದು ಎಂದು "ಏಲಿಯನ್ ಆಕ್ಟ" "ಟ್ರೇಟರ್ಸ ಕರೆಸ್‌ಪಾಂಡೆನ್ಸ ಆಕ್ಟ" ಮೊದಲಾದುವನ್ನು ಅವನು ಮಾಡಿಧನು.

೧೮೦೧—೧೮೨೦. ಆಡಿಂಗ್ಟನ್ (೧೮೦೧—೪) ಟೋರಿ, ಗ್ರೆನ್‌ವಿಲ್ (೧೮೦೬—೭), ಪೋರ್ಟಲಂಡ (೧೮೦೭—೯) ಟೋರಿ, ಪರ್ಸಿವಲ್ (೧೮೦೯—೧೨) ಟೋರಿ, ಲಿವರ್ಪೂಲ್ (೧೮೧೨—೨೭) ಟೋರಿ.

ವಿಲ್ಕ್ಸನ ಪ್ರಕರಣವು (೧೭೬೩ರಿಂದ ೧೭೭೪)—ವಿಲ್ಕ್ಸನ ಪ್ರಕರಣದಿಂದ ಹೆಸರಿಲ್ಲದ (ಸಾಮಾನ್ಯ) ವಾರಂಟುಗಳನ್ನು ಹೊರಡಿಸುವುದು ಕಾಯ್ದೆಗೆ ವಿರುದ್ಧವಾದುದು, ತಮಗೆ ಬೇಕಾದವನನ್ನು ತಮ್ಮ ಪ್ರತಿನಿಧಿಯಾಗಿ ಆರಿಸಿಕೊಡಲು ಜನರಿಗೆ ಅಧಿಕಾರವಿರುವುದು ಎಂಬ ಮಾತುಗಳು ಸಿದ್ಧವಾದುವು. ಪಾರ್ಲಿಮೆಂಟ ಸಭೆಯಲ್ಲಿಯ ಭಾಷಣಗಳು ಪ್ರಸಿದ್ಧಿಸಲ್ಪಟ್ಟು ಅವುಗಳ ಮೇಲೆ ವೃತ್ತ ಪತ್ರಗಳಲ್ಲಿ ಟೀಕೆ ಮಾಡುವ ಪ್ರಘಾತವು ಆರಂಭವಾಯ್ತು, ಮತ್ತು ಅದರಿಂದ ಪಾರ್ಲಿಮೆಂಟಿನ ಸಭಾಸದರ ಮೇಲೆ ಲೋಕಮತದ ವರ್ಚಸ್ಸು ಉಂಟಾಗತೊಡಗಿತು.

ಮಾತೃಭೂಮಿಯೊಡನೆ ಅಮೇರಿಕೆಯಲ್ಲಿಯ ಇಂಗ್ಲಿಶ್ ವಸಾಹತುಗಳ ಯುದ್ಧವು (೧೭೭೫-೧೭೮೩).

ಯುದ್ಧದ ಕಾರಣಗಳು—

೧. ವಸಾಹತುಗಳ ವ್ಯಾಪಾರದ ಮೇಲೆ ನಿಯಂತ್ರಣವನ್ನು ಇಡುವ ನೀತಿಯಿಂದ ಮತ್ತು ಅದಕ್ಕೋಸುಗವಾಗಿದ್ದ ನೆವಿಗೇಶನ್ ಕಾಯ್ದೆಯಿಂದ ಅಸಂತೋಷವು.

೨. ವಸಾಹತುಗಳ ಸಮ್ಮತಿ ಇಲ್ಲದೆ ಅವುಗಳ ಮೇಲೆ ಹೇರಲ್ಪಟ್ಟ ಸ್ಟೆಂಪ್ ಆಕ್ಟ (೧೭೬೫); ಕಾಗದ, ಕಾಜು, ಚಹ ಮೊದಲಾದ ಪದಾರ್ಥಗಳ ಮೇಲೆ ಕರವು (೧೭೬೬). ಅವುಗಳಿಗೆ ವಿರೋಧವು. ಪಾರ್ಲಿಮೆಂಟನಲ್ಲಿ ತಮ್ಮ ಪ್ರತಿನಿಧಿಗಳು ಇಲ್ಲದುದರಿಂದ ತಮ್ಮ ಮೇಲೆ ಕರವನ್ನು ಕೂಡಿಸಲು ಇಂಗ್ಲಂಡಿಗೆ

ಅಧಿಕಾರವಿಲ್ಲವೆಂದು ವಸಾಹತುಗಳ ಅಭಿಪ್ರಾಯವು. ವಸಾಹತುಗಳು ತನಗೆ ಸಮಾನವಾದುವಲ್ಲ, ಆದರೆ ಅವು ತನ್ನ ಅಂಕಿತದಲ್ಲಿರುವುವು, ಮತ್ತು ವಸಾಹತುಗಳ ಸಂರಕ್ಷಣೆಗೋಸುಗ ತಾನು ಬಹಳ ಹಣವನ್ನು ವೆಚ್ಚಮಾಡ ಬೇಕಾಗುವುದು, ಆದುದರಿಂದ ಅವುಗಳ ಮೇಲೆ ಕರವನ್ನು ಕೂಡಿಸಲು ತನಗೆ ಅಧಿಕಾರವುಂಟೆಂದು ಇಂಗ್ಲಂಡಿನ ಅಭಿಪ್ರಾಯವು.

೩. ೧೭೭೦ರಲ್ಲಿ ಚಹವನ್ನುಳಿದು ಇತರ ಪದಾರ್ಥಗಳ ಮೇಲಿನ ಕರವು ರದ್ದು ಗೊಳಿಸಲ್ಪಟ್ಟಿತು. ಆದರೆ ಆದರಿಂದ ವಸಾಹತುಗಳ ಸಮಾಧಾನವಾಗಲಿಲ್ಲ. ೧೭೭೫ರಲ್ಲಿ ಯುದ್ಧವು ಪ್ರಾರಂಭವಾಯಿತು.

ಯುದ್ಧವು (೧೭೭೫ - ೧೭೮೩) —

ಇಂಗ್ಲಿಶ್ ಸೈನ್ಯದ ಸೇನಾಪತಿಗಳು—ಜನರಲ್ ಹೌ, ಜನರಲ್ ಬರ್ಗಾಯಿನಿ ಮತ್ತು ಲಾರ್ಡ ಕಾರ್ನವಾಲೀಸ.

ವಸಾಹತುಗಳ ಸೈನ್ಯದ ಸೇನಾಪತಿಗಳು — ಜಾರ್ಜ ವಾಶಿಂಗಟನ್, ಗೇಟ್ಸ.

೧೭೭೫ ಬಂಕರಹಿಲ್ ಯುದ್ಧವು. ಇಂಗ್ಲಂಡಿಗೆ ಜಯವು.

೧೭೭೬ ಜುಲೈ. ವಸಾಹತುಗಳು ತಮ್ಮ ಸ್ವಾತಂತ್ರ್ಯವನ್ನು ಸಾರಿದುವು.

೧೭೭೭ ಸರಾಟೋಗಾ ಎಂಬಲ್ಲಿ ಇಂಗ್ಲಿಶ್ ಸೇನಾಪತಿಯಾದ ಜನರಲ್ ಬರ್ಗಾಯಿನಿ ಇವನು ವಸಾಹತುಗಳ ಸೈನ್ಯಕ್ಕೆ ಶರಣುಹೋದನು.

೧೭೭೮ರಲ್ಲಿ ಫ್ರಾನ್ಸು ಮತ್ತು ೧೭೭೯ರಲ್ಲಿ ಸ್ಪೇನ ಮತ್ತು ಹಾಲಂಡ ಇವು ವಸಾಹತುಗಳೊಡನೆ ಒಪ್ಪಂದವನ್ನು ಮಾಡಿಕೊಂಡು ಇಂಗ್ಲಂಡಿನ ವಿರುದ್ಧ ಯುದ್ಧವನ್ನು ಸಾರಿದುವು.

೧೭೮೧ ಇಂಗ್ಲಿಶ್ ಸೇನಾಪತಿಯಾದ ಲಾರ್ಡ ಕಾರ್ನವಾಲೀಸನು ಯಾರ್ಕಟೌನಿನ ಬಳಿಯಲ್ಲಿ ವಸಾಹತುಗಳ ಸೈನ್ಯಕ್ಕೆ ಶರಣುಹೋದನು.

೧೭೮೨ ಜಿಬ್ರಾಲ್ಟರ ಕೋಟೆಯನ್ನು ತೆಗೆದುಕೊಳ್ಳಲು ಸ್ಪಾನಿಶ್ ಹಡಗುಪಡೆಯ ಪ್ರಯತ್ನವು ನಿಷ್ಫಲವಾಯಿತು.

೧೭೮೨ ಇಂಗ್ಲಿಶ್ ಹಡಗುಪಡೆಯ ಸೇನಾಪತಿಯಾದ ರಾಡ್ನಿ ವೆಸ್ಟ ಇಂಡೀಜ ನಡು ಗಡ್ಡೆಗಳ ಬಳಿಯಲ್ಲಿ ಫ್ರೆಂಚ ಹಡಗುಪಡೆಯನ್ನು ಸೋಲಿಸಿದನು.

೧೭೮೩ ವರ್ಸೇಲ್ಸದ ಒಪ್ಪಂದವು—(೧) ಇಂಗ್ಲಂಡು ವಸಾಹತುಗಳ ಸ್ವಾತಂತ್ರ್ಯ ವನ್ನು ಒಪ್ಪಿತು. (೨) ಸ್ಪೇನಕ್ಕೆ ಮಿನೋರ್ಕಾ, ಫ್ಲಾರಿಡಾ ಈ ಸ್ಥಳಗಳು ಮತ್ತು ಫ್ರಾನ್ಸಿಗೆ ಸಿನೇಗಲ್, ಗೋರಿ ಈ ಸ್ಥಳಗಳು ತಿರುಗಿ ದೊರೆತವು.

ಈ ಯುದ್ಧದ ತರುವಾಯದಲ್ಲಿ ಅಮೇರಿಕೆಯಲ್ಲಿಯ ಕೆನಡಾ ವಸಾಹತು ಒಂದೆ ಇಂಗ್ಲಿಶರ ವಶದಲ್ಲಿ ಉಳಿಯಿತು.

## ಇಂಗ್ಲಿಶ್ ಮತ್ತು ಐರಿಶ್ ಪಾರ್ಲಿಮೆಂಟುಗಳ ಏಕೀಕರಣವು (೧೮೦೦).

ಐರಿಶ್ ರೋಮನ್ ಕಥಲಿಕ್ ಜನರಿಗೆ ಐರಿಶ್ ಪಾರ್ಲಿಮೆಂಟಿನ ಸದಸ್ಯರಾಗಲು ಪ್ರತಿಬಂಧವು, ಅವರ ನಿಕೃಷ್ಟವಾದ ಆರ್ಥಿಕ ಪರಿಸ್ಥಿತಿ, ಐರ್ಲಂಡಿನಲ್ಲಿಯ ಎಲ್ಲ ಭೂಮಿ

ಗಳು ಇಂಗ್ಲಿಶರ ವಶದಲ್ಲಿ, ಐರಿಶ್ ವ್ಯಾಪಾರದ ಮೇಲೆ ಇಂಗ್ಲಂಡಿನ ನಿಯಂತ್ರಣವು, ಇವೆಲ್ಲ ಸಂಗತಿಗಳಿಂದ ಐರ್ಲಂಡಿನಲ್ಲಿ ಅಸಂತೋಷವು. ಐರಿಶ್ ರೋಮನ್ ಕೆಥಲಿಕ್ ಜನರ ಮೇಲಿನ ನಿರ್ಬಂಧಗಳನ್ನು ದೂರಗೊಳಿಸಲು ಹೆನ್ರಿ ಗ್ರೆಟನನ ಪ್ರಯತ್ನಗಳು. ಈ ಪ್ರಯತ್ನಗಳಿಂದ ಐರಿಶ್ ಜನರಿಗೆ ಕೆಲವು ಅನುಕೂಲತೆಗಳು ದೊರೆತುವು. ಆದರೆ ಅದ ರಿಂದ ಅವರಿಗೆ ಸಮಾಧಾನವಾಗಲಿಲ್ಲ. ವುಲ್ಫ ಟೋನನು 'ಸಂಯುಕ್ತ ಐರಿಶ್ ಜನತೆ' ಎಂಬ ಸಂಸ್ಥೆಯನ್ನು ಸ್ಥಾಪಿಸಿದನು. ಐರ್ಲಂಡಿನಲ್ಲಿ ಅಸಂತೋಷವು. ಇಂಗ್ಲಂಡ್ ಫ್ರಾನ್ಸ್ ಇವುಗಳ ನಡುವೆ ಯುದ್ಧವು ಆರಂಭವಾಗಲು ಐರ್ಲಂಡಿನಲ್ಲಿ ಬಂಡುಗಳು ಹುಟ್ಟಿದುವು. ಐರಿಶ್ ಜನರನ್ನು ಸಮಾಧಾನಗೊಳಿಸಲು ವಿಲಿಯಮ್ ಪಿಟ್ಟನು (ಕಿರಿಯನು) ಐರಿಶ್ ಮತ್ತು ಇಂಗ್ಲಿಶ್ ಪಾರ್ಲಿಮೆಂಟುಗಳ ಏಕೀಕರಣವನ್ನು ಮಾಡಿ ದನು (೧೮೦೦). ಆದರೆ ಐರಿಶ್ ರೋಮನ್ ಕೆಥಲಿಕ್ ಜನರ ಮೇಲಿನ ನಿರ್ಬಂಧಗಳು ದೂರವಾಗಲಿಲ್ಲ. ಆದುದರಿಂದ ಅಲ್ಲಿಯ ಜನರಲ್ಲಿ ಅಸಂತೋಷವು ಕಡಿಮೆಯಾಗಲಿಲ್ಲ.

ಫ್ರಾನ್ಸಿನ ರಾಜ್ಯಕ್ರಾಂತಿಯ ಕಾರಣಗಳು—

(೧) ಸರದಾರರಿಗೂ ಧರ್ಮಾಧಿಕಾರಿಗಳಿಗೂ ಇದ್ದ ವಿಶಿಷ್ಟವಾದ ವಂಶಪರಂಪರಾಗತ ಫ್ಯೂಡಲ್ ಅಧಿಕಾರಿಗಳು; ಅವರು ಕರಗಳನ್ನು ಕೊಡಬೇಕಾಗುತ್ತಿರಲಿಲ್ಲ. ಒಕ್ಕಲಿಗರು ಕೂಲಿಕಾರರು ಮೊದಲಾದ ಕೆಳಗಿನ ವರ್ಗದವರ ಮೇಲೆ ಕರಗಳ ಭಾರವು. ಆದರಿಂದ ಅವರಿಗೆ ಕಷ್ಟಮಯವಾದ ಸ್ಥಿತಿ. ಭಿನ್ನ ಭಿನ್ನ ವರ್ಗಗಳಲ್ಲಿ ಪರಸ್ಪರ ದ್ವೇಷವು ಮತ್ತು ಅವಿಶ್ವಾಸವು.

(೨) ಏಕತಂತ್ರಯೂ ಪೀಡಾಕರವೂ ಆದ ರಾಜಸತ್ತೆ.

(೩) ದರಬಾರದ ಅನಾವಶ್ಯಕವಾದ ವೆಚ್ಚವು. ಯುದ್ಧಗಳಿಂದಾದ ಮಿತಿಮೀರಿದ ಸಾಲವು. ಆದರಿಂದ ಫ್ರಾನ್ಸಿನ ಜನರ ನಿಕೃಷ್ಟವಾದ ಸಾಂಪತ್ತಿಕ ಸ್ಥಿತಿ.

(೪) ರಾಜ್ಯಕಾರಭಾರದಲ್ಲಿ ಕೆಳಗಿನ ವರ್ಗಗಳ ಜನರ ಪ್ರವೇಶವು ಆಗಬಾರದೆಂದು ಮೇಲಿನ ವರ್ಗಗಳ ಮತ್ತು ರಾಜನ ನೀತಿ. ಆದರಿಂದ ರಾಜಸತ್ತೆಯ ವಿಷಯದಲ್ಲಿ ಬೆಳೆಯುತ್ತಿರುವ ಅವಿಶ್ವಾಸವು ಮತ್ತು ದ್ವೇಷವು.

(೫) ವಾಲ್ಟೇರ್, ರೂಸೋ ಮೊದಲಾದ ಲೇಖಕರು ಜನರ ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ವಿಚಾರಗಳಲ್ಲಿ ಒದಗಿಸಿದ ಕ್ರಾಂತಿ.

ಫ್ರಾನ್ಸಿನಲ್ಲಿಯ ಸ್ಥಿತ್ಯಂತರಗಳು.

ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿ (೧೭೮೯)— ಫ್ರಾನ್ಸಿನ ಪಾರ್ಲಿಮೆಂಟಿನ (ಸ್ಟೇಟ್ಸ್ ಜನರಲ್) ಅಧಿವೇಶನವು. ಸರದಾರರ ಮತ್ತು ಧರ್ಮಾಧಿಕಾರಿಗಳ ವಿಶಿಷ್ಟ ಫ್ಯೂಡಲ್ ಅಧಿಕಾರಗಳು ರದ್ದುಗೊಳಿಸಲ್ಪಟ್ಟುವು. ಕೆಳಗಿನ ವರ್ಗಗಳ ಜನರು ಪರಿಸಿನಲ್ಲಿ ದಂಗೆಗಳನ್ನು ಪ್ರಾರಂಭಿಸಿದರು. ಬಸ್ಟೀಲ ಕಾರಾಗೃಹವನ್ನೊಡೆದು ಬಂದಿಗಳನ್ನು ಮುಕ್ತಗೊಳಿಸಿದರು ಮತ್ತು ಎಲ್ಲ ಸತ್ತೆಯನ್ನು ತಮ್ಮ ಕೈಯಲ್ಲಿ ತಂದುಕೊಳ್ಳಲು ಪ್ರಯತ್ನಿಸಿದರು.

ಫ್ರಾನ್ಸಿನಲ್ಲಿ ಅರಾಜಕತೆ (೧೭೮೯-೯೨)—ಸರದಾರ ವರ್ಗದ ಜನರ ಮೇಲೆ ಅತ್ಯಾಚಾರಗಳು. ಅವರು ಪರದೇಶಗಳಿಗೆ ಓಡಿಹೋದರು. ರಾಜನು ಸೆರೆಹಿಡಿಯಲ್ಪಟ್ಟನು. ಕ್ರಾಂತಿಕಾರಿಗಳ ಕೈಯಲ್ಲಿ ಸತ್ತೆ. ಎಲ್ಲೆಲ್ಲಿಯೂ ಅರಾಜಕತೆ, ಅಶಾಂತತೆ ಮತ್ತು ದೊಂಬೆಗಳು.

ಫ್ರಾನ್ಸಿನಲ್ಲಿ ಲೋಕಸತ್ತಾತ್ಮಕ ರಾಜ್ಯವು (೧೭೯೨-೧೮೦೪)—

೧೭೯೨—೯೫ ಉಗ್ರಕ್ರಾಂತಿಕಾರಿಗಳ ಕೈಯಲ್ಲಿ ಸತ್ತೆ. ರಾಬಸ್‌ಪಿಯರ್ ಮತ್ತು ಡೆಂಟನ್ ಇವರು ನಾಯಕರು. ೧೭೯೩ರಲ್ಲಿ ೧೬ನೆಯ ಲುಯಿ ರಾಜನೂ ಅಂಟೋನಿಟ್ ರಾಣಿಯೂ ಕೊಲ್ಲಲ್ಪಟ್ಟರು. ಯುರೋಪದಲ್ಲಿಯ ಇತರ ರಾಷ್ಟ್ರಗಳೊಡನೆ ಯುದ್ಧವು ಪ್ರಾರಂಭವಾಯಿತು.

೧೭೯೫—೯೯ ಡಿರೆಕ್ಟರಿಯ (೫ ಜನರ ಮಂಡಳವು) ಕೈಯಲ್ಲಿ ಸತ್ತೆ.

೧೭೯೯—೧೮೦೪ ನೆಪೋಲಿಯನನು ಲೋಕ ಪ್ರತಿನಿಧಿ (ಕಾನ್ಸಲ್) ಆದನು. ಮತ್ತು ಎಲ್ಲ ಸತ್ತೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡನು.

ಫ್ರಾನ್ಸಿನಲ್ಲಿ ರಾಜಸತ್ತೆ ಸ್ಥಾಪಿಸಲ್ಪಟ್ಟಿತು (೧೮೦೪-೧೮೧೫)—

೧೮೦೪—೧೪ ನೆಪೋಲಿಯನನು ಫ್ರೆಂಚರ ಬಾದಶಹನೆಂದು ರಾಜ್ಯಾಭಿಷೇಕವನ್ನು ಮಾಡಿಸಿಕೊಂಡನು. ಮತ್ತು ೧೮೧೪ರ ವರೆಗೆ ಸತ್ತೆಯನ್ನು ತನ್ನ ಕೈಯಲ್ಲಿ ಇಟ್ಟುಕೊಂಡನು. ಫ್ರಾನ್ಸಿನ ಅಂತಃಸ್ಥಕಾರಭಾರಗಳಲ್ಲಿ ಸುಧಾರಣೆಗಳನ್ನು ಮಾಡಿದನು ಮತ್ತು ಯುರೋಪದಲ್ಲಿಯ ರಾಷ್ಟ್ರಗಳೊಡನೆ ಯುದ್ಧಗಳನ್ನು ಮುಂದೆ ಸಾಗಿಸಿದನು.

೧೮೧೪ ಮಿತ್ರರಾಷ್ಟ್ರಗಳು ನೆಪೋಲಿಯನನನ್ನು ಹಿಡಿದು ಎಲ್ಬಾ ನಡುಗಡ್ಡೆಗಳಿಗೆ ಕಳಿಸಿದುವು.

೧೮೧೫ ನೆಪೋಲಿಯನನು ಎಲ್ಬಾ ನಡುಗಡ್ಡೆಯಿಂದ ಜಾರಿಬಂದನು. ವಾಟರ್ಲೂ ಯುದ್ಧದಲ್ಲಿ ಸೋತನು. ಸೆರೆಹಿಡಿಯಲ್ಪಟ್ಟು ಸೆಂಟ ಹೆಲೆನಾ ನಡುಗಡ್ಡೆಯ ಮೇಲೆ ಸೆರೆಯಲ್ಲಿಡಲ್ಪಟ್ಟನು. ಅಲ್ಲಿ ೧೮೨೧ರಲ್ಲಿ ಮರಣಹೊಂದಿದನು.

೧೮೧೫ ಫ್ರಾನ್ಸಿನ ೧೬ನೆಯ ಲುಯಿಯ ಮಗನಾದ ೧೭ನೆಯ ಲುಯಿ ನೆಪೋಲಿಯನನು ಸೆರೆಯಲ್ಲಿದ್ದಾಗ ಮರಣಹೊಂದಿದುದರಿಂದ ೧೬ನೆಯ ಲುಯಿಯ ತಮ್ಮನು ೧೮ನೆಯ ಲುಯಿ ಎಂದು ಬಿರುದನ್ನು ಧರಿಸಿ ರಾಜನಾದನು.

ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿಯ ವಿಷಯದಲ್ಲಿ ಇಂಗ್ಲಂಡಿನ ಲೋಕಮತವೂ ಇಂಗ್ಲಂಡಿನ ನೀತಿಯೂ—

(೧) ತಮ್ಮ ಪೀಡಾಕರ ಮತ್ತು ಅನಿಯಂತ್ರಿಕ ರಾಜ್ಯಕರ್ತರ ವಿರುದ್ಧವಾಗಿ ಫ್ರೆಂಚ ಜನರು ನಡೆಯಿಸಿದ ಆಂದೋಲನಕ್ಕೆ ಇಂಗ್ಲಿಶ್ ಜನತೆಯ ಸಹಾನುಭೂತಿ.

(೨) ಕ್ರಾಂತಿಕಾರಿಗಳ ಅತ್ಯಾಚಾರಗಳನ್ನು ಕಂಡು ಅವರ ವಿಷಯದಲ್ಲಿ ಸಾಶಂಕ ವೃತ್ತಿ; ೧೭೯೦ರಲ್ಲಿ ಎಡ್ಮಂಡ ಬರ್ಕನೆಂಬ ವಿದ್ವಾಂಸನು "ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿಯನ್ನು ಕುರಿತು ವಿಚಾರಗಳು" ಎಂಬ ಪುಸ್ತಕವನ್ನು ಬರೆದು ಫ್ರಾನ್ಸಿನ ರಾಜ್ಯಕ್ರಾಂತಿಯ ವಿರುದ್ಧವಾಗಿ ಜನರ ಮನಸ್ಸನ್ನು ತಿರುಗಿಸಿದನು.

(೩) ೧೭೯೩ ಜಾನೆವರಿಯಲ್ಲಿ ಫ್ರಾನ್ಸಿನ ರಾಜನಾದ ೧೬ನೆಯ ಲುಯಿ ಕೊಲ್ಲಲ್ಪಟ್ಟನು. ಕ್ರಾಂತಿಕಾರಕ ವಿಚಾರಗಳನ್ನು ಯುರೋಪದ ಇತರ ರಾಷ್ಟ್ರಗಳಲ್ಲಿ ಪರಿಹರಿಸಲು ಫ್ರಾನ್ಸಿನಲ್ಲಿಯ ಕ್ರಾಂತಿಕಾರಿಗಳು ಪ್ರಯತ್ನಿಸಿದರು. ಈ ಕ್ರಾಂತಿಕಾರಿಗಳ ಆಂದೋಲನವು ತನ್ನಲ್ಲಿ ಹಬ್ಬಬಾರದೆಂದು ಇಂಗ್ಲಂಡು ಇತರ ಯುರೋಪಿಯನ್ ರಾಷ್ಟ್ರಗಳೊಡನೆ ಒಪ್ಪಂದವನ್ನು ಮಾಡಿಕೊಂಡು ೧೭೯೩ರ ಫೆಬ್ರುವರಿಯಲ್ಲಿ ಫ್ರಾನ್ಸಿನ ರಾಜ್ಯಕ್ರಾಂತಿಯ ವಿರುದ್ಧವಾಗಿ ಯುದ್ಧವನ್ನು ಸಾರಿತು.

### ಫ್ರಾನ್ಸಿನ ವಿರುದ್ಧವಾಗಿ ಮಿತ್ರರಾಷ್ಟ್ರಗಳ ಸಂಘಗಳು—

೧೭೯೩—೯೭ ಮೊದಲನೆಯ ಸಂಘವು:—ಇಂಗ್ಲಂಡ್, ಆಸ್ಟ್ರಿಯಾ, ಪ್ರಶಿಯಾ, ಸ್ಪೇನ ಮತ್ತು ಹಾಲಂಡ್.

೧೭೯೯—೧೮೦೨ ಎರಡನೆಯ ಸಂಘವು:—ಇಂಗ್ಲಂಡ್, ರಶಿಯಾ, ಟರ್ಕಿ, ಆಸ್ಟ್ರಿಯಾ.

೧೮೦೫—೧೮೦೭ ಮೂರನೆಯ ಸಂಘವು:—ಇಂಗ್ಲಂಡ್, ರಶಿಯಾ, ಆಸ್ಟ್ರಿಯಾ, ಸ್ವೀಡನ್.

೧೮೧೨—೧೫ ನಾಲ್ಕನೆಯ ಸಂಘವು:—ಇಂಗ್ಲಂಡ್, ರಶಿಯಾ, ಪ್ರಶಿಯಾ, ಸ್ವೀಡನ್ ಮತ್ತು ಆಸ್ಟ್ರಿಯಾ.

### ಕ್ರಾಂತಿಕಾರಕ ವಿಚಾರಗಳು ಇಂಗ್ಲಂಡಿನಲ್ಲಿ ಪಸರಿಸಬಾರದೆಂದು ಇಂಗ್ಲಂಡು ಯೋಜಿಸಿದ ಉಪಾಯಗಳು—

(೧) ಪರಕೀಯ ಜನರ ವಿಷಯದಲ್ಲಿ ಕಾಯ್ದೆ.

(೨) ರಾಜದ್ರೋಹಿ ವೃತ್ತಪತ್ರಗಳ ಕಾಯ್ದೆ.

(೩) ಸಭಾಪ್ರತಿಬಂಧದ ಕಾಯ್ದೆ.

(೪) ಹೇಬಿಯಸ್ ಕಾರ್ಪಸ್ ಆಕ್ಟ ತಾತ್ಪೂರ್ತಿಕವಾಗಿ ರದ್ದುಗೊಳಿಸಲ್ಪಟ್ಟಿತು.

### ಭೂಮಿಯ ಮೇಲೆ ಮಿತ್ರರಾಷ್ಟ್ರಗಳ ಪರಾಭವವು ಮತ್ತು ಸಮುದ್ರದ ಮೇಲೆ ಇಂಗ್ಲಂಡಿನ ವಿಜಯವು (೧೭೯೩-೯೭)—

ಫ್ರೆಂಚ ಸೈನ್ಯವು ಡಚ್ ಮತ್ತು ಇಂಗ್ಲಿಶ್ ಸೈನ್ಯವನ್ನು ಸೋಲಿಸಿ ಹಾಲಂಡಿನ ಮೇಲೆ ವರ್ಚಸ್ಸನ್ನು ಸ್ಥಾಪಿಸಿತು (೧೭೯೫). ಹಾಲಂಡು ಫ್ರಾನ್ಸಿನೊಡನೆ ಒಪ್ಪಂದವನ್ನು ಮಾಡಿಕೊಂಡಿತು. ನೆಪೋಲಿಯನನು ಇಟಲಿಯ ಉತ್ತರದಲ್ಲಿ ಆಸ್ಟ್ರಿಯವನ್ನು ಸೋಲಿಸಿದನು. ಆಸ್ಟ್ರಿಯವು ಕೆಂಪೋ ಫಾರ್ಮಿಯೋ ಎಂಬಲ್ಲಿ ಒಪ್ಪಂದವನ್ನು ಮಾಡಿಕೊಂಡಿತು.

ಇಂಗ್ಲಿಶ್ ಹಡಗುಪಡೆಯ ಸೇನಾಪತಿಯಾದ ಲಾರ್ಡ ಹಾ ಇವನು ಅಶಾಂಟ ಎಂಬಲ್ಲಿ ಫ್ರೆಂಚ ಹಡಗುಪಡೆಯನ್ನು ಸೋಲಿಸಿದನು (೧೭೯೪); ಇಂಗ್ಲಂಡು ಡಚ್ ಜನರ ಕೇಪ್ ಆಫ್ ಗುಡ್‌ಹೋಪ್ ಮತ್ತು ಸಿಂಹಲದ್ವೀಪ ಇವನ್ನು ತೆಗೆದುಕೊಂಡಿತು. ೧೭೯೭ರಲ್ಲಿ ಜರ್ವಿಸ್ ಮತ್ತು ನೆಲ್ಸನ್ ಇವರು ಸೇಂಟ ವಿನ್‌ಸೆಂಟನ ಬಳಿಯಲ್ಲಿ ಸ್ಪೆನಿಶ್ ಹಡಗುಪಡೆಯನ್ನು ಮತ್ತು ಡಂಕನನು ಕೆಂಪರಡಾವುನಿನ ಬಳಿಯಲ್ಲಿ ಡಚ್ ಹಡಗು ಪಡೆಯನ್ನು ಸೋಲಿಸಿದರು. ಇದರಿಂದ ಇಂಗ್ಲಂಡಿನ ಮೇಲೆ ಹಡಗುಪಡೆಯ ದಾಳಿ ಬರುವ ಭೀತಿ ಇಲ್ಲದಂತಾಯಿತು.

೧೭೯೮ರಲ್ಲಿ ನೆಪೋಲಿಯನನು ಇಜಿಪ್ತಕ್ಕೆ ದಾಳಿಯಿಕ್ಕಿದನು. ಆದರೆ ನೆಲ್ಸನನು ನಾಯಿಲದ ಯುದ್ಧದಲ್ಲಿ ಫ್ರೆಂಚ ಹಡಗುಪಡೆಯನ್ನು ಸೋಲಿಸಿದನು (೧೭೯೮). ೧೮೦೧ರಲ್ಲಿ ಅಲೆಕ್ಝಾಂಡ್ರಿಯದ ಯುದ್ಧದಲ್ಲಿ ಫ್ರೆಂಚರು ಸೋಲಿಸಲ್ಪಟ್ಟರು.

೧೮೦೦ರಲ್ಲಿ ನೆಪೋಲಿಯನನು ಮಾರೆಂಗೊ ಎಂಬಲ್ಲಿ ಮತ್ತು ಫ್ರೆಂಚ ಸೇನಾಪತಿಯಾದ ಮೋರೋ ಎಂಬವನು ಹೊಹೆನ್‌ಲಿಂಡನ್ ಎಂಬಲ್ಲಿ ಆಸ್ಟ್ರಿಯನ್ ಸೈನ್ಯವನ್ನು ಸೋಲಿಸಿದರು; ಆಸ್ಟ್ರಿಯವು ನೆಪೋಲಿಯನನೊಡನೆ ಒಪ್ಪಂದವನ್ನು ಮಾಡಿಕೊಂಡಿತು.

೧೮೦೨ ಅಮಿಯನ್ಸಿನ ಒಪ್ಪಂದವು; ಇಂಗ್ಲಂಡು ಫ್ರಾನ್ಸಿನ ಲೋಕಸತ್ತಾಕರಾಜ್ಯಕ್ಕೆ ಮಾನ್ಯತೆಯನ್ನಿತ್ತಿತು. ಗೆದ್ದುಕೊಂಡ ಭೂಮಿಗಳನ್ನು ಒಬ್ಬರೊಬ್ಬರಿಗೆ ತಿರುಗಿ ಕೊಡಬೇಕೆಂದು ನಿರ್ಣಯಿಸಲ್ಪಟ್ಟಿತು.

೧೮೦೩—೧೮೧೫ ಮತ್ತೆ ಯುದ್ಧವು:

ಇಂಗ್ಲಂಡಿಗೆ ಹಡಗುಪಡೆಯ ದಾಳಿಯನ್ನಿಕ್ಕಲು ನೆಪೋಲಿಯನನು ಯೋಜಿಸಿದನು. ಆದರೆ ನೆಲ್ಸನನು ಟ್ರಾಫಲ್ಗಾರದ ಯುದ್ಧದಲ್ಲಿ (೧೮೦೫) ಫ್ರೆಂಚ ಹಡಗುಪಡೆಯನ್ನು ಸಂಪೂರ್ಣವಾಗಿ ಸೋಲಿಸಿದುದರಿಂದ ನೆಪೋಲಿಯನನ ಉದ್ದೇಶವು ಕೈಗೂಡಲಿಲ್ಲ.

ಭೂಮಿಯ ಮೇಲೆ ನೆಪೋಲಿಯನನು ಆಸ್ಟರ್‌ಲಿಟ್ಝದ ಯುದ್ಧದಲ್ಲಿ (೧೮೦೫) ಆಸ್ಟ್ರಿಯವನ್ನು ಮತ್ತು ಯೇನಾ ಎಂಬಲ್ಲಿಯ ಯುದ್ಧದಲ್ಲಿ (೧೮೦೬) ಪ್ರಶಿಯವನ್ನು ಮತ್ತು ಫ್ರೀಡ್‌ಲಂಡಿನ ಯುದ್ಧದಲ್ಲಿ (೧೮೦೭) ರಶಿಯವನ್ನು ಸೋಲಿಸಿದನು. ಆ ರಾಷ್ಟ್ರಗಳು ಅವನೊಡನೆ ಒಪ್ಪಂದವನ್ನು ಮಾಡಿಕೊಂಡುವು.

೧೮೦೬ರಲ್ಲಿ ನೆಪೋಲಿಯನನು ಇಂಗ್ಲಂಡಿನ ವ್ಯಾಪಾರಕ್ಕೆ ತೊಂದರೆಯನ್ನುಂಟು ಮಾಡಲು ಒಂದು ಪ್ರಕಟನೆಯನ್ನು (ಬರ್ಲಿನ್ ಡಿಕ್ರಿ) ಹೊರಡಿಸಿದನು. ಮಿಲನ್ ಡಿಕ್ರಿ (೧೮೦೭).

೧೮೦೭ ಬರ್ಲಿನಿನ ಪ್ರಕಟನೆಗೆ ಉತ್ತರವೆಂದು ಇಂಗ್ಲಂಡು ಯುರೋಪಿಯನ್ ರಾಷ್ಟ್ರಗಳ ಸಮುದ್ರದ ಮೇಲಿನ ವ್ಯಾಪಾರವನ್ನು ತಡೆವ ನೀತಿಯನ್ನು ಸ್ವೀಕರಿಸಿತು.

## ಪೆನಿನ್ಸುಲರ್ ಯುದ್ಧವು (೧೮೦೮-೧೪) —

ನೆಪೋಲಿಯನನ ಬರ್ಲಿನ್ ಡಿಕ್ರಿಯ ವಿರುದ್ಧವಾಗಿ ನಡೆಯಲು ಪೋರ್ತುಗಾಲವು ಮೊದಲು ಧೈರ್ಯಮಾಡಿತು. ಪೋರ್ತುಗಾಲಕ್ಕೆ ಇಂಗ್ಲಂಡಿನ ಸಾಹಾಯ್ಯವು. ಸ್ಪೇನದ ಅಂತಃಸ್ಥಕಾರಭಾರದಲ್ಲಿ ನೆಪೋಲಿಯನನು ಕೈಹಾಕಿ ಸ್ಪೇನದ ಪಟ್ಟಕ್ಕೆ ತನ್ನ ತಮ್ಮನನ್ನು ತರಲು ಪ್ರಯತ್ನಿಸಿದುದರಿಂದ ನೆಪೋಲಿಯನನ ವಿರುದ್ಧವಾಗಿ ಸ್ಪೇನ ರಾಷ್ಟ್ರವು ನಿಂತಿತು. ಸ್ಪೇನದ ಜನತೆಗೆ ಇಂಗ್ಲಂಡಿನ ಸಾಹಾಯ್ಯವು. ಸರ್ ಜಾನ್ ಮೂರ್ ಮತ್ತು ಅವನ ಮರಣದ ತರುವಾಯದಲ್ಲಿ ಸರ್ ಆರ್ಥರ್ ವೆಲೆಸ್ಲಿ ಇವರಿಗೆ ಸ್ಪೇನದಲ್ಲಿಯ ಇಂಗ್ಲಿಶ್ ಸೈನ್ಯದ ಆಧಿಪತ್ಯವು.

೧೮೦೯ ಟೆಲೆವ್ಹಾರಾ ಎಂಬಲ್ಲಿಯ ಯುದ್ಧದಲ್ಲಿ ಸರ್ ಆರ್ಥರ್ ವೆಲೆಸ್ಲಿ ಇವನು ಫ್ರೆಂಚ ಸೈನ್ಯವನ್ನು ಸೋಲಿಸಿದನು. ಅವನ ಈ ಪರಾಕ್ರಮ ಕ್ಕೋಸುಗ ಅವನಿಗೆ 'ಡ್ಯೂಕ್ ಆಫ್ ವೆಲಿಂಗ್ಟನ್' ಎಂಬ ಬಿರುದು ಕೊಡಲ್ಪಟ್ಟಿತು.

೧೮೧೩ — ೧೪ ವೆಲಿಂಗ್ಟನನು ಫ್ರೆಂಚ ಸೈನ್ಯವನ್ನು ವ್ಹಿಟೋರಿಯಾ ಎಂಬಲ್ಲಿ (೧೮೧೩) ಮತ್ತು ಟುಲೂಝು ಎಂಬಲ್ಲಿ (೧೮೧೪) ಸೋಲಿಸಿದನು.

## ರಶಿಯದ ಮೇಲೆ ನೆಪೋಲಿಯನನ ದಾಳಿ (೧೮೧೨) —

ತೀವ್ರವಾದ ಚಳಿಯಿಂದ ಸಾವಿರಾರು ಫ್ರೆಂಚ ಸೈನಿಕರು ಸಾವಿಗೆ ತುತ್ತಾದರು. ನೆಪೋಲಿಯನನು ತಿರುಗಿ ಬಂದನು.

೧೮೧೩ ರಶಿಯನ್, ಪ್ರಶಿಯನ್ ಮತ್ತು ಆಸ್ಟ್ರಿಯನ್ ಸೈನ್ಯಗಳು ಲಿಪ್ಝಿಗದ ಯುದ್ಧದಲ್ಲಿ ನೆಪೋಲಿಯನನನ್ನು ಸೋಲಿಸಿದುವು.

## ನೆಪೋಲಿಯನನ ರಾಜಪದತ್ಯಾಗವು (೧೮೧೪) —

ತನ್ನ ಸೈನ್ಯವು ಸೋತುದರಿಂದ ನೆಪೋಲಿಯನನು ರಾಜಪದವನ್ನು ಬಿಟ್ಟನು. ಮಿತ್ರರಾಷ್ಟ್ರಗಳು ಅವನನ್ನು ಎಲ್ಬಾ ನಡುಗಡ್ಡೆಯಲ್ಲಿ ಸೆರೆಯಲ್ಲಿಟ್ಟುವು. ೧೬ನೆಯ ಲುಯಿಯ ತಮ್ಮನು ೧೮ನೆಯ ಲುಯಿ ಎಂಬ ಹೆಸರಿನಿಂದ ಫ್ರಾನ್ಸಿನ ರಾಜನಾಗಿ ಮಾಡಲ್ಪಟ್ಟನು.

೧೮೧೫ ನೆಪೋಲಿಯನನು ಎಲ್ಬಾ ನಡುಗಡ್ಡೆಯಿಂದ ಜಾರಿ ಫ್ರಾನ್ಸಿಗೆ ಬಂದನು. ವಾಟರ್ಲೂ ಯುದ್ಧದಲ್ಲಿ ವೆಲಿಂಗ್ಟನನ ನಾಯಕತ್ವದಲ್ಲಿ ಮಿತ್ರರಾಷ್ಟ್ರ

ಗಳ ಸೈನ್ಯಗಳು ನೆಪೋಲಿಯನನನ್ನು ಸೋಲಿಸಿದುವು. ನೆಪೋಲಿಯನನು ಸೇಂಟ ಹೆಲೆನಾ ನಡುಗಡ್ಡೆಯಲ್ಲಿ ಸೆರೆಯಲ್ಲಿಡಲ್ಪಟ್ಟನು.

ಪಾರ್ಲಿಮೆಂಟು ಮಾಡಿದ ಮಹತ್ವದ ಕಾಯ್ದೆಗಳು—

೧೭೯೩ ಏಲಿಯನ್ ಅ್ಯಕ್ಟ—ಪರಕೀಯ (ಫ್ರೆಂಚ) ಕ್ರಾಂತಿಕಾರಿಗಳಿಗೆ ಇಂಗ್ಲಂಡಿನಲ್ಲಿ ಪ್ರವೇಶಿಸಲು ಪ್ರತಿಬಂಧವು.

೧೭೯೩ ಟ್ರೇಟರ್ಸ ಕಾರೆಸ್‌ಪಾಂಡೆನ್ಸ ಅ್ಯಕ್ಟ (ರಾಜ್ಯದ್ರೋಹಿ ಪತ್ರವ್ಯವಹಾರದ ವಿಷಯದಲ್ಲಿ ಕಾಯ್ದೆ).

೧೮೦೦ ಗ್ರೇಟಬ್ರಿಟನ್ (ಇಂಗ್ಲಂಡ್ ಮತ್ತು ಸ್ಕಾಟಲಂಡ್) ಮತ್ತು ಐರ್ಲಂಡ್ ಇವುಗಳ ಪಾರ್ಲಿಮೆಂಟುಗಳ ಏಕೀಕರಣವು.

೧೮೦೭ ಗುಲಾಮರ ವ್ಯಾಪಾರವನ್ನು ತಡೆಯಲು ಕಾಯ್ದೆ.

೧೮೧೧ ರೀಜನ್ಸಿ ಬಿಲ್ ಪಾಸಾಯಿತು. ೩ನೆಯ ಜಾರ್ಜನು ಭ್ರಮಿಷ್ಟನಾದುದರಿಂದ ರಾಜಪುತ್ರ ಜಾರ್ಜನಿಗೆ ರಾಜನ ಅಧಿಕಾರಗಳು ಕೊಡಲ್ಪಟ್ಟುವು.

೧೮೧೨ ಬಡ ಜನರ ವಿಷಯದಲ್ಲಿ ಕಾಯ್ದೆ.
ನಾನ್‌ಕನ್‌ಫಾರ್ಮಿಸ್ಟ ಜನರ ಮೇಲಿನ ನಿರ್ಬಂಧಗಳು ದೂರಮಾಡಲ್ಪಟ್ಟುವು.

೧೮೧೫ ಧಾನ್ಯದ ಕಾಯ್ದೆ.

---

# ೨೧ನೆಯ ಪ್ರಕರಣವು

## ೧೮ನೆಯ ಶತಕದಲ್ಲಿಯ ಇಂಗ್ಲಂಡು ಮತ್ತು ಬ್ರಿಟಿಶ್ ಸಾಮ್ರಾಜ್ಯವು

### ಔದ್ಯೋಗಿಕ ಕ್ರಾಂತಿ.

**ಔದ್ಯೋಗಿಕ ಕ್ರಾಂತಿ**—೧೮ನೆಯ ಶತಕದ ಉತ್ತರಾರ್ಧದಲ್ಲಿ ಇಂಗ್ಲಂಡಿನಲ್ಲಿ ಔದ್ಯೋಗಿಕ ಕ್ರಾಂತಿ ಒದಗಿತು. ಈ ಕ್ರಾಂತಿಯ ಮೊದಲು ಇಂಗ್ಲಂಡು ಕೃಷಿಪ್ರಧಾನ ದೇಶವಾಗಿತ್ತು. ಈಗ ಅದು ಉದ್ಯೋಗಪ್ರಧಾನವಾಯಿತು. ಮತ್ತು ಇಂಗ್ಲಂಡಿನ ವ್ಯಾಪಾರವು ಬೆಳೆಯಿತು. ಈ ಕ್ರಾಂತಿಯೊದಗಲು ಮುಂದಿನ ಸಂಗತಿಗಳು ಕಾರಣವಾದುವು:—(೧) ಒಕ್ಕಲತನದಲ್ಲಿ ಸುಧಾರಣೆ; (೨) ಯಾಂತ್ರಿಕ ಶೋಧಗಳು, ಕಾರಖಾನೆಗಳ ಮತ್ತು ಗಿರಣಿಗಳ ಸ್ಥಾಪನೆ; (೩) ಮಾರ್ಗಗಳ ಸುಧಾರಣೆ ಮತ್ತು ಸಂಚಾರದ ಸಾಧನಗಳಲ್ಲಿ ಸುಧಾರಣೆ.

**(೧) ಒಕ್ಕಲತನದಲ್ಲಿ ಸುಧಾರಣೆ**—ಹದಿನೆಂಟನೆಯ ಶತಕದ ಆರಂಭದಲ್ಲಿ ಒಕ್ಕಲತನವೆ ಇಂಗ್ಲಂಡಿನ ಮುಖ್ಯವಾದ ಉದ್ಯೋಗವಾಗಿತ್ತು. ಆಗಿನ ಒಕ್ಕಲತನದ ಕೆಲಸವೆಲ್ಲವು ಹಳೆಯ ಪದ್ಧತಿಯದಿದ್ದುದರಿಂದ ಭೂಮಿಯಿಂದ ಬರುವ ಬೆಳೆ ಬಹು ಅಲ್ಪವಾಗಿತ್ತು. ಭೂಮಿಯ ಕಸುವು ಉಳಿಯಬೇಕೆಂದು ಒಕ್ಕಲಿಗರು ಎರಡು ವರ್ಷ ಬೆಳೆಯನ್ನು ತೆಗೆದುಕೊಂಡ ಬಳಿಕ ಮೂರನೆಯ ವರ್ಷ ಭೂಮಿಯನ್ನು ಬಿತ್ತದೆ ಹಾಗೆಯೆ ಬಿಡುತ್ತಿದ್ದರು. ಆದುದರಿಂದ ಸಾಗುವಳಿಯ ಭೂಮಿಯಲ್ಲಿ ⅓ ಭೂಮಿ ಯಾವಾಗಲು ಪಡಬೀಳುತ್ತಿತ್ತು; ಇದರಿಂದ ದೇಶಕ್ಕೆ ಬಹು ಹಾನಿಯಾಗುತ್ತಿತ್ತು. ಆದರೆ ೧೮ನೆಯ ಶತಕದಲ್ಲಿ ಈ ವಿಷಯದಲ್ಲಿ ಎಷ್ಟೊ ಸುಧಾರಣೆಯಾಯ್ತು. ಒಂದೇ ಬಗೆಯ ಬೆಳೆಯನ್ನು ತೆಗೆದುಕೊಳ್ಳದೆ ಬೇರೆ ಬೇರೆ ಬಗೆಯ ಬೆಳೆಗಳನ್ನು ತೆಗೆದುಕೊಂಡರೆ, ಮತ್ತು ಗಜ್ಜರಿ ಮೊದಲಾದ ಕಂದಮೂಲಗಳನ್ನು ಬೆಳೆಯಿಸಿದರೆ ಭೂಮಿಯ ಕಸುವು ನಷ್ಟವಾಗುವುದಿಲ್ಲವೆಂಬ ಮಾತನ್ನು ಲಾರ್ಡ **ಟೌನ್‌ಸೆಂಡನು** ಕಂಡು ಹಿಡಿದನು. ಅದರಂತೆ ಗೊಬ್ಬರವನ್ನು ಉಪಯೋಗಿಸುವುದರಿಂದ ಭೂಮಿಯ ಕಸುವು ಹೆಚ್ಚುವುದೆಂಬ ಮಾತಿನ ಶೋಧವೂ ಆಯ್ತು. ಈ ಹೊಸ ಶೋಧಗಳು ಗೊತ್ತಾದಬಳಿಕ ಒಕ್ಕಲಿಗರು ಕಂದಮೂಲಗಳನ್ನು ಬೆಳೆಯಿಸಲಾರಂಭಿಸಿದರು.

ಮತ್ತು ಗೊಬ್ಬರವನ್ನು ಉಪಯೋಗಿಸಿ ಭೂಮಿಯ ಕಸುವನ್ನು ಹೆಚ್ಚಿಸಿದರು. ಇದರಿಂದ ಬೆಳೆಯ ಪ್ರಮಾಣವು ಹೆಚ್ಚಿತು. ಕಂದಮೂಲಗಳು ದನಗಳಿಗೋಸುಗ ಉಪಯೋಗಿಸಲ್ಪಡತೊಡಗಿದುವು. ಇದರಿಂದ ಚಳಿಗಾಲದಲ್ಲಿ ದನಗಳ ಹೊಟ್ಟೆಗೇನೆಂಬ ಒಕ್ಕಲಿಗರ ಚಿಂತೆ ಇಲ್ಲದಂತಾಯ್ತು. ಸಮರ್ಥವಾದ ದನಗಳನ್ನು ಹುಟ್ಟಿಸುವ ಕೆಲಸವು ಶಾಸ್ತ್ರೀಯ ಪದ್ಧತಿಯಿಂದ ಆಗತೊಡಗಿತು. ಈ ವಿಷಯದಲ್ಲಿ **ಬೆಕ್‌ವೆಲ್** ಎಂಬವನು ಶೋಧಗಳನ್ನು ಮಾಡಿದನು. ಎಷ್ಟೊ ಪಡನೆಲವೂ ಜವಳುಭೂಮಿಯೂ ಉಪಯೋಗದಲ್ಲಿ ಬರಲಾರಂಭಿಸಿತು. ಈ ಬಗೆಯಾದ ಸುಧಾರಣೆಗಳಿಂದ ಹೊಲದ ಉತ್ಪನ್ನವು ಹೆಚ್ಚಿತು. ಆದರೆ ಮೇಲೆ ಹೇಳಿದ ವೆಚ್ಚದ ಪ್ರಯೋಗಗಳನ್ನು ಮಾಡುವುದು ಸಾಮಾನ್ಯಜನರಿಗೆ ಶಕ್ಯವಿರಲಿಲ್ಲವಾದುದರಿಂದ ಎಷ್ಟೊ ಬಡವರಾದ ಒಕ್ಕಲಿಗರು ತಮ್ಮ ಭೂಮಿಗಳನ್ನು ಮಾರಬೇಕಾಯ್ತು. ಈ ಭೂಮಿಗಳೆಲ್ಲ ದೊಡ್ಡ ದೊಡ್ಡ ಜಮೀನುದಾರರ ವಶದಲ್ಲಿ ಹೋದುದರಿಂದ ಬಡ ಒಕ್ಕಲಿಗರು ಹೊಲಗಳಲ್ಲಿ ದುಡಿವ ಕೂಲಿಕಾರರಾದರು.

**(೨) ಯಾಂತ್ರಿಕ ಶೋಧಗಳು, ಕಾರಖಾನೆಗಳ ಮತ್ತು ಗಿರಣಿಗಳ ಸ್ಥಾಪನೆ**—೧೮ನೆಯ ಶತಕದ ಆರಂಭದಲ್ಲಿ ಇಂಗ್ಲಂಡಿನ ವ್ಯಾಪಾರವು ಹೆಚ್ಚಿತು ಮತ್ತು ಬೇರೆ ಬೇರೆ ವ್ಯವಸಾಯಗಳು ಪ್ರಾರಂಭವಾದುವು. ಆದರೆ ಅವೆಲ್ಲವು ಸಣ್ಣ ಪ್ರಮಾಣದಲ್ಲಿ ನಡೆವ ಕೈಗಾರಿಕೆಯ ವ್ಯವಸಾಯಗಳಾಗಿದ್ದುವು. ಆದರೆ ಈ ಶತಕದಲ್ಲಿ ಮುಂದೆ ಮಹತ್ವದ ಯಾಂತ್ರಿಕ ಶೋಧಗಳಾದುದರಿಂದ ಬಟ್ಟೆಯನ್ನು ನೇಯುವ ವ್ಯವಸಾಯದಲ್ಲಿ ಕ್ರಾಂತಿಯೊದಗಿತು. **ಜೇಮ್ಸ ಹಾರಗ್ರೀವ್ಜ** ಎಂಬವನು ನೂಲುತೆಗೆವ ಯಂತ್ರವನ್ನು ಶೋಧಿಸಿದನು (೧೭೬೪). ಈ ಯಂತ್ರಕ್ಕೆ '**ಸ್ಪಿನಿಂಗ ಜೆನಿ**' ಎಂದು ಹೆಸರು ಇದ್ದಿತು. ಈ ಯಂತ್ರದ ಸಾಹಾಯ್ಯದಿಂದ ಮೊದಲು ಬಳಕೆಯಲ್ಲಿದ್ದ ಯಂತ್ರದಿಂದ ಹೊರಡುತ್ತಿದ್ದ ನೂಲಿನ ಎಂಟರಷ್ಟು ನೂಲು ಹೊರಡಲಾರಂಭಿಸಿತು. ಆ ಬಳಿಕ **ಆರ್ಕರೈಟ್** ಎಂಬವನು ಬೇಕಾದಷ್ಟು ಜಿನುಗು ನೂಲನ್ನು ಹೊರಡಿಸುವ '**ವ್ಹಾಟರ್ ಫ್ರೇಮ್**' ಎಂಬ ಯಂತ್ರವನ್ನು ಶೋಧಿಸಿದನು (೧೭೬೯). ೧೭೭೮ರಲ್ಲಿ **ಕ್ರಾಂಪ್ಟನ್** ಎಂಬವನು '**ಮ್ಯೂಲ್**' ಎಂಬ ಯಂತ್ರವನ್ನು ಶೋಧಿಸಿದನು. ಈ ಯಂತ್ರದ ಸಾಹಾಯ್ಯದಿಂದ ಬೇಕಾದಷ್ಟು ಜಿನುಗು ನೂಲನ್ನು ಸ್ವಲ್ಪ ವೇಳೆಯಲ್ಲಿ ತೆಗೆಯಲು ಬಂದಿತು. **ವ್ಹಟ್** ಎಂಬವನು ಉಗಿಯ ಶಕ್ತಿಯಿಂದ ನಡೆವ ಯಂತ್ರವನ್ನು ಶೋಧಿಸಿದನು (೧೭೬೯). ಇದರಿಂದ ನೀರನ್ನು ಮೇಲಕ್ಕೆ ತೆಗೆವ

ಯಂತ್ರಗಳನ್ನು ನಡೆಯಿಸುವ ಮೊದಲಾದ ಕೆಲಸಗಳು ಆಗತೊಡಗಿದುವು. ೧೭೮೫ರಲ್ಲಿ **ಕಾರ್ಟರೈಟ** ಎಂಬವನು ಉಗೆಯ ಶಕ್ತಿಯಿಂದ ನಡೆವ ಮಗ್ಗವನ್ನು ಶೋಧಿಸಿದನು. ಈ ಮಗ್ಗದ ಶೋಧದಿಂದ ದೊಡ್ಡ ದೊಡ್ಡ ಗಿರಣಿಗಳನ್ನೂ ಕಾರಖಾನೆಗಳನ್ನೂ ಸ್ಥಾಪಿಸುವುದು ಅವಶ್ಯವಾಯ್ತು. ಈ ಗಿರಣಿಗಳಲ್ಲಿ ಯಂತ್ರ ಗಳ ಸಾಹಾಯ್ಯದಿಂದ ಸ್ವಲ್ಪ ವೇಳೆಯಲ್ಲಿ ಮತ್ತು ಸ್ವಲ್ಪ ವೆಚ್ಚದಲ್ಲಿ ಎಷ್ಟೊ ಮಾಲು ಹುಟ್ಟಲಾರಂಭಿಸಿತು. ಲಂಕೇಶಾಯರ ಪರಗಣೆಯಲ್ಲಿಯ ಹವೆ ನೂಲು ತೆಗೆಯಲು ಅನುಕೂಲವಾಗಿದ್ದುದರಿಂದ ಬಟ್ಟೆಯನ್ನು ನೇಯುವ ದೊಡ್ಡ ದೊಡ್ಡ ಗಿರಣಿಗಳು ಅಲ್ಲಿ ಸ್ಥಾಪಿಸಲ್ಪಟ್ಟುವು.

ಇದೇ ಸಮಯದಲ್ಲಿ ಕಬ್ಬಿಣದ ವ್ಯವಸಾಯದಲ್ಲಿಯೂ ಕ್ರಾಂತಿಯೊದಗಿತು. ಕಬ್ಬಿಣವನ್ನು ತಯಾರಿಸಲು ಮೊದಲು ಕಟ್ಟಿಗೆಯ ಇದ್ದಲಿ ಉಪಯೋಗಿಸಲ್ಪಡು ತ್ತಿತ್ತು. ಆದರೆ ಈಗ ಕಲ್ಲಿದ್ದಲಿಯ ಉಪಯೋಗವು ಆಗತೊಡಗಿತು. ಇಂಗ್ಲಂಡಿನ ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿ ಕಬ್ಬಿಣಕಲ್ಲಿದ್ದಲಿಗಳು ಬಹು ಪ್ರಮಾಣ ದಲ್ಲಿ ಇದ್ದುದರಿಂದ ಅವುಗಳ ಕಣಿಗಳು ಆ ಪ್ರದೇಶದಲ್ಲಿ ಬಹಳವಾಗಿ ಪ್ರಾರಂಭ ವಾದುವು. ಅದರಿಂದ ಕಬ್ಬಿಣವು ಅಗ್ಗವಾಗಿ ಯಾಂತ್ರಿಕ ಕಾರ್ಯಗಳಿಗೆ ಅದರ ಉಪಯೋಗವು ಹೆಚ್ಚಾಗಲಾರಂಭಿಸಿತು. ಬಕಿಂಗಹಮ್, ಶೆಫೀಲ್ಡ ಮೊದಲಾದ ಹಳ್ಳಿಗಳು ಕಬ್ಬಿಣದ ವ್ಯವಸಾಯದಿಂದ ದೊಡ್ಡ ಪಟ್ಟಣಗಳಾದುವು.

**ಡೇವ್ಹಿ** ಎಂಬವನು ಇದ್ದಲಿಯ ಕಣಿಗಳಲ್ಲಿ ಅಪಾಯವು ಒದಗದಂತೆ ಉಪ ಯೋಗಿಸಬಹುದಾದ **ಸೇಫ್ಟಿ ಲಂಪ** ಎಂಬ ದೀಪವನ್ನು ಶೋಧಿಸಿದನು (೧೮೧೫). **ಜೋಸೆ ವೆಜವುಡ್** ಎಂಬವನು ಚೀನಿಮಣ್ಣಿನ ಪಾತ್ರೆಗಳನ್ನು ತಯಾರಿಸುವ ಕೆಲಸದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು.

**(೨) ಸಂಚಾರ ಸಾಧನಗಳಲ್ಲಿ ಸುಧಾರಣೆ:—ಕಾಲುವೆ, ಬಂಡಿ ಮಾರ್ಗಗಳು, ಉಗೆಬಂಡಿ ಮಾರ್ಗಗಳು, ಉಗೆಹಡಗುಗಳು**—೧೮ನೆಯ ಶತಕದಲ್ಲಿ ಮಾರ್ಗಗಳು ಬಹಳ ಕಾಡಾಗಿದ್ದುವು. ಅದರಿಂದ ಸಂಚಾರಕ್ಕೆ ಬಹಳ ಎಡರು ಆಗುತ್ತಿದ್ದಿತು. **ಬ್ರಿಂಡಲೆ** ಎಂಬವನು ವೂಲ್ಸ್ಲೆಯಿಂದ ಮಂಚೆಸ್ಟರದ ವರೆಗೆ ಒಂದು ಕಾಲುವೆಯನ್ನು ತೋಡಿಸಿದನು. ಆ ಬಳಿಕ ಇಂತಹ ಬೇರೆ ಕಾಲುವೆಗಳು ಹುಟ್ಟಿದುವು (೧೭೬೧). **ಮಕಡಮ್** ಎಂಬ ಇಂಜಿನಿಯರನು ಹರಳುಗಳನ್ನು ಹಾಕಿ ಗಟ್ಟಿಯಾದ ಮಾರ್ಗಗಳನ್ನು ರಚಿಸುವ ಹೊಸ ರೀತಿಯನ್ನು ಶೋಧಿಸಿದನು. ಇದನ್ನು ಅನುಸರಿಸಿ ಹಲವು ಹೊಸ ಮಾರ್ಗಗಳು ಕಟ್ಟಲಾದುವು. ಗಟ್ಟಿ ಮಾರ್ಗ ಗಳಿಂದಲೂ ಕಾಲುವೆಗಳಿಂದಲೂ ಸಂಚಾರಕ್ಕೆ ಸಾಹಾಯ್ಯವಾಯಿತು. ಒಂದು

ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವ ಪ್ರವಾಸಿಗರ ಮತ್ತು ಸರಕು ಒಯ್ಯುವ ಕುದುರೆಬಂಡಿಗಳ ಸಂಖ್ಯೆ ಹೆಚ್ಚತೊಡಗಿತು. ಆದರೆ ಉಗೆಯ ಬಲದಿಂದ ನೆಲದ ಮೇಲೆ ಓಡುವ ಇಂಜಿನನ್ನು ಸ್ಟೀಫನ್ಸನನು ಶೋಧಿಸಿದುದರಿಂದ ೧೯ನೆಯ ಶತಮಾನದ ಆರಂಭಕ್ಕೆ ರೇಲ್ವೆ ಮಾರ್ಗಗಳನ್ನು ಕಟ್ಟಲು ಮೊದಲಾಯಿತು. ೧೮೩೦ರಲ್ಲಿ ಲಿವರಪೂಲದಿಂದ ಮಂಚೆಸ್ಟರದ ವರೆಗೆ ರೇಲ್ವೆ ಮಾರ್ಗವು ಪ್ರಾರಂಭವಾಯಿತು. ೧೮೧೨ರಲ್ಲಿ ಉಗೆಯಿಂದ ನಡೆವ ಹಡಗಿನ ಶೋಧನೆಯಾಗಿ ಅಂತಹ ಅನೇಕ ಹಡಗುಗಳು ನಿರ್ಮಿಸಲ್ಪಟ್ಟುವು.

**ವ್ಯಾಪಾರದ ಅಭಿವೃದ್ಧಿ**—ಔದ್ಯೋಗಿಕ ಕ್ರಾಂತಿಯಿಂದ ಇಂಗ್ಲಂಡಿನಲ್ಲಿ ಪಕ್ಕಾಮಾಲು ಹೇರಳವಾಗಿ ಹೊರಡಲಸುವಾಗಿತ್ತು. ಹದಿನೆಂಟನೆಯ ಶತಕದಲ್ಲಿ ಇಂಗ್ಲಂಡಿನ ವಸಾಹತುಗಳ ಮತ್ತು ಸಾಮ್ರಾಜ್ಯದ ಅಭಿವೃದ್ಧಿಯಾಗಿ ದೂರದ ಪ್ರದೇಶಗಳಲ್ಲಿಯೂ ಸರಕಿನ ಮಾರಾಟವಾಗತೊಡಗಿತು. ಮುಂದೆ ಉಗೆಬಂಡಿ ಮತ್ತು ಉಗೆಹಡಗುಗಳು ಪ್ರಾರಂಭವಾಗಿ ಅಲ್ಪಕಾಲದಲ್ಲಿ ಮತ್ತು ಕಡಿಮೆ ವೆಚ್ಚದಲ್ಲಿ ಒಂದೆಡೆಯಿಂದ ಇನ್ನೊಂದೆಡೆಗೆ ಸಂಚರಿಸಲು ಮತ್ತು ಸರಕುಗಳನ್ನು ಕಳುಹಲು ಸಾಧ್ಯವಾಯಿತು. ಇದರಿಂದ ವ್ಯಾಪಾರ ಮತ್ತು ಉದ್ಯೋಗಗಳಿಗೆ ಉತ್ತೇಜನವು ಉಂಟಾಯಿತು.

**ಔದ್ಯೋಗಿಕ ಕ್ರಾಂತಿಯ ಪರಿಣಾಮಗಳು**—೧೭೬೪ರಿಂದ ಮುಂದಿನ ೫೦ ವರ್ಷಗಳಲ್ಲಿ ಆದ ಬಹುಶಃ ಎಲ್ಲ ಯಾಂತ್ರಿಕ ಶೋಧಗಳು ಇಂಗ್ಲಂಡಿನಲ್ಲಿಯೆ ಆದುದರಿಂದ ಇಂಗ್ಲಂಡಿನ ಉದ್ಯೋಗ-ವ್ಯವಸಾಯಗಳೂ ವ್ಯಾಪಾರವೂ ಬೆಳೆದು ಅಲ್ಲಿಯ ಸಂಪತ್ತು ಹೆಚ್ಚಿತು. ಕಾರಖಾನೆಗಳೂ ಗಿರಣಿಗಳೂ ಹೆಚ್ಚಿದುವಾದುದರಿಂದ ಅವುಗಳಲ್ಲಿ ಕೆಲಸಮಾಡಲು ಹಳ್ಳಿಗಳಿಂದ ಜನರು ಬರತೊಡಗಿದರು. ಇದರಿಂದ ಹಳ್ಳಿಗಳಲ್ಲಿ ನಡೆಯುತ್ತಿದ್ದ ಸಣ್ಣ ಸಣ್ಣ ಮನೆಕೈಗಾರಿಕೆಗಳು ನಿಂತುಹೋದುವು. ಹಳ್ಳಿಯ ಜನಸಂಖ್ಯೆ ಕಡಿಮೆಯಾಗಿ ಅವು ಹಾಳಾದುವು. ಹೊಸ ಉದ್ಯೋಗಗಳು ನಡೆವ ಸ್ಥಳಗಳಲ್ಲಿ ದೊಡ್ಡ ದೊಡ್ಡ ಪಟ್ಟಣಗಳು ನಿರ್ಮಾಣವಾದುವು. ಆದರೆ ಇಲ್ಲಿಯ ಗಿರಣಿ ಮತ್ತು ಕಾರ್ಯಾಲಯಗಳಲ್ಲಿ ಕೆಲಸಮಾಡುವ ಕೂಲಿಕಾರರ ಸ್ಥಿತಿ ಬಹಳ ಕೀಳಾಯಿತು. ಹೆಂಗುಸರೂ ಎಳೆಮಕ್ಕಳೂ, ಕೂಡ ದುಡಿಯಬೇಕಾಯಿತು. ಅವರನ್ನು ಎಷ್ಟು ಗಂಟೆ ದುಡಿಸಿಕೊಳ್ಳಬೇಕು, ಅವರ ಆರೋಗ್ಯವನ್ನು ಹೇಗೆ ಕಾಪಾಡಬೇಕು ಮುಂತಾದ ವಿಷಯಗಳಲ್ಲಿ ಸರಕಾರದವರು ಯಂತ್ರಾಲಯಗಳ ಒಡೆಯರ ಮೇಲೆ ಯಾವ ನಿರ್ಬಂಧಗಳನ್ನೂ ಏರ್ಪಡಿಸಿರಲಿಲ್ಲ. ಇದಲ್ಲದೆ ಮನೆಕೈಗಾರಿಕೆಗಳು ನಷ್ಟವಾಗಿ ಯಂತ್ರಗಳ

ಮೂಲಕ ಸ್ವಲ್ಪ ಜನರ ಸಾಹಾಯ್ಯದಿಂದ ಬಹಳ ಕೆಲಸವು ನಡೆಯಲಾರಂಭಿಸಿದುದರಿಂದ ಅನೇಕರಿಗೆ ಕೆಲಸವು ಇಲ್ಲದಂತಾಯಿತು. ಇದರಿಂದ ನಿರುದ್ಯೋಗವು ಬೆಳೆಯಿತು. ಕೆಲಸಗೇಡಿಯಾದವರು ದೊಂಬೆಗಳನ್ನು ಎಬ್ಬಿಸಿ ಯಂತ್ರಗಳನ್ನು ಮುರಿಯಬೇಕೆಂದು ಯೋಚಿಸತೊಡಗಿದರು.

## ಸಾಮಾಜಿಕ ಸ್ಥಿತಿ

**ಜನಸಮಾಜ**—೧೮ನೆಯ ಶತಕದಲ್ಲಿ ಇಂಗ್ಲಂಡಿನ ಜನಸಂಖ್ಯೆ ಬಹಳ ಹೆಚ್ಚಿತು. ಜನತೆಯಲ್ಲಿ ಸಾಮಾನ್ಯವಾಗಿ ಈ ನಾಲ್ಕು ವರ್ಗಗಳು ಇದ್ದುವು: (೧) ಸರದಾರರು ಮತ್ತು ಮನ್ನೆಯರು, (೨) ಧರ್ಮಾಧಿಕಾರಿಗಳು, (೩) ವ್ಯಾಪಾರಸ್ಥರು, ಕಾರಖಾನೆಗಳ ಮತ್ತು ಗಿರಣಿಗಳ ಒಡೆಯರು ಮತ್ತು ಕಿರುಕುಳ ಬೇಸಾಯಗಾರರು, (೪) ಹೊಲಗಳ ಮತ್ತು ಕಾರಖಾನೆಯ ದುಡಿಮೆಗಾರರು. ರಾಜಕೀಯ ಅಧಿಕಾರವು ವಿಶೇಷವಾಗಿ ಸರದಾರರು, ಭೂಮಿಯೊಡೆಯರು, ದೊಡ್ಡ ವ್ಯಾಪಾರಸ್ಥರು, ಮತ್ತು ಯಂತ್ರಾಲಯಗಳ ಚಾಲಕರು ಇವರ ವಶದಲ್ಲಿ ಇದ್ದಿತು. ಸರದಾರರ ಮತ್ತು ಮನ್ನೆಯರ ವರ್ಗದವರು ಲಾರ್ಡ್ಸ ಸಭೆಯ ಸದಸ್ಯರಾಗಿರುತ್ತಿದ್ದರು. ಸರದಾರ ಮನೆತನದ ಹಿರಿಯ ಮಗನಿಗೆ ತಂದೆಯ ತರುವಾಯ ಲಾರ್ಡ್ಸ ಸಭೆಯ ಸದಸ್ಯನಾಗಲು ಬರುತ್ತಿತ್ತು. ಸರದಾರ ಮನೆತನದ ಇತರರಿಗೆ ಮತ್ತು ತಂದೆ ಜೀವಿಸಿದ್ದರೆ ಹಿರಿಯ ಮಗನಿಗೆ ಕಾಮನ್ಸ ಸಭೆಯ ಆಯ್ಕೆಯಲ್ಲಿ ಉಮೇದ್ವಾರನಾಗಿ ನಿಲ್ಲಲು ಬರುತ್ತಿತ್ತು. ೧೭ನೆಯ ಮತ್ತು ೧೮ನೆಯ ಶತಕಗಳಲ್ಲಿ ರಚಿಸಲ್ಪಟ್ಟ ಆಯ್ಕೆಯ ನಿಯಮಗಳಲ್ಲಿ ಮಾರ್ಪಾಟು ಆಗಿರಲಿಲ್ಲ. ಆದುದರಿಂದ ಕಾಮನ್ಸ ಸಭೆಯಲ್ಲಿ ಭೂಮಿಯೊಡೆಯರ ವರ್ಗದವರೆ ಪ್ರತಿನಿಧಿಗಳಾಗಿ ಆರಿಸಿ ಬರುತ್ತಿದ್ದರು. ಮಧ್ಯಮ ಮತ್ತು ಕೆಳಗಿನ ವರ್ಗದ ಜನರಿಗೆ ಚುನಾವಣೆಯಲ್ಲಿ ಮತಕೊಡುವ ಅಧಿಕಾರವೂ ಇರಲಿಲ್ಲ. ೧೮ನೆಯ ಶತಕದ ಉತ್ತರಾರ್ಧದಲ್ಲಿ ಇಂಗ್ಲಂಡಿನಲ್ಲಿ ಔದ್ಯೋಗಿಕ ಕ್ರಾಂತಿಯಾಯಿತು. ಅದರಿಂದ ವ್ಯಾಪಾರದ ಮತ್ತು ಉದ್ಯೋಗ-ವ್ಯವಸಾಯಗಳ ವೃದ್ಧಿಯಾಗಿ ಇಂಗ್ಲಂಡಿನ ಸಂಪತ್ತು ಹೆಚ್ಚಿತು. ಅದರ ಜೊತೆಗೆ ಬಡವರು ಮತ್ತು ಸಿರಿವಂತರು ಈ ವರ್ಗಗಳಲ್ಲಿಯ ವಿಷಮತೆ ಹೆಚ್ಚು ತೀಕ್ಷ್ಣವಾಯಿತು.

**ನಗರಗಳ ಬೆಳೆವಣಿಗೆ**—ಔದ್ಯೋಗಿಕ ಕ್ರಾಂತಿಯಿಂದ ಇಂಗ್ಲಂಡಿನ ಉತ್ತರ ಮತ್ತು ಮಧ್ಯ ಪ್ರದೇಶಗಳಲ್ಲಿ ಗಿರಣಿಗಳು ಮತ್ತು ಯಂತ್ರಾಲಯಗಳು ನಿರ್ಮಾಣ

ವಾದುವು. ಅದರಿಂದ ಈ ಭಾಗಗಳಲ್ಲಿ ಅನೇಕ ಹೊಸ ಪಟ್ಟಣಗಳು ಸ್ಥಾಪಿತ ವಾದುವು. ಹಳ್ಳಿಗಳ ಜನಸಂಖ್ಯೆ ಕುಗ್ಗಿ ಪಟ್ಟಣಗಳ ಜನಸಂಖ್ಯೆ ಬೆಳೆಯಿತು.

**ಕಳುವು ತುಡುಗುಗಳು**— ಪಟ್ಟಣಗಳಲ್ಲಿಯ ಬೀದಿಗಳು ಕಿರಿದಾಗಿದ್ದು ರಾತ್ರಿಯಲ್ಲಿ ಅವುಗಳಿಗೆ ದೀಪಗಳಿರುತ್ತಿರಲಿಲ್ಲ. ದೊಡ್ಡ ಪಟ್ಟಣಗಳ ಬೀದಿಗಳಲ್ಲಿ ಕಳ್ಳರು, ತುಡುಗರು ಮತ್ತು ಪುಂಡರು ಇವರ ಹಾವಳಿ ನಡೆಯುತ್ತಿತ್ತು. ಜನರನ್ನು ಬೆದರಿಸಿ ಹಣಸುಲಿವುದು, ಕುಚೇಷ್ಟೆ ಮಾಡುವುದು ಮುಂತಾದ ಪುಂಡಾಟಿಕೆಯಲ್ಲಿ ಈ ಜನರು ನುರಿತವರಾಗಿದ್ದರು. ಈ ಪರಿಸ್ಥಿತಿ ಇದ್ದುದರಿಂದ ಶ್ರೀಮಂತ ಜನರು ಪ್ರವಾಸಮಾಡುವಾಗ ತಮ್ಮೊಡನೆ ಸಶಸ್ತ್ರ ಸೇವಕರನ್ನು ಒಯ್ಯುತ್ತಿದ್ದರು.

ಶಾಂತಿ ರಕ್ಷಣೆಗೆ ಈಗಿನಂತೆ ಪೋಲಿಸ ಪದ್ಧತಿಯಿರಲಿಲ್ಲ. ಮುದುಕರೂ ಬಲಹೀನರೂ ಆದ ಕಾವಲುಗಾರರೇ ಶಾಂತಿರಕ್ಷಣೆಯನ್ನು ಮಾಡಿ ಕಳ್ಳರನ್ನು ಶೋಧಿಸಬೇಕಾಗುತ್ತಿತ್ತು. ಆದರೆ ಈ ಕಾರ್ಯವು ಅವರಿಂದ ನೀಗುತ್ತಿರಲಿಲ್ಲ. ಕೆಲವು ಕಡೆಯಲ್ಲಿ ಈ ಕಾವಲುಗಾರರೇ ಕಳ್ಳರ ಕೂಟಕ್ಕೆ ಸೇರಿದವರಾಗಿರುತ್ತಿದ್ದರು.

ಆ ಕಾಲದಲ್ಲಿ ದಂಡನೆಗಳಾದರೂ ಕ್ರೂರವಾಗಿರುತ್ತಿದ್ದುವು. ಅವು ಅಪರಾಧ ಗಳಿಗೆ ಅನುಗುಣವಾಗಿರುತ್ತಿರಲಿಲ್ಲ. ಸುಮಾರು ೧೨೦ ಬಗೆಯ ಅಪರಾಧಗಳಿಗೆ ಮರಣಶಿಕ್ಷೆಯಾಗುತ್ತಿತ್ತು! ಕಳ್ಳರನ್ನೂ ತಿರುಕರನ್ನೂ ಕಟ್ಟುಪಡಿಯಲ್ಲಿ ಇರಿಸುತ್ತಿದ್ದರು. ಶೂಲಕ್ಕೇರಿಸುವುದು ಬಯಲಲ್ಲಿ ನಡೆಯುತ್ತಿದ್ದಿತು. ಅದನ್ನು ನೋಡಲು ಜನರು ಕಿಕ್ಕಿರಿದು ನೆರೆಯುತ್ತಿದ್ದರು.

**ಸೆರೆಮನೆಗಳು**—೧೮ನೆಯ ಶತಕದ ಸೆರೆಮನೆಗಳು ಬಹಳ ಕೆಟ್ಟುವಾಗಿದ್ದುವು. ಕಳ್ಳರು ತುಡುಗರು ಮುಂತಾದ ಅಪರಾಧಿಗಳಂತೆ ಸಾಲಗಾರರನ್ನು ಸೆರೆಮನೆಯಲ್ಲಿ ಇರಿಸುತ್ತಿದ್ದರು. ಸೆರೆಮನೆಗಳು ಇರುಕಿನವೂ ಅಸ್ವಚ್ಛವೂ ರೋಗಕರವೂ ಆಗಿದ್ದುವು. ಅದರಿಂದ ಅಲ್ಲಿ ಮೇಲಿಂದ ಮೇಲೆ ಪಿಡುಗುಗಳು ಹಬ್ಬಿ ಅನೇಕ ಸೆರೆಯಾಳುಗಳು ಮೃತ್ಯುವಿಗೆ ಬಲಿಯಾಗುತ್ತಿದ್ದರು. ಕಾವಲುಗಾರರು ಕ್ರೂರರೂ ದುಷ್ಟರೂ ಆಗಿರುತ್ತಿದ್ದರು. ಅವರು ಕೆಲವೊಂದು ಸಲ ಸೆರೆಯಾಳುಗಳಿಗೆ ಆಹಾರವನ್ನು ನೀಡುತ್ತಿರಲಿಲ್ಲ. ಸೆರೆಮನೆಗಳು ಸೆರೆಯಾಳುಗಳನ್ನು ಸುಧಾರಿಸಲಿಕ್ಕೆ ಅಲ್ಲ, ಅವರ ಮೇಲೆ ಹಗೆಯನ್ನು ತೀರಿಸಲಿಕ್ಕೆ ಎಂದು ಎಲ್ಲರ ತಿಳಿವಳಿಕೆ ಇದ್ದಿತು.

**ವಿನೋದ ವ್ಯಸನಗಳು ಇತ್ಯಾದಿ**—ಸ್ಟುವರ್ಟರ ಆಳ್ಕೆಯಲ್ಲಿ ಕ್ಹಾಫಿ ಅಂಗಡಿಗಳು ಬೆಳೆದು ಮದ್ಯಪಾನಕ್ಕೆ ಆತಂಕವು ಉಂಟಾಗಿದ್ದಿತು. ಚಹ, ಕಾಫಿ

ಮುಂತಾದ ಪೇಯಗಳು ನಿತ್ಯದ ಆಹಾರವಾಗಿರದೆ ವಿಲಾಸದ ವಸ್ತುಗಳಾಗಿ ಎಣಿಸಲ್ಪಡುತ್ತಿದ್ದುವು. ಜನರಲ್ಲಿ ನಾಟಕ ನೋಡುವ ಬುದ್ಧಿ ಬೆಳೆದಿತ್ತು. ಶೇಕ್ಸಪಿಅರನ ನಾಟಕಗಳ ಪ್ರಯೋಗಗಳು ಬಹು ಲೋಕಪ್ರಿಯವಾಗಿದ್ದುವು. ಎತ್ತುನಾಯಿಗಳನ್ನು ಕಾದಾಡಿಸುವ (Bull baiting) ಮುಂತಾದ ವಿನೋದ ಗಳಲ್ಲಿ ಜನರ ಅಭಿರುಚಿ ಕುಗ್ಗಿತ್ತು.

ಜೂಜಾಟದ ಚಟವು ಬೆಳೆದಿತ್ತು. ಇದರಿಂದ ಸಾವಿರಾರು ಜನರು ಮಣ್ಣು ಗೂಡುತ್ತಿದ್ದರು.

ಉಚ್ಚ ವರ್ಗದವರಲ್ಲಿ ಬಹಳ ಜಗಳವು ಹುಟ್ಟಿದರೆ ದ್ವಂದ್ವಯುದ್ಧದಿಂದ ನಿರ್ಣಯವನ್ನು ಮಾಡಿಕೊಳ್ಳುತ್ತಿದ್ದರು. ಈ ಮಾರ್ಗವು ಹೆಚ್ಚು ಗೌರವಯುಕ್ತ ವಾಗಿ ಎಣಿಸಲಾಗುತ್ತಿತ್ತು.

ಶ್ರೀಮಂತರ ಮನೆತನದ ಹೆಂಗುಸರು ಮೇಣೆಗಳಲ್ಲಿ ತಿರುಗಾಡುತ್ತಿದ್ದರು.

ಮೊದಲಿನ ಬಣ್ಣ ಬಣ್ಣದ ಉಡುಪಿಗೆ ಪ್ರತಿಯಾಗಿ ಸಾಮಾನ್ಯ ಉಡುಪನ್ನು ಉಪಯೋಗಿಸಲು ಆರಂಭವಾಗಿತ್ತು. ಈ ಶತಕದ ಆರಂಭದಲ್ಲಿ ಆತ್ಮರಕ್ಷಣೆಗಾಗಿ ಜನರು ನಡುವಿಗೆ ಕತ್ತಿಯನ್ನು ಕಟ್ಟುತ್ತಿದ್ದರು, ಆದರೆ ಈ ಶತಕದ ಕೊನೆಯಲ್ಲಿ ಕತ್ತಿಗಳಿಗೆ ಪ್ರತಿಯಾಗಿ ಬಡಿಗೆಗಳನ್ನು ಧರಿಸುವ ಪದ್ಧತಿ ಬಳಕೆಗೆ ಬರಲಾರಂಭಿಸಿತು.

**ಧಾರ್ಮಿಕ ಭಾವನೆ**— ಈ ಶತಕದಲ್ಲಿ ಜನಸಾಮಾನ್ಯರಲ್ಲಿ ಮತ್ತು ಧರ್ಮಾ ಧಿಕಾರಿಗಳಲ್ಲಿ ಧರ್ಮಭಾವನೆ ಕಡಿಮೆಯಾಗತೊಡಗಿತ್ತು. ಬಡವರ ಮತ್ತು ಅನಾ ಥರ ಕಡೆಗೆ ಜನರು ಸಹಾನುಭೂತಿಯಿಂದ ನೋಡದೆ ತುಚ್ಛತೆಯಿಂದ ನೋಡು ತ್ತಿದ್ದರು. ಅದಕ್ಕಾಗಿ ಜನತೆಯಲ್ಲಿ ಧರ್ಮಭಾವನೆಯನ್ನು ಜಾಗೃತಗೊಳಿಸಿ, ಸ್ವಾರ್ಥತ್ಯಾಗ, ಭೂತದಯೆ ಈ ಗುಣಗಳನ್ನು ಪ್ರೋತ್ಸಾಹಿಸುವ ಉದ್ದೇಶದಿಂದ **ಜಾನ ವೆಸ್ಲೇ** ಎಂಬ ಪುಣ್ಯಾತ್ಮನು ಬಹುವಾಗಿ ಪ್ರಯತ್ನಿಸಿದನು. ಈತನು ಅನೇಕ ಕಡೆಯಲ್ಲಿ ಉಪನ್ಯಾಸಗಳನ್ನೂ ಪ್ರವಚನಗಳನ್ನೂ ಹೇಳಿ ಜನರಲ್ಲಿ ಜಾಗೃತಿ ಯನ್ನು ಮಾಡಿದನು. ಈತನ ಮಾರ್ಗವನ್ನು ಅನುಸರಿಸುವವರಿಗೆ 'ಮೆಥಾಡಿಸ್ಟ' ಎನ್ನುವರು.

**ವಾಙ್ಮಯ**— ಈ ಕಾಲದಲ್ಲಿ ಉತ್ತಮರಾದ ಕವಿಗಳೂ ಲೇಖಕರೂ ಹುಟ್ಟಿ ಉತ್ತಮೋತ್ತಮವಾದ ಕೃತಿಗಳಿಂದ ಇಂಗ್ಲಿಶ್ ವಾಙ್ಮಯವನ್ನು ವೃದ್ಧಿಗೊಳಿಸಿ ದರು. ಡಾ. ಜಾನಸನನು ಇಂಗ್ಲಿಶ್ ಭಾಷೆಯ ಕೋಶವನ್ನು ರಚಿಸಿದನು. ಗಿಬ ನನು (೧೭೩೭—೯೭) 'ರೋಮನ್ ಸಾಮ್ರಾಜ್ಯದ ಇಳಿಗಾಲ' ಎಂಬ ಉತ್ಕೃಷ್ಟ ವಾದ ಚರಿತ್ರಗ್ರಂಥವನ್ನು ಬರೆದನು. ನಾಮಾಂಕಿತ ಕಾದಂಬರಿಕರ್ತನೂ ಕವಿಯೂ

ಆದ ಸರ ವಾಲ್ಟರ ಸ್ಕಾಟ (೧೭೭೧—೧೮೩೨), ಬೈರನ್ (೧೭೮೮—೧೮೨೪), ಗೋಲ್ಡ್‌ಸ್ಮಿಥ್ (೧೭೨೮—೧೭೭೪), ಪೋಪ ಮುಂತಾದ ಕವಿಗಳು, ಗಲಿವರನ ವೃತ್ತಾಂತ ಎಂಬ ಗ್ರಂಥದ ಲೇಖಕನಾದ ಸ್ವಿಫ್ಟ ಪ್ರಭೃತಿಗಳು ಇದೇ ಕಾಲದಲ್ಲಿ ಬಾಳಿದ್ದರು.

## ೧೮-ನೆಯ ಶತಮಾನದಲ್ಲಿಯ ಬ್ರಿಟಿಶ ಸಾಮ್ರಾಜ್ಯವು.

**ಸಾಮ್ರಾಜ್ಯದ ಅಭಿವೃದ್ಧಿ**—ಬ್ರಿಟಿಶ ಸಾಮ್ರಾಜ್ಯದ ಅಭಿವೃದ್ಧಿಯ ದೃಷ್ಟಿಯಿಂದ ೧೮ನೆಯ ಶತಕವು ಮಹತ್ವವುಳ್ಳದಾಗಿದೆ. ಈ ಶತಕದ ಆದಿಯಲ್ಲಿ ಸ್ಟುವರ್ಟ ಕಾಲದಲ್ಲಿ ಸ್ಥಾಪಿತವಾದ ೧೨ ಇಂಗ್ಲಿಶ ಉಪನಿವೇಶಗಳು (ವಸಾಹತುಗಳು) ಅಮೇರಿಕದ ಪೂರ್ವದಂಡೆಯ ಮೇಲೆ ನೆಲಸಿದ್ದುವು. ೧೭೩೨ರಲ್ಲಿ ಸ್ಥಾಪನೆಯಾದ ಜಾರ್ಜಿಯಾ ಉಪನಿವೇಶವು ಇನ್ನೊಂದಾಗಿ ಅವುಗಳಿಗೆ ಸೇರಿತು. ಅಲ್ಲಿಯ ಹಡ್ಸನ್ ಉಪಸಾಗರದ ನೆರೆಯ ಪ್ರದೇಶವು ಇಂಗ್ಲಿಶರ ವಶದಲ್ಲಿ ಇದ್ದಿತು. ಸಕ್ಕರೆ ಮತ್ತು ಹೊಗೆಸೊಪ್ಪು ಇವುಗಳ ಹುಟ್ಟುಗಳಿಗೆ ಹೆಸರಾದ ಕೆಲವು ವೆಸ್ಟ ಇಂಡೀಜ ನಡುಗಡ್ಡೆಗಳು ಇಂಗ್ಲಂಡಿನ ಅಧೀನವಾಗಿದ್ದುವು. ವ್ಯಾಪಾರದ ವಿಚಾರದಲ್ಲಿ ಇಂಗ್ಲಿಶ್ ಈಸ್ಟ ಇಂಡಿಯ ಕಂಪನಿ ಪೋರ್ತುಗೀಜರನ್ನು ಮತ್ತು ಡಚ್ ಜನರನ್ನು ಹಿಂದೂಡಿ ಹಿಂದುಸ್ಥಾನದ ಸುರತ, ಮುಂಬಯಿ, ಮದ್ರಾಸ, ಕಲಕತ್ತೆ ಈ ಸ್ಥಳಗಳಲ್ಲಿ ವ್ಯಾಪಾರದ ಕಾರ್ಯಾಲಯಗಳನ್ನು ಸ್ಥಾಪಿಸಿದ್ದಿತು. ಆಫ್ರಿಕದ ಪಶ್ಚಿಮ ಕರಾವಳಿಯ ಗಂಬಿಯಾ ಮತ್ತು ಗೋಲ್ಡ ಕೋಸ್ಟ ಎಂಬ ಪ್ರದೇಶಗಳು ಮತ್ತು ಸೇಂಟ ಹೆಲೆನಾ ದ್ವೀಪವು ಇಂಗ್ಲಿಶರ ಅಧಿಕಾರಕ್ಕೆ ಒಳಪಟ್ಟಿದ್ದುವು. ೧೭೧೩ರಲ್ಲಿ ನಡೆದ ಯುಟ್ರೆಕ್ಟದ ಒಡಂಬಡಿಕೆಯಿಂದ ಯುರೋಪದಲ್ಲಿ ಜಿಬ್ರಾಲ್ಟರ ಮತ್ತು ಮಿನಾರ್ಕಾ ಈ ಆಯಕಟ್ಟಿನ ಸ್ಥಳಗಳು ಇಂಗ್ಲಿಶರ ಸ್ವಾಧೀನವಾಗಿ ಉಳಿದುವು. ಉತ್ತರ ಅಮೇರಿಕದಲ್ಲಿ ಫ್ರೆಂಚರ ಒಡೆತನಕ್ಕೆ ಒಳಪಟ್ಟ ನ್ಯೂ ಫೌಂಡಲಂಡ್ ಮತ್ತು ನೊವಾಸ್ಕೊಶಿಯಾ ಈ ಪ್ರಾಂತ್ಯಗಳು ಇಂಗ್ಲಂಡಿಗೆ ದೊರೆತು ದಕ್ಷಿಣ ಅಮೇರಿಕದ ಸ್ಪೇನದ ಉಪನಿವೇಶಗಳೊಡನೆ ಇಂಗ್ಲಂಡಿನ ವ್ಯಾಪಾರವು ಪ್ರಾರಂಭವಾಯಿತು.

ವ್ಯಾಪಾರ, ಉಪನಿವೇಶ ಮತ್ತು ಅಧೀನಪ್ರದೇಶ ಈ ವಿಷಯದಲ್ಲಿ ಇಂಗ್ಲಂಡು ಮುಂದುವರಿದುದರಿಂದ ೧೮ನೆಯ ಶತಕದಲ್ಲಿ ಫ್ರಾನ್ಸ್ ಮತ್ತು ಇಂಗ್ಲಂಡ್ ಇವುಗಳ ನಡುವೆ ಸ್ಪರ್ಧೆ ಆರಂಭವಾಗಿ ಯುದ್ಧಗಳಲ್ಲಿ ಕೊನೆಗಂಡಿತು. ಅದರಲ್ಲಿ ಫ್ರಾನ್ಸು ಪರಾಭವಹೊಂದಿ ಇಂಗ್ಲಂಡಿನ ಸಮುದ್ರದ ಮೇಲಿನ ವರ್ಚಸ್ಸು

ಸ್ಥಿರವಾಗಿ ಉಳಿಯಿತು. ಅಮೇರಿಕೆ, ಹಿಂದುಸ್ಥಾನ ಮತ್ತು ಆಫ್ರಿಕೆ ಈ ಭಾಗ ಗಳಲ್ಲಿ ಇಂಗ್ಲಂಡಿನ ಅಧಿಕಾರದ ಪ್ರದೇಶವು ಅಧಿಕವಾಯಿತು. ಮುಂದೆ ಅಮೇರಿಕೆ ಯಲ್ಲಿಯ ಇಂಗ್ಲಂಡಿನ ಉಪನಿವೇಶಗಳು ಸ್ವತಂತ್ರವಾದುವು (೧೭೮೩). ಆದರೆ ಉತ್ತರ ಅಮೇರಿಕೆಯಲ್ಲಿ ಇಂಗ್ಲಂಡು ಫ್ರಾನ್ಸಿನ ಕಡೆಯಿಂದ ತೆಗೆದುಕೊಂಡ ಕನಡಾ ಉಪನಿವೇಶವು ಇಂಗ್ಲಿಶರ ವಶದಲ್ಲಿ ಉಳಿಯಿತು. ಇದಲ್ಲದೆ ಆಸ್ಟ್ರೇ ಲಿಯಾ ಮತ್ತು ನ್ಯೂಝೀಲಂಡ ಈ ಪ್ರದೇಶಗಳು ಹೊಸದಾಗಿ ಶೋಧಿತವಾಗಿ (೧೭೭೦) ಅಲ್ಲಿ ಬ್ರಿಟಿಶ ಉಪನಿವೇಶಗಳ ಅಡಿಗಲ್ಲು ಇದೇ ಶತಕದಲ್ಲಿ ಊರ ಲಾಯಿತ್ತು (೧೭೮೮). ೧೮೦೬ರಲ್ಲಿ ಆಫ್ರಿಕದ ದಕ್ಷಿಣ ಕರಾವಳಿಯ ಮೇಲಿನ 'ಕೇಪ ಕಾಲನಿ' ಎಂಬ ಡಚ್ಚರ ಉಪನಿವೇಶವು ಇಂಗ್ಲಿಶರ ಕೈಗೆ ಬಂದಿತು. ಅಲ್ಲಿ ೧೯ನೆಯ ಶತಕದಲ್ಲಿ ಇನ್ನೂ ಕೆಲವು ಉಪನಿವೇಶಗಳು ಸ್ಥಾಪಿತವಾದುವು. ಮುಂದೆ ಇವೆಲ್ಲವು ಒಂದುಗೂಡಿ 'ಯೂನಿಯನ ಆಫ್ ಸಾವುಥ ಆಫ್ರಿಕಾ' ಎಂಬ ದೊಡ್ಡ ಉಪನಿವೇಶವು ರೂಪುಗೊಂಡಿತು (೧೯೧೦).

**ಹಿಂದುಸ್ಥಾನದಲ್ಲಿ ಬ್ರಿಟಿಶ ಪ್ರಭುತ್ವದ ಅಭಿವೃದ್ಧಿ** – ೧೮ನೆಯ ಶತಕದ ಆರಂಭದಲ್ಲಿ ಸುರತ, ಮುಂಬಯಿ, ಮದ್ರಾಸ ಮತ್ತು ಕಲ್ಕತ್ತೆ ಈ ಸ್ಥಳಗಳಲ್ಲಿ ಇಂಗ್ಲಿಶ್ ಈಸ್ಟ ಇಂಡಿಯಾ ಕಂಪನಿಯ ವ್ಯಾಪಾರಾಲಯಗಳು ಇದ್ದುವು. ಪಾಂಡೆ ಚರಿಯಲ್ಲಿ ಫ್ರೆಂಚ ಈಸ್ಟ ಇಂಡಿಯಾ ಕಂಪನಿಯ ಮುಖ್ಯ ಕಾರ್ಯಾಲಯ ವಿದ್ದಿತು. ಮುಂದೆ ಇಂಗ್ಲಿಶ್ ಮತ್ತು ಫ್ರೆಂಚ ಈಸ್ಟ ಇಂಡಿಯಾ ಕಂಪನಿಗಳಲ್ಲಿ ಹಿಂದುಸ್ಥಾನದ ವ್ಯಾಪಾರ ಮತ್ತು ಭೂಮಿಯನ್ನು ಕುರಿತು ಸ್ಪರ್ಧೆ ಪ್ರಾರಂಭವಾ ಯಿತು. ಫ್ರೆಂಚ ಗವರ್ನರನಾದ ಡುಪ್ಲಿ ಬಹು ಮಹತ್ವಾಕಾಂಕ್ಷಿಯಾಗಿದ್ದನು. ಹಿಂದಿ ಜನರನ್ನು ತನ್ನ ಸೇವೆಯಲ್ಲಿ ಇಟ್ಟುಕೊಂಡು ಅವರಿಗೆ ಸೈನಿಕ ಶಿಕ್ಷಣವನ್ನು ಕೊಟ್ಟರೆ ಅವರಿಂದ ಉತ್ತಮವಾದ ಸೇನೆಯೊಂದು ಸಿದ್ಧವಾಗಬಹುದು, ಮತ್ತು ಇದರ ಬಲದಿಂದ ಹಿಂದುಸ್ಥಾನದಲ್ಲಿ ಫ್ರೆಂಚರ ರಾಜ್ಯವನ್ನು ಸ್ಥಾಪಿಸಬಹುದು ಎಂಬುದು ಆತನ ಮಹತ್ವಾಕಾಂಕ್ಷೆ ಆಗಿದ್ದಿತು. ೧೭೦೭ರಲ್ಲಿ ಮೊಗಲ ಸಮ್ರಾಟ ನಾದ ಔರಂಗಜೇಬನು ಮರಣಹೊಂದಿದ ಬಳಿಕ ಮೊಗಲ ಸಾಮ್ರಾಜ್ಯದ ಅಳಿ ಗಾಲವು ಪ್ರಾರಂಭಿಸಿತು. ಅಲ್ಲಲ್ಲಿಯ ನವಾಬರೂ, ಮಂಡಲೇಶ್ವರರೂ ಸ್ವತಂತ್ರ ರಾಗತೊಡಗಿದರು ಮತ್ತು ಅವರಲ್ಲಿ ಅಂತಃಕಲಹಗಳು ಹುಟ್ಟಿದುವು. ಇದುವೆ ಸುಸಂಧಿಯೆಂದು ಎಣಿಸಿ ಡುಪ್ಲಿ ಕರ್ನಾಟಕದಲ್ಲಿ ಫ್ರೆಂಚರ ಪ್ರಭಾವವನ್ನು ಸ್ಥಾಪಿ ಸಲು ಪ್ರಾರಂಭಿಸಿದನು. ಆದರೆ ಇಂಗ್ಲಿಶ್ ಈಸ್ಟ ಇಂಡಿಯಾ ಕಂಪನಿಯ ಸೇವೆಯ ಲ್ಲಿದ್ದ ರಾಬರ್ಟ ಕ್ಲಾಯಿವ್ಹ ಎಂಬ ಶೂರ ಪುರುಷನು ಡುಪ್ಲಿಯ ಎಲ್ಲ ಪ್ರಯತ್ನ

ಗಳನ್ನು ವಿಫಲಗೊಳಿಸಿದನು. ಇದಕ್ಕಾಗಿ ಫ್ರೆಂಚ ಸರಕಾರದವರು ಡುಪ್ಲಿಯನ್ನು ಸ್ವದೇಶಕ್ಕೆ ಕರೆಸಿಕೊಂಡರು (೧೭೫೪). ಯುರೋಪದಲ್ಲಿ ಸಪ್ತವಾರ್ಷಿಕ ಯುದ್ಧವು



ರಾಬರ್ಟ ಕ್ಲಾಯಿವ್ಹ

ಪ್ರಾರಂಭವಾಗಲು ದಕ್ಷಿಣ ಭಾರತದಲ್ಲಿ ವಾಂದಿವಾಶದ ಕಾಳೆಗದಲ್ಲಿ (೧೭೬೦) ಇಂಗ್ಲಿಶರು ಫ್ರೆಂಚರನ್ನು ಸೋಲಿಸಿ ಅವರ ವರ್ಚಸ್ಸನ್ನು ಅಡಗಿಸಿದರು; ಕರ್ನಾ

ಟಕ ಮತ್ತು ಹೈದ್ರಾಬಾದಗಳಲ್ಲಿ ತಮ್ಮ ವರ್ಚಸ್ಸನ್ನು ನೆಲೆಗೊಳಿಸಿ ನಾರ್ದರ್ನ ಸರಕಾರ ಎಂಬ ಪ್ರಾಂತವನ್ನು ಸ್ವಾಧೀನಪಡಿಸಿಕೊಂಡರು.

ಇದೇ ಕ್ರಮವಾಗಿ ಬಂಗಾಲದಲ್ಲಿ ಪ್ಲಾಸಿಯ ಕಾಳೆಗದಲ್ಲಿ (೧೭೫೭) ನವಾಬ ಸಿರಾಜ ಉದ್ದವಲನನ್ನು ಸೋಲಿಸಿ ತಮ್ಮ ಅಂಕೆಯಲ್ಲಿದ್ದ ಮೀರಜಾಫರ



ಎಂಬವನನ್ನು ಬಂಗಾಲದ ನವಾಬನಾಗಿ ಮಾಡಿದರು. ಬಳಿಕ ೧೭೬೫ರಲ್ಲಿ ಮೊಗಲ ಬಾದಶಹನಿಂದ ಬಂಗಾಲ, ಬಿಹಾರ ಮತ್ತು ಓರಿಸಾ ಈ ಪ್ರಾಂತಗಳ ದಿವಾಣಿ (ತೆರಿಗೆಯನ್ನು ಎತ್ತುವ) ಅಧಿಕಾರವು ಇಂಗ್ಲಿಶರಿಗೆ ದೊರೆತಿತು.

೧೭೭೩ರಲ್ಲಿ ಪಾರ್ಲಿಮೆಂಟು ರೆಗ್ಯುಲೇಟಿಂಗ ಅಕ್ಟ ಎಂಬ ಕಟ್ಟಳೆಯನ್ನು ಮಾಡಿ ಬಂಗಾಲದ ಗವರ್ನರನಿಗೆ ಹಿಂದುಸ್ಥಾನದ ಬ್ರಿಟಿಶ ಪ್ರದೇಶಗಳ ಆಧಿಪತ್ಯವನ್ನು ಸಲ್ಲಿಸಿತು. ಅಂದಿನಿಂದ ಆತನನ್ನು ಗವರ್ನರ ಜನರಲ್ ಎಂದು ಕರೆಯಲು ಆರಂಭವಾಯ್ತು. ವಾರನ್ ಹೇಸ್ಟಿಂಗ್ಜನು (೧೭೭೪–೧೭೮೫) ಮೊದಲನೆಯ ಗವರ್ನರ ಜನರಲನಾಗಿ ನೇಮಿಸಲ್ಪಟ್ಟನು. ಆ ಮೇಲೆ ಮರಾಟರೊಡನೆ ಮೂರು ಕಾಳಗಗಳು ಮತ್ತು ಹೈದರ-ಟೀಪುಗಳೊಡನೆ ಅನೇಕ ಕಾಳಗಗಳು ನಡೆದು ದಕ್ಷಿಣ ಭಾರತದ ಬಹುಭಾಗವು ಇಂಗ್ಲಿಶರ ಆಧಿಪತ್ಯಕ್ಕೆ ಒಳಪಟ್ಟಿತು (೧೮೧೮). ಈ ರೀತಿಯಾಗಿ ಹಿಂದುಸ್ಥಾನದಲ್ಲಿ ಇಂಗ್ಲಿಶರ ಪ್ರಭುತ್ವವು ವಿಸ್ತರಿಸತೊಡಗಿತು.

---

## ಸಾರಾಂಶವು

**ಔದ್ಯೋಗಿಕ ಕ್ರಾಂತಿ—**

(೧) ಒಕ್ಕಲತನದಲ್ಲಿ ಸುಧಾರಣೆ – ಟಾವುನ್ಸೆಂಡನ ಶೋಧ. ನೆಲದ ಕಸುವನ್ನು ಕಾಯಲು ಬೆಳೆಗಳ ಮಾರ್ಪಾಟು; ಗಡ್ಡೆಗೆಣಸು ಬೆಳೆವುದು. ಬೆಕ್‍ವೆಲನ ಶೋಧದಿಂದ ಉತ್ತಮವಾದ ದನಗಳನ್ನು ಹುಟ್ಟಿಸುವುದು. ಹೊಸ ಭೂಮಿಗಳು ಸಾಗುವಳಿಯಾದುದರಿಂದ ಧಾನ್ಯ ಮುಂತಾದುದರ ಅಭಿವೃದ್ಧಿ.

(೨) ಯಾಂತ್ರಿಕ ಶೋಧಗಳು— ಹಾರಗ್ರೀವ್ಜನ ನೂಲು ತೆಗೆವ ಸ್ಪಿನಿಂಗಜೆನಿ ಯಂತ್ರ (೧೭೬೪); ಆರ್ಕರಾಯಿಟನ ನಯವಾದ ನೂಲು ಹೊರಡಿಸುವ 'ವಾಟರಫ್ರೇಮು' ಯಂತ್ರ (೧೭೬೯); ಅಲ್ಪ ವೇಳೆಯಲ್ಲಿ ಬಹಳವಾಗಿ ತೆಳು ನೂಲನ್ನು ಹೊರಡಿಸುವ ಕ್ರಾಂಪ್ಟನ್ನನ 'ಮೂಲ' ಎಂಬ ಯಂತ್ರ. ಉಗೆಯ ಶಕ್ತಿಯಿಂದ ನಡೆವ ವಟನ ಇಂಜಿನು (೧೭೬೯). ಉಗೆಯ ಶಕ್ತಿಯಿಂದ ಚಲಿಸುವ ಕಾರ್ಟರೈಟನ ಮಗ್ಗ (೧೭೮೫). ಕಲ್ಲಿದ್ದಲಿಯ ಕಣಿಯಲ್ಲಿ ಉಪಯುಕ್ತವಾದ ಡೇವ್ಹಿಯ ಸೇಫ್ಟಿ ಲಂಪ್ (೧೮೧೫).

**ಗಿರಣಿಗಳ ಮತ್ತು ಯಂತ್ರಾಲಯಗಳ ಸ್ಥಾಪನೆ—** ಮೇಲೆ ಕಾಣಿಸಿದ ಯಾಂತ್ರಿಕ ಶೋಧಗಳಿಂದ ನೂಲುವ ಮತ್ತು ನೇಯುವ ಕೈಗಾರಿಕೆಯಲ್ಲಿ ಕ್ರಾಂತಿ. ಗಿರಣಿಗಳ ಸ್ಥಾಪನೆ. ಹುಟ್ಟುವಳಿ ಹೆಚ್ಚುವುದು. ಕಬ್ಬಿಣ ಮತ್ತು ಕಲ್ಲಿದ್ದ

ಲಿಯ ಉದ್ಯೋಗಗಳಲ್ಲಿಯೂ ಕ್ರಾಂತಿ. ಈ ಉದ್ಯೋಗಗಳಲ್ಲಿ ಇಂಗ್ಲಂಡಿನ ಉತ್ತರ ಮತ್ತು ಮಧ್ಯಭಾಗಗಳು ಮುಂದುವರಿದುವು; ಅಲ್ಲಿ ಜನವಸತಿ ಬೆಳೆಯಿತು.

(೩) ಸಂಚಾರ ಸಾಧನಗಳಲ್ಲಿ ಸುಧಾರಣೆ—ಬ್ರಿಂಡಲೆ ಎಂಬವನು ಕಾಲುವೆಗಳನ್ನು ರಚಿಸಿದನು (೧೭೬೧). ಮೆಕಡಮ್ ಎಂಬ ಇಂಜಿನಿಯರನು ಗಟ್ಟಿ ಮಾರ್ಗಗಳನ್ನು ಸಿದ್ಧಿಸುವ ಹೊಸ ರೀತಿಯನ್ನು ಕಂಡುಹಿಡಿದನು. ಈ ರೀತಿಯಿಂದ ಅನೇಕ ಮಾರ್ಗಗಳು ನಿರ್ಮಿಸಲ್ಪಟ್ಟುವು. ಉಗೆಯ ಶಕ್ತಿಯಿಂದ ನಡೆವ ಉಗೆಹಡಗು (೧೮೧೨). ಸ್ಟೀಫನ್ಸನನು ನೆಲದ ಮೇಲೆ ಓಡುವ ಇಂಜಿನನ್ನು ಶೋಧಿಸುವನು. ಅದರಿಂದ ಮಂಚೆಸ್ಟರದಿಂದ ಲಿವರ್ಪೂಲ ವರೆಗೆ ಮೊದಲನೆಯ ಲೋಹಮಾರ್ಗ (೧೮೩೦). ಸಂಚಾರ ಸಾಧನಗಳಲ್ಲಿ ಸೌಕರ್ಯವು ಹೆಚ್ಚಿದುದರಿಂದ ವ್ಯಾಪಾರಕ್ಕೆ ಸಾಹಾಯ್ಯವು.

ಔದ್ಯೋಗಿಕ ಕ್ರಾಂತಿಯ ಪರಿಣಾಮಗಳು—ಮನೆಗಳಲ್ಲಿ ನಡೆವ ಕೈಗಾರಿಕೆಗಳು ನಿಂತುಹೋಗಿ ಯಂತ್ರಬಲದಿಂದ ಸ್ವಲ್ಪ ಜನರಿಂದ ಬಹಳ ಕೆಲಸವು ಆಗತೊಡಗಿದುದರಿಂದ ನಿರುದ್ಯೋಗವು ಬೆಳೆಯಿತು.

ಸಾಮಾಜಿಕ ಸ್ಥಿತಿ—

ಜನಸಮಾಜ—ಜನಸಂಖ್ಯೆಯಲ್ಲಿ ಅಭಿವೃದ್ಧಿ, ರಾಜಕೀಯ ಅಧಿಕಾರವು ಸರದಾರರ ಮತ್ತು ಭೂಮಿಯೊಡೆಯರ ಕೈಯಲ್ಲಿ.

ಪಟ್ಟಣಗಳು ಬೆಳೆದುದು—ಔದ್ಯೋಗಿಕ ಕ್ರಾಂತಿಯಿಂದ ಪಟ್ಟಣಗಳು ಬೆಳೆದುವು.

ಕಳ್ಳಕಾಕರ ಭಯ ಮತ್ತು ನಿವಾರಣೆ—ಕಳ್ಳರ ಮತ್ತು ಪುಂಡರ ಹಾವಳಿ. ಕಾವಲುಗಾರರು ಅಸಮರ್ಥರು. ಕ್ರೂರ ದಂಡನೆಗಳು.

ಸೆರೆಮನೆ—ಸೆರೆಮನೆಗಳು ಇಕ್ಕಟ್ಟನವು, ರೋಗಕರ; ಸೆರೆಯಾಳುಗಳನ್ನು ಸುಧಾರಿಸಲಿಕ್ಕಲ್ಲದೆ ಹಗೆ ತೀರಿಸಲಿಕ್ಕಾಗಿ ಎಂಬ ತಿಳಿವಳಿಕೆ.

ವಿನೋದ, ವ್ಯಸನಗಳು, ಇತ್ಯಾದಿ—ನಾಟಕಗಳನ್ನು ನೋಡುವ ಒಲವು. ಜೂಜಾಟದ ಚಟ ಬಹಳವಾಗಿತ್ತು. ದ್ವಂದ್ವ ಯುದ್ಧದಿಂದ ವ್ಯಾಜ್ಯವನ್ನು ತೀರಿಸಿಕೊಳ್ಳುವುದು ಸಂಭಾವಿತ ರೀತಿ ಎಂಬ ಗ್ರಹಿಕೆ. ಬಣ್ಣಬಣ್ಣದ ಬಟ್ಟೆಗಿಂತ ಸಾಮಾನ್ಯ ಉಡುಪಿನ ಪ್ರೀತಿ. ೧೮ನೆಯ ಶತಕದ ಕೊನೆಗೆ ಕತ್ತಿಗಳಿಗೆ ಪ್ರತಿಯಾಗಿ ಬಡಿಗೆಗಳನ್ನು ಉಪಯೋಗಿಸುವ ಪದ್ಧತಿ ತಲೆಯೆತ್ತಿತು.

ಧಾರ್ಮಿಕ ಭಾವನೆ—ಧಾರ್ಮಿಕ ವಿಷಯಗಳಲ್ಲಿ ಬೇಸರ. ಧರ್ಮಭಾವನೆಯನ್ನು ಎಚ್ಚರಿಸಲು ಜಾನ ವೆಸ್ಲೆ ಪ್ರಯತ್ನಿಸುವನು. ಮೆಥಾಡಿಸ್ಟ ಪಂಗಡದ ಸ್ಥಾಪನೆ.

ವಾಙ್ಮಯವು — ಮಹಾ ಪಂಡಿತ ಜಾನ್ಸನನ ಭಾಷಾಕೋಶ, ಚರಿತ್ರಕಾರ ಗಿಬನ್, ಕಾದಂಬರೀಕಾರ ಸ್ಕಾಟ್; ಬಾಯರನ್ ಮತ್ತು ಗೋಲ್ಡಸ್ಮಿಥ್ ಕವಿಗಳು.

ಬ್ರಿಟಿಶ ಸಾಮ್ರಾಜ್ಯವು — ಉತ್ತರ ಅಮೇರಿಕೆಯ ಇಂಗ್ಲಿಶ್ ಉಪನಿವೇಶಗಳು ಸ್ವತಂತ್ರವಾದುವು; ಆದರೆ ಕಾನಡಾ ಮತ್ತು ವೆಸ್ಟ ಇಂಡೀಜ ದ್ವೀಪಗಳು ಇಂಗ್ಲಿಶರ ವಶದಲ್ಲಿ. ದಕ್ಷಿಣ ಆಫ್ರಿಕೆಯ ಕೇಪಕಾಲನಿ ಉಪನಿವೇಶವು (೧೮೦೬). ಆಸ್ಟ್ರೇಲಿಯ ಮತ್ತು ನ್ಯೂಝೀಲಂಡ ಇವುಗಳ ಶೋಧ (೧೭೭೦). ಹಿಂದುಸ್ಥಾನದಲ್ಲಿ ಇಂಗ್ಲಿಶ್ ಆಧಿಪತ್ಯದ ಅಭಿವೃದ್ಧಿ.

# ಪರಿಶಿಷ್ಟ ೧.

## ೧೮ನೆಯ ಶತಕದ ನಾಮಾಂಕಿತ ಪುರುಷರು.

Imp **ರಾಬರ್ಟ್ ವಾಲ್‌ಪೋಲ್** (೧೬೭೬-೧೭೪೫) — ಈತನು ೧೬೭೬ರಲ್ಲಿ ನಾರ್ಫೋಕ ಭಾಗದಲ್ಲಿ ಜನಿಸಿದನು. ತನ್ನ ೨೪ನೆಯ ವರ್ಷದಲ್ಲಿ ಪಾರ್ಲಿಮೆಂಟಿನ ಸದಸ್ಯನಾದನು. ಈತನದು ವ್ಹಿಗ್ ಪಕ್ಷವು. ಈತನು ಚಾಣಾಕ್ಷನಾಗಿದ್ದು ಆರ್ಥಿಕ ಕಾರ್ಯಭಾಗಗಳಲ್ಲಿ ಹೆಚ್ಚಾಗಿ ಲಕ್ಷ್ಯವುಳ್ಳವನು ಆಗಿದ್ದನು. ಪ್ರಸಿದ್ಧ ಸೇನಾನಾಯಕನಾದ ಮಾರ್ಲಬರೊ ಈತನನ್ನು ವಿಶೇಷವಾಗಿ ಪ್ರೀತಿಸುತ್ತಿದ್ದುದರಿಂದ ಆನ್ ಇವಳ ಆಳ್ಕೆಯಲ್ಲಿ ಈತನಿಗೆ ಕೆಲಕಾಲ ಮಂತ್ರಿಮಂಡಲದಲ್ಲಿಯೂ ಪ್ರವೇಶವು ಲಭಿಸಿದ್ದಿತು. ಒಂದನೆಯ ಜಾರ್ಜನ ಆಳ್ಕೆಯಲ್ಲಿ ಸಾವುಥ ಸೀ ಕಂಪನಿಯವರು ತಮಗೆ ಕೆಲವು ಸೌಕರ್ಯಗಳು ದೊರೆತಲ್ಲಿ ರಾಷ್ಟ್ರೀಯ ಸಾಲವನ್ನು ತೀರಿಸಲು ಮಾಡಿದ ಯೋಜನೆಯನ್ನು ಈತನು ಮೊದಲಿನಿಂದಲೂ ವಿರೋಧಿಸುವವನಾಗಿದ್ದನು. ೧೭೨೧ರಲ್ಲಿ ಸಾವುಥ ಸೀ ಕಂಪನಿ ದಿವಾಳಿ ತೆಗೆದುದರಿಂದ ಕಂಪನಿಯ ಪಾಲುಗಳನ್ನು ಕೊಂಡು ಸಾವಿರಾರು ಜನರು ಹಾನಿಗೀಡಾದರು; ಇಂಗ್ಲಂಡಿನ ಪ್ರತಿಷ್ಠೆಯೂ ಕುಸಿಯಿತು. ಆಗ ವಾಲಪೋಲನು ಮುಂದೆ ಬಂದು ಈ ಪರಿಸ್ಥಿತಿಯನ್ನು ಸುಧಾರಿಸಿದನು. ೧ನೆಯ ಜಾರ್ಜನು ಈತನನ್ನು ತನ್ನ ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು. ಅರಸನು ಆಡಳಿತದಲ್ಲಿ ಮನಸ್ಸು ಹಾಕುತ್ತಿರಲಿಲ್ಲವಾದುದರಿಂದ ಎಲ್ಲ ರಾಜ್ಯಸೂತ್ರವು ವಾಲಪೋಲನ ಕೈಯಲ್ಲಿ ಬಂದಿತು. ಅದರಿಂದ ಈತನಿಗೆ ಇಂಗ್ಲಂಡಿನ ಮೊದಲನೆಯ ಮುಖ್ಯ ಮಂತ್ರಿ ಎಂಬ ಹೆಸರು ಬಂದಿತು. ಅಂದಿನಿಂದ ಮುಖ್ಯ ಮಂತ್ರಿಯ ನಾಯಕತ್ವದಲ್ಲಿ ಮಂತ್ರಿಮಂಡಳವು ಆಡಳಿತವನ್ನು ನಡೆಸುವ ಸಾಂಪ್ರದಾಯವು—ಕಬಿನೆಟ ಪದ್ಧತಿ—ರೂಢವಾಯಿತು. ಎಲ್ಲ ಅಧಿಕಾರವು ತನ್ನ ಕೈಯಲ್ಲಿರಬೇಕು ಎಂದು ಈತನ ಆಕಾಂಕ್ಷೆಯಿದ್ದುದರಿಂದ ಈತನು ತನಗಿಂತ ಜಾಣರನ್ನು ಮಂತ್ರಿಮಂಡಲದಲ್ಲಿ ನಿಯೋಜಿಸುತ್ತಿರಲಿಲ್ಲ. ೧೭೨೧ರಿಂದ ೧೭೪೨ ಎಂದರೆ ಒಂದು ಸವನೆ ೨೧ ವರ್ಷಗಳ ವರೆಗೆ ಈತನು ಇಂಗ್ಲಂಡಿನ ಮುಖ್ಯ ಮಂತ್ರಿಯಾಗಿದ್ದನು. ಅಧಿಕಾರ ಲಾಲಸೆಯ ಮೂಲಕ ಲಂಚ ಮುಂತಾದ ಉಪಾಯಗಳನ್ನು ಈತನು ಕೈಕೊಳ್ಳಬೇಕಾಗುತ್ತಿತ್ತು. 'ದ್ರವ್ಯದಿಂದ ಎಲ್ಲರೂ ವಶವಾಗುವರು' ಎಂದು ಈತನು

ಯಾವಾಗಲೂ ನುಡಿಯುತ್ತಿದ್ದನು. ಇಂಗ್ಲಂಡಿನ ವ್ಯಾಪಾರ ಮತ್ತು ಉದ್ಯೋಗ ಗಳನ್ನು ಬೆಳೆಸಲು ಈತನು ಅನೇಕ ಆಯಾತ ನಿರ್ಗತ ಸರಕುಗಳ ಮೇಲಿನ ಸುಂಕವನ್ನು ಇಳಿಸಿದನು. ಮತ್ತು ಉದ್ಯೋಗ ವ್ಯವಹಾರಗಳನ್ನು ಪ್ರೋತ್ಸಾಹಿಸಿದನು. ಇದರಿಂದ ಇಂಗ್ಲಂಡಿನ ವ್ಯಾಪಾರವು ಬೆಳೆಯಿತು. ಈತನು ಶಾಂತತಾವಾದಿ ಇದ್ದುದರಿಂದ ಸಾಧ್ಯ ನಾದಷ್ಟು ಯುದ್ಧಗಳನ್ನು ತಪ್ಪಿಸುತ್ತಿದ್ದನು. ಆದರೆ ಈ ನೀತಿಯಿಂದ ಜನಮತವು ಈತನಿಗೆ ಪ್ರತಿಕೂಲವಾಯಿತು. ಆಗ ಈತನು ೧೭೩೯ರಲ್ಲಿ ಸ್ಪೇನದೊಡನೆ ಯುದ್ಧ ವನ್ನು ಸಾರಿದನು. ಆದರೆ ಈ ಸಮಯದಲ್ಲಿ ಪರಾಭವವಾದುದರಿಂದ ಜನ ವಿರೋಧವು ಹೆಚ್ಚಿತು. ಆದುದರಿಂದ ಈತನು ಮಂತ್ರಿಪದವನ್ನು ಬಿಡಬೇಕಾಯಿತು (೧೭೪೨). ಅನಂತರ ಈತನು ಲಿವರ್ಪೂಲದ ಲಾರ್ಡನಾಗಿ ಮಾಡಲ್ಪಟ್ಟನು. ಈತನು ೧೭೪೫ರಲ್ಲಿ ಮರಣಹೊಂದಿದನು.

ವಿಲಿಯಮ್ ಪಿಟ್ (ಹಿರಿಯ), ಚೆಥೆಮದ ಅರ್ಲ (೧೭೦೮-೧೭೭೮)— ಈತನು ೧೭೦೮ರಲ್ಲಿ ಹುಟ್ಟಿದನು. ೧೭೩೫ರಲ್ಲಿ ಪಾರ್ಲಿಮೆಂಟಿನ ಸದಸ್ಯನಾದನು. ಈತನು ಉತ್ತಮ ವಾಗ್ಮಿಯಾಗಿದ್ದನು. ತನ್ನ ಮಾತುಗಾರಿಕೆಯಿಂದಲೂ ಸಮಯ ಸೂಚಕತೆಯಿಂದಲೂ ಎಲ್ಲರ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದ್ದನು. ಈತನು ವ್ಹಿಗ್ ಪಕ್ಷದವನು. ಈ ಕಾಲದ ಮುಖ್ಯ ಮಂತ್ರಿಯಾದ ವಾಲಪೋಲನ ಎಲ್ಲ ಅಧಿಕಾರ ವನ್ನು ತನ್ನ ವಶದಲ್ಲಿ ಹಿಡಿದುಕೊಳ್ಳುವ ನೀತಿ, ಲಂಚ ಮುಂತಾದುವು, ಮತ್ತು ಆಡಳಿತ ವನ್ನು ನಡೆಸುವ ರೀತಿ ಈತನ ಮನಸ್ಸಿಗೆ ಬರುತ್ತಿರಲಿಲ್ಲ. ಆದುದರಿಂದ ಈತನು ವಾಲ ಪೋಲನನ್ನು ಕಟುತರವಾಗಿ ಟೀಕಿಸಿದನು. ಆದಕ್ಕಾಗಿ ಈತನು ವಾಲಪೋಲನ ವಿರೋಧಿ ಗಳ ನಾಯಕನಾದನು. ಈತನ ಲೋಕಪ್ರಿಯತೆ ಬಹಳವಾಗಿ ಹೆಚ್ಚಿತು. ಆದುದ ರಿಂದ ಈತನನ್ನು 'ಕಾಮನ್ಸ ಸಭೆಯ ನಾಯಕ'ನೆಂದು (The Great Commoner) ಕರೆಯತೊಡಗಿದರು. ಪೆಲಮನು ಮುಖ್ಯ ಮಂತ್ರಿಯಾದ ಬಳಿಕ ಈತನನ್ನು ಮಂತ್ರಿ ಮಂಡಲದಲ್ಲಿ ಸೇರಿಸಿಕೊಂಡನು. ೧೭೫೬ರಲ್ಲಿ ಸಪ್ತವಾರ್ಷಿಕ ಯುದ್ಧವು ಪ್ರಾರಂಭ ವಾಗಿ ಇಂಗ್ಲಂಡು ಫ್ರಾನ್ಸಿನಿಂದ ಎಲ್ಲೆಡೆಯಲ್ಲಿ ಸೋಲಿಸಲ್ಪಟ್ಟಿತು. ಆಗ ಪಿಟ್ಟನನ್ನು ಮಂತ್ರಿಮಂಡಲದಲ್ಲಿ ಕರೆದುಕೊಳ್ಳಲು ಎಲ್ಲರಿಂದ ಬೇಡಿಕೆ ಬಂದಿತು. ಆದಕ್ಕಾಗಿ ನ್ಯೂಕೆಸಲನು ಈತನನ್ನು ಮಂತ್ರಿಮಂಡಲದಲ್ಲಿ ತೆಗೆದುಕೊಂಡನು. ಈ ಯುದ್ಧದಲ್ಲಿ ಫ್ರಾನ್ಸಿನ ಎಲ್ಲ ಯೋಜನೆಗಳನ್ನು ನಿಷ್ಫಲಗೊಳಿಸಲು ಪಿಟ್ಟನು ಯುದ್ಧವಿಷಯಕವಾದ ಎಲ್ಲ ವ್ಯವಸ್ಥೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ಅಮೇರಿಕೆ, ಹಿಂದುಸ್ಥಾನ ಮುಂತಾದ ದೂರದೂರದ ಪ್ರದೇಶಗಳ ವರೆಗೆ ಯೋಗ್ಯ ನಾಯಕರನ್ನು ಮತ್ತು ಯುದ್ಧ ಸಾಹಿತ್ಯವನ್ನು ಕಳಿಸಿ ಫ್ರೆಂಚರನ್ನು ಪರಾಭವಗೊಳಿಸಿದನು. ತಾನು ಸೂಚಿಸಿ ದಂತೆ ೩ನೆಯ ಜಾರ್ಜನು ಸ್ಪೇನದೊಡನೆ ಯುದ್ಧವನ್ನು ಹೂಡಲಿಲ್ಲವೆಂದು ಪಿಟ್ಟನು ಮಂತ್ರಿಮಂಡಲದಿಂದ ಹಿಂದೆಗೆದನು (೧೭೬೧). ಅಮೇರಿಕೆಯ ವಸಾಹತುಗಳೊಡನೆ ಕಲಹವು ಹುಟ್ಟಿದಾಗ ವಸಾಹತುಗಳ ಒಪ್ಪಿಗೆಯಿಲ್ಲದೆ ಅವುಗಳ ಮೇಲೆ ತೆರಿಗೆಯನ್ನು ಹೇರಬಾರದು ಎಂದು ಪಿಟ್ಟನು ಮತಪಟ್ಟನು. ಈತನು ಚೆಥಮದ ಅರ್ಲನಾಗಿ ಮಾಡ

ಲ್ಪಟ್ಟನು. ಕೊನೆಗೆ ಈ ತಿಕ್ಕಾಟವು ದೀರ್ಘಕ್ಕೆ ಬೆಳೆದು ಕಾಳೆಗವು ನಡೆಯಿತು. ಆಗ ಅಮೇರಿಕೆಯಲ್ಲಿಯ ವಸಾಹತುಗಳ ಸ್ವಾತಂತ್ರ್ಯವನ್ನು ಒಪ್ಪಬೇಕೊ ಒಪ್ಪಬಾರದೊ ಎಂಬ ಸಮಸ್ಯೆ ಪಾರ್ಲಿಮೆಂಟಿನ ಮುಂದೆ ಬಂದಿತು. ಆ ಕಾಲಕ್ಕೆ ವಸಾಹತುಗಳ ಎಲ್ಲ ಬೇಡಿಕೆಗಳನ್ನು ಮಾನ್ಯಮಾಡಬೇಕು, ಆದರೆ ಅವುಗಳನ್ನು ಬ್ರಿಟಿಶ ಸಾಮ್ರಾಜ್ಯದಿಂದ ಸಿಡಿದು ಹೋಗಗೊಡಬಾರದು ಎಂದು ಪಿಟ್ಟನು ಲಾರ್ಡ ಸಭೆಯಲ್ಲಿ ಭಾಷಣಮಾಡಿದನು. ಈ ಭಾಷಣಮಾಡುತ್ತಿರುವಾಗಲೆ ಈತನು ಎಚ್ಚರದಪ್ಪಿ ಬಿದ್ದನು. ಮುಂದೆ ಬೇನೆಯಿಂದ ಬಳಲಿ ಕೆಲವು ದಿನಗಳಲ್ಲಿ ಕಾಲವಶನಾದನು (೧೭೭೮).

ಜಾರ್ಜ ವಾಶಿಂಗ್ಟನ್ (೧೭೩೨-೧೭೯೯)—ಅಮೇರಿಕೆಯ ವರ್ಜಿನಿಯಾ ಉಪನಿವೇಶದಲ್ಲಿ ಈತನ ಜನ್ಮವಾಯಿತು (೧೭೩೨). ಈತನು ಬಾಲ್ಯದಲ್ಲಿ ಸೈನಿಕ ಶಿಕ್ಷಣವನ್ನು ಪಡೆದು ದಂಡಿನಲ್ಲಿ ಸೇರಿದನು. ಅಲ್ಲಿ ಏರುತ್ತ ದೊಡ್ಡ ಅಧಿಕಾರಸ್ಥನಾದನು. ಸಪ್ತವಾರ್ಷಿಕ ಯುದ್ಧದಲ್ಲಿ ಅಮೇರಿಕೆಯ ಫ್ರೆಂಚ ಉಪನಿವೇಶದವರೊಡನೆ ಹೋರಾಡಿ ಇವನು ಬಹಳ ಕೀರ್ತಿಯನ್ನು ಸಂಪಾದಿಸಿದನು. ಮುಂದೆ ಸೈನ್ಯದ ಕೆಲಸವನ್ನು ಬಿಟ್ಟು ವರ್ಜಿನಿಯದ ಶಾಸನಸಭೆಯ ಸದಸ್ಯನಾಗಿಯೂ ಉತ್ತಮ ಕಾರ್ಯವನ್ನು ಮಾಡಿದನು. ಈತನು ರಾಜನೀತಿಕುಶಲನಾಗಿದ್ದನು. ಈತನ ವಿಷಯದಲ್ಲಿ ಎಲ್ಲರಿಗೂ ಆದರವೂ ಪ್ರೇಮವೂ ಇದ್ದಿತು. ಅಮೇರಿಕೆಯ ಇಂಗ್ಲಿಶ್ ಉಪನಿವೇಶಗಳು ಇಂಗ್ಲಂಡಿನೊಡನೆ ಕಾಳೆಗವನ್ನು ಹೂಡಲು ಉಪನಿವೇಶಗಳ ಜನರು ಈತನನ್ನು ತಮ್ಮ ಸೇನಾನಾಯಕನಾಗಿ ನೇಮಿಸಿದರು. ಈ ಯುದ್ಧದಲ್ಲಿ ಈತನು ತನ್ನ ಪ್ರಾವೀಣ್ಯವನ್ನು ಚೆನ್ನಾಗಿ ಪ್ರಕಟಿಸಿದನು. ಉತ್ತಮ ಸೇನಾಪತಿತ್ವ, ರಾಜನೀತಿ ಚಾತುರ್ಯ, ನಿಸ್ಪೃಹತೆ, ಕರ್ತವ್ಯದಕ್ಷತೆ ಮುಂತಾದ ಈತನ ಸದ್ಗುಣಗಳಿಗೆ ಮನಸೋತ ಉಪನಿವೇಶಗಳ ಜನರು ಈತನನ್ನು ಪ್ರೀತಿಸುತ್ತಿದ್ದರು, ಆದರಿಸುತ್ತಿದ್ದರು. ಉಪನಿವೇಶಗಳ ಜನರು ಸ್ವಾತಂತ್ರ್ಯವನ್ನು ಸಂಪಾದಿಸಿ ಸ್ವರಾಷ್ಟ್ರವನ್ನು ಸ್ಥಾಪಿಸಿದ ಬಳಿಕ ಈತನನ್ನು ಎರಡು ಬಾರಿ ತಮ್ಮ ಪ್ರಜಾಪ್ರಭುತ್ವದ ಅಧ್ಯಕ್ಷನಾಗಿ ಮಾಡಿದರು. ೧೭೯೭ರ ತರುವಾಯ ವಾಶಿಂಗ್ಟನನು ರಾಜಕಾರಣದಿಂದ ಹಿಂದೆಗೆದನು. ಈತನು ೧೭೯೯ರಲ್ಲಿ ಮರಣಹೊಂದಿದನು.

ಎಡಮಂಡ ಬರ್ಕ (೧೭೨೯-೧೭೯೭)—೩ನೆಯ ಜಾರ್ಜನ ಆಳ್ವಿಕೆಯಲ್ಲಿ ನಾಮಾಂಕಿತ ವಾಗ್ಮಿ, ಉತ್ತಮ ಲೇಖಕ ಮತ್ತು ಪ್ರಮುಖ ರಾಜಕಾರ್ಯವಿಶಾರದನೆಂದು ಈತನು ಕೀರ್ತಿಪಡೆದನು. ಈತನು ೧೭೨೯ರಲ್ಲಿ ಹುಟ್ಟಿದನು. ೧೭೬೬ರಲ್ಲಿ ಪಾರ್ಲಿಮೆಂಟಿನ ಸದಸ್ಯನಾದನು. ಈತನು ವ್ಹಿಗ್ ಪಕ್ಷಕ್ಕೆ ಸೇರಿದ್ದನು. ಇಂಗ್ಲಂಡ್-ಅಮೇರಿಕೆಗಳ ನಡುವೆ ಹೋರಾಟವು ಪ್ರಾರಂಭವಾದ ಸಂದರ್ಭದಲ್ಲಿ ಉಪನಿವೇಶಗಳ ಸಮ್ಮತಿಯಿಲ್ಲದೆ ಅವುಗಳ ಮೇಲೆ ತೆರಿಗೆಯನ್ನು ಹೇರಕೂಡದು ಎಂಬುದು ಈತನ ಅಭಿಪ್ರಾಯವಿದ್ದಿತು. ವಾರನ್ ಹೇಸ್ಟಿಂಗ್ಜನ ಮೇಲೆ ಅಪಾದನೆಯನ್ನು ಹೂಡಿದ್ದ ಕಾಮನ್ಸ ಸಭೆಯ ಸದಸ್ಯರಲ್ಲಿ ಈತನೊಬ್ಬನು ಆಗಿದ್ದನು. ೧೭೮೯ರಲ್ಲಿ ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾಗಿ ಕ್ರಾಂತಿಕಾರಿಗಳು ಅತ್ಯಾಚಾರಗಳನ್ನು ಮಾಡತೊಡಗಿದರು. ಆಗ ಈ ಗಾಳಿ ಇಂಗ್ಲಂಡಿನಲ್ಲಿಯೂ ಹಬ್ಬಬಾರದು ಮತ್ತು ಫ್ರೆಂಚ ರಾಜ್ಯಕ್ರಾಂತಿಯ ವಿರುದ್ಧ

ವಾಗಿ ಇಂಗ್ಲಂಡಿನಲ್ಲಿ ಲೋಕಮತವನ್ನು ಹುಟ್ಟಿಸಬೇಕು ಎಂಬ ಉದ್ದೇಶದಿಂದ ಈತನು 'ಫ್ರಾನ್ಸಿನ ರಾಜ್ಯಕ್ರಾಂತಿಯ ವಿಷಯದಲ್ಲಿ ವಿಚಾರಗಳು' (Reflections on the Revolution in France) ಎಂಬ ಗ್ರಂಥವನ್ನು ರಚಿಸಿದನು (೧೭೯೦). ಈತನು ೧೭೯೭ರಲ್ಲಿ ದೈವಾಧೀನನಾದನು.

ವಿಲಿಯಮ್ ಪಿಟ್ (ಕಿರಿಯ) (೧೭೫೯-೧೮೦೬)—ವಿಲಿಯಮ್ ಪಿಟ್ಟನು ಚೆಥಮಿನ ಅರ್ಲನಾದ ಹಿರಿಯ ವಿಲಿಯಮ್ ಪಿಟ್ಟನ ಮಗನು. ಈತನು ೨೪ನೆಯ ವಯಸ್ಸಿಗೆ ಮುಖ್ಯ ಮಂತ್ರಿಯಾದನು (೧೭೮೩). ಈತನು ಟೋರಿ ಪಂಗಡದವನಾಗಿದ್ದನು. ವಾದಗಾರಿಕೆಯಲ್ಲಿ ಪ್ರವೀಣನಾಗಿದ್ದನು. ಬುದ್ಧಿವಂತನೂ ಕರ್ತೃತ್ವಶಾಲಿಯೂ ಆಗಿದ್ದುದರಿಂದ ಈತನು ಎಲ್ಲರ ಮೇಲೆಯೂ ತನ್ನ ವರ್ಚಸ್ಸನ್ನು ಸ್ಥಾಪಿಸಿದನು. ಮುಖ್ಯ ಮಂತ್ರಿಯಾಗಿ ಇಪ್ಪತ್ತು ವರ್ಷ (೧೭೮೩—೧೮೦೧; ೧೮೦೪—೧೮೦೬) ರಾಜ್ಯಸೂತ್ರಗಳನ್ನು ನಡೆಸಿದನು. ಮುಖ್ಯ ಮಂತ್ರಿಪದದಲ್ಲಿರುವಾಗ ಆರ್ಥಿಕ ಮತ್ತು ವ್ಯಾಪಾರ ವಿಷಯಕ ಅನೇಕ ಸುಧಾರಣೆಗಳನ್ನು ಮಾಡಿದನು. ಹಿಂದುಸ್ಥಾನದ ರಾಜ್ಯವ್ಯವಸ್ಥೆಯನ್ನು ಕುರಿತು 'ಪಿಟ್ಟನ ಹಿಂದುಸ್ಥಾನ ವಿಷಯದ ಬಿಲ್' (೧೭೮೪), ಐರಿಶ್ ಮತ್ತು ಇಂಗ್ಲಿಶ್ ಪಾರ್ಲಿಮೆಂಟುಗಳ ಏಕೀಕರಣ (೧೮೦೦), ಮುಂತಾದ ಕಾರ್ಯ್ಯಗಳನ್ನು ಮಾಡಿದನು. ಗುಲಾಮರ ವ್ಯಾಪಾರವನ್ನು ನಿಲ್ಲಿಸಲು ಪ್ರಯತ್ನಿಸುತ್ತಿದ್ದ ವಿಲ್ಬರಫೋರ್ಸನಿಗೆ ಈತನು ಬೆಂಬಲವಾಗಿದ್ದನು. ಐರಿಶ್ ರೋಮನ ಕೆಥಲಿಕರ ಮೇಲಿನ ನಿರ್ಬಂಧಗಳು ಹೋಗಬೇಕು ಎಂದು ಈತನ ಅಭಿಪ್ರಾಯವಿದ್ದಿತು. ಆದರೆ ಜಾರ್ಜ ರಾಜನ ಹಟದ ಮೂಲಕವಾಗಿ ಈ ವಿಷಯದಲ್ಲಿ ಈತನು ಏನನ್ನೂ ಮಾಡಲು ಸಾಧ್ಯವಾಗಲಿಲ್ಲ. ಈತನು ಮಂತ್ರಿಪದದಲ್ಲಿರುವಾಗ ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾಗಿ ಆ ದೇಶದೊಡನೆ ಯುದ್ಧವು ಪ್ರಾರಂಭವಾಯಿತು. ಆಗ ಕ್ರಾಂತಿಕಾರಕ ವಿಚಾರಗಳು ಇಂಗ್ಲಂಡಿನಲ್ಲಿ ಹಬ್ಬದಿರುವಂತೆ ಈತನು ಜೋಕೆಪಟ್ಟನು. ಫ್ರಾನ್ಸಿನೊಡನೆ ಯುದ್ಧವನ್ನು ಮುಂದುವರಿಸಿ ನೆಪೋಲಿಯನನ ಯುಕ್ತಿಗಳನ್ನು ಮುರಿಬಡಿಯಲು ಬಹಳವಾಗಿ ಪರಿಶ್ರಮಿಸಿದನು. ಈತನು ೧೮೦೬ರಲ್ಲಿ ಕಾಲವಶನಾದನು.

ಹೊರೇಶಿಯಸ್ ನೆಲ್ಸನ್ (೧೭೫೮-೧೮೦೫)—ಉತ್ತಮ ನಾವಿಕ, ನಾಮಾಂಕಿತ ನೌಕಾಬಲಾಧಿಪತಿ, ಇಂಗ್ಲಂಡಿನ ಮೇಲೆ ಹಡಗುಪಡೆಯ ಏರಾಟ ಮಾಡಬೇಕೆಂಬ ನೆಪೋಲಿಯನನ ವ್ಯೂಹಗಳನ್ನು ಹಣಿದಿಕ್ಕಿದವನು ಎಂಬ ಕೀರ್ತಿಭಾಜನನಾದ ಈ ಮಹಾ ಪುರುಷನು ಮೂರನೆಯ ಜಾರ್ಜನ ಆಳ್ಕೆಯಲ್ಲಿ ಉದಯಿಸಿದನು. ಈತನು ೧೭೫೮ರಲ್ಲಿ ಹುಟ್ಟಿದನು. ಬಾಲ್ಯದಿಂದಲೂ ಕಡಲ ಪಯಣದಲ್ಲಿ ಈತನಿಗೆ ಪ್ರೀತಿಯಿದ್ದಿತು. ಆಧುದರಿಂದ ಈತನು ಹಡಗುಪಡೆಯ ವಿಭಾಗದಲ್ಲಿ ಸೇರಿ ಕ್ರಮವಾಗಿ ದೊಡ್ಡ ಪದವಿಗೆ ಏರಿದನು. ೧೭೯೩ರಲ್ಲಿ ಫ್ರಾನ್ಸಿನೊಡನೆ ಯುದ್ಧವು ಪ್ರಾರಂಭಿಸಿತು. ಆಗ ಈತನು ೧೭೯೭ರಲ್ಲಿ ಸೇಂಟ ವಿನ್ಸೆಂಟ ಎಂಬಲ್ಲಿ ಫ್ರೆಂಚ ಮತ್ತು ಸ್ಪೆನಿಶ ಹಡಗುಪಡೆಯನ್ನು, ನೈಲ ಕಾಳೆಗದಲ್ಲಿ (೧೭೯೮) ಫ್ರೆಂಚ ನೌಕಾ ಸೇನೆಯನ್ನು, ಕೊಪನಹೇಗನದಲ್ಲಿ (೧೮೦೧) ಡಚ್ ಹಡಗುಪಡೆಯನ್ನು ಪರಾಭವಗೊಳಿಸಿದನು. ಫ್ರೆಂಚ ಮತ್ತು

ಸ್ಪೆನಿಶ್ ನೌಕಾಬಲದ ಸಾಹಾಯ್ಯದಿಂದ ನೆಪೋಲಿಯನನು ಇಂಗ್ಲಂಡಿನ ಮೇಲೆ ಏರಿ ಹೋಗಲು ಟ್ರಾಫಲ್ಗಾರ ಕಾಳೆಗದಲ್ಲಿ ಈತನು ಆ ಸಂಯುಕ್ತ ನೌಕಾದಳವನ್ನು ಮುರಿದಿಕ್ಕಿದನು (೧೮೦೫). ಆದರೆ ಈ ಹೋರಾಟದಲ್ಲಿಯೆ ಈತನಿಗೆ ಗಾಯವಾಗಿ ಕಾಲಾಧೀನನಾದನು. 'ಪ್ರತಿಯೊಬ್ಬ ಇಂಗ್ಲಿಶ್ ನಾಗರಿಕನು ತನ್ನ ಕರ್ತವ್ಯವನ್ನು ಪಾಲಿಸಲಿ ಎಂದು ಇಂಗ್ಲಂಡು ಹಾರಯಿಸುತ್ತದೆ' ಎಂದು ಈತನು ನುಡಿಯುತ್ತಿದ್ದನು. ಹೀಗೆ ಕರ್ತವ್ಯವನ್ನು ಮಾಡುತ್ತಿರುವಾಗಲೆ ಈತನು ಮರಣಹೊಂದಿದನು.

ವಿಲಿಯಮ್ ವಿಲ್ಬರಫೋರ್ಸ (೧೭೫೯-೧೮೩೩)—ಗುಲಾಮರ ವ್ಯಾಪಾರವು ಮತ್ತು ಗುಲಾಮಗಿರಿಯ ಪದ್ಧತಿ ಅಳಿಸಿಹೋಗಬೇಕೆಂದು ಹಗಲಿರುಳು ಪ್ರಯತ್ನಿಸಿದ ವ್ಯಕ್ತಿಗಳಲ್ಲಿ ಈತನು ಪ್ರಮುಖನಾಗಿದ್ದನು. ೧೭೮೦ರಲ್ಲಿ ಈತನು ಪಾರ್ಲಿಮೆಂಟಿನ ಸದಸ್ಯನಾದನು. ಇಂಗ್ಲಂಡಿನ ಮುಖ್ಯ ಮಂತ್ರಿಯೂ ರಾಜ್ಯತಂತ್ರಪ್ರವೀಣನೂ ಆದ ವಿಲಿಯಮ್ ಪಿಟ್ಟನು (ಕಿರಿಯ) ಈತನ ಸ್ನೇಹಿತನಾಗಿದ್ದನು. ಪಾರ್ಲಿಮೆಂಟಿನ ಸದಸ್ಯನಾಗಿರುವಾಗ ಗುಲಾಮರ ವ್ಯಾಪಾರವು ನಷ್ಟವಾಗಬೇಕೆಂದು ಈತನು ಪ್ರಯತ್ನಿಸಿದನು. ಆದರೆ ಅದು ಕೈಗೂಡಲಿಲ್ಲ. ಈ ವ್ಯಾಪಾರವು ಅಳಿದರೆ ತಮಗೆ ಹಾನಿಯಾಗುವುದೆಂದು ಗುಲಾಮರ ವರ್ತಕರಿಗೆ ಹೆದರಿಕೆ ಇದ್ದಿತು. ಆದರೂ ಈತನು ನಿರಾಶನಾಗದೆ ಜಿಗಟುತನದಿಂದ ತನ್ನ ಪ್ರಯತ್ನವನ್ನು ಮುಂದುವರಿಸಿದನು. ಕೊನೆಗೆ ಈತನು ಜಯಶೀಲನಾದನು. ೧೮೦೭ರಲ್ಲಿ ಗುಲಾಮರ ವ್ಯಾಪಾರವು ನಿಲ್ಲಬೇಕು ಎಂದು ಪಾರ್ಲಿಮೆಂಟು ನಿರ್ಣಯಿಸಿತು. ಇತರ ಸಮಾಜಹಿತದ ವಿಷಯಗಳ ಕಡೆಗೂ ವಿಲ್ಬರಫೋರ್ಸನ ಲಕ್ಷ್ಯವಿದ್ದಿತು. ವಿಲಿಯಮ್ ಪಿಟ್, ಬರ್ಕ, ಫಾಕ್ಸ ಪ್ರಭೃತಿ ರಾಜ್ಯತಂತ್ರವಿಶಾರದರು ಈತನ ಗೆಳೆಯರಾಗಿದ್ದರು. ಮುಪ್ಪು ಬಂದುದರಿಂದ ಈತನು ಸಾರ್ವಜನಿಕ ಕಾರ್ಯದಿಂದ ಕಾಲ್ದೆಗೆದನು (೧೮೨೫). ಆದರೂ ಈತನು ಪ್ರತಿಪಾದಿಸಿದ ತತ್ವಗಳ ಜಯವಾಗಿ ಗುಲಾಮಗಿರಿಯ ಪದ್ಧತಿಯನ್ನು ಬ್ರಿಟಿಶ ಸಾಮ್ರಾಜ್ಯದಿಂದ ಹೊಡೆದೋಡಿಸುವ ಕಟ್ಟಳೆಯನ್ನು ೧೮೩೩ರಲ್ಲಿ ಪಾರ್ಲಿಮೆಂಟಿನಲ್ಲಿ ಸ್ವೀಕೃತವಾಯಿತು. ಮುಂದೆ ಪ್ರಪಂಚದ ಇತರ ರಾಷ್ಟ್ರಗಳವರೂ ತಮ್ಮ ತಮ್ಮ ದೇಶಗಳಲ್ಲಿ ಗುಲಾಮಗಿರಿಯ ಪದ್ಧತಿಯನ್ನು ನಾಶಪಡಿಸಿದರು. ವಿಲ್ಬರಫೋರ್ಸನು ೧೮೩೩ರಲ್ಲಿ ಮರಣವನ್ನೈದಿದನು.

ನೆಪೋಲಿಯನ್ ಬೋನಾಪಾರ್ಟ (೧೭೬೯-೧೮೨೧) – ಕಡುಗಲಿ, ಕುಶಲ ದಂಡಾಧಿಪತಿ, ಸಾಹಸಿಗ, ಮಹತ್ವಾಕಾಂಕ್ಷಿ, ಬುದ್ಧಿಶಾಲಿ, ಮಹಾಪುರುಷನೆಂದು ಈತನು ಹೆಸರುಪಡೆದಿರುವನು. ಫ್ರಾನ್ಸಿನ ದಕ್ಷಿಣಕ್ಕೆ ಫ್ರಾನ್ಸಿನ ಅಂಕಿತದಲ್ಲಿರುವ ಕಾರ್ಸಿಕಾ ದ್ವೀಪದಲ್ಲಿ ೧೭೬೯ರಲ್ಲಿ ಈತನು ಹುಟ್ಟಿದನು. ಚಿಕ್ಕವನಿರುವಾಗಲೆ ಸೈನಿಕ ವಿದ್ಯೆಯನ್ನು ಸಂಪಾದಿಸಲು ಈತನು ಪ್ಯಾರಿಸಿನ ಸೈನಿಕ ವಿದ್ಯಾಲಯದಲ್ಲಿ ಸೇರಿದನು. ಅಲ್ಲಿಯ ಶಿಕ್ಷಣವನ್ನು ಮುಗಿಸಿ ಈತನು ದಂಡಿನಲ್ಲಿ ಸೇರಿದನು. ಅಲ್ಲಿ ಇಪ್ಪತ್ತನೆಯ ವಯಸ್ಸಿನಷ್ಟರಲ್ಲಿ ನಾಯಕ ಪದವಿಗೆ ಏರಿದನು. ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾದ ಬಳಿಕ ಹಗೆಗಳಿಂದ ಟೂಲೋನ ಪಟ್ಟಣವನ್ನು ಸಂರಕ್ಷಿಸುವ ಸಮಯದಲ್ಲಿಯೂ (೧೭೯೩), ಪ್ಯಾರಿಸಿನ ಬಂಡಾಯವನ್ನು ಮುರಿಬಡಿವ ಸಂದರ್ಭದಲ್ಲಿಯೂ (೧೭೯೫) ಈತನು ತನ್ನ

ಕರ್ತೃತ್ವವನ್ನೂ ಸೈನಿಕ ವಿದ್ಯೆಯ ಚಾತುರ್ಯವನ್ನೂ ಪ್ರಕಟಿಸಿದನು. ಆದಕ್ಕಾಗಿ ಡಿರೆಕ್ಟರಿಯವರು ಈತನನ್ನು ಸೇನಾಪತಿಯಾಗಿ ನೇಮಿಸಿ ಇಟಲಿಯ ದಂಡಯಾತ್ರೆಗೆ ಕಳುಹಿದರು. ಅಲ್ಲಿ ಈತನು ತನ್ನ ಪರಾಕ್ರಮವನ್ನು ಹೆಚ್ಚಾಗಿ ಬೀರಿ ಆಸ್ಟ್ರಿಯನ್ ಸೇನೆಯನ್ನು ಸೋಲಿಸಿದನು (೧೭೯೭). ಮುಂದೆ ಈತನು ಇಜಿಪ್ತ ಮತ್ತು ಸೀರಿಯದಲ್ಲಿ ದಂಡಯಾತ್ರೆ ಮಾಡಿದನು (೧೭೯೮). ಅಲ್ಲಿಂದ ಮರಳಿದ ಬಳಿಕ ಈತನು ಬಹಳ ಜನಪ್ರಿಯನಾದನು. ಅನಂತರ ಡಿರೆಕ್ಟರಿಯ ಆಧಿಪತ್ಯವನ್ನು ಉರುಳಿಸಿ ಎಲ್ಲ ಅಧಿಕಾರವನ್ನು ತನ್ನ ಕೈಯಲ್ಲಿ ತೆಗೆದುಕೊಂಡನು (೧೭೯೯); ಆಗ ತಾನು ಫ್ರೆಂಚ ಪ್ರಜಾಪ್ರಭುತ್ವದ ಅಧ್ಯಕ್ಷ (ಕಾನ್ಸಲ)ನಿದ್ದುದಾಗಿ ಸಾರಿದನು. ಮುಂದೆ ೧೮೦೦ರಲ್ಲಿ ಇಟಲಿಯಲ್ಲಿ ವಿಜಯಯಾತ್ರೆಯನ್ನು ಕೈಕೊಂಡು ಆಸ್ಟ್ರಿಯನ್ ಸೈನ್ಯವನ್ನು ಸೋಲಿಸಿದನು. ಈತನು ಫ್ರಾನ್ಸಿನ ಅಂತರಂಗದ ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು. ಹೊಸ ಕಾಲುವೆಗಳನ್ನು ಅಗಿಸಿದನು. 'ನೆಪೋಲಿಯನ್ ಕೋಡ' ಎಂಬ ವಿಧಿನಿಯಮಗಳ ಸಂಗ್ರಹವನ್ನು ಸಿದ್ಧಪಡಿಸಿದನು. ಹೊಸ ಶಾಲೆಗಳನ್ನು ಸ್ಥಾಪಿಸಿದನು. ಈತನು ೧೮೦೪ರಲ್ಲಿ ರೋಮದ ಪೋಪನ ಕಡೆಯಿಂದ ಫ್ರೆಂಚರ ಬಾದಶಹನೆಂದು ಪ್ಯಾರಿಸಿನಲ್ಲಿ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡನು. ಅನಂತರ ಇಂಗ್ಲಂಡಿನ ಮೇಲೆಯೂ ಇಡಿಯ ಯುರೋಪಖಂಡದ ಮೇಲೆಯೂ ತನ್ನ ವರ್ಚಸ್ಸನ್ನು ಸ್ಥಾಪಿಸಲು ಪ್ರಯತ್ನಿಸತೊಡಗಿದನು. ಇಂಗ್ಲಂಡಿನ ಮೇಲೆ ಹಡಗುಪಡೆಯ ದಾಳಿಯನ್ನು ಮಾಡಲು ಹವಣಿಸಿದನು. ಆದರೆ ಟ್ರಾಫಲ್ಗಾರ ಕಾಳೆಗದಲ್ಲಿ (೧೮೦೫) ನೆಲ್ಸನನು ಫ್ರೆಂಚ ಮತ್ತು ಸ್ಪ್ಯಾನಿಶ ಹಡಗುಪಡೆಯನ್ನು ಸೋಲಿಸಿದುದರಿಂದ ಈ ಪ್ರಯತ್ನವು ಸಫಲವಾಗಲಿಲ್ಲ. ಆದರೆ ಭೂಮಿಯ ಮೇಲೆ ಆಸ್ಟ್ರೆಲಿಟ್ಝ ಕಾಳೆಗದಲ್ಲಿ ಆಸ್ಟ್ರಿಯಾ, ಯೇನ ಯುದ್ಧದಲ್ಲಿ (೧೮೦೬) ಪ್ರಶಿಯಾ ಮತ್ತು ಫ್ರೀಡಲಂಡಿನ ರಣದಲ್ಲಿ ರಶಿಯಾ ಈ ರಾಷ್ಟ್ರಗಳನ್ನು ಪರಾಭವಗೊಳಿಸಿದನು. ಇದರಿಂದ ಇಂಗ್ಲಂಡನ್ನುಳಿದ ಮಿಕ್ಕ ಯುರೋಪದ ಮೇಲೆ ಈತನ ಪ್ರಭಾವವು ಸ್ಥಾಪಿತವಾಯಿತು. ಈತನು ತನ್ನ ಒಬ್ಬ ತಮ್ಮನನ್ನು ಸ್ಪೇನಿನ, ಇನ್ನೊಬ್ಬನನ್ನು ಹಾಲಂಡಿನ, ಆಪ್ತನೊಬ್ಬನನ್ನು ನೇಪಲ್ಸದ ಅರಸರನ್ನು ಮಾಡಿದನು. ವ್ಯಾಪಾರದಲ್ಲಿ ಇಂಗ್ಲಂಡಿನ ದಿಗ್‌ಬಂಧನೆಮಾಡಲೆಳಸಿ ಬರ್ಲಿನ್ ಮತ್ತು ಮಿಲನ್ ನಗರಗಳಿಂದ ಶಾಸನಗಳನ್ನು (ಬರ್ಲಿನ್ ಮತ್ತು ಮಿಲನ್ ಡಿಕ್ರೀಜ) ಹೊರಡಿಸಿ, ತನ್ನ ಅಂಕೆಯಲ್ಲಿರುವ ಎಲ್ಲ ರಾಷ್ಟ್ರಗಳು ಇಂಗ್ಲಂಡಿನೊಡನೆ ವ್ಯಾಪಾರ ಮಾಡಬಾರದಾಗಿ ವಿಧಿಸಿದನು. ಆದರೆ ಸಮುದ್ರದ ಮೇಲೆ ಇಂಗ್ಲಂಡಿನದೇ ಆಧಿಪತ್ಯವಿದ್ದುದರಿಂದ ಈ ಶಾಸನದಿಂದ ಯುರೋಪದ ದೇಶಗಳಿಗೆ ವ್ಯಾಪಾರದ ಬಿಕ್ಕಟ್ಟು ಒದಗಿತು. ಆದಕ್ಕಾಗಿ ಈ ಶಾಸನವನ್ನು ಕಿತ್ತೊಗೆಯಲು ಯುರೋಪದ ರಾಷ್ಟ್ರಗಳು ಬಗೆದುವು. ಸ್ಪೇನ ಮತ್ತು ಪೋರ್ತುಗಾಲಗಳಲ್ಲಿ ನೆಪೋಲಿಯನನ ಆಧಿಪತ್ಯದ ವಿರುದ್ಧವಾಗಿ ಜನರು ಆಂದೋಲನವನ್ನು ಆರಂಭಿಸಿದರು. ಅವರಿಗೆ ನೆರವಾಗಲು ಸರ ಆರ್ಥರ್ ವೆಲಸ್ಲಿಯ (ವೆಲಿಂಗ್ಟನ್) ಕೈಕೆಳಗೆ ಇಂಗ್ಲಂಡು ದಂಡನ್ನು ಕಳುಹಿತು. ಸ್ಪೇನದಲ್ಲಿ ಸ್ಪ್ಯಾನಿಯರ್ಡ್ಸ ಮತ್ತು ಇಂಗ್ಲಿಶರೊಡನೆ ಫ್ರೆಂಚ ಸೈನ್ಯವು ಕಾದುತ್ತಿರುವಾಗ, ಅತ್ತ ನೆಪೋಲಿಯನನು ೫ ಲಕ್ಷ ಸೇನೆಯೊಂದಿಗೆ ರಶಿಯದ ಮೇಲೆ ದಂಡೆತ್ತಿಹೋದನು (೧೮೧೨).

ಆದರೆ ಅದರಲ್ಲಿ ಈತನು ಪರಿಪರಿಯ ಬವಣೆಗಳಿಗೆ ತುತ್ತಾಗಿ ಹಿಂದಿರುಗಬೇಕಾಯಿತು. ತಿರುಗಿ ಬರುವಾಗ ಮಾರ್ಗದಲ್ಲಿ ಲಿಪಝಿಗ್ ಎಂಬ ಸ್ಥಳದಲ್ಲಿ ಆಸ್ಟ್ರಿಯಾ, ಪ್ರಶಿಯಾ ಮತ್ತು ರಶಿಯಾ ಇವು ಈತನನ್ನು ಸೋಲಿಸಿದುವು. ಸ್ಪೇನ ಮತ್ತು ಪೋರ್ತುಗಾಲದಲ್ಲಿಯೂ ನೆಪೋಲಿಯನನ ಸೈನ್ಯವು ಸೋತು ಹಿಂದೆಗೆಯಿತು. ಕೊನೆಗೆ ಮಿತ್ರರಾಷ್ಟ್ರಗಳ ಸೈನ್ಯಗಳು ಪ್ಯಾರಿಸ ಪಟ್ಟಣದ ವರೆಗೆ ನುಗ್ಗಿ ಈತನಿಂದ ರಾಜ್ಯತ್ಯಾಗವನ್ನು ಮಾಡಿಸಿದುವು. ಅನಂತರ ಈತನನ್ನು ಸೆರೆಹಿಡಿದು ಎಲ್ಬಾ ದ್ವೀಪದಲ್ಲಿ ಇಟ್ಟರು (೧೮೧೪). ಆದರೆ ನಾಲ್ಕು ತಿಂಗಳಲ್ಲಿಯೆ ಈತನು ಅಲ್ಲಿಂದ ಜಾರಿದನು. ದೊಡ್ಡ ದಂಡನ್ನು ಕೂಡಿಸಿ ಇಂಗ್ಲಿಶ್ ಮತ್ತು ಪ್ರಶಿಯನ್ ಸೇನೆಗಳನ್ನು ಸೋಲಿಸಲು ಬೆಲ್ಜಮುದತ್ತ ಪ್ರಯಾಣ ಮಾಡಿದನು. ಆಗ ವೆಲಿಂಗ್ಟನನು ವಾಟರ್ಲೂ ಎಂಬಲ್ಲಿ ಇಂಗ್ಲಿಶ್ ಮತ್ತು ಪ್ರಶಿಯನ್ ಸೈನ್ಯದ ಸಾಹಾಯ್ಯದಿಂದ ಈತನನ್ನು ಸೋಲಿಸಿದನು (೧೮೧೫ ಜೂನ). ಆ ಮೇಲೆ ಮಿತ್ರರಾಷ್ಟ್ರದವರು ಈತನನ್ನು ಸೇಂಟ ಹೆಲೇನಾ ದ್ವೀಪದಲ್ಲಿ ಬಂಧಿಸಿ ಇಟ್ಟರು. ಸೆರೆಯಲ್ಲಿರುವಾಗಲೆ ೧೮೨೧ರಲ್ಲಿ ನೆಪೋಲಿಯನನು ಮರಣಾಧೀನನಾದನು.

ವೆಲಿಂಗ್ಟನ್—(ಸರ ಆರ್ಥರ ವೆಲಸ್ಲಿ ೧೭೬೯—೧೮೫೨). ವಿಖ್ಯಾತವೀರ, ಉತ್ತಮ ಸೇನಾನಾಯಕ ಮತ್ತು ಪ್ರಮುಖ ರಾಜ್ಯತಂತ್ರಜ್ಞನೆಂದು ಈತನು ಹೆಸರು ಪಡೆದವನಾಗಿದ್ದಾನೆ. ಆರ್ಥರ ವೆಲ್ಲಸ್ಲಿ ೧೭೬೯ರಲ್ಲಿ ಜನ್ಮವೆತ್ತಿದನು. ಬಾಲ್ಯದಲ್ಲಿ ಸೈನಿಕ ಶಿಕ್ಷಣವನ್ನು ಪಡೆದು ೧೭೮೭ರಲ್ಲಿ ಸೇನಾ ವಿಭಾಗದಲ್ಲಿ ಸೇರಿದನು. ಈತನನ್ನು ಮೊದಲು ಹಿಂದುಸ್ಥಾನಕ್ಕೆ ಕಳುಹಿದರು. ಇಲ್ಲಿ ಈತನು ಅನೇಕ ಯುದ್ಧಗಳಲ್ಲಿ ಪರಾಕ್ರಮವನ್ನು ಪ್ರಕಟಿಸಿದನು. ೧೮೦೫ರಲ್ಲಿ ಹಿಂದುಸ್ಥಾನದಿಂದ ಮರಳಿದ ಬಳಿಕ ಈತನನ್ನು ಫ್ರೆಂಚ ಸೇನೆಯೊಡನೆ ಹೋರಾಡಲು ಸ್ಪೇನ ಮತ್ತು ಪೋರ್ತುಗಾಲಗಳಲ್ಲಿ ಕಳುಹಿದರು (ಸ್ಪೇನ ದ್ವೀಪಕಲ್ಪದ ಯುದ್ಧ). ಅಲ್ಲಿ ಈತನು ಸೂಲ್ಟನ ನಾಯಕತ್ವದಲ್ಲಿರುವ ಫ್ರೆಂಚ ಸೇನೆಯನ್ನು ಹಲವು ಕಾಳೆಗಗಳಲ್ಲಿ ಸೋಲಿಸಿ ಅದನ್ನು ಸ್ಪೇನದಿಂದ ಹೊರಗೆ ತಳ್ಳಿದನು (೧೮೧೪). ೧೮೦೯ರಲ್ಲಿ ಟೆಲಾವ್ಹೆರಾ ಸಮರದಲ್ಲಿ ಪರಾಕ್ರಮವನ್ನು ಪ್ರಕಟಿಸಿದುದಕ್ಕಾಗಿ ಈತನನ್ನು ವೆಲಿಂಗ್ಟನದ ಡ್ಯೂಕನನ್ನು ಮಾಡಿದರು. ವಾಟರ್ಲೂ ಕಾಳೆಗದಲ್ಲಿ (೧೮೧೫) ಈತನು ನೆಪೋಲಿಯನನನ್ನು ಸೋಲಿಸಿದನು. ಈ ಶೂರ ಕೃತಿಯಿಂದ ಈತನ ಕೀರ್ತಿಯೂ ಖ್ಯಾತಿಯೂ ಬಹುವಾಗಿ ಬೆಳೆಯಿತು. ಮುಂದೆ ಈತನು ಇಂಗ್ಲಂಡಿನ ಅಂತರಂಗದ ಆಡಳಿತದತ್ತ ಲಕ್ಷ್ಯವನ್ನು ಹೊರಳಿಸಿದನು. ೧೮೨೮ರಿಂದ ೧೮೩೦ರ ವರೆಗೆ ಇಂಗ್ಲಂಡಿನ ಮುಖ್ಯ ಮಂತ್ರಿಯಾಗಿದ್ದನು. ಕೆಥಲಿಕ ಜನರ ಮೇಲಿನ ಧಾರ್ಮಿಕ ನಿರ್ಬಂಧಗಳು ಹೋಗಬಾರದು; ಪಾರ್ಲಿಮೆಂಟಿನಲ್ಲಿ ಸುಧಾರಣೆ ಮಾಡುವ ಅಗತ್ಯವಿಲ್ಲ ಎಂದು ಈತನ ಅಭಿಪ್ರಾಯವಿದ್ದಿತು. ಆದರೂ ಈ ವಿಷಯದಲ್ಲಿ ಈತನಿಗೆ ಜನ ವಿರೋಧವಿದ್ದುದರಿಂದ ಈತನು ತನ್ನ ಹಟವನ್ನು ಸ್ವಲ್ಪ ಬದಿಗಿರಿಸಿದನು. ೧೮೪೨ರಿಂದ ದೈವಾಧೀನನಾಗುವವರೆಗೆ ಈತನು ಇಂಗ್ಲಂಡಿನ ಮುಖ್ಯ ಸೇನಾಪತಿಯಾಗಿದ್ದನು. ಈತನು ೧೮೫೨ರಲ್ಲಿ ೮೩ನೆಯ ವಯಸ್ಸಿಗೆ ತೀರಿದನು.

# ಪರಿಶಿಷ್ಟ ೨.

## ೧೮ನೆಯ ಶತಕದಲ್ಲಿಯ ಮಹತ್ವದ ಪ್ರಶ್ನೆಗಳು.

೧. ೧ನೆಯ ಮತ್ತು ೨ನೆಯ ಜಾರ್ಜರ ಆಳಿಕೆಗಳಲ್ಲಿ ಮುಖ್ಯ ಮಂತ್ರಿಯ ನಾಯಕತ್ವವು ಮತ್ತು ಕೆಬಿನೆಟ ಪದ್ಧತಿ ಹೆಚ್ಚಾಗಿ ಬಳಕೆಗೆ ಬರಲು ಕಾರಣವೇನು?

೨. ಆಸ್ಟ್ರಿಯದ ಪಟ್ಟದ ಬಾಧ್ಯಸ್ಥಿಕೆಯ ಯುದ್ಧವು ಪ್ರಾರಂಭವಾಗಲು ಕಾರಣವೇನು? ಅದರಲ್ಲಿ ಇಂಗ್ಲಂಡಿನ ಹಿತಸಂಬಂಧಗಳು ಯಾವುವು ಎಂಬುದನ್ನು ವಿವರಿಸಿರಿ.

೩. ೧೮ನೆಯ ಶತಕದಲ್ಲಿ ವ್ಯಾಪಾರ, ಉಪನಿವೇಶಗಳು ಮತ್ತು ಅಂಕಿತ ಪ್ರದೇಶಗಳು ಇವುಗಳಿಗಾಗಿ ಯಾವ ಯಾವ ರಾಷ್ಟ್ರಗಳೊಡನೆ ಇಂಗ್ಲಂಡು ಹೋರಾಡಬೇಕಾಯಿತು? ಅವುಗಳ ಪರಿಣಾಮವೇನು?

೪. ಸಪ್ತವಾರ್ಷಿಕ ಯುದ್ಧದ ಕಾರಣಗಳು ಯಾವುವು? ಈ ಯುದ್ಧದಲ್ಲಿ ಯಾವ ಯಾವ ಎಡೆಯಲ್ಲಿ ಮಹತ್ವದ ಕಾಳಗಗಳಾದುವು? ಅವುಗಳಲ್ಲಿ ಪರಾಕ್ರಮವನ್ನು ಮೆರೆಯಿಸಿದವರು ಯಾರು? ಈ ಯುದ್ಧದಿಂದ ಯಾವ ಪರಿಣಾಮಗಳು ಉಂಟಾದುವು?

೫. ಕೆಳಗಿನ ವಿಷಯಗಳನ್ನು ಕುರಿತು ಟಿಪ್ಪಣಿಗಳನ್ನು ಬರೆಯಿರಿ:—(೧) ಸೌಥ್ ಸೀ ಬಬಲ್; (೨) ಬರ್ಲಿನ್ ಡಿಕ್ರಿ ಮತ್ತು ಕೌನ್ಸಿಲ್ ಆರ್ಡರ್ಸ; (೩) ಡಿರೆಕ್ಟರಿ; (೪) ೧೭೧೫ ಮತ್ತು ೧೭೪೫ರಲ್ಲಿಯ ಜೆಕೊಬಾಯಿಟ ದೊಂಬೆಗಳು; (೫) ವಿಲ್ಕ್ಸನ ಪ್ರಕರಣವು.

೬. ೩ನೆಯ ಜಾರ್ಜನ ಸ್ವಭಾವವು ಮತ್ತು ನೀತಿ ಯಾವ ಬಗೆಯದು ಆಗಿತ್ತು? ಅದರಿಂದ ಇಂಗ್ಲಂಡಿಗೆ ಆದುದು ಲಾಭವೊ ಹಾನಿಯೊ?

೭. ಕೆಳಗಿನ ಪುರುಷರ ಬಗೆಗೆ ವೃತ್ತಾಂತವನ್ನು ಬರೆಯಿರಿ:—(೧) ವಾಲಪೋಲ್; (೨) ಹಿರಿಯ ಪಿಟ್; (೩) ಕಿರಿಯ ಪಿಟ್; (೪) ಜಾರ್ಜ ವಾಶಿಂಗ್‌ಟನ್; (೫) ನೆಪೋಲಿಯನ್; (೬) ವೆಲಿಂಗ್ಟನ್; (೭) ವಿಲ್ಬರಫೋರ್ಸ; (೮) ವೆಲ್ಸ್ಲಿ.

೮. ಇಂಗ್ಲಂಡು ಮತ್ತು ಇಂಗ್ಲಂಡಿನ ಒಕ್ಕಲುನಾಡುಗಳಲ್ಲಿ (ವಸಾಹತುಗಳಲ್ಲಿ) ವೈಮನಸ್ಸು ಉಂಟಾಗಲು ಯಾವ ಕಾರಣಗಳು ಸಂಭವಿಸಿದುವು? ಒಕ್ಕಲುನಾಡುಗಳೊಡನೆ ನಡೆದ ಸಮರದಲ್ಲಿ ಮಹತ್ವದ ಕಾರ್ಯವನ್ನು ಯಾರು ಮಾಡಿದರು? ಈ ಯುದ್ಧದ ಪರಿಣಾಮಗಳೇನು?

೯. ಫ್ರಾನ್ಸಿನ ರಾಜ್ಯಕ್ರಾಂತಿಯ ಕಾರಣಗಳನ್ನು ಹೇಳಿರಿ. ಈ ರಾಜ್ಯಕ್ರಾಂತಿಯಿಂದ ಫ್ರಾನ್ಸಿನಲ್ಲಿ ಯಾವ ಮಾರ್ಪಾಟಗಳು ಒದಗಿದುವು? ಈ ರಾಜ್ಯಕ್ರಾಂತಿಯ

ವಿಷಯದಲ್ಲಿ ಇಂಗ್ಲಂಡಿನ ನೀತಿಯೇನಿದ್ದಿತು? ಅದನ್ನನುಸರಿಸಿ ಇಂಗ್ಲಂಡು ಯಾವ ಉಪಾಯಗಳನ್ನು ಯೋಜಿಸಿತು?

೧೦. ಫ್ರೆಂಚ ರಾಜ್ಯಕ್ರಾಂತಿಯ ಸಂದರ್ಭದಲ್ಲಿ ಇಂಗ್ಲಂಡ್-ಫ್ರಾನ್ಸುಗಳ ನಡುವೆ ಸಂಭವಿಸಿದ ಯುದ್ಧದಲ್ಲಿ ಯಾವ ಮಹತ್ವದ ಕಾಳೆಗಗಳು ಎಲ್ಲಿ ನಡೆದುವು? ಅವುಗಳಲ್ಲಿ ಹೆಚ್ಚಿನ ಕೆಲಸಗಳನ್ನು ಮಾಡಿದವರು ಯಾರು?

೧೧. ನೆಪೋಲಿಯನನಿಗೆ ಕೊನೆಗೆ ಸೋಲಾಗಲು ಕಾರಣಗಳೇನು?

೧೨. ಔದ್ಯೋಗಿಕ ಕ್ರಾಂತಿಯೆಂದರೇನು? ಈ ಕ್ರಾಂತಿ ಒದಗಲು ಯಾವ ಘಟನೆಗಳು ಕಾರಣವಾದುವು? ಈ ಕ್ರಾಂತಿಯಿಂದ ಯಾವ ಪರಿಣಾಮಗಳು ಉಂಟಾದುವು?

೧೩. ೧೮ನೆಯ ಶತಕದಲ್ಲಿ ಇಂಗ್ಲಂಡು-ಐರ್ಲಂಡುಗಳ ಸಂಬಂಧಗಳು ಹೇಗೆ ಇದ್ದುವು? ಈ ಎರಡು ದೇಶಗಳ ಪಾರ್ಲಿಮೆಂಟಿನ ಏಕೀಕರಣವು ಎಂದು ಮತ್ತು ಏಕೆ ಉಂಟಾಯಿತು? ಅದರಿಂದ ಯಾವ ಪರಿಣಾಮಗಳು ಒದಗಿದುವು?

೧೪. ೧೮ನೆಯ ಶತಕದಲ್ಲಿ ಇಂಗ್ಲಿಶ್ ಸಾಮ್ರಾಜ್ಯವು ಹೇಗೆ ವಿಸ್ತರಿಸಿತು ಎಂಬುದನ್ನು ವಿವರಿಸಿರಿ.

೧೫. ೧೮ನೆಯ ಶತಕದಲ್ಲಿ ಇಂಗ್ಲಂಡಿನ ಸಾಮಾಜಿಕ ಸ್ಥಿತಿ ಹೇಗೆ ಇದ್ದಿತು, ವಿವರಿಸಿರಿ.

೧೬. ಇಂಗ್ಲಂಡಿನ ೧೬೮೮ರಲ್ಲಿಯ ರಾಜ್ಯಕ್ರಾಂತಿ ಮತ್ತು ಫ್ರೆಂಚ ರಾಜ್ಯಕ್ರಾಂತಿ ಇವೆರಡನ್ನು ತುಲನೆ ಮಾಡಿರಿ.

---

# ೨೨ನೆಯ ಪ್ರಕರಣವು

## ನಾಲ್ಕನೆಯ ಜಾರ್ಜ

ಜನ್ಮವು ೧೭೬೨; ರಾಜ್ಯಾರೋಹಣವು (೫೮ನೆಯ ವರ್ಷದಲ್ಲಿ) ೧೮೨೦;

ಮೃತ್ಯು ೧೮೩೦.

(೧೮೨೦— ೧೮೩೦)

### ಮಹತ್ವದ ಇಸ್ವಿಗಳು

೧೮೨೦ ಕೆಟೊ ಸ್ಟ್ರೀಟಿನಲ್ಲಿಯ ಒಳಸಂಚು.

೧೮೨೧—೨೭ ಗ್ರೀಕ ಮತ್ತು ತುರ್ಕಸ್ಥಾನ ಇವುಗಳ ನಡುವೆ ಯುದ್ಧವು.

೧೮೨೯ ಐರ್ಲಂಡಿನಲ್ಲಿಯ ರೋಮನ್ ಕೆಥಲಿಕ್ ಜನರ ಮೇಲಿನ ರಾಜಕೀಯ ನಿರ್ಬಂಧಗಳು ದೂರಮಾಡಲ್ಪಡುವುವು.

ನಾಲ್ಕನೆಯ ಜಾರ್ಜ—ಮೂರನೆಯ ಜಾರ್ಜನ ತರುವಾಯದಲ್ಲಿ ಅವನ ಹಿರಿಯ ಮಗನಾದ ಜಾರ್ಜನು ನಾಲ್ಕನೆಯ ಜಾರ್ಜನೆಂದು ಬಿರುದನ್ನು ತಳೆದು ತನ್ನ ವಯಸ್ಸಿನ ೫೮ನೆಯ ವರ್ಷದಲ್ಲಿ ಇಂಗ್ಲಂಡಿನ ಪಟ್ಟಕ್ಕೆ ಬಂದನು. ಇವನು ಪಟ್ಟಕ್ಕೆ ಬರುವ ಮೊದಲು ಒಂಬತ್ತು ವರ್ಷಗಳ ವರೆಗೆ, ೩ನೆಯ ಜಾರ್ಜನು ಭ್ರಮಿಷ್ಟನಾದುದರಿಂದ, ರಾಜ್ಯಕಾರಭಾರವನ್ನು ನೋಡುತ್ತಿದ್ದನು. ೪ನೆಯ ಜಾರ್ಜನು ಸೋಮಾರಿಯೂ ಸ್ವಚ್ಛಂದಿಯೂ ವಿಲಾಸಿಯೂ ಆಗಿದ್ದನು. ಪಟ್ಟಕ್ಕೆ ಬಂದ ಬಳಿಕ ಅವನು ಸ್ಕಾಟಲಂಡ್, ಐರ್ಲಂಡ್ ಮತ್ತು ಹನೋವರ ಈ ಸ್ಥಳಗಳಲ್ಲಿ ಪ್ರವಾಸಮಾಡಿ ಬಂದನು. ಅಲ್ಲಿಯ ಜನರು ಅವನಿಗೆ ಬಹು ಉತ್ಸಾಹದಿಂದ ಸ್ವಾಗತವನ್ನಿತ್ತರು.



ನಾಲ್ಕನೆಯ ಜಾರ್ಜನು

ಜಾರ್ಜನು ಕರೊಲಾಯಿನ್ ಆಫ್ ಬ್ರನ್ಸ್‌ವಿಕ್ ಎಂಬವಳನ್ನು ೧೭೯೫ರಲ್ಲಿ ಮದುವೆಯಾಗಿದ್ದನು. ಆದರೆ ಅವನಿಗೂ

ಅವನ ಹೆಂಡತಿಗೂ ಕೂಡಿ ನಡೆಯಲಿಲ್ಲ. ಆದುದರಿಂದ ಅವಳು ಅವನಿಂದ್ರ ಬೇರೆ ಯಾಗಿ ಇರುತ್ತಿದ್ದಳು. ಮುಂದೆ ಅವಳು ಇಟಲಿಗೆ ಇರಲು ಹೋದಳು. ಜಾರ್ಜ ನು ಪಟ್ಟಕ್ಕೆ ಬಂದ ಬಳಿಕ ಅವಳೊಡನೆ ಘಟಸ್ಫೋಟಮಾಡಿಕೊಳ್ಳುವ ವಿಷಯ ದಲ್ಲಿ ಬಿಲ್ಲನ್ನು ಪಾರ್ಲಿಮೆಂಟಿನಲ್ಲಿ ಪಾಸು ಮಾಡಿಕೊಳ್ಳಲು ಪ್ರಯತ್ನಿಸಿದನು; ಆದರೆ ಅವನಿಗೆ ಈ ಕಾರ್ಯದಲ್ಲಿ ಯಶಸ್ಸು ದೊರೆಯಲಿಲ್ಲ. ಜಾರ್ಜನು ರಾಜನಾದ ಬಳಿಕ ಕರೊಲಾಯಿನ್ ಇವಳು ಇಂಗ್ಲಂಡಿಗೆ ಬಂದು ರಾಣಿಯೆಂದು ರಾಜ್ಯಾಭಿ ಷೇಕವನ್ನು ಮಾಡಿಸಿಕೊಳ್ಳಲು ಪ್ರಯತ್ನಿಸಿದಳು. ಆದರೆ ಈ ಪ್ರಯತ್ನದಲ್ಲಿ ಅವಳಿಗೆ ಅಪಮಾನವಾದುದರಿಂದ ದುಃಖಗೊಂಡು ಬೇನೆಗೆ ತುತ್ತಾಗಿ ಕೆಲವು ದಿನಗಳಲ್ಲಿಯೆ ಮರಣಹೊಂದಿದಳು.

**ನಾಲ್ಕನೆಯ ಜಾರ್ಜನೂ ಅವನ ಮಂತ್ರಿಗಳೂ**—ಮೂರನೆಯ ಜಾರ್ಜನ ಆಳ್ಕೆಯಲ್ಲಿ ೧೮೧೨ರಿಂದ **ಲಾರ್ಡ ಲಿವರ್‌ಪೂಲ್** ಎಂಬ ಟೋರಿ ಪಕ್ಷದ ಪ್ರಮುಖನು ಮುಖ್ಯ ಮಂತ್ರಿಯಾಗಿದ್ದನು. ಅವನನ್ನೇ ಜಾರ್ಜನು ತನ್ನ ಮುಖ್ಯಮಂತ್ರಿಯಾಗಿ ನಿಯೋಜಿಸಿದನು. ಲಾರ್ಡ ಲಿವರ್‌ಪೂಲನು ೧೮೨೭ರ ವರೆಗೆ ಮುಖ್ಯ ಮಂತ್ರಿಯಾಗಿದ್ದನು. ತರುವಾಯದಲ್ಲಿ ಕನಿಂಗ್ (೧೮೨೭), ಲಾರ್ಡ್ ಗೋಡ್‌ರಿಚ್ (೧೮೨೭), ಡ್ಯೂಕ್ ಆಫ್ ವೆಲಿಂಗ್ಟನ್ (೧೮೨೮—೧೮೩೦) ಈ ಟೋರಿ ಪಕ್ಷದ ಪ್ರಮುಖರು ಮುಖ್ಯ ಮಂತ್ರಿಗಳಾದರು. ಜಾರ್ಜನ ಆಳ್ಕೆಯಲ್ಲಿ ಇಂಗ್ಲಂಡಿನ ಅಂತಃಸ್ಥ ಕಾರಭಾರದ ಮಂತ್ರಿಯಾದ **ಸರ್ ರಾಬರ್ಟ ಪೀಲ** ಮತ್ತು ವ್ಯಾಪಾರ ವಿಷಯದ ಮಂತ್ರಿಯಾದ **ಹಸ್ಕಿಸನ್** ಈ ಟೋರಿ ಪಕ್ಷದ ಮಂತ್ರಿಗಳು ಇಂಗ್ಲಂಡಿನ ಅಂತಃಸ್ಥ ಮತ್ತು ವ್ಯಾಪಾರ ವಿಷಯಕ ಕಾರ ಭಾರದ ವಿಷಯದಲ್ಲಿ ಮಹತ್ವದ ಸುಧಾರಣೆಗಳನ್ನು ಮಾಡಿದರು.

ನಾಲ್ಕನೆಯ ಜಾರ್ಜನ ಆಳ್ಕೆಯಲ್ಲಿ ಪಾರ್ಲಿಮೆಂಟಿನ ಸುಧಾರಣೆ, ರೋಮನ್ ಕಥಲಿಕರ ಮೇಲಿನ ನಿರ್ಬಂಧಗಳನ್ನು ದೂರಗೊಳಿಸುವುದು ಮತ್ತು ಅನಿರ್ಬಂಧ ವ್ಯಾಪಾರ ಈ ಪ್ರಶ್ನೆಗಳು ಪಾರ್ಲಿಮೆಂಟಿನ ಮುಂದೆ ಬರತೊಡಗಿದುವು. ಈ ಪ್ರಶ್ನೆ ಗಳ ವಿಷಯದಲ್ಲಿ ಮಂತ್ರಿ ಮಂಡಳದಲ್ಲಿ ಮುಂದೆ ಮತಭೇದವಾಗತೊಡಗಿತು, ಆದುದರಿಂದ ಟೋರಿ ಪಕ್ಷದಲ್ಲಿ ಉಪಪಕ್ಷಗಳು ಹುಟ್ಟಿದುವು.

**ಕಟೋ ಸ್ಟ್ರೀಟ್ ಒಳಸಂಚು ೧೮೨೦**—ನಾಲ್ಕನೆಯ ಜಾರ್ಜನು ಪಟ್ಟಕ್ಕೆ ಬಂದ ಸಮಯದಲ್ಲಿ ವ್ಯಾಪಾರವು ಮಂದವಾಗಿದ್ದಿತು, ನಿರುದ್ಯೋಗಿತೆ ಮತ್ತು ಬರವು ಉಂಟಾಗಿದ್ದುವು. ಅದರಿಂದ ಬಡಜನರ ಸ್ಥಿತಿ ಬಹಳವಾಗಿ ಕೆಟ್ಟಿದ್ದಿತು. ರಾಜನ ಮಂತ್ರಿಗಳು ಯೋಗ್ಯವಾಗಿ ರಾಜ್ಯಕಾರಭಾರವನ್ನು ಮಾಡುತ್ತಿರುವುದಿಲ್ಲ

ವಾದುದರಿಂದ ತಮಗೆ ಈ ಕಷ್ಟದ ಸ್ಥಿತಿ ಬಂದಿತೆಂದು ಕೆಲವರಿಗೆ ಎನಿಸಿತು. ಲಂಡನಿನಲ್ಲಿ ಕೆಲವು ತಲೆತಿರುಕರು ಒಂದು ಒಳಸಂಚನ್ನು ಹೂಡಿದರು. ಥಿಸಲ್‌ವುಡ್ ಎಂಬವನು ಅವರ ನಾಯಕನಾಗಿದ್ದನು. ಮಂತ್ರಿಮಂಡಲದಲ್ಲಿಯ ಎಲ್ಲ ಮಂತ್ರಿಗಳನ್ನು ಕೊಲ್ಲುವುದು, ಲಂಡನಿನಲ್ಲಿಯ ಎಲ್ಲ ಸೆರೆಮನೆಗಳನ್ನು ಒಡೆದು ಒಳಗಿನ ಬಂದಿಗಳನ್ನು ಮುಕ್ತಗೊಳಿಸುವುದು, ಬ್ಯಾಂಕ್ ಆಫ್ ಇಂಗ್ಲಂಡ್ ಎಂಬ ಸರಕಾರದ ಧನಕೋಶವನ್ನು ವಶಪಡಿಸಿಕೊಳ್ಳುವುದು, ಮತ್ತು ಇಂಗ್ಲಂಡಿನಲ್ಲಿ ಹೊಸದೊಂದು ರಾಜ್ಯಘಟನೆಯನ್ನು ನಿರ್ಮಿಸುವುದು, ಇದು ಆ ಸಂಚುಗಾರರ ಉದ್ದೇಶವಾಗಿತ್ತು. ಆದರೆ ಈ ಸಂಚಿನ ಸುದ್ದಿ ಗೊತ್ತಾಗಿ ಥಿಸಲ್‌ವುಡ್ಡನೂ ಅವನ ಅನುಯಾಯಿಗಳೂ ಹಿಡಿಯಲ್ಪಟ್ಟು ಶೂಲಕ್ಕೇರಿಸಲ್ಪಟ್ಟರು. ಲಂಡನಿನಲ್ಲಿಯ ಕೆಟೋ ಸ್ಟ್ರೀಟಿನಲ್ಲಿ ಒಂದು ಮನೆಯಲ್ಲಿ ಈ ಸಂಚುಗಾರರು ನೆರೆಯುತ್ತಿದ್ದರು. ಆದುದರಿಂದ ಈ ಒಳಸಂಚಿಗೆ **ಕೆಟೋ ಸ್ಟ್ರೀಟ್ ಒಳಸಂಚು** ಎಂದು ಹೆಸರು ಬಂದಿತು.

**ಇಂಗ್ಲಂಡಿನಲ್ಲಿಯ ಅಂತಃಸ್ಥ ಸುಧಾರಣೆ—ಫೌಜದಾರಿ ಅಪರಾಧಗಳ ಕಾಯ್ದೆ**—೧೮೨೨ರಲ್ಲಿ ಸರ್ ರಾಬರ್ಟ ಪೀಲನು ಇಂಗ್ಲಂಡಿನ ಅಂತಃಸ್ಥಕಾರಭಾರದ ಮಂತ್ರಿಯಾಗಿದ್ದನು (Home Secretary for England). ಅವನು ಫೌಜದಾರಿ ಅಪರಾಧಗಳ ಕಾಯ್ದೆಯಲ್ಲಿ ಇದ್ದ ದೋಷಗಳು ಹೋಗಬೇಕೆಂದು ಪಾರ್ಲಿಮೆಂಟಿನಿಂದ ಒಂದು ಕಾಯ್ದೆಯನ್ನು ಮಾಡಿಸಿದನು. ಈ ಕಾಯ್ದೆ ಆಗುವ ಮೊದಲು ಸುಮಾರು ೧೫೦ ಅಪರಾಧಗಳಿಗೆ ಮರಣದ ಶಿಕ್ಷೆಯಾಗುತ್ತಿತ್ತು. ಅವುಗಳಲ್ಲಿ ಕೆಲವು ಅಪರಾಧಗಳಂತೂ ಕಿರುಕುಳವಾಗಿದ್ದುವು. ಮುಖಕ್ಕೆ ಬಣ್ಣವನ್ನು ಹಚ್ಚಿಕೊಂಡು ಬೀದಿಗಳಲ್ಲಿ ಅಡ್ಡಾಡುವುದು ಅಥವಾ ವೆಸ್ಟಮಿನ್‌ಸ್ಟರ ಪೂಲನ್ನು ಅಂದಗೆಡಿಸುವುದು ಇಂತಹ ಅಪರಾಧಗಳಿಗೂ ಮರಣದ ಶಿಕ್ಷೆಯಿತ್ತು. ಇಂತಹ ಕ್ಷುಲ್ಲಕ ಅಪರಾಧಗಳಿಗೋಸುಗ ಅಪರಾಧಿಗಳು ಮರಣಕ್ಕೆ ಗುರಿಯಾಗುವರೆಂದು ಜ್ಯೂರಿಯ ಜನರಿಗೆ ಈ ಅಪರಾಧಿಗಳು ನಿರ್ದೋಷಿಗಳೆಂದು ಹೇಳಬೇಕೆಂದು ಎನಿಸುತ್ತಿತ್ತು. ಕ್ಷುಲ್ಲಕ ಅಪರಾಧಗಳಿಗೋಸುಗವೂ ಮರಣದ ಶಿಕ್ಷೆಯಾಗುತ್ತಿದ್ದುದರಿಂದ ಕೊಲೆಸುಲಿಗೆಗಳಂತಹ ಭಯಂಕರ ಅಪರಾಧಗಳ ಕಡೆಗೆ ಜನರ ಪ್ರವೃತ್ತಿಯಾಗುತ್ತಿತ್ತು. ಆದುದರಿಂದ ಪೀಲನ ಸೂಚನೆಯಂತೆ ಪಾರ್ಲಿಮೆಂಟು ಫೌಜದಾರಿ ಅಪರಾಧಗಳ ವಿಷಯದಲ್ಲಿ ಹೊಸದೊಂದು ಕಾಯ್ದೆಯನ್ನು ಮಾಡಿತು ಮತ್ತು ಕಿರುಕುಳ ಅಪರಾಧಿಗಳಿಗಿದ್ದ ಮರಣದ ಶಿಕ್ಷೆಯನ್ನು ರದ್ದುಗೊಳಿಸಿತು (೧೮೨೪).

**ಪೋಲಿಸ್ ಪದ್ಧತಿ**—ಆ ತರುವಾಯದಲ್ಲಿ ಪೀಲನು ಅಪರಾಧಗಳು ಆಗ ಬಾರದೆಂದು ಮತ್ತು ಅಪರಾಧಗಳ ಶೋಧಗಳು ಬೇಗನೆ ಆಗಬೇಕೆಂದು ಅಶಕ್ತರೂ, ವೃದ್ಧರೂ, ಅಯೋಗ್ಯರೂ ಆದ ಕಾವಲುಗಾರರನ್ನು ಕೆಲಸದಿಂದ ತೆಗೆದು ಕಾರ್ಯ ಕ್ಷಮರಾದ ಜನರನ್ನು ನಿಯೋಜಿಸಿ "ಪೋಲಿಸ್ ಪದ್ಧತಿ"ಯನ್ನು ಅಸ್ತಿತ್ವದಲ್ಲಿ ತಂದನು (೧೮೨೯). ಈ ಪದ್ಧತಿಯನ್ನು ಪೀಲನು ಅಸ್ತಿತ್ವದಲ್ಲಿ ತಂದುದರಿಂದ ಈ ಹೊಸ ಪೋಲಿಸರಿಗೆ **ಪೀಲರ್ಸ್** ಮತ್ತು **ಬಾಬೀಜ** ಎಂಬ ಉಪನಾಮ ಗಳು ಬಂದುವು.

**ವ್ಯಾಪಾರೋದ್ಯೋಗಗಳ ವಿಷಯದಲ್ಲಿ ಕಾಯ್ದೆ**—ವ್ಯಾಪಾರ ವಿಷ ಯದ ಮಂತ್ರಿಯಾದ **ಹಸ್ಕಿಸನ್** ಇವನು ವ್ಯಾಪಾರೋದ್ಯೋಗಗಳ ಕಾಯ್ದೆಯಲ್ಲಿ ಸುಧಾರಣೆಯನ್ನು ಮಾಡಿದನು. ಅವನು ನವಿಗೇಶನ್ ಕಾಯ್ದೆಯಲ್ಲಿಯ ಎಷ್ಟೋ ಮಾತುಗಳನ್ನು ರದ್ದುಗೊಳಿಸಿದನು (೧೮೨೪). ಆದುದರಿಂದ ಪರಕೀಯರ ಹಡಗುಗಳೊಳಗಿಂದ ಇಂಗ್ಲಂಡಿನಲ್ಲಿ ಮಾಲನ್ನು ತರಲು ಶಕ್ಯವಾಯಿತು. ಈ ವರೆಗೆ ಪರದೇಶಗಳಿಂದ ಇಂಗ್ಲಂಡಿಗೆ ಬರುವ ಅನೇಕ ವಸ್ತುಗಳಿಗೋಸುಗ ಬಹಳ ಸುಂಕವು ತೆಗೆದುಕೊಳ್ಳಲ್ಪಡುತ್ತಿತ್ತು. ಆದರೆ ಹಸ್ಕಿಸನನು ಕಚ್ಚಾಮಾಲುಗಳ ಮೇಲಿನ ಸುಂಕದ ಪ್ರಮಾಣವನ್ನು ಕಡಿಮೆಮಾಡಿದನು (೧೮೨೪). ಅದರಿಂದ ಇಂಗ್ಲಿಶ್ ಕಾರಖಾನೆದಾರರಿಗೆ ಪಕ್ಕಾಮಾಲನ್ನು ಅಲ್ಪ ಬೆಲೆಯಿಂದ ಮಾರಲು ಅನುಕೂಲ ವಾಯಿತು. ಹಸ್ಕಿಸನನು ಇತರ ರಾಷ್ಟ್ರಗಳೊಡನೆ **ಪ್ರತಿಯೋಗಿ ವ್ಯಾಪಾರ ವಿಷಯಕ ಒಪ್ಪಂದವನ್ನು** (Reciprocity of Duties Bill) ಮಾಡಲು ಪಾರ್ಲಿಮೆಂಟಿನ ಅಪ್ಪಣೆಯನ್ನು ದೊರಕಿಸಿದನು. ಪರದೇಶಗಳಿಂದ ಬರುವ ಧಾನ್ಯದ ಮೇಲೆ ೧೮೧೫ರ ಕಾಯ್ದೆಯಿಂದ ಬಹಳ ಸುಂಕವು ತೆಗೆದುಕೊಳ್ಳಲ್ಪಡು ತ್ತಿತ್ತು, ಅದರಿಂದ ಧಾನ್ಯವು ಬಹು ತುಟ್ಟಿಯಾಗಿದ್ದಿತು. ಬರಗಾಲದಲ್ಲಂತೂ ಅದು ಬಹಳೇ ತುಟ್ಟಿಯಾಗುತ್ತಿದ್ದಿತು. ಆದುದರಿಂದ ಹಸ್ಕಿಸನನು ೧೮೨೮ರಲ್ಲಿ ದೇಶದಲ್ಲಿಯ ಧಾನ್ಯವು ತುಟ್ಟಿಯಾದರೆ ಪರರಾಷ್ಟ್ರಗಳಿಂದ ಬರುವ ಧಾನ್ಯದ ಮೇಲಿನ ಸುಂಕದ ಪ್ರಮಾಣವನ್ನು ಕಡಿಮೆಮಾಡುವ ಮತ್ತು ಧಾನ್ಯವು ಅಗ್ಗ ವಾದರೆ ಸುಂಕದ ಪ್ರಮಾಣವನ್ನು ಹೆಚ್ಚಿಸುವ ನೀತಿಯನ್ನು (Sliding scale) ಸ್ವೀಕರಿಸಿದನು.

ಕೂಲಿಕಾರರ ವರ್ಗದವರು ತಮ್ಮದೊಂದು ಸಂಘವನ್ನು ಸ್ಥಾಪಿಸಿಕೊಂಡರೆ ಅವರು ಫ್ರಾನ್ಸಿನಲ್ಲಿಯ ಕ್ರಾಂತಿಕಾರಿಗಳನ್ನು ಅನುಸರಿಸಬಹುದೆಂದು ಬಗೆದು ನೆಪೋಲಿಯನನೊಡನೆ ಯುದ್ಧವು ನಡೆದಾಗ ೧೭೯೯ ಮತ್ತು ೧೮೦೦ರಲ್ಲಿ

ಪಾರ್ಲಿಮೆಂಟು ಸಂಘಸಂಘಟನದ ವಿಷಯದಲ್ಲಿ ಕಾಯ್ದೆಗಳನ್ನು (Combination Acts) ಮಾಡಿತ್ತು. ಈ ಕಾಯ್ದೆಯಂತೆ ಸಂಘವನ್ನು ಸ್ಥಾಪಿಸುವುದೆಂದರೆ ಕಾಯ್ದೆಗೆ ವಿರುದ್ಧವಾಗಿ ಸಂಚನ್ನು ಮಾಡಿದಂತಾಗುವುದೆಂದು ನಿಶ್ಚಯಿಸಲ್ಪಟ್ಟಿತು. ಆದರೆ ಸಂಬಳವನ್ನು ಬೆಳೆಯಿಸುವುದು, ಕೆಲಸದ ಕಾಲವನ್ನು ಕಡಿಮೆ ಮಾಡುವದು ಮೊದಲಾದ ಸಂಗತಿಗಳನ್ನು ಕುರಿತು ಕೂಲಿಕಾರ ವರ್ಗದವರಿಗೆ ತಮ್ಮ ಉನ್ನತಿಗೋಸುಗ ತಮ್ಮ ಸಂಘಗಳನ್ನು (Trade Unions) ಸ್ಥಾಪಿಸಿಕೊಳ್ಳಲು ಶಕ್ಯವಾಗಬೇಕೆಂದು **ಜೋಸೆಫ್ ಹ್ಯೂಮ್** ಎಂಬವನ ಸೂಚನೆಯಿಂದ ಹಸ್ಕಿಸನನು ಕಾಂಬಿನೇಶನ್ ಕಾಯ್ದೆಯನ್ನು ಪಾರ್ಲಿಮೆಂಟಿನಿಂದ ರದ್ದುಮಾಡಿಸಿದನು (೧೮೨೪). ಈ ಕಾಯ್ದೆ ರದ್ದಾದರೂ ಕೂಲಿಕಾರರು ಸಂಪನ್ನು ಹೂಡುವುದು ಆ ಕಾಲದಲ್ಲಿ ಕಾಯ್ದೆಗೆ ವಿರುದ್ಧವಾದುದೆಂದು ತಿಳಿಯಲ್ಪಡುತ್ತಿತ್ತು.

**ವೆಲಿಂಗ್ಟನನ ಮಂತ್ರಿಮಂಡಲವು, ೧೮೨೮-೧೮೩೦** — ೧೮೨೮ರಲ್ಲಿ ವೆಲಿಂಗ್ಟನನು ಮುಖ್ಯ ಮಂತ್ರಿಯಾದನು. ೧೮೧೫ರಲ್ಲಿ ನೆಪೋಲಿಯನನು ಸೋತ ಬಳಿಕ ವೆಲಿಂಗ್ಟನನು ರಾಜಕಾರಣದಲ್ಲಿ ಲಕ್ಷ್ಯವನ್ನು ಹಾಕಲಾರಂಭಿಸಿದನು. ಅವನು ಟೋರಿ ಪಕ್ಷದವನಿದ್ದನು. ಅವನ ಮಂತ್ರಿಮಂಡಲದಲ್ಲಿ ಪೀಲ್ ಮತ್ತು ಹಸ್ಕಿಸನ್ ಇವರೂ ಮಂತ್ರಿಗಳಾಗಿದ್ದರು.

**ಟೆಸ್ಟ ಅಕ್ಟ ಮತ್ತು ಕಾರ್ಪೊರೇಶನ್ ಅಕ್ಟ ರದ್ದುಮಾಡಲ್ಪಟ್ಟವು, ೧೮೨೮** — ವೆಲಿಂಗ್ಟನನು ಮುಖ್ಯ ಮಂತ್ರಿ ಆಗಿರುವಾಗ ಟೆಸ್ಟ ಅಕ್ಟ ಮತ್ತು ಕಾರ್ಪೊರೇಶನ್ ಅಕ್ಟ ಇವು ರದ್ದುಮಾಡಲ್ಪಡಬೇಕೆಂದು ಪಾರ್ಲಿಮೆಂಟಿನ ಸಭೆಯಲ್ಲಿ ಕೆಲವು ಸದಸ್ಯರು ಬಿಲ್ಲುಗಳನ್ನು ತಂದರು. ಈ ಅಕ್ಟುಗಳು ೨ನೆಯ ಚಾರ್ಲಸನ ಆಳಿಕೆಯಲ್ಲಿ ಆಗಿದ್ದುವು. ಅದರಿಂದ ಇಂಗ್ಲಂಡಿನ ಎಪಿಸ್‌ಕೊಪೇಲಿಯನ್ ಪಂಥದವರಲ್ಲದ ನಾನ್ ಕನ್‌ಫಾರ್ಮಿಸ್ಟ, ಡಿಸೆಂಟರ್ಸ, ರೋಮನ್ ಕಥಲಿಕ್ ಮೊದಲಾದ ಜನರಿಗೆ ಸರಕಾರದ ಅಥವಾ ಮುನಿಸಿಪಲ್ ಚಾಕರಿಯನ್ನು ಮಾಡಲು ಮತ್ತು ಅಧಿಕಾರ ಸ್ಥಳಗಳನ್ನು ಸ್ವೀಕರಿಸಲು ಪ್ರತಿಬಂಧವಿದ್ದಿತು. ಅವರ ಮೇಲಿನ ಈ ನಿರ್ಬಂಧವು ದೂರವಾಗಬೇಕೆಂದು ಈ ಬಿಲ್ಲುಗಳು ಪಾರ್ಲಿಮೆಂಟಿನ ಸಭೆಯಲ್ಲಿ ತರಲ್ಪಟ್ಟಿದ್ದುವು. ವೆಲಿಂಗ್ಟನನು ಟೆಸ್ಟ ಮತ್ತು ಕಾರ್ಪೊರೇಶನ್ ಅಕ್ಟುಗಳನ್ನು ರದ್ದುಮಾಡಲು ಮೊದಮೊದಲು ಸಮ್ಮತಿಸಲಿಲ್ಲ. ಆದರೆ ಕೊನೆಯಲ್ಲಿ ಸಮ್ಮತಿಯನ್ನಿತ್ತು ಅವನ್ನು ರದ್ದುಗೊಳಿಸಿದನು (೧೮೨೮).

**ಕಥೊಲಿಕ್ ಜನರ ಮೇಲಿನ ನಿರ್ಬಂಧಗಳು ದೂರಮಾಡಲ್ಪಟ್ಟುವು** — ಇದೇ ಸಮಯದಲ್ಲಿ ಐರ್ಲಂಡಿನಲ್ಲಿ **ಡನಿಯಲ್ ಓಕಾನೆಲ್**

ಎಂಬವನ ನೇತೃತ್ವದಲ್ಲಿ ಒಂದು ಆಂದೋಲನವು ಪ್ರಾರಂಭವಾಗಿದ್ದಿತು. ಐರಿಶ್ ರೋಮನ್ ಕಥಲಿಕ್ ಜನರಿಗೆ ಪಾರ್ಲಿಮೆಂಟಿನ ಆಯ್ಕೆಯಲ್ಲಿ ಮತವನ್ನು ಕೊಡಲು ಅಧಿಕಾರವು ದೊರೆತಿತ್ತು. ಆದರೆ ಧಾರ್ಮಿಕ ವಿಷಯದಲ್ಲಿ ಇಂಗ್ಲಂಡಿನ ರಾಜನು ಮುಖ್ಯನಿರುವನೆಂದು ಪಾರ್ಲಿಮೆಂಟಿನಲ್ಲಿಯ ಪ್ರತಿಯೊಬ್ಬ ಸದಸ್ಯನು ಶಪಥವನ್ನು ಮಾಡಬೇಕಾಗುತ್ತಿತ್ತು. ಆದುದರಿಂದ ರೋಮನ್ ಕಥಲಿಕರಿಗೆ* ಪಾರ್ಲಿಮೆಂಟಿನ ಸದಸ್ಯರಾಗಲು ಶಕ್ಯವಿರಲಿಲ್ಲ. ಆದುದರಿಂದ ರೋಮನ್ ಕಥಲಿಕ್ ಜನರಿಗೂ ಪಾರ್ಲಿಮೆಂಟಿನ ಸದಸ್ಯರಾಗಲು ಶಕ್ಯವಾಗಬೇಕೆಂದು ಡನಿಯಲ್ ಓಕಾನೆಲನು ಪ್ರಯತ್ನಿಸಲಾರಂಭಿಸಿದನು. ಅವನು 'ಕಥಲಿಕ್



ಡನಿಯಲ್ ಓಕಾನೆಲ್

ಅಸೋಸಿಯೇಶನ್' ಎಂಬ ಸಂಸ್ಥೆಯನ್ನು ಸ್ಥಾಪಿಸಿದನು (೧೮೨೩). ಈ ಸಂಘದ ಪ್ರಸಾರವು ವೇಗದಿಂದ ಆಯಿತು. ಅದರ ಶಾಖೆಗಳು ಹಳ್ಳಿಹಳ್ಳಿಗಳಲ್ಲಿ

*ರೋಮನ್ ಕಥಲಿಕ್ ಪಂಥದವರಿಗೆ ಧಾರ್ಮಿಕ ವಿಷಯದಲ್ಲಿ ಪೋಪನು ಮುಖ್ಯನಾಗಿರುವನು.

ಸ್ಥಾಪಿಸಲ್ಪಟ್ಟುವು. ಈ ಸಂಸ್ಥೆಗಳಿಂದ ಐರಿಶ್ ಜನರು ಸಂಘಟಿತರಾದರು. ಡನಿಯಲ್ ಓಕಾನೆಲನು ಉತ್ತಮ ಮಾತುಗಾರನಾಗಿದ್ದನು. ಅವನು ತನ್ನ ಭಾಷಣದಿಂದ ಐರಿಶ್ ಜನರಲ್ಲಿ ಆತ್ಮವಿಶ್ವಾಸವನ್ನೂ ತೇಜವನ್ನೂ ಹುಟ್ಟಿಸಿದನು. ಐರಿಶ್ ರೋಮನ್ ಕಥಲಿಕರ ವಿರುದ್ಧವಾಗಿದ್ದ ಎಲ್ಲ ಕಾಯ್ದೆಗಳನ್ನು ರದ್ದು ಗೊಳಿಸುವುದೇ ಕಥಲಿಕ್ ಅಸೋಸಿಯೇಶನಿನ ಉದ್ದೇಶವಾಗಿತ್ತು. ಓಕಾನೆಲನು ಪಾರ್ಲಿಮೆಂಟಿನ ಸಭೆಯಲ್ಲಿ ಈ ಪ್ರಶ್ನೆ ಚರ್ಚಿಸಲ್ಪಡಬೇಕೆಂಬ ಉದ್ದೇಶದಿಂದ ೧೮೨೮ರಲ್ಲಿ ಪಾರ್ಲಿಮೆಂಟಿನ ಚುನಾವಣೆಯ ಸಮಯದಲ್ಲಿ ಕ್ಲೆಯೆರ್ ಪರಗಣೆಯಿಂದ ಉಮೇದ್ವಾರನಾಗಿ ನಿಂತನು. ಅವನಿಗೆ ಜನರ ಬೆಂಬಲವು ಇದ್ದುದರಿಂದ ಕಷ್ಟವಿಲ್ಲದೆ ಆರಿಸಿ ಬಂದನು. ಆದರೆ ಅವನು ರೋಮನ್ ಕಥಲಿಕ್ ಪಂಥದ್ದವನಾದುದರಿಂದ ಪಾರ್ಲಿಮೆಂಟಿನ ಸದಸ್ಯನಾಗಲು ಅವನಿಗೆ ಶಕ್ಯವಿರಲಿಲ್ಲ. ಓಕಾನೆಲನಿಗೆ ಪಾರ್ಲಿಮೆಂಟಿನ ಸದಸ್ಯನಾಗಲು ಶಕ್ಯವಾಗಲಿಲ್ಲವಾದುದರಿಂದ ಐರ್ಲಂಡಿನಲ್ಲಿ ತೀವ್ರವಾದ ಅಸಂತೋಷವು ಹುಟ್ಟಿತು. ಈ ಸಮಯದಲ್ಲಿ ವೆಲಿಂಗ್ಟನನು ಮುಖ್ಯ ಮಂತ್ರಿಯಾಗಿದ್ದನು. ಐರಿಶ್ ರೋಮನ್ ಕಥಲಿಕ್ ಜನರ ಮೇಲಿನ ಪ್ರತಿಬಂಧವು ದೂರವಾಗಬಾರದೆಂಬ ಅಭಿಪ್ರಾಯದವನು ಅವನಿದ್ದನು. ಆದರೆ ಐರ್ಲಂಡಿನಲ್ಲಿಯ ಬಿಕ್ಕಟ್ಟಿನ ಪರಿಸ್ಥಿತಿಯನ್ನು ಕಂಡು ಐರಿಶ್ ರೋಮನ್ ಕಥಲಿಕ್ ಜನರ ಮೇಲಿನ ನಿರ್ಬಂಧಗಳು ದೂರಮಾಡಲ್ಪಡದಿದ್ದರೆ ಅಲ್ಲಿ ಬಂಡು ಉಂಟಾಗಬಹುದೆಂದು ಬಗೆದು ಅವನು 'ಐರಿಶ್ ರೋಮನ್ ಕಥಲಿಕ್' ಜನರ ಮೇಲಿನ ನಿರ್ಬಂಧವನ್ನು ದೂರಮಾಡುವ ಬಿಲ್ಲನ್ನು (Catholic Emancipation Bill) ಪಾರ್ಲಿಮೆಂಟಿನಲ್ಲಿ ತಂದು ಅದನ್ನು ಪಾಸುಮಾಡಿಸಿಕೊಂಡನು (೧೮೨೯). ಇದರಿಂದ ರೋಮನ್ ಕಥಲಿಕ್ ಜನರಿಗೆ ಪಾರ್ಲಿಮೆಂಟಿನ ಸದಸ್ಯರಾಗಲು ಶಕ್ಯವಾಯಿತು.

**ಇಂಗ್ಲಂಡಿನ ಪರರಾಷ್ಟ್ರೀಯ ನೀತಿ**—೧೮೧೫ರಲ್ಲಿ ನೆಪೋಲಿಯನನ ಪರಾಭವವಾದ ಬಳಿಕ ಮಿತ್ರರಾಷ್ಟ್ರಗಳ ಪ್ರತಿನಿಧಿಗಳ ಪರಿಷತ್ತೊಂದು ವಿಯನ್ನಾ ಪಟ್ಟಣದಲ್ಲಿ ನೆರೆಯಿತು. ಈ ಪರಿಷತ್ತಿನಲ್ಲಿ ಆಸ್ಟ್ರಿಯದ ಮುಖ್ಯ ಮಂತ್ರಿಯಾದ **ಮಟರನಿಕ್** ಇವನು ಮತ್ತು ಇಂಗ್ಲಂಡಿನ ಪರರಾಷ್ಟ್ರೀಯ ಮಂತ್ರಿಯಾದ **ಲಾರ್ಡ್ ಕಸಲ್‌ರೇ** ಇವನು ಪ್ರಮುಖ ಭಾಗವನ್ನು ವಹಿಸಿದ್ದರು. ಈ ಪರಿಷತ್ತು ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾಗುವ ಮೊದಲು ಇದ್ದ ಯುರೋಪದಲ್ಲಿಯ ರಾಷ್ಟ್ರಗಳ ಸೀಮೆಗಳು ಸ್ಥಿರಗೊಳಿಸಲ್ಪಟ್ಟುವು. ೧೬ನೆಯ ಲುಯಿಯ ತಮ್ಮನಾದ ಲುಯಿಯೆಂಬವನಿಗೆ ೧೮ನೆಯ ಲುಯಿಯೆಂಬ ಬಿರುದಿನಿಂದ ಪಟ್ಟವು

ಕಟ್ಟಲ್ಪಟ್ಟಿತು. ಆ ಬಳಿಕ ಈ ವ್ಯವಸ್ಥೆಯನ್ನು ಮುರಿದು ಯುರೋಪದಲ್ಲಿ ಯಾವುದಾದರೂ ರಾಷ್ಟ್ರವು ಗೊಂದಲವನ್ನೆಬ್ಬಿಸಲು ಪ್ರಯತ್ನಿಸಿದರೆ ಅದರ ಪ್ರಯತ್ನವನ್ನು ನಿಷ್ಫಲಗೊಳಿಸಲು ಅನುಕೂಲವಾಗಬೇಕೆಂದೂ ಯುರೋಪದ ಬೇರೆ ಬೇರೆ ರಾಷ್ಟ್ರಗಳ ಪ್ರನಿಧಿಗಳಲ್ಲಿಯ ಸ್ನೇಹಸಂಬಂಧವು ದೃಢವಾಗಬೇಕೆಂದೂ ಯುರೋಪದ ರಾಷ್ಟ್ರಗಳ ಪ್ರತಿನಿಧಿಗಳ ಪರಿಷತ್ತನ್ನು ಆಗಾಗ ನೆರೆಯಿಸಬೇಕೆಂದು ನ್ನಿಶ್ಚಯಿಸಲ್ಪಟ್ಟಿತು. ಆ ಬಳಿಕ ೧೮೧೮ರಲ್ಲಿ ಆಸ್ಟ್ರಿಯದ ಮುಖ್ಯ ಮಂತ್ರಿಯಾದ ಮಟರನಿಕ್, ರಶಿಯದ ಬಾದಶಹನಾದ ಅಲೆಕಝಾಂಡರ, ಪ್ರಶಿಯಾ, ಫ್ರಾನ್ಸ್ ಮತ್ತು ಸ್ಪೇನ ಇವುಗಳ ಅರಸರು ಇವರೆಲ್ಲರೂ ತಮ್ಮದೊಂದು ಸಂಘವನ್ನು ಸ್ಥಾಪಿಸಿದರು. ಕ್ರೈಸ್ತಧರ್ಮದ ಉದಾತ್ತ ತತ್ವದಂತೆ ಎಲ್ಲೆಲ್ಲಿಯೂ ಶಾಂತಿಯನ್ನು ಇಡುವುದು ಈ ಸಂಘದ ಉದ್ದೇಶವಿದ್ದಿತೆಂದು ಈ ಸಂಘಕ್ಕೆ ಅವರು **ಹೋಲಿ ಅಲಾಯನ್ಸ್** ಎಂಬ ಹೆಸರನ್ನು ಕೊಟ್ಟರು. ಯುರೋಪದಲ್ಲಿಯ ರಾಷ್ಟ್ರಗಳ ಪ್ರತಿನಿಧಿಗಳು ಮಾಡಿದ ಈ ವ್ಯವಸ್ಥೆಯಿಂದ ಬೇರೆ ಬೇರೆ ರಾಷ್ಟ್ರಗಳ ರಾಜರ ಕೈಯಲ್ಲಿ ಹೆಚ್ಚಾಗಿ ಸತ್ತೆ ಬಂದು ಅವರ ಸಮಾಧಾನವಾಯಿತು. ಆದರೆ ಸ್ಪೇನ, ಫ್ರಾನ್ಸ್, ಗ್ರೀಸ, ಬೆಲ್ಜಮ್, ಇಟಲಿ ಮತ್ತು ಜರ್ಮನಿ ಈ ದೇಶಗಳ ಜನರ ಸಮಾಧಾನವಾಗಲಿಲ್ಲ. ಇವರಲ್ಲಿ ಕೆಲವರು ತಮಗೆ ಹೆಚ್ಚಾಗಿ ಅಧಿಕಾರಗಳು ದೊರೆಯಬೇಕೆಂದು ತಮ್ಮ ರಾಜರ ವಿರುದ್ಧವಾಗಿ ಆಂದೋಲನವನ್ನೂ ಬಂಡುಗಳನ್ನೂ ಹೂಡಿದರು. ಆದುದರಿಂದ ಈ ಬಂಡುಗಳನ್ನು ಮುರಿದು ಎಲ್ಲೆಡೆಗಳಲ್ಲಿಯೂ ಶಾಂತತೆಯನ್ನು ನೆಲೆಗೊಳಿಸಬೇಕೆಂಬ ನೀತಿಯನ್ನು ಆಸ್ಟ್ರಿಯಾ, ರಶಿಯಾ, ಮತ್ತು ಫ್ರಾನ್ಸ್ ಈ ದೇಶಗಳ ರಾಜರು 'ಹೋಲಿ ಅಲಾಯನ್ಸ್' ಸಂಘದ ಪರವಾಗಿ ನಿಶ್ಚಯಿಸಿದರು. ಆದರೆ ಇಂಗ್ಲಂಡಿನ ಪರರಾಷ್ಟ್ರ ಮಂತ್ರಿಗಳಾದ ಕಸಲರೇ (೧೮೧೫—೧೮೨೨) ಮತ್ತು ಕನಿಂಗ್ (೧೮೨೨—೧೮೨೭) ಇವರು ಈ ನೀತಿಯನ್ನು ಅನುಸರಿಸಲು ಒಪ್ಪಲಿಲ್ಲ.

**ಸ್ಪೇನದ ಸಾಮ್ರಾಜ್ಯದಲ್ಲಿ ದೊಂಬೆಗಳು**—೧೮೨೦ರಲ್ಲಿ ಸ್ಪೇನದ ಜನರು ತಮ್ಮ ರಾಜನ ವಿರುದ್ಧವಾಗಿ ಬಂಡನ್ನು ಹೂಡಿದರು. ಆಗ ಮಟರನಿಕನ ಸೂಚನೆಯಿಂದ ಹೋಲಿ ಅಲಾಯನ್ಸ್ ಸಂಘವು ಸ್ಪೇನದಲ್ಲಿಯ ಬಂಡನ್ನು ಮುರಿಯಲು ಫ್ರೆಂಚ ಸೈನ್ಯವನ್ನು ಕಳುಹಿತು. ಈ ಸೈನ್ಯವು ಬಂಡನ್ನು ಮುರಿಯಿತು. ಆದರೆ ಸ್ಪೇನದಲ್ಲಿಯ ಈ ಪ್ರಕ್ಷೋಭವನ್ನು ಕಂಡು ಅಮೇರಿಕೆಯಲ್ಲಿಯ ಮೆಕ್ಸಿಕೋ, ಪೇರು ಮತ್ತು ಚಿಲಿ ಈ ಸ್ಪನಿಶ್ ವಸಾಹತುಗಳು ಮಾತೃಭೂಮಿಯ ವಿರುದ್ಧವಾಗಿ ಬಂಡನ್ನು ಹೂಡಿ ತಮ್ಮ ಸ್ವಾತಂತ್ರ್ಯವನ್ನು ಸಾರಿ

ದುವು (೧೮೨೧). ಸ್ಪೇನದ ವಸಾಹತುಗಳನ್ನು ಸ್ಪೇನಕ್ಕೆ ತಿರುಗಿ ದೊರಕಿಸಿ ಕೊಡಲು ಯುರೋಪದಲ್ಲಿಯ ರಾಷ್ಟ್ರಗಳು ಸ್ಪೇನಕ್ಕೆ ಸಾಹಾಯ್ಯವನ್ನು ಮಾಡ ಬೇಕೆಂದು ಮೆಟರನಿಕ್ ಇವನು ಬಹಳವಾಗಿ ಪ್ರಯತ್ನಿಸಿದನು. ಆದರೆ ಅವನಿಗೆ ಯಶವು ದೊರೆಯಲಿಲ್ಲ. ಸಮುದ್ರದ ಮೇಲೆ ಬಲಾಢ್ಯವಾಗಿದ್ದ ಇಂಗ್ಲಂಡಿನ ಪರರಾಷ್ಟ್ರೀಯ ಮಂತ್ರಿಗಳು ವಸಾಹತುಗಳ ವಿರುದ್ಧವಾಗಿ ಸ್ಪೇನಕ್ಕೆ ಸಾಹಾಯ್ಯ ವನ್ನು ಮಾಡಲು ಒಪ್ಪಲಿಲ್ಲ. ಅದರಂತೆಯೇ ಅಮೇರಿಕೆಯಲ್ಲಿಯ ಸಂಯುಕ್ತ ಸಂಸ್ಥಾನಗಳ (United States of America) ಅಧ್ಯಕ್ಷನಾದ **ಮನ್‌ರೋ** ಇವನು ಅಮೇರಿಕೆಯ ಹೊರಗಿನ ರಾಷ್ಟ್ರಗಳು ಅಮೇರಿಕೆಯ ಸಂಸ್ಥಾನಗಳ ಕಾರ ಭಾರದಲ್ಲಿ ಕೈಹಾಕಕೂಡದು, ಮತ್ತು ಕೈಹಾಕಿ ಸ್ಪೇನದ ಸ್ಪನಿಶ್ ವಸಾಹತು ಗಳನ್ನು ಸ್ಪೇನಕ್ಕೆ ತಿರುಗಿ ದೊರಕಿಸಿಕೊಡಲು ಯಾರಾದರೂ ಪ್ರಯತ್ನಿಸಿ ದರೆ ಆ ಪ್ರಯತ್ನವನ್ನು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು ವಿರೋಧಿಸು ವುವು ಎಂದು ಪ್ರಕಟಗೊಳಿಸಿದನು. ಪ್ರೆಸಿಡೆಂಟ ಮನ್‌ರೋ ಇವನ ಪ್ರಕಟನೆಗೆ **ಮನ್‌ರೋ ಡಾಕ್ಟ್ರಿನ್** (ಮನ್‌ರೋ ಇವನ ತತ್ವ) ಎಂದು ಹೆಸರುಬಂದಿತು. ಇಂಗ್ಲಂಡಿನ ಪರರಾಷ್ಟ್ರೀಯ ಮಂತ್ರಿಯಾದ ಕನಿಂಗನು ಪ್ರೆಸಿಡೆಂಟ ಮನ್‌ರೋ ಇವನ ತತ್ವಕ್ಕೆ ಬೆಂಬಲವನ್ನಿತ್ತನು ಮತ್ತು ಅಮೇರಿಕೆಯಲ್ಲಿಯ ಸ್ಪನಿಶ್ ವಸಾ ಹತುಗಳ ಸ್ವಾತಂತ್ರ್ಯಕ್ಕೆ ಮಾನ್ಯತೆಯನ್ನಿತ್ತನು (೧೮೨೪). ಹೀಗೆ ಫ್ರೆಂಚ ಸೈನ್ಯದ ಸಾಹಾಯ್ಯದಿಂದ ಸ್ಪೇನದಲ್ಲಿಯ ದೊಂಬೆಗಳು ಮುರಿಯಲ್ಪಟ್ಟರೂ ಸ್ಪೇನದ ಸಾಮ್ರಾಜ್ಯದಲ್ಲಿಯ ಮೆಕ್ಸಿಕೋ, ಪೇರು, ಚಿಲಿ, ಈ ನಡುಗಡ್ಡೆಗಳು ಸ್ಪೇನ ದಿಂದ ಒಡೆದು ತಮ್ಮ ಸ್ವತಂತ್ರವಾದ ಲೋಕಸತ್ತಾಕ ರಾಜ್ಯಗಳನ್ನು ಸ್ಥಾಪಿಸಿ ಕೊಂಡುದರಿಂದ ಸ್ಪೇನದ ರಾಜ್ಯವು ಬಹಳವಾಗಿ ಬಲಗುಂದಿತು.

ಇಟಲಿಯ ಉತ್ತರಭಾಗದ ಮೇಲೆ ಆಸ್ಟ್ರಿಯದ ವರ್ಚಸ್ಸು ಇದ್ದಿತು. ಅದನ್ನು ಇಲ್ಲದಾಗಿ ಮಾಡಲು ೧೮೨೦ರಲ್ಲಿ ಇಟಾಲಿಯನ್ ಜನರು ಬಂಡನ್ನು ಹೂಡಿದರು; ಆದರೆ ಆಸ್ಟ್ರಿಯವು ಉಗ್ರವಾದ ಉಪಾಯಗಳನ್ನು ಯೋಚಿಸಿ ಆ ಬಂಡನ್ನು ಮುರಿಯಿತು (೧೮೨೧).

ಗ್ರೀಸದ ಸ್ವಾತಂತ್ರ್ಯಯುದ್ಧವು (೧೮೨೧-೧೮೨೯) — ೧೪೫೩ ರಿಂದ ಕ್ರೈಸ್ತಧರ್ಮದ ಗ್ರೀಸ ರಾಷ್ಟ್ರವು ಮುಸಲ್ಮಾನ ಧರ್ಮದ ತುರ್ಕಸ್ಥಾನದ ವಶದಲ್ಲಿದ್ದಿತು. ೧೮೨೧ರಲ್ಲಿ ಗ್ರೀಸದ ಜನರು ತುರ್ಕಸ್ಥಾನದಿಂದ ಸ್ವತಂತ್ರರಾಗಲು ಬಂಡನ್ನು ಹೂಡಿದರು. ಈ ಸಂದರ್ಭದಲ್ಲಿ ಏನು ಮಾಡಬೇಕೆಂಬುದು ಹೋಲಿ ಅಲಾಯನ್ಸ್ ಸಂಘದ ರಾಷ್ಟ್ರಗಳಿಗೆ ತೋಚದಂತಾಯಿತು. ಸ್ಪೇನದ ಮತ್ತು

ಇಟಲಿಯ ಜನರು ಹೂಡಿದ ಬಂಡುಗಳನ್ನು ಮುರಿಯಲು ಈ ರಾಷ್ಟ್ರಗಳು ಸೈನ್ಯವನ್ನು ಕಳುಹಿದ್ದುವು. ಆದರೆ ಗ್ರೀಸ ರಾಷ್ಟ್ರವು ಕ್ರೈಸ್ತಧರ್ಮದ ಅನುಯಾಯಿಯಾದುದರಿಂದ ಮತ್ತು ಗ್ರೀಸದ ಪ್ರಾಚೀನ ವೈಭವ ಮತ್ತು ಸಂಸ್ಕೃತಿ ಇವುಗಳ ವಿಷಯದಲ್ಲಿ ಯುರೋಪಿಯನ್ ರಾಷ್ಟ್ರಗಳಿಗೆ ಆದರವಿದ್ದುದರಿಂದ ಗ್ರೀಕ ಜನರು ಹೂಡಿದ ಬಂಡನ್ನು ಮುರಿಯಲು ಅವು ತುರ್ಕಸ್ಥಾನಕ್ಕೆ ಸಾಹಾಯ್ಯವನ್ನು ಕಳುಹಿಸಲಿಲ್ಲ. ಇಂಗ್ಲಂಡಿಗೂ ಗ್ರೀಸದ ವಿಷಯದಲ್ಲಿ ಸಹಾನುಭೂತಿಯಿದ್ದಿತು. ಆದುದರಿಂದ ಇಂಗ್ಲಂಡು, ರಶಿಯಾ ಮತ್ತು ಫ್ರಾನ್ಸ್ ಈ ರಾಷ್ಟ್ರಗಳೊಡನೆ ಒಪ್ಪಂದವನ್ನು ಮಾಡಿಕೊಂಡು ಗ್ರೀಸದ ಸ್ವಾತಂತ್ರ್ಯಕ್ಕೆ ತುರ್ಕಸ್ಥಾನದಿಂದ ಮಾನ್ಯತೆಯನ್ನು ದೊರಕಿಸಿಕೊಡಲು ನಿಶ್ಚಯಿಸಿ ಗ್ರೀಸದ ಸಾಹಾಯ್ಯಕ್ಕೆ ಫ್ರಾನ್ಸ್ ಮತ್ತು ಇಂಗ್ಲಂಡ್ ಈ ರಾಷ್ಟ್ರಗಳ ಸಂಯುಕ್ತ ಹಡಗುಪಡೆಯನ್ನು ಕಳುಹಿಸಿತು (೧೮೨೭). ತುರ್ಕಸ್ಥಾನವು ತನ್ನ ಸಾಹಾಯ್ಯಕ್ಕೆ ತನ್ನ ಮಾಂಡಲಿಕ ದೇಶವಾದ ಇಜಿಪ್ತದ ಸುಭೇದಾರನಿಗೆ ಸೈನ್ಯ ಮತ್ತು ಹಡಗುಪಡೆಗಳೊಡನೆ ಬರಬೇಕೆಂದು ತಿಳಿಸಿತು. ೧೮೨೭ರ ಅಕ್ಟೋಬರ ತಿಂಗಳಲ್ಲಿ ನವ್ಹಾರಿನೊ ಎಂಬಲ್ಲಿ ತುರ್ಕಸ್ಥಾನದ ಹಡಗುಪಡೆಗೂ ಫ್ರಾನ್ಸ್ ಇಂಗ್ಲಂಡುಗಳ ಹಡಗುಪಡೆಗೂ ಯುದ್ಧವಾಯಿತು. ಅದರಲ್ಲಿ ತುರ್ಕಸ್ಥಾನದ ಹಡಗುಪಡೆ ಸೋತಿತು.

ಇದೇ ಸಮಯದಲ್ಲಿ ಇಂಗ್ಲಂಡಿನ ಪರರಾಷ್ಟ್ರೀಯ ಮಂತ್ರಿಯಾದ ಕॅನಿಂಗನು ಮರಣಹೊಂದಿದನು. ೧೮೨೮ರಲ್ಲಿ ವೆಲಿಂಗ್ಟನನು ಮುಖ್ಯಮಂತ್ರಿಯಾದನು ಮತ್ತು ಅವನು ತುರ್ಕಸ್ಥಾನದ ವಿರುದ್ಧವಾಗಿ ಯುದ್ಧವನ್ನು ಸಾಗಿಸುವ ಕॅನಿಂಗನ ನೀತಿಯನ್ನು ರದ್ದುಗೊಳಿಸಿದನು. ಆದುದರಿಂದ ಇಂಗ್ಲಂಡು ಈ ಯುದ್ಧದೊಳಗಿಂದ ತನ್ನ ಅಂಗವನ್ನು ತೆಗೆದುಕೊಳ್ಳಬೇಕಾಯಿತು. ಆದರೆ ರಶಿಯವು ಮಾತ್ರ ತುರ್ಕಸ್ಥಾನದ ಪ್ರದೇಶವನ್ನು ನುಂಗಲು ಅನಾಯಾಸವಾಗಿ ಬಂದ ಈ ಸಂಧಿಯನ್ನು ಹೋಗಗೊಡಲಿಲ್ಲ. ಅದು ಯುದ್ಧವನ್ನು ಹಾಗೆಯೇ ಸಾಗಿಸಿತು. ಕೊನೆಯಲ್ಲಿ ೧೮೨೯ರಲ್ಲಿ ಒಪ್ಪಂದವಾಯಿತು. ತುರ್ಕಸ್ಥಾನವು ಗ್ರೀಸದ ಸ್ವಾತಂತ್ರ್ಯಕ್ಕೆ ಮಾನ್ಯತೆಯನ್ನಿತ್ತಿತು, ಮತ್ತು ರಶಿಯಕ್ಕೆ ತುರ್ಕಸ್ಥಾನದ ವಶದಲ್ಲಿಯ ಕೆಲವು ಪ್ರದೇಶವು ದೊರೆತಿತು.

**೧೮೩೦ರಲ್ಲಿಯ ಕ್ರಾಂತಿಕಾರಕ ಆಂದೋಲನಗಳು**—೧೮೩೦ನೆಯ ಇಸ್ವಿ ಯುರೋಪದ ಇತಿಹಾಸದಲ್ಲಿ ವಿಶೇಷವಾಗಿ ಪ್ರಸಿದ್ಧವಾಗಿರುವುದು. ಈ ಕಾಲದಲ್ಲಿ ಯುರೋಪದಲ್ಲಿಯ ಫ್ರಾನ್ಸ್, ಬೆಲ್ಜಮ್, ಇಟಲಿ, ಪೋಲಂಡ್ ಈ ರಾಷ್ಟ್ರಗಳಲ್ಲಿ ಕ್ರಾಂತಿಕಾರಕ ಆಂದೋಲನಗಳು ಉದ್ಭವಿಸಿದುವು. ಫ್ರಾನ್ಸಿನ

ರಾಜನಾದ ೧೮ನೆಯ ಲುಯಿ ೧೮೨೪ರಲ್ಲಿ ಮಡಿದ ಬಳಿಕ ಅವನ ತಮ್ಮನಾದ ೧೦ನೆಯ ಚಾರ್ಲಸನು ಫ್ರಾನ್ಸಿನ ರಾಜನಾಗಿದ್ದನು. ಈ ರಾಜನು ಸ್ವಚ್ಛಂದಿಯೂ ಪೀಡಾಕರನೂ ಆಗಿದ್ದನು. ಆದುದರಿಂದ ೧೮೩೦ರಲ್ಲಿ ಫ್ರೆಂಚ್ ಜನರು ಬಂಡನ್ನು ಹೂಡಿ ಅವನನ್ನು ಪಟ್ಟದಿಂದ ತಳ್ಳಿದರು ಮತ್ತು ಲುಯಿ ಫಿಲಿಪಿ ಎಂಬವನಿಗೆ ಪಟ್ಟಗಟ್ಟಿದರು. ಇವನು ಜನರ ಅಭಿಪ್ರಾಯದಂತೆ ರಾಜ್ಯಕಾರಭಾರವನ್ನು ಮಾಡಲು ಒಪ್ಪಿದನು ಮತ್ತು ಮುಂದೆ ೧೮ ವರ್ಷಗಳ ವರೆಗೆ (೧೮೩೦—೧೮೪೮) ರಾಜ್ಯವಾಳಿದನು.

ಇದೇ ಸಮಯದಲ್ಲಿ ಆಸ್ಟ್ರಿಯಾ ಮತ್ತು ಜರ್ಮನಿಗಳಲ್ಲಿಯ ಜನರು ತಮಗೆ ಹೆಚ್ಚಾಗಿ ಅಧಿಕಾರ ದೊರೆಯಬೇಕೆಂದು ಬಂಡನ್ನು ಹೂಡಿದರು. ಆದರೆ ಮೆಟರ್ನಿಕನು ಅದನ್ನು ಮುರಿದನು. ಪೋಲಂಡಿನ ಜನರೂ ರಶಿಯದ ವಿರುದ್ಧವಾಗಿ ಬಂಡನ್ನು ಹೂಡಿದರು. ಆದರೆ ಅವರಿಗೆ ಯಶವು ದೊರೆಯಲಿಲ್ಲ. ೧೮೩೦ರಲ್ಲಿ ಹಾಲಂಡ್ ದೇಶದಲ್ಲಿಯ ದಕ್ಷಿಣ ಭಾಗದ ಬೆಲ್ಜಮ್ ಪ್ರಾಂತದ ರೋಮನ್ ಕಥಲಿಕ್ ಜನರು ಉತ್ತರ ಭಾಗದ ಪ್ರಾಟೆಸ್ಟಂಟ ಪಂಥದ ಜನರಿಂದ ಬೇರೆಯಾಗಲು ಬಂಡನ್ನು ಹೂಡಿದರು. ಆ ಬಂಡನ್ನು ಮುರಿಯಲು ಹಾಲಂಡಿನ ರಾಜನು ಪ್ರಯತ್ನಿಸಿದನು. ಆದರೆ ಅವನ ಪ್ರಯತ್ನವು ನಿಷ್ಫಲ ವಾಯ್ತು. ಆಸ್ಟ್ರಿಯಾ ಮತ್ತು ರಶಿಯಾಗಳಲ್ಲಿಯ ರಾಜರು ತಮ್ಮ ರಾಜ್ಯಗಳ ಲ್ಲಿಯ ಬಂಡಿನ ಕಡೆಗೆ ಲಕ್ಷ್ಯವನ್ನು ಕೊಡಬೇಕಾದುದರಿಂದ ಹಾಲಂಡಿನ ರಾಜ ನಿಗೆ ಸಾಹಾಯ್ಯವನ್ನು ಮಾಡಲು ಅವರಿಗೆ ಶಕ್ಯವಾಗಲಿಲ್ಲ. ಇಂಗ್ಲಂಡಿನ ಆಗಿನ ಪರರಾಷ್ಟ್ರೀಯ ಮಂತ್ರಿಯಾದ ಲಾರ್ಡ್ ಪಾಮರಸ್ಟನ್ ಇವನು ಬೆಲ್ಜಮಿನಲ್ಲಿಯ ಜನರ ವಿಷಯದಲ್ಲಿ ಸಹಾನುಭೂತಿಯನ್ನು ವ್ಯಕ್ತಗೊಳಿಸಿ ಯುರೋಪಿಯನ್ ರಾಷ್ಟ್ರಗಳಲ್ಲಿಯ ಪ್ರತಿನಿಧಿಗಳ ಪರಿಷತ್ತೊಂದನ್ನು ಲಂಡನಿನಲ್ಲಿ ನೆರೆಯಿಸಿ ಬೆಲ್ಜಮಿನ ಸ್ವಾತಂತ್ರ್ಯವನ್ನು ಮಾನ್ಯಮಾಡಿಸಿದನು. ಈ ಬಗೆಯಾಗಿ ೧೮೩೦—೩೧ರಲ್ಲಿ ಬೆಲ್ಜಮ್ ಸ್ವತಂತ್ರವಾಯಿತು. ಜರ್ಮನಿಯಲ್ಲಿಯ ಒಬ್ಬ ರಾಜಪುತ್ರನಾದ ೧ನೆಯ ಲುಯಿಪೋಲ್ಡನೆಂಬವನು ಅಲ್ಲಿಯ ಮೊದಲನೆಯ ರಾಜನಾದನು. ಹೀಗೆ ಯುರೋಪದಲ್ಲಿ ಕ್ರಾಂತಿಕಾರಕ ಆಂದೋಲನಗಳು ಎಲ್ಲೆ ಲ್ಲಿಯೂ ನಡೆದಿರಲು, ೧೮೩೦ರ ಜೂನ ತಿಂಗಳಲ್ಲಿ ೪ನೆಯ ಜಾರ್ಜನು ಮರಣ ಹೊಂದಿದನು.

---

## ಸಾರಾಂಶವು

### (೪ನೆಯ ಜಾರ್ಜ ೧೮೨೦ರಿಂದ ೧೮೩೦)

**ನಾಲ್ಕನೆಯ ಜಾರ್ಜನು ಮತ್ತು ಮಂತ್ರಿಮಂಡಲಗಳು.**

೧೮೨೦—೧೮೨೭ ಎಪ್ರಿಲ—ಲಿವರ್‌ಪೂಲನ ಮಂತ್ರಿಮಂಡಲವು (ಟೋರಿ); ಪರರಾಷ್ಟ್ರೀಯ ಮಂತ್ರಿಗಳು—ಕೆಸಲ್‌ರೇ ೧೮೨೨ರ ವರೆಗೆ, ಕೆನಿಂಗ್ (೧೮೨೨-೨೭); ಅಂತಃಸ್ಥ ಕಾರಭಾರದ ಮಂತ್ರಿ—ಪೀಲ್; ವ್ಯಾಪಾರ ವಿಷಯದ ಮಂತ್ರಿ—ಹಸ್ಕಿಸನ್.

ಎಪ್ರಿಲ ೧೮೨೭ರಿಂದ ಸಪ್ಟಂಬರ ೧೮೨೭—ಜಾರ್ಜ ಕೆನಿಂಗನ ಮಂತ್ರಿಮಂಡಲವು (ಟೋರಿ).

ಸಪ್ಟೆಂ. ೧೮೨೭ರಿಂದ ಜಾನೆ. ೧೮೨೮—ಗೋಡ್‌ರಿಚನ ಮಂತ್ರಿಮಂಡಲವು (ಟೋರಿ).

ಜಾನೆ. ೧೮೨೮ರಿಂದ ನವ್ಹೆಂ. ೧೮೩೦—ವೆಲಿಂಗ್ಟನನ ಮಂತ್ರಿಮಂಡಲವು (ಟೋರಿ).

**ಪಾರ್ಲಿಮೆಂಟು ಮಾಡಿದ ಮಹತ್ವದ ಕಾಯ್ದೆಗಳು.**

೧೮೨೩ ನೆವಿಗೇಶನ್ ಕಾಯ್ದೆಯಲ್ಲಿಯ ಅನೇಕ ಮಾತುಗಳು ರದ್ದಾದುವು. ಪ್ರತಿಯೋಗಿ ವ್ಯಾಪಾರ ವಿಷಯಕ ಒಪ್ಪಂದವು. ಪರಕೀಯ ಮಾಲುಗಳ ಮೇಲಿನ ಸುಂಕವು ಕಡಿಮೆಮಾಡಲ್ಪಟ್ಟಿತು.

೧೮೨೪ ಕೊಂಬಿನೇಶನ್ ಕಾಯ್ದೆ ರದ್ದುಮಾಡಲ್ಪಟ್ಟಿತು.

೧೮೨೪ ಫೌಜದಾರಿ ಅಪರಾಧಗಳ ಕಾಯ್ದೆಯಲ್ಲಿ ಸುಧಾರಣೆ—ಪೀಲ್.

೧೮೨೮ ಟೆಸ್ಟ್ ಆಕ್ಟ ಮತ್ತು ಕಾರ್ಪೊರೇಶನ್ ಆಕ್ಟ ರದ್ದುಮಾಡಲ್ಪಟ್ಟುವು.

೧೮೨೯ ಕೆಥಲಿಕ್ ಜನರ ಮೇಲಿನ ನಿರ್ಬಂಧಗಳು ದೂರ ಮಾಡಲ್ಪಟ್ಟುವು.

**ಆ ಕಾಲದ ಪ್ರಮುಖ ಪುರುಷರು.**

ರಾಜಕಾರಣದಲ್ಲಿ—ಲಿವರ್‌ಪೂಲ. ಕೆಸಲ್‌ರೇ, ಕೆನಿಂಗ್, ಪೀಲ, ವೆಲಿಂಗ್ಟನ್.

ವ್ಯಾಪಾರ ವಿಷಯದಲ್ಲಿ—ಹಸ್ಕಿಸನ್.

ಐರಿಶ್ ವಿಷಯದಲ್ಲಿ—ಡೆನಿಯಲ್ ಓಕೊನೆಲ್ (ಐರಿಶ್ ರೋಮನ್ ಕೆಥಲಿಕರ ಮುಂದಾಳು).

ಗುಲಾಮಗಿರಿಯನ್ನು ನಷ್ಟಗೊಳಿಸುವ ಕಾರ್ಯದಲ್ಲಿ—ವಿಲ್ಬರಫೋರ್ಸ ಮತ್ತು ಫೊವೆಲ್ ಬಕ್ಸ್ಟನ್.

**ಪರರಾಷ್ಟ್ರೀಯ ವಿಷಯಗಳು.**

೧೮೨೦ ಸ್ಪೇನದಲ್ಲಿಯ ಬಂಡು ಮುರಿಯಲ್ಪಟ್ಟಿತು.

೧೮೨೧ ಅಮೇರಿಕೆಯಲ್ಲಿಯ ಸ್ಪೆನಿಶ್ ವಸಾಹತುಗಳು ಸ್ವತಂತ್ರವಾದುವು.

೧೮೨೧—೨೯ ಗ್ರೀಸ ರಾಷ್ಟ್ರವು ತುರ್ಕಸ್ಥಾನದ ವಿರುದ್ಧವಾಗಿ ಬಂಡನ್ನು ಹೂಡಿ ತನ್ನ ಸ್ವಾತಂತ್ರ್ಯವನ್ನು ಸಂಪಾದಿಸಿತು. ಇಂಗ್ಲಂಡ್, ಫ್ರಾನ್ಸ್ ಮತ್ತು ರಶಿಯಾ ಇವು ಗ್ರೀಸ ರಾಷ್ಟ್ರಕ್ಕೆ ನೆರವಾದುವು. ನವ್ಹಾರಿನೊ ಎಂಬಲ್ಲಿ ತುರ್ಕಸ್ಥಾನದ ಹಡಗುಪಡೆಯು ಪರಾಭವವು (೧೮೨೭). ಗ್ರೀಸದ ಸ್ವಾತಂತ್ರ್ಯವು (೧೮೨೯).

೧೮೨೧ ಇಟಲಿಯಲ್ಲಿಯ ಕ್ರಾಂತಿಕಾರಕ ಆಂದೋಲನವು ಮುರಿಯಲ್ಪಟ್ಟಿತು. ಮತ್ತು ಇಟಲಿಯ ಉತ್ತರ ಭಾಗದಲ್ಲಿ ಆಸ್ಟ್ರಿಯದ ವರ್ಚಸ್ಸು ಗಟ್ಟಿಯಾಗಿ ಉಳಿಯಿತು.

೧೮೩೦ ಯುರೋಪದಲ್ಲಿಯ ಕ್ರಾಂತಿಕಾರಕ ಆಂದೋಲನಗಳು. ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾಗಿ ಲುಯಿ ಫಿಲಿಪಿ ಇವನು ರಾಜನಾಗುವನು (೧೮೩೦). ಆಸ್ಟ್ರಿಯಾ, ಜರ್ಮನಿ, ಪೋಲಂಡ್ ಈ ದೇಶಗಳಲ್ಲಿಯ ಕ್ರಾಂತಿಕಾರಕ ಆಂದೋಲನಗಳು ಮುರಿಯಲ್ಪಟ್ಟುವು. ೧೮೩೦—ಬೆಲ್ಜಿಯಮಿನಲ್ಲಿಯ ಕ್ರಾಂತಿಕಾರಕ ಆಂದೋಲನವು. ಅಲ್ಲಿಯ ಜನರು ಹಾಲಂಡಿನಿಂದ ಸ್ವತಂತ್ರವಾದ ಬೆಲ್ಜಿಯಮ್ ಎಂಬ ರಾಜ್ಯವನ್ನು ಸ್ಥಾಪಿಸಿದರು (೧೮೩೦-೩೧).

---

# ೨೩ನೆಯ ಪ್ರಕರಣವು

## ೪ನೆಯ ವಿಲಿಯಮ್

ಜನ್ಮವು ೧೭೬೫; ರಾಜ್ಯಾರೋಹಣವು (೬೫ನೆಯ ವರ್ಷದಲ್ಲಿ) ೧೮೩೦;

ಮೃತ್ಯು ೧೮೩೭.

(೧೮೩೦—೧೮೩೭).

### ಮಹತ್ವದ ಇಸ್ವಿಗಳು

೧೮೩೦ ಫ್ರಾನ್ಸಿನಲ್ಲಿಯ ರಾಜ್ಯಕ್ರಾಂತಿ. ಲುಯಿ ಫಿಲಿಪಿ ಇವನು ರಾಜನು.

೧೮೩೨ ಪಾರ್ಲಿಮೆಂಟಿನ ಸುಧಾರಣೆಯ ಬಿಲ್ಲು.

೧೮೩೩ ಬ್ರಿಟಿಶ್ ಸಾಮ್ರಾಜ್ಯದಲ್ಲಿ ಗುಲಾಮಗಿರಿಯು ಪದ್ಧತಿ ನಷ್ಟವಾಗುವುದು.

**೪ನೆಯ ವಿಲಿಯಮ್**—೪ನೆಯ ಜಾರ್ಜನಿಗೆ ಮಕ್ಕಳು ಇಲ್ಲದುದರಿಂದ ಅವನ ತರುವಾಯದಲ್ಲಿ ಅವನ ತಮ್ಮನಾದ ೪ನೆಯ ವಿಲಿಯಮನು ಇಂಗ್ಲಂಡಿನ ಪಟ್ಟಕ್ಕೆ ಬಂದನು. ಅವನಿಗೆ ಚಿಕ್ಕವನಿರುವಾಗ ನೌಕಾನಯನದ ಶಿಕ್ಷಣವು ದೊರೆತಿದ್ದಿತು, ಮತ್ತು ಅವನು ತನ್ನ ಆಯುಷ್ಯದ ಅನೇಕ ವರ್ಷಗಳನ್ನು ಹಡಗುಪಡೆಯಲ್ಲಿ ಕಳೆದಿದ್ದನು. ಅವನು ಸುಸ್ವಭಾವದವನಾಗಿದ್ದು ದಯಾಳುವಾಗಿದ್ದನು; ಅವನ ವರ್ತನವೂ ಒಳಿತಾಗಿದ್ದಿತು. ಆದುದರಿಂದ ಅವನಿಗೆ ಲೋಕಪ್ರೀತಿಯನ್ನು ಸಂಪಾದಿಸಲು ಶಕ್ಯವಾಯಿತು. ೪ನೆಯ ವಿಲಿಯಮನು ಪಟ್ಟಕ್ಕೆ ಬಂದ ಸಮಯದಲ್ಲಿ ಯುರೋಪದಲ್ಲಿಯ ಅನೇಕ ರಾಷ್ಟ್ರಗಳಲ್ಲಿ ಸನದಶೀರ ರಾಜ್ಯ ಪದ್ಧತಿಯನ್ನು ಸ್ಥಾಪಿಸಲು ಕ್ರಾಂತಿಕಾರಕ ಆಂದೋಲನಗಳು ಆದುವು.



೪ನೆಯ ವಿಲಿಯಮ್

**೪ನೆಯ ವಿಲಿಯಮನು ಮತ್ತು ಅವನ ಮಂತ್ರಿಗಳು**—ಯುರೋಪದಲ್ಲಿ ಈ ಬಗೆಯ ಆಂದೋಲನಗಳು ನಡೆದಿರಲು ಇಂಗ್ಲಂಡಿನಲ್ಲಿ ಪಾರ್ಲಿ

ಮೆಂಟಿನ ರಚನೆಯಲ್ಲಿ ಸುಧಾರಣೆಗಳನ್ನು ಉಂಟುಮಾಡಲು ಆಂದೋಲನವು ಪ್ರಾರಂಭವಾಯಿತು. ಈ ವಿಷಯದಲ್ಲಿ ಸುಧಾರಣೆಯಾಗುವುದು ಅವಶ್ಯವೆಂದು ಪಿಟ್ಟನಂತಹ ಟೋರಿ ಪಕ್ಷದ ಮುಖ್ಯ ಮಂತ್ರಿಗೂ ೪೦ ವರ್ಷಗಳ ಹಿಂದೆ ಎನಿಸುತ್ತಿತ್ತು. ಆದರೆ ಆ ಕಾಲದಲ್ಲಿ ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿಯಾಗಿ ಇಂಗ್ಲಂಡು ನೆಪೋಲಿಯನನೊಡನೆ ಯುದ್ಧವನ್ನು ಮಾಡಬೇಕಾದುದರಿಂದ ಇಂಗ್ಲಂಡಿನ ಅಂತಃಸ್ಥ ವಿಷಯದಲ್ಲಿ ಸುಧಾರಣೆಯನ್ನು ಮಾಡುವ ಕೆಲಸವು ಹಿಂದೆ ಬಿದ್ದಿತು. ಆದರೆ ಈ ಯುದ್ಧವು ಮುಗಿದು ಎಲ್ಲೆಡೆಯಲ್ಲಿಯೂ ಶಾಂತತೆಯಾದ ಬಳಿಕ ಪಾರ್ಲಿಮೆಂಟಿನ ರಚನೆಯಲ್ಲಿ ಸುಧಾರಣೆಯನ್ನು ಮಾಡುವ ಪ್ರಶ್ನೆ ಪ್ರಾಮುಖ್ಯದಿಂದ ಮುಂದೆ ಬಂದಿತು. ೪ನೆಯ ವಿಲಿಯಮನು ಪಟ್ಟಕ್ಕೆ ಬಂದಾಗ ವೆಲಿಂಗ್ಟನನು ಮುಖ್ಯ ಮಂತ್ರಿಯಾಗಿದ್ದನು. ಪಾರ್ಲಿಮೆಂಟಿನ ರಚನೆಯಲ್ಲಿ ಸುಧಾರಣೆಯಾಗುವುದು ಅವಶ್ಯವಿಲ್ಲವೆಂದು ಅವನ ಅಭಿಪ್ರಾಯವಿದ್ದಿತು. ವ್ಹಿಗ್ ಪಕ್ಷದ ಜನರಿಗೆ ಸುಧಾರಣೆಯಾಗುವುದು ಅವಶ್ಯವೆಂದು ಎನಿಸುತ್ತಿತ್ತು. ಆದುದರಿಂದ ಅವನು ವ್ಹಿಗ್ ಪಕ್ಷದವರಿಗೆ ಅಪ್ರಿಯನಾದನು. ಐರಿಶ್ ರೋಮನ್ ಕಥೊಲಿಕ್ ಜನರ ವಿರುದ್ಧವಾದ ನಿರ್ಬಂಧಗಳನ್ನು ದೂರಗೊಳಿಸಲು ಅವನು ಸಮ್ಮತಿಯಿತ್ತುದರಿಂದ ಉಗ್ರ ಟೋರಿ ಪಕ್ಷದ ಜನರ ಬೆಂಬಲವು ಅವನಿಗೆ ದೊರೆಯದಂತಾಯಿತು. ಆದುದರಿಂದ ವಿಲಿಯಮನು ಪಟ್ಟಕ್ಕೆ ಬಂದ ಬಳಿಕ ನಡೆದ ಹೊಸ ಚುನಾವಣೆಯಲ್ಲಿ ತನಗೆ ಬಹುಮತವಿಲ್ಲದುದನ್ನು ಕಂಡು ಅವನು ಮುಖ್ಯ ಮಂತ್ರಿಪದವನ್ನು ತ್ಯಜಿಸಬೇಕಾಯಿತು (೧೮೩೦). ಆ ಬಳಿಕ ವಿಲಿಯಮನು ವ್ಹಿಗ್ ಪಕ್ಷದ ಮುಂದಾಳುವಾದ ಅರ್ಲ ಗ್ರೇ ಇವನನ್ನು ತನ್ನ ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು. ಹೀಗೆ ಎಷ್ಟೋ ವರ್ಷಗಳ ತರುವಾಯದಲ್ಲಿ ವ್ಹಿಗ್ ಪಕ್ಷದ ಕೈಯಲ್ಲಿ ಸತ್ತೆ ಬಂದಿತು. ಅರ್ಲ ಗ್ರೇ ಇವನು ತನ್ನ ಮಂತ್ರಿಮಂಡಲದಲ್ಲಿ ಮೆಲ್‌ಬೋರ್ನ್, ರಸೆಲ್ ಮತ್ತು ಪಾಮರಸ್ಟನ್ ಇವರನ್ನು ಮಂತ್ರಿಗಳಾಗಿ ನಿಯೋಜಿಸಿದನು. ಇವರೆಲ್ಲರೂ ಮುಂದೆ ಪ್ರಸಿದ್ಧರಾಗಿ ಮುಖ್ಯ ಮಂತ್ರಿಗಳಾದರು. ಅರ್ಲ ಗ್ರೇ ಇವನು ೧೮೩೦ರಿಂದ ೧೮೩೪ರ ವರೆಗೆ ಮುಖ್ಯ ಮಂತ್ರಿಯಾಗಿದ್ದನು. ಅವನ ತರುವಾಯದಲ್ಲಿ ಲಾರ್ಡ್ ಮೆಲ್‌ಬೋರ್ನನು ಮುಖ್ಯ ಮಂತ್ರಿಯಾದನು. ಆದರೆ ಒಂದು ವರ್ಷದಲ್ಲಿಯೆ ವಿಲಿಯಮನು ಅವನನ್ನು ಕೆಲಸದಿಂದ ದೂರ ಮಾಡಿದನು (೧೮೩೪). ಆ ಬಳಿಕ ಟೋರಿ ಪಕ್ಷದ ಪ್ರಮುಖನಾದ ರಾಬರ್ಟ ಪೀಲನು ಮುಖ್ಯ ಮಂತ್ರಿಯಾದನು (೧೮೩೪-೩೫). ಆದರೆ ಪಾರ್ಲಿಮೆಂಟಿನಲ್ಲಿ ಅವನ ಪಕ್ಷಕ್ಕೆ ಬಹುಮತವು ಇರಲಿಲ್ಲವಾದುದರಿಂದ ಅವನು ಅಧಿಕಾರತ್ಯಾಗವನ್ನು

ಮಾಡಬೇಕಾಯಿತು. ಆ ಬಳಿಕ ಮೆಲ್‌ಬೋರ್ನನನ್ನು ರಾಜನು ಮುಖ್ಯ ಮಂತ್ರಿಯಾಗಿ ನಿಯೋಜಿಸಿದನು. ಅವನು ೧೮೪೧ರ ವರೆಗೆ ಮುಖ್ಯ ಮಂತ್ರಿಯಾಗಿದ್ದನು.

**ಪಾರ್ಲಿಮೆಂಟಿನ ಮೊದಲನೆ ರಚನೆ ಮತ್ತು ಅದರಲ್ಲಿ ಸುಧಾರಣೆಗಳನ್ನು ಮಾಡುವ ಆವಶ್ಯಕತೆ**– ಪಾರ್ಲಿಮೆಂಟಿನ ಸಭೆಯಲ್ಲಿ (ಕಾಮನ್ಸ್ ಸಭೆಯಲ್ಲಿ) ಎಷ್ಟು ಸದಸ್ಯರಿರಬೇಕು, ಅವರು ಎಲ್ಲಿಂದ ಬರಬೇಕು ಮತ್ತು ಅವರನ್ನು ಯಾರು ಆರಿಸಬೇಕು ಈ ವಿಷಯದಲ್ಲಿ ಮೊದಲಿನಿಂದ ಬಂದ ಪದ್ಧತಿಯಲ್ಲಿ ಬದಲಾವಣೆಯಾಗುವುದು ಅವಶ್ಯವಿದ್ದಿತು. ಈ ರಚನೆ ೪೦೦ ವರ್ಷಗಳ ಹಿಂದೆ ಮಾಡಲ್ಪಟ್ಟಿತ್ತು. ಆದರೆ ಅದರಲ್ಲಿ ಬದಲಾದ ಪರಿಸ್ಥಿತಿಯನ್ನನುಸರಿಸಿ ಯಾವ ಬದಲಾವಣೆಯೂ ಮಾಡಲ್ಪಟ್ಟಿರಲಿಲ್ಲ. ಆದುದರಿಂದ ಅದರಲ್ಲಿ ಬಹಳ ದೋಷಗಳು ಉಂಟಾಗಿದ್ದುವು.

**(೧) ಸದಸ್ಯರು ಎಲ್ಲಿಂದ ಬರುತ್ತಿದ್ದರು?**

**(ಅ) ಪರಗಣೆಗಳು**--ಪ್ರತಿಯೊಂದು ಪರಗಣೆಯ ಪರವಾಗಿ (Counties) ಇಬ್ಬರು ಪ್ರತಿನಿಧಿಗಳು ಪಾರ್ಲಿಮೆಂಟಿನಲ್ಲಿ (ಕಾಮನ್ಸ್ ಸಭೆಯಲ್ಲಿ) ಬರುತ್ತಿದ್ದರು. ಆದರೆ ವ್ಯಾಪಾರೋದ್ಯೋಗಗಳ ಹೆಚ್ಚಳದ ಸ್ಥಳಗಳು ಕಳೆದ ೩—೪ ಶತಕಗಳಲ್ಲಿ ಬದಲಾಗಿದ್ದುವು. ಹಿಂದಿನ ಕಾಲದಲ್ಲಿ ಮುಂದೆ ಬಂದಿದ್ದ ಪರಗಣೆಗಳು ಹಿಂದುಳಿದು ಯಾರ್ಕಶಾಯರ್ ಮತ್ತು ಲಂಕೆಶಾಯರ್ ಈ ಪರಗಣೆಗಳು ಈಗ ವ್ಯಾಪಾರೋದ್ಯೋಗಗಳಲ್ಲಿ ಮುಂದುವರಿದಿದ್ದುವು. ಅವುಗಳ ಜನಸಂಖ್ಯೆ ರಟ್‌ಲಂಡ್, ವೆಸ್ಟಮೋರ್‌ಲಂಡ್ ಈ ಪರಗಣೆಗಳಿಗಿಂತ ಎಷ್ಟೋ ಹೆಚ್ಚಾಗಿದ್ದಿತು. ಆದರೂ ಅವುಗಳಿಗೆ ಈ ಚಿಕ್ಕ ಪರಗಣೆಗಳಿಗಿಂತ ಹೆಚ್ಚಾಗಿ ಪ್ರತಿನಿಧಿಗಳನ್ನು ತಮ್ಮ ಪರವಾಗಿ ಕಳಿಸಲು ಶಕ್ಯವಿರಲಿಲ್ಲ.

**(ಆ) ಪಟ್ಟಣಗಳು** – ಮೂರು ನಾಲ್ಕು ನೂರು ವರ್ಷಗಳ ಪೂರ್ವದಲ್ಲಿ ಪ್ರಮುಖವಾಗಿದ್ದ ಕೆಲವು ಪಟ್ಟಣಗಳು ಈಗ ಹಿಂದುಳಿದು ಹಳ್ಳಿಗಳಾಗಿದ್ದುವು. ಆದರೂ ಪಾರ್ಲಿಮೆಂಟಿನ ಸಭೆಗೆ ತಮ್ಮ ಪರವಾಗಿ ಪ್ರತಿನಿಧಿಗಳನ್ನು ಕಳಿಸಲು ಅವುಗಳಿಗೆ ಅಧಿಕಾರವಿದ್ದಿತು. ಆದರೆ ವ್ಯಾಪಾರೋದ್ಯೋಗಗಳ ವಿಷಯದಲ್ಲಿಯೂ ಜನವಸ್ತಿಯ ವಿಷಯದಲ್ಲಿಯೂ ಮುಂದುವರಿದಿದ್ದ ಅನೇಕ ಪಟ್ಟಣಗಳಿಗೆ ತಮ್ಮ ಪರವಾಗಿ ಪಾರ್ಲಿಮೆಂಟಿನ ಸಭೆಗೆ ಪ್ರತಿನಿಧಿಗಳನ್ನು ಕಳುಹಿಸಲು ಅಧಿಕಾರವಿರಲಿಲ್ಲ.

**(೨) ಮತವನ್ನು ಕೊಡಲು ಯಾರಿಗೆ ಅಧಿಕಾರವಿದ್ದಿತು?**— ಮೊದಲಿನ ಪದ್ಧತಿಯಂತೆ ಬಹಳ ಸ್ವಲ್ಪ ಜನರಿಗೆ ಮತವನ್ನು ಕೊಡಲು ಅಧಿಕಾರವಿತ್ತು: —

(ಅ) ಪರಗಣೆಗಳು—ಪರಗಣೆಗಳಲ್ಲಿ ಭೂಮಿಯ ವಾರ್ಷಿಕ ಉತ್ಪನ್ನವು ಕನಿಷ್ಟ ಪಕ್ಷಕ್ಕೆ ೪೦ ಶಿಲಿಂಗುಗಳಾದರೂ ಇದ್ದ ಜಮೀನುದಾರರಿಗೆ ಮತವನ್ನು ಕೊಡಲು ಅಧಿಕಾರವಿದ್ದಿತು (Forty Shilling Franchise). ಈ ಕಾಯದೆ ೧೪೩೦ರಲ್ಲಿ ಆಗಿತ್ತು.

(ಆ) ಪಟ್ಟಣಗಳು – ಪಟ್ಟಣಗಳ ವಿಷಯದಲ್ಲಿ ನಿಶ್ಚಿತವಾದ ಒಂದು ಪದ್ಧತಿಯಿರಲಿಲ್ಲ. ಕೆಲವು ಸ್ಥಳಗಳಲ್ಲಿ ಪಟ್ಟಣಗಳ ಮುನಿಸಿಪಾಲಿಟಿಗೆ, ಕೆಲವು ಸ್ಥಳಗಳಲ್ಲಿ ಅಲ್ಲಿಯ ಕೆಲವು ಮನೆತನಗಳಿಗೆ ಮತ್ತು ನೆಲದ ಒಡೆಯರಿಗೆ ಮತ್ತು ಒಂದೆರಡು ಪಟ್ಟಣಗಳಲ್ಲಂತೂ ಅಲ್ಲಿ ವಾಸಿಸುವ ಪ್ರತಿಯೊಬ್ಬ ವ್ಯಕ್ತಿಗೆ ಮತವನ್ನು ಕೊಡುವ ಅಧಿಕಾರವಿದ್ದಿತು.

ಪಾರ್ಲಿಮೆಂಟಿನ ರಚನೆ ಈ ಬಗೆಯಾಗಿದ್ದು ಅದಕ್ಕೆ ಪರಗಣೆಗಳಲ್ಲಿಯ ದೊಡ್ಡ ದೊಡ್ಡ ಜಮೀನುದಾರ ವರ್ಗದ ಮತ್ತು ಪಟ್ಟಣಗಳಲ್ಲಿಯ ಶ್ರೀಮಂತ ವರ್ಗದ ಪ್ರತಿನಿಧಿಗಳೇ ಬರುತ್ತಿದ್ದರು. ಮಧ್ಯಮ ಮತ್ತು ನಿಕೃಷ್ಟ ವರ್ಗಗಳ ಜನರಿಗೆ ಮತವನ್ನು ಕೊಡುವ ಅಧಿಕಾರವಿರಲಿಲ್ಲ. ಆದುದರಿಂದ ಅವರಿಗೆ ತಮ್ಮ ಪ್ರತಿನಿಧಿಗಳನ್ನು ಪಾರ್ಲಿಮೆಂಟಿನ ಸಭೆಗೆ ಕಳುಹಿಸಲು ಶಕ್ಯವಿದ್ದಿಲ್ಲ. ಆದುದರಿಂದ ಯಾವ ಪರಗಣೆಗಳಿಂದ ಮತ್ತು ಯಾವ ಪಟ್ಟಣಗಳಿಂದ ಎಷ್ಟು ಪ್ರತಿನಿಧಿಗಳು ಕಳಿಸಲ್ಪಡಬೇಕು ಮತ್ತು ಮತವನ್ನು ಕೊಡುವ ಅಧಿಕಾರವು ಯಾರಿಗಿರಬೇಕು ಎಂಬೀ ವಿಷಯದಲ್ಲಿ ಸುಧಾರಣೆಯಾಗುವುದು ಅವಶ್ಯವಿದ್ದಿತು.

**ಪಾರ್ಲಿಮೆಂಟಿನ ಸುಧಾರಣೆಯ ಬಿಲ್ಲು**—ಗ್ರೇ ಇವನ ಮಂತ್ರಿಮಂಡಲದಲ್ಲಿಯ **ಲಾರ್ಡ್ ಜಾನ್ ರಸೆಲ್** ಮಂತ್ರಿ ಎಂಬ ಪಾರ್ಲಿಮೆಂಟಿನ ಸುಧಾರಣೆಯ ಬಿಲ್ಲನ್ನು (The Reform Bill) ಕಾಮನ್ಸ್ ಸಭೆಯ ಮುಂದೆ ತಂದನು (ಮಾರ್ಚ ೧೮೩೧). ಈ ಬಿಲ್ಲನ್ನು ಟೋರಿ ಪಕ್ಷದ ಸದಸ್ಯರು ಬಲವಾಗಿ ವಿರೋಧಿಸಿದರು. ಆದರೂ ಕಾಮನ್ಸ್ ಸಭೆಯಲ್ಲಿ ಒಂದು ಮತವು ಹೆಚ್ಚಾಗಿ ಈ ಬಿಲ್ಲು ಪಾಸಾಯಿತು. ಆದರೆ ಈ ಪ್ರಶ್ನೆಯ ವಿಷಯದಲ್ಲಿ ಲೋಕಮತವು ಹೇಗಿದೆಂಬುದನ್ನು ತಿಳಿಯಲು ಗ್ರೇ ಇವನ ಸೂಚನೆಯಿಂದ ರಾಜನು ಆ ಪಾರ್ಲಿಮೆಂಟನ್ನು ವಿಸರ್ಜಿಸಿ ಹೊಸ ಚುನಾವಣೆಯನ್ನು ಮಾಡಿಸಿದನು. ಈ ಚುನಾವಣೆಯ ಸಮಯದಲ್ಲಿ ಪಾರ್ಲಿಮೆಂಟಿನ ಸುಧಾರಣೆಯ ಪ್ರಶ್ನೆಯೇ ಜನತೆಯ ಮುಂದೆ ಇದ್ದಿತು, ಮತ್ತು ಪಾರ್ಲಿಮೆಂಟಿನ ಸಭೆಗೆ ಬಹು ಜನ ಸಮಾಜದ ಬೆಂಬಲವಿದ್ದಿತು. ಆದುದರಿಂದ ಹೊಸ ಚುನಾವಣೆಯಾಗಿ ಕಾಮನ್ಸ್ ಸಭೆಯ ಅಧಿವೇಶನವು ನೆರೆದಾಗ ಪಾರ್ಲಿಮೆಂಟಿನ ಸುಧಾ

ರಣೆಗೆ ಅನುಕೂಲರಾದವರದೇ ಮತಾಧಿಕ್ಯವು ಇದ್ದುದು ಕಾಣಬಂದಿತು. ಆದುದರಿಂದ ಈ ಕಾಮನ್ಸ್ ಸಭೆಯಲ್ಲಿ ಹೆಚ್ಚಿನ ಮತಾಧಿಕ್ಯದಿಂದ ಪಾರ್ಲಿಮೆಂಟಿನ ಸುಧಾರಣೆಯ ಬಿಲ್ಲು ಪಾಸಾಯಿತು. ಆದರೆ ಲಾರ್ಡ್ಸ ಸಭೆಯಲ್ಲಿ ಆ ಬಿಲ್ಲು ಪಾಸಾಗಲಿಲ್ಲ (೧೮೪೧ ಅಕ್ಟೋಬರ). ಲಾರ್ಡ್ಸ ಸಭೆಯ ಈ ಕೃತಿಯನ್ನು ನಿಷೇಧಿಸಲು ಎಡೆಯೆಡೆಯಲ್ಲಿ ಸಭೆಗಳಾಗಿ ದೊಂಬೆಗಳು ಹುಟ್ಟತೊಡಗಿದುವು. ಲಾರ್ಡ್ಸ ಸಭೆಯಲ್ಲಿ ಈ ಬಿಲ್ಲಿಗೆ ಅನುಕೂಲರಾದ ಸದಸ್ಯರ ಮತಾಧಿಕ್ಯವು ಆಗಬೇಕೆಂದು ಕೆಲವು ಜನರನ್ನು ಲಾರ್ಡರಾಗಿ ಮಾಡಲು ಅರ್ಲ ಗ್ರೇ ಇವನು ರಾಜನಿಗೆ ಸೂಚನೆಯನ್ನಿತ್ತನು. ಇದೆಲ್ಲವನ್ನು ಕಂಡು ಈ ಬಿಲ್ಲನ್ನು ವಿರೋಧಿಸುವುದರಲ್ಲಿ ಅರ್ಥವಿಲ್ಲವೆಂದೂ ಡ್ಯೂಕ್ ಆಫ್ ವೆಲಿಂಗ್ಟನನು ಮತ್ತು ಆತನ ಅನುಯಾಯಿಗಳು ನಿಶ್ಚಯಿಸಿದರು. ಆ ಬಳಿಕ ಈ ರಿಫಾರ್ಮ್ ಬಿಲ್ಲು ಮೂರನೆಯ ಸಲ ಪಾರ್ಲಿಮೆಂಟಿನಲ್ಲಿ ಬಂದಿತು. ಈ ಸಲ ಅದು ಎರಡೂ ಸಭೆಗಳಲ್ಲಿ ಪಾಸಾಯಿತು (೧೮೩೨), ಮತ್ತು ಅದಕ್ಕೆ ರಾಜನ ಸಮ್ಮತಿ ದೊರೆತು ಅದು ಕಾಯ್ದೆಯಾಯಿತು. ಈ ರಿಫಾರ್ಮ್ ಬಿಲ್ಲಿನಿಂದ ಕೆಳಗೆ ಕಾಣಿಸಿದ ಸುಧಾರಣೆಗಳು ವ್ಯವಹಾರದಲ್ಲಿ ಬಂದುವು.

ರಿಫಾರ್ಮ್ ಬಿಲ್ಲು ಮಾಡಿದ ಸುಧಾರಣೆಗಳು:—

(೧) **ಸದಸ್ಯರು ಎಲ್ಲಿಂದ ಬರಬೇಕು?**—೨೦೦೦ ಜನವಸ್ತಿಗಿಂತ ಕಡಿಮೆಯಿದ್ದ ಜನವಸ್ತಿಯ ಸಣ್ಣ ಪಟ್ಟಣಗಳಿಗೆ ಪಾರ್ಲಿಮೆಂಟಿಗೆ ತಮ್ಮ ಪರವಾಗಿ ಸದಸ್ಯರನ್ನು ಕಳಿಸಲು ಅಧಿಕಾರವಿರಲಾಗದು. ಇದರಿಂದ ೫೬ ಸಣ್ಣ ಪಟ್ಟಣಗಳ ಪರವಾಗಿ ಬರುತ್ತಿರುವ ಪ್ರತಿನಿಧಿಗಳು ಕಡಿಮೆಯಾದರು. ೨೦೦೦ದಿಂದ ೪೦೦೦ದ ವರೆಗೆ ಜನವಸ್ತಿಯ ಪಟ್ಟಣಗಳು ತಮ್ಮ ಪರವಾಗಿ ಒಬ್ಬೊಬ್ಬ ಸದಸ್ಯನನ್ನು ಪಾರ್ಲಿಮೆಂಟಿಗೆ ಕಳಿಸಬೇಕು. ಇದರಿಂದ ೩೧ ಪಟ್ಟಣಗಳಲ್ಲಿಯ ಪ್ರತಿನಿಧಿಗಳು ಕಡಿಮೆಮಾಡಲ್ಪಟ್ಟರು. ಜನಸಂಖ್ಯೆ ಕಡಿಮೆಯಾಗಿದ್ದ ಪಟ್ಟಣಗಳ ಪರವಾಗಿ ಬರುವ ಸದಸ್ಯರ ಸಂಖ್ಯೆಯೂ ಕಡಿಮೆಮಾಡಲ್ಪಟ್ಟಿತು. ಹೀಗೆ ಸುಮಾರು ೧೪೩ ಸ್ಥಳಗಳು ಕಡಿಮೆಯಾದುವು. ಮತ್ತು ಅವು ದೊಡ್ಡ ದೊಡ್ಡ ಪರಗಣೆಗಳಿಗೆ ಮತ್ತು ವ್ಯಾಪಾರೋದ್ಯೋಗಗಳ ವಿಷಯದಲ್ಲಿ ಮುಂದುವರಿದಿದ್ದ ಪಟ್ಟಣಗಳಿಗೆ ಜನಸಂಖ್ಯೆಯ ಮಾನದಿಂದ ಕೊಡಲ್ಪಟ್ಟುವು.

(೨) **ಮತವನ್ನು ಕೊಡಲು ಅಧಿಕಾರವು ಯಾರಿಗೆ ಇರಬೇಕು?**—(ಅ) ಪರಗಣೆಗಳಲ್ಲಿ ಭೂಮಿಯ ವಾರ್ಷಿಕ ಉತ್ಪನ್ನವು ಕನಿಷ್ಠ ಪಕ್ಷಕ್ಕೆ ೪೦

ಶಿಲಿಂಗುಗಳಾದರೂ ಇದ್ದ ಭೂಮಿಯ ಒಡೆಯರಿಗೂ ವರ್ಷಕ್ಕೆ ೫೦ ಪೌಂಡು ಲಾವಣಿಯನ್ನು ಕೊಡುವ ಒಕ್ಕಲಿಗರಿಗೂ ಮತವನ್ನು ಕೊಡಲು ಅಧಿಕಾರವು ದೊರೆತಿತು. (ಆ) ಪಟ್ಟಣಗಳಲ್ಲಿ ವರ್ಷದ ಬಾಡಿಗೆ ೧೦ ಪೌಂಡುಗಳಿಗಿಂತ ಹೆಚ್ಚಾಗಿ ಯಾವ ಮನೆಗೆ ಬರುತ್ತಿದ್ದಿತು ಅಂತಹ ಮನೆಯ ಒಡೆಯರಿಗೆ ಮತ ವನ್ನು ಕೊಡುವ ಅಧಿಕಾರವು ದೊರೆತಿತು.

**ರಿಫೋರ್ಮ ಬಿಲ್ಲಿನಿಂದ ಬದಲಾದ ಪರಿಸ್ಥಿತಿ**—೧೮೩೨ರ ರಿಫೋರ್ಮ ಬಿಲ್ಲಿನಿಂದ ಮತದಾರ ಸಂಘವು ದೊಡ್ಡದಾದ ಬಳಿಕ ಕಾಮನ್ಸ ಸಭೆಯಲ್ಲಿ ಜಮಿನುದಾರ ವರ್ಗದ ಮೊದಲಿನ ವರ್ಚಸ್ಸು ಬಹಳವಾಗಿ ಕಡಿಮೆಯಾಯಿತು. ಮತ್ತು ವ್ಯಾಪಾರೋದ್ಯೋಗಗಳಲ್ಲಿ ತೊಡಗಿದ ಮಧ್ಯಮ ಸ್ಥಿತಿಯ ಜನರ ವರ್ಚಸ್ಸು ಹೆಚ್ಚಾಗತೊಡಗಿತು. ಆದುದರಿಂದ ಈ ಜನರಿಂದ ತಾವು ಚುನಾವಣೆ ಯಲ್ಲಿ ಆರಿಸಲ್ಪಡಬೇಕೆಂಬ ಇಚ್ಛೆಯುಳ್ಳ ಜನರು ಕಾರಖಾನೆ, ಗಿರಣಿ ಮತ್ತು ಮಧ್ಯಮ ಸ್ಥಿತಿಯ ಜನರ ವಸತಿಗೃಹ ಇವೇ ಮೊದಲಾದ ವಿಷಯಗಳಲ್ಲಿ ಯೋಗ್ಯ ವಾದ ಸುಧಾರಣೆಯನ್ನು ಮಾಡಲು ತಾವು ಪಾರ್ಲಿಮೆಂಟಿನಲ್ಲಿ ಬಿಲ್ಲುಗಳನ್ನು ತರುವೆವೆಂದು ಅಭಿವಚನಗಳನ್ನು ಕೊಡಲಾರಂಭಿಸಿದರು. ಪಾರ್ಲಿಮೆಂಟಿನಲ್ಲಿ ನಡೆವ ಕೆಲಸದ ಕಡೆಗೆ ಸಾಮಾನ್ಯ ಜನರು ಲಕ್ಷ್ಯವನ್ನು ಕೊಡತೊಡಗಿದರು. ವೃತ್ತಪತ್ರಗಳಲ್ಲಿ ಪಾರ್ಲಿಮೆಂಟಿನ ಸಭೆಗಳಲ್ಲಿ ಆಗುವ ವಾದವಿವಾದಗಳು ಪ್ರಕಟಿಸಲ್ಪಡಲಾರಂಭಿಸಿದುವು, ಮತ್ತು ಮಂತ್ರಿಮಂಡಲದ ಕೃತ್ಯಗಳ ಮತ್ತು ಅವರು ಅನುಸರಿಸುತ್ತಿದ್ದ ನೀತಿಯ ವಿಷಯದಲ್ಲಿ ಚರ್ಚೆಯಾಗಲು ಪ್ರಾರಂಭ ವಾಯಿತು.

**ಗುಲಾಮಗಿರಿಯ ಪದ್ಧತಿ ನಷ್ಟಗೊಳಿಸಲ್ಪಟ್ಟಿತು, ೧೮೩೩**—ಪಾರ್ಲಿಮೆಂಟಿನ ಸುಧಾರಣೆಯ ವಿಷಯದಲ್ಲಿ ೧೮೩೨ರಲ್ಲಿ ಕಾಯ್ದೆ ಪಾಸಾದ ಬಳಿಕ ಈ ಕಾಯ್ದೆಯಂತೆ ಚುನಾವಣೆಯಾಯಿತು. ಮತ್ತು ಈ ಸುಧಾರಿಸಿದ ಪಾರ್ಲಿಮೆಂಟಿನ ಅಧಿವೇಶನವು ೧೮೩೩ರ ಫೆಬ್ರುವರಿಯಲ್ಲಿ ನೆರೆಯಿತು. ಈ ಹೊಸ ಪಾರ್ಲಿಮೆಂಟಿನಲ್ಲಿ ಕೆಲವು ಮಹತ್ವದ ಕಾಯ್ದೆಗಳು ಪಾಸಾದುವು. ಇವುಗಳಲ್ಲಿ ಗುಲಾಮಗಿರಿಯ ಪದ್ಧತಿಯನ್ನು ನಷ್ಟಗೊಳಿಸುವ ಕಾಯ್ದೆಯೂ ಒಂದಾಗಿತ್ತು. ಗುಲಾಮಗಿರಿಯ ಪದ್ಧತಿಯನ್ನು ನಷ್ಟಗೊಳಿಸಬೇಕೆಂಬ ವಿಷಯದಲ್ಲಿ **ವಿಲ್ಬರ್ ಫೋರ್ಸ್** ಮತ್ತು **ಫಾವೆಲ್ ಬಕ್‌ಸ್ಟನ್** ಎಂಬವರು ೧೭೮೮ರಿಂದ ಆಂದೋಲನ ವನ್ನು ಪ್ರಾರಂಭಿಸಿದ್ದರು. ಅವರ ಪ್ರಯತ್ನದಿಂದ ೧೮೦೭ರಲ್ಲಿ ಪಾರ್ಲಿಮೆಂಟು ಒಂದು ಕಾಯ್ದೆಯನ್ನು ಮಾಡಿ ಗುಲಾಮರ ವ್ಯಾಪಾರವನ್ನು ನಿಲ್ಲಿಸಿತು. ಆದರೆ ಗುಲಾಮ

ಗಿರಿಯ ಪದ್ಧತಿ ನಷ್ಟವಾಗಲಿಲ್ಲ. ಆದುದರಿಂದ ಅವರು ಮತ್ತೆ ಪ್ರಯತ್ನಿಸಿದರು. ಅವರ ಪ್ರಯತ್ನಕ್ಕೆ ಈಗ ಯಶವು ಬಂದಿತು. ಈ ಹೊಸ ಪಾರ್ಲಿಮೆಂಟು ಗುಲಾಮರ ವ್ಯಾಪಾರದಂತೆ ಗುಲಾಮಗಿರಿಯ ಪದ್ಧತಿಯಾದರೂ ಬ್ರಿಟಿಶ್ ಸಾಮ್ರಾಜ್ಯದಲ್ಲಿ ನಷ್ಟವಾಗಬೇಕೆಂಬ ಕಾಯ್ದೆಯನ್ನು ೧೮೩೩ರಲ್ಲಿ ಮಾಡಿತು. ಗುಲಾಮರ ಮುಕ್ತತೆಯಿಂದ ತೋಟಗಾರರಿಗೆ ಆಗುವ ಹಾನಿಯನ್ನು ತುಂಬಿಕೊಡಲು ೨ ಕೋಟಿ ಪೌಂಡುಗಳನ್ನು ಅವರಲ್ಲಿ ಹಂಚಬೇಕೆಂದು ನಿಶ್ಚಯಿಸಲ್ಪಟ್ಟಿತು.

**ಕಾರಖಾನೆಗಳಲ್ಲಿಯ ಕೆಲಸದ ವಿಷಯದಲ್ಲಿ ಕಾಯ್ದೆ**—೯ ವರ್ಷಗಳ ಒಳಗಿನ ಎಳಮಕ್ಕಳನ್ನು ಕಾರಖಾನೆಗಳಲ್ಲಿ ಮತ್ತು ಗಿರಣಿಗಳಲ್ಲಿ ಕೆಲಸಕ್ಕೆ ಹಚ್ಚಕೂಡದು, ಅದರಂತೆ ಹೆಂಗುಸರಿಂದ ಮತ್ತು ೯ರಿಂದ ೧೪ ವರ್ಷಗಳ ವರೆಗಿನ ಹುಡುಗರಿಂದ ಪ್ರತಿದಿವಸವು ೧೦ ಗಂಟೆಗಳಿಗಿಂತ ಹೆಚ್ಚಿಗೆ ಕೆಲಸವನ್ನು ತೆಗೆದುಕೊಳ್ಳಬಾರದೆಂದು ೧೮೩೩ರಲ್ಲಿ ಪಾರ್ಲಿಮೆಂಟು ಕಾಯ್ದೆಯನ್ನು ಮಾಡಿತು. ಈ ಕಾಯ್ದೆ ಸರಿಯಾಗಿ ಪಾಲಿಸಲ್ಪಡುತ್ತದೆಯೊ ಇಲ್ಲವೊ ಎಂಬುದನ್ನು ನೋಡಲು ಅಧಿಕಾರಿಗಳು ನಿಯೋಜಿಸಲ್ಪಟ್ಟರು.

**ಬಡವರ ವಿಷಯದಲ್ಲಿ ಕಾಯ್ದೆ, ೧೮೩೪**—ಆ ಬಳಿಕ ಪಾರ್ಲಿಮೆಂಟು ಬಡಜನರ ವಿಷಯದಲ್ಲಿ ಹೊಸದೊಂದು ಕಾಯ್ದೆಯನ್ನು ಮಾಡಿತು (೧೮೩೪). ಕೆಲಸವು ದೊರೆಯದಿದ್ದುದರಿಂದ ಸಮರ್ಥರಾದ ಎಷ್ಟೋ ಬಡಜನರು ಭಿಕ್ಷೆಯನ್ನು ಬೇಡಬೇಕಾಗಿತ್ತು. ಇಂತಹ ಜನರಿಗೆ ಕಾರಖಾನೆಗಳಲ್ಲಿ (ವರ್ಕ್‌ಶಾಪ್‌ಗಳಲ್ಲಿ) ಕೆಲಸವನ್ನು ಕೊಡಬೇಕು ಮತ್ತು ಅಸಮರ್ಥರೂ ವೃದ್ಧರೂ ಆದ ಜನರಿಗೆ ಅಲ್ಲಲ್ಲಿ ಸ್ಥಾಪಿಸಲ್ಪಟ್ಟ ಲೋಕನಿಯುಕ್ತ ಮಂಡಲಗಳಿಂದ ಸಾಹಾಯ್ಯವನ್ನು ಕೊಡಿಸಬೇಕು ಎಂದು ಈ ಕಾಯ್ದೆಯಿಂದ ವ್ಯವಸ್ಥೆಮಾಡಲ್ಪಟ್ಟಿತು.

**ಮ್ಯುನಿಸಿಪಲ್ ಕೌನ್ಸಿಲ್ ಕಾಯ್ದೆ, ೧೮೩೫**—೧೮೩೫ರಲ್ಲಿ ಮೆಲ್‌ಬೋರ್ನನು ಮುಖ್ಯ ಮಂತ್ರಿಯಾಗಿರುವಾಗ ಪಾರ್ಲಿಮೆಂಟು ಮ್ಯುನಿಸಿಪಲ್ ಕೌನ್ಸಿಲ್ ಕಾಯ್ದೆಯನ್ನು ಮಾಡಿತು (೧೮೩೫). ಈ ಮೊದಲು ಅಲ್ಲಲ್ಲಿಯ ಮ್ಯುನಿಸಿಪಾಲಿಟಿಗಳಲ್ಲಿಯ ಸದಸ್ಯರ ಸ್ಥಳಗಳಿಗೋಸುಗ ಮತವನ್ನು ಕೊಡುವ ಅಧಿಕಾರವು ಕೆಲವು ವ್ಯಕ್ತಿಗಳಿಗೆ ಮತ್ತು ಮನೆತನಗಳಿಗೆ ಅಷ್ಟೇ ಇದ್ದಿತು. ಆದರೆ ಈ ಕಾಯ್ದೆಯಿಂದ ಮನೆಪಟ್ಟಿಯನ್ನು ಕೊಡುವ ಎಲ್ಲರಿಗೂ ಮ್ಯುನಿಸಿಪಾಲಿಟಿಯ ಸದಸ್ಯರನ್ನು ಆರಿಸಲು ಅಧಿಕಾರವು ದೊರೆತಿತು. ಅದರಂತೆ ಮನೆಪಟ್ಟಿಯನ್ನು ಹೆಚ್ಚಿಸಿ ಸ್ಥಾನಿಕ ವಿಷಯದಲ್ಲಿ ಅವಶ್ಯವಿದ್ದ ಸುಧಾರಣೆಗಳನ್ನು ಮಾಡಲು ಅಧಿಕಾರವು ಸದಸ್ಯರಿಗೆ ದೊರೆತುದರಿಂದ ಪಟ್ಟಣಗಳ ಸ್ಥಿತಿ ಸುಧಾರಿಸತೊಡಗಿತು.

**ಮತವಿಭಾಗಣಿಯ ಯಾದಿ, ೧೮೩೬–೧೮೩೭ರಿಂದ** ಪಾರ್ಲಿಮೆಂಟ ಸಭೆಯಲ್ಲಿ ಬರುವ ಪ್ರಶ್ನಗಳ ಮೇಲೆ ಯಾವ ಸದಸ್ಯನು ಯಾವ ಪಕ್ಷಕ್ಕೆ ಮತವನ್ನು ಕೊಡುವನು ಎಂಬುದನ್ನು ತಿಳಿಸಲು ಮತವಿಭಾಗಣಿಯ ಯಾದಿ (Division List) ಪ್ರಸಿದ್ಧವಾಗತೊಡಗಿತು. ಅದರಿಂದ ಪಾರ್ಲಿಮೆಂಟಿನಲ್ಲಿಯ ಸದಸ್ಯರಿಗೆ ತಮ್ಮ ಮತದಾರರಿಗೆ ಬೇಕಾದ ಪಕ್ಷಕ್ಕೆ ಮತವನ್ನು ಕೊಡುವುದು ಅವಶ್ಯವೆನಿಸಲಾರಂಭಿಸಿತು.

**ಮರ್ಯಾದಿತ ಜವಾಬದಾರಿಯ ಜಾಯಿಂಟ್ ಸ್ಟಾಕ್ ಕಂಪನಿಗಳ ವಿಷಯದಲ್ಲಿ ಕಾಯ್ದೆ, ೧೮೩೭** (Limited Liabilities Act)–ಈ ಕಾಯ್ದೆಯಿಂದ ಮರ್ಯಾದಿತ ಜವಾಬದಾರಿಯ ಜಾಯಿಂಟ್ ಸ್ಟಾಕ್ ಕಂಪನಿಗಳು ಸ್ಥಾಪಿಸಲ್ಪಟ್ಟು ಅವು ಸರಕಾರದಲ್ಲಿ ರಜಿಸ್ಟರಮಾಡಲ್ಪಟ್ಟರೆ ಇಂತಹ ಕಂಪನಿಗಳ ಶೇರ್ ಹೋಲ್ಡರರು ಅವರ ಹೆಸರಿನಲ್ಲಿದ್ದ ಶೇರುಗಳ ಹಣದಷ್ಟಕ್ಕೆ ಮಾತ್ರ ಜವಾಬದಾರರಿರುವರೆಂದು ನಿಶ್ಚಯಿಸಲ್ಪಟ್ಟಿತು. ಈ ಕಾಯ್ದೆಯಾಗುವ ಮೊದಲು ಎಲ್ಲ ಕಂಪನಿಗಳು ಅಮರ್ಯಾದಿತ ಜವಾಬದಾರಿಯವು ಆಗಿದ್ದುವು, ಮತ್ತು ಆ ಕಾರಣದಿಂದ ಕಂಪನಿಗೆ ಹಾನಿಯಾಗಿ ಜನರಿಗೆ ಹಣವನ್ನು ಕೊಡುವ ಪ್ರಸಂಗವು ಬಂದರೆ ಅದಕ್ಕೋಸುಗ ಕಂಪನಿಯ ಎಲ್ಲ ಶೇರ್ ಹೋಲ್ಡರರು ಜವಾಬದಾರರಾಗುತ್ತಿದ್ದರು. ಈ ಕಾಯ್ದೆ ಆದ ಬಳಿಕ ರೇಲ್ವೆ, ಉಗೆಹಡಗುಗಳು, ಕಾರಖಾನೆಗಳು, ಗಿರಣಿಗಳು ಮೊದಲಾದುವುಗಳ ವಿಷಯದಲ್ಲಿ ದೊಡ್ಡ ಭಾಂಡವಲಿನ ಕಂಪನಿಗಳು ಸ್ಥಾಪಿಸಲ್ಪಟ್ಟುವು, ಮತ್ತು ಇಂತಹ ಕಂಪನಿಗಳ ಶೇರುಗಳನ್ನು ತೆಗೆದುಕೊಂಡು ಅವುಗಳಲ್ಲಿ ತಮ್ಮ ಹಣವನ್ನು ತೊಡಗಿಸಲು ಮಧ್ಯಮ ಮತ್ತು ನಿಕೃಷ್ಟ ವರ್ಗಗಳ ಜನರಿಗೆ ಶಕ್ಯವಾಯಿತು. ಇಂತಹ ದೊಡ್ಡ ಭಾಂಡವಲಿನ "ಲಿಮಿಟೆಡ್ ಕಂಪನಿಗಳು" ಸ್ಥಾಪಿಸಲ್ಪಡಲಾರಂಭಿಸಿದುದರಿಂದ ಇಂಗ್ಲಂಡಿನ ಉದ್ಯೋಗ-ವ್ಯವಸಾಯಗಳಿಗೂ ವ್ಯಾಪಾರಕ್ಕೂ ಉತ್ತೇಜನವು ದೊರೆತಿತು.

**ಪರರಾಷ್ಟ್ರೀಯ ನೀತಿ**—೪ನೆಯ ವಿಲಿಯಮನ ಆಳ್ಕೆಯಲ್ಲಿ ಯುರೋಪದಲ್ಲಿ ಎಷ್ಟೋ ರಾಷ್ಟ್ರಗಳಲ್ಲಿಯ ಜನರು ತಮ್ಮ ರಾಜರಿಂದ ತಮಗೆ ಹೆಚ್ಚು ಅಧಿಕಾರಗಳು ದೊರೆಯಬೇಕೆಂದು ಆಂದೋಲನವನ್ನು ಆರಂಭಿಸಿದರು. ಆ ಕಾಲದಲ್ಲಿ ಲಾರ್ಡ ಪಾಮರ್ಸ್ಟನನು ಇಂಗ್ಲಂಡಿನ ಪರರಾಷ್ಟ್ರೀಯ ಮಂತ್ರಿಯಾಗಿದ್ದನು. ಯುರೋಪದಲ್ಲಿಯ ಬೇರೆ ಬೇರೆ ರಾಷ್ಟ್ರಗಳಲ್ಲಿಯ ಜನರು ನಡೆಯಿಸಿದ ಸನದಶೀರವಾದ ಆಂದೋಲನಗಳಿಗೆ ಅವನ ಸಹಾನುಭೂತಿಯಿದ್ದಿತು.

**ಉಳಿದ ವಿಷಯಗಳು**—೪ನೆಯ ವಿಲಿಯಮನ ಆಳ್ಕೆಯಲ್ಲಿ ೧೮೩೦ರಲ್ಲಿ

ಲಿವರ್‌ಪೂಲಿನಿಂದ ಮ್ಯಾಂಚೆಸ್ಟರದವರೆಗೆ ರೇಲ್ವೆ ಪ್ರಾರಂಭವಾಯಿತು. ಆ ಬಳಿಕ ಉಳಿದ ಕೆಲವು ಏಡೆಗಳಲ್ಲಿಯೂ ಪ್ರಾರಂಭವಾಯಿತು. ಇದರಿಂದ ಅಲ್ಪ ವೆಚ್ಚದಲ್ಲಿ ಮತ್ತು ಅಲ್ಪ ವೇಳೆಯಲ್ಲಿ ಪ್ರವಾಸಮಾಡಲು ಅನುಕೂಲವಾಯಿತು. ಈ ಕಾರಣ ದಿಂದ ಇಂಗ್ಲಂಡಿನ ಬೇರೆ ಬೇರೆ ಪರಗಣೆಗಳಲ್ಲಿಯ ಜನರಲ್ಲಿ ಬಳಕೆ ಹೆಚ್ಚಿತು. ೧೮೩೫ರಲ್ಲಿ ತಂತಿಯಿಂದ ಸುದ್ದಿಯನ್ನು ಕಳಿಸಲು ಅನುಕೂಲತೆಯಾಯಿತು.

೪ನೆಯ ವಿಲಿಯಮನು ೧೮೩೭ರಲ್ಲಿ ಜೂನ ತಿಂಗಳಲ್ಲಿ ಮರಣಹೊಂದಿದನು.

---

## ಸಾರಾಂಶವು

### ೪ನೆಯ ವಿಲಿಯಮನು (೧೮೩೦ — ೧೮೩೭).

೪ನೆಯ ವಿಲಿಯಮನು ಮತ್ತು ಅವನ ಮಂತ್ರಿಗಳು.

ಮುಖ್ಯ ಮಂತ್ರಿಗಳು.

೧೮೩೦—೧೮೩೪ ಅರ್ಲ ಗ್ರೇ (ವ್ಹಿಗ್).
೧೮೩೪ ಮೆಲ್‌ಬೋರ್ನ್ (ವ್ಹಿಗ್).
೧೮೩೪—೧೮೩೫ ಪೀಲ್ (ಟೋರಿ).
೧೮೩೫—೧೮೪೧ ಮೆಲ್‌ಬೋರ್ನ್ (ವ್ಹಿಗ್).

ಇತರ ಮಂತ್ರಿಗಳು — ರಸೆಲ್ (ವ್ಹಿಗ್) ಅಂತಃಸ್ಥಕಾರಭಾರದ ಮಂತ್ರಿ. ಪಾಮರ್ ಸ್ಟನ್ (ವ್ಹಿಗ್) ಪರರಾಷ್ಟ್ರೀಯ ಮಂತ್ರಿ.

ಇತರ ಪ್ರಮುಖ ಪುರುಷರು.

ವಿಲ್ಬರ್‌ಫೋರ್ಸ್ ಮತ್ತು ಫೌವೆಲ್ ಬಕ್‌ಸ್ಟನ್—ಗುಲಾಮಗಿರಿಯ ಪದ್ಧತಿ ಯನ್ನು ನಷ್ಟಗೊಳಿಸಲು ಪ್ರಯತ್ನಿಸಿದರು.

ಡೆನಿಯಲ್ ಓಕಾನೆಲ್—ಐರಿಶ್ ರೋಮನ್ ಕೆಥಲಿಕ್ ಜನರ ಮುಂದಾಳು ಮತ್ತು ಪಾರ್ಲಿಮೆಂಟಿನ ಸದಸ್ಯನು.

ಮಹತ್ವದ ಕಾಯ್ದೆಗಳು.

೧೮೩೨ ಪಾರ್ಲಿಮೆಂಟಿನ ಸುಧಾರಣೆಯ ಬಿಲ್ಲು (ರಿಫಾರ್ಮ ಬಿಲ್ಲು) ಪಾಸಾಯಿತು.
೧೮೩೩ ಬ್ರಿಟಿಶ್ ಸಾಮ್ರಾಜ್ಯದಲ್ಲಿ ಗುಲಾಮಗಿರಿಯ ಪದ್ಧತಿ ನಷ್ಟವಾಯಿತು.
೧೮೩೪ ಬಡವರ ವಿಷಯದಲ್ಲಿ ಕಾಯ್ದೆ. ಸಮರ್ಥರಿಗೆ ಕೆಲಸವು, ಅಂಗಹೀನ ರಿಗೆ ಸಾಹಾಯ್ಯವು.

೧೮೩೫ ಮ್ಯುನಿಸಿಪಲ್ ಕೌನ್ಸಿಲ್ ಆಕ್ಟ್. ಮ್ಯುನಿಸಿಪಾಲಿಟಿಯ ಸದಸ್ಯರು ಲೋಕನಿಯುಕ್ತರು.

೧೮೩೬ ಮತವಿಭಾಗಣಿಯ ಯಾದಿ (ಡಿವಿಜನ್ ಲಿಸ್ಟ್) ಪ್ರಸಿದ್ಧಮಾಡಲ್ಪಡ ತೊಡಗಿತು.

೧೮೩೭ ಮರ್ಯಾದಿತ ಜವಾಬದಾರಿಯ ಜಾಯಿಂಟ್ ಸ್ಟಾಕ್ ಕಂಪನಿಗಳ ಕಾಯ್ದೆ (Limited Liabilities Act).

# ೨೪ನೆಯ ಪ್ರಕರಣವು

## ವಿಕ್ಟೋರಿಯಾ

ಜನ್ಮವು ೧೮೧೯; ರಾಜ್ಯಾರೋಹಣವು (೧೮ನೆಯ ವರ್ಷದಲ್ಲಿ) ೧೮೩೭;

ಮೃತ್ಯು ೧೯೦೧.

(೧೮೩೭–೧೯೦೧).

### ಮಹತ್ವದ ಇಸ್ವಿಗಳು.

೧೮೩೭–೧೮೪೮ ಚಾರ್ಟಿಸ್ಟ ಆಂದೋಲನವು.

೧೮೩೮ ಧಾನ್ಯದ ಮೇಲಿನ ಕರವನ್ನು ರದ್ದುಗೊಳಿಸಲು ಆಂದೋಲನವು ಪ್ರಾರಂಭವಾಯಿತು.

೧೮೪೧–೧೮೪೬ ಸರ್ ರಾಬರ್ಟ ಪೀಲನು ಮುಖ್ಯ ಮಂತ್ರಿಯಾದನು.

೧೮೪೫ ಐರ್ಲಂಡಿನಲ್ಲಿಯ ಬರವು.

೧೮೪೬ ಧಾನ್ಯದ ಮೇಲಿನ ಸುಂಕಗಳು ರದ್ದಾದುವು, ಕಾಂಝರ್ವೇಟಿವ್ ಪಕ್ಷದಲ್ಲಿ ಒಡಕು.

೧೮೪೮ ಯುರೋಪದಲ್ಲಿಯ ಕೆಲವು ರಾಷ್ಟ್ರಗಳಲ್ಲಿ ಕ್ರಾಂತಿಕಾರಕ ಆಂದೋಲನಗಳು.

೧೮೪೯ ನೆವಿಗೇಶನ್ ಕಾಯ್ದೆ ರದ್ದಾಯಿತು. ಅನಿರ್ಬಂಧ ವ್ಯಾಪಾರದ ಪ್ರಾರಂಭವು.

೧೮೫೧ ಲಂಡನಿನಲ್ಲಿ ಮೊದಲನೆಯ ಔದ್ಯೋಗಿಕ ಪ್ರದರ್ಶನವು.

೧೮೫೪–೧೮೫೬ ಕ್ರಿಮಿಯನ್ ಯುದ್ಧವು.

೧೮೫೫ ಪಾಮರ್ಸ್ಟನನು ಮುಖ್ಯ ಮಂತ್ರಿಯಾದನು.

೧೮೫೭ ಹಿಂದುಸ್ಥಾನದಲ್ಲಿ ಸಿಪಾಯಿಗಳ ಬಂಡು.

೧೮೬೧ ಇಟಲಿಯ ಏಕೀಕರಣವು.

೧೮೬೧–೧೮೬೫ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಅಂತಃಸ್ಥ ಯುದ್ಧವು.

೧೮೬೫ ಪಾಮರ್ಸ್ಟನನ ಮೃತ್ಯು.

೧೮೬೭ ೨ನೆಯ ರಿಫಾರ್ಮ ಬಿಲ್.

೧೮೬೮–೧೮೭೪ ಗ್ಲಾಡ್‌ಸ್ಟನನ ಮೊದಲನೆಯ ಮಂತ್ರಿಮಂಡಲವು.

೧೮೬೮ ಐರ್ಲಂಡಿನಲ್ಲಿಯ ಪ್ರಾಟೆಸ್ಟಂಟ್ ಚರ್ಚಿಗೆ ಸರಕಾರದ ಸಾಹಾಯ್ಯವು ಇಲ್ಲದಂತಾಗಲು ಕಾಯ್ದೆ.

೧೮೭೦ ಪ್ರಾಥಮಿಕ ಶಿಕ್ಷಣದ ಕಾಯ್ದೆ.
೧೮೭೦—೧೮೭೧ ಫ್ರಾನ್ಸ್ ಮತ್ತು ಜರ್ಮನಿ ಇವುಗಳ ನಡುವೆ ಯುದ್ಧವು.
೧೮೭೧ ಫ್ರಾನ್ಸಿನಲ್ಲಿ ಲೋಕಸತ್ತಾಕ ರಾಜ್ಯದ ಸ್ಥಾಪನೆ.
೧೮೭೧ ಜರ್ಮನ್ ಸಾಮ್ರಾಜ್ಯದ ಸ್ಥಾಪನೆ.
೧೮೭೧ ಟ್ರೇಡ ಯುನಿಯನ್ ಆಕ್ಟ್.
೧೮೭೨ ಬೆಲಟ್ ಆಕ್ಟ್.
೧೮೭೪ ಡಿಝ್ರೇಲಿ ಮುಖ್ಯ ಮಂತ್ರಿಯಾದನು.
೧೮೭೫ ಟ್ರೇಡ ಯುನಿಯನ್ ಆಕ್ಟ್.
೧೮೭೫ ಪಾರ್‌ನೆಲನು ಐರಿಶ್ ಜನರ ಮುಂದಾಳು ಆದನು.
೧೮೭೭—೧೮೭೮ ರಶಿಯಾ ತುರ್ಕಸ್ಥಾನಗಳ ಯುದ್ಧವು. ಬರ್ಲಿನಿನ ಒಪ್ಪಂದವು (೧೮೭೮).
೧೮೮೦ ಒತ್ತಾಯದ ಪ್ರಾಥಮಿಕ ಶಿಕ್ಷಣವು.
೧೮೮೦—೧೮೮೫ ಗ್ಲಾಡ್‌ಸ್ಟನನು ಮುಖ್ಯ ಮಂತ್ರಿ.
೧೮೮೧ ಐರ್ಲಂಡಿನಲ್ಲಿಯ ಭೂಮಿಗಳ ವಿಷಯದಲ್ಲಿ ಕಾಯ್ದೆ.
೧೮೮೧ ಡಿಝ್ರೇಲಿಯ ಮರಣವು.
೧೮೮೪—೧೮೮೫ ೩ನೆಯ ರಿಫಾರ್ಮ ಬಿಲ್ಲು (ಗ್ಲಾಡ್‌ಸ್ಟನನು ಮುಖ್ಯ ಮಂತ್ರಿ).
೧೮೮೬ ಗ್ಲಾಡ್‌ಸ್ಟನನ ಹೋಮ್‌ರೂಲ್ ಬಿಲ್ಲು; ಲಿಬರಲ್ ಪಕ್ಷದಲ್ಲಿ ಒಡಕು.
೧೮೮೭ ವಿಕ್ಟೋರಿಯಾ ರಾಣಿಯು ಆಳ್ಕೆಯ ಸುವರ್ಣಮಹೋತ್ಸವವು.
೧೮೮೮ ಕೌಂಟಿ ಕೌನ್ಸಿಲ್ ಆಕ್ಟ್ (ಸ್ಥಾನಿಕ ಸ್ವರಾಜ್ಯದ ಕಾಯ್ದೆ).
೧೮೯೭ ವಿಕ್ಟೋರಿಯಾ ರಾಣಿಯು ಆಳ್ಕೆಯ ಹೀರಕಮಹೋತ್ಸವವು.
೧೮೯೮ ಗ್ಲಾಡ್‌ಸ್ಟನನ ಮೃತ್ಯು.
೧೮೯೯—೧೯೦೨ ಬೋರ್ ಯುದ್ಧವು.

**ವಿಕ್ಟೋರಿಯಾ ರಾಣಿ**—೪ನೆಯ ವಿಲಿಯಮನಿಗೆ ಪುತ್ರಸಂತಾನವು ಇಲ್ಲದುದರಿಂದ ಅವನ ತರುವಾಯದಲ್ಲಿ ಅವನ ಬಂಧುಪುತ್ರಿಯಾದ ವಿಕ್ಟೋರಿಯಾ ಇವಳು ಇಂಗ್ಲಂಡಿನ ಪಟ್ಟಕ್ಕೆ ಬಂದಳು. ಆ ಸಮಯದಲ್ಲಿ ಅವಳು ೧೮ ವರ್ಷದವಳಿದ್ದಳು. ಆದರೂ ಅವಳು ರಾಜ್ಯಕಾರಭಾರದಂತಹ ಮಹತ್ವದ ಕೆಲಸವನ್ನು ಕೈಕೊಂಡು ಜಾಣತನದಿಂದಲೂ ಕರ್ತೃತ್ವಶೀಲತೆಯಿಂದಲೂ ರಾಜ್ಯಕಾರಭಾರವನ್ನು ಮಾಡಿ ಲೋಕಪ್ರೀತಿಯನ್ನು ಸಂಪಾದಿಸಿದಳು. ಅವಳು ಪಟ್ಟಕ್ಕೆ ಬಂದಾಗ **ಮೆಲ್‌ಬೋರ್ನನು** ಮುಖ್ಯ ಮಂತ್ರಿಯಾಗಿದ್ದನು, ಮತ್ತು ಅವನು ವಿಕ್ಟೋರಿಯಾ ರಾಣಿ ಅಲ್ಪ ವಯಸ್ಸಿನವಳು ಆಗಿದ್ದುದರಿಂದ ಅವಳಿಗೆ ರಾಜ್ಯಕಾರಭಾರದ ಶಿಕ್ಷಣವನ್ನು ಕೊಟ್ಟನು. ೧೮೪೦ರಲ್ಲಿ ವಿಕ್ಟೋರಿಯಾ ರಾಣಿ ಸಕ್ಸ್-ಕೋಬರ್ಗದ (ಜರ್ಮನಿಯಲ್ಲಿಯ ಒಂದು ಸಂಸ್ಥಾನವು)

ರಾಜಪುತ್ರನಾದ ಅಲ್‌ಬರ್ಟನನ್ನು ಮದುವೆಯಾದಳು. ಅಲ್‌ಬರ್ಟನು ಕುಶಾಗ್ರಬುದ್ಧಿಯವನೂ ದೂರದರ್ಶಿಯೂ ಮಧುರಸ್ವಭಾವದವನೂ ಆಗಿದ್ದುದರಿಂದ ಅವನ ವಿಷಯದಲ್ಲಿ ಎಲ್ಲರಿಗೂ ಆದರವೆನಿಸುತ್ತಿತ್ತು. ಲಗ್ನವಾಗಿ ೨೧ ವರ್ಷಗಳಾದ ಬಳಿಕ ೧೮೬೧ರಲ್ಲಿ ಅಲ್‌ಬರ್ಟನು ಮರಣಹೊಂದಿದನು. ವಿಕ್ಟೋರಿಯಾ ರಾಣಿ ಪಟ್ಟಕ್ಕೆಬಂದಾಗ ೧ನೆಯ ಜಾರ್ಜನ ಆಳ್ಕೆಯಿಂದ ಒದಗಿದ್ದ ಹನೋವರ್ ಮತ್ತು ಇಂಗ್ಲಂಡ್ ಇವುಗಳ ಸಂಬಂಧವು ಕಡಿಯಿತು; ಏಕೆಂದರೆ ಹನೋವರದ ಕಾಯ್ದೆಯಂತೆ ಹೆಂಗುಸಿಗೆ ರಾಜ್ಯಮಾಡಲು ಅಧಿಕಾರವಿರಲಿಲ್ಲ. ಆದುದರಿಂದ ೪ನೆಯ ವಿಲಿಯಮ್ಮನ ತರುವಾಯದಲ್ಲಿ ೩ನೆಯ ಜಾರ್ಜನ ಕನಿಷ್ಠ ಪುತ್ರ ಅರ್ನೆಸ್ಟ ಇವನು (ಡ್ಯೂಕ್ ಆಫ್ ಕಂಬರಲಂಡ್) ಹನೋವರ ಸಂಸ್ಥಾನದ ಅರಸನಾದನು. ವಿಕ್ಟೋರಿಯಾ


ವಿಕ್ಟೋರಿಯಾ ರಾಣಿ

ರಾಣಿ ೬೪ ವರ್ಷಗಳವರೆಗೆ ರಾಜ್ಯವಾಳಿದಳು. ಇವಳ ಹಿಂದೆ ಯಾವ ಅರಸನೂ ಅಥವಾ ಅರಸಿಯೂ ಇಷ್ಟು ವರ್ಷಗಳ ವರೆಗೆ ರಾಜ್ಯವಾಳಿದ್ದಿಲ್ಲ. ಈ ದೀರ್ಘ ಕಾಲದಲ್ಲಿ ಬದಲಾದ ಪರಿಸ್ಥಿತಿಗಳನ್ನು ಅನುಸರಿಸಿ ಬೇರೆ ಬೇರೆ ಪ್ರಶ್ನೆಗಳು ಉದ್ಭವಿಸಿದುವು; ಜನರ ವಿಚಾರಗಳಲ್ಲಿಯೂ ಪರಿವರ್ತನವಾಗಿ ರಾಜಕೀಯ ಪಕ್ಷಗಳ ಟೋರಿ ಮತ್ತು ವ್ಹಿಗ್ ಎಂಬ ಮೊದಲಿನ ಹೆಸರುಗಳು ಬಳಕೆಯಲ್ಲಿ ಇಲ್ಲದಂತಾಗಿ ಕಾಂಝರ್ವೇಟಿವ್ ಮತ್ತು ಲಿಬರಲ್ ಎಂಬ ಹೆಸರುಗಳು ರೂಢವಾದುವು. ಇವುಗಳಲ್ಲಿಯೂ ಮುಂದೆ ಬೇರೆ ಬೇರೆ ಪ್ರಶ್ನೆಗಳ ವಿಷಯದಲ್ಲಿ ಉಪಪಕ್ಷಗಳಾದುವು. ಇಂಗ್ಲಂಡಿನಲ್ಲಿ ಇದ್ದ ಈ ರಾಜಕೀಯ ಪಕ್ಷಗಳಲ್ಲಿಯ ಯಾವ ಪಕ್ಷಕ್ಕೂ ಹೊಂದಿಕೊಂಡಿರದೆ ಎಲ್ಲವನ್ನು ಸಮಾನವಾಗಿ ನಡೆಯಿಸಿಕೊಳ್ಳುವುದನ್ನೇ ವಿಕ್ಟೋರಿಯಾ ರಾಣಿ ತನ್ನ ನೀತಿಯಾಗಿ ನಿಶ್ಚಯಿಸಿದಳು. ಅದರಿಂದ ಅವಳ ವಿಷಯದಲ್ಲಿ ಎಲ್ಲರಿಗೂ ಮಮತೆಯೂ ಆದರವೂ ಎನಿಸುತ್ತಿತ್ತು. ಬ್ರಿಟಿಶ್ ಸಾಮ್ರಾಜ್ಯದಲ್ಲಿಯ

ನಾಲ್ಕೂ ಖಂಡಗಳಲ್ಲಿ ಹಬ್ಬಿದ ವಸಾಹತುಗಳ ಜನರಿಗೂ ಇಂಗ್ಲಂಡಿನ ರಾಣೆ ಅಥವಾ ರಾಜನು ಸಾಮ್ರಾಜ್ಯದಲ್ಲಿಯ ಎಲ್ಲ ಭಾಗಗಳನ್ನು ಜೋಡಿಸುವ ವ್ಯಕ್ತಿಯೆಂದು ಎನಿಸಲಾರಂಭಿಸಿತು.

**ವಿಕ್ಟೋರಿಯಾ ರಾಣಿಯೂ ಅವಳ ಮಂತ್ರಿಗಳೂ**—ವಿಕ್ಟೋರಿಯಾ ರಾಣಿ ೬೪ ವರ್ಷ ರಾಜ್ಯವಾಳಿದಳು. ಈ ದೀರ್ಘಕಾಲದ ಆಳ್ಕೆಯಲ್ಲಿ ಅನೇಕರು ಮುಖ್ಯ ಮಂತ್ರಿಗಳಾದರು. ಅವರಲ್ಲಿ ಕೆಲವರ ಹೆಸರುಗಳನ್ನು ಮುಂದೆ ಕೊಟ್ಟಿದ್ದೇವೆ. ವ್ಹಿಗ್ ಪಕ್ಷದ **ಮೆಲ್‌ಬೋರ್ನನು** ೧೮೩೭—೧೮೪೧ರ ವರೆಗೆ ಮುಖ್ಯ ಮಂತ್ರಿಯಾಗಿದ್ದನು. ಅವನು ಇಂಗ್ಲಂಡಿನಲ್ಲಿಯ ಚಾರ್ಟಿಸ್ಟ ಆಂದೋಲನವನ್ನೂ ಐರ್ಲಂಡಿನ ಆಂದೋಲನವನ್ನೂ ಮುರಿಯಲು ಉಗ್ರವಾದ ಉಪಾಯಗಳನ್ನು ಯೋಜಿಸಬೇಕಾಯಿತು. ಮೆಲ್‌ಬೋರ್ನನ ತರುವಾಯದಲ್ಲಿ ಕಾಂಝರ್ವೇಟಿವ್ ಪಕ್ಷದ **ಪೀಲನು** ಮಂತ್ರಿಯಾದನು (೧೮೪೧—೪೬). ಈ ಸಮಯದಲ್ಲಿ ಸಂರಕ್ಷಿತ ವ್ಯಾಪಾರ ಪದ್ಧತಿಯನ್ನು ನಿಲ್ಲಿಸಿ ಅನಿರ್ಬಂಧ ವ್ಯಾಪಾರವನ್ನು ಪ್ರಾರಂಭಿಸಬೇಕೆಂದು ಆಂದೋಲನವು ಹುಟ್ಟಿತು. ಪೀಲನು ಮೊದಮೊದಲು ಸಂರಕ್ಷಿತ ವ್ಯಾಪಾರದ ಪುರಸ್ಕರ್ತನಾಗಿದ್ದನು, ಆದರೆ ಮುಂದೆ ಅವನ ಮತದಲ್ಲಿ ಪರಿವರ್ತನೆಯಾಯಿತು. ಅವನು ಎಷ್ಟೋ ವಸ್ತುಗಳ ಮೇಲಿನ ಸುಂಕವನ್ನು ಕಡಿಮೆಮಾಡಿದನು ಮತ್ತು ಧಾನ್ಯದ ಮೇಲಿನ ಸುಂಕವನ್ನು ತೆಗೆದುಹಾಕಿದನು, ಆದರೆ ಇದರಿಂದ ಕಾಂಝರ್ವೇಟಿವ್ ಪಕ್ಷದಲ್ಲಿಯ ಬಹುಮತವು ಅವನ ವಿರುದ್ಧವಾದುದರಿಂದ ಅವನು ಮುಖ್ಯ ಮಂತ್ರಿಪದವನ್ನು ಬಿಡಬೇಕಾಯಿತು. ಅವನ ತರುವಾಯದಲ್ಲಿ ಲಿಬರಲ್ ಪಕ್ಷದ **ರಸೆಲನು** (೧೮೪೬—೫೨; ೧೮೬೫—೬೬) ಮತ್ತು **ಪಾಮರ್‌ಸ್ಟನನು** (೧೮೫೫—೫೮; ೧೮೫೯—೬೫) ಮುಖ್ಯ ಮಂತ್ರಿಗಳಾದರು. ರಸೆಲನು ಚಾರ್ಟಿಸ್ಟ ಆಂದೋಲನವನ್ನು ಮುರಿದನು ಮತ್ತು ಅನಿರ್ಬಂಧ ವ್ಯಾಪಾರದ ಪದ್ಧತಿಯನ್ನು ಪ್ರಾರಂಭಿಸಿದನು. ಪಾಮರ್‌ಸ್ಟನನು ಇಂಗ್ಲಂಡಿನ ಅಂತಃಸ್ಥ ಕಾರಭಾರದ ಕಡೆಗೆ ವಿಶೇಷ ಲಕ್ಷ್ಯವನ್ನು ಕೊಡಲಿಲ್ಲ. ಆದರೆ ಪರರಾಷ್ಟ್ರೀಯ ವಿಷಯದಲ್ಲಿ ಲಕ್ಷ್ಯವನ್ನು ಹಾಕಿ ಯುರೋಪದಲ್ಲಿಯ ಬೇರೆ ಬೇರೆ ರಾಷ್ಟ್ರಗಳಲ್ಲಿಯ ಜನರು ತಮ್ಮ ರಾಜರ ಒತ್ತಾಯದ ಆಳ್ಕೆಯ ವಿರುದ್ಧವಾಗಿ ನಡೆಯಿಸಿದ ಆಂದೋಲನಕ್ಕೆ ಸಹಾನುಭೂತಿಯನ್ನು ವ್ಯಕ್ತಗೊಳಿಸಿದನು. ಅದರಂತೆಯೇ ಅವನು ಇಂಗ್ಲಂಡಿನ ಸಮುದ್ರದ ಮೇಲಿನ ವರ್ಚಸ್ಸನ್ನು ಶಾಶ್ವತಗೊಳಿಸಲು ಕ್ರಿಮಿಯನ್ ಯುದ್ಧದಲ್ಲಿ ತುರ್ಕಸ್ಥಾನಕ್ಕೆ ರಶಿಯದ ವಿರುದ್ಧವಾಗಿ ಸಾಹಾಯ್ಯವನ್ನು ಮಾಡಿದನು. ಅವನ ತರು

ವ್ಯಾಯದಲ್ಲಿ ಕಾಂಝರ್ವೇಟಿವ್ ಪಕ್ಷದ ಮುಂದಾಳುವಾದ **ಡಿಝ್ರೇಲಿ** **(ಲಾರ್ಡ್ ಬೀಕನ್ಸ್‌ಫೀಲ್ಡ)** ಮತ್ತು ಲಿಬರಲ್ ಪಕ್ಷದ ಮುಂದಾಳುವಾದ **ಗ್ಲಡ್‌ಸ್ಟನ್** ಇವರು ಪ್ರಸಿದ್ಧ ಮಂತ್ರಿಗಳಾದರು. ಡಿಝ್ರೇಲಿ ೧೮೭೪—೮೦ರಲ್ಲಿ ಮುಖ್ಯ ಮಂತ್ರಿಯಾಗಿದ್ದನು. ಕಾಂಝರ್ವೇಟಿವ್ ಪಕ್ಷದ ಡರ್ಬಿ ಇವನು ೧೮೬೭ರಲ್ಲಿ ಮುಖ್ಯ ಮಂತ್ರಿಯಾಗಿದ್ದಾಗ ಡಿಝ್ರೇಲಿ ಪಾರ್ಲಿಮೆಂಟಿನ ಸುಧಾರಣೆಯ ಎರಡನೆಯ ಬಿಲ್ಲನ್ನು ಪಾರ್ಲಿಮೆಂಟಿನಿಂದ ಪಾಸುಮಾಡಿಸಿಕೊಂಡನು. ಡಿಝ್ರೇಲಿ ಮುಖ್ಯ ಮಂತ್ರಿಯಾಗಿದ್ದಾಗ ಇಂಗ್ಲಂಡಿನ ಸಮುದ್ರದ ಮೇಲಿನ ಸತ್ತೆಯನ್ನು ಶಾಶ್ವತಗೊಳಿಸುವುದು, ಹಿಂದುಸ್ಥಾನಕ್ಕೆ ಪರಚಕ್ರವು ಬರಬಾರದೆಂದು ಅಫಗಾಣಿಸ್ಥಾನ, ಇರಾಣ ಮತ್ತು ತುರ್ಕಸ್ಥಾನ ಈ ದೇಶಗಳ ಮಾರ್ಗದಿಂದ ಪ್ರಾರಂಭವಾಗಿದ್ದ ರಶಿಯದ ಚಟುವಟಿಕೆಗಳ ಕಡೆಗೆ ಲಕ್ಷ್ಯವನ್ನು ಕೊಡುವುದು, "ಬ್ರಿಟಿಶ್ ಸಾಮ್ರಾಜ್ಯದ ಮತ್ತು ವಸಾಹತುಗಳ ವಿಸ್ತಾರವನ್ನು ಹೆಚ್ಚಿಸುವದು ಇವೇ ಮೊದಲಾದ ಮಾತುಗಳ ಕಡೆಗೆ ಅವನು ಲಕ್ಷ್ಯವನ್ನು ಕೊಡಬೇಕಾಯ್ತು. ಲಿಬರಲ್ ಪಕ್ಷದ ಮುಂದಾಳುವಾದ ಗ್ಲಡ್‌ಸ್ಟನನು ನಾಲ್ಕು ಸಲ ಮುಖ್ಯ ಮಂತ್ರಿಯಾದನು (೧೮೬೮—೭೪; ೧೮೮೦—೮೫; ೧೮೮೬; ೧೮೯೨—೧೮೯೪). ಅವನು ಇಂಗ್ಲಂಡಿನ ಅಂತಃಸ್ಥಕಾರಭಾರದಲ್ಲಿ ಬಹು ಮಹತ್ವದ ಸುಧಾರಣೆಗಳನ್ನು ಮಾಡಿದನು. ಅವನು ಪಾರ್ಲಿಮೆಂಟಿನ ಸುಧಾರಣೆಯ ಮೂರನೆಯ ಬಿಲ್ಲನ್ನು ಪಾಸು ಮಾಡಿಸಿದನು; ಮತ್ತು ಐರ್ಲಂಡಿನಲ್ಲಿಯ ಅಸಂತೋಷವು ಇಲ್ಲದಂತಾಗಬೇಕೆಂದು ಅಲ್ಲಿಯ ಭೂಮಿಗಳ ವಿಷಯದಲ್ಲಿ ಕಾಯ್ದೆಯನ್ನು ಮಾಡಿದನು. ಐರ್ಲಂಡಿಗೆ ಹೋಮ್‌ರೂಲನ್ನು (ಸ್ವರಾಜ್ಯ) ಕೊಡಬೇಕೆಂದು ಅವನು ಎರಡು ಸಲ ಪ್ರಯತ್ನಿಸಿದನು. ಆದರೆ ಅವನಿಗೆ ಆ ಕಾರ್ಯದಲ್ಲಿ ಯಶವು ದೊರೆಯಲಿಲ್ಲ. ಅದರಿಂದ ಲಿಬರಲ್ ಪಕ್ಷದಲ್ಲಿ ಮಾತ್ರ ೧೮೮೬ರಲ್ಲಿ ಒಡಕು ಹುಟ್ಟಿತು, ಮತ್ತು ಲಿಬರಲ್ ಪಕ್ಷದ ಜನರು ಕಾಂಝರ್ವೇಟಿವ್ ಪಕ್ಷವನ್ನು ಕೂಡಿದರು. ಈ ಹೊಸ ಪಕ್ಷಕ್ಕೆ ಯೂನಿಯನಿಸ್ಟ್ ಎಂಬ ಹೆಸರು ಬಂದಿತು. ಡಿಝ್ರೇಲಿ ಮತ್ತು ಗ್ಲಡ್‌ಸ್ಟನ್ ಇವರ ತರುವಾಯದಲ್ಲಿ **ಸೆಲಿಸ್‌ಬೆರಿ** (೧೮೮೫—೮೬; ೧೮೮೬—೯೨; ೧೮೯೫—೧೯೦೨) ಮತ್ತು **ರೋಜಬೆರಿ** (೧೮೯೪—೯೫) ಇವರು ಮುಖ್ಯ ಮಂತ್ರಿಗಳಾದರು. ಇವರಲ್ಲಿ ಸಲಿಸ್‌ಬರಿ ಕಾಂಝರ್ವೇಟಿವ್ ಪಕ್ಷದವನು ಮತ್ತು ರೋಜಬೆರಿ ಲಿಬರಲ್ ಪಕ್ಷದವನು ಆಗಿದ್ದನು.

ವಿಕ್ಟೋರಿಯಾ ರಾಣಿಯ ದೀರ್ಘಕಾಲದ ಆಳ್ಕೆಯಲ್ಲಿ (೧) ಅಂತಃಸ್ಥ

ವಿಷಯಗಳು (೨) ಐರ್ಲಂಡ್ (೩) ಇಂಗ್ಲಂಡಿನ ಪರರಾಷ್ಟ್ರೀಯ ನೀತಿ ಮತ್ತು ಸಾಮ್ರಾಜ್ಯದ ಬೆಳವಣಿಗೆ (೪) ಸ್ವಸತ್ತಾತ್ಮಕ ವಸಾಹತುಗಳು (೫) ಹೊಸ ಶೋಧಗಳು ಮತ್ತು ಶಾಸ್ತ್ರೀಯ ಪ್ರಗತಿ ಈ ವಿಷಯಗಳಲ್ಲಿ ಮಹತ್ವದ ಮಾತುಗಳು ಜರುಗಿದುವು.

## (೧) ಅಂತಃಸ್ಥ ವಿಷಯಗಳು

**ಹೊಸ ರಾಜಕೀಯ ಪಕ್ಷಗಳ ಸ್ಥಾಪನೆ—ಕಾಂಝರ್ವೇಟಿವ್ ಮತ್ತು ಲಿಬರಲ್ ಪಕ್ಷಗಳು**—೧೮೩೨ರ ರಿಫಾರ್ಮ ಬಿಲ್ಲಿನ ತರುವಾಯ ಕಾಮನ್ಸ್ ಸಭೆಯಲ್ಲಿ ಜಮಿನುದಾರ ವರ್ಗದ ಪ್ರತಿನಿಧಿಗಳಂತೆ ವ್ಯಾಪಾರೋದ್ಯೋಗಗಳಲ್ಲಿ ತೊಡಗಿದ ಮಧ್ಯಮ ಸ್ಥಿತಿಯ ಜನರ ಪ್ರತಿನಿಧಿಗಳು ಬರಲಾರಂಭಿಸಿದರು. ಅದರಿಂದ ಪಾರ್ಲಿಮೆಂಟಿನಲ್ಲಿ ಮೊದಲು ಇದ್ದ ಜಮಿನುದಾರವರ್ಗದ ವರ್ಚಸ್ಸು ಕಡಿಮೆಯಾಗಿ ವ್ಯಾಪಾರೋದ್ಯೋಗಗಳಲ್ಲಿ ತೊಡಗಿದ ವರ್ಗದವರ ವರ್ಚಸ್ಸು ಬೆಳೆಯತೊಡಗಿತು. ಪಾರ್ಲಿಮೆಂಟಿನ ಸುಧಾರಣೆ, ಅನಿರ್ಬಂಧ ವ್ಯಾಪಾರ, ಐರ್ಲಂಡಿನ ಹೋಮ್‌ರೂಲ್ (ಸಾಮ್ರಾಜ್ಯಾಂತರ್ಗತ ಸ್ವರಾಜ್ಯ), ಬ್ರಿಟಿಶ್ ಸಾಮ್ರಾಜ್ಯದ ಮತ್ತು ವಸಾಹತುಗಳ ವೃದ್ಧಿ ಮೊದಲಾದ ಬೇರೆ ಬೇರೆ ಪ್ರಶ್ನೆಗಳು ಜನರ ಮುಂದೆ ಬರಲಾರಂಭಿಸಿದುವು ಮತ್ತು ಅದರಿಂದ ವ್ಹಿಗ್ ಮತ್ತು ಟೋರಿ ಪಕ್ಷಗಳ ಜನರ ವಿಚಾರಸರಣಿಯಲ್ಲಿಯೂ ಮಹತ್ವದ ಪರಿವರ್ತನವಾಗತೊಡಗಿತು; ಈ ಕಾರಣದಿಂದ ಟೋರಿ ಮತ್ತು ವ್ಹಿಗ್ ಈ ಹೆಸರುಗಳು ಹಿಂದೆ ಉಳಿದು **ಕಾಂಝರ್ವೇಟಿವ್** ಮತ್ತು **ಲಿಬರಲ್** ಈ ಹೆಸರುಗಳು ರೂಢವಾದುವು.

**(೧) ಕಾಂಝರ್ವೇಟಿವ್ ಪಕ್ಷವು**—ಟೋರಿ ಪಕ್ಷದ ಜನರು ಮೊದಲು ಸುಧಾರಣಾವಿರೋಧಿಗಳಾಗಿದ್ದರು, ಆದರೆ ಅವರಿಗೂ ಈಗ ಕೆಲವು ವಿಷಯಗಳಲ್ಲಿ ಸುಧಾರಣೆಯಾಗುವುದು ಅವಶ್ಯವೆಂದು ತೋರಿತು. ಇಂಗ್ಲಂಡಿನ ರಾಜ್ಯಘಟನೆಯಲ್ಲಿ ಅವಿಚಾರದಿಂದ ಬದಲಾವಣೆಗಳನ್ನು ಮಾಡದೆ ಇಂಗ್ಲಂಡಿನ ಪೂರ್ವ ಪರಂಪರೆ, ರೂಢಿ, ಮತ್ತು ಸಂಸ್ಥೆಗಳು ಇವನ್ನು ಅಡಿಗಲ್ಲಾಗಿ ಇಟ್ಟುಕೊಂಡು ಅವಶ್ಯವೆನಿಸಿದ ಸುಧಾರಣೆಗಳನ್ನು ಕ್ರಮೇಣ ಮಾಡುವುದು ಇಷ್ಟವೆಂದು ಅವರಿಗೆ ಎನಿಸಿತು. ಅದರಂತೆ ವ್ಯಾಪಾರದ ವಿಷಯದಲ್ಲಿ, 'ಸಂರಕ್ಷಿತ ವ್ಯಾಪಾರ'ದ ತತ್ವವನ್ನು ಅಂಗೀಕರಿಸಿ ಇಂಗ್ಲಂಡಿನ ವ್ಯಾಪಾರೋದ್ಯೋಗಗಳ ಉನ್ನತಿಯನ್ನು ಮಾಡಿಕೊಳ್ಳುವುದು, ಬ್ರಿಟಿಶ್ ಸಾಮ್ರಾಜ್ಯದ ಮತ್ತು ವಸಾಹತುಗಳ ವೃದ್ಧಿಯನ್ನು ಮಾಡುವುದು ಮತ್ತು ಇಂಗ್ಲಂಡಿನ ಸಮುದ್ರದ ಮೇಲಿನ ವರ್ಚಸ್ಸನ್ನು ಸ್ಥಿರಗೊಳಿಸು

ವುದು ಈ ಮೊದಲಾದ ಮಾತುಗಳಿಗೆ ಅವರ ಪ್ರೋತ್ಸಾಹನವು ಇದ್ದಿತು. ಈ ಹೊಸ ನೀತಿಯನ್ನು ಅನುಸರಿಸಿ ಟೋರಿ ಪಕ್ಷವು ತನ್ನ ಹಳೆಯ ಹೆಸರನ್ನು ಬಿಟ್ಟು **ಕಾಂಝರ್‌ವೇಟಿವ್** (Conservative=ಪೂರ್ವಪರಂಪರೆಯ ಅಭಿಮಾನಿ) ಎಂಬ ಹೊಸ ಹೆಸರನ್ನು ಸ್ವೀಕರಿಸಿತು (ಸು. ೧೮೩೪).

(೨) **ಲಿಬರಲ್ ಪಕ್ಷವು**—ವ್ಹಿಗ್ ಪಕ್ಷದ ಜನರು ಸುಧಾರಣೆಗೆ ಅನುಕೂಲರಾಗಿದ್ದರು. ಆದುದರಿಂದ ಪಾರ್ಲಿಮೆಂಟಿನ ಪದ್ಧತಿಯಲ್ಲಿ ಹೆಚ್ಚಿನ ಸುಧಾರಣೆಗಳನ್ನು ಮಾಡುವುದು, ಕೂಲಿಕಾರ ವರ್ಗದ ಸ್ಥಿತಿ ಸುಧಾರಿಸಬೇಕೆಂದು ಕಾರಖಾನೆ ಮತ್ತು ಗಿರಣಿಗಳಲ್ಲಿಯ ಕೆಲಸದ ವೇಳೆಯ ವಿಷಯದಲ್ಲಿ ಕಾಯ್ದೆಗಳನ್ನು ಮಾಡುವುದು, ಇಂಗ್ಲಂಡಿನ ವ್ಯಾಪಾರವು ಬೆಳೆಯಬೇಕೆಂದು ಮತ್ತು ಮಧ್ಯಮ ಮತ್ತು ನಿಕೃಷ್ಟ ವರ್ಗದ ಜನರ ಹೊಟ್ಟೆಬಟ್ಟೆಗಳ ವೆಚ್ಚವು ಕಡಿಮೆಯಾಗಬೇಕೆಂದು ಪರಕೀಯ ವಸ್ತುಗಳ ಮೇಲಿನ ಸುಂಕಗಳನ್ನು ರದ್ದುಗೊಳಿಸಿ 'ಅನಿರ್ಬಂಧ ವ್ಯಾಪಾರ'ವನ್ನು ಪ್ರಾರಂಭಿಸುವುದು, ಈ ಮೊದಲಾದ ವಿಷಯಗಳಲ್ಲಿ ಅವರು ಪ್ರಯತ್ನಿಸತೊಡಗಿದರು. ಅವರ ಈ ನೀತಿಯಿಂದ ಅವರಿಗೆ **ಲಿಬರಲ್** (Liberal=ಉದಾರ ಮತವಾದಿ) ಎಂದು ಹೆಸರು ಬಂದಿತು (ಸು. ೧೮೫೦).

ಸ್ಥೂಲಮಾನದಿಂದ ಕಾಂಝರ್‌ವೇಟಿವ್ ಮತ್ತು ಲಿಬರಲ್ ಪಕ್ಷಗಳ ನೀತಿಗಳು ಮೇಲೆ ಹೇಳಿದಂತೆ ಇದ್ದರೂ ಬೇರೆ ಬೇರೆ ಪ್ರಶ್ನೆಗಳು ಮುಂದೆ ಬಂದಾಗ ಆ ಪ್ರಶ್ನೆಗಳ ವಿಷಯದಲ್ಲಿ ಒಂದು ಪಕ್ಷದ ಎಲ್ಲ ಜನರ ಮತವು ಒಂದೇ ಆಗಿರುತ್ತಿದ್ದಿಲ್ಲವಾದುದರಿಂದ ಮತಭೇದವು ಉಂಟಾಗಿ ಬೇರೆ ಬೇರೆ ಉಪಪಕ್ಷಗಳು ಹುಟ್ಟುತ್ತಿದ್ದುವು ಮತ್ತು ಒಂದು ಪಕ್ಷದ ಕೆಲವು ಜನರು ವಿರುದ್ಧ ಪಕ್ಷವನ್ನು ಕೂಡುತ್ತಿದ್ದರು.

**ಚಾರ್ಟಿಸ್ಟ್ ಆಂದೋಲನವು (೧೮೩೭-೧೮೪೮)**—ವಿಕ್ಟೋರಿಯಾ ರಾಣಿ ಪಟ್ಟಕ್ಕೆ ಬಂದ ಸಮಯದಲ್ಲಿ ದೇಶದಲ್ಲಿ ಅಸ್ವಸ್ಥತೆಯಿದ್ದಿತು. ರಿಫಾರ್ಮ ಬಿಲ್ಲು ಪಾಸಾದ ಬಳಿಕ ತಮ್ಮ ಕಷ್ಟಪ್ರದವಾದ ಸ್ಥಿತಿ ಒಮ್ಮೆಲೇ ಸುಧಾರಿಸಬಹುದೆಂದು ಕೂಲಿಕಾರ ವರ್ಗದವರು ಬಗೆದಿದ್ದರು. ಆದರೆ ಅವರು ನಿರಾಶೆಗೊಳ್ಳಬೇಕಾಯಿತು. ಆ ಕಾಲದಲ್ಲಿ ಕೂಲಿಯ ದರವು ಕಡಿಮೆಯಾಗಿತ್ತು. ಪರದೇಶಗಳಿಂದ ಬರುವ ಧಾನ್ಯಗಳ ಮೇಲೆ ಸುಂಕವು ಹೆಚ್ಚಾಗಿದ್ದುದರಿಂದ ಧಾನ್ಯಗಳು ತುಟ್ಟಿಯಾಗಿದ್ದುವು; ಮತ್ತು ದೇಶದಲ್ಲಿ ಬೆಳೆವ ಧಾನ್ಯಗಳನ್ನು, ಪರದೇಶಗಳಿಂದ ಬರುವ ಧಾನ್ಯಗಳೊಡನೆ ಸ್ಪರ್ಧೆ ಇಲ್ಲದುದರಿಂದ, ಜಮೀನುದಾರರು ಮತ್ತು ಒಕ್ಕಲಿಗರು ತುಟ್ಟಿಮಾಡಿದರು. ಅದರಿಂದ ಬಡಜನರ ಹೊಟ್ಟೆಯ ವೆಚ್ಚವು

ಬಹಳವಾಗಿತ್ತು. ಧಾನ್ಯಗಳು ಹೀಗೆ ತುಟ್ಟಿಯಾದುದರಿಂದ, ನಿರುದ್ಯೋಗವು ಬೆಳೆದುದರಿಂದ ಮತ್ತು ಹೀನ ಸ್ಥಿತಿಯಲ್ಲಿ ಇರಬೇಕಾದುದರಿಂದ ಬಡ ಜನರ ಸ್ಥಿತಿ ಬಹಳ ಕೆಟ್ಟಿತ್ತು. ಈ ಸ್ಥಿತಿಯನ್ನು ಸುಧಾರಿಸಲು ಪಾರ್ಲಿಮೆಂಟಿನಿಂದ ಕಾಯ್ದೆಯನ್ನು ಪಾಸುಮಾಡಿಸಿಕೊಳ್ಳುವುದು ಮತ್ತು ಅದಕ್ಕೋಸುಗ ಪಾರ್ಲಿಮೆಂಟಿನ ಸುಧಾರಣೆಯಾಗುವುದು ಅವಶ್ಯವೆಂದೆನಿಸಿ ೧೮೩೭ರಲ್ಲಿ ಜನರು ಆಂದೋಲನವನ್ನು ಆರಂಭಿಸಿದರು. **ಫಿಯರ್‌ಗಸ್ ಓಕೋನಾರ್** ಮತ್ತು **ವಿಲಿಯಮ್ ಲೋವೆಟ್** ಇವರು ಈ ಆಂದೋಲನದ ನಾಯಕರಾಗಿದ್ದರು. ಈ ಆಂದೋಲನದಲ್ಲಿ ಸೇರಿದ ಜನರು ಜನತೆಯ ಅಧಿಕಾರಗಳ **ಒಂದು ಸನದನ್ನು** (The People's charter) ಸಿದ್ಧಗೊಳಿಸಿದರು. ಆದುದರಿಂದ ಅವರ ಆಂದೋಲನಕ್ಕೆ **ಚಾರ್ಟಿಸ್ಟ್ ಆಂದೋಲನ**ವೆಂದು ಹೆಸರು ಬಂದಿತು. ಈ ಸನದಿನಲ್ಲಿ ಆರು ಮಾತುಗಳು ಬೇಡಲ್ಪಟ್ಟಿದ್ದುವು. ಅವಕ್ಕೆ ಪಾರ್ಲಿಮೆಂಟಿನ ಮಾನ್ಯತೆಯನ್ನು ದೊರಕಿಸಲು ಅವರು ಪ್ರಯತ್ನಿಸುತ್ತಿದ್ದರು.

(೧) ಚುನಾವಣೆಯ ಕಾಲದಲ್ಲಿ ರಾಷ್ಟ್ರದ ಎಲ್ಲ ಜನರಿಗೆ ಮತವನ್ನು ಕೊಡಲು ಅಧಿಕಾರವಿರಬೇಕು.

(೨) ಬಲಟ್ ಪದ್ಧತಿಯಿಂದ (ಗುಪ್ತವಾಗಿ ಮತ ಕೊಡುವ ಪದ್ಧತಿ) ಮತವನ್ನು ಕೊಡಲು ಬರಬೇಕು.

(೩) ಪ್ರತಿ ವರ್ಷವೂ ಪಾರ್ಲಿಮೆಂಟಿನ ಹೊಸ ಚುನಾವಣೆಯಾಗಬೇಕು.

(೪) ಪಾರ್ಲಿಮೆಂಟಿನ ಸದಸ್ಯರಾಗಲು ಭೂಮಿ ಅಥವಾ ಸಂಪತ್ತು ಇರಬೇಕೆಂದು ನಿಯಮವಿರಬಾರದು.

(೫) ಪಾರ್ಲಿಮೆಂಟಿನ ಸದಸ್ಯರಿಗೆ ಸಂಬಳವಿರಬೇಕು.

(೬) ಲೋಕವಸ್ತಿಯ ಪ್ರಮಾಣದಲ್ಲಿ ಮತದಾರ ಸಂಘಗಳಿರಬೇಕು.

ಇವು ಚಾರ್ಟಿಸ್ಟ್ ಜನರ ಮುಖ್ಯವಾದ ಬೇಡಿಕೆಗಳಾಗಿದ್ದುವು. ಅವಶ್ಯವಾದರೆ ಅತ್ಯಾಚಾರಗಳನ್ನು ಮಾಡಿಯಾದರೂ ಮೇಲಿನ ಸುಧಾರಣೆಗಳನ್ನು ಮಾಡಿಸಿಕೊಳ್ಳಬೇಕೆಂದು ಚಾರ್ಟಿಸ್ಟ್ ಜನರಲ್ಲಿ ಕೆಲವರ ಅಭಿಪ್ರಾಯವಿದ್ದುದರಿಂದ ಅವರ ಪ್ರೇರಣೆಯಿಂದ ೧೮೩೯ರಲ್ಲಿ ಅಲ್ಲಲ್ಲಿ ದೊಂಬೆಗಳು ಉದ್ಭವಿಸಿದುವು. ಇವುಗಳನ್ನು ಮುರಿಯಲು ಸರಕಾರವು ಉಗ್ರವಾದ ಉಪಾಯಗಳನ್ನು ಯೋಜಿಸಬೇಕಾಯಿತು. ಆದರೆ ಈ ಆಂದೋಲನವು ಆಗ ಸಂಪೂರ್ಣವಾಗಿ ನಿಲ್ಲಲಿಲ್ಲ. ೧೮೪೮ರಲ್ಲಿ ಯುರೋಪದ ಅನೇಕ ದೇಶಗಳಲ್ಲಿ ಕ್ರಾಂತಿಕಾರಕ ಆಂದೋಲನವು ಹಬ್ಬಿತು. ಆಗ ಚಾರ್ಟಿಸ್ಟ್ ಜನರು ತಮ್ಮ ಸನದನ್ನು ಪಾರ್ಲಿಮೆಂಟಿಗೆ ಒಪ್ಪಿ

ಸಲು ದೊಡ್ಡದೊಂದು ಮೆರವಣಿಗೆಯನ್ನು ಹೊರಡಿಸಲು ನಿಶ್ಚಯಿಸಿದರು. ಆದರೆ ಅದರಿಂದ ಅತ್ಯಾಚಾರಗಳು ಒದಗುವ ಸಂಭವವುಂಟೆಂದು ಬಗೆದು ಸರಕಾರವು ಪೋಲಿಸರ ಸಾಹಾಯ್ಯದಿಂದ ಆ ಮೆರವಣಿಗೆಯನ್ನು ನಿಲ್ಲಿಸಿದರು (೧೮೪೮).

ಈ ಮೊದಲೇ ೧೮೪೬ರಲ್ಲಿ ಪರರಾಷ್ಟ್ರಗಳಿಂದ ಬರುವ ಧಾನ್ಯಗಳ ಮೇಲಿನ ಸುಂಕವು ರದ್ದುಮಾಡಲ್ಪಟ್ಟುದರಿಂದ ಧಾನ್ಯಗಳು ಅಗ್ಗವಾಗಿದ್ದುವು; ೧೮೩೦—೧೮೫೦ರ ನಡುವೆ ಇಂಗ್ಲಂಡಿನಲ್ಲಿ ಹೊಸ ಲೋಹಮಾರ್ಗಗಳನ್ನು ಸಿದ್ಧಗೊಳಿಸುವ ಕಾರ್ಯವು ಪ್ರಾರಂಭವಾದುದರಿಂದ ಮತ್ತು ಲೋಹಮಾರ್ಗಗಳಿಗೆ ಬೇಕಾಗುವ ಕಬ್ಬಿಣದ ಸಾಮಾನುಗಳನ್ನೂ ಯಂತ್ರಸಾಮಗ್ರಿಗಳನ್ನೂ ಸಿದ್ಧಗೊಳಿಸಲು ಕಾರಖಾನೆಗಳು ಅಸ್ತಿತ್ವದಲ್ಲಿ ಬಂದುದರಿಂದ ಸಾವಿರಾರು ಕೂಲಿಕಾರರಿಗೆ ಕೆಲಸವು ದೊರೆತು ನಿರುದ್ಯೋಗಿತೆ ನಷ್ಟವಾಯಿತು. ಅದರಿಂದ ಈ ಆಂದೋಲನದ ವಿಷಯದಲ್ಲಿ ಜನರ ಸಹಾನುಭೂತಿ ಕಡಿಮೆಯಾಗಿತ್ತು. ಆದರೆ ಈ ಆಂದೋಲನವು ಮುರಿಯಲ್ಪಟ್ಟರೂ ಚಾರ್ಟಿಸ್ಟ ಜನರ ಬೇಡಿಕೆಗಳಲ್ಲಿಯ ಒಂದಾದ "ಪಾರ್ಲಿಮೆಂಟಿನ ಚುನಾವಣೆ ವರ್ಷಕ್ಕೊಮ್ಮೆ ಆಗಬೇಕು" ಎಂಬ ಬೇಡಿಕೆಯ ಹೊರ್ತು ಉಳಿದೆಲ್ಲ ಬೇಡಿಕೆಗಳ ವಿಷಯದಲ್ಲಿ ಪಾರ್ಲಿಮೆಂಟು ಮುಂದಿನ ೬೦—೭೦ ವರ್ಷಗಳಲ್ಲಿ ಕಾಯ್ದೆಗಳನ್ನು ಮಾಡಿತು.

**ಮುಖ್ಯ ಮಂತ್ರಿ ಮೆಲ್‌ಬೋರ್ನ್** (೧೮೩೭-೪೧)—ವಿಕ್ಟೋರಿಯಾ ರಾಣಿ ಪಟ್ಟಕ್ಕೆ ಬಂದ ಸಮಯದಲ್ಲಿ ಮೆಲ್‌ಬೋರ್ನನು ಮುಖ್ಯ ಮಂತ್ರಿಯಾಗಿದ್ದನು. ಅವನು ೧೮೪೦ರಲ್ಲಿ ಪೋಸ್ಟ್‌ಮಾಸ್ಟರ್ ಜನರಲ್ ರಾವಲಂಡ್ ಹಿಲ್ ಇವನ ಸೂಚನೆಯಿಂದ ಪೆನಿ ಪೋಸ್ಟೇಜ ಕಾಯ್ದೆಯನ್ನು ಮಾಡಿದನು; ಈ ಕಾಯ್ದೆಯಿಂದ ಗ್ರೇಟಬ್ರಿಟನ್ ಮತ್ತು ಐರ್ಲಂಡ್ ಇವುಗಳಲ್ಲಿ ಯಾವ ಸ್ಥಳಕ್ಕಾದರೂ ಪತ್ರವನ್ನು ಕಳಿಸಲು ಒಂದು ಪೆನಿ ವೆಚ್ಚವು ಬರತೊಡಗಿತು. ಈ ಕಾಯ್ದೆ ಆಗುವ ಮೊದಲು ಪತ್ರವನ್ನು ಕಳಿಸಲು ೨೦ ಪೆನಿಗಳು ಬೇಕಾಗುತ್ತಿದ್ದುವು. ಈ ಸುಧಾರಣೆಯಿಂದ ಬಡಜನರಿಗೆ ಲಾಭವಾದುದಲ್ಲದೆ ವ್ಯಾಪಾರವು ಬೆಳೆಯಲು ಅನುಕೂಲವಾಯಿತು.



ಮೆಲ್‌ಬೋರ್ನ್

ಇದೇ ಸಮಯದಲ್ಲಿ ಆಫಗಾಣಿಸ್ಥಾನದೊಡನೆ ಯುದ್ಧವು ಪ್ರಾರಂಭವಾಗಿತ್ತು; ಮತ್ತು ಕೆನಡಾ ವಸಾಹತಿಯಲ್ಲಿ ಫ್ರೆಂಚ್ ಮತ್ತು ಇಂಗ್ಲಿಶ್ ವಸಾಹತುಗಾರರ ನಡುವೆ ಒಂದು ಬಗೆ ಸ್ಪರ್ಧೆ ಹುಟ್ಟಿತ್ತು. ಆದುದರಿಂದ ಮೆಲ್‌ಬೋರ್ನನು ಅತ್ತಕಡೆಗೆ ಲಕ್ಷ್ಯವನ್ನು ಕೊಡಬೇಕಾಯಿತು. ೧೮೪೧ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಗಿ ಹೊಸ ಪಾರ್ಲಿಮೆಂಟು ನಡೆಯಿತು, ಆದರೆ ಅದರಲ್ಲಿ ಕಾಂಝರ್‌ವೇಟಿವ್ ಪಕ್ಷದ ಮತಾಧಿಕ್ಯವಾದುದರಿಂದ ಮೆಲ್‌ಬೋರ್ನನು ಅಧಿಕಾರತ್ಯಾಗವನ್ನು ಮಾಡಿದನು (೧೮೪೧).

**ಮುಖ್ಯ ಮಂತ್ರಿ ಸರ್ ರಾಬರ್ಟ ಪೀಲ್ (೧೮೪೧-೪೬)**—ಮೆಲ್‌ಬೋರ್ನನ ತರುವಾಯದಲ್ಲಿ ಕಾಂಝರ್‌ವೇಟಿವ್ ಪಕ್ಷದ ಮುಂದಾಳುವಾದ ಸರ್ ರಾಬರ್ಟ ಪೀಲನು ಮುಖ್ಯ ಮಂತ್ರಿಯಾದನು. ಪೀಲನು ೧೮೦೯ರಲ್ಲಿ ಮೊದಲನೆಯ ಸಲ ಪಾರ್ಲಿಮೆಂಟಿನ ಸದಸ್ಯನಾಗಿದ್ದನು. ೧೮೨೨–೩೦ರ ವರೆಗೆ ಅವನು ಟೋರಿ ಮಂತ್ರಿಮಂಡಲದಲ್ಲಿ ಒಬ್ಬ ಮಂತ್ರಿಯಾಗಿದ್ದನು. ಪೀಲನು ಟೋರಿ ಪಕ್ಷದಲ್ಲಿ ಹೊಸ ಉತ್ಸಾಹವನ್ನು ಹುಟ್ಟಿಸಿದನು. ಮುಂದೆ ಪ್ರಸಿದ್ಧಿಯನ್ನು ಪಡೆದ ಗ್ಲಡ್‌ಸ್ಟನ್ ಮತ್ತು ಡಿಝ್ರೇಲಿ ಈ ಮುತ್ಸದ್ದಿಗಳು ಇವನ ಅನುಯಾಯಿಗಳಾಗಿದ್ದರು. ಪೀಲನ ಸೂಚನೆಯಿಂದ ಟೋರಿ ಪಕ್ಷವು ತನ್ನ ಮೊದಲಿನ **ಟೋರಿ** ಎಂಬ ಹೆಸರನ್ನು ಬದಲಿಸಿ **ಕಾಂಝರ್‌ವೇಟಿವ್** (Conservative=ಪುರಾತನ ಪರಂಪರೆಯ ಅಭಿಮಾನಿ) ಎಂಬ ಹೆಸರನ್ನು ತಳೆಯಿತು.



ರಾಬರ್ಟ ಪೀಲ್

ಮೊದಲನೆಯ ಮಂತ್ರಿಮಂಡಲದಲ್ಲಿ ಸ್ಟೆನ್‌ಲೆ ಇವನು ವಸಾಹತುಗಳ ಮಂತ್ರಿಯಾಗಿದ್ದನು. ಲಾರ್ಡ್ ಅಬರಡೀನನು ಪರರಾಷ್ಟ್ರೀಯ ಮಂತ್ರಿಯಾಗಿದ್ದನು, ಡ್ಯೂಕ್ ಆಫ್ ವೆಲಿಂಗ್ಟನನು ಮುಖ್ಯ ಸೇನಾಪತಿಯಾಗಿದ್ದನು, ಮತ್ತು ಗ್ಲಡ್‌ಸ್ಟನನು ವ್ಯಾಪಾರೋದ್ಯೋಗಗಳ ಮಂತ್ರಿಯಾಗಿದ್ದನು, ಪೀಲನ ಮಂತ್ರಿಮಂಡಲವು ಪರರಾಷ್ಟ್ರೀಯ ವಿಷಯಗಳ ಕಡೆಗೆ ಲಕ್ಷ್ಯವನ್ನು ಕೊಡಬೇಕಾಯಿತು; ಏಕೆಂದರೆ ಆ ಸಮಯದಲ್ಲಿ ಆಫಗಾಣಿಸ್ಥಾನದೊಡನೆಯೂ ಅಫುವಿನ ವ್ಯಾಪಾರದ ವಿಷಯದಲ್ಲಿ ಚೀನದೊಡನೆಯೂ ಯುದ್ಧಗಳು ಪ್ರಾರಂಭವಾಗಿ

ದ್ದುವು. ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು ಮತ್ತು ಕೆನಡಾ ಇವು ಗಳ ನಡುವೆ ಸೀಮಾಪ್ರಾಂತದ ವಿಷಯದಲ್ಲಿ ಜಗಳವು ಹುಟ್ಟಿತ್ತು. ಈ ಬಗೆಯ ಪರರಾಷ್ಟ್ರೀಯ ಅಡಚಣೆಗಳಿದ್ದರೂ ಪೀಲನು ಇಂಗ್ಲಂಡಿನ ಅಂತಃಸ್ಥ ವಿಷಯ ಗಳಲ್ಲಿ ಅವಶ್ಯವಿದ್ದ ಸುಧಾರಣೆಗಳನ್ನು ಮಾಡಿದನು.

**ಸಂರಕ್ಷಿತ ವ್ಯಾಪಾರವೂ ಅನಿರ್ಬಂಧ ವ್ಯಾಪಾರವೂ**—ಈ ಸಮಯ ದಲ್ಲಿ ಇಂಗ್ಲಂಡಿನಲ್ಲಿ ವ್ಯಾಪಾರ ವಿಷಯಕ ಪ್ರಶ್ನೆಗಳನ್ನು ಕುರಿತು ದೊಡ್ಡದೊಂದು ಆಂದೋಲನವು ಹುಟ್ಟಿತ್ತು. ದೇಶದಲ್ಲಿ ಹುಟ್ಟುವ ವಸ್ತುಗಳಿಗೆ ಪರಕೀಯ ವಸ್ತುಗಳ ಸ್ಪರ್ಧೆಯಿಂದ ಬಾಧೆಯಾಗಬಹುದೆಂದು ಮತ್ತು ದೇಶದ ಉದ್ಯೋಗ-ವ್ಯವಸಾಯ ಗಳಿಗೆ ಉತ್ತೇಜನವೂ ಸಂರಕ್ಷಣವೂ ದೊರೆಯಬೇಕೆಂದು ಪರರಾಷ್ಟ್ರಗಳಿಂದ ಬರುವ ವಸ್ತುಗಳ ಮೇಲೆ ಸುಂಕವು ಕೂಡಿಸಲ್ಪಟ್ಟಿತ್ತು. ದೇಶದ ಉದ್ಯೋಗ ವ್ಯವಸಾಯಗಳಿಗೆ ಸಂರಕ್ಷಣವು ದೊರೆಯಬೇಕೆಂಬ ಉದ್ದೇಶದಿಂದ ಈ ಸುಂಕ ಗಳು ಕೂಡಿಸಲ್ಪಟ್ಟುದರಿಂದ ಈ ಪದ್ಧತಿಗೆ **"ಸಂರಕ್ಷಿತ ವ್ಯಾಪಾರವು"** (Protection) ಎಂದು ಹೆಸರು ಬಂದಿತು. ಆದರೆ ಈ ಯೋಜನೆಯಿಂದ ಯಾವಾಗಲೂ ಬೇಕಾಗುವ ಧಾನ್ಯ, ಸಕ್ಕರೆ, ಚಹ, ತತ್ತಿಗಳು, ಬಟ್ಟೆ ಮೊದಲಾದ ಸಾವಿರಾರು ವಸ್ತುಗಳ ಮೇಲೆ ಬಹಳ ಭಾರವಾದ ಸುಂಕವು ತೆಗೆದುಕೊಳ್ಳಲ್ಪಡುತ್ತಿದ್ದುದ ರಿಂದ ಆ ವಸ್ತುಗಳು ತುಟ್ಟಿಯಾಗಿ ಬಡ ಜನರಿಗೆ ಹೊಟ್ಟೆಬಟ್ಟೆಗೋಸುಗ ಬಹಳ ವೆಚ್ಚವು ಬರುತ್ತಿದ್ದಿತು. ಆದುದರಿಂದ ಬಡಜನರ ಸ್ಥಿತಿ ಅತ್ಯಂತ ಕಷ್ಟಕರ ವಾಗಿತ್ತು. ಪರರಾಷ್ಟ್ರಗಳಿಂದ ಬರುತ್ತಿರುವ ವಸ್ತುಗಳ ಮೇಲಿನ ಸುಂಕವು ಬಹಳವಾಗಿದ್ದುದರಿಂದ ದೇಶದಲ್ಲಿಯ ಜಮೀನುದಾರರು, ಗಿರಣಿಗಳ ಮಾಲಕರು ಮತ್ತು ವ್ಯಾಪಾರಸ್ಥರು ದೇಶದಲ್ಲಿ ಹುಟ್ಟುವ ವಸ್ತುಗಳನ್ನು ಅಗ್ಗವಾಗಿ ಮಾರಲು ಅನುಕೂಲವಿದ್ದರೂ ಅವನ್ನು ತುಟ್ಟಿಯಾಗಿ ಮಾರಿ ಬಹಳ ಲಾಭವನ್ನು ಪಡೆಯು ತ್ತಿದ್ದರು. ಆದುದರಿಂದ ಬಡಜನರ ಸ್ಥಿತಿಯನ್ನು ಸುಧಾರಿಸಲು ಪರಕೀಯ ವಸ್ತುಗಳ ಮೇಲಿನ ಸುಂಕಗಳನ್ನು ರದ್ದುಗೊಳಿಸಿ **ಅನಿರ್ಬಂಧ ವ್ಯಾಪಾರದ ಪದ್ಧತಿಯನ್ನು** (Free Trade) ವ್ಯವಹಾರದಲ್ಲಿ ತರಲು ಆಂದೋಲನವು ಹುಟ್ಟಿತು. ೧೮೧೫ರಲ್ಲಿ ಪರರಾಷ್ಟ್ರಗಳಿಂದ ಬರುವ ಧಾನ್ಯದ (ಗೋದಿ) ಮೇಲೆ ಭಾರವಾದ ಸುಂಕವು ಕೂಡಿಸಲ್ಪಟ್ಟಿತ್ತು ಮತ್ತು ಅದರ ಲಾಭವನ್ನು ತೆಗೆದು ಕೊಂಡು ದೇಶದೊಳಗಿನ ಜಮೀನುದಾರರು ಧಾನ್ಯವನ್ನು ಬಹಳ ತುಟ್ಟಿ ಮಾಡಿ ದರು. ಆದುದರಿಂದ ಬಡಜನರು ಕಷ್ಟಕ್ಕೊಳಗಾಗಿದ್ದರು. ಧಾನ್ಯದ ಮೇಲಿನ ಈ ಸುಂಕವು ಹೋಗಬೇಕೆಂದು ಮಂಚೆಸ್ಟರಿನಲ್ಲಿಯ **ಕಾಬ್‌ಡೆನ್** ಮತ್ತು

ಬ್ರಾಯಿಟ್ ಎಂಬವರು "ಧಾನ್ಯದ ಮೇಲಿನ ಕರಗಳ ವಿರುದ್ಧವಾದ ಸಂಘವು" (Anti-Corn Law League) ಎಂಬ ಸಂಸ್ಥೆಯನ್ನು ಸ್ಥಾಪಿಸಿದರು (೧೮೩೯). ಇವರು ಪಾರ್ಲಿಮೆಂಟಿನ ಸದಸ್ಯರಾಗಿದ್ದರು. ಇವರು ಪಾರ್ಲಿಮೆಂಟಿನಲ್ಲಿಯೂ ಇತರತ್ರವೂ ಕೇವಲ ಧಾನ್ಯಗಳ ಮೇಲಿನ ಸುಂಕವಷ್ಟೇ ರದ್ದಾಗಬೇಕು, ಇಷ್ಟೇ ಅಲ್ಲ ಇತರ ವಸ್ತುಗಳ ಮೇಲಿನ ಸುಂಕವೂ ರದ್ದಾಗಿ ಅನಿರ್ಬಂಧ ವ್ಯಾಪಾರವು (Free Trade) ಪ್ರಾರಂಭವಾಗಬೇಕೆಂದು ಲೋಕಮತವನ್ನು ಅನುಕೂಲ ಮಾಡಲು ಪ್ರಯತ್ನಿಸಿದರು. ಅನಿರ್ಬಂಧ ವ್ಯಾಪಾರದ ಪದ್ಧತಿ ಪ್ರಾರಂಭವಾದರೆ ಪರದೇಶಗಳಿಂದ ಬರುವ ವಸ್ತುಗಳು ಅಗ್ಗವಾಗಿ ದೊರೆತು ಸಂಸಾರದ ವೆಚ್ಚವು ಕಡಿಮೆಯಾಗುವುದು, ಕಾರಖಾನೆದಾರರು ಪಕ್ಕಾಮಾಲನ್ನು ಸ್ವಲ್ಪ ಬೆಲೆಗೆ ಮಾರಲು ಅನುಕೂಲವಾಗುವುದು, ಮತ್ತು ಅದರಿಂದ ಪರರಾಷ್ಟ್ರಗಳಿಂದ ಇಂಗ್ಲಂಡಿನ ವಸ್ತುಗಳಿಗೆ ಬರುತ್ತಿರುವ ಬೇಡಿಕೆ ಹೆಚ್ಚಾಗಿ ಇಂಗ್ಲಂಡಿನ ವ್ಯಾಪಾರವು ಬೆಳೆಯಬಹುದು ಎಂದು ಅವರ ಅಭಿಪ್ರಾಯವಾಗಿತ್ತು. ಸರ್ ರಾಬರ್ಟ ಪೀಲನು ಮೊದಮೊದಲು ಸಂರಕ್ಷಿತ ವ್ಯಾಪಾರದ ಪುರಸ್ಕರ್ತನಾಗಿದ್ದನು. ಆದರೆ ಅವನ ಮತವು ಮೆಲ್ಲಮೆಲ್ಲನೆ ಅನಿರ್ಬಂಧ ವ್ಯಾಪಾರದ ಕಡೆಗೆ ಒಲೆಯತೊಡಗಿತು.

**ಪೀಲನ ಸುಧಾರಣೆಗಳು (೧೮೪೧-೪೬)**—ಪೀಲನು ಇಂಗ್ಲಂಡಿನ ಅಂತಃಸ್ಥ ಕಾರಭಾರದ ವಿಷಯದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು.

(೧) **ಕೂಲಿಕಾರವರ್ಗದ ವಿಷಯದಲ್ಲಿ**—ಪೀಲನು ಮುಖ್ಯ ಮಂತ್ರಿಯಾಗಿದ್ದಾಗ ೧೮೪೨ರಲ್ಲಿ ಪಾರ್ಲಿಮೆಂಟು ಒಂದು ಕಾಯ್ದೆಯನ್ನು ಮಾಡಿತು. ಈ ಕಾಯ್ದೆಯಿಂದ ಹೆಣ್ಣುಮಕ್ಕಳೂ ೧೦ ವರ್ಷದೊಳಗಿನ ಹುಡುಗರೂ ಕಣಿಗಳಲ್ಲಿ ಕೆಲಸ ಮಾಡಲು ನಿಯೋಜಿಸಲ್ಪಡಬಾರದೆಂದು ನಿಯಮವಾಯಿತು.

(೨) **ಆರ್ಥಿಕ**—ರಾಷ್ಟ್ರದಲ್ಲಿಯ ವ್ಯಾಪಾರಕ್ಕೆ ಸಾಹಾಯ್ಯವಾಗಬೇಕು ಮತ್ತು ದುಡ್ಡಿನ ಕೊಡಕೊಳ್ಳುವ ವ್ಯವಹಾರವು ಸುಸೂತ್ರವಾಗಿ ನಡೆಯಬೇಕು ಎಂಬ ಉದ್ದೇಶದಿಂದ ಪಾರ್ಲಿಮೆಂಟು ೧೮೪೪ರಲ್ಲಿ '**ಬೆಂಕಿನ ಚಾರ್ಟರ್ ಅಕ್ಟ್**' ಎಂಬ ಕಾಯ್ದೆಯನ್ನು ಮಾಡಿತು, ಮತ್ತು ಬೆಂಕ್ ಆಫ್ ಇಂಗ್ಲಂಡಿಗೆ ಒಂದು ನಿಶ್ಚಿತ ಪ್ರಮಾಣದಲ್ಲಿ ಚಲನೀ ನೋಟುಗಳನ್ನು ಹೊರಡಿಸಲು ಅಪ್ಪಣೆಯನ್ನಿತ್ತಿತು.

(೩) **ಸುಂಕಗಳು ಮತ್ತು ಕರಗಳು**—೧೮೪೨ರಲ್ಲಿ ಪೀಲನು ಸುಂಕದ ವಿಷಯದಲ್ಲಿ ಲಕ್ಷ್ಯವನ್ನಿತ್ತನು. ಬಡವರ ಮತ್ತು ಮಧ್ಯಮ ಸ್ಥಿತಿಯ ಜನರ

ಹೊಟ್ಟೆಬಟ್ಟೆಯ ವೆಚ್ಚವು ಕಡಿಮೆಯಾಗಬೇಕೆಂದು ಧಾನ್ಯದ ಹೊರ್ತು ಇತರ ೬೫೦ ಆಯಾತ ವಸ್ತುಗಳಲ್ಲಿಯ ಕೆಲವು ವಸ್ತುಗಳ ಮೇಲಿನ ಸುಂಕವನ್ನು ಸಂಪೂರ್ಣ ವಾಗಿ ತೆಗೆದೊಗೆದನು ಮತ್ತು ಕೆಲವುಗಳ ಸುಂಕವನ್ನು ಬಹಳವಾಗಿ ಕಡಿಮೆ ಮಾಡಿದನು. ಆಯಾತ ವಸ್ತುಗಳ ಮೇಲಿನ ಸುಂಕವು ಕಡಿಮೆಯಾದುದರಿಂದ ಇಂಗ್ಲಂಡಿನ ಗಿರಣಿಗಳಿಗೂ ಕಾರಖಾನೆಗಳಿಗೂ ಬೇಕಾಗುವ ಕಚ್ಚಾ ಮಾಲು ಬಹು ಮಟ್ಟಿಗೆ ಅಗ್ಗವಾಗಿ ದೊರೆಯಲಾರಂಭಿಸಿತು. ಆದುದರಿಂದ ಪಕ್ಕಾಮಾಲನ್ನಾದರೂ ಅಗ್ಗವಾಗಿ ಮಾರಲು ಅನುಕೂಲವಾಯಿತು. ಅದರಂತೆಯೇ ನಿರ್ಯಾತ ವಸ್ತು ಗಳ ಮೇಲಿನ ಸುಂಕವೂ ಕಡಿಮೆ ಮಾಡಲ್ಪಟ್ಟಿತು. ಸುಂಕದಿಂದ ಆಗುವ ಉತ್ಪ ನ್ನವು ಕಡಿಮೆಯಾದರೆ ಅದರಿಂದ ಹಾನಿಯಾಗಬಾರದೆಂದು ಪೀಲನು ೧೮೪೨ರಲ್ಲಿ ಪ್ರಾಪ್ತಿಯ ಮೇಲಿನ ಕರವನ್ನು ಕೂಡಿಸಿದನು. ಈ ಕರವನ್ನು ಶ್ರೀಮಂತರು ಕೊಡಬೇಕಾದುದರಿಂದ ಬಡಜನರ ಮೇಲಿನ ಕರದ ಭಾರವು ಕಡಿಮೆಯಾಯಿತು.

ಪೀಲನು ನಿತ್ಯವೂ ಸಂಸಾರಕ್ಕೆ ಬೇಕಾಗುವ ಅನೇಕ ವಸ್ತುಗಳ ಮೇಲಿನ ಸುಂಕವನ್ನು ಕಡಿಮೆಮಾಡಿದ್ದನು. ಆದರೂ ಅವನ ಅನುಯಾಯಿಗಳಲ್ಲಿ ಅನೇ ಕರು ಜಮೀನುದಾರರಿದ್ದುದರಿಂದ ಅವರಿಗೆ ಹಾನಿಯಾಗಬಾರದೆಂದು ಅವನು ಧಾನ್ಯದ ಮೇಲಿನ ಸುಂಕವನ್ನು ಕಡಿಮೆಮಾಡಿದ್ದಿಲ್ಲ; ಆದರೆ ಮುಂದೆ ಅದನ್ನಾದರೂ ರದ್ದುಮಾಡಬೇಕಾಯಿತು.

**ಪರಕೀಯ ಧಾನ್ಯದ ಮೇಲಿನ ಸುಂಕವು ರದ್ದುಮಾಡಲ್ಪಟ್ಟಿತು (೧೮೪೬)**—೧೮೪೫ರಲ್ಲಿ ಐರ್ಲಂಡಿನಲ್ಲಿ ದೊಡ್ಡ ಬರವು ಒದಗಿ ಅಲ್ಲಿಯ ಬಟಾ ಟೆಯ ಬೆಳೆ ಕೈಗೆ ಹತ್ತಲಿಲ್ಲ. ಅಲ್ಲಿಯ ಸುಮಾರು ಅರ್ಧ ಜನರಿಗೆ ಬಟಾಟೆ ಮುಖ್ಯ ಅನ್ನವಾಗಿದ್ದಿತು; ಆದುದರಿಂದ ಅವರಿಗೆ ಸಾಕಷ್ಟು ಹೊಟ್ಟೆಗೆ ದೊರೆಯ ದಂತಾಗಿ ಅವರ ಪರಿಸ್ಥಿತಿ ಬಹು ಕೀಳಾಯಿತು. ಇಂಗ್ಲಂಡಿನಿಂದ ಧಾನ್ಯ ವನ್ನು ತರಬೇಕೆಂದರೆ ಧಾನ್ಯವು ಇಂಗ್ಲಂಡಿಗೇ ಸಾಕಾಗುವಷ್ಟು ಇರಲಿಲ್ಲ. ಆದುದರಿಂದ ಪರದೇಶಗಳಿಂದ ಬರುವ ಧಾನ್ಯಗಳ ಮೇಲಿನ ಸುಂಕವನ್ನು ರದ್ದು ಗೊಳಿಸಿ ಬಹು ಪ್ರಮಾಣದಲ್ಲಿಯೂ ಅಗ್ಗವಾಗಿಯೂ ಧಾನ್ಯವು ದೊರೆವಂತೆ ಮಾಡುವದು ಅವಶ್ಯವೆಂದು ಪೀಲನಿಗೆ ತೋರಿತು. ಅವನು “ಪರಕೀಯ ಧಾನ್ಯದ ಮೇಲಿನ ಸುಂಕವನ್ನು ರದ್ದುಗೊಳಿಸಬೇಕು” ಎಂದು ಪಾರ್ಲಿಮೆಂಟಿನ ಸಭೆಯಲ್ಲಿ ಸೂಚನೆಯನ್ನು ತಂದನು. ಈ ಸೂಚನೆಗೆ ಕಾನ್ಸರ್ವೇಟಿವ್ ಪಕ್ಷದ ಬಹುಶಃ ಎಲ್ಲ ಜನರ ವಿರೋಧವಿದ್ದಿತು, ಆದರೂ ವ್ಹಿಗ್ ಪಕ್ಷವು ಅದಕ್ಕೆ ಅನು ಕೂಲವಾಗಿ ಮತವನ್ನು ಕೊಟ್ಟುದರಿಂದ ಅದು ಸ್ವೀಕರಿಸಲ್ಪಟ್ಟಿತು (೧೮೪೬).

ಪರಕೀಯ ಧಾನ್ಯದ ಮೇಲಿನ ಸುಂಕವು ರದ್ದಾದುದರಿಂದ ಐರ್ಲಂಡಿನಲ್ಲಿ ಇತರ ದೇಶಗಳಿಂದ ಧಾನ್ಯವು ಬೇಕಾದಷ್ಟು ಬರಲಾರಂಭಿಸಿತು. ಅದರಿಂದ ಬರದ ತೀವ್ರತೆ ಬಹಳವಾಗಿ ಕಡಿಮೆಯಾಯಿತು. ಅದರಂತೆ ಇಂಗ್ಲಂಡಿನಲ್ಲಿಯೂ ಅಗ್ಗಳತೆಯುಂಟಾದುದರಿಂದ ಬಡಜನರ ಸಂಸಾರವು ಅಲ್ಪ ವೆಚ್ಚದಲ್ಲಿ ಸಾಗಲಾರಂಭಿಸಿತು.

**ಕಾಂಝರ್‌ವೇಟಿವ್ ಪಕ್ಷದಲ್ಲಿ ಒಡಕು**—ಪರಕೀಯ ಧಾನ್ಯದ ಮೇಲಿನ ಸುಂಕವನ್ನು ರದ್ದುಗೊಳಿಸಬೇಕೆಂಬ ಸೂಚನೆ ಸ್ವೀಕೃತವಾದುದರಿಂದ ಕಾಂಝರ್‌ವೇಟಿವ್ ಪಕ್ಷದಲ್ಲಿ ಒಡಕು ಉಂಟಾಯಿತು. ಪೀಲನ ವಿರುದ್ಧವಾಗಿದ್ದ ಕಾಂಝರ್‌ವೇಟಿವ್ ಪಕ್ಷದೊಳಗಿನ ಸದಸ್ಯರಲ್ಲಿ ಡರ್ಬಿ ಮತ್ತು ಡಿಝ್ರೇಲಿ ಇವರು ಮುಖ್ಯರಾಗಿದ್ದರು. ಅವರು ಮುಂದೆಯೂ ಪೀಲನನ್ನು ವಿರೋಧಿಸಲು ನಿಶ್ಚಯಿಸಿದರು. ಆ ಸಮಯದಲ್ಲಿ ಐರ್ಲಂಡಿನಲ್ಲಿ ಅಸ್ವಸ್ಥತೆ ಬಹಳವಾಗಿದ್ದಿತು ಮತ್ತು ಎಡೆಯೆಡೆಗಳಲ್ಲಿ ದೊಂಬೆಗಳಾಗುತ್ತಿದ್ದುವು. ಆದುದರಿಂದ ಐರ್ಲಂಡಿನಲ್ಲಿ ಶಾಂತತೆಯನ್ನು ಸ್ಥಾಪಿಸಲು ಪೀಲನು ದಬ್ಬಾಳಿಕೆಯ ಸೂಚನೆಯನ್ನು ಪಾರ್ಲಿಮೆಂಟಿನಲ್ಲಿ ತಂದನು. ಆಗ ಅವರು ಪೀಲನನ್ನು ವಿರೋಧಿಸುವ ವ್ಹಿಗ್ ಪಕ್ಷದವರಿಗೆ ಅನುಕೂಲವಾಗಿ ಮತವನ್ನು ಕೊಟ್ಟುದರಿಂದ ಪೀಲನಿಗೆ ಸೋಲು ಬಂದಿತು. ಆದುದರಿಂದ ಅವನು ತನ್ನ ಮುಖ್ಯ ಮಂತ್ರಿಪದವನ್ನು ಬಿಡಬೇಕಾಯಿತು. ಧಾನ್ಯದ ಮೇಲಿನ ಕರವನ್ನು ರದ್ದುಗೊಳಿಸಲು ಪೀಲನಿಗೆ ಬೆಂಬಲವಿತ್ತ ಕಾಂಝರ್‌ವೇಟಿವ್ ಪಕ್ಷದಲ್ಲಿಯ ಸದಸ್ಯರಿಗೆ **ಪೀಲಾಯಿಟ್ಸ್** ಎಂದು ಹೆಸರು ಬಂದಿತು. ಈ ಸದಸ್ಯರಲ್ಲಿ ಮುತ್ಸದ್ದಿಯಾದ **ಗ್ಲಡ್‌ಸ್ಟನನು** ಒಬ್ಬನಾಗಿದ್ದನು. ಇವನು ಮುಂದೆ ಬಹು ಪ್ರಸಿದ್ಧಿಯನ್ನು ಪಡೆದನು. ಪೀಲನು ೧೮೫೦ರಲ್ಲಿ ಮರಣಹೊಂದಿದನು. ಗ್ಲಡ್‌ಸ್ಟನ್ ಮೊದಲಾದ ಅವನ ಅನುಯಾಯಿಗಳ ಮತಗಳು ವ್ಹಿಗ್ ಪಕ್ಷದ ಮತಗಳನ್ನು ಅನುಸರಿಸುತ್ತಿದ್ದುವು. ಆದುದರಿಂದ ಅವರೆಲ್ಲರೂ ವ್ಹಿಗ್ ಪಕ್ಷದಲ್ಲಿ ಸೇರಿದರು ಮತ್ತು ಅವರು ಬದಲಾದ ಪರಿಸ್ಥಿತಿಯನ್ನನುಸರಿಸಿ ತಮ್ಮ ಪಕ್ಷಕ್ಕೆ ವ್ಹಿಗ್ ಹೆಸರಿನ ಬದಲು **ಲಿಬರಲ್** (Liberal=ಉದಾರ) ಎಂಬ ಹೆಸರನ್ನಿತ್ತರು (ಸು. ೧೮೫೦).

**ರಸೆಲ್ ಮತ್ತು ಪಾಮರ್ಸ್ಟನ್**—ಮೇಲೆ ಹೇಳಿದಂತೆ ಕಾಂಝರ್‌ವೇಟಿವ್ ಪಕ್ಷದಲ್ಲಿ ಒಡಕು ಹುಟ್ಟಿದುದರಿಂದ ೧೮೪೬ರಿಂದ ೧೮೬೬ರ ವರೆಗೆ ನಡುವೆ ೧½ ವರ್ಷಗಳನ್ನು ಬಿಟ್ಟರೆ ಉಳಿದೆಲ್ಲ ಅವಧಿಯಲ್ಲಿಯೂ ಲಿಬರಲ್ ಪಕ್ಷದವರ ಕೈಯಲ್ಲಿ ಅಧಿಕಾರವಿದ್ದಿತು. ಈ ಲಿಬರಲ್ ಪಕ್ಷದಲ್ಲಿಯ ರಸೆಲನು (೧೮೪೬—೫೨ ಮತ್ತು ೧೮೬೫—೬೬), ಅಬರ್‌ಡೀನನು (೧೮೫೨—೫೫) ಮತ್ತು ಪಾಮರ್ಸ್ಟನನು

(೧೮೫೫–೫೮ ಮತ್ತು ೧೮೫೯–೬೫) ಇವರು ಮುಖ್ಯ ಮಂತ್ರಿಗಳಾಗಿದ್ದರು. ಇವರಲ್ಲಿ ಪಾಮರ್ಸ್ಟನನು ವಿಶೇಷವಾದ ಪ್ರಸಿದ್ಧಿಯನ್ನು ಪಡೆದನು. ಅವನ ಲಕ್ಷ್ಯವು ಪರರಾಷ್ಟ್ರೀಯ ವಿಷಯದ ಕಡೆಗೆ ಇದ್ದಿತು. ಆ ವಿಷಯದ ಮಾಹಿತಿಯನ್ನು "ಇಂಗ್ಲಂಡಿನ ಪರರಾಷ್ಟ್ರೀಯ ನೀತಿಯೂ ಸಾಮ್ರಾಜ್ಯ ವೃದ್ಧಿಯೂ" ಎಂಬ ಭಾಗದಲ್ಲಿ ಮುಂದೆ ಕೊಟ್ಟಿರುವೆವು. ಪಾಮರ್ಸ್ಟನನು ೧೮೬೫ರಲ್ಲಿ ಮರಣಹೊಂದಿದನು.

**ಮುಖ್ಯ ಮಂತ್ರಿ ರಸೆಲ್ (೧೮೪೬-೫೨)**—ಪೀಲನು ಅಧಿಕಾರ ತ್ಯಾಗವನ್ನು ಮಾಡಿದ ಬಳಿಕ ಲಿಬರಲ್ ಪಕ್ಷದ ಪ್ರಮುಖನಾದ ರಸೆಲನು ಮುಖ್ಯ ಮಂತ್ರಿಯಾದನು. ಅವನು ನೆವಿಗೇಶನ್ ಕಾಯ್ದೆಯನ್ನು ರದ್ದುಗೊಳಿಸಿದುದಲ್ಲದೆ ದೇಶದೊಳಗಿನ ಉದ್ಯಮ ವ್ಯವಸಾಯಗಳಿಗೆ ಸಂರಕ್ಷಣವನ್ನು (Protection) ಕೊಡುವ ಉದ್ದೇಶದಿಂದ ಪರಕೀಯ ವಸ್ತುಗಳ ಮೇಲೆ ಮೊದಲು ಕೂಡಿಸಲ್ಪಟ್ಟಿದ್ದ ಎಲ್ಲ ಸುಂಕಗಳನ್ನು ಸಂಪೂರ್ಣವಾಗಿ ರದ್ದುಗೊಳಿಸಿದನು (೧೮೪೯). ಅದರಿಂದ ವ್ಯಾಪಾರದ ಮೇಲಿನ ನಿಯಂತ್ರಣವು ಇಲ್ಲದಂತಾಗಿ ಇಂಗ್ಲಂಡಿನಲ್ಲಿ ಅನಿರ್ಬಂಧ ವ್ಯಾಪಾರದ ಪದ್ಧತಿ (Free Trade) ವ್ಯವಹಾರದಲ್ಲಿ ಬಂದಿತು. ಅನಿರ್ಬಂಧ ವ್ಯಾಪಾರದ ಪದ್ಧತಿ ಪ್ರಾರಂಭವಾಯಿತೆಂದು ಹೇಳಿದಷ್ಟಕ್ಕೆ ಪರ ರಾಷ್ಟ್ರಗಳಿಂದ ಬರುವ ವಸ್ತುಗಳ ಮೇಲೆ ಸುಂಕವೆ ತೆಗೆದುಕೊಳ್ಳಲ್ಪಡುತ್ತಿರಲಿಲ್ಲ ವೆಂದು ಅಲ್ಲ, ಆದರೆ ಸುಂಕಗಳ ದರವು ಅತ್ಯಲ್ಪ ಪ್ರಮಾಣದಲ್ಲಿದ್ದಿತು ಮತ್ತು ಅದಾದರೂ ರಾಷ್ಟ್ರದಲ್ಲಿಯ ವಸ್ತುಗಳಿಗೆ ಸಂರಕ್ಷಣೆ ದೊರೆಯಬೇಕೆಂದು ಇಡ ಲ್ಪಟ್ಟಿರದೆ ಏನಾದನೂ ಹಣವು ಬರಬೇಕೆಂದು ಇಡಲ್ಪಡುತ್ತಿತ್ತು.

**ಔದ್ಯೋಗಿಕ ಪ್ರದರ್ಶನವು**—೧೮೫೧ರಲ್ಲಿ ವಿಕ್ಟೋರಿಯಾ ರಾಣಿಯ ಪತಿಯಾದ ಪ್ರಿನ್ಸ್ ಆಲ್‌ಬರ್ಟನ ಪ್ರೋತ್ಸಾಹನೆಯಿಂದ ಲಂಡನ್ ನಗರದಲ್ಲಿ ದೊಡ್ಡದಾದ ಔದ್ಯೋಗಿಕ ಪ್ರದರ್ಶನವು ನೆರೆಯಿಸಲ್ಪಟ್ಟಿತು. ಈ ಪ್ರದರ್ಶನದಲ್ಲಿ ಬೇರೆ ಬೇರೆ ದೇಶಗಳಿಂದ ಕಲಾಕೌಶಲ್ಯದ ವಸ್ತುಗಳು ಬಂದಿದ್ದುವು. ಈ ಪ್ರದ ರ್ಶನದಿಂದ ಬೇರೆ ಬೇರೆ ದೇಶಗಳಲ್ಲಿ ಔದ್ಯೋಗಿಕ ವಿಷಯದಲ್ಲಿ ಯಾವ ಬಗೆಯಾದ ಪ್ರಗತಿ ಆಗುತ್ತಿದೆಂಬುದು ಎಲ್ಲರ ನಿದರ್ಶನಕ್ಕೆ ಬಂದಿತು ಮತ್ತು ಭಿನ್ನ ಭಿನ್ನ ರಾಷ್ಟ್ರಗಳಲ್ಲಿ ಪರಸ್ಪರ ಸ್ನೇಹಭಾವವು ಬೆಳೆಯಲು ಅನುಕೂಲವಾಯಿತು.

**ಪಾರ್ಲಿಮೆಂಟಿನ ಹೊಸ ಸಭಾಗೃಹಗಳು**—ಪಾರ್ಲಿಮೆಂಟಿನ ಕಾಮನ್ಸ್ ಮತ್ತು ಲಾರ್ಡ್ಸ್ ಸಭೆಗಳು ವೆಸ್ಟಮಿನ್‌ಸ್ಟರಿನಲ್ಲಿ ಯಾವ ಕಟ್ಟಡಗಳಲ್ಲಿ ನೆರೆಯುತ್ತಿದ್ದುವು ಆ ಕಟ್ಟಡಗಳು ೧೮೩೪ರಲ್ಲಿ ಬೆಂಕಿಗೆ ಆಹುತಿಯಾಗಿದ್ದುವು.

ಆದುದರಿಂದ ಸರ್ ಚಾರ್ಲ್ಸ್ ಬೆರಿ ಇವನು ಸಿದ್ಧಗೊಳಿಸಿದ ಯೋಜನೆಯಂತೆ ಪಾರ್ಲಿಮೆಂಟಿನ ಸಭಾಗೃಹಗಳಿಗೋಸುಗ ವೆಸ್ಟಮಿನ್‌ಸ್ಟರಿನಲ್ಲಿ ಹೊಸ ಕಟ್ಟಡಗಳು ಕಟ್ಟಲ್ಪಟ್ಟವು. ಅವುಗಳ ಉದ್ಘಾಟನೆಯ ಸಮಾರಂಭವು ೧೮೫೨ರಲ್ಲಿ ವಿಕ್ಟೋರಿಯಾ ರಾಣಿಯ ಹಸ್ತದಿಂದ ನೆರವೇರಿತು.

ಡರ್ಬಿ ಮತ್ತು ಡಿಝ್ರೇಲಿ ಇವರ ಮಂತ್ರಿಮಂಡಲವು (೧೮೬೬-೬೮); ೨ನೆಯ ರಿಫಾರ್ಮ್ ಬಿಲ್ಲು, ೧೮೬೭—೧೮೩೨ರಲ್ಲಿ ಪಾಸಾದ ರಿಫಾರ್ಮ್ ಬಿಲ್ಲಿನಿಂದ ಸಾಕಷ್ಟು ಪಾರ್ಲಿಮೆಂಟಿನ ಸುಧಾರಣೆ ಆಗಲಿಲ್ಲ. ಆದುದರಿಂದ ಅದರಲ್ಲಿ ಮತ್ತೆ ಸುಧಾರಣೆಯನ್ನು ಮಾಡುವುದು ಅವಶ್ಯವಿದೆಂದು ಲಿಬರಲ್ ಪಕ್ಷದಲ್ಲಿಯ ಕೆಲವು ಜನರಿಗೆ ಎನಿಸಿತು. ಆದರೆ ವ್ಹಿಗ್ ಪಕ್ಷದ ಜನರ ಮೇಲೆ ಪಾಮರ್ಸ್ಟನನ ವರ್ಚಸ್ಸು ಬಹಳವಾಗಿದ್ದುದರಿಂದ ಹೆಚ್ಚಿನ ಸುಧಾರಣೆಗಳನ್ನು ಮಾಡುವುದು ಅವಶ್ಯವಿಲ್ಲೆಂದು ಅವನಿಗೆ ತೋರಿದುದರಿಂದ ಅವನಿರುವ ವರೆಗೆ ಈ ವಿಷಯದಲ್ಲಿ ಬಹಳವಾಗಿ ಪ್ರಯತ್ನವಾಗಲಿಲ್ಲ. ಆದರೆ ೧೮೬೫ರಲ್ಲಿ ಪಾಮರ್ಸ್ಟನನು ಮರಣಹೊಂದಿದ ಬಳಿಕ ಈ ವಿಷಯದಲ್ಲಿ ತೀವ್ರವಾದ ಆಂದೋಲನವು ಪ್ರಾರಂಭವಾಯಿತು. ೧೮೬೬ರಲ್ಲಿ ಕಾಂಝರ್‌ವೇಟಿವ್ ಪಕ್ಷದ ಲಾರ್ಡ್ ಡರ್ಬಿ ಮತ್ತು ಡಿಝ್ರೇಲಿ ಇವರ ಮಂತ್ರಿಮಂಡಲವು ಸ್ಥಾಪಿಸಲ್ಪಟ್ಟ ಬಳಿಕ ಕಾಮನ್ಸ್ ಸಭೆಯಲ್ಲಿ ಕಾಂಝರ್‌ವೇಟಿವ್ ಪಕ್ಷದ ಪ್ರಮುಖನಾದ ಡಿಝ್ರೇಲಿ ಇವನು ೨ನೆಯ ರಿಫಾರ್ಮ್ ಬಿಲ್ಲನ್ನು ಪಾರ್ಲಿಮೆಂಟಿನ ಸಭೆಯಲ್ಲಿ ತಂದನು. ಅದಕ್ಕೆ ಕಾಂಝರ್‌ವೇಟಿವ್ ಪಕ್ಷದವರಲ್ಲಿ ಕೆಲವರ ವಿರೋಧವಿದ್ದಿತಾದರೂ ಲಿಬರಲ್ ಪಕ್ಷದ ಸಹಾನುಭೂತಿ ದೊರೆದು ಅದು ಪಾಸಾಯಿತು (೧೮೬೭).

ಈ ರಿಫಾರ್ಮ್ ಬಿಲ್ಲಿನಿಂದ ಪಾರ್ಲಿಮೆಂಟಿನ ವಿಷಯದಲ್ಲಿ ಕೆಳಗೆ ಹೇಳಿದ ಸುಧಾರಣೆ ಮಾಡಲ್ಪಟ್ಟಿತು:—

(೧) ಪರಗಣೆಯಲ್ಲಿ ಕನಿಷ್ಟಪಕ್ಷಕ್ಕೆ ವರ್ಷಕ್ಕೆ ೧೨ ಪೌಂಡುಗಳನ್ನು ಲಾವಣಿಯ ರೂಪದಿಂದ ಕೊಡುವ ಪ್ರತಿಯೊಬ್ಬ ರೈತನಿಗೆ ಮತವನ್ನು ಕೊಡುವ ಅಧಿಕಾರವು ದೊರೆತಿತು.

(೨) ಪಟ್ಟಣಗಳಲ್ಲಿಯ ಎಲ್ಲ ಮನೆಗಳ ಒಡೆಯರಿಗೆ ಮತ್ತು ವರ್ಷಕ್ಕೆ ಕನಿಷ್ಟಪಕ್ಷಕ್ಕೆ ೧೦ ಪೌಂಡುಗಳನ್ನು ಬಾಡಿಗೆ ಕೊಡುವ ಪ್ರತಿಯೊಬ್ಬ ವ್ಯಕ್ತಿಗೆ ಮತವನ್ನು ಕೊಡುವ ಅಧಿಕಾರವು ದೊರೆತಿತು.

ಈ ಸುಧಾರಣೆಯಿಂದ ಪಟ್ಟಣದಲ್ಲಿಯ ಮಧ್ಯಮ ವರ್ಗದವರಿಗೂ ಬಡಜನರಿಗೂ ಮತವನ್ನು ಕೊಡಲು ಅಧಿಕಾರವು ದೊರೆತಿತು ಮತ್ತು ಆ ವರ್ಗ

ಗಳ ಪ್ರತಿನಿಧಿಗಳು ಪಾರ್ಲಿಮೆಂಟಿನ ಸಭೆಯಲ್ಲಿ ಬರಲಾರಂಭಿಸಿದರು. ಆದುದರಿಂದ ಬಡವರ ಮತ್ತು ಮಧ್ಯಮ ವರ್ಗದವರ ಸ್ಥಿತಿಯನ್ನು ಸುಧಾರಿಸಲು ಉಪಯುಕ್ತವಾದ ಕಾಯ್ದೆಗಳು ಪಾರ್ಲಿಮೆಂಟಿನಲ್ಲಿ ಪಾಸಾಗಲಾರಂಭಿಸಿದುವು.

ಡಿಝ್ರೇಲಿ ಮತ್ತು ಗ್ಲಡ್‌ಸ್ಟನ್—ಕಾಂಝರ್‌ವೇಟಿವ್ ಪಕ್ಷದ ಮುಖಂಡನಾದ ಡಿಝ್ರೇಲಿ ಮತ್ತು ಲಿಬರಲ್ ಪಕ್ಷದ ಮುಖಂಡನಾದ ಗ್ಲಡ್‌ಸ್ಟನ್ ಈ ಇಬ್ಬರು ಮುತ್ಸದ್ದಿಗಳು ೧೮೬೫ರಲ್ಲಿ ಪ್ರಸಿದ್ಧಿಗೆ ಬಂದರು. ಈ ಮುಂದಿನ



ಡಿಝ್ರೇಲಿ



ಗ್ಲಡ್‌ಸ್ಟನ್

೧೫ ವರ್ಷಗಳ ರಾಜಕಾರಣದಲ್ಲಿ ಅವರು ಒಬ್ಬರೊಬ್ಬರ ಪ್ರತಿಸ್ಪರ್ಧಿಯಾಗಿದ್ದರು. ಇವರಿಬ್ಬರೂ ಮೊದಲು ಕಾಂಝರ್‌ವೇಟಿವ್ ಪಕ್ಷದವರಿದ್ದು ಪೀಲನ ಅನುಯಾಯಿಗಳಾಗಿದ್ದರು. ಆದರೆ ೧೮೪೬ರಲ್ಲಿ ಪೀಲನು ಧಾನ್ಯದ ಮೇಲಿನ ಕರವನ್ನು ರದ್ದುಗೊಳಿಸಿದುದರಿಂದ ಕಾಂಝರ್‌ವೇಟಿವ್ ಪಕ್ಷದಲ್ಲಿ ಒಡಕು ಹುಟ್ಟಿತು. ಡಿಝ್ರೇಲಿ ಪೀಲನನ್ನು ವಿರೋಧಿಸಿದನು ಮತ್ತು ಮುಂದೆ ಅವನು ಕಾಂಝರ್‌ವೇಟಿವ್ ಪಕ್ಷದ ಮುಖಂಡನಾದನು. ಗ್ಲಡ್‌ಸ್ಟನನು ಪೀಲನಿಗೆ ಬೆಂಬಲವಿತ್ತನು. ಆದರೆ ಪೀಲನ ಮರಣದ ತರುವಾಯದಲ್ಲಿ (೧೮೫೦) ಅವನೂ ಪೀಲನ ಇತರ ಅನುಯಾಯಿಗಳೂ ವ್ಹಿಗ್ ಪಕ್ಷವನ್ನು ಕೂಡಿದರು. ಮುಂದೆ ಈ ಪಕ್ಷಕ್ಕೆ ಲಿಬರಲ್ ಪಕ್ಷವೆಂದು ಹೆಸರು ಬಂದಿತು. ಡಿಝ್ರೇಲಿ ಜ್ಯೂ ಪಂಥದವನು. ಅವನು ೧೮೭೪—೧೮೮೦ರ ವರೆಗೆ ಮುಖ್ಯ ಮಂತ್ರಿಯಾಗಿ ಕೆಲಸ ಮಾಡಿದನು. ಪರರಾಷ್ಟ್ರೀಯ ವಿಷಯಗಳ ಕಡೆಗೆ ಅವನ ಲಕ್ಷ್ಯವು ಬಹಳ

ವಾಗಿದ್ದಿತು. ಇಂಗ್ಲಂಡಿನ ಸಮುದ್ರದ ಮೇಲಿನ ವರ್ಚಸ್ಸನ್ನು ಶಾಶ್ವತವಾಗಿಟ್ಟು ಬ್ರಿಟಿಶ್ ಸಾಮ್ರಾಜ್ಯದ ವೃದ್ಧಿಯನ್ನು ಮಾಡಲು ಅವನು ಬಹಳವಾಗಿ ಪ್ರಯತ್ನಿಸಿದನು. ಅವನು ಉತ್ತಮ ವಾಗ್ಮಿಯಾಗಿದ್ದನು, ಮತ್ತು ಅವನು ತನ್ನ ಭಾಷಣಗಳಲ್ಲಿ ಆವೇಶ, ನಾಡುನುಡಿ, ಉಪರೋಧಿಕ ಭಾಷೆ ಮೊದಲಾದುವನ್ನು ಯೋಗ್ಯವಾದ ರೀತಿಯಲ್ಲಿ ಉಪಯೋಗಿಸುತ್ತಿದ್ದುದರಿಂದ ಜನರ ಮನಸ್ಸಿನ ಮೇಲೆ ಅವನ ಭಾಷಣದಿಂದ ತತ್ಕಾಲದಲ್ಲಿ ಅನುಕೂಲವಾದ ಪರಿಣಾಮವಾಗುತ್ತಿತ್ತು. ಗ್ಲಾಡ್‌ಸ್ಟನನು ತನ್ನ ೨೩ನೆಯ ವರ್ಷದಲ್ಲಿಯೇ ಕಾಂಝರ್‌ವೇಟಿವ್ ಪಕ್ಷದ ಪ್ರತಿನಿಧಿಯಾಗಿ ಪಾರ್ಲಿಮೆಂಟನ್ನು ಸೇರಿದನು. ಮುಂದೆ ಅವನೂ ಪೀಲನ ಉಳಿದ ಅನುಯಾಯಿಗಳೂ ವ್ಹಿಗ್ ಪಕ್ಷವನ್ನು ಕೂಡಿದರು. ಈ ಪಕ್ಷವು ಮುಂದೆ ಲಿಬರಲ್ ಪಕ್ಷವಾಯಿತು. ರಸೆಲನು ಲಿಬರಲ್ ಪಕ್ಷದ ಮುಖ್ಯ ಮಂತ್ರಿಯಾಗಿದ್ದಾಗ ಗ್ಲಾಡ್‌ಸ್ಟನನು ಮಂತ್ರಿಮಂಡಲದಲ್ಲಿದ್ದನು, ಮತ್ತು ಅವನ ಕಡೆಗೆ ಆಗ ಅರ್ಥಸಚಿವನ (Chancellor of the Exchequer) ಕೆಲಸವಿದ್ದಿತು. ಈ ಕೆಲಸದಲ್ಲಿದ್ದಾಗ ಅನಿರ್ಬಂಧ ವ್ಯಾಪಾರ ಪದ್ಧತಿಯನ್ನು ಪುರಸ್ಕರಿಸಿ ಜಮಾಖರ್ಚಿನ ಅಂದಾಜುಪತ್ರಿಕೆಗಳನ್ನು ಸಿದ್ಧಗೊಳಿಸಿ ಅವುಗಳ ಮೇಲೆ ಸಯುಕ್ತಿಕವಾದ ಭಾಷಣಗಳನ್ನು ಮಾಡಿ ಅವನು ವಿಶೇಷ ಪ್ರಸಿದ್ಧಿಯನ್ನು ಪಡೆದನು. ಯಾವುದಾದರೊಂದು ವಿಷಯವನ್ನು ಪೂರ್ಣವಾಗಿ ಪ್ರತಿವಾದಿಸುವ ಅವನ ಶೈಲಿ ಉತ್ತಮವಾಗಿದ್ದಿತು. ಅದರಿಂದ ಅವನು ತನ್ನ ಶ್ರೋತೃವರ್ಗದವರ ಮೇಲೆ ಸಂಪೂರ್ಣವಾಗಿ ವರ್ಚಸ್ಸನ್ನು ಕೂಡಿಸಿ ಅವರನ್ನು ತನ್ನ ಪಕ್ಷಕ್ಕೆ ಒಲಿಸಿಕೊಳ್ಳುತ್ತಿದ್ದನು. ೧೮೬೮ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಯಿತು. ಅದರಲ್ಲಿ ಲಿಬರಲ್ ಪಕ್ಷದ ಮತಾಧಿಕ್ಯವಾದುದರಿಂದ ಡರ್ಬಿ ಮತ್ತು ಡಿಝ್ರೇಲಿ ಅಧಿಕಾರತ್ಯಾಗವನ್ನು ಮಾಡಿದರು. ಆಗ ಲಿಬರಲ್ ಪಕ್ಷದ ಪ್ರಮುಖನಾಗಿದ್ದ ಗ್ಲಾಡ್‌ಸ್ಟನನು ಮುಖ್ಯ ಮಂತ್ರಿಯಾದನು.

**ಗ್ಲಾಡ್‌ಸ್ಟನನ ಸುಧಾರಣೆಗಳು**—೧೮೬೮ರಲ್ಲಿ ಗ್ಲಾಡ್‌ಸ್ಟನನು ಮುಖ್ಯ ಮಂತ್ರಿಯಾದನು. ಅವನು ಒಟ್ಟಿನಲ್ಲಿ ನಾಲ್ಕು ಸಲ (೧೮೬೮—೭೪; ೧೮೮೦—೮೫; ೧೮೮೬; ೧೮೯೨—೯೪) ಮುಖ್ಯ ಮಂತ್ರಿಯಾಗಿದ್ದನು. ಅವನು ಇಂಗ್ಲಂಡಿನ ಅಂತಃಸ್ಥ ವಿಷಯಗಳ ಕಡೆಗೆ ಲಕ್ಷ್ಯವನ್ನಿತ್ತು ಬಡವರ ಮತ್ತು ಮಧ್ಯಮ ವರ್ಗದವರ ಉನ್ನತಿಗೋಸುಗ ಉಪಯುಕ್ತವಾದ ಕಾಯ್ದೆಗಳನ್ನು ಮಾಡಿದನು. ಅದರಂತೆ ಐರ್ಲಂಡಿನಲ್ಲಿಯ ಅಸಂತೋಷವನ್ನು ಹೋಗಿಸಲು ಅವನು ಕೆಲವು ಕಾಯ್ದೆಗಳನ್ನು ಮಾಡಿದನು. ಅವನ ಪರರಾಷ್ಟ್ರೀಯ ನೀತಿ

ಶಾಂತತೆಯದಾಗಿದ್ದಿತು. ಇಂಗ್ಲಂಡು ಪರಕೀಯ ಯುದ್ಧಗಳಲ್ಲಿ ತೊಡಗಬಾರದೆಂದು ಅವನ ಅಭಿಪ್ರಾಯವಿದ್ದಿತು.

ಗ್ಲಡ್‌ಸ್ಟನನ ಮೊದಲನೆಯ ಮಂತ್ರಿಮಂಡಲವು (೧೮೬೮-೭೪)—ಈ ಅವಧಿಯಲ್ಲಿ ಗ್ಲಡ್‌ಸ್ಟನನು ಅನೇಕ ಮಹತ್ವದ ಸುಧಾರಣೆಗಳನ್ನು ಮಾಡಿದನು.

**ಐರ್ಲಂಡಿನಲ್ಲಿಯ ಪ್ರಾಟೆಸ್ಟಂಟ್ ಚರ್ಚುಗಳಿಗೆ ದೊರೆಯುತ್ತಿದ್ದ ಸರಕಾರದ ಸಾಹಾಯ್ಯವು ಇಲ್ಲದಂತಾಗುವುದು, ೧೮೬೯**—ಐರ್ಲಂಡಿನಲ್ಲಿಯ ಬಹು ಜನ ಸಮುದಾಯವು ರೋಮನ್ ಕಥಲಿಕ್ ಪಂಥದ ಅನುಯಾಯಿಯಾಗಿತ್ತು. ಹೀಗಿದ್ದರೂ ಅಲ್ಲಿಯ ಪ್ರಾಟೆಸ್ಟಂಟ್ ಪಂಥದ ಚರ್ಚುಗಳಿಗೆ ಸರಕಾರದ ಮಾನ್ಯತೆ ಇದ್ದಿತು ಮತ್ತು ಅವುಗಳಿಗೆ ಸರಕಾರದ ಗ್ರಾಂಟು ದೊರೆಯುತ್ತಿದ್ದಿತು. ಈ ಗ್ರಾಂಟಿನ ಹಣಕ್ಕೋಸುಗ ಐರ್ಲಂಡಿನಲ್ಲಿಯ ಪ್ರಾಟೆಸ್ಟಂಟ್ ಮತ್ತು ರೋಮನ್ ಕಥಲಿಕ್ ಈ ಎರಡೂ ಪಂಥಗಳ ಜನರು ಥೈಥ್ ಎಂಬ ಕರವನ್ನು ಕೊಡಬೇಕಾಗುತ್ತಿದ್ದಿತು. ಇದರಿಂದ ರೋಮನ್ ಕಥಲಿಕ್ ಜನರಲ್ಲಿ ಬಹಳವಾಗಿ ಅಸಂತೋಷವು ಹಬ್ಬಿದ್ದಿತು. ಅವರು ಪ್ರಾಟೆಸ್ಟಂಟ್ ಚರ್ಚುಗಳ ವ್ಯವಸ್ಥೆಗೋಸುಗ ಸರಕಾರವು ಗ್ರಾಂಟನ್ನು ಕೊಡಬಾರದೆಂದು ಆಂದೋಲನವನ್ನು ಹೂಡಿದ್ದರು. ರೋಮನ್ ಕಥಲಿಕ್ ಜನರ ಈ ಅಸಂತೋಷವನ್ನು ಇಲ್ಲದಾಗಿ ಮಾಡಲು ಗ್ಲಡ್‌ಸ್ಟನನು ೧೮೬೯ರಲ್ಲಿ "ಐರಿಶ್ ಚರ್ಚುಗಳಿಗೆ ದೊರೆಯುತ್ತಿದ್ದ ಸರಕಾರದ ಗ್ರಾಂಟನ್ನು ನಿಲ್ಲಿಸುವ ಕಾಯ್ದೆ"ಯನ್ನು (Disestablishment of Protestant Church in Ireland) ಮಾಡಿದನು.

**ಐರ್ಲಂಡಿನಲ್ಲಿಯೂ ಭೂಮಿಗಳ ವಿಷಯದಲ್ಲಿ ಕಾಯ್ದೆ, ೧೮೭೦**—ಐರ್ಲಂಡಿನಲ್ಲಿ ಬಹುಶಃ ಎಲ್ಲ ಭೂಮಿಗಳು ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಮತ್ತು ಸ್ಕಾಟಿಶ್ ಜಮೀನುದಾರರ ಒಡೆತನಕ್ಕೆ ಒಳಪಟ್ಟಿದ್ದುವು. ಅವರು ಅವನ್ನು ಐರಿಶ್ ರೋಮನ್ ಕಥಲಿಕ್ ಪಂಥದ ರೈತರಿಗೆ ಲಾವಣಿಯಿಂದ ಕೊಡುತ್ತಿದ್ದರು. ಇಂಗ್ಲಿಶ್ ಮತ್ತು ಸ್ಕಾಟಿಶ್ ಜಮೀನುದಾರರು ಈ ರೈತರಿಂದ ದೊರೆಯತಕ್ಕ ಲಾವಣಿಯ ಹಣವನ್ನು ಆಗಾಗ ಹೆಚ್ಚಿಸುತ್ತಿದ್ದರು ಮತ್ತು ಹೊಲಗಳನ್ನು ಸುಧಾರಿಸಲು ರೈತರೇನಾದರೂ ಹಣವನ್ನು ವೆಚ್ಚ ಮಾಡಿದರೆ ಆ ಹಣವನ್ನು ಅವರಿಗೆ ಕೊಡುತ್ತಿರಲಿಲ್ಲ. ಈ ಪರಿಸ್ಥಿತಿಯಿಂದ ಮತ್ತು ಐರ್ಲಂಡಿನಲ್ಲಿ ಆಗಾಗ ಒದಗುವ ಬರಗಳಿಂದ ಅಲ್ಲಿಯ ರೈತರ ಸ್ಥಿತಿ ಬಹಳವಾಗಿ ಕೆಟ್ಟಿತು ಮತ್ತು ಅದ

ರಿಂದ ಜನರಲ್ಲಿ ಬಹಳವಾಗಿ ಅಸಂತೋಷವು ಹಬ್ಬಿತ್ತು. ಗ್ಲಾಡ್‌ಸ್ಟನನು ಈ ಐರಿಶ್ ರೈತರ ಸ್ಥಿತಿಯನ್ನು ಸುಧಾರಿಸಲು ೧೮೭೦ರಲ್ಲಿ **ಐರ್ಲಂಡಿನಲ್ಲಿಯ ಭೂಮಿಗಳ ವಿಷಯದಲ್ಲಿ ಕಾಯ್ದೆ** (Irish Land Act)ಯನ್ನು ಮಾಡಿದನು. ಜಮೀನುದಾರನು ತನ್ನ ಒಬ್ಬ ರೈತನನ್ನು ಭೂಮಿಯಿಂದ ಬಿಡಿಸಿ ಅದನ್ನು ತಿರುಗಿ ತನ್ನ ಕೈಯಲ್ಲಿ ತೆಗೆದುಕೊಳ್ಳುವ ಕಾಲದಲ್ಲಿ ಆ ಭೂಮಿಯ ಸುಧಾರಣೆಗೋಸುಗ ರೈತನು ವೆಚ್ಚಮಾಡಿದ ಹಣವನ್ನು ಅವನಿಗೆ ಕೊಡಬೇಕೆಂದು ಈ ಕಾಯ್ದೆಯಿಂದ ನಿಶ್ಚಯಿಸಲ್ಪಟ್ಟಿತು. ಆದರೆ ಈ ಕಾಯ್ದೆಯಿಂದ ಐರ್ಲಂಡಿನಲ್ಲಿಯ ಅಸಂತೋಷವು ಕಡಿಮೆಯಾಗಲಿಲ್ಲ.

**ಪ್ರಾಥಮಿಕ ಶಿಕ್ಷಣದ ಕಾಯ್ದೆ (೧೮೭೦)**—ಗ್ಲಾಡ್‌ಸ್ಟನನ ಮಂತ್ರಿಮಂಡಲದಲ್ಲಿಯ ಫಾರ್‌ಸ್ಟರ್ ಎಂಬ ಮಂತ್ರಿಯ ಸೂಚನೆಯಿಂದ ಪಾರ್ಲಿಮೆಂಟು ೧೮೭೦ರಲ್ಲಿ ಪ್ರಾಥಮಿಕ ಶಿಕ್ಷಣದ ಕಾಯ್ದೆಯನ್ನು ಮಾಡಿತು. ಇಂಗ್ಲಂಡಿನ ಸಾರ್ವಾಂಗಿಕ ಪ್ರಗತಿಯಾಗಲು ಇಂಗ್ಲಂಡಿನಲ್ಲಿಯ ಪ್ರತಿಯೊಬ್ಬ ವ್ಯಕ್ತಿಗೆ ಓದು ಬರೆಹಗಳು ಬರುವುದು ಅವಶ್ಯವೆಂದು ಲಿಬರಲ್ ಪಕ್ಷದ ಜನರ ಅಭಿಪ್ರಾಯವಿದ್ದಿತು. ಪ್ರಾಥಮಿಕ ಶಿಕ್ಷಣದ ಕಾರ್ಯವನ್ನು ಕೆಲವು ಸಂಸ್ಥೆಗಳು* ನಡೆಯಿಸಿದ್ದುವು. ಅದಕ್ಕೋಸುಗ ಸರಕಾರದಿಂದ ಗ್ರಾಂಟು ದೊರೆಯುತ್ತಿದ್ದಿತು. ಈ ಗ್ರಾಂಟು ಮೊದಲು ೧೮೩೩ರಲ್ಲಿ ಕೊಡಲ್ಪಟ್ಟಿತು, ಮತ್ತು ಅದು ಯೋಗ್ಯವಾಗಿ ವಿನಿಯೋಗಿಸಲ್ಪಡುತ್ತಿದೆಯೊ ಇಲ್ಲವೊ ಎಂಬದನ್ನು ನೋಡಲು ೧೮೩೯ರಲ್ಲಿ ಇನ್‌ಸ್ಪೆಕ್ಟರರು ನಿಯೋಜಿಸಲ್ಪಟ್ಟರು. ಆದರೆ ಈ ಶಿಕ್ಷಣವನ್ನು ಕೊಡುವ ಶಾಲೆಗಳು ಸಾಕಷ್ಟು ಇರಲಿಲ್ಲ ಮತ್ತು ಹಳ್ಳಿಪಳ್ಳಿಗಳಲ್ಲಿ ಶಾಲೆಗಳೇ ಇರಲಿಲ್ಲ. ಆದುದರಿಂದ ಶಿಕ್ಷಣಕಾರ್ಯದ ಕಡೆಗೆ ಸರಕಾರವು ಹೆಚ್ಚಾಗಿ ಲಕ್ಷ್ಯವನ್ನು ಕೊಡುವುದು ಅವಶ್ಯವೆಂದೆನಿಸಿದುದರಿಂದ ಈ ಪ್ರಾಥಮಿಕ ಶಿಕ್ಷಣ ಕಾಯ್ದೆ ಮಾಡಲ್ಪಟ್ಟಿತು. ಈ ಕಾಯ್ದೆಯಿಂದ ಸರಕಾರದ ಗ್ರಾಂಟು ದೊರೆಯುತ್ತಿದ್ದ ಸಾರ್ವಜನಿಕ ಶಾಲೆಗಳು ಶಾಶ್ವತಗೊಳಿಸಲ್ಪಟ್ಟುವು, ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಗೋಸುಗ ಇಂಗ್ಲಂಡಿನಲ್ಲಿ ಅನೇಕ ವಿಭಾಗಗಳು ಮಾಡಲ್ಪಟ್ಟುವು ಮತ್ತು ಅಲ್ಲಿಯ ೧೩ ವರ್ಷಗಳ ವರೆಗಿನ ಮಕ್ಕಳ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆ ಆ ಭಾಗದಲ್ಲಿಯ ಜನರಿಂದ ಆರಿಸಲ್ಪಟ್ಟ ಸ್ಕೂಲ ಬೋರ್ಡಿನ ಕಡೆಗೆ ಕೊಡಲ್ಪಟ್ಟಿತು. ಪ್ರಾಥಮಿಕ ಶಿಕ್ಷಣಕ್ಕೋಸುಗ ತಮ್ಮ ಭಾಗದಲ್ಲಿಯ ಜನರ ಮೇಲೆ

---

*British and Foreign Schools Society; The National Society for the Education of the poor in the principles of the Church of England.

ಕರವನ್ನು ಕೂಡಿಸಲು ಅಧಿಕಾರವು ಈ ಸ್ಕೂಲ ಬೋರ್ಡುಗಳಿಗೆ ಕೊಡಲ್ಪಟ್ಟಿತು; ಮತ್ತು ಅವಕ್ಕೆ ಸರಕಾರದಿಂದ ಗ್ರಂಟು ದೊರೆಯಲಾರಂಭಿಸಿತು.

೧೮೮೦ರಲ್ಲಿ ಈ ಶಿಕ್ಷಣವು ಒತ್ತಾಯವಾಗಿಯೂ ೧೮೯೧ರಲ್ಲಿ ಪುಕ್ಕಟೆ ಯಾಗಿಯೂ ಕೊಡಲ್ಪಡಲು ಆರಂಭವಾಯಿತು.

**ವಿಶ್ವವಿದ್ಯಾಲಯಗಳಲ್ಲಿಯ ಶಿಕ್ಷಣವು**—ಆಕ್ಸಫರ್ಡ ಮತ್ತು ಕೆಂಬ್ರಿಜ್ ಇವುಗಳಲ್ಲಿಯ ವಿಶ್ವವಿದ್ಯಾಲಯಗಳಲ್ಲಿ ಇಂಗ್ಲಂಡಿನ ಪ್ರಾಟೆಸ್ಟಂಟ ಚರ್ಚಿನ ಅನು ಯಾಯಿಗಳಲ್ಲದವರಿಗೆ ಅಧಿಕಾರದ ಸ್ಥಳಗಳೂ ಶಿಷ್ಯವೃತ್ತಿಗಳೂ ದೊರೆಯುತ್ತಿರ ಲಿಲ್ಲ. ಆದುದರಿಂದ ಗ್ಲಡ್‍ಸ್ಟನನು ಈ ವಿಷಯದಲ್ಲಿ ೧೮೭೧ರಲ್ಲಿ ಒಂದು ಕಾಯ್ದೆ ಯನ್ನು ಮಾಡಿ ಈ ಪ್ರತಿಬಂಧವನ್ನು ದೂರಗೊಳಿಸಿದನು.

**ಬಲಟ್ ಅಕ್ಟ, ೧೮೭೨**—ಪಾರ್ಲಿಮೆಂಟಿನ ಚುನಾವಣೆಯ ಕಾಲದಲ್ಲಿ ಮತದಾರರು ತಮ್ಮ ಮತಗಳನ್ನು ಬಹಿರಂಗವಾಗಿ ಕೊಡುತ್ತಿದ್ದರು; ಆದು ದರಿಂದ ಯಾವ ಮತದಾರನು ಯಾವ ಉಮೇದ್ವಾರನಿಗೆ ಮತವನ್ನು ಕೊಡುವನೆಂಬುದು ಎಲ್ಲರಿಗೂ ಗೊತ್ತಾಗುತ್ತಿತ್ತು. ಮತದಾರರಿಗೆ ಲಂಚವನ್ನು ಕೊಟ್ಟಾಗಲಿ ಹೆದರಿಕೆಯನ್ನು ಹುಟ್ಟಿಸಿಯಾಗಲಿ ತಮಗೆ ಮತವನ್ನು ಹಾಕಿಸಿ ಕೊಳ್ಳಲು ಉಮೇದ್ವಾರರು ಎಷ್ಟೋ ಕಡೆಗಳಲ್ಲಿ ಯತ್ನಿಸುತ್ತಿದ್ದರು. ಆದುದ ರಿಂದ ಇದನ್ನು ತಡೆಯಲು ಮತ್ತು ಮತದಾರರಿಗೆ ತಮಗೆ ಬೇಕಾದ ಉಮೇ ದ್ವಾರನಿಗೆ ಮತವನ್ನು ಕೊಡಲು ಅನುಕೂಲವಾಗಲು **ಬಲಟ್* ಅಕ್ಟ** (Ballot Act=ಗುಪ್ತವಾಗಿ ಮತವನ್ನು ಕೊಡುವ ಕಾಯ್ದೆ) ಪಾಸುಮಾಡಲ್ಪ ಟ್ಟಿತು. ಈ ಕಾಯ್ದೆ ಪಾಸಾದ ಬಳಿಕ ಎಲ್ಲ ಉಮೇದ್ವಾರರ ಹೆಸರುಗಳುಳ್ಳ ಕಾಗದದ ಮೇಲೆ ತಮಗೆ ಬೇಕಾದ ಉಮೇದ್ವಾರನ ಹೆಸರಿನ ಮುಂದೆ ಗುಪ್ತ ವಾಗಿ (×) ಚಿಹ್ನವನ್ನು ಮಾಡಿ ಆ ಕಾಗದವನ್ನು ಮಡಚಿ ಒಂದೇ ಬಲಟ್ ಪೆಟ್ಟಿಗೆಯಲ್ಲಿ ಒಗೆಯಲು ಮತದಾರರಿಗೆ ಶಕ್ಯವಾಯಿತು. ಇದರಿಂದ ಯಾವ ಮತದಾರನು ಯಾವ ಉಮೇದ್ವಾರನಿಗೆ ಮತವನ್ನು ಕೊಡುವನೆಂಬುದು ಗೊತ್ತಾಗಲು ಶಕ್ಯವಿರಲಿಲ್ಲ.

**ಕೆಲಸಗಾರರ ಸಂಘದ ಕಾಯ್ದೆ** (Trade Union Act). ೧೮೭೧—ಕೆಲಸಗಾರರು ತಮ್ಮ ಉನ್ನತಿಗೋಸುಗ ತಮ್ಮ ಸಂಘಗಳನ್ನು ಸ್ಥಾಪಿಸಿಕೊಂಡಿದ್ದರು ಮತ್ತು ವರ್ಗಣಿಯಿಂದ ನಿಧಿಯನ್ನು ಕೂಡಿಸಿದ್ದರು. ಈ

* Ballot—ಮತವನ್ನು ಯಾರು ಕೊಟ್ಟರೆಂಬುದು ಗೊತ್ತಾಗಬಾರದೆಂದು ಗುಪ್ತವಾಗಿ ಒಗೆದ ಚೆಂಡು, ತಿಕೀಟು ಅಥವಾ ಕಾಗದವು.

ಸಂಘಗಳು ಕ್ರಮಬದ್ಧವಾದುವೆಂದು (Legal) ತಿಳಿಯಲ್ಪಡಬೇಕೆಂದು ಗ್ಲಡ್‌ಸ್ಟನನು ೧೮೭೧ರಲ್ಲಿ ಟ್ರೇಡ್ ಯೂನಿಯನ್ ಅಕ್ಟ ಎಂಬ ಕಾಯ್ದೆಯನ್ನು ಮಾಡಿದನು.

**ಇತರ ಸುಧಾರಣೆಗಳು**—ಯುದ್ಧಮಂತ್ರಿಯಾದ **ಕಾರ್ಡವೆಲ್** ಇವನ ಸೂಚನೆಯಂತೆ ಗ್ಲಡ್‌ಸ್ಟನನು ೧೮೭೧ರಲ್ಲಿ **ಸೈನ್ಯದ ವ್ಯವಸ್ಥೆಯ ಕಾಯ್ದೆ** (Army Regulation Act) ಯನ್ನು ಮಾಡಿದನು. ಮೊದಲು ಸೈನ್ಯದಲ್ಲಿಯ ನೌಕರಿಯ ಅವಧಿ ೨೦ ವರ್ಷಗಳದಾಗಿತ್ತು, ಆದರೆ ಈ ಕಾಯ್ದೆಯಿಂದ ಅದು ೧೨ ವರ್ಷಗಳದಾಯಿತು. ಈ ಹನ್ನೆರಡು ವರ್ಷಗಳಲ್ಲಿ ೬ ವರ್ಷ ಸೈನ್ಯದಲ್ಲಿ ಉಳಿದು ಕೆಲಸಮಾಡಬೇಕು, ಮತ್ತು ೬ ವರ್ಷ 'ರಿಝರ್ವ್' ಎಂದಿದ್ದು ಅವಶ್ಯವಾದಾಗ ಸೈನ್ಯದಲ್ಲಿ ಬಂದು ಕೆಲಸಮಾಡಬೇಕು ಎಂದು ನಿಶ್ಚಯಿಸಲ್ಪಟ್ಟಿತು.

೧೮೭೩ರಲ್ಲಿ **ನ್ಯಾಯಖಾತೆಯ ವಿಷಯದಲ್ಲಿ ಕಾಯ್ದೆ** (Judicature Act) ಮಾಡಲ್ಪಟ್ಟು ನ್ಯಾಯಖಾತೆಯ ಪುನರ್ಘಟನೆ ಮಾಡಲ್ಪಟ್ಟಿತು. ಈ ಕಾಯ್ದೆಯಿಂದ ಎಲ್ಲಕ್ಕೂ ವರಿಷ್ಠ ಕೋರ್ಟು ಎಂದು ಲಾರ್ಡ್ಸ್ ಸಭೆಯ ಅಧಿಕಾರವು ಶಾಶ್ವತವಾಗಿ ಇಡಲ್ಪಟ್ಟಿತು, ಮತ್ತು ಈ ಕೋರ್ಟಿನ ಕೆಳಗೆ ಹಾಯಕೋರ್ಟ್ ಆಫ್ ಜಸ್ಟಿಸ್ ಮತ್ತು ಸುಪ್ರೀಮ ಕೋರ್ಟ್ ಆಫ್ ಅಪೀಲ್ ಎಂಬ ಕೋರ್ಟುಗಳು ಸ್ಥಾಪಿಸಲ್ಪಟ್ಟು ಇವುಗಳ ನೇತೃತ್ವದಲ್ಲಿ ಇತರ ನ್ಯಾಯಕೋರ್ಟುಗಳು ಇಡಲ್ಪಟ್ಟವು.

ಗ್ಲಡ್‌ಸ್ಟನನು ೬ ವರ್ಷಗಳ ಅವಧಿಯಲ್ಲಿ ಮಾಡಿದ ಈ ಸುಧಾರಣೆಗಳು ಬಹಳವಾದುವು ಎಂದು ಲಿಬರಲ್ ಪಕ್ಷದ ಕೆಲವು ಜನರಿಗೂ ಎನಿಸತೊಡಗಿತು. ಕಾಂಝರ್‌ವೇಟಿವ್ ಪಕ್ಷದವರಂತು ಮೊದಲಿನಿಂದಲೂ ಈ ಸುಧಾರಣೆಗಳಿಗೆ ವಿರುದ್ಧರಾಗಿದ್ದರು. ೧೮೭೪ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಯಿತು. ಆ ಸಮಯದಲ್ಲಿ ಪಾರ್ಲಿಮೆಂಟಿನ ಸಭೆಯಲ್ಲಿ ಕಾಂಝರ್‌ವೇಟಿವ್ ಪಕ್ಷದ ಮತಾಧಿಕ್ಯವಾದುದನ್ನು ಕಂಡು ಗ್ಲಡ್‌ಸ್ಟನನು ಅಧಿಕಾರತ್ಯಾಗವನ್ನು ಮಾಡಿದನು. ಅವನ ತರುವಾಯದಲ್ಲಿ ಡಿಝ್ರೇಲಿ ಮುಖ್ಯ ಮಂತ್ರಿಯಾದನು.

**ಡಿಝ್ರೇಲಿ**—ಡಿಝ್ರೇಲಿ ಇವನು ೬ ವರ್ಷಗಳ ವರೆಗೆ (೧೮೭೪–೮೦) ಮುಖ್ಯ ಮಂತ್ರಿಯಾಗಿದ್ದನು. ಅವನ ಲಕ್ಷ್ಯವು ಪರರಾಷ್ಟ್ರೀಯ ವಿಷಯಗಳ ಕಡೆಗೆ ಇದ್ದಿತು. ಆದರೂ ಇಂಗ್ಲಂಡಿನ ಅಂತಃಸ್ಥ ವಿಷಯದಲ್ಲಿ ಕೆಲಸಗಾರರ ವರ್ಗಕ್ಕೆ ಉಪಯುಕ್ತವಾದ ಟ್ರೇಡ್ ಯೂನಿಯನ್ ಅಕ್ಟನ್ನು ಮಾಡಿದನು.

**ಕೆಲಸಗಾರರ ಸಂಘದ ಕಾಯ್ದೆ**(Trade Union Act), ೧೮೭೫–ಕೆಲಸಗಾರರ ವರ್ಗದವರು ತಮ್ಮ ಉನ್ನತಿಗೋಸುಗ ಸಂಘಗಳನ್ನು ಸ್ಥಾಪಿಸಿಕೊಂಡರೆ ಅವು ಕ್ರಮಬದ್ಧ (Legal) ವಾದುವೆಂದು ತಿಳಿಯಲ್ಪಡಬೇಕೆಂದು ೧೮೭೧ರಲ್ಲಿ ಪಾಸಾದ ಕಾಯ್ದೆಯಿಂದ ನಿಶ್ಚಯಿಸಲ್ಪಟ್ಟಿತ್ತು. ಆದರೆ ಕೆಲಸಗಾರರ ಸಂಘವು ಸಂಪನ್ನು ಹೂಡಿ ಕೆಲಸಮಾಡಲು ಒಪ್ಪದಿದ್ದರೆ ಈ ಕೃತ್ಯವು ಕ್ರಮಬದ್ಧವಲ್ಲವೆಂದು ತಿಳಿಯಲ್ಪಡಬಾರದೆಂದು ಕೆಲಸಗಾರರ ವರ್ಗದವರು ಆಂದೋಲನವನ್ನು ಹೂಡಿದ್ದರು. ಆದುದರಿಂದ ೧೮೭೫ರಲ್ಲಿ ಡಿಝ್ರೇಲಿ **ಕೆಲಸಗಾರರ ಸಂಘದ ಕಾಯ್ದೆಯನ್ನು** (Trade Union Act) ಮಾಡಿದನು. ಈ ಕಾಯ್ದೆಯಿಂದ ಕೆಲಸಗಾರರು ಸಂಪನ್ನು ಹೂಡಿದರೆ ಆ ಕೃತ್ಯವು ಕ್ರಮಬದ್ಧವಲ್ಲವೆಂದು ತಿಳಿಯಲ್ಪಡಬಾರದೆಂದು ನಿಶ್ಚಯಿಸಲ್ಪಟ್ಟಿತು. ಈ ಕಾಯ್ದೆ ಪಾಸಾದುದರಿಂದ ಸಂಪಿನ ಹೆದರಿಕೆಯನ್ನು ತೋರಿಸಿ ಗಿರಣಿಗಳ ಮತ್ತು ಕಾರಖಾನೆಗಳ ಮಾಲಕರಿಂದ ತಮ್ಮ ಸಂಬಳವನ್ನು ಹೆಚ್ಚಿಸಿಕೊಳ್ಳುವುದು, ಕೆಲಸದ ವೇಳೆಯನ್ನು ಕಡಿಮೆಮಾಡಿಸಿಕೊಳ್ಳುವುದು ಮೊದಲಾದ ಮಾತುಗಳು ಕೆಲಸಗಾರರ ಮತ್ತು ಕೂಲಿಕಾರರ ವರ್ಗದವರಿಗೆ ಶಕ್ಯವಾದುವು.

ಆ ಬಳಿಕ ೧೮೮೦ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಯಿತು. ಅದರಲ್ಲಿ ಲಿಬರಲ್ ಪಕ್ಷದ ಮತಾಧಿಕ್ಯವಾದುದರಿಂದ ಡಿಝ್ರೇಲಿ (ಇವನು **ಲಾರ್ಡ್ ಬೇಕನ್ಸ್‌ಫೀಲ್ಡ** ಎಂಬ ಬಿರುದಿನಿಂದ ಲಾರ್ಡನಾಗಿ ಮಾಡಲ್ಪಟ್ಟಿದ್ದನು) ಅಧಿಕಾರತ್ಯಾಗವನ್ನು ಮಾಡಿದನು. ಗ್ಲೆಡ್‌ಸ್ಟನನು ಮತ್ತೆ ಮುಖ್ಯ ಮಂತ್ರಿಯಾದನು (೧೮೮೦).

**ಗ್ಲೆಡ್‌ಸ್ಟನನ ೨ನೆಯ ಮಂತ್ರಿಮಂಡಲವು, ೧೮೮೦-೮೫**—ಗ್ಲೆಡ್‌ಸ್ಟನನು ೨ನೆಯ ಸಲ ಮುಖ್ಯ ಮಂತ್ರಿಯಾದ ಬಳಿಕ ಅವನು **ಲಾರ್ಡ್ ಹಾರ್ಟಿಂಗ್‌ಟನ್**, ಸರ್ **ಜೋಸೆಫ್ ಚೇಂಬರ್‌ಲೇನ್** ಮತ್ತು **ಜಾನ್ ಬ್ರಾಯಿಟ್** ಇವರನ್ನು ತನ್ನ ಮಂತ್ರಿಮಂಡಲದಲ್ಲಿ ತೆಗೆದುಕೊಂಡನು. ಗ್ಲೆಡ್‌ಸ್ಟನನ ೨ನೆಯ ಮಂತ್ರಿಮಂಡಲವು ೫ ವರ್ಷಗಳ ವರೆಗೆ ಇದ್ದಿತು. ಈ ಅವಧಿಯಲ್ಲಿ ಅವನು ಪರರಾಷ್ಟ್ರೀಯ ವಿಷಯಗಳ ಕಡೆಗೆ ಲಕ್ಷ್ಯವನ್ನು ಕೊಡಬೇಕಾಯಿತು. ಇಜಿಪ್ತ ಮತ್ತು ಸೂಡಾನ್ ಈ ಭಾಗಗಳಲ್ಲಿ ಯುದ್ಧವು ಪ್ರಾರಂಭವಾಗಿತ್ತು. ದಕ್ಷಿಣ ಆಫ್ರಿಕೆಯಲ್ಲಿಯೂ ಬಿಕ್ಕಟ್ಟಿನ ಪರಿಸ್ಥಿತಿಯುಂಟಾಗಿತ್ತು. ಅಫಗಾಣಿಸ್ತಾನದೊಡನೆ ರಶಿಯದ ಕಾರಸ್ಥಾನವು ಪ್ರಾರಂಭವಾಗಿತ್ತು, ಈ ಪರರಾಷ್ಟ್ರೀಯ ವಿಷಯಗಳ ವೃತ್ತಾಂತವು ಮುಂದೆ ಬೇರೆಡೆಯಲ್ಲಿ ಕೊಡಲ್ಪ

ಟ್ಟಿರುವುದು. ಐರ್ಲಂಡಿನಲ್ಲಿ ಪಾರ್ನೆಲನ ನೇತೃತ್ವದಲ್ಲಿ ಹೋಮ್ ರೂಲಿನ ಆಂದೋಲನವು ಪ್ರಾರಂಭವಾಗಿತ್ತು, ಅದರಂತೆ ಜಮೀನುದಾರರ ಮತ್ತು ರೈತರ ನಡುವೆ ವಿರೋಧವುಂಟಾಗಿ ಎಲ್ಲೆಲ್ಲಿಯೂ ದೊಂಬೆಗಳು ಆಗುತ್ತಿದ್ದುವು. ಐರ್ಲಂಡಿನಲ್ಲಿಯ ಈ ಅಸಂತೋಷವನ್ನು ಹೋಗಿಸಲು ಗ್ಲಾಡ್‌ಸ್ಟನನು ಐರ್ಲಂಡಿನ ಭೂಮಿಗಳ ವಿಷಯದಲ್ಲಿ ಎರಡನೆಯ ಕಾಯ್ದೆಯನ್ನು ಪಾಸುಮಾಡಿದನು (೧೮೮೧).

**ಐರ್ಲಂಡಿನ ಭೂಮಿಗಳ ವಿಷಯದಲ್ಲಿ ೨ನೆಯ ಕಾಯ್ದೆ, ೧೮೮೧**— ಈ ಕಾಯ್ದೆಯಿಂದ ಜಮೀನುದಾರರಿಗೆ ಕೇವಲವಾಗಿ ಲಾವಣಿಯ ಹಣವನ್ನು ತೆಗೆದುಕೊಳ್ಳುವ ಅಧಿಕಾರವು ಕೊಡಲ್ಪಟ್ಟಿತು, ಮತ್ತು ಈ ಲಾವಣಿಯ ಹಣವು ಎಷ್ಟಿರಬೇಕೆಂಬುದು ನಿಶ್ಚಯಿಸಲು ಒಂದು ಶೇತಕಿ ಕೋರ್ಟು (Land Court) ನಿಯೋಜಿಸಲ್ಪಟ್ಟಿತು. ರೈತರಿಂದ ಲಾವಣಿಯ ಹಣವು ತಪ್ಪದೆ ದೊರೆಯುತ್ತಿರುವ ವರೆಗೆ ಅವರಿಂದ ಭೂಮಿಯನ್ನು ಬಿಡಿಸಲು ಜಮೀನುದಾರರಿಗೆ ಅಧಿಕಾರವಿಲ್ಲವೆಂದು ನಿರ್ಣಯಿಸಲಾಯಿತು. ಈ ಕಾಯ್ದೆಯಿಂದ ರೈತರಿಗೆ ಸ್ಥಿರತೆ ಬಂದಿತು ಮತ್ತು ಭೂಮಿಗಳನ್ನು ಸುಧಾರಿಸಲು ಅವರಿಗೆ ಉತ್ತೇಜನವು ದೊರೆತಿತು. ಆದರೆ ಈ ಕಾಯ್ದೆಯಿಂದಲೂ ಐರಿಶ್ ಜನರಿಗೆ ಸಮಾಧಾನವಾಗಲಿಲ್ಲ. ಅವರು ಅತ್ಯಾಚಾರಗಳನ್ನೂ ದೊಂಬೆಗಳನ್ನೂ ನಡಿಸಿಯೆ ಇದ್ದರು. ಇವನ್ನು ಮುರಿಯಲು ಗ್ಲಾಡ್‌ಸ್ಟನನು ಉಗ್ರೋಪಾಯಗಳನ್ನು ಯೋಜಿಸಬೇಕಾಯಿತು.

**೩ನೆಯ ರಿಫಾರ್ಮ್ ಬಿಲ್ಲು (೧೮೮೪-೮೫)**— ಗ್ಲಾಡ್‌ಸ್ಟನನು ೧೮೮೪ ರಲ್ಲಿ ಪಾರ್ಲಿಮೆಂಟಿನ ಸುಧಾರಣೆಯ ೩ನೆಯ ರಿಫಾರ್ಮ್ ಬಿಲ್ಲನ್ನು ಪಾಸು ಮಾಡಿದನು. ಈ ಬಿಲ್ಲಿನಿಂದ ಪಟ್ಟಣಗಳಲ್ಲಿಯ ಮತ್ತು ಹಳ್ಳಿಗಳಲ್ಲಿಯ ಮನೆಗಳಲ್ಲಿ ಬಾಡಿಗೆಯಿಂದ ಇರುತ್ತಿದ್ದ ಎಲ್ಲ ಜನರಿಗೂ ಮತಾಧಿಕಾರವು ದೊರೆತಿತು. ಆದುದರಿಂದ ಮತದಾರ ಸಂಘವು ಬಹು ದೊಡ್ಡದಾಯಿತು. ಆದರೂ ಮತವನ್ನು ಕೊಡಲು ಅಥವಾ ಪಾರ್ಲಿಮೆಂಟಿನ ಸದಸ್ಯರಾಗಲು ಅಧಿಕಾರವು ಗಂಡಸರಿಗೆ ಇದ್ದಿತು. (ಈ ವಿಷಯದಲ್ಲಿ ಸುಧಾರಣೆಯನ್ನು ಮಾಡುವುದಕ್ಕೋಸುಗ ಮುಂದೆ ೧೯೧೮ರಲ್ಲಿ ರಿಪ್ರೆಝೆಂಟೇಟಿವ್ ಆಫ್ ಪೀಪಲ್ಸ ಎಂಬ ಕಾಯ್ದೆ ಮಾಡಲ್ಪಟ್ಟಿತು, ಅದರಿಂದ ಹೆಂಗುಸರಿಗೂ ನಾವಿಕರಿಗೂ ಸೈನಿಕರಿಗೂ ಮತಾಧಿಕಾರವು ದೊರೆತಿತು.) ಆದರಂತೆ ಮತದಾರ ಸಂಘದ ರಚನೆಯಾದರೂ ಶಕ್ಯವಾದ ಮಟ್ಟಿಗೆ ಲೋಕಸಂಖ್ಯೆಯ ಪ್ರಮಾಣದಲ್ಲಿ ಮಾಡಲ್ಪಟ್ಟಿತು. ೧೫,೦೦೦ಕ್ಕಿಂತ ಕಡಿಮೆಯಿದ್ದ ಜನವಸ್ತಿಯ ಪಟ್ಟಣಗಳ ಪರವಾಗಿ ಒಬ್ಬನಾದರೂ ಸದಸ್ಯನು ಇರಕೂಡ

ದೆಂದು ಮತ್ತು ೫೦,೦೦೦ ಲೋಕವಸ್ತಿಯ ಪಟ್ಟಣದ ಪರವಾಗಿ ಒಬ್ಬ ಪ್ರತಿನಿಧಿ ಇರಬೇಕೆಂದು ನಿರ್ಣಯಿಸಲಾಯಿತು.

೧೮೮೫ರಲ್ಲಿ ಮಂತ್ರಿಮಂಡಲದ ಪರಾಭವವಾದುದರಿಂದ ಗ್ಲೆಡ್‌ಸ್ಟನನು ಅಧಿಕಾರತ್ಯಾಗವನ್ನು ಮಾಡಿದನು. ಅವನ ತರುವಾಯದಲ್ಲಿ (ಡಿಝ್‌ರೇಲಿ ಇವನು ಮೇ ೧೮೮೧ರಲ್ಲಿ ಮರಣಹೊಂದಿದ್ದನಾದುದರಿಂದ) ಕಾಂಝರ್‌ವೇಟಿವ್ ಪಕ್ಷದ ಮುಖಂಡನಾದ **ಲಾರ್ಡ ಸಲಿಸ್‌ಬೆರಿ** ಮುಖ್ಯ ಮಂತ್ರಿಯಾದನು (೧೮೮೫). ಆದರೆ ಇವನು ಮುಖ್ಯ ಮಂತ್ರಿಯಾಗಿ ಬಹಳ ಕಾಲ ಉಳಿಯಲಿಲ್ಲ, ಏಕೆಂದರೆ ೧೮೮೫ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಗಿ ಲಿಬರಲ್ ಪಕ್ಷದ ಮತಾಧಿಕ್ಯವಾದುದರಿಂದ ಗ್ಲೆಡ್‌ಸ್ಟನನು ೩ನೆಯ ಸಲ ಮುಖ್ಯ ಮಂತ್ರಿಯಾದನು (೧೮೮೬).

**ಗ್ಲೆಡ್‌ಸ್ಟನನ ೩ನೆಯ ಮಂತ್ರಿಮಂಡಲವು, ೧೮೮೬**—ಈ ಸಲ ಗ್ಲೆಡ್‌ಸ್ಟನನು ಐರಿಶ್ ಪ್ರಶ್ನೆಯ ಕಡೆಗೆ ಲಕ್ಷ್ಯವಿತ್ತನು. ಇಂಗ್ಲಂಡಿನ ಪಾರ್ಲಿಮೆಂಟಿನೊಡನೆ ೧೮೦೦ರಲ್ಲಿ ಆದ ಏಕೀಕರಣವು ರದ್ದುಮಾಡಲ್ಪಟ್ಟು ಐರ್ಲಂಡಿನಲ್ಲಿ ಬೇರೊಂದು ಪಾರ್ಲಿಮೆಂಟು ಸ್ಥಾಪಿಸಲ್ಪಡಬೇಕು ಮತ್ತು ಐರ್ಲಂಡಿನ ಅಂತಃಸ್ಥ ವಿಷಯಗಳ ಎಲ್ಲ ಕಾರಭಾರವು ತಮ್ಮ ಕಡೆಗೆ ಇರಬೇಕು, ಎಂದರೆ ಐರ್ಲಂಡಿನಲ್ಲಿ ಹೋಮ್‌ರೂಲ (Home-Rule) ಅಥವಾ ಸಾಮ್ರಾಜ್ಯಾಂತರ್ಗತ ಸ್ವರಾಜ್ಯವು ಇರಬೇಕು ಎಂದು ಐರಿಶ್ ಜನರು ಆಂದೋಲನವನ್ನು ನಡೆಯಿಸಿದ್ದರು. ಪಾರ್ನೆಲನು ಆ ಸಮಯದಲ್ಲಿ ಐರಿಶ್ ಜನರ ನಾಯಕನಾಗಿದ್ದನು. ಐರ್ಲಂಡಿಗೆ ಹೋಮ್ ರೂಲನ್ನು ಕೊಟ್ಟ ಹೊರ್ತು ಅಲ್ಲಿಯ ಅಸಂತೋಷವು ಇಲ್ಲದಂತಾಗದೆಂದು ಬಗೆದು ಐರ್ಲಂಡಿಗೆ ಹೋಮ್‌ರೂಲನ್ನು ಕೊಡುವ ವಿಷಯದಲ್ಲಿ ಒಂದು ಬಿಲ್ಲನ್ನು ಗ್ಲೆಡ್‌ಸ್ಟನನು ಪಾರ್ಲಿಮೆಂಟಿನಲ್ಲಿ ತಂದನು. ಆದರೆ ಬ್ರಿಟಿಶ್ ಪಾರ್ಲಿಮೆಂಟಿನೊಡನೆ ಆಗಿದ್ದ ಐರಿಶ್ ಪಾರ್ಲಿಮೆಂಟಿನ ಏಕೀಕರಣವನ್ನು ರದ್ದುಗೊಳಿಸಬೇಕೆಂಬ ಮಾತಿಗೆ ಲಿಬರಲ್ ಪಕ್ಷದಲ್ಲಿಯ ಚೆಂಬರ್‌ಲೇನ್, ಬ್ರಾಯಿಟ್ ಮೊದಲಾದ ನೂರು ಸದಸ್ಯರ ವಿರೋಧವಿದ್ದಿತು. ಈ ಸಭಾಸದರು **ಲಿಬರಲ್ ಯೂನಿಯನಿಷ್ಟ** (Liberal Unionists=ಏಕೀಕರಣ ಪಕ್ಷಪಾತಿಗಳಾದ ಲಿಬರಲರು) ಎಂಬ ಹೆಸರನ್ನು ತಳೆದು ಗ್ಲೆಡ್‌ಸ್ಟನನ ಹೋಮ್‌ರೂಲ ಬಿಲ್ಲನ್ನು ವಿರೋಧಿಸುವ ಕಾಂಝರ್‌ವೇಟಿವ್ ಪಕ್ಷದವರಂತೆ ತಮ್ಮ ಮತವನ್ನು ಕೊಟ್ಟುದರಿಂದ ಗ್ಲೆಡ್‌ಸ್ಟನನ ಪರಾಭವವಾಯಿತು (೧೮೮೬). ಈ ಬಗೆಯಾಗಿ ಐರ್ಲಂಡಿಗೆ ಹೋಮ್‌ರೂಲನ್ನು ಕೊಡಬೇಕೆಂಬ ಪ್ರಶ್ನೆಯ ವಿಷಯದಲ್ಲಿ ಲಿಬರಲ್ ಪಕ್ಷದಲ್ಲಿ

ಒಡಕು ಹುಟ್ಟಿತು. ಲಿಬರಲ್ ಯೂನಿಯನಿಷ್ಟರು ಮುಂದೆ ಕಾಂಝರ್ವೇಟಿವ್ ಪಕ್ಷದಲ್ಲಿ ಕೂಡಿಕೊಂಡರು. ಆ ಬಳಿಕ ಮುಂದೆ ಆರು ವರ್ಷಗಳ ವರೆಗೆ ಕಾಂಝರ್ವೇಟಿವ್ ಪಕ್ಷದ ಪ್ರಮುಖನಾದ ಲಾರ್ಡ್ ಸಲಿಸ್‌ಬೆರಿ ಇವನು ಮುಖ್ಯ ಮಂತ್ರಿಯಾಗಿದ್ದನು. ಆದರೆ ಮುಂದೆ ೧೮೯೨ರಲ್ಲಿ ಗ್ಲಾಡ್‌ಸ್ಟನನು ನಾಲ್ಕನೆಯ ಸಲ ಮುಖ್ಯ ಮಂತ್ರಿಯಾದನು (೧೮೯೨—೯೪). ಈ ಸಲವೂ ಅವನು ಐರ್ಲಂಡಿಗೆ ಹೋಮ್‌ರೂಲನ್ನು ಕೊಡಬೇಕೆಂದು ಬಿಲ್ಲನ್ನು ಪಾರ್ಲಿಮೆಂಟಿನಲ್ಲಿ ತಂದನು. ಆದರೆ ಲಾರ್ಡ್ಸ್ ಸಭೆಯ ವಿರೋಧವು ಬಲವಾಗಿ ಇದ್ದುದರಿಂದ ಅದು ಪಾಸಾಗಲಿಲ್ಲ. ಆದುದರಿಂದ ಗ್ಲಾಡ್‌ಸ್ಟನನು ಅಧಿಕಾರತ್ಯಾಗವನ್ನು ಮಾಡಿದನು (೧೮೯೪), ಮತ್ತು ವೃದ್ಧಾಪ್ಯದ ಕಾರಣದಿಂದ ಅವನು ರಾಜಕಾರಣದಿಂದ ತನ್ನ ಅಂಗವನ್ನು ತೆಗೆದುಕೊಂಡನು. ಮುಂದೆ ೪ ವರ್ಷಗಳ ತರುವಾಯದಲ್ಲಿ ಅವನು ಮರಣಹೊಂದಿದನು (೧೮೯೮). ಗ್ಲಾಡ್‌ಸ್ಟನನ ತರುವಾಯದಲ್ಲಿ **ಲಾರ್ಡ್ ರೋಜಬರಿ** ಮತ್ತು ಸರ್ **ಹೆನ್ರಿ ಕೆಂಪ್‌ಬೆಲ್ ಬನರ್ಮನ್** ಇವರು ಲಿಬರಲ್ ಪಕ್ಷದ ನಾಯಕರಾದರು. ಲಾರ್ಡ ರೋಜಬರಿ ೧೮೯೪—೯೫ರಲ್ಲಿ ಮುಖ್ಯ ಮಂತ್ರಿಯಾಗಿದ್ದನು.

**ಸಲಿಸ್‌ಬರಿಯ ಮೊದಲನೆಯ ಮತ್ತು ಎರಡನೆಯ ಮಂತ್ರಿಮಂಡಲವು (೧೮೮೬-೯೨ ಮತ್ತು ೧೮೯೫-೧೯೦೨)**—೧೮೮೬ರಲ್ಲಿ ಕಾಂಝರ್ವೇಟಿವ್ ಪಕ್ಷದ ಪ್ರಮುಖನಾದ ಲಾರ್ಡ ಸಲಿಸ್‌ಬರಿ ಮುಖ್ಯ ಮಂತ್ರಿಯಾದನು. ಈ ಮಂತ್ರಿಮಂಡಲದಲ್ಲಿ **ಚರ್ಚಿಲ್, ಬಾಲ್ಫೋರ್** ಮತ್ತು **ಚೆಂಬರ್ಲೇನ** ಇವರು ಪ್ರಮುಖರಾಗಿದ್ದರು. ಇವರಲ್ಲಿ ಚರ್ಚಿಲನು ಆರ್ಥಿಕ ಮಂತ್ರಿಯಾಗಿದ್ದನು. ಅವನು ಕಾಮನ್ಸ ಸಭೆಯಲ್ಲಿ ತನ್ನ ವಕ್ತೃತ್ವದಿಂದಲೂ ಭಾಷಣ ಶೈಲಿಯಿಂದಲೂ ವರ್ಚಸ್ಸನ್ನು ಕೂಡಿಸಿದ್ದನು. ಆದರೆ ಸೈನ್ಯ ಮತ್ತು ಹಡಗುಪಡೆ ಇವುಗಳಿಗೋಸುಗ ಹೆಚ್ಚಿನ ವೆಚ್ಚವನ್ನು ಮಾಡುವ ವಿಷಯದಲ್ಲಿ ಇತರ ಮಂತ್ರಿಗಳಿಗೂ ಅವನಿಗೂ ಮತಭೇದವಾದುದರಿಂದ ಅವನು ೧೮೮೭ರಲ್ಲಿ ಮಂತ್ರಿಪದವನ್ನು ತ್ಯಜಿಸಿದನು. ಐರ್ಲಂಡಿನಲ್ಲಿ ಅಸ್ವಸ್ಥತೆಯಿದ್ದುದರಿಂದ ಲಾರ್ಡ ಸಲಿಸ್‌ಬರಿಯ ಮಂತ್ರಿಮಂಡಲವು ಐರಿಶ್ ಪ್ರಶ್ನೆಯ ಕಡೆಗೆ ಲಕ್ಷ್ಯವನ್ನು ಕೊಡಬೇಕಾಯ್ತು. ಆ ತರುವಾಯದಲ್ಲಿ ಸಲಿಸ್‌ಬರಿ ೧೮೯೫ರಿಂದ ೧೯೦೨ರ ವರೆಗೆ ಎರಡನೆಯ ಸಲ ಮುಖ್ಯ ಮಂತ್ರಿಯಾದನು. ಈಸಲ ದಕ್ಷಿಣ ಆಫ್ರಿಕೆಯ ವಸಾಹತುಗಳಲ್ಲಿ ಡಚ್ (ಬೋಅರ) ಜನರೊಡನೆ ಪ್ರಾರಂಭವಾದ ಯುದ್ಧದ ಕಡೆಗೆ ಅವನು ಲಕ್ಷ್ಯವೀಯಬೇಕಾಯ್ತು. ಅವನು ಮುಖ್ಯ ಮಂತ್ರಿ

ಯಾಗಿರುವಾಗ ಇಂಗ್ಲಂಡಿನ ಅಂತಃಸ್ಥ ವಿಷಯದಲ್ಲಿಯೂ ಕೆಲವು ಮಹತ್ವದ ಸಂಗತಿಗಳು ಜರುಗಿದುವು.

**ಮಹೋತ್ಸವಗಳು**—ವಿಕ್ಟೋರಿಯಾ ರಾಣಿಯ ಆಳ್ಕೆಗೆ ಐವತ್ತು ವರ್ಷಗಳಾದುದರಿಂದ ೧೮೮೭ರಲ್ಲಿ ಸುವರ್ಣಮಹೋತ್ಸವವು ನೆರವೇರಿಸಲ್ಪಟ್ಟಿತು. ಮುಂದೆ ಹತ್ತು ವರ್ಷಗಳ ತರುವಾಯದಲ್ಲಿ ರಾಣಿಯ ಆಳ್ಕೆಗೆ ೬೦ ವರ್ಷಗಳಾದುದರಿಂದ **ಹೀರಕೋತ್ಸವವು** ಜರುಗಿತು. ಈ ಎರಡೂ ಸಮಾರಂಭಗಳ ಸಮಯದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ದೂರದೂರ ಸ್ಥಳಗಳಿಂದ ಜನರು ಮತ್ತು ಅರಸರು ಲಂಡನಿಗೆ ಬಂದಿದ್ದರು.

**ಸ್ಥಾನಿಕ ಸ್ವರಾಜ್ಯದ ಕಾಯ್ದೆ, ೧೮೮೮**—೧೮೮೮ರಲ್ಲಿ ಸೆಲಿಸ್‍ಬರಿ ಸ್ಥಾನಿಕ ಸ್ವರಾಜ್ಯದ ಕಾಯ್ದೆಯನ್ನು ಮಾಡಿದನು. ಈ ಕಾಯ್ದೆಯಿಂದ ಎಡೆಯೆಡೆಗಳಲ್ಲಿ ಲೋಕನಿಯುಕ್ತವಾದ ಕೌಂಟಿ ಕೌನ್ಸಿಲುಗಳು ಸ್ಥಾಪಿಸಲ್ಪಟ್ಟುವು. ಸ್ಥಾನಿಕ ವಿಷಯಗಳ ವ್ಯವಸ್ಥೆಯೆಲ್ಲವೂ ಅವುಗಳಿಗೆ ಒಪ್ಪಿಸಲ್ಪಟ್ಟಿತು. ಅದರಂತೆ ಸ್ಕೂಲ್ ಬೋರ್ಡುಗಳು ರದ್ದುಮಾಡಲ್ಪಟ್ಟು ಪ್ರಾಥಮಿಕ ಶಿಕ್ಷಣದ ಎಲ್ಲ ವ್ಯವಸ್ಥೆ ಕೌಂಟಿ ಕೌನ್ಸಿಲುಗಳಿಗೆ ಒಪ್ಪಿಸಲ್ಪಟ್ಟಿತು (೧೯೦೨).

## (೨) ಐರ್ಲಂಡ್.

**ಐರ್ಲಂಡಿನಲ್ಲಿಯ ಪರಿಸ್ಥಿತಿ ಮತ್ತು ಅಲ್ಲಿಯ ಅಸಂತೋಷವು**—೧೮೨೯ರಲ್ಲಿ ಕೆಥಲಿಕ್ ಇಮನ್‍ಸಿಪೇಶನ್ ಕಾಯ್ದೆ ಪಾಸಾಗಿ ಐರ್ಲಂಡಿನಲ್ಲಿಯ ರೋಮನ್ ಕಥಲಿಕ್ ಜನರಿಗೆ ಪಾರ್ಲಿಮೆಂಟಿನ ಸದಸ್ಯರಾಗಲು ಶಕ್ಯವಾಯಿತಾದರೂ ಅಲ್ಲಿಯ ಅಸಂತೋಷವು ಕಡಿಮೆಯಾಗಲಿಲ್ಲ. ಈ ಸ್ಥಿತಿಯುಂಟಾಗಲು ಕೆಳಗಿನ ಸಂಗತಿಗಳು ಕಾರಣವಾದುವು:—

(೧) **ಪ್ರೊಟೆಸ್ಟಂಟ್ ವಸಾಹತುಗಾರರ ಮತ್ತು ಮೂಲ ಐರಿಶ್ ರೋಮನ್ ಕಥಲಿಕ್ ಜನರ ನಡುವಿನ ವೈರಭಾವವು**—ಐರ್ಲಂಡಿನ ಉತ್ತರಭಾಗದಲ್ಲಿಯ ಅಲ್ಸ್ಟರ ಪರಗಣೆಯಲ್ಲಿ ಸ್ಕಾಟಲಂಡಿನಿಂದಲೂ ಇಂಗ್ಲಂಡಿನಿಂದಲೂ ವಸಾಹತುಗಳನ್ನು ಮಾಡಲು ಹೋದ ಪ್ರಾಟೆಸ್ಟಂಟ್ ಪಂಥದ ಸ್ಕಾಟಿಶ್ ಮತ್ತು ಇಂಗ್ಲಿಶ್ ಜನರ ವಸ್ತಿ ಇದ್ದಿತು. ಅವರು ಅಲ್ಲಿ ಎಷ್ಟೋ ತಲೆಗಳಿಂದ ವಾಸಿಸುತ್ತ ಬಂದಿದ್ದರು. ಅವರ ಲೋಕಸಂಖ್ಯೆ ಕಡಿಮೆಯಾಗಿತ್ತು ಮತ್ತು ಅವರಲ್ಲಿ ಅಸಂತೋಷವಿರಲಿಲ್ಲ. ಆದರೆ ಇವರನ್ನು ಐರ್ಲಂಡಿ

ಸಲ್ಲಿಯ ಮೂಲ ರೋಮನ್ ಕಥಲಿಕ್ ಜನರು ಪರಕೀಯರೆಂದು ಭಾವಿಸಿ ದ್ವೇಷಿಸುತ್ತಿದ್ದರು.

(೨) **ಥೈಥ್ ಕರದ ವಿಷಯದಲ್ಲಿ ಅಸಂತೋಷವು**—ಐರ್ಲಂಡಿಸಲ್ಲಿಯ ಜನಸಂಖ್ಯೆಯ ಸುಮಾರು ೫/೬ ಜನರು ರೋಮನ್ ಕಥಲಿಕ್ ಪಂಥದವರಿದ್ದರು. ಹೀಗಿದ್ದರೂ ಅಲ್ಲಿಯ ಪ್ರಾಟೆಸ್ಟಂಟ್ ಪಂಥದ ಚರ್ಚಿಗಷ್ಟೇ ಸರಕಾರದ ಮಾನ್ಯತೆ ಇದ್ದಿತು, ಮತ್ತು ಸರಕಾರದಿಂದ ಸಾಹಾಯ್ಯವು ದೊರೆಯುತ್ತಿದ್ದಿತು. ಈ ಸಾಹಾಯ್ಯಕ್ಕೋಸುಗ ಐರಿಶ್ ಜನರು ತಮ್ಮ ಉತ್ಪನ್ನದ ೧೦ನೆಯ ಭಾಗವನ್ನು 'ಥೈಥ್ ಕರವೆಂದು' ಕೊಡಬೇಕಾಗುತ್ತಿತ್ತು. ಆದುದರಿಂದ ಪ್ರಾಟೆಸ್ಟಂಟ್ ಪಂಥದ ಚರ್ಚು ತಮ್ಮ ದುಡ್ಡಿನಿಂದ ಪೋಷಿಸಲ್ಪಡಬಾರದೆಂದು ಐರಿಶ್ ರೋಮನ್ ಕಥಲಿಕರಿಗೆ ಎನಿಸುತ್ತಿತ್ತು.

(೩) **ಜಮೀನುದಾರರ ಮತ್ತು ರೈತರ ನಡುವಿನ ವಿರೋಧವು**—ಐರ್ಲಂಡಿನಲ್ಲಿಯ ಬಹುಜನ ಸಮಾಜವು ರೋಮನ್ ಕಥಲಿಕ್ ಪಂಥದ ಅನುಯಾಯಿ ಆಗಿದ್ದಿತಾದರೂ ಅಲ್ಲಿಯ ಬಹುಶಃ ಎಲ್ಲ ಭೂಮಿಗಳು ಪ್ರಾಟೆಸ್ಟಂಟ್ ಪಂಥದವರಾದ ಇಂಗ್ಲಿಶ್ ಮತ್ತು ಸ್ಕಾಟಿಶ್ ಜನರ ಒಡೆತನಕ್ಕೆ ಒಳಪಟ್ಟಿದ್ದುವು. ಎಲಿಝಾಬೆಥ್, ೧ನೆಯ ಚಾರ್ಲಸ್ ಮತ್ತು ಕ್ರಾಮವೆಲ್ ಇವರ ಆಳ್ಕೆಯಲ್ಲಿ ಐರಿಶ್ ಜನರು ಬಂಡನ್ನು ಹೂಡಿದ್ದರು. ಆಗ ಅವರ ಭೂಮಿಗಳು ಜಪ್ತುಮಾಡಲ್ಪಟ್ಟು ಪ್ರಾಟೆಸ್ಟಂಟ್ ಪಂಥದ ಇಂಗ್ಲಿಶ್ ಮತ್ತು ಸ್ಕಾಟಿಶ್ ಜನರಿಗೆ ಕೊಡಲ್ಪಟ್ಟಿದ್ದುವು. ಆದುದರಿಂದ ಐರ್ಲಂಡಿನಲ್ಲಿಯ ಬಹುಜನ ಸಮಾಜವು ರೈತರಾಗಿ, ಕೂಲಿಕಾರರಾಗಿ ಮತ್ತು ಕುರಿಗಳನ್ನು ಕಾಯ್ದು ಹೊಟ್ಟೆಯನ್ನು ಸಾಗಿಸಬೇಕಾಯಿತು. ಭೂಮಿಗಳನ್ನು ಸುಧಾರಿಸಲು ರೈತರು ಏನಾದರೂ ಹಣವನ್ನು ವೆಚ್ಚಮಾಡಿದರೆ ಭೂಮಿಗಳ ಒಡೆಯರಿಂದ ಅವರಿಗೆ ಯಾವ ಬಗೆಯ ಹಣದ ಸಾಹಾಯ್ಯವೂ ದೊರೆಯುತ್ತಿರಲಿಲ್ಲ. ಭೂಮಿಗಳೆಲ್ಲವು ತಮ್ಮವಾಗಿದ್ದು ಅವು ಅನ್ಯಾಯದಿಂದ ಇಂಗ್ಲಿಶ್ ಮತ್ತು ಸ್ಕಾಟಿಶ್ ಜಮೀನುದಾರರ ವಶವಾಗಿರುವುವೆಂಬ ಭಾವನೆ ರೋಮನ್ ಕಥಲಿಕ್ ಜನರಿಗೆ ಇದ್ದುದರಿಂದ ಅವರು ಇಂಗ್ಲಿಶ್ ಮತ್ತು ಸ್ಕಾಟಿಶ್ ಜಮೀನುದಾರರನ್ನು ದ್ವೇಷಿಸುತ್ತಿದ್ದರು.

(೪) **ಏಕೀಕರಣವನ್ನು ರದ್ದುಗೊಳಿಸುವ ಆವಶ್ಯಕತೆ**—೧೮೦೦ರಲ್ಲಿ ಐರಿಶ್ ಮತ್ತು ಬ್ರಿಟಿಶ್ ಪಾರ್ಲಿಮೆಂಟುಗಳ ಏಕೀಕರಣವಾಗಿತ್ತು. ಆದರೆ ಏಕೀಕರಣದ ತರುವಾಯದಲ್ಲಿಯ ಪಾರ್ಲಿಮೆಂಟಿನಲ್ಲಿ ಐರಿಶ್ ಸದಸ್ಯರು ಅಲ್ಪಸಂಖ್ಯಾಕರಿದ್ದುದರಿಂದ ಪಾರ್ಲಿಮೆಂಟಿನ ಲಕ್ಷ್ಯವು ಐರ್ಲಂಡಿನ ಕಡೆಗೆ ಇರಬೇಕಾ

ದಷ್ಟು ಇರಲಿಲ್ಲವೆಂದು ಏಕೀಕರಣವನ್ನು ರದ್ದುಗೊಳಿಸಿ ಐರ್ಲಂಡಿನಲ್ಲಿ ಬೇರೊಂದು ಪಾರ್ಲಿಮೆಂಟನ್ನು ಸ್ಥಾಪಿಸುವುದು ಇಷ್ಟವೆಂದು ರೋಮನ್ ಕಥಲಿಕ್ ಜನರ ಅಭಿಪ್ರಾಯವಿದ್ದಿತು.

ಮೇಲೆ ಹೇಳಿದ ಕಾರಣಗಳಿಂದ ಐರ್ಲಂಡಿನಲ್ಲಿ ಅಸಂತೋಷವು ಹಬ್ಬುತ್ತ ಸಾಗಿತು, ಮತ್ತು ಐರಿಶ್ ಜನರು ತಮ್ಮ ಸ್ಥಿತಿಯನ್ನು ಸುಧಾರಿಸಿಕೊಳ್ಳಲು **ಡೆನಿಯಲ್ ಓಕಾನೆಲ್** ಇವನ ನೇತೃತ್ವದಲ್ಲಿ ಆಂದೋಲನವನ್ನು ಪ್ರಾರಂಭಿಸಿದ್ದರು. ಓಕಾನೆಲನು ಐರಿಶ್ ಕಥಲಿಕರ ಮುಂದಾಳು ಆಗಿದ್ದು ಅವನು ಈ ಮೊದಲು ಹೂಡಿದ ಆಂದೋಲನದಿಂದಲೇ 'ಕಥಲಿಕ್ ಇಮನ್ಸಿಪೇಶನ್ ಕಾಯ್ದೆ'ಯನ್ನು ಪಾರ್ಲಿಮೆಂಟು ಪಾಸುಮಾಡಿತು. ಆದುದರಿಂದ ಅವನಿಗೆ ಪಾರ್ಲಿಮೆಂಟಿನ ಸದಸ್ಯನಾಗಲು ಶಕ್ಯವಾಯಿತು. ಐರ್ಲಂಡಿನ ಸ್ವತಂತ್ರವಾದ ಪಾರ್ಲಿಮೆಂಟು ಸ್ಥಾಪಿಸಲ್ಪಟ್ಟರೆ ಐರಿಶ್ ಜನರ ಸ್ಥಿತಿಯನ್ನು ಸುಧಾರಿಸಲು ಉಪಯುಕ್ತವಾಗಬಹುದಾದ ಕಾಯ್ದೆಗಳನ್ನು ಐರಿಶ್ ಪಾರ್ಲಿಮೆಂಟಿನಲ್ಲಿ ಮಾಡಿಸಿಕೊಳ್ಳಲು ಶಕ್ಯವಾಗಬಹುದೆಂದು ಬಗೆದು ೧೮೦೦ರಲ್ಲಿ ಆದ ಏಕೀಕರಣವನ್ನು ರದ್ದುಗೊಳಿಸಿಕೊಳ್ಳಲು ೧೮೪೧ರಲ್ಲಿ ಓಕಾನೆಲನು "ಹೋಮ್‌ರೂಲಿನ" (ಸ್ವರಾಜ್ಯದ) ಆಂದೋಲನವನ್ನು ಆರಂಭಿಸಿದನು. ಅವನು ಅನೇಕ ಸ್ಥಳಗಳಲ್ಲಿ ವ್ಯಾಖ್ಯಾನವನ್ನು ಕೊಟ್ಟನು. ಈ ಆಂದೋಲನದಿಂದ ಎಲ್ಲೆಲ್ಲಿಯೂ ದೊಂಬಿಗಳೂ ಅತ್ಯಾಚಾರಗಳೂ ಹುಟ್ಟಿದುವು. ಡೆನಿಯಲ್ ಓಕಾನೆಲನು ಕಾಯ್ದೆಗೆ ವಿರುದ್ಧವಾಗದಂತೆ ಆಂದೋಲನವನ್ನು ಸಾಗಿಸಬೇಕೆಂಬ ಅಭಿಪ್ರಾಯವುಳ್ಳವನಾಗಿದ್ದನು. ಆದುದರಿಂದ ಈ ಅತ್ಯಾಚಾರಗಳಿಗೆ ಅವನ ವಿರೋಧವಿದ್ದಿತು. ಆದರೆ ಅವನ ಈ ಸೌಮ್ಯ ನೀತಿ ಉಗ್ರವಾದಿಗಳಾದ ಐರಿಶ್ ಜನರಿಗೆ ಸರಿದೋರಲಿಲ್ಲ. ಆದುದರಿಂದ ಅವರು ಅವನ ಪಕ್ಷವನ್ನು ಬಿಟ್ಟು '**ತರುಣ ಐರ್ಲಂಡ**' ಎಂಬ ಹೊಸದೊಂದು ಪಕ್ಷವನ್ನು ಸ್ಥಾಪಿಸಿದರು. ಅನೇಕ ಜನರು ಆ ಪಕ್ಷದಲ್ಲಿ ಸೇರಿದರು. ಇದರಿಂದ ಓಕಾನೆಲನ ಲೋಕಪ್ರಿಯತೆ ಕಡಿಮೆಯಾಯಿತು. ಓಕಾನೆಲನು ಮುಂದೆ ೪ ವರ್ಷಗಳ ತರುವಾಯ ೧೮೪೭ರಲ್ಲಿ ಮರಣಹೊಂದಿದನು.

**ಐರ್ಲಂಡಿನಲ್ಲಿಯ ದೊಂಬಿಗಳು, ೧೮೪೮**—ಮುಂದೆ ೧೮೪೫ರಲ್ಲಿ ಐರ್ಲಂಡಿನಲ್ಲಿ ಬರವು ಒದಗಿತು. ಈ ಬರಗಾಲದಲ್ಲಿ ಅನೇಕ ಒಕ್ಕಲಿಗರಿಗೆ ತಮ್ಮ ಹೊಲದ ಒಡೆಯರಿಗೆ ಲಾವಣಿಯ ಹಣವನ್ನು ಕೊಡುವುದು ಸಾಧ್ಯವಾಗಲಿಲ್ಲ. ಅದಕ್ಕೋಸುಗ ಕೆಲವು ಒಡೆಯರು ಒಕ್ಕಲಿಗರನ್ನು ಹೊಲಗಳಿಂದ ಹೊರ

ದೂಡಿದರು ಮತ್ತು ಕೆಲವು ಒಡೆಯರು ಸಾಲಗಾರರಾಗಿ ತಮ್ಮ ಹೊಲಗಳನ್ನು ಮಾರಾಟಕ್ಕೆ ಹಚ್ಚಿದರು. ಈ ಹೊಲಗಳನ್ನು ಕೊಂಡ ಹೊಸ ಒಡೆಯರು ಹೊಲದ ಲಾವಣಿಯನ್ನು ಹೆಚ್ಚಿಸಿದರು. ಈ ಲಾವಣಿಯನ್ನು ಸಲ್ಲಿಸಲು ಒಪ್ಪದಾದ ಒಕ್ಕಲಿಗರನ್ನು ಅವರು ಹೊರಗೆ ಅಟ್ಟಿದರು. ಇಂತು ಅನೇಕ ಬಡ ಒಕ್ಕಲಿಗರು ಉದ್ಯೋಗವಿಲ್ಲದವರಾದರು. ಅವರ ಸ್ಥಿತಿ ಬಹಳ ಕಷ್ಟವುಳ್ಳದಾಯಿತು. ಕೆಲವು ಜನರು ದೇಶತ್ಯಾಗಮಾಡಿ ಅಮೇರಿಕೆಗೆ ಹೋದರು. ಕೆಲವರು **ಸ್ಮಿಥ್ ಓಬ್ರಾಯನ್** ಎಂಬವನ ನಾಯಕತ್ವದ ಕೆಳಗೆ ದೊಂಬಿಯನ್ನು ಹೂಡಿದರು. ಆಗ ಸರಕಾರದವರು ಕಠೋರವಾದ ಉಪಾಯಗಳನ್ನು ಅವಲಂಬಿಸಿ ಈ ದೊಂಬಿಯನ್ನು ಮುರಿದರು, ಆದರೆ ಇದರಿಂದ ಐರ್ಲಂಡಿನಲ್ಲಿ ಅಶಾಂತಿ ಕಡಿಮೆಯಾಗಲಿಲ್ಲ. ಅದು ಹಾಗೆಯೇ ಒಳಗೊಳಗೆ ಕುದಿಯುತ್ತ ಉಳಿಯಿತು. ಮುಂದೆ ಕೆಲವು ಕ್ರಾಂತಿಕಾರಕ ಚಳವಳಿಗಾರರು ೧೮೫೮ರಲ್ಲಿ **'ಫೆನಿಯನ್ ಸೊಸಾಯಿಟಿ'** ಎಂಬ ಒಂದು ಸಂಸ್ಥೆಯನ್ನು ಹೊರಡಿಸಿದರು. ಅಗತ್ಯವೆನಿಸಿದಲ್ಲಿ ಶಸ್ತ್ರಗಳನ್ನಾದರೂ ಉಪಯೋಗಿಸಿ ಐರ್ಲಂಡಿನಲ್ಲಿ ಸ್ವತಂತ್ರ ಲೋಕಸತ್ತಾಕ ರಾಜ್ಯವನ್ನು ಸ್ಥಾಪಿಸುವುದು ಇವರ ಗುರಿಯಾಗಿದ್ದಿತು. ಈ ಫೆನಿಯನ್ ಸೊಸಾಯಿಟಿಯ ಪ್ರೋತ್ಸಾಹನದಿಂದ ೧೮೬೬—೬೭ರಲ್ಲಿ ದೇಶದಲ್ಲಿ ದೊಂಬೆಗಳೂ, ಅತ್ಯಾಚಾರಗಳೂ ಪ್ರಾರಂಭವಾದುವು.

**ಗ್ಲಾಡ್‌ಸ್ಟನನ ಸುಧಾರಣೆಗಳು**— ಐರ್ಲಂಡಿನಲ್ಲಿ ನಡೆದ ಈ ದೊಂಬಿ ಮತ್ತು ಅತ್ಯಾಚಾರಗಳನ್ನು ಉಗ್ರೋಪಾಯಗಳಿಂದ ನಿಲ್ಲಿಸಲಾಯಿತು. ಆದರೆ ಅಲ್ಲಿಯ ಅಶಾಂತಿಯನ್ನು ನಿಲ್ಲಿಸಲು ಐರಿಶ್ ಜನತೆಗೆ ಉಪಯುಕ್ತವಾದ ಕಟ್ಟಳೆಗಳನ್ನು ರಚಿಸುವುದು ಅಗತ್ಯವೆಂದು ಗ್ಲಾಡ್‌ಸ್ಟನನಿಗೆ ಎನಿಸಿತು. ಅದರಂತೆ ಆತನು ೧೮೬೯ರಲ್ಲಿ ಒಂದು ಕಟ್ಟಳೆಯನ್ನು ಮಾಡಿ ಐರ್ಲಂಡಿನ ಪ್ರಾಟೆಸ್ಟಂಟ ಚರ್ಚಿಗೆ ದೊರೆವ ಸರಕಾರದ ಸಾಹಾಯ್ಯ-ಧನವನ್ನು ನಿಲ್ಲಿಸಿ ಆ ಹಣವನ್ನು ದುರ್ಭಿಕ್ಷ ನಿವಾರಣೆ ಮುಂತಾದ ಬೇರೆ ಉಪಯುಕ್ತ ಕಾರ್ಯಗಳಿಗೆ ವಿನಿಯೋಗಿಸಿದನು. ಇದಲ್ಲದೆ ಆತನು ಐರ್ಲಂಡಿನ ಒಕ್ಕಲಿಗರ ಸ್ಥಿತಿಯನ್ನು ಸರಿಗೊಳಿಸಲು ೧೮೭೦ರಲ್ಲಿ ಮತ್ತು ೧೮೮೧ರಲ್ಲಿ ಹೊಲಗಳ ವಿಷಯದಲ್ಲಿ ಕಟ್ಟಳೆಗಳನ್ನು (Land Acts) ಮಾಡಿದನು. ಈ ಸಂಗತಿ ಹಿಂದೆ ವಿವರಿಸಲಾಗಿದೆ. ಆದರೆ ಈ ಉಪಾಯಗಳಿಂದ ಅಸಂತೋಷವು ಕಡಿಮೆಯಾಗಲಿಲ್ಲ.

**ಐರ್ಲಂಡಿಗೆ ಹೋಮ್‌ರೂಲನ್ನು ಕೊಡುವ ಪ್ರಯತ್ನ**—೧೮೭೯ರಲ್ಲಿ **ಚಾರ್ಲಸ್ ಸ್ಟುವರ್ಟ ಪಾರ್ನೆಲ**ನೆಂಬವನು ಐರಿಶ್ ಜನರ ನೇತೃತ್ವವನ್ನು

ವಹಿಸಿ ಹೋಮ್‌ರೂಲಿನ ಆಂದೋಲನವನ್ನು ಬಲವಾಗಿ ಸಾಗಿಸಿದನು. ಅವನು ೧೮೭೫ರಲ್ಲಿ ಪಾರ್ಲಿಮೆಂಟಿನ ಸದಸ್ಯನಾಗಿದ್ದನು. ಅವನ ನೇತೃತ್ವದಲ್ಲಿ ಕಾಮನ್ಸ ಸಭೆಯ ಐರಿಶ್ ಸಭಾಸದರು ಐರ್ಲಂಡಿಗೆ ಹೋಮ್‌ರೂಲನ್ನು ಕೊಡುವ ಪ್ರಶ್ನೆಯ ಹೊರತು ಬೇರೆ ಪ್ರಶ್ನೆಯ ಚರ್ಚೆ ಪಾರ್ಲಿಮೆಂಟಿನ ಸಭೆಯಲ್ಲಿ ಪ್ರಾರಂಭವಾದರೆ ಉದ್ದುದ್ದ ಭಾಷಣಗಳನ್ನು ಮಾಡಿ ವೇಳೆಯನ್ನು ವ್ಯರ್ಥವಾಗಿ ಕಳೆದು ನಿತ್ಯದ ಕೆಲಸಕ್ಕೆ ಆತಂಕವನ್ನು ತರುವ ಪ್ರಘಾತವನ್ನು ಇಟ್ಟರು. ಅದರಂತೆಯೆ ಐರ್ಲಂಡಿನಲ್ಲಿ ಲಂಡ್ ಲೀಗ (Land League) ಎಂಬ ಸಂಘವೊಂದು ಸ್ಥಾಪಿಸಲ್ಪಟ್ಟು ಅದರ ಮುಖಾಂತರವಾಗಿ ಒಕ್ಕಲಿಗರ ಮತ್ತು ರೈತರ ಸ್ಥಿತಿಯನ್ನು ಸುಧಾರಿಸಲು ಪ್ರಯತ್ನವು ಮಾಡಲ್ಪಟ್ಟಿತು. ಈ ಹೋಮ್‌ರೂಲ್ ಮತ್ತು ಲಂಡ್ ಲೀಗಗಳ ಆಂದೋಲನಗಳಿಂದ ಪರಿಣಾಮವಾಗಿ ಐರಿಶ್‌ಜನರು ದೊಂಬಿಗಳನ್ನೂ ಅತ್ಯಾಚಾರಗಳನ್ನೂ ಮಾಡಿದರು. ೧೮೮೨ರಲ್ಲಿ ಐರ್ಲಂಡಿನ ಸೆಕ್ರೆಟರಿಯಾದ ಲಾರ್ಡ ಕವೆಂಡಿಶ್ ಎಂಬ ಅಧಿಕಾರಿಯ ಕೊಲೆಯಾಯ್ತು. ಈ ಬಗೆಯ ಅತ್ಯಾಚಾರಗಳನ್ನು ತಡೆಯಲು ಗ್ಲಡ್‌ಸ್ಟನನು ಉಗ್ರವಾದ ಉಪಾಯಗಳನ್ನು ಯೋಜಿಸಬೇಕಾಯ್ತು. ಆದರೆ ಐರ್ಲಂಡಿಗೆ ಹೋಮ್‌ರೂಲನ್ನು (ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು) ಕೊಟ್ಟ ಹೊರ್ತು ಐರಿಶ್ ಜನರ ಸಮಾಧಾನವಾಗದೆಂದು ಕಂಡು ಗ್ಲಡ್‌ಸ್ಟನನು ೧೮೮೬ರಲ್ಲಿ ಐರ್ಲಂಡಿಗೆ ಹೋಮ್‌ರೂಲನ್ನು ಕೊಡುವ ವಿಷಯದಲ್ಲಿ ಒಂದು ಬಿಲ್ಲನ್ನು ಪಾರ್ಲಿಮೆಂಟಿನಲ್ಲಿ ತಂದನು. ಆದರೆ ಈ ವಿಷಯದಲ್ಲಿ ಲಿಬರಲ ಪಕ್ಷದಲ್ಲಿಯೆ ಮತಭೇದವು ಇದ್ದಿತು. ಐರ್ಲಂಡು ಇಂಗ್ಲಂಡಿನ ನೆರೆಯಲ್ಲಿಯೆ ಇರುವುದರಿಂದ ಐರ್ಲಂಡಿಗೆ ಹೋಮ್‌ರೂಲು ದೊರೆತು ಅಲ್ಲಿಯ ಅಂತಃಸ್ಥ ವ್ಯವಸ್ಥೆಯೆಲ್ಲವೂ ಬೇರೆಯೆ ಆದರೆ ಯುದ್ಧದ ವೇಳೆಯಲ್ಲಿ ಬಿಕ್ಕಟ್ಟಿನ ಪರಿಸ್ಥಿತಿ ಒದಗಬಹುದೆಂದು ಲಿಬರಲ್ ಪಕ್ಷದ ಕೆಲವು ಸದಸ್ಯರ ಅಭಿಪ್ರಾಯವಾಗಿತ್ತು. ಅದರಂತೆ ಅಲ್ಲಿ ಬೇರೆ ಪಾರ್ಲಿಮೆಂಟು ಸ್ಥಾಪಿಸಲ್ಪಟ್ಟರೆ ತಾವು ಅಲ್ಪ ಸಂಖ್ಯಾಕರಾಗುವೆವೆಂದು ಐರ್ಲಂಡಿನಲ್ಲಿಯ ಅಲ್‌ಸ್ಟರ ಪರಗಣೆಯಲ್ಲಿಯ ಪ್ರಾಟಿಸ್ಟಂಟ ಪಂಥದ ಜನರೂ ಐರಿಶ್ ಹೋಮ್‌ರೂಲಿನ ಆಂದೋಲನವನ್ನು ವಿರೋಧಿಸುತ್ತಿದ್ದರು. ಈ ಪರಿಸ್ಥಿತಿಯಲ್ಲಿ ಸರ **ಜೊಸೆಫ್ ಚೆಂಬರಲೇನ**, **ಹಾರ್ಟಿಂಗ್‌ಟನ್** ಮುಂತಾದ ೧೦೦ ಲಿಬರಲ್ ಸದಸ್ಯರು ಐರಿಶ್ ಹೋಮ್‌ರೂಲ ಬಿಲ್ಲಿಗೆ ವಿರುದ್ಧವಾಗಿ ಕಾಂಝರ್‌ವೇಟಿವ್ ಪಕ್ಷದವರ ಕಡೆಗೆ ಮತವನ್ನು ಕೊಟ್ಟುದರಿಂದ ಆ ಬಿಲ್ಲು ಪಾರ್ಲಿಮೆಂಟ್ ಸಭೆಗೆ ಸಮ್ಮತವಾಗಲಿಲ್ಲ. ಗ್ಲಡ್‌ಸ್ಟನನು ಮುಖ್ಯ ಮಂತ್ರಿಪದವನ್ನು ತ್ಯಜಿಸಿದನು. ಗ್ಲೆಡ್‌ಸ್ಟನನು ಮತ್ತೆ ಮುಖ್ಯ ಮಂತ್ರಿಯಾದ ಬಳಿಕ

ಪತ್ತೆ ಹೋಮ್‌ರೂಲ ಬಿಲ್ಲನ್ನು ಪಾರ್ಲಿಮೆಂಟಿನಲ್ಲಿ ತಂದನು (೧೮೯೩). ಈ ಸಲವೂ ಅದು ತಿರಸ್ಕರಿಸಲ್ಪಟ್ಟಿತು. ಆ ತರುವಾಯದಲ್ಲಿ ಗ್ಲೆಡ್‌ಸ್ಟನನು ವಾರ್ಧಕ್ಯದ ಮೂಲಕವಾಗಿ ರಾಜಕಾರಣದಿಂದ ಹೊರಗೆ ಉಳಿದನು.

**ದಕ್ಷಿಣ ಐರ್ಲಂಡಿಗೆ ಹೋಮ್‌ರೂಲ್ ದೊರೆವುದು, ೧೯೨೨**—ಇಂತು ಐರ್ಲಂಡಿಗೆ ಹೋಮ್‌ರೂಲನ್ನು ಕೊಡುವ ಸಮಸ್ಯೆ ವಿಕ್ಟೋರಿಯಾ ರಾಣಿಯ ಆಳ್ಕೆಯಲ್ಲಿ ಹಾಗೆಯೆ ನೆನೆಯುತ್ತ ಬಿದ್ದಿತು. ಮುಂದೆ ಐರಿಶ್ ಜನರ ಮೇಲಿನ ಪಾರ್ನೆಲನ ವರ್ಚಸ್ಸು ಕುಂದಿ **ರೆಡ್‌ಮಂಡ್** ಎಂಬವನು ಐರಿಶರ ಮುಂದಾಳಾದನು. ನ್ಯಾಯವಾದ ಮಾರ್ಗದಿಂದ ಐರ್ಲಂಡಿಗೆ 'ಹೋಮ್ ರೂಲ್' ದೊರೆಯದೆ ಇದ್ದುದ್ದನ್ನು ಕಂಡು ಅತ್ಯುಗ್ರರಾದ ಕೆಲವು ಐರಿಶ್ ಜನರು 'ಸಿನ ಫೇನ' (Sinne Fein=We Ourselves: ನಮ್ಮಷ್ಟಕ್ಕೆ ನಾವು) ಎಂಬ ಪಕ್ಷವನ್ನು ಸು. ೧೯೦೦ರಲ್ಲಿ ಸ್ಥಾಪಿಸಿಕೊಂಡರು. ಐರ್ಲಂಡಿನಲ್ಲಿ ಸ್ವತಂತ್ರವಾದ ಪ್ರಜಾಪ್ರಭುತ್ವವನ್ನು ಸ್ಥಾಪಿಸುವುದು ಈ ಪಕ್ಷದವರ ಗುರಿಯಾಗಿದ್ದು ಅಗತ್ಯವಿದ್ದಲ್ಲಿ ಅತ್ಯಾಚಾರ ದೊಂಬೆಗಳನ್ನು ಮಾಡಬೇಕು ಎಂದು ಅವರ ಸಂಕಲ್ಪವಾಗಿತ್ತು. ಯುರೋಪದಲ್ಲಿ ಮಹಾಯುದ್ಧವು ಪ್ರಾರಂಭವಾದ ಬಳಿಕ ೧೯೧೬ರಲ್ಲಿ ಐರ್ಲಂಡಿನಲ್ಲಿ ಬಂಡಾಯವು ತಲೆಯೆತ್ತಿತು. ಆದರೆ ಕ್ರೂರವಾದ ಉಪಾಯಗಳಿಂದ ಇದನ್ನು ಹತ್ತಿಕ್ಕಿದರು. ಆದರೆ ಇದರಿಂದ ಸಿನ ಫೇನ ಪಕ್ಷದ ವರ್ಚಸ್ಸು ಕಡಿಮೆಯಾಗಲಿಲ್ಲ. **ಡಿ ವೆಲೇರಾ** ಈ ಪಕ್ಷದ ಮುಂದಾಳಾಗಿದ್ದನು. ೧೯೧೮ರಲ್ಲಿ ನಡೆದ ಆಯ್ಕೆಯಲ್ಲಿ ಈ ಪಕ್ಷದ ಸದಸ್ಯರೆ ಬಹು ಸಂಖ್ಯರಾಗಿ ಐರ್ಲಂಡಿನಿಂದ ಆರಿಸಿ ಬಂದರು. ಆದರೆ ಅವರು ಬ್ರಿಟಿಶ ಪಾರ್ಲಿಮೆಂಟನ್ನು ಬಹಿಷ್ಕರಿಸಿದರು. **ಡೇಲ ಐರನ್** (Dail Eireann) ಎಂಬ ಸ್ವತಂತ್ರವಾದ ಸಭೆಯನ್ನು ನೆರೆಯಿಸಿ ಅವರು ಐರ್ಲಂಡಿನ ಎಲ್ಲ ಆಡಳಿತವನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳಲು ಪ್ರಯತ್ನಿಸತೊಡಗಿದರು. ಅಲ್ಸ್ಟರ ಪ್ರಾಂತದ ಪ್ರಾಟೆಸ್ಟಂಟ ಪಂಗಡದ ನಾಯಕನಾದ ಸರ್ **ಎಡ್ವರ್ಡ ಕಾರ್ಸನ್** ಈತನು ಐರ್ಲಂಡಿಗೆ ಹೋಮ್‌ರೂಲನ್ನು ಕೊಡುವ ವಿಷಯವನ್ನು ವಿರೋಧಿಸುವವನಾಗಿದ್ದನು. ಹೀಗಿರಲು ಈ ಸಮಸ್ಯೆಯನ್ನು ಸಮಾಧಾನಕರವಾಗಿ ನಿರ್ಧರಿಸಲು ಬ್ರಿಟಿಶ ಪಾರ್ಲಿಮೆಂಟು ೧೯೨೦ರಲ್ಲಿ ಒಂದು ಕಟ್ಟಳೆಯನ್ನು ಸಿದ್ಧಗೊಳಿಸಿತು. ಇದಕ್ಕೆ ಅನುಸಾರವಾಗಿ ಐರ್ಲಂಡಿನಲ್ಲಿ ಉತ್ತರ ಐರ್ಲಂಡ್ (ಅಲ್ಸ್ಟರ) ಮತ್ತು ದಕ್ಷಿಣ ಐರ್ಲಂಡ್ ಎಂದು ಎರಡು ಭಾಗಗಳನ್ನು ಕಲ್ಪಿಸಲಾಯಿತು. ದಕ್ಷಿಣ ಐರ್ಲಂಡಿಗೆ ಹೋಮ್‌ರೂಲು ಕೊಡಲಾಯಿತು. ಆದರೆ ಉತ್ತರ ಐರ್ಲಂಡಿನವರಿಗೆ ಹೋಮ್

ರೂಲು ಬೇಡವಾದುದರಿಂದ ಕೆಲವು ಸ್ಥಾನಿಕ ವಿಷಯಗಳಿಗಾಗಿ ಅಲ್ಲಿ ಪಾರ್ಲಿಮೆಂಟ್ ಸಭೆಯೊಂದು ಸ್ಥಾಪಿಸಲ್ಪಟ್ಟಿತು. ಆದರೆ ಮೊದಲಿನಂತೆ ಬ್ರಿಟಿಶ್ ಪಾರ್ಲಿಮೆಂಟಿಗೆ ಉತ್ತರ ಐರ್ಲಂಡಿನಿಂದ ಪ್ರತಿನಿಧಿಗಳು ಬರುವುದಾಗಿ ಏರ್ಪಟ್ಟಿತು. ಈ ಶಾಸನದಿಂದ ದಕ್ಷಿಣ ಐರ್ಲಂಡಿಗೆ ಹೋಮ್‌ರೂಲು ದೊರೆತರೂ ಅಲ್ಲಿಯ ಅಶಾಂತಿ ಅಳಿಯಲಿಲ್ಲ. ಹಿಂದಿನಂತೆ ಅತ್ಯಾಚಾರ, ದೊಂಬೆಗಳು ಆರಂಭವಾದುವು. ಆದುದರಿಂದ ಇಂಗ್ಲಂಡಿನ ಮುಖ್ಯ ಮಂತ್ರಿಯಾದ **ಲಾಯಿಡ ಜಾರ್ಜನು** ೧೯೨೧ರಲ್ಲಿ ಐರಿಶ್ ಪ್ರಮುಖರ ಪರಿಷತ್ತನ್ನು ಕೂಡಿಸಿದನು. ಅದರಲ್ಲಿ ನಿರ್ಣಯವಾದಂತೆ ಪಾರ್ಲಿಮೆಂಟು ೧೯೨೨ರಲ್ಲಿ ಕಟ್ಟಳೆಯನ್ನು ವಿಧಿಸಿತು; ಅದರಲ್ಲಿ ಈ ಮುಂದಿನ ಮಹತ್ವದ ವಿಷಯಗಳು ಅಡಕವಾಗಿದ್ದುವು:—(೧) ದಕ್ಷಿಣ ಐರ್ಲಂಡಿಗೆ ಕನಡಾ ಉಪನಿವೇಶದಂತೆ ಎಲ್ಲ ಅಧಿಕಾರಗಳು ಸಲ್ಲತಕ್ಕುದು. ಅದಕ್ಕೆ **'ಐರಿಶ್ ಫ್ರೀ ಸ್ಟೇಟ್'** ಎಂಬ ಹೆಸರು ಇರಬೇಕು; (೨) ಐರಿಶ್ ಪಾರ್ಲಿಮೆಂಟಿನ ಸದಸ್ಯರು ಫ್ರೀ ಸ್ಟೇಟ ಮತ್ತು ಇಂಗ್ಲಂಡಿನ ಅರಸನಲ್ಲಿ ರಾಜನಿಷ್ಠರಾಗಿರಬೇಕು; (೩) ಹೋಮ್‌ರೂಲು ಸ್ಥಾಪನವಾಗುವ ಪೂರ್ವದಲ್ಲಿ ದಕ್ಷಿಣ ಐರ್ಲಂಡಿನಲ್ಲಿ ಇಂಗ್ಲಿಶ್ ಜನರ ಅಂಕಿತದಲ್ಲಿದ್ದ ಭೂಮಿಗಾಗಿ ಐರ್ಲಂಡು ವರ್ಷಕ್ಕೆ ೫೦ ಲಕ್ಷ ಪೌಂಡುಗಳನ್ನು ಇಂಗ್ಲಂಡಿಗೆ ಸಲ್ಲಿಸತಕ್ಕುದು.

ಐರ್ಲಂಡಿಗೆ ದೊರೆತ ಈ ಸ್ವರಾಜ್ಯದಿಂದ (ಹೋಮ್‌ರೂಲಿನಿಂದ) **ಡೀ ವೆಲೇರಾ** ಸಂತುಷ್ಟನಾಗಲಿಲ್ಲ. ಐರ್ಲಂಡಿನಲ್ಲಿ ಸ್ವತಂತ್ರ ಪ್ರಜಾಪ್ರಭುತ್ವವನ್ನು (Republic) ಸ್ಥಾಪಿಸಬೇಕೆಂಬುದು ಆತನ ಮಹತ್ವಾಕಾಂಕ್ಷೆಯಾಗಿದ್ದಿತು. ಅದಕ್ಕಾಗಿ ಆತನು ಪ್ರಯತ್ನವನ್ನು ನಡೆಯಿಸಿದನು. ಐರ್ಲಂಡಿನಲ್ಲಿ ಹೋಮ್‌ರೂಲು ಸ್ಥಾಪನೆಯಾದ ಬಳಿಕ ಮೊದಲು ಹೋಮ್‌ರೂಲ ಪಕ್ಷದ **ಗ್ರಿಫಿಥನು** ಅನಂತರ **ಕಾಸಗ್ರೈವನು** ಫ್ರೀ ಸ್ಟೇಟಿನ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ೧೯೩೨ರಲ್ಲಿ ಮತ್ತು ೧೯೩೭ರಲ್ಲಿ ನಡೆದ ಆಯ್ಕೆಯಲ್ಲಿ ರಿಪಬ್ಲಿಕ್ ಪಕ್ಷದ ನಾಯಕನಾದ ಡೀ ವೆಲೇರಾ ಅಧ್ಯಕ್ಷನಾದನು. ಆಗ ಆತನು ಇಂಗ್ಲಂಡಿನ ಸಂಬಂಧವನ್ನು ಹರಿದೊಗೆದು ಐರ್ಲಂಡಿನಲ್ಲಿ ಸ್ವತಂತ್ರ ಪ್ರಜಾಪ್ರಭುತ್ವವನ್ನು ಸ್ಥಾಪಿಸುವ ಪ್ರಯತ್ನವನ್ನು ಮುಂದುವರಿಸಿದನು. ರಾಜನಿಷ್ಠೆಯ ಶಪಥವನ್ನು ಮತ್ತು ಇಂಗ್ಲಂಡಿಗೆ ಕೊಡಬೇಕಾದ ಕಪ್ಪವನ್ನು ನಿರಾಕರಿಸಿದನು; ಗವರ್ನರ ಜನರಲನ ಸ್ಥಾನವನ್ನು ಕಿತ್ತೊಗೆದನು. ಐರ್ಲಂಡಿನಿಂದ ಕಪ್ಪವು ಬಾರದಂತಾಗಲು ಇಂಗ್ಲಂಡಿನವರು ಐರಿಶ್ ಸರಕುಗಳ ಮೇಲೆ ಸುಂಕವನ್ನು ಹೇರಿದರು. ಇಂಗ್ಲಂಡ್ ಐರ್ಲಂಡುಗಳ ನಡುವೆ ಈ ತಿಕ್ಕಾಟವು ನಡೆದಿರಲು, ಐರ್ಲಂಡಿನಲ್ಲಿ ಪ್ರಜಾ

ಪ್ರಭುತ್ವವನ್ನು ಸ್ಥಾಪಿಸದೆ ಜರ್ಮನಿಯಲ್ಲಿಯ ನಾಝಿ ಇಲ್ಲವೆ ಇಟಲಿಯಲ್ಲಿಯ ಫಸಿಸ್ಟ ರೀತಿಯ **ಡಿಕ್ಟೇಟರ್** (ಸರ್ವಾಧಿಕಾರಿ) ಪದ್ಧತಿಯ ರಾಜ್ಯವ್ಯವಸ್ಥೆ ಇರಬೇಕು ಎಂಬುದಾಗಿ ಓ **ಢಫಿ** ಎಂಬ ನಾಯಕನು ಆಂದೋಲನವನ್ನು ಹೂಡಿದನು.

## (೩) ಇಂಗ್ಲಂಡಿನ ಪರರಾಷ್ಟ್ರೀಯ ನೀತಿ ಮತ್ತು ಸಾಮ್ರಾಜ್ಯವೃದ್ಧಿ.

**ಪರರಾಷ್ಟ್ರೀಯ ಘಟನೆಗಳು**—ವಿಕ್ಟೋರಿಯಾ ರಾಣಿಯ ಆಳ್ಕೆಯಲ್ಲಿ ಪರರಾಷ್ಟ್ರಗಳಲ್ಲಿ ಅನೇಕ ಹೊಸ ಘಟನೆಗಳು ಸಂಭವಿಸಿದುವು. ಇಂಗ್ಲಂಡಿನ ಪರರಾಷ್ಟ್ರೀಯ ನೀತಿಯನ್ನು ತಿಳಿಯಲು ಅವುಗಳ ಜ್ಞಾನವು ಆವಶ್ಯಕ.

(೧) **ಫ್ರಾನ್ಸ್**—೧೮೩೦ರಲ್ಲಿ ಫ್ರಾನ್ಸ್ ದೇಶದಲ್ಲಿ ರಾಜ್ಯಕ್ರಾಂತಿಯಾಯಿತು. ಫ್ರೆಂಚ ಜನರು ೧೦ನೆಯ ಚಾರ್ಲಸನನ್ನು ತಳ್ಳಿ ಲುಯಿ ಫಿಲಿಪಿ ಎಂಬವನನ್ನು ತಮ್ಮ ರಾಜನನ್ನು ಮಾಡಿಕೊಂಡರು. ಲುಯಿ ಫಿಲಿಪಿ ೧೮ ವರ್ಷ ರಾಜ್ಯವಾಳಿದನು. ಆದರೆ ಮುಂದೆ ಆತನು ಅಪ್ರಿಯನಾದನು. ಅದರಿಂದ ಫ್ರಾನ್ಸಿಸಲ್ಲಿ ಮತ್ತೆ ರಾಜ್ಯಕ್ರಾಂತಿಯಾಯಿತು. ಫ್ರೆಂಚರು ತಮ್ಮ ರಾಜ್ಯವು ಪ್ರಜಾಪ್ರಭುತ್ವವುಳ್ಳದಾಗಿದೆ ಎಂದು ಘೋಷಿಸಿ ನೆಪೋಲಿಯನನ ತಮ್ಮನ ಮಗನಾದ **ಲುಯಿ ನೆಪೋಲಿಯನ್** ಈತನನ್ನು ಅಧ್ಯಕ್ಷನಾಗಿ ಆರಿಸಿದರು. ಈ ಲುಯಿ ನೆಪೋಲಿಯನನು ಬಹಳ ಮಹತ್ವಾಕಾಂಕ್ಷಿಯಾಗಿದ್ದನು. ಎಲ್ಲ ಅಧಿಕಾರವು ತನ್ನ ಕೈಯಲ್ಲಿ ಇರಬೇಕೆಂದು ಬಗೆದು ಈತನು ೧೮೫೨ರಲ್ಲಿ ಫ್ರಾನ್ಸು ರಾಜಪ್ರಭುತ್ವವುಳ್ಳದಾಗಿದೆ ಎಂದು ಸಾರಿ **ಚಕ್ರಾಧಿಪತಿ ೩ನೆಯ ನೆಪೋಲಿಯನ್** ಎಂಬ ಬಿರುದನ್ನು ಧರಿಸಿದನು. ಆ ಮೇಲೆ ಮುಂದೆ ಸು. ೨೦ ವರ್ಷಗಳವರೆಗೆ ಫ್ರಾನ್ಸಿನ ಸರ್ವಾಧಿಕಾರವು ಈತನ ವಶದಲ್ಲಿಯೆ ಇದ್ದಿತು. ಮುಂದೆ ೧೮೭೦—೭೧ರಲ್ಲಿ ಫ್ರಾನ್ಸ್ ಮತ್ತು ಜರ್ಮನಿ ಇವುಗಳ ನಡುವೆ ಯುದ್ಧವು ನಡೆದು ೩ನೆಯ ನೆಪೋಲಿಯನನು ರಾಜ್ಯತ್ಯಾಗವನ್ನು ಮಾಡಬೇಕಾಯಿತು. ಆಗ ಫ್ರಾನ್ಸಿನಲ್ಲಿ ಮತ್ತೆ ಪ್ರಜಾಪ್ರಭುತ್ವವು ಸ್ಥಾಪನವಾಯಿತು (೧೮೭೧).

(೨) **ಇಟಲಿ**—೧೮೪೮ರ ಸುಮಾರಿಗೆ ಇಟಲಿಯಲ್ಲಿ ಒಂದು ರಾಜ್ಯವಿರದೆ ೬-೭ ಬೇರೆ ಬೇರೆ ಸ್ವತಂತ್ರ ಸಂಸ್ಥಾನಗಳು ಇದ್ದುವು. ಇವುಗಳಲ್ಲಿ ಉತ್ತರದ ಲಾಂಬರ್ಡಿ ಮತ್ತು ವೆನಿಸ ಸಂಸ್ಥಾನಗಳು ಆಸ್ಟ್ರಿಯದ ಅಂಕಿತವಾಗಿದ್ದುವು. ವಾಯವ್ಯ ಭಾಗದಲ್ಲಿ ಪಿಡಮಾಂಟ-ಸಾರ್ಡಿನಿಯಾ ಸಂಸ್ಥಾನವಿದ್ದಿತು. ಅದನ್ನು ಚಾರ್ಲಸ ಅಲ್ಬರ್ಟ ಎಂಬ ರಾಜನು ಆಳುತ್ತಿದ್ದನು. ನಡುವೆ ರೋಮ ಪಟ್ಟ

ಣದ ಸುತ್ತಲು ಒಂದು ಸಂಸ್ಥಾನವಿದ್ದು ಅದಕ್ಕೆ **ಪೋಪನು** ಅಧಿಕಾರಿಯಾಗಿದ್ದನು. ದಕ್ಷಿಣ ಭಾಗದಲ್ಲಿ ನೇಪಲ್ಸ ಮತ್ತು ಸಿಸಲಿ ಸಂಸ್ಥಾನವಿದ್ದು ಅದನ್ನು ಫ್ರಾನ್ಸಿನ ಬೂರಬಾನ್ ಮನೆತನದ ಅರಸರು ಆಳುತ್ತಿದ್ದರು. ಇದಲ್ಲದೆ ಇನ್ನೂ ಕೆಲವು ಸಂಸ್ಥಾನಗಳು ಇದ್ದುವು. ಈಯೆಲ್ಲ ಸಂಸ್ಥಾನಗಳ ಒಡೆಯರಿಗೆ ಅನಿಯಂತ್ರಿತ ಅಧಿಕಾರಗಳಿದ್ದು ಜನತೆಗೆ ಏನೂ ಅಧಿಕಾರಗಳಿರಲಿಲ್ಲ. ಆದುದರಿಂದ ಈ ಸಂಸ್ಥಾನಗಳ ಪ್ರಜಾಜನರು ಅರಸರಿಂದ ತಮಗೆ ಅಧಿಕಾರಗಳು ದೊರೆಯಬೇಕೆಂದು ೧೮೪೮ರಲ್ಲಿ ಚಳವಳಿಗಳನ್ನು ಹೂಡಿದರು. ಕೆಲವು ಅರಸರು ಹಾಗೆ ಅಧಿಕಾರಗಳನ್ನು ಕೊಡಬೇಕಾಯಿತು. ಆದರೆ ಮುಂದೆ ಪಿಡಮಾಂಟ-ಸಾರ್ಡಿನಿಯದ ಅರಸನನ್ನುಳಿದ ಮಿಕ್ಕ ಅರಸರು ಅವುಗಳನ್ನು ಇಲ್ಲದಾಗಿಸಿದರು. ಇದರಿಂದ ಜನರಲ್ಲಿ ಅಸಂತೋಷವು ಹಬ್ಬಿತು. ಆಗ ಇಟಲಿಯ ಎಲ್ಲ ಸಂಸ್ಥಾನಗಳ ಏಕೀಕರಣವಾಗಬೇಕೆಂದು **ಮಝಿನಿ**, ಪಿಡಮಾಂಟ-ಸಾರ್ಡಿನಿಯದ ಮುಖ್ಯ ಮಂತ್ರಿ **ಕೌಹೂರ** ಮತ್ತು ರಾಜನಾದ ವಿಕ್ಟರ ಇಮಾನ್ಯುಯಲ ಮತ್ತು ನೇಪಲ್ಸಿನ ದೇಶಭಕ್ತ **ಗರಿಬಾಲ್ಡಿ** ಇವರ ನಾಯಕತ್ವದಲ್ಲಿ ದೊಡ್ಡ ಆಂದೋಲನವು ಪ್ರಾರಂಭವಾಯಿತು. ಕೊನೆಗೆ ಇವರ ಪ್ರಯತ್ನವು ಸಫಲವಾಗಿ ಪೋಪನ ಸಂಸ್ಥಾನವನ್ನುಳಿದು ಇಟಲಿಯ ಎಲ್ಲ ಸಂಸ್ಥಾನಗಳು ಒಂದುಗೂಡಿದುವು. ಹೀಗೆ ಸಂಯುಕ್ತವಾದ ಇಟಲಿಗೆ ವಿಕ್ಟರ ಇಮಾನ್ಯುಯಲನು ಅರಸನಾದನು (೧೮೬೧). ಮುಂದೆ ೧೮೭೦ರಲ್ಲಿ ಪೋಪನ ಸಂಸ್ಥಾನವಾದರೂ ಅದರಲ್ಲಿ ಕೂಡಿ ಇಟಲಿಯ ಏಕೀಕರಣವು ಪೂರ್ಣವಾಯಿತು.

(೨) **ಜರ್ಮನಿ**–ಜರ್ಮನಿಯಲ್ಲಿ ಆಸ್ಟ್ರಿಯಾ ಮತ್ತು ಪ್ರಶಿಯಾ ಈ ಎರಡು ಸಂಸ್ಥಾನಗಳು ಪ್ರಮುಖವಾಗಿದ್ದು ಅವುಗಳಲ್ಲಿ ಮೊದಲಿನಿಂದಲೂ ಸ್ಪರ್ಧೆಯಿದ್ದಿತು. ಇವುಗಳಲ್ಲಿ ಸಾಮಾನ್ಯವಾಗಿ ಆಸ್ಟ್ರಿಯದ ಅರಸನೇ ಜರ್ಮನಿಯ ಅಧಿಪತಿಯಾಗಿರುತ್ತಿದ್ದನು. ಆದುದರಿಂದ ಜರ್ಮನಿಯಲ್ಲಿಯ ಆಸ್ಟ್ರಿಯದ ವರ್ಚಸ್ಸನ್ನು ತಪ್ಪಿಸಿ ಪ್ರಶಿಯದ ಅಧಿಕಾರವನ್ನು ಪ್ರಸ್ಥಾಪಿಸಬೇಕೆಂದು ಪ್ರಶಿಯದ ಮುಖ್ಯ ಮಂತ್ರಿಯಾದ **ಬಿಸ್ಮಾರ್ಕನು** ಬಗೆದನು (೧೮೬೨). ಆ ಮೇರೆಗೆ ಯಾವುದೊ ಒಂದು ನೆಪವನ್ನು ಹೂಡಿ ೧೮೬೬ರಲ್ಲಿ ಆತನು ಆಸ್ಟ್ರಿಯದೊಡನೆ ಯುದ್ಧವನ್ನು ಸಾರಿದನು. ಈ ಸಮಯದಲ್ಲಿ ಆಸ್ಟ್ರಿಯದ ಪರಾಭವವಾಗಲು ಜರ್ಮನಿಯು ರಾಜ್ಯತಂತ್ರದಿಂದ ಹಿಂದೆಗೆವುದಾಗಿ ಆಸ್ಟ್ರಿಯವು ಒಡಂಬಟ್ಟಿತು. ಇದರಿಂದ ಜರ್ಮನಿಯ ಉತ್ತರ ಭಾಗದ ನಾಯಕತ್ವವು ಪ್ರಶಿಯದ ಕೈಗೆ ಬಂದಿತು. ಅನಂತರ ಫ್ರಾನ್ಸಿನ ಅಧಿಪತಿಯಾದ ಮೂರನೆಯ ನೆಪೋಲಿಯನ

ನೊಡನೆ ಜರ್ಮನಿಯ ವೈಮನಸ್ಯವು ಹುಟ್ಟಿ ಫ್ರಾನ್ಸ್, ಜರ್ಮನಿ ಇವುಗಳ ನಡುವೆ ಕಾಳಗವೆಸಗಿತು. ಈ ಸಂಗ್ರಾಮದಲ್ಲಿ ಫ್ರಾನ್ಸಿನ ಪರಾಜಯವಾಗಿ ಅದು ಆಲ್ಸೆಸ, ಲಾರೇನ ಪ್ರಾಂತಗಳನ್ನೂ ಅಧಿಕವಾದ ಕಪ್ಪವನ್ನೂ ಜರ್ಮನಿಗೆ ತೆರಬೇಕಾಯಿತು. ಬಳಿಕ ಪ್ರಶಿಯದ ನಾಯಕತ್ವದಲ್ಲಿ ಜರ್ಮನಿಯ ಎಲ್ಲ ಸಂಸ್ಥಾನಗಳ ಸಾಮ್ರಾಜ್ಯವು ನಿರ್ಮಾಣವಾಯಿತು. ಪ್ರಶಿಯದ ರಾಜನು ಜರ್ಮನಿಯ ಸಮ್ರಾಟನಾದನು (೧೮೭೧).

(೪) **ಅಮೇರಿಕೆ**—ಇಂಗ್ಲಂಡಿನಿಂದ ಸಿಡಿದುಹೋದ 'ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು' ಎಂಬ ರಾಷ್ಟ್ರವು ೧೯ನೆಯ ಶ. ದಲ್ಲಿ ಬಹುವಾಗಿ ವಿಸ್ತಾರಪಡೆಯಿತು. ಪಶ್ಚಿಮದಲ್ಲಿ ಪಸಫಿಕ ಸಮುದ್ರದ ವರೆಗಿನ ಪ್ರದೇಶದಲ್ಲಿ ಕೆಲವು ಹೊಸ ಸಂಸ್ಥಾನಗಳು ಸ್ಥಾಪಿಸಲ್ಪಟ್ಟವು. ಮುಂದೆ ೧೮೬೧ರಲ್ಲಿ ಉತ್ತರದ ಮತ್ತು ದಕ್ಷಿಣದ ಸಂಸ್ಥಾನಗಳು ಎಂಬ ಎರಡು ತಂಡಗಳು ಉಂಟಾಗಿ ಅವುಗಳ ನಡುವೆ ಕದನವು ಹುಟ್ಟಿತು. ದಕ್ಷಿಣ ಸಂಸ್ಥಾನಗಳಲ್ಲಿ ಹತ್ತಿ, ತಂಬಾಕು ಮತ್ತು ಸಕ್ಕರೆ ಈ ವಸ್ತುಗಳನ್ನು ಸಿದ್ಧಪಡಿಸುವಂತಹ ದೊಡ್ಡ ತೋಟಗಳು ಇದ್ದುವು. ಈ ದೊಡ್ಡ ತೋಟಗಳಲ್ಲಿ ನಿಗ್ರೋ ಗುಲಾಮರಿಂದ ಕೆಲಸವನ್ನು ಮಾಡಿಸುತ್ತಿದ್ದರು. ಮುಂದೆ ಈ ಗುಲಾಮಗಿರಿಯನ್ನು ನಿಲ್ಲಿಸಬೇಕು ಎಂದು ಅಮೇರಿಕದ ಜನರಿಗೆ ಎನಿಸಿತು, ಅದಕ್ಕಾಗಿ ದೊಡ್ಡ ಆಂದೋಲನವು ಎದ್ದಿತು. ಈ ಕಾಲಕ್ಕೆ **ಅಬ್ರಾಹಮ ಲಿಂಕನ್** ಈತನು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದನು. ದಾಸಪದ್ಧತಿಯನ್ನು (ಗುಲಾಮಗಿರಿಯನ್ನು) ನಿಲ್ಲಿಸಬೇಕೆಂದು ಆತನ ಅಭಿಪ್ರಾಯವಿದ್ದಿತು. ಉತ್ತರದ ಸಂಸ್ಥಾನಗಳು ದಾಸಪದ್ಧತಿಯನ್ನು ನಿಲ್ಲಿಸುವ ಪಂಗಡಕ್ಕೆ ಸೇರಿದ್ದುವು. ದಾಸಪದ್ಧತಿಯನ್ನು ನಿಲ್ಲಿಸಿದರೆ ತೋಟಗಳಲ್ಲಿಯ ಕೆಲಸವು ಸಾಗದಾಗಿ ಬಹಳ ಹಾನಿ ಒದಗುವುದರಿಂದ ಹಾಗೆ ಮಾಡಬಾರದು ಎಂದು ದಕ್ಷಿಣ ಸಂಸ್ಥಾನದವರ ಯೋಚನೆಯಿದ್ದಿತು. ದಾಸಪದ್ಧತಿಯನ್ನು ನಿಲ್ಲಿಸಿದರೆ ಸಂಯುಕ್ತ ಸಂಸ್ಥಾನಗಳಿಂದ ಹೊರದೆಗೆವೆವೆಂದು ಈ ಸಂಸ್ಥಾನದವರು ಹೆದರಿಕೆಯನ್ನು ಒಡ್ಡಿದರು. ಆಗ ಈ ಎರಡು ಸಂಸ್ಥಾನಸಂಘಗಳಲ್ಲಿ ಹೋರಾಟವಾಯಿತು (೧೮೬೧—೬೫). ಇದರಲ್ಲಿ ದಕ್ಷಿಣದ ಸಂಸ್ಥಾನಗಳು ಸೋತುವು. ಅನಂತರ ಅಮೇರಿಕೆಯಲ್ಲಿಯ ದಾಸಪದ್ಧತಿ ಅಳಿದು ಎಲ್ಲ ಗುಲಾಮರ ಬಿಡುಗಡೆಯಾಯಿತು. ಈ ಯುದ್ಧವು ಸಾಗಿರುವಾಗ ಇಂಗ್ಲಂಡಿನ ಬಟ್ಟೆಯ ಗಿರಣಿಗಳಿಗೆ ಅಮೇರಿಕೆಯಿಂದ ಬರುತ್ತಿರುವ ಹತ್ತಿ ಒಮ್ಮಿಂದೊಮ್ಮೆ ಬಾರದಾಯಿತು. ಅದರಿಂದ ಅನೇಕ ಗಿರಣಿಗಳನ್ನು ನಿಲ್ಲಿಸ

ಬೇಕಾಯಿತು. ಆದರೆ ಮುಂದೆ ಇಜಿಪ್ತ ಮತ್ತು ಹಿಂದುಸ್ಥಾನದಿಂದ ಹತ್ತಿಯ ಪೂರಯಿಕೆಯಾಗಿ ಮೊದಲಿನಂತೆ ಗಿರಣಿಗಳು ನಡೆಯಲಾರಂಭಿಸಿದುವು.

(೫) **ತುರ್ಕಸ್ತಾನ**—೧೪೫೩ರಲ್ಲಿ ತುರ್ಕ ಜನರು ಪೂರ್ವ ರೋಮನ್ ಸಾಮ್ರಾಜ್ಯವನ್ನು ನಷ್ಟಗೊಳಿಸಿ ಕಾನ್‌ಸ್ಟಾಂಟಿನೋಪಲ ಪಟ್ಟಣವನ್ನು ವಶಪಡಿಸಿಕೊಂಡ ಬಳಿಕ ಯುರೋಪದ್ದ ಆಗ್ನೇಯ ಭಾಗದಲ್ಲಿ ತುರ್ಕಸ್ತಾನದ ರಾಜ್ಯವು ಸ್ಥಾಪಿತವಾಯಿತು. ಕಾನ್‌ಸ್ಟಾಂಟಿನೋಪಲ ಪಟ್ಟಣವು ತುರ್ಕಸ್ತಾನದ ರಾಜಧಾನಿಯಾಯಿತು. ಏಶಿಯದಲ್ಲಿಯ ಏಶಿಯಾ ಮಾಯನರ, ಸೀರಿಯಾ, ಪಲೆಸ್ಟಾಯಿನ್, ಇಜಿಪ್ತ, ಮತ್ತು ಯುರೋಪದಲ್ಲಿಯ ಬಾಲ್ಕನ್ ದ್ವೀಪಕಲ್ಪವು ಈ ಪ್ರದೇಶಗಳು ತುರ್ಕಸ್ತಾನ ರಾಜ್ಯಕ್ಕೆ ಒಳಪಟ್ಟಿದ್ದುವು. ಬಾಲ್ಕನ್ ಪ್ರದೇಶದ ಬಹು ಜನರು ಸ್ಲಾವ್ಹ ವಂಶದವರು. ಅವರು ಕ್ರೈಸ್ತಮತದವರು ಆಗಿದ್ದರು. ಮುಸಲ್ಮಾನ ಧರ್ಮದವನಾದ ತುರ್ಕಸ್ತಾನದ ಸುಲ್ತಾನನಿಂದ ತಮಗೆ ಅನ್ಯಾಯವಾಗುವುದೆಂದು ಅವರ ದೂರು ಇದ್ದಿತು. ಅದಕ್ಕಾಗಿ ತುರ್ಕಸ್ತಾನದಿಂದ ಸ್ವತಂತ್ರರಾಗಬೇಕೆಂದು ಬಗೆದು ಅವರು ಚಳವಳಿಯನ್ನು ಹೂಡಿದರು. ಈ ಚಳವಳಿಯನ್ನು ತುರ್ಕಸ್ತಾನದ ಸುಲ್ತಾನನು ಉಗ್ರ ಉಪಾಯಗಳಿಂದ ಅನೇಕ ಸಲ ಹತ್ತಿಕ್ಕಿದನು. ಗ್ರೀಸ ದೇಶವಾದರೂ ತುರ್ಕಸ್ತಾನದ ಸಾಮ್ರಾಜ್ಯಕ್ಕೆ ಸೇರಿತ್ತು. ಆದರೆ ೧೮೨೯ರಲ್ಲಿ ಅದು ಸ್ವತಂತ್ರವಾಯಿತು.

(೬) **ರಶಿಯಾ**—ಯುರೋಪದ ಪೂರ್ವ ಮತ್ತು ಏಶಿಯದ ಉತ್ತರ ಭಾಗದಲ್ಲಿ ರಶಿಯದ ದೊಡ್ಡ ಸಾಮ್ರಾಜ್ಯವು ಪಸರಿಸಿತ್ತು. ರಶಿಯದ ಉತ್ತರ ಭಾಗದಲ್ಲಷ್ಟೆ ಕರಾವಳಿ (ಸಮುದ್ರತೀರ) ಇರುವುದು. ಆದರೆ ಅದು ಮೇಲಿಂದ ಮೇಲೆ ಹಿಮದಿಂದ ಹೆರುತ್ತಿದ್ದುದರಿಂದ ಹಡಗುಪಡೆಗಾಗಲಿ ವ್ಯಾಪಾರಕ್ಕಾಗಲಿ ಉಪಯುಕ್ತವಾಗಿರಲಿಲ್ಲ. ರಶಿಯದ ಆಗ್ನೇಯಕ್ಕೆ ಕಪ್ಪುಸಮುದ್ರವು. ಆದರೆ ಅದರಿಂದ ಭೂಮಧ್ಯಸಮುದ್ರಕ್ಕೆ ಕೂಡುವ ಬಾಸ್ಫೊರಸ ಸಾಮುದ್ರಧುನಿಯ ಮೇಲೆ ತುರ್ಕಸ್ತಾನದ ವರ್ಚಸ್ಸು ಇದ್ದುದರಿಂದ ಹಡಗುಪಡೆಯ ಸಂಚಾರಕ್ಕೆ ಅದು ಸಾಕಷ್ಟು ಉಪಯುಕ್ತವಾಗಿರಲಿಲ್ಲ. ಆದುದರಿಂದ ದಕ್ಷಿಣಕ್ಕೆ ಭೂಮಧ್ಯ ಸಮುದ್ರದವರೆಗೆ ತನ್ನ ದೇಶವನ್ನು ಬೆಳಿಸಬೇಕು, ತುರ್ಕಸ್ತಾನದ ರಾಜಧಾನಿ ಕಾನ್‌ಸ್ಟಾಂಟಿನೋಪಲನ್ನು ಗೆಲ್ಲಬೇಕು, ಆಗ್ನೇಯದ ಕಡೆಗೆ ಹಿಂದುಸ್ಥಾನದ ಸೀಮೆಯಿಂದ ಇರಾಣದ ಉಪಸಾಗರದ ವರೆಗಿನ ಪ್ರಾಂತವನ್ನು ತನ್ನ ಅಧಿಕಾರಕ್ಕೆ ಒಳಪಡಿಸಬೇಕು ಎಂಬುದು ರಶಿಯದ ಮಹತ್ವಾಕಾಂಕ್ಷೆಯಾಗಿದ್ದಿತು.

**ಇಂಗ್ಲಂಡಿನ ಪರರಾಷ್ಟ್ರೀಯ ನೀತಿ**—ಇಂತು ವಿಕ್ಟೋರಿಯಾ ರಾಣಿಯ

ದೀರ್ಘವಾದ ಆಳಿಕೆಯಲ್ಲಿ ಇಟಲಿಯ ಸಂಸ್ಥಾನಗಳು ಒಂದುಗೂಡಿದುವು (೧೮೬೧), ಪ್ರಶಿಯದ ನಾಯಕತ್ವದಲ್ಲಿ ಜರ್ಮನ ಸಾಮ್ರಾಜ್ಯವು ಸ್ಥಾಪಿತ ವಾಯಿತು (೧೮೭೧), ಫ್ರಾನ್ಸಿನಲ್ಲಿ ಪ್ರಜಾಪ್ರಭುತ್ವವು ಏರ್ಪಟ್ಟಿತು (೧೮೭೧), ರಶಿಯದ ಸಾಮ್ರಾಜ್ಯವು ಬೆಳೆದು ಭೂಮಧ್ಯಸಮುದ್ರ, ಇರಾಣದ ಉಪ ಸಾಗರ ಮತ್ತು ಹಿಂದುಸ್ಥಾನದ ಮೇರೆಯ ವರೆಗೆ ವಿಸ್ತಾರಗೊಳ್ಳಬೇಕೆಂದು ಪ್ರಯತ್ನಗಳು ನಡೆದುವು. ಯುರೋಪದ ರಾಷ್ಟ್ರಗಳ ಅಂತಃಸ್ಥ ಘಟನೆಗಳಲ್ಲಿ ಮತ್ತು ಹೋರಾಟಗಳಲ್ಲಿ ಕ್ರಿಮಿಯನ ಯುದ್ಧವೊಂದನ್ನುಳಿದು ಇಂಗ್ಲಂಡು ಪ್ರತ್ಯಕ್ಷ ವಾಗಿ ಭಾಗಿಯಾಗಲಿಲ್ಲ. ಆದರೆ ಯುರೋಪದಲ್ಲಿ ಯಾವುದೊಂದು ರಾಷ್ಟ್ರವು ಹೆಚ್ಚು ಬಲವಂತವಾಗದೆ ರಾಜಕೀಯ ಸಮತೂಕವು ಉಳಿಯಬೇಕು, ಸಮು ದ್ರದ ಮೇಲೆ ಇಂಗ್ಲಂಡಿನ ವರ್ಚಸ್ಸು ಬಾಳಬೇಕು, ಹಿಂದುಸ್ಥಾನಕ್ಕೂ ಅಲ್ಲಿಗೆ ಹೋಗುವ ಮಾರ್ಗಗಳಿಗೂ ಯಾವ ರಾಷ್ಟ್ರದಿಂದಲೂ ಬಾಧೆಯುಂಟಾಗಬಾ ರದು, ಇಂಗ್ಲಂಡಿನ ವ್ಯಾಪಾರವು ಬೆಳೆಯಬೇಕು, ಬ್ರಿಟಿಶ ಸಾಮ್ರಾಜ್ಯದ ಮತ್ತು ಉಪನಿವೇಶಗಳ ವೃದ್ಧಿಯಾಗಬೇಕು ಎಂಬುದಕ್ಕೆ ಇಂಗ್ಲಂಡು ಪ್ರಯತ್ನಿಸಿತು. ಇದಕ್ಕಾಗಿ ಅದು ಅಫಗಾಣಿಸ್ತಾನ, ಇರಾಣ, ರಶಿಯ, ಇಜಿಪ್ತ, ಚೀನ, ಈ ರಾಷ್ಟ್ರಗಳೊಡನೆ ಕಾದಬೇಕಾಯಿತು. ಇಂಗ್ಲಂಡಿನ ಈ ಕಾಲದ ರಾಜ್ಯತಂತ್ರಜ್ಞ ರಲ್ಲಿ **ಲಾರ್ಡ ಪಾಮರ್ಸ್ಟನ್** (೧೮೩೦–೧೮೬೫), **ಡಿಝ್ರೇಲಿ** (೧೮೭೪–೧೮೮೦), ಮತ್ತು **ಲಾರ್ಡ ಸೆಲಿಸ್‌ಬರಿ** (೧೮೮೫–೮೬; ೧೮೮೬–೯೨; ೧೮೯೫–೧೯೦೨) ಇವರು ಪರರಾಷ್ಟ್ರೀಯ ವಿಷಯಗಳಿಗೆ ಹೆಚ್ಚು ಲಕ್ಷ್ಯ ವೀಯುವವರಾಗಿದ್ದರು. ಬ್ರಿಟಿಶ್ ಸಾಮ್ರಾಜ್ಯದ ಪ್ರಭಾವ ವೈಭವಗಳನ್ನು ಹೆಚ್ಚಿ ಸಲು ಇವರು ಬಹುವಾಗಿ ಪ್ರಯತ್ನಿಸಿದರು.

**ರಶಿಯದ ವಿರುದ್ಧ ನೀತಿ**—ರಶಿಯದ ಸುಳಿದಾಟದಿಂದ ಹಿಂದುಸ್ಥಾನಕ್ಕೂ ಸಮುದ್ರದ ಮೇಲಿನ ವರ್ಚಸ್ಸಿಗೂ ವ್ಯಾಪಾರಕ್ಕೂ ಬಾಧೆ ಬರುವುದೆಂದು ಬಗೆದು ಇಂಗ್ಲಂಡು ಕೆಳಗೆ ಕಾಣಿಸಿದಂತೆ ಕದನಗಳಲ್ಲಿ ತೊಡಗಬೇಕಾಯಿತು:—

(೧) **ಅಫಗಾಣಿಸ್ತಾನದ ಮೊದಲನೆಯ ಯುದ್ಧವು, ೧೮೩೯-೪೨**—ಅಫಗಾಣಿಸ್ತಾನದಲ್ಲಿ ರಾಜ್ಯಕ್ರಾಂತಿಯಾಗಿ ಅಲ್ಲಿಯ ಅಮೀರನಾದ ಶಹಾಸುಜನು ಪಲಾಯನ ಮಾಡಬೇಕಾಯಿತು. ದೋಸ್ತ ಮಹಮದನು ಅಫ ಗಾಣಿಸ್ತಾನದ ಅಮೀರನಾದನು. ಈ ದೋಸ್ತ ಮಹಮದನೊಡನೆ ರಶಿಯವು ತಂತ್ರವನ್ನು ಹೂಡಿತು. ಅಲ್ಲಿಯ ಮೊದಲಿನ ಅಮೀರ ಶಹಾಸುಜನು ಹಿಂದು ಸ್ಥಾನಕ್ಕೆ ಬಂದು ತನಗೆ ಅಫಗಾಣಿಸ್ತಾನದ ಪಟ್ಟವನ್ನು ದೊರಕಿಸಿಕೊಡಲು

ಇಂಗ್ಲಿಶರ ಸಾಹಾಯ್ಯವನ್ನು ಬೇಡಿದನು. ಇಂಗ್ಲಿಶರೊಡನೆ ಸ್ನೇಹದಿಂದ ವರ್ತಿಸುವ ಅಮೀರನು ಅಫಗಾಣಿಸ್ತಾನದ ಅಮೀರನಾಗಿರುವುದು ಅಗತ್ಯವಿದ್ದಿತು. ಆದುದರಿಂದ ದೋಸ್ತ ಮಹಮದನು ರಶಿಯದೊಡನೆ ತಂತ್ರ ನಡೆಸಿದುದನ್ನು ಕಂಡು ಆತನನ್ನು ತಳ್ಳಿ ಶಹಾಸುಜನಿಗೆ ಪಟ್ಟಗಟ್ಟಲು ಇಂಗ್ಲಿಶರು ಸೈನ್ಯವನ್ನು ಕಳುಹಿದರು. ಈ ಸೈನ್ಯವು ಜಯಶೀಲವಾಯಿತು. ಶಹಾಸುಜನಿಗೆ ಅಫಗಾಣಿಸ್ತಾನದ ಪಟ್ಟವು ದೊರೆತಿತು. ಆದರೆ ಶಹಾಸುಜನು ಜನರಿಗೆ ಲೋಕಪ್ರಿಯನಿರದುದರಿಂದ ಕೆಲದಿನಗಳಲ್ಲಿ ಆತನ ಕೊಲೆಯಾಯಿತು. ಆತನ ಸಂರಕ್ಷಣೆಗೆ ಇರಿಸಿದ ಬ್ರಿಟಿಶ್ ಸೇನೆಯೂ ನಾಶಹೊಂದಿತು. ಆಗ ಜನರಲ ನಾಟ ಮತ್ತು ಪೋಲಕ್ ಇವರ ನೇತೃತ್ವದಲ್ಲಿ ದಂಡು ಕಳಿಸಲ್ಪಟ್ಟಿತು. ಅವರು ಕಾಬೂಲನ್ನು ವಶಪಡಿಸಿಕೊಂಡು ದೋಸ್ತ ಮಹಮದನನ್ನು ಕೈಸೆರೆ ಮಾಡಿದರು. ಅನಂತರ ರಶಿಯಾ ಮತ್ತು ಹಿಂದುಸ್ಥಾನ ಇವುಗಳ ನಡುವೆ ತಟಸ್ಥಸಂಸ್ಥಾನವಾಗಿ ಅಫಗಾಣಿಸ್ತಾನವನ್ನು ಇರಿಸುವುದು ಯೋಗ್ಯವಾಗಿ ತೋರಿದುದರಿಂದ ಅಫಗಾಣಿಸ್ತಾನದ ಒಳಜಗಳದಲ್ಲಿ ಕೈಹಾಕಬಾರದೆಂದು ಇಂಗ್ಲಂಡು ನಿರ್ಧರಿಸಿತು, ಮತ್ತು ದೋಸ್ತ ಮಹಮದನನ್ನೇ ಅಫಗಾಣಿಸ್ತಾನದ ಅಮೀರನಾಗಿ ಮಾಡಿತು.

**(೨) ಅಫಗಾಣಿಸ್ತಾನದ ಎರಡನೆಯ ಯುದ್ಧವು (೧೮೭೯-೮೦)**—ಅಫಗಾಣಿಸ್ತಾನದ ಒಳಜಗಳದಲ್ಲಿ ಸೇರಬಾರದಾಗಿ ಇಂಗ್ಲಂಡು ನಿರ್ಧರಿಸಿದ್ದರೂ ೧೮೭೯ರಲ್ಲಿ ಅಫಗಾಣಿಸ್ತಾನದ ಅಮೀರನಾದ ಶೇರಅಲಿ ರಶಿಯದೊಡನೆ ಕಾರಸ್ಥಾನವನ್ನು ಮಾಡಿ ರಶಿಯದ ರಾಯಭಾರಿಯನ್ನು ತನ್ನ ಓಲಗದಲ್ಲಿ ಬರಮಾಡಿಕೊಂಡುದಲ್ಲದೆ ಇಂಗ್ಲಿಶ್ ರಾಯಭಾರಿಯನ್ನು ಅಫಗಾಣಿಸ್ತಾನದಲ್ಲಿ ಬರಗೊಡಲಿಲ್ಲ. ಆಗ ಅಫಗಾಣಿಸ್ತಾನದಲ್ಲಿ ರಶಿಯದ ಚಂಚು ಪ್ರವೇಶವಾಗಿ ಹಿಂದುಸ್ಥಾನಕ್ಕೆ ಬಾಧೆ ಬರುವುದೆಂಬ ಭೀತಿಯಿಂದ ಅಫಗಾಣಿಸ್ತಾನದೊಡನೆ ಕದನವು ಪ್ರಾರಂಭಿಸಲ್ಪಟ್ಟಿತು. ಈ ಯುದ್ಧದಲ್ಲಿ ಅಫಗಾಣಿಸ್ತಾನದ ಪರಾಭವವಾಯಿತು. ಇದೇ ಕಾಲಕ್ಕೆ ಅಲ್ಲಿಯ ಅಮೀರ ಶೇರಅಲಿ ಮರಣಹೊಂದಿದನು. ಆಗ ಆತನ ಮಗ ಯಾಕೂಬಖಾನನು ಇಂಗ್ಲಿಶರೊಡನೆ ಮೈತ್ರಿಯ ಸಂಧಿಯನ್ನು ಮಾಡಿಕೊಂಡುದರಿಂದ ಆತನನ್ನು ಅಲ್ಲಿಯ ಅಮೀರನಾಗಿ ಮಾಡಲಾಯಿತು. ಆದರೆ ಹಿಂದಿನಂತೆ ಈ ಸಲವೂ ಅಲ್ಲಿಯ ಇಂಗ್ಲಿಶ್ ರಾಯಭಾರಿಯ ಕೊಲೆಯಾಗಿ ಇಂಗ್ಲಿಶ್ ಸೈನ್ಯದ ಸಂಹಾರವಾದುದರಿಂದ ಇದರ ಸೇಡನ್ನು ತೀರಿಸಲು **ಲಾರ್ಡ ರಾಬರ್ಟ್ಸ**ನನ್ನು ಅಲ್ಲಿಗೆ ಕಳುಹಲಾಯಿತು. ಆತನು ಅಫಗಾಣ ಜನರನ್ನು ಸೋಲಿಸಿ ಶೇರಅಲಿಯ ಅಣ್ಣನ ಮಗನಾದ ಅಬ್ದುಲ ರಹಿಮಾನನನ್ನು ಅಮೀರನಾಗಿ ಸ್ಥಾಪಿಸಿದನು.

ಬಳಿಕ ಅಫಗಾಣಿಸ್ತಾನದ ಅಂತಃಸ್ಥ ತೊಡಕಿನಲ್ಲಿ ಸೇರಬಾರದಾಗಿ ನಿಶ್ಚಯಿಸಿ ಇಂಗ್ಲಿಶ್ ಸೇನೆ ಅಫಗಾಣಿಸ್ತಾನದಿಂದ ಹಿಂದಿರುಗಿತು (೧೮೮೦).

(೩) **ಇರಾಣದೊಡನೆ ಯುದ್ಧವು**—ಅಫಗಾಣಿಸ್ತಾನದಂತೆ ಇರಾಣದ ಶಹನನ್ನು ತನ್ನ ಅಂಕೆಯಲ್ಲಿ ತರಲು ರಶಿಯವು ಪ್ರಯತ್ನಿಸುತ್ತಿದ್ದಿತು. ೧೮೫೫ರಲ್ಲಿ ಕ್ರಿಮಿಯನ ದ್ವೀಪಕಲ್ಪದಲ್ಲಿ ಇಂಗ್ಲಂಡ್ ಮತ್ತು ರಶಿಯಾ ಇವುಗಳ ನಡುವೆ ಕಾಳೆಗವು ಪ್ರಾರಂಭವಾದ ಬಳಿಕ ರಶಿಯದ ಅಂತಃಪ್ರೇರಣೆಯಿಂದ ಇರಾಣದ ಶಹನು ಅಫಗಾಣಿಸ್ತಾನದ ಮೇಲೆ ದಂಡೆತ್ತಿಹೋದನು. ಇದನ್ನು ತಡೆಯಲು ಹಿಂದುಸ್ಥಾನದಿಂದ ಇರಾಣಕ್ಕೆ ಸೈನ್ಯವು ಕಳಿಸಲ್ಪಟ್ಟಿತು. ಈ ಸೈನ್ಯವು ಇರಾಣಿ ದಂಡನ್ನು ಸೋಲಿಸಿ ಇರಾಣಿ ಆಖಾತದಲ್ಲಿ ಇಂಗ್ಲಿಶರ ವರ್ಚಸ್ಸನ್ನು ಸ್ಥಾಪಿಸಿತು.

(೪) **ಕ್ರಿಮಿಯನ್ ಯುದ್ಧವು (೧೮೫೪-೫೬)—ಕಾರಣಗಳು**—ದಕ್ಷಿಣಕ್ಕೆ ಭೂಮಧ್ಯಸಮುದ್ರದ ವರೆಗೆ ತನ್ನ ರಾಜ್ಯವನ್ನು ಬೆಳಿಸಬೇಕೆಂದು ರಶಿಯದ ಬಹುದಿನದ ಬಯಕೆಯಿದ್ದಿತು. ಅದಕ್ಕಾಗಿ ತುರ್ಕಸ್ತಾನದ ರಾಜಧಾನಿಯಾದ ಕಾನ್‌ಸ್ಟಾಂಟಿನೋಪಲಿನ ಮೇಲೆ ಅದರ ಕಣ್ಣು ಇದ್ದಿತು. ತುರ್ಕಸ್ತಾನದ ಮೇಲೆ ದಂಡಯಾತ್ರೆ ಮಾಡಲು ರಶಿಯವು ಒಂದು ನೆಪವನ್ನು ಹುಡುಕುತ್ತಿತ್ತು. ತುರ್ಕಸ್ತಾನದ ಸಾಮ್ರಾಜ್ಯದಲ್ಲಿ ಅನೇಕ ಕ್ರೈಸ್ತರಿದ್ದು ತಮ್ಮ ಮೇಲೆ ಬಹಳ ಅನ್ಯಾಯವು ನಡೆವುದೆಂದು ಅವರು ದೂರುತ್ತಿದ್ದರು. ಈ ಕ್ರೈಸ್ತ ಜನಾಂಗವನ್ನು ರಕ್ಷಿಸುವ ಅಧಿಕಾರವನ್ನು ತನಗೆ ಕೊಡಬೇಕೆಂದು ರಶಿಯದ ಝಾರನು ತುರ್ಕಸ್ತಾನದ ಸುಲ್ತಾನನಿಗೆ ಬೇಡಿದನು (೧೮೫೩). ತನ್ನೀ ಬೇಡಿಕೆಯನ್ನು ಇಂಗ್ಲಂಡು ವಿರೋಧಿಸಬಾರದೆಂದು ತುರ್ಕಸ್ತಾನದ ವಶದಲ್ಲಿದ್ದ ಇಜಿಪ್ತ ಪ್ರಾಂತವನ್ನು ಮತ್ತು ಕ್ರೇಟ ದ್ವೀಪವನ್ನು ಇಂಗ್ಲಂಡು ತೆಗೆದುಕೊಳ್ಳಬಹುದೆಂದು ರಶಿಯವು ಇಂಗ್ಲಂಡಿಗೆ ಸೂಚಿಸಿತು. ಆದರೆ ತುರ್ಕಸ್ತಾನದ ಅಧಿಕಾರದಲ್ಲಿ ರಶಿಯದ ಕೈ ಸೇರಿದರೆ ಭೂಮಧ್ಯಸಮುದ್ರದ ವರೆಗೆ ರಶಿಯದ ರಾಜ್ಯವು ಬೆಳೆದು ಅದರಿಂದ ಸಮುದ್ರದ ಮೇಲಿನ ತನ್ನ ವರ್ಚಸ್ಸಿಗೂ ಪೂರ್ವದ ಕಡೆಯ ಹಿಂದುಸ್ಥಾನ ದೇಶಕ್ಕೂ ಆತಂಕವು ಬರುವುದೆಂದು ಇಂಗ್ಲಂಡಿಗೆ ಭಯವೆನಿಸುತ್ತಿತ್ತು. ತುರ್ಕಸ್ತಾನದ ಆಡಳಿತದಲ್ಲಿ ರಶಿಯವು ಕೈಸೇರಿಸಬಾರದೆಂದು ಫ್ರಾನ್ಸಿನ ಅಧಿಪತಿ ೩ನೆಯ ನೆಪೋಲಿಯನನಿಗೂ ಎನಿಸುತ್ತಿತ್ತು. ಆದುದರಿಂದ ಇಂಗ್ಲಂಡ್ ಫ್ರಾನ್ಸುಗಳ ಅಭಿಪ್ರಾಯದಂತೆ ತುರ್ಕಸ್ತಾನದ ಸುಲ್ತಾನನು ರಶಿಯದ ಬೇಡಿಕೆಯನ್ನು ಒಪ್ಪಲಿಲ್ಲ. ಅದಕ್ಕಾಗಿ ರಶಿಯನ್ ಸೈನ್ಯವು ತುರ್ಕಸ್ತಾನದ ಸಾಮ್ರಾಜ್ಯಕ್ಕೆ ಒಳಪಟ್ಟ ಡನ್ಯೂಬ ನದಿಯ ಮುಖದ ಬಳಿಯ ಬಾಲ್ಕನ್ ದ್ವೀಪಕಲ್ಪದ ಪ್ರಾಂತ

ದಲ್ಲಿ ದಾಳಿಯಿಟ್ಟಿತು (ಜುಲೈ ೧೮೫೩). ಅನಂತರ ಕಪ್ಪುಸಮುದ್ರ ತೀರದ ಸೀನೋಪ ಎಂಬಲ್ಲಿಯ ತುರ್ಕಸ್ತಾನದ ಹಡಗುಪಡೆಯ ಪಾಳ್ಯದ ಮೇಲೆ ದಾಳಿಮಾಡಿತು (ನವೆಂಬರ ೧೮೫೩). ಆದುದರಿಂದ ತುರ್ಕಸ್ತಾನವು ರಶಿಯದ ವಿರುದ್ಧ ಯುದ್ಧವನ್ನು ಸಾರಿತು. ಆಗ ಇಂಗ್ಲಂಡ್ ಮತ್ತು ಫ್ರಾನ್ಸ್ ಈ ರಾಷ್ಟ್ರಗಳು ತುರ್ಕಸ್ತಾನದ ಸಾಹಾಯ್ಯಕ್ಕೆ ಕಪ್ಪುಸಮುದ್ರದಲ್ಲಿ ತಮ್ಮ ಹಡಗುಪಡೆಯನ್ನು ಕಳುಹಿ, ಕದನವನ್ನು ನಿಲ್ಲಿಸಲು ರಶಿಯಕ್ಕೆ ಕಟ್ಟೋಲೆಯನ್ನು ಬರೆದುವು. ಅದಕ್ಕೆ ರಶಿಯದಿಂದ ತೃಪ್ತಿಕರವಾದ ಉತ್ತರವು ಬಾರದುದರಿಂದ ಇಂಗ್ಲಂಡ್ ಫ್ರಾನ್ಸಗಳು ರಶಿಯದ ವಿರುದ್ಧ ಸಮರವನ್ನು ಸಾರಿದುವು (ಮಾರ್ಚ ೧೮೫೪).

ಯುದ್ಧವು—ಬಾಲ್ಕನ್ ದ್ವೀಪಕಲ್ಪದ ಮೇಲೆ ಏರಿಬರುವ ರಶಿಯನ್ ಸೇನೆಯನ್ನು ತುರ್ಕಸ್ತಾನವು ತನ್ನ ಸೇನೆಯನ್ನು ಕಳುಹಿ ತಡೆದು ನಿಲ್ಲಿಸಿತು. ಇದರಿಂದ ರಶಿಯನ್ ಸೈನ್ಯವು ಬಾಲ್ಕನ್ ದ್ವೀಪಕಲ್ಪದಿಂದ ಹಿಂದೆಗೆಯಿತು. ಇತ್ತ ಫ್ರೆಂಚ ಮತ್ತು ಇಂಗ್ಲಿಶ್ ಹಡಗುಪಡೆ ಕಪ್ಪುಸಮುದ್ರದಲ್ಲಿ ತುರ್ಕಸ್ತಾನದ ಸಾಹಾಯ್ಯಕ್ಕೆ

## ಕ್ರಿಮಿಯನ್ ಯುದ್ಧವು.




ಬಂದುದರಿಂದ ರಶಿಯನ್ ಹಡಗುಪಡೆ ಹಿಂದಿರುಗಿ ಆಶ್ರಯಕ್ಕಾಗಿ ಕ್ರಿಮಿಯಾ ದ್ವೀಪಕಲ್ಪದ ಸೆಬಾಸ್ಟಪೂಲ ಉಪಸಾಗರಕ್ಕೆ ತೆರಳಿತು. ಸೆಬಾಸ್ಟಪೂಲವು ಕ್ರಿಮಿಯಾ ದ್ವೀಪಕಲ್ಪದಲ್ಲಿ ಭದ್ರವಾದ ಕೋಟೆಯೂ ಸುರಕ್ಷಿತವಾದ ಹಡಗು

ಪಡೆಯ ನೆಲೆಯೂ ಆಗಿದ್ದಿತು. ಆದುದರಿಂದ ಅದನ್ನು ಸ್ವಾಧೀನಪಡಿಸಿದರೆ ಕಪ್ಪು ಸಮುದ್ರದಲ್ಲಿಯ ರಶಿಯದ ಮಹತ್ವವು ಕಡಿಮೆಯಾಗುವುದೆಂದು ನೆನೆದು ಮಿತ್ರರಾಷ್ಟ್ರಗಳು ಹಾಗೆ ಮಾಡಲು ನಿರ್ಧರಿಸಿದುವು. ಅನಂತರ ಫ್ರೆಂಚ ಮತ್ತು ಇಂಗ್ಲಿಶ್ ಸೈನ್ಯವು ಕ್ರಿಮಿಯದಲ್ಲಿ ಇಳಿದು **ಆಲ್ಮಾ** ಎಂಬಲ್ಲಿ ರಶಿಯನ್ ಸೇನೆಯನ್ನು ಸೋಲಿಸಿತು (ಸಪ್ಟೆಂಬರ ೧೮೫೪). ಬಳಿಕ ಮಿತ್ರರಾಷ್ಟ್ರಗಳ ಒಂದು ಪಥಕವು **ಬಲಾಕ್ಲವಾ** ಎಂಬಲ್ಲಿ ತನಗಿಂತ ಬಹಳ ಹಿರಿದಾದ ರಶಿಯನ್ ಸೈನ್ಯದೊಡನೆ ಆವೇಶದಿಂದ ಕಾದಿ ಶೌರ್ಯವನ್ನು ಮೆರೆಯಿಸಿತು (ಅಕ್ಟೋಬರ ೧೮೫೪). ಇದಲ್ಲದೆ **ಇಂಕರಮನ್** ಎಂಬಲ್ಲಿಯೂ ರಶಿಯನ್ ಸೈನ್ಯವು ಸೋಲಿಸಲ್ಪಟ್ಟಿತು. ಆದರೆ ಸೆಬಾಸ್ಟಪೂಲ ಕೋಟೆಯನ್ನು ಗೆಲ್ಲಲು ಶಕ್ಯವಾಗಲಿಲ್ಲ. ಆದುದರಿಂದ ಮಿತ್ರರಾಷ್ಟ್ರಗಳ ದಂಡುಗಳು ಆ ಕೋಟೆಗೆ ಮುತ್ತಿಗೆಯಿಕ್ಕಿದುವು. ಈ ಮುತ್ತಿಗೆ ೯ ತಿಂಗಳಗಳ ವರೆಗೆ ನಡೆಯಿತು. ಆಗ ಚಳಿಗಾಲವಿದ್ದುದರಿಂದ ಅತ್ಯುಗ್ರ



ಲಾರ್ಡ ಪಾಮರ್ಸ್ಟನ್

ಚಳಿ ಬೀಳುತ್ತಿದ್ದಿತು. ಇಂಗ್ಲಂಡಿನ ಮಂತ್ರಿಮಂಡಲದವರು ಸೈನ್ಯದ ಅರಿವೆ ಅಂಚಡಿ ಮತ್ತು ಅನ್ನಸಾಮಗ್ರಿಯ ವ್ಯವಸ್ಥೆಯನ್ನು ಸರಿಯಾಗಿ ಮಾಡದೆ ಇದ್ದು

ದಕ್ಕೆ ಇಂಗ್ಲಿಶ ಸೇನೆ ಬಹಳ ಬವಣೆಗೊಂಡಿತು. ಅದರಲ್ಲಿಯೆ ಕಾಲರಾ ಮತ್ತು ವಿಷಮಜ್ವರದ ಪಿಡುಗು ಪ್ರಾರಂಭವಾದುದರಿಂದ ಸೈನಿಕರ ಅವಸ್ಥೆ ಬಹು ಕಷ್ಟಕರವಾಯಿತು. ಆ ಕಾಲಕ್ಕೆ ಲಾರ್ಡ ಅಬರ್‌ಡೀನನು ಮುಖ್ಯ ಮಂತ್ರಿಯಾಗಿದ್ದನು. ಸೈನ್ಯದ ಅವ್ಯವಸ್ಥೆಯ ಮೂಲಕ ಮಂತ್ರಿಮಂಡಲದ ಮೇಲೆ ಪಾರ್ಲಿಮೆಂಟಿನಲ್ಲಿಯೂ ಬೇರೆ ಕಡೆಗೂ ಟೀಕೆ ಆಗತೊಡಗಿತು. ಯುದ್ಧವ್ಯವಸ್ಥೆಯನ್ನು ಸಮರ್ಪಕವಾಗಿ ಮಾಡುವವರು ಯಾರಾದರೂ ಇದ್ದರೆ ಅದು ಪಾಮರ್ಸ್ಟನನೊಬ್ಬನೇ ಎಂದು ಎಲ್ಲರೂ ಹೇಳತೊಡಗಿದರು. ಆಗ ಲಾರ್ಡ ಅಬರ್‌ಡೀನನು ಅಧಿಕಾರತ್ಯಾಗವನ್ನು ಮಾಡಿದನು ಮತ್ತು ಲಾರ್ಡ ಪಾಮರ್ಸ್ಟನನು ಮುಖ್ಯ ಮಂತ್ರಿಯಾದನು (೧೮೫೫). ಈ ಕಾಲಕ್ಕೆ ಲಾರ್ಡ ಪಾಮರ್ಸ್ಟನನು ೭೦ ವರ್ಷದವನಿದ್ದನು. ಆದರೂ ಆತನು ಬಹು ಉತ್ಸಾಹದಿಂದ ಯುದ್ಧದ ವಿಷಯದಲ್ಲಿ ಯೋಗ್ಯ ವ್ಯವಸ್ಥೆಯನ್ನು ಮಾಡಿದನು ಮತ್ತು ಸಮರ್ಥರಾದ ಅಧಿಕಾರಿಗಳನ್ನು ಕಳುಹಿದನು. ಕೊನೆಗೆ ೧೮೫೫ರ ಸಪ್ಟೆಂಬರದಲ್ಲಿ ಮಿತ್ರರಾಷ್ಟ್ರದವರು **ಸೆಬಾಸ್ಟಪೂಲ** ಕೋಟೆಯನ್ನು ಗೆದ್ದುಕೊಂಡರು.

ಈ ಯುದ್ಧವು ನಡೆದಿರುವಾಗ ಅಲ್ಲಿ ಗಾಯಪಟ್ಟವರು ಮತ್ತು ಬೇನೆಯವರು ಗೋಳಾಡುತ್ತಿರುವರು ಎಂಬುದನ್ನು ಕೇಳಿ **ಫ್ಲಾರೆನ್ಸ ನೈಟಿಂಗೇಲ** ಎಂಬವಳು ಕೆಲವು ಸೇವಿಕೆಯರೊಡನೆ ಅಲ್ಲಿಗೆ ಹೋಗಿ ಆ ಸೈನಿಕರ ಆರಯಿಕೆ ಮಾಡುವ ಭಾರವನ್ನು ವಹಿಸಿದಳು. ಸಾಹಸದ ಮತ್ತು ಪರೋಪಕಾರದ ಈ ಕಾರ್ಯವನ್ನು ನೋಡಿ ಎಲ್ಲರ ಲಕ್ಷ್ಯವು ಆಕೆಯ ಕಡೆಗೆ ಸೆಳೆದಿತು. ಮುಂದೆ ಯುದ್ಧಪ್ರಸಂಗದಲ್ಲಿ ಸೈನಿಕರಿಗೆ ಆರೋಗ್ಯೋಪಚಾರ ಮಾಡುವ ವಿಭಾಗದ ಪುನರ್ಘಟನೆಯ ಕಾರ್ಯವು ಆಕೆಯ ನೇತೃತ್ವದಲ್ಲಿ ನಡೆಯಿತು.

**ಪೆರಿಸಿನ ಒಡಂಬಡಿಕೆ, ೧೮೫೬**—ಸೆಬಾಸ್ಟಪೂಲ ಕೋಟೆ ಕೈಬಿಟ್ಟ ಬಳಿಕ ೧೮೫೬ರಲ್ಲಿ ರಶಿಯವು ಮಿತ್ರರಾಷ್ಟ್ರಗಳೊಡನೆ ಒಪ್ಪಂದವನ್ನು ಮಾಡಿಕೊಂಡಿತು. ಈ ಒಪ್ಪಂದದಲ್ಲಿ ಈ ಮಾತುಗಳು ನಿರ್ಣಯಿಸಲ್ಪಟ್ಟುವು:—(೧) ಕಪ್ಪು ಸಮುದ್ರದಲ್ಲಿ ರಶಿಯವು ತನ್ನ ಯುದ್ಧನೌಕೆಗಳನ್ನು ಇಡಕೂಡದು. (೨) ತುರ್ಕಸ್ಥಾನದ ಸುಲ್ತಾನನು ತನ್ನ ಸಾಮ್ರಾಜ್ಯದಲ್ಲಿಯ ಕ್ರೈಸ್ತ ಪ್ರಜೆಗಳನ್ನು ಒಳಿತಾಗಿ ನಡೆಯಿಸಿಕೊಳ್ಳಬೇಕು.

**ಇಂಗ್ಲಂಡಿನ ಮೇಲೆ ಕ್ರಿಮಿಯನ್ ಯುದ್ಧದ ಪರಿಣಾಮಗಳು**—ಕ್ರಿಮಿಯನ್ ಯುದ್ಧದಲ್ಲಿ ಇಂಗ್ಲಂಡಿನ ೨೦,೦೦೦ ದಂಡಾಳುಗಳು ಮೃತ್ಯುವಶರಾದರು. ಅದರಿಂದ ಸೈನ್ಯದ ಪುನರ್ಘಟನೆಯನ್ನು ಮಾಡುವ ಅಗತ್ಯವು ತೋರಿ ಆ ಬಗೆಗೆ

ತಕ್ಕ ವ್ಯವಸ್ಥೆ ಮಾಡಲಾಯಿತು. ಈ ಯುದ್ಧದ ನಿಮಿತ್ತದಿಂದ ಬಹಳ ಸಾಲ ವನ್ನು ಮಾಡಬೇಕಾದುದರಿಂದ ರಾಷ್ಟ್ರೀಯ ಸಾಲವು ಬಹಳವಾಗಿ ಬೆಳೆಯಿತು.

(೫) **ತುರ್ಕಸ್ತಾನ ಮತ್ತು ರಶಿಯಾ ಇವುಗಳ ನಡುವೆ ಯುದ್ಧ,** (೧೮೭೭-೭೮)—ಕ್ರಿಮಿಯನ ಯುದ್ಧದಲ್ಲಿ ಸೋತುದರಿಂದ ತುರ್ಕಸ್ತಾನದ ವಶದಲ್ಲಿದ್ದ ಭೂಮಧ್ಯ ಸಮುದ್ರದ ಹತ್ತಿರದ ಪ್ರದೇಶವನ್ನು ಗೆಲ್ಲಬೇಕೆಂಬ ರಶಿಯದ ಮಹತ್ವಾಕಾಂಕ್ಷೆ ಪೂರ್ಣವಾಗಿರಲಿಲ್ಲ. ಸಂಧಿ ದೊರೆತಲ್ಲಿ ಈ ಆಕಾಂಕ್ಷೆಯನ್ನು ಪೂರ್ಣಗೊಳಿಸಲು ಅದು ಹವಣಿಸುತ್ತಿದ್ದಿತು. ೧೮೭೦ರಲ್ಲಿ ಯುರೋಪದ ಕೆಲ ರಾಷ್ಟ್ರಗಳು ತಮ್ಮತಮ್ಮೊಳಗಿನ ಕಾದಾಟದಲ್ಲಿ ತೊಡಗಿರುವುದನ್ನು ನೋಡಿ ಅದು ಕಪ್ಪು ಸಮುದ್ರದಲ್ಲಿ ಸಮರನೌಕೆಗಳನ್ನು ಇಡಲಾರಂಭಿಸಿತು. ಬಾಲ್ಕನ್ ದ್ವೀಪಕಲ್ಪದ ಕ್ರೈಸ್ತ ಪ್ರಜೆಗಳನ್ನು ಒಳಿತಾಗಿ ನಡೆಯಿಸಿಕೊಳ್ಳುವುದಾಗಿ ತುರ್ಕಸ್ತಾನವು ಒಡಂಬಟ್ಟಿದ್ದರೂ ತಮ್ಮ ಮೇಲೆ ಅನ್ಯಾಯವಾಗುತ್ತಿದೆಂದು ಅಲ್ಲಿಯ ಕ್ರೈಸ್ತ ಪ್ರಜೆಗಳ ದೂರು ಇದ್ದಿತು. ತುರ್ಕಸ್ತಾನದ ಸಾಮ್ರಾಜ್ಯದಿಂದ ಸಿಡಿದು ಸ್ವತಂತ್ರವಾಗಿ ತಮ್ಮ ರಾಜ್ಯಗಳನ್ನು ಸ್ಥಾಪಿಸಿಕೊಳ್ಳಲು ಈ ಜನರು ಚಳವಳಿ ಯನ್ನು ನಡೆಯಿಸಿದರು. ಈ ಚಳವಳಿ ರಶಿಯಕ್ಕೆ ಬೇಕಾಗಿದ್ದಿತು. ಬಿಸ್ಮಾರ್ಕನ ರಾಜ್ಯತಂತ್ರದ ಮೂಲಕವಾಗಿ ಜರ್ಮನಿಯ ರಾಜಕೀಯ ರಂಗದಿಂದ ಆಸ್ಟ್ರಿಯವು ಹೊರಗೆ ಬರಬೇಕಾದುದರಿಂದ ಈಗ ಬಾಲ್ಕನ್ ದ್ವೀಪಕಲ್ಪದ ಸಂಸ್ಥಾನಗಳ ಆಡಳಿ ತದಲ್ಲಿ ತನಗೂ ಅವಕಾಶವಿರಬೇಕೆಂದು ಆಸ್ಟ್ರಿಯವು ಬಗೆದಿತು. ಇಂತಹ ಪರಿ ಸ್ಥಿತಿಯಲ್ಲಿ ಬಾಲ್ಕನ್ ದ್ವೀಪಕಲ್ಪದ ಬಾಸ್ನಿಯಾ, ಸರ್ವಿಯಾ ಮತ್ತು ಮೊಂಟೆನಿಗ್ರೊ ಈ ಸಂಸ್ಥಾನಗಳು ತುರ್ಕಸ್ತಾನದ ವಿರುದ್ಧವಾಗಿ ಬಂಡನ್ನು ಹೂಡಿದುವು (೧೮೭೬). ಅನಂತರ ಬಲ್ಗೇರಿಯವೂ ದಂಗೆಯನ್ನೆಬ್ಬಿಸಿತು. ಆದರೆ ಭಯಂಕರ ವಾದ ಸಂಹಾರವನ್ನು ಮಾಡಿ ತುರ್ಕಸ್ತಾನವು ಅದನ್ನು ಮುರಿಬಡಿಯಿತು. ಆಗ ಅಲ್ಲಿಯ ಕ್ರೈಸ್ತ ಪ್ರಜೆಗಳ ಸಂರಕ್ಷಣಕ್ಕೋಸುಗ ರಶಿಯವು ತುರ್ಕಸ್ತಾನದ ವಿರುದ್ಧ ಯುದ್ಧವನ್ನು ಸಾರಿ ದಂಡನ್ನು ಕಳುಹಿತು (೧೮೭೭). ರಶಿಯನ್ ಸೇನೆಯ ಮುಂದೆ ತುರ್ಕಸ್ತಾನದ ಆಟವು ಸಾಗದಾಗಿ ಅದು ಹಿಂದೆಗೆಯಿತು. ಅದನ್ನು ಬೆನ್ನಟ್ಟಿ ರಶಿಯನ್ ಸೈನ್ಯವು ಕಾನ್‌ಸ್ಟಾಂಟಿನೋಪಲಿನ ಕಡೆಗೆ ಸಾಗಿತು.

ರಶಿಯದ ಈ ಹರಿದಾಟಗಳನ್ನು ಇಂಗ್ಲಂಡು ನೋಡುತ್ತಿದ್ದಿತು. ಆ ಕಾಲಕ್ಕೆ ಡಿಝ್‌ರೇಲ್ಲಿ ಇಂಗ್ಲಂಡಿನ ಮುಖ್ಯಮಂತ್ರಿಯಾಗಿದ್ದನು. ಭೂಮಧ್ಯ ಸಮುದ್ರ ದಲ್ಲಿಯ ಕಾನ್‌ಸ್ಟಾಂಟಿನೋಪಲಿನಂತಹ ಮಹತ್ವದ ಸ್ಥಳವು ರಶಿಯದ ಸ್ವಾಧೀನ ವಾಗುವುದನ್ನು ಕಂಡೊಡನೆ ರಶಿಯವನ್ನು ತಡೆಯಲು ಆತನು ಬಹು ತ್ವರೆಯಿಂದ

ಕೊನ್‌ಸ್ಟಾಂಟಿನೋಪಲಿನ ಕಡೆಗೆ ಇಂಗ್ಲಿಶ್ ಹಡಗುಪಡೆಯನ್ನೂ ದಂಡನ್ನೂ ಕಳು ಹಿದನು. ತುರ್ಕಸ್ತಾನದ ಸಾಹಾಯ್ಯಕ್ಕೆ ಇಂಗ್ಲಿಶ್ ಹಡಗುಪಡೆ ಮತ್ತು ದಂಡು ಬಂದುದನ್ನು ನೋಡಿ ರಶಿಯವು ಒಡಂಬಡಿಕೆಗೆ ಸಿದ್ಧವಾಯಿತು ಮತ್ತು ಸನ ಸ್ಟೇಫನೊ ಎಂಬಲ್ಲಿ ತುರ್ಕಸ್ತಾನದೊಡನೆ ಒಪ್ಪಂದವನ್ನು ಮಾಡಿಕೊಂಡಿತು. ಈ ಒಪ್ಪಂದದಿಂದ ಬಲ್ಗೇರಿಯಾ ಸಂಸ್ಥಾನವು ರಶಿಯದ ಮೇಲ್ವಿಚಾರಣೆಯಲ್ಲಿ ಇರಬೇ ಕೆಂದು ಗೊತ್ತಾಗಿತ್ತು. ಆದರೆ ಈ ಒಡಂಬಡಿಕೆಯಿಂದ ಬಾಲ್ಕನ್ ದ್ವೀಪಕಲ್ಪದ ಸಂಸ್ಥಾನಗಳ ಆಡಳಿತದಲ್ಲಿ ರಶಿಯದ ವರ್ಚಸ್ಸು ಬೆಳೆವುದೆಂದು ಇಂಗ್ಲಂಡಿಗೆ ತೋರಿದು ದರಿಂದ ಈ ಒಡಂಬಡಿಕೆ ನಿಜವಾದುದೆಂದು ಬಗೆಯದೆ ಯುರೋಪಿಯನ್ ರಾಷ್ಟ್ರ ಗಳ ಪರಿಷತ್ತಿನ ಮುಂದೆ ಈ ಒಡಂಬಡಿಕೆಯ ಮಾತುಗಳ ಚರ್ಚೆ ಮತ್ತೆ ನಡೆ ಯಬೇಕು ಎಂಬುದಾಗಿ ಅದು ತನ್ನ ಹೇಳಿಕೆಯನ್ನು ಮುಂದುವರಿಸಿತು. ರಶಿಯ ವೊಂದಕ್ಕೇ ಬಾಲ್ಕನ್ ದ್ವೀಪಕಲ್ಪದಲ್ಲಿ ಅಧಿಕಾರವಿರುವುದು ಯುರೋಪದ ಇತರ ರಾಷ್ಟ್ರಗಳಿಗೂ ಸರಿದೋರಲಿಲ್ಲ. ಈ ಮಾತಿಗೆ ತಾನು ಒಪ್ಪದಿದ್ದರೆ ಯುರೋಪದ ಮಿಕ್ಕ ರಾಷ್ಟ್ರಗಳೊಡನೆ ಹೋರಾಡುವ ಪ್ರಸಂಗವು ಬರುವುದೆಂಬುದನ್ನು ಅರಿತು ರಶಿಯವು ಈ ಸೂಚನೆಯನ್ನು ಮಾನ್ಯಮಾಡಿತು. ಹೀಗಾಗಿ ೧೮೭೮ರ ಜೂನ ದಲ್ಲಿ ಬರ್ಲಿನಿನಲ್ಲಿ ಯುರೋಪಿಯನ್ ರಾಷ್ಟ್ರಗಳ ಪ್ರತಿನಿಧಿಗಳ ಪರಿಷತ್ತು ಕೂಡಿ ಒಡಂಬಡಿಕೆ ಆಯಿತು. ಇದರಲ್ಲಿ ಕೆಳಗೆ ಕಾಣಿಸಿದಂತೆ ವ್ಯವಸ್ಥೆಯಾಯಿತು:

(೧) ಬಲ್ಗೇರಿಯವು ತುರ್ಕಸ್ತಾನದ ಅಂಕಿತದಲ್ಲಿಯೇ ಇರಬೇಕು, ಆದರೆ ಅಲ್ಲಿಯ ಜನರಿಗೆ ಅಂತರ್ಗತ ವಿಷಯಗಳಲ್ಲಿ ಸ್ವರಾಜ್ಯದ ಅಧಿಕಾ ರಗಳು ಇರಬೇಕು.

(೨) ಮೊಂಟೆನಿಗ್ರೋ, ಸರ್ವಿಯಾ ಮತ್ತು ರೂಮಾನಿಯಾ ಈ ಸಂಸ್ಥಾನ ಗಳನ್ನು ಸ್ವತಂತ್ರ ಮಾಡಲಾಯಿತು.

(೩) ಬಾಸ್ನಿಯಾ ಮತ್ತು ಹರ್ಜೆಗೊವಿನಾ ಸಂಸ್ಥಾನಗಳು ಆಸ್ಟ್ರಿಯದ ಕಟಾ ಕ್ಷದಲ್ಲಿ ಇರಬೇಕು.

(೪) ಇಂಗ್ಲಂಡಿಗೆ ಭೂಮಧ್ಯ ಸಮುದ್ರದಲ್ಲಿಯ ಸೈಪ್ರಸ ದ್ವೀಪವು ದೊರೆ ಯಬೇಕು.

ಈ ಮೇರೆಗೆ ಬರ್ಲಿನ್ ಒಡಂಬಡಿಕೆಯನ್ನು ರಚಿಸಿ ಡಿಝ್ರೇಲಿ ರಶಿಯದ ಮಹ ತ್ವಾಕಾಂಕ್ಷೆಗೆ ಆತಂಕವನ್ನು ಮಾಡಿದನು ಮತ್ತು ಬಾಲ್ಕನ್ ಸಂಸ್ಥಾನಗಳಲ್ಲಿ ಕೆಲವುಗಳಿಗೆ ಸ್ವಾತಂತ್ರ್ಯವನ್ನೂ ಕೆಲವುಗಳಿಗೆ ಸ್ವರಾಜ್ಯದ ಅಧಿಕಾರಗಳನ್ನೂ ಕೊಡಿಸಿದನು.

## ಇಜಿಪ್ತದ ವಿಷಯದಲ್ಲಿ ಇಂಗ್ಲಂಡಿನ ನೀತಿ.

**ಇಜಿಪ್ತದ ಮಹತ್ವವು**–ಆಫ್ರಿಕಾ ಖಂಡದ ಈಶಾನ್ಯದಲ್ಲಿ ನೆಲಸಿದ ಇಜಿಪ್ತ ಪ್ರಾಂತವು ತುರ್ಕಸ್ತಾನದ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತು. ಸೈನ್ಯ ಮತ್ತು ಹಡಗುಪಡೆಯ ಸಂಚಾರ ಮತ್ತು ವ್ಯಾಪಾರ ಇವುಗಳ ದೃಷ್ಟಿಯಿಂದ ಈ ದೇಶವು ಬಹಳ ಮಹತ್ವವುಳ್ಳದಾಗಿತ್ತು. ಯುರೋಪದಿಂದ ಪೂರ್ವಕ್ಕೆ ಹಿಂದುಸ್ಥಾನ, ಚೀನ ಮುಂತಾದ ದೇಶಗಳಿಗೆ ಆಫ್ರಿಕಾ ಖಂಡವನ್ನು ಸುತ್ತುಹಾಕಿಕೊಂಡು ಹೋಗುವ ಜಲಮಾರ್ಗವಿದ್ದಿತು. ಆದರೆ ಅದು ಬಹಳ ದೂರದ್ದು ಇದ್ದುದರಿಂದ ಆ ಮಾರ್ಗದಿಂದ ಹೋದರೆ ಬಹಳ ಕಾಲವು ಬೇಕಾಗುತ್ತಿದ್ದಿತು. ಆದುದರಿಂದ ೧೯ನೆಯ ಶತಕದ ಪ್ರಾರಂಭದಿಂದ ಇಜಿಪ್ತದ ಸುಯೆಝು ಸಂಯೋಗಭೂಮಿಯ ಮಾರ್ಗವು ಪ್ರವಾಸಿಗರಿಗೋಸುಗ ಮತ್ತೆ ಪ್ರಾರಂಭವಾಗಿತ್ತು (೧೮೩೭). ಆ ಕಾಲಕ್ಕೆ ಅಲ್ಲಿ ಸಾಮುದ್ರಧುನಿ ಇರಲಿಲ್ಲ (೧೮೬೯ರಲ್ಲಿ ಅದು ನಿರ್ಮಿಸಲ್ಪಟ್ಟಿತು). ಆದುದರಿಂದ ಯುರೋಪದ ಪ್ರವಾಸಿಗಳು ಹಡಗಿನಿಂದ ಅಲೆಕ್ಝಾಂದ್ರದವರೆಗೆ ಬರುತ್ತಿದ್ದರು, ಅಲ್ಲಿಂದ ಭೂಮಾರ್ಗವಾಗಿ ಕೆಂಪು ಸಮುದ್ರದ ವರೆಗೆ ಹೋಗುತ್ತಿದ್ದರು, ಮುಂದೆ ಹಡಗಿನಲ್ಲಿ ಕುಳಿತು ಪೂರ್ವದ ದೇಶಗಳಿಗೆ ತೆರಳುತ್ತಿದ್ದರು. ನೆಲದ ಮೇಲಿಂದ ಸರಕುಗಳನ್ನು ಒಯ್ಯಬೇಕಾದುದರಿಂದ ಈ ಮಾರ್ಗವು ವ್ಯಾಪಾರಕ್ಕೆ ಬಹಳ ವೆಚ್ಚದ್ದಾಗಿತ್ತು. ಪೂರ್ವದಿಕ್ಕಿನ ಹಿಂದುಸ್ಥಾನ ದೇಶವು ಇಂಗ್ಲಂಡಿನ ವಶದಲ್ಲಿ ಇದ್ದುದರಿಂದ ಯುರೋಪದ ಮಿಕ್ಕ ರಾಷ್ಟ್ರಗಳಿಗಿಂತ ಹೆಚ್ಚಾಗಿ ಇಂಗ್ಲಂಡು ಈ ಮಾರ್ಗದ ಕಡೆಗೆ ಲಕ್ಷ್ಯವನ್ನು ಕೊಡುತ್ತಿದ್ದಿತು. ಇಂಗ್ಲಂಡಿನಂತೆ ಫ್ರಾನ್ಸಿನ ಲಕ್ಷ್ಯವೂ ಸುಯೆಝು ಸಂಯೋಗಭೂಮಿಯ ಕಡೆಗೆ ಇದ್ದಿತು.

**ಇಜಿಪ್ತ ತುರ್ಕಸ್ತಾನಗಳ ನಡುವೆ ಯುದ್ಧವು (೧೮೩೯–೪೦)**– ತುರ್ಕಸ್ತಾನದ ಸಾಮ್ರಾಜ್ಯದಲ್ಲಿಯ ಇಜಿಪ್ತ ದೇಶದ ಮೇಲೆ ಮಹಮ್ಮದ ಅಲ್ಲಿ ಎಂಬವನು ಸುಭೇದಾರನಾಗಿದ್ದನು. ಈತನು ಬಹಳ ಮಹತ್ವಾಕಾಂಕ್ಷಿಯಾಗಿದ್ದನು. ತನ್ನ ಅಧಿಕಾರವನ್ನು ಬೆಳೆಯಿಸಲು ಎಳಸಿ ಈತನು ತುರ್ಕಸ್ತಾನದ ವಶದಲ್ಲಿಯ ಸಿರಿಯಾ ಪ್ರಾಂತವನ್ನು ಸ್ವಾಧೀನಮಾಡಿಕೊಂಡನು (೧೮೩೯). ಈ ಪ್ರಾಂತವನ್ನು ತಿರುಗಿ ದೊರಕಿಸಲು ತುರ್ಕಸ್ತಾನದ ಸುಲ್ತಾನನು ಆತನ ಮೇಲೆ ದಂಡನ್ನು ಕಳುಹಿದನು. ಮಹಮ್ಮದಅಲ್ಲಿ ಈ ಸೇನೆಯನ್ನು ಪರಾಭವಗೊಳಿಸಿ ನೇರವಾಗಿ ಕಾನ್‌ಸ್ಟಾಂಟಿನೋಪಲ್ ಪಟ್ಟಣವನ್ನು ಕೈವಶ ಮಾಡಲು ಹೊರಟನು. ಇಲ್ಲಿಯ ವರೆಗೆ ಪರಿಸ್ಥಿತಿ ಬಂದುದನ್ನು ನೋಡಿ

ಇಂಗ್ಲಂಡಿನ ಪರರಾಷ್ಟ್ರೀಯ ಮಂತ್ರಿ ಪಾಮರ್ಸ್ಟನನು ತುರ್ಕಸ್ತಾನಕ್ಕೆ ಸಾಹಾಯ್ಯವನ್ನು ಕಳುಹಿದನು. ಆಗ ಇಜಿಪ್ತದಲ್ಲಿಯ ತನ್ನ ಹಿತಸಂಬಂಧಕ್ಕೆ ಬಾಧೆ ಬರಬಾರದೆಂದು ಫ್ರಾನ್ಸು ಮಹಮ್ಮದಅಲ್ಲಿಯ ವಿರುದ್ಧವಾಗಿ ಇಂಗ್ಲಂಡಿನ ಸಾಹಾಯ್ಯಕ್ಕೆ ಹೋಗಲಿಲ್ಲ. ಆದರೂ ಇಂಗ್ಲಿಶ್ ಹಡಗುಪಡೆ ಸೀರಿಯಾದಲ್ಲಿಯ ಏಕರ ಎಂಬ ಹಡಗುಪಡೆಯ ಪಾಳ್ಯದ ಮೇಲೆ ದಾಳಿಮಾಡಿ ಅದನ್ನು ತೆಗೆದುಕೊಂಡಿತು. ಆದುದರಿಂದ ಮಹಮ್ಮದಅಲ್ಲಿ ಸೀರಿಯಾ ಪ್ರಾಂತವನ್ನು ಬಿಟ್ಟುಬಿಡುವ ಪ್ರಸಂಗ ಬಂದಿತು (೧೮೪೦).

**ಇಜಿಪ್ತದೊಡನೆ ಇಂಗ್ಲಿಶರ ಸಂಬಂಧವು (೧೮೬೩-೧೮೮೯)**— ಮಹಮ್ಮದಅಲ್ಲಿಯ ಆಳಿಕೆಯಲ್ಲಿ ಫ್ರೆಂಚರು ಇಜಿಪ್ತದಲ್ಲಿ ವಿಶೇಷವಾಗಿ ತಮ್ಮ ವರ್ಚಸ್ಸನ್ನು ಸ್ಥಾಪಿಸಿದರು. ಇಜಿಪ್ತದಲ್ಲಿಯ ಸುಯೇಜ ಸಂಯೋಗಭೂಮಿಯ ಸ್ಥಳದಲ್ಲಿ ಕಾಲುವೆಯನ್ನು ಅಗಿದು ಭೂಮಧ್ಯ ಸಮುದ್ರವನ್ನೂ ಕೆಂಪು ಸಮುದ್ರವನ್ನೂ ಕೂಡಿಸಿಬಿಟ್ಟರೆ ಅದು ಜಲಮಾರ್ಗದ ವ್ಯಾಪಾರಕ್ಕೆ ಬಹಳ ಅನುಕೂಲವಾಗುವುದು, ಅದರಿಂದ ಇಜಿಪ್ತದ ಮಹತ್ವವು ಬಹುವಾಗಿ ಬೆಳೆವುದು, ಎಂದು **ಲೆಸೆಪ್ಸ** ಎಂಬ ಫ್ರೆಂಚ ಇಂಜಿನಿಯರನು ಸೂಚಿಸಿದನು. ಇದು ಮಹಮ್ಮದಅಲ್ಲಿಯ ಮನಸ್ಸಿಗೆ ಒಪ್ಪಿಗೆಯಾಗಿ ಆತನು ಆ ಕಾಲುವೆಯನ್ನು ಅಗಿಯಲು ಲೆಸೆಪ್ಸನಿಗೆ ಅಪ್ಪಣೆಯನ್ನು ಕೊಟ್ಟನು. ಈ ಕಾಲುವೆ ೧೦೦ ಮೈಲು ಉದ್ದ ಮತ್ತು ೧೪೮ ಫೂಟು ಅಗಲ ಆಗಬೇಕಾಗಿದ್ದಿತು; ಅದರಿಂದ ಅದಕ್ಕೆ ವೆಚ್ಚವಾದರೂ ಹೆಚ್ಚು ಬರುವಂತಿತ್ತು. ಆದುದರಿಂದ ಈ ಕೆಲಸವನ್ನು ಮಾಡಲು ಫ್ರೆಂಚ ಜನರು ಒಂದು ಕಂಪನಿಯನ್ನು ಸ್ಥಾಪಿಸಿ ಪಾಲುಗಳನ್ನು ಕೂಡಿಸಿ ಹಣವನ್ನು ಸಂಗ್ರಹಿಸಿದರು. ಇವುಗಳಲ್ಲಿ ಅರ್ಧ ಪಾಲುಗಳನ್ನು ಮಹಮ್ಮದಅಲ್ಲಿ ಕೊಂಡುಕೊಂಡನು. ಮಿಕ್ಕವುಗಳನ್ನು ಫ್ರೆಂಚರು ಕೊಂಡರು. ೧೮೫೯ರಲ್ಲಿ **ಸುಯೇಜದ ಕಾಲುವೆ**ಯನ್ನು ಅಗಿಸುವ ಕೆಲಸವು ಪ್ರಾರಂಭವಾಗಿ ೧೦ ವರ್ಷಗಳಲ್ಲಿ ಮುಗಿಯಿತು. ೧೮೬೯ರಲ್ಲಿ ಅದನ್ನು ಸಂಚಾರಕ್ಕಾಗಿ ಮುಕ್ತಮಾಡಲಾಯಿತು. ಸುಯೇಜದ ಕಾಲುವೆಯನ್ನು ಅಗಿಸುವ ಕೆಲಸವು ನಡೆವಿರುವಾಗ ೧೮೬೩ರಲ್ಲಿ ಮಹಮ್ಮದಅಲ್ಲಿ ಮರಣಹೊಂದಿದನು. ಅನಂತರ ಅವನ ಮೊಮ್ಮಗನಾದ **ಇಸ್ಮಾಯಿಲ ಪಾಚ್ಛಾ** ಇಜಿಪ್ತದ ಸುಭೇದಾರನಾದನು. ತುರ್ಕಸ್ತಾನದ ಸುಲ್ತಾನನು ಆತನಿಗೆ **ಖೇದಿವ** ಎಂಬ ಬಿರುದನ್ನು ಕೊಟ್ಟನು. ಇಸ್ಮಾಯಿಲ ಪಾಚ್ಛಾ ದುಂದುಗಾರನಾಗಿದ್ದು ಆತನ ಬಹಳ ವೇಳೆ ವಿಲಾಸದಲ್ಲಿ ವ್ಯಯವಾಗುತ್ತಿದ್ದಿತು. ಇಜಿಪ್ತದ ಆದಾಯವು ತಕ್ಕಮಟ್ಟಿಗೆ ಸಾಕಷ್ಟು ಇದ್ದಿತು,

ಆದರೆ ಈ ದುಂದುಗಾರಿಕೆಯಿಂದ ಸ್ವಲ್ಪ ಕಾಲದಲ್ಲಿಯೆ ಇಸ್ಮಾಯಿಲ ಪಾಚ್ಛಾ ಸಾಲಗಾರನಾದನು. ಆಗ ಸಾಲದ ಹಣವನ್ನು ಕಡಿಮೆಮಾಡಿಕೊಳ್ಳಲು ಆತನು ಇಜಿಪ್ತದ ಜನರ ಮೇಲೆ ಪರಿಪರಿಯ ಅನ್ಯಾಯಗಳನ್ನು ಮಾಡಿದನು. ಆದರೆ ಜನರಿಂದ ಹೆಚ್ಚಿಗೆ ಕರದ ಹಣವು ಬರುವುದು ಸಾಧ್ಯವಿಲ್ಲವೆಂಬುದನ್ನು ತಿಳಿದು ಸುಯೇಜ ಕನಾಲ್ ಕಂಪನಿಯ ಪಾಲುಗಳನ್ನು ಮಾರಬೇಕೆಂದು ಆತನು ಬಯಸಿದನು. ಇಜಿಪ್ತದ ಪರಿಸ್ಥಿತಿಯ ಕಡೆಗೆ ಇಂಗ್ಲಂಡಿನ ಮುಖ್ಯ ಮಂತ್ರಿ ಡಿಝ್‌ರೇಲಿಯ ಲಕ್ಷ್ಯವಿದ್ದಿತು. ಸುಯೇಜ ಕನಾಲ ಕಂಪನಿಯ ನಿಮಿತ್ತದಿಂದ ಇಜಿಪ್ತದ ಆಡಳಿತದಲ್ಲಿ ಫ್ರಾನ್ಸಿನ ಕೈ ಹೆಚ್ಚಾಗಿ ಸೇರಿದುದನ್ನು ನೋಡಿ ಅದನ್ನು ತಪ್ಪಿಸಲು ಆತನು ೪೦ ಲಕ್ಷ ಪೌಂಡುಗಳನ್ನು ವೆಚ್ಚಮಾಡಿ ಇಸ್ಮಾಯಿಲ ಪಾಚ್ಛಾ ಮಾರಲಿರುವ ಸುಯೇಜ ಕನಾಲ ಕಂಪನಿಯ ಎಲ್ಲ ಪಾಲುಗಳನ್ನು ಇಂಗ್ಲಂಡಿನ ಪರವಾಗಿ ಕೊಂಡನು (೧೮೭೫). ಹೀಗೆ ಸುಯೇಜದ ಮಹತ್ವದ ಜಲಮಾರ್ಗದೊಡನೆ ಇಂಗ್ಲಂಡಿನ ಸಂಬಂಧವು ಉಂಟಾದುದರಿಂದ ಇಜಿಪ್ತದ ಕಡೆಗೆ ಇಂಗ್ಲಂಡು ಹೆಚ್ಚು ಲಕ್ಷ್ಯವನ್ನು ಪೂರೈಸಬೇಕಾಯಿತು. ಈ ಪಾಲುಗಳನ್ನು ಮಾರಿದ ಬಳಿಕವೂ ಇಸ್ಮಾಯಿಲನ ಸ್ಥಿತಿ ಸುಧಾರಿಸಲಿಲ್ಲ. ಆತನು ಸಾಲಗಾರನಾಗಿದ್ದುದಲ್ಲದೆ ಆತನ ರಾಜ್ಯದಲ್ಲಿ ಅನಾಯಕತ್ವವು ಬೆಳೆಯತೊಡಗಿತು. ಇಂಗ್ಲಿಶ್ ಮತ್ತು ಫ್ರೆಂಚ್ ವರ್ತಕರು ಇಸ್ಮಾಯಿಲನ ಸಾವಕಾರರಾಗಿದ್ದರು. ಆತನಿಗೆ ಕೊಟ್ಟ ಸಾಲವು ತಮಗೆ ಮರಳಿ ಬರುವ ವಿಷಯದಲ್ಲಿ ಅವರಿಗೆ ಸಂದೇಹವೆನಿಸತೊಡಗಿತು. ಆಗ ಇಜಿಪ್ತದ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಇಂಗ್ಲಂಡ್ ಮತ್ತು ಫ್ರಾನ್ಸ್ ಈ ರಾಷ್ಟ್ರಗಳು ತುರ್ಕಸ್ತಾನದ ಸುಲ್ತಾನನ ಮೇಲೆ ತಮ್ಮ ವರ್ಚಸ್ಸನ್ನು ಉಪಯೋಗಿಸಿ ಇಸ್ಮಾಯಿಲನನ್ನು ಪದಚ್ಯುತನಾಗಿ ಮಾಡಿಸಿದರು (೧೮೭೯). ಅನಂತರ ಇಸ್ಮಾಯಿಲನ ಮಗ ಟ್ಯುಫೀಕ ಇವನು ಇಜಿಪ್ತದ ಸುಭೇದಾರನಾಗಿ (ಖೇದಿವ) ನಿಯೋಜಿಸಲ್ಪಟ್ಟನು, ಮತ್ತು ಅಲ್ಲಿಯ ರಾಷ್ಟ್ರೀಯ ಸಾಲದ ಮತ್ತು ಆರ್ಥಿಕ ವಿಷಯಗಳ ಎಲ್ಲ ವ್ಯವಸ್ಥೆ ಇಂಗ್ಲಂಡ್ ಮತ್ತು ಫ್ರಾನ್ಸ್ ಇವುಗಳ ಪ್ರತಿನಿಧಿಗಳಿಗೆ ಒಪ್ಪಿಸಲಾಯಿತು.

**ಅರಾಬಿ ಪಾಚ್ಛಾ ಈತನ ಬಂಡು, ೧೮೮೧**—ಇಜಿಪ್ತದ ರಾಜ್ಯತಂತ್ರದಲ್ಲಿ ಇಂಗ್ಲಂಡ್ ಮತ್ತು ಫ್ರಾನ್ಸುಗಳ ಪ್ರವೇಶವಾದುದು ಇಜಿಪ್ಶಿಯನ್ ಜನರಿಗೆ ಸೇರಲಿಲ್ಲ. ಆದುದರಿಂದ ಪರಕೀಯರನ್ನು ಇಜಿಪ್ತದಿಂದ ಹೊರಗೆ ದೂಡಲು **ಅರಾಬಿ ಪಾಚ್ಛಾ** ಎಂಬ ಸರದಾರನು ಬಂಡನ್ನು ಹೂಡಿದನು (೧೮೮೧). ಆತನು ಟ್ಯುಫೀಕನನ್ನು ತಳ್ಳಿ ಅಲೆಕ್ಝಾಂದ್ರಾ ಪಟ್ಟಣವನ್ನು ಕೈವಶಮಾಡಿಕೊಂಡು

ಅಲ್ಲಿಯೆ ಯುರೋಪಿಯನ್ ಜನರ ಕೊಲೆ ಮಾಡಿದನು. ಬ್ರಿಟಿಶ್ ಹಡಗು ಪಡೆಯನ್ನು ಇದಿರಿಸಲು ಇಜಿಪ್ಶಿಯನ್ ಜನರು ಅಲೆಕ್ಝಾಂದ್ರಾ ಬಂದರದ ಸುತ್ತಲೂ ಕೋಟೆಯನ್ನು ನಿಲ್ಲಿಸಿದರು. ಇಜಿಪ್ತದಲ್ಲಿಯ ಈ ದೊಂಬೆಯನ್ನು ಮುರಿಬಡಿಯಲು ಕೂಡಲೆ ಇಂಗ್ಲಂಡು ಅಲೆಕ್ಝಾಂದ್ರದ ಕಡೆಗೆ ಬ್ರಿಟಿಶ್ ಹಡಗುಪಡೆಯನ್ನು ಕಳುಹಿಸಿತು. ಆದರೆ ಫ್ರಾನ್ಸು ಮಾತ್ರ ಸಾಹಾಯ್ಯವನ್ನು ಕಳುಹಲಿಲ್ಲ. ಇಂಗ್ಲಿಶ್ ಹಡಗುಪಡೆ ಅಲೆಕ್ಝಾಂದ್ರದ ಕೋಟೆಯನ್ನು ನೆಲಸಮ ಮಾಡಿತು. ಅನಂತರ **ಸರ್ ಗಾರ್ಟಿನ್ ವುಲ್ಸ್ಲೆ** ಎಂಬ ಸರದಾರನು ಇಜಿಪ್ತಕ್ಕೆ ಕಳುಹಲ್ಪಟ್ಟನು. ಆತನು ೧೮೮೨ರಲ್ಲಿ **ಟೀಲ್-ಎಲ್-ಕೆಬೀರ** ಎಂಬಲ್ಲಿ ಅರಾಬ ಪಾಚ್ಹಾ ಇವನ ಸೇನೆಯನ್ನು ಪೂರ್ತಿಯಾಗಿ ಮುರಿಬಡಿದು ಇಜಿಪ್ತದ ರಾಜಧಾನಿಯಾದ **ಕಾಯರೊ** ನಗರವನ್ನು ಕೈವಶಮಾಡಿದನು. ಈ ಮೇರೆಗೆ ಇಂಗ್ಲಂಡು ಟ್ಯುಫೀಕನ ಅಧಿಕಾರವನ್ನು ಮತ್ತೆ ಇಜಿಪ್ತದಲ್ಲಿ ಸ್ಥಾಪಿಸಿತು. ಈ ಬಂಡನ್ನು ಮುರಿಯಲು ಫ್ರಾನ್ಸು ಎಳ್ಳಷ್ಟೂ ಸಾಹಾಯ್ಯವನ್ನು ಮಾಡಲಿಲ್ಲ; ಆದುದರಿಂದ ಈ ಮುಂದೆ ಇಜಿಪ್ತ ದೇಶವು ಇಂಗ್ಲಂಡಿನ ಸಂರಕ್ಷಣೆಯಲ್ಲಿ ಬಂದಿತು (೧೮೮೨). ಮುಂದೆ **ಲಾರ್ಡ ಕ್ರೋಮರ್** ಈತನು ಇಜಿಪ್ತದ ಕಾನ್‌ಸಲ್ ಜನರಲ (ಖೇದಿವನ ಮುಖ್ಯ ಮಂತ್ರಾಲೋಚಕ) ನಾಗಿ ಕಳುಹಿಸಲ್ಪಟ್ಟನು. ಆತನ ನೇತೃತ್ವದಲ್ಲಿ ಶಿಕ್ಷಣ, ನ್ಯಾಯ, ಆರ್ಥಿಕ ವ್ಯವಸ್ಥೆ ಈ ವಿಷಯಗಳಲ್ಲಿ ಇಜಿಪ್ತದ ಸುಧಾರಣೆಯಾಯಿತು. ಬ್ರಿಟಿಶ್ ಇಂಜಿನಿಯರರ ಮೇಲ್ವಿಚಾರಣೆಯಲ್ಲಿ ಕೇಪ ಕಾಯರೊ ರೇಲ್ವೆಯ ಯೋಜನೆ ಮಾಡಲಾಯಿತು. ಇದಲ್ಲದೆ ನೈಲ್ ನದಿಗೆ ಕಾಲುವೆಗಳನ್ನು ಅಗಿಸಲಾಯಿತು. ಇದರಿಂದ ಅನೇಕ ಹೊಸ ಭೂಮಿಗಳು ಸಾಗುವಳಿಯಾಗಿ ಇಜಿಪ್ತದ ಅಭಿವೃದ್ಧಿಯಾಗತೊಡಗಿತು.

**ಇಜಿಪ್ತಕ್ಕೆ ಸ್ವತಂತ್ರತೆ ದೊರೆತುದು**, ೧೯೨೨—೧೯೧೪ರಲ್ಲಿ ಮಹಾಯುದ್ಧವು ಪ್ರಾರಂಭವಾಗಲು ತುರ್ಕಸ್ತಾನವು ಶತ್ರುಪಕ್ಷಕ್ಕೆ ಕೂಡಿತು. ಆಗ ಇಜಿಪ್ತವು ತುರ್ಕಸ್ತಾನ ಸಾಮ್ರಾಜ್ಯದಲ್ಲಿ ಇಲ್ಲವೆಂದು ಇಂಗ್ಲಂಡು ಸಾರಿತು. ಮಹಾ ಯುದ್ಧವು ಮುಗಿದ ಬಳಿಕ ಸುಯೇಜ ಕನಾಲಿನ ಮತ್ತು ಕೇಪ್ ಕಾಯರೊ ರೇಲ್ವೆಯ ವಿಷಯದಲ್ಲಿಯ ತಮ್ಮ ಹಿತಸಂಬಂಧಕ್ಕೆ ಬಾಧೆ ಬಾರದಂತೆ ನೋಡಿಕೊಂಡು ಅದು ಇಜಿಪ್ತಕ್ಕೆ ಸ್ವತಂತ್ರತೆಯನ್ನು ಕೊಟ್ಟಿತು (೧೯೨೨). ಈಗ ಇಜಿಪ್ತದಲ್ಲಿ ಇಜಿಪ್ತದ ರಾಜನು ತನ್ನ ಮಂತ್ರಿಮಂಡಲದ ಸಾಹಾಯ್ಯದಿಂದ ರಾಜ್ಯಕಾರಭಾರವನ್ನು ಮಾಡುತ್ತಿರುವನು.

**ಸೂಡಾನದ ಮೇಲೆ ಇಂಗ್ಲಿಶರ ವರ್ಚಸ್ಸು**—ಅರಾಬಿಯ ಬಂಡಾಯವು

ಮುರಿದಬಳಿಕ ಸೂಡಾನ ದೇಶದಲ್ಲಿ ದೊಂಬೆಯೆದ್ದಿತು (೧೮೮೩). ಸೂಡಾನ ದೇಶವು ಇಜಿಪ್ತದ ದಕ್ಷಿಣಕ್ಕೆ ನೆಲೆಸಿದ್ದು ಅದು ಇಜಿಪ್ತದ ಅಂಕಿತದಲ್ಲಿ ಇದ್ದಿತು. **ಮಹಾದಿ**ಯೆಂಬವನ ಅವತಾರವಾಗಿ ಜಗತ್ತಿನಲ್ಲಿ ಎಲ್ಲ ಕಡೆಗೆ ಇಸ್ಲಾಮು ಧರ್ಮದ ಪ್ರಸಾರವಾಗುವುದೆಂದು ಮುಸಲ್ಮಾನ ಜನರಲ್ಲಿ ತಿಳುವಳಿಕೆ ಇದ್ದಿತು. ಈ ವಿಶ್ವಾಸದ ಲಾಭವನ್ನು ತೆಗೆದುಕೊಂಡು ಸೂಡಾನದಲ್ಲಿಯ ಮಹಮ್ಮದೀಯನೊಬ್ಬನು ತಾನು **ಮಹಾದಿ** ಇರುವೆನೆಂದು ಸಾರಿದನು. ಆತನಿಗೆ ಅನೇಕರು ಅನುಯಾಯಿಗಳಾದರು. ಈ ಬಂಡಾಯವನ್ನು ಹತ್ತಿಕ್ಕಲು ಸೈನ್ಯವನ್ನು ಕಳುಹಲಾಯಿತು; ಆದರೆ ಅದರ ಸಂಹಾರವಾಯಿತು. ಈ ಕಾಲದಲ್ಲಿ ಗ್ಲಡ್‌ಸ್ಟನನು ಇಂಗ್ಲಂಡಿನ ಮುಖ್ಯ ಮಂತ್ರಿಯಾಗಿದ್ದನು. ಸೂಡಾನದ ಅಂತಃಸ್ಥ ಗಲಭೆಯಲ್ಲಿ ಸೇರಬಾರದೆಂದು ಆತನ ಮತವಿದ್ದಿತು, ಅದಕ್ಕಾಗಿ ಆತನು ಸೂಡಾನದಲ್ಲಿಯ ಬ್ರಿಟಿಶ್ ಸೇನೆಯನ್ನು ತಿರುಗಿ ತರಲು **ಜನರಲ್ ಗಾರ್ಡನ**ನನ್ನು ಕಳುಹಿದನು; ಆದರೆ ಮಹಾದಿಯ ಅನುಯಾಯಿಗಳು ಆತನ ಸೈನ್ಯದ ಮೇಲೆಯೇ ಏರಿಬಂದುದರಿಂದ ಆಶ್ರಯಕ್ಕಾಗಿ ಸೂಡಾನದ ರಾಜಧಾನಿ **ಖಾರ್ಟೂಮ** ಎಂಬಲ್ಲಿ ಆತನು ಬೀಡುಬಿಡಬೇಕಾಯಿತು. ಬಳಿಕ ಮಹಾದಿಯ ಸೈನಿಕರು **ಖಾರ್ಟೂಮ**ಕ್ಕೆ ಮುತ್ತಿಗೆ ಹಾಕಿದರು. ಆಗ **ಸರ್ ಗಾರನೆಟ್ ವುಲ್ಸ್ಲೆ**ಗೆ ಸೈನ್ಯವನ್ನು ಕೊಟ್ಟು, ಗಾರ್ಡನನ ಸಾಹಾಯ್ಯಕ್ಕೆ ಕಳುಹಲಾಯಿತು; ಆದರೆ ಈ ಸಾಹಾಯ್ಯವು ಸಕಾಲಕ್ಕೆ ಬಾರದೆ ಇದ್ದುದರಿಂದ ಗಾರ್ಡನ್ ಮತ್ತು ಆತನ ಸೈನಿಕರು ವೈರಿಗಳ ಸ್ವಾಧೀನವಾಗಬೇಕಾಯಿತು. ಮಹಾದಿಯ ಅನುಯಾಯಿಗಳು ಇವರೆಲ್ಲರನ್ನು ಕೊಲೆಮಾಡಿದರು. ಇಂತು ಸೂಡಾನದ ದಂಡಯಾತ್ರೆಯಲ್ಲಿ ಇಂಗ್ಲಂಡಿಗೆ ಅಪಜಯವಾಗಿ ಆ ದೇಶವು ಮಹಾದಿಯ ಅಧಿಕಾರಕ್ಕೆ ಒಳಗಾಯಿತು. ೧೮೮೬ರಲ್ಲಿ ಮಹಾದಿ ಮರಣಹೊಂದಿದ ಬಳಿಕ ಆತನ ಮಗನಾದ **ಖಲಿಫಾ** ಎಂಬವನ ವಶದಲ್ಲಿ ಆ ದೇಶವು ಹೋಯ್ತು.

ಅನಂತರ ಹಿಂದಿನ ಪರಾಭವದ ಕಲಂಕವನ್ನು ಅಳಿಸಿ ಸೂಡಾನ ದೇಶವನ್ನು ಜಯಿಸಲು **ಲಾರ್ಡ ಕಿಚನೇರ**ನು ಕಳಿಸಲ್ಪಟ್ಟನು (೧೮೯೮). ಆತನು ೧೮೯೮ರಲ್ಲಿ **ಆಮಡೂರಮಾನ**ದ ಸಂಗ್ರಾಮದಲ್ಲಿ ಖಲಿಫಾ ಇವನ ಸೈನ್ಯವನ್ನು ಪೂರ್ಣವಾಗಿ ಮುರಿಬಡಿದು ಸೂಡಾನದ ರಾಜಧಾನಿಯಾದ **ಖಾರ್ಟೂಮ**ವನ್ನು ಕೈವಶಮಾಡಿಕೊಂಡನು, ಮತ್ತು ಸೂಡಾನದ ವಿಸ್ತಾರವಾದ ಪ್ರಾಂತವನ್ನು ಬ್ರಿಟಿಶರ ಅಂಕಿತದಲ್ಲಿ ತಂದನು.

**ಆಫ್ರಿಕಾಖಂಡದ ಇತರ ಕೆಲವು ಪ್ರದೇಶಗಳ ಮೇಲೆ ಇಂಗ್ಲಂಡಿನ ವರ್ಚಸ್ಸು**—ಇಜಿಪ್ತ ಮತ್ತು ಸೂಡಾನಗಳಂತೆ ಆಫ್ರಿಕಾಖಂಡದ ಬೇರೆ ಕೆಲವು ಪ್ರದೇಶಗಳು ೧೯ನೆಯ ಶತಮಾನದಲ್ಲಿ ಇಂಗ್ಲಂಡಿನ ವರ್ಚಸ್ಸಿಗೆ ಒಳಪಟ್ಟುವು. ಆಫ್ರಿಕೆಯ ಉತ್ತರ ಭಾಗದಲ್ಲಿ ಸಮುದ್ರತೀರದ ಬಳಿಯ ಕೆಲವು ಪ್ರದೇಶವು ಹಿಂದೆ ರೋಮನ್ ಸಾಮ್ರಾಜ್ಯಕ್ಕೆ ಸೇರಿದ್ದಿತು. ಮುಂದೆ ೭ನೆಯ ಮತ್ತು ೮ನೆಯ ಶತಕಗಳಲ್ಲಿ ಅರಬ ಮತ್ತು ಮೂರ ಜನರು ಅದನ್ನು ವಶಮಾಡಿಕೊಂಡಿದ್ದರು. ಬಳಿಕ ೧೫ನೆಯ ಮತ್ತು ೧೬ನೆಯ ಶತಕಗಳಲ್ಲಿ ಹಿಂದುಸ್ಥಾನಕ್ಕೆ ಹೋಗುವಾಗ ಆಫ್ರಿಕೆಯ ಪೂರ್ವ ಮತ್ತು ಪಶ್ಚಿಮ ದಂಡೆಗಳ ಮೇಲೆ ಪೋರ್ತುಗೀಜರು ಕೆಲವು ಸ್ಥಳಗಳನ್ನು ಹಿಡಿದುಕೊಂಡಿದ್ದರು. ೧೭ನೆಯ ಶತಕದಲ್ಲಿ ಆಫ್ರಿಕೆಯ ದಕ್ಷಿಣ ತುದಿಯಲ್ಲಿ ಡಚ್ಚರು **ಕೇಪ ಕಾಲನಿ** ಎಂಬ ಉಪನಿವೇಶವನ್ನು ಸ್ಥಾಪಿಸಿದ್ದರು. ಆ ಮೇಲೆ ಇದನ್ನು ಇಂಗ್ಲಂಡು ಗೆದ್ದುಕೊಂಡಿತ್ತು. ಇದಲ್ಲದೆ ದಕ್ಷಿಣ ಭಾಗದ **ನಾತಾಳ** ಮತ್ತು ಪಶ್ಚಿಮ ದಂಡೆಯ ಮೇಲಿನ **ಸೀಯೆರಾಲಿಯೋನಿ** ಮತ್ತು **ಗೋಲ್ಡ ಕೋಸ್ಟ** ಈ ಪ್ರದೇಶವೂ ಇಂಗ್ಲಂಡಿನ ವಶದಲ್ಲಿ ಇದ್ದಿತು. ಇಂತು ಆಫ್ರಿಕೆಯ ದಂಡೆಯ ಮೇಲೆ ಯುರೋಪಿಯನ್ ಜನರು ಕೆಲವು ಪ್ರದೇಶಗಳನ್ನು ಹಿಡಿದುಕೊಂಡಿದ್ದರೂ ಈ ಖಂಡದ ಬಹು ಭಾಗವು ಅಜ್ಞಾತವಾಗಿಯೆ ಉಳಿದಿತ್ತು. ಆದರೆ ಮುಂದೆ **ಲಿವಿಂಗಸ್ಟನ್** (ಇಂಗ್ಲಿಶ್ ೧೮೧೩—೧೮೭೩), **ಸ್ಟೆನಲೆ** (ಅಮೇರಿಕನ್ ೧೮೭೧—೧೮೯೦) ಮುಂತಾದ ಸಾಹಸಿಗರಾದ ಶೋಧಕರು ಕಷ್ಟನಷ್ಟಗಳನ್ನು ಅನುಭವಿಸಿ ಆಫ್ರಿಕಾಖಂಡದ ಒಳಭಾಗಗಳಲ್ಲಿ ಪ್ರವಾಸಮಾಡಿ ಅನೇಕ ಅಜ್ಞಾತ ಪ್ರದೇಶಗಳನ್ನು ಬೆಳಕಿಗೆ ತಂದರು. ಆ ಬಳಿಕ ಆ ಪ್ರದೇಶಗಳ ವಿಷಯಕ್ಕೆ ಕುತೂಹಲವು ಹುಟ್ಟಿ ಆಫ್ರಿಕೆಯ ಸಾಧ್ಯವಾದಷ್ಟು ಭಾಗಗಳನ್ನು ದೊರಕಿಸಲು ಯುರೋಪಿಯನ್ ರಾಷ್ಟ್ರಗಳಲ್ಲಿ ಸ್ಪರ್ಧೆ ಉಂಟಾಯಿತು. **ಬುಚಾನಾಲಂಡ** ಮತ್ತು **ರ್‍ಹೊಡೆಶಿಯಾ** ಎಂಬ ವಿಸ್ತಾರವಾದ ಎರಡು ಪ್ರದೇಶಗಳನ್ನು ಇಂಗ್ಲಂಡು ಸ್ವಾಧೀನಮಾಡಿಕೊಂಡಿತು. ಪಶ್ಚಿಮ ದಂಡೆಯ ಮೇಲೆ ಸರ **ಜಾರ್ಜ ಗೋಲ್ಡಿ** ಎಂಬವನ ನಾಯಕತ್ವದಲ್ಲಿ ಒಂದು ಬ್ರಿಟಿಶ್ ಕಂಪನಿ ಸ್ಥಾಪಿಸಲ್ಪಟ್ಟು **ನೈಗೇರಿಯಾ** ಎಂಬ ವಿಸ್ತಾರವಾದ ಪ್ರಾಂತವು ಇಂಗ್ಲಂಡಿನ ವಶಕ್ಕೆ ತರಲ್ಪಟ್ಟಿತು (೧೯೦೦). 'ಪೂರ್ವ ಆಫ್ರಿಕಾ ಕಂಪನಿ' ಎಂಬ ಇನ್ನೊಂದು ಇಂಗ್ಲಿಶ್ ಕಂಪನಿ ಸ್ಥಾಪನೆಯಾಗಿ **'ಬ್ರಿಟಿಶ್ ಪೂರ್ವ ಆಫ್ರಿಕಾ'** (ಕೆನಿಯಾ) ಮತ್ತು **ಯುಗಾಂಡಾ** ಎಂಬ ಎರಡು ಪ್ರದೇಶಗಳನ್ನು ಅದು ಇಂಗ್ಲಂಡಿನ ವರ್ಚಸ್ಸಿನ ಕೆಳಗೆ ತಂದಿತು. ಇದರಂತೆ **ಸೋಮಾಲಿಲಂಡ**

ಮತ್ತು **ಝೂಂಜಿಬಾರ** ಈ ಪ್ರದೇಶಗಳಾದರೂ ಇಂಗ್ಲಂಡಿನ ಕಟಾಕ್ಷದಲ್ಲಿ ಬಂದುವು. ಈ ಮೇರೆಗೆ ಆಫ್ರಿಕಾಖಂಡದ ಬಹು ದೊಡ್ಡ ಭಾಗವು ೧೯ನೆಯ ಶತಕದಲ್ಲಿ ಇಂಗ್ಲಂಡಿನ ವರ್ಚಸ್ಸಿಗೆ ಒಳಪಟ್ಟಿತು.

**ಆಫ್ರಿಕಾಖಂಡದಲ್ಲಿ ಇತರ ಯುರೋಪಿಯನ್ ರಾಷ್ಟ್ರಗಳ ಪ್ರದೇಶ ಗಳು**—ಇಂಗ್ಲಂಡನ್ನುಳಿದು ಮಿಕ್ಕ ಯುರೋಪಿಯನ್ ರಾಷ್ಟ್ರಗಳಿಗೆ ಬಹಳ ವಸಾಹತುಗಳು ಇರಲಿಲ್ಲ. ಆದುದರಿಂದ ತಮ್ಮ ರಾಷ್ಟ್ರಗಳಲ್ಲಿ ಬೆಳೆಯುತ್ತಿರುವ ಜನ ಸಂಖ್ಯೆಗೆ ಬೇರೆ ಕಡೆಗೆ ಎಡೆಮಾಡಿ ತಮ್ಮ ಸಾಮ್ರಾಜ್ಯವನ್ನು ಬೆಳೆಯಿಸಲು ವಸಾಹತುಗಳನ್ನು ಸ್ಥಾಪಿಸುವ ಅಗತ್ಯವು ಅವುಗಳಿಗೆ ಎನಿಸತೊಡಗಿತು. ೧೯ನೆಯ ಶತಕದ ಉತ್ತರಾರ್ಧದಲ್ಲಿ ಆಫ್ರಿಕಾಖಂಡದ ಬಹು ಭಾಗವು ಶೋಧವಾದ ಬಳಿಕ ಅಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿ ಆ ಭಾಗವನ್ನು ತಮ್ಮ ವಶಕ್ಕೆ ತರಲು ಯುರೋಪದ ಫ್ರಾನ್ಸ್, ಜರ್ಮನಿ, ಇಟಲಿ, ಪೋರ್ತುಗಾಲ, ಬೆಲ್ಜಮ್ ಮುಂತಾದ ರಾಷ್ಟ್ರಗಳು ಪ್ರಯತ್ನಿಸತೊಡಗಿದುವು. ಫ್ರಾನ್ಸು ಆಫ್ರಿಕೆಯ ವಾಯವ್ಯ ಮತ್ತು ಪಶ್ಚಿಮ ದಿಕ್ಕುಗಳಲ್ಲಿಯ ಅಲ್ಜೆರಿಯ, ಸೂಡಾನ, ಸೆನಿಗಾಲ, ಕಾಂಗೊ ಮುಂತಾದ ಬಹು ವಿಸ್ತಾರವಾದ (ಫ್ರಾನ್ಸಿನ ೧೫ರಷ್ಟು) ಪ್ರಾಂತವನ್ನು ತನ್ನ ಅಧಿಕಾರಕ್ಕೆ ಒಳಪಡಿಸಿಕೊಂಡಿತು. ಜರ್ಮನಿದೇಶವು ಪಶ್ಚಿಮ ಮತ್ತು ಪೂರ್ವ ಆಫ್ರಿಕೆಯ ಸುಮಾರು ೧೦ ಲಕ್ಷ ಚದರ ಮೈಲುಗಳ ಪ್ರಾಂತದ ಒಡೆತನವನ್ನು ಗಳಿಸಿತು. ಇಟಲಿ ಕೆಂಪುಸಮುದ್ರದ ನೆರೆಯ ಇರಿಟ್ರಿಯಾ ಮತ್ತು ಸೋಮಾಲಿಲಂಡ ಈ ಭಾಗಕ್ಕೆ ಸ್ವಾಮಿಯಾಯಿತು. ಇದರಂತೆ ಪೋರ್ತುಗಾಲ, ಸ್ಪೇನ ಮತ್ತು ಬೆಲ್ಜಮ್ ಈ ರಾಷ್ಟ್ರಗಳಾದರೂ ಆಫ್ರಿಕೆಯ ಪ್ರದೇಶಗಳ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದುವು. ಹೀಗೆ ಆಫ್ರಿಕಾಖಂಡದ ಬೇರೆ ಬೇರೆ ಭಾಗಗಳು ೧೯ನೆಯ ಶತಕದಲ್ಲಿ ಯುರೋಪದ ರಾಷ್ಟ್ರಗಳಿಗೆ ಹಂಚಿಹೋದುವು.

## ಏಶಿಯಾಖಂಡದಲ್ಲಿ ಇಂಗ್ಲಂಡಿನ ವಶದಲ್ಲಿಯ ಪ್ರದೇಶಗಳು.

(೧) **ಪೂರ್ವದ ನಡುಗಡ್ಡೆಗಳು ಮತ್ತು ಪ್ರದೇಶಗಳು**—ಆಫ್ರಿಕೆಯಂತೆ ಏಶಿಯಾಖಂಡದಲ್ಲಿಯೂ ತಮ್ಮ ಒಡೆತನವನ್ನು ಸಂಪಾದಿಸಲು ಯುರೋಪಿಯನ್ ರಾಷ್ಟ್ರಗಳ ಪ್ರಯತ್ನವು ನಡೆಯಿತು. ತನ್ನ ವಶದಲ್ಲಿರುವ ಹಿಂದುಸ್ಥಾನ ದೇಶ ಮತ್ತು ಪೂರ್ವಭಾಗದಲ್ಲಿ ಬೆಳೆವ ವ್ಯಾಪಾರ ಇವುಗಳಿಗೋಸುಗ ಈ ಪ್ರದೇಶವು ಇಂಗ್ಲಂಡಿಗೆ ವಿಶೇಷ ಮಹತ್ವವುಳ್ಳುದಾಗಿ ತೋರಿತು. ನೆಪೋಲಿಯನನೊಡನೆ

ಯುದ್ಧವು ನಡೆದಿರುವಾಗ ೧೮೧೦ರಲ್ಲಿ ಸಕ್ಕರೆಗಾಗಿ ಹೆಸರಾದ ಫ್ರೆಂಚರ **ಮಾರಿಶಸ್** ದ್ವೀಪ, ಮತ್ತು ಚಹಾ, ಕಾಫಿ, ಮಸಾಲೆ ದ್ರವ್ಯಗಳಿಗೆ ಹೆಸರಾದ ಡಚ್ಚರ **ಸೀಲೋನ** ನಡುಗಡ್ಡೆ (೧೮೦೬) ಇವುಗಳನ್ನು ಇಂಗ್ಲಂಡು ಗೆದ್ದು ಕೊಂಡಿತು. ಅನಂತರ ಚೀನದೊಡನೆ ದೊಡ್ಡ ಪ್ರಮಾಣದಲ್ಲಿ ವ್ಯಾಪಾರವು ಪ್ರಾರಂಭವಾಗಿ ಪೆಸಿಫಿಕ ಸಮುದ್ರದಲ್ಲಿಯ ನಡುಗಡ್ಡೆಗಳ ಮತ್ತು ಪ್ರದೇಶಗಳ ಮಹತ್ವವು ಬೆಳೆಯತೊಡಗಿತು. ಆಗ **ಸಿಂಗಾಪೂರ** (೧೮೧೯), **ಪೆನಾಂಗ** ನಡುಗಡ್ಡೆಗಳು, **ಮಲಾಯಾ** ದ್ವೀಪಕಲ್ಪದ ದಕ್ಷಿಣಭಾಗ (೧೮೨೫), **ಬೋರ್ನಿ ಯೊವಿನ** ಉತ್ತರಭಾಗ (೧೮೬೨) ಮತ್ತು **ಫಿಜಿ ನಡುಗಡ್ಡೆಗಳು** (೧೮೭೪) ಇಷ್ಟು ಪ್ರದೇಶಗಳು ಇಂಗ್ಲಂಡಿನ ಸ್ವಾಧೀನವಾದುವು. ಇವುಗಳಲ್ಲಿ ಸಿಂಗಾಪೂರವು ಆಯಕಟ್ಟಿನ ಎಡೆಯಲ್ಲಿ ಇದ್ದುದರಿಂದ ಅದರ ಮಹತ್ವವು ಬೆಳೆದು, ಅದನ್ನು ಇಂಗ್ಲಂಡಿನ ಪೂರ್ವಭಾಗದ ಹಡಗುಪಡೆಯ ಮುಖ್ಯ ಕೇಂದ್ರವಾಗಿ ಮಾಡ ಲಾಯ್ತು. ಈ ಭಾಗದಲ್ಲಿ ಜಾವಾ, ಸುಮಾತ್ರಾ ಮತ್ತು ಬೋರ್ನಿಯೊ ಇವು ಡಚ್ಚರ, ಇಂಡೋಚಾಯನಾ ಫ್ರೆಂಚರ, ಮತ್ತು ಫಿಲಿಪಾಯಿನ ನಡುಗಡ್ಡೆಗಳು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ವಶದಲ್ಲಿ ಇರುವುವು.

(೨) **ಚೀನದೊಡನೆ ಇಂಗ್ಲಂಡಿನ ಸಂಬಂಧವು**—೧೯ನೆಯ ಶತಕದಲ್ಲಿ ಇಂಗ್ಲಂಡು ಚೀನ ದೇಶದಲ್ಲಿಯೂ ಕೆಲವು ಸ್ಥಳಗಳನ್ನು ಹಿಡಿದುಕೊಂಡಿತು. ಈ ದೇಶವು ಪ್ರಪಂಚದ ಪ್ರಾಚೀನ ದೇಶಗಳಲ್ಲಿ ಒಂದಾಗಿದ್ದು ಇಲ್ಲಿಯ ಸಂಸ್ಕೃತಿ ಬಹು ಪುರಾತನವಾಗಿದೆ. ೧೭ನೆಯ ಶತಕದಲ್ಲಿ ಚೀನದೊಡನೆ ಹಾಲಂಡ್ ಮತ್ತು ಇಂಗ್ಲಂಡ್ ಈ ದೇಶಗಳ ವ್ಯಾಪಾರವು ಪ್ರಾರಂಭವಾಯಿತು. ಅದರಲ್ಲಿ ಹಿಂದು ಸ್ಥಾನದಲ್ಲಿ ಬೆಳೆವ ಅಫೀಮಿನ ವ್ಯಾಪಾರವು ಇಂಗ್ಲಿಶರ ಕೈಯಲ್ಲಿದ್ದು, ಇದು ಬಹಳ ಲಾಭಕರವಾಗಿತ್ತು. ೧೮೪೦ರಲ್ಲಿ ಚೀನದ ಸುಂಕದ ಕಮಿಶನರ ಮತ್ತು ಇಂಗ್ಲಿಶ ವರ್ತಕರ ನಡುವೆ ಈ ವ್ಯಾಪಾರದ ಸಂಬಂಧದಲ್ಲಿ ತಿಕ್ಕಾಟವು ಉಂಟಾಗಿ ಚೀನ-ಇಂಗ್ಲಂಡುಗಳ ನಡುವೆ ಯುದ್ಧವಾಯಿತು. ಇದರಲ್ಲಿ ಚೀನವು ಸೋತು ಒಡಂಬಡಿಕೆ ಯಾಯಿತು. ಅದರಲ್ಲಿ ಯುದ್ಧದ ವೆಚ್ಚವೆಂದು ಬಹಳ ಹಣವೂ **ಹಾಂಗಕಾಂಗ** ನಡುಗಡ್ಡೆಯೂ ಇಂಗ್ಲಂಡಿಗೆ ದೊರೆತಿತು. ಇದಲ್ಲದೆ ಇಂಗ್ಲಂಡಿನ ವ್ಯಾಪಾರಕ್ಕೋ ಸುಗ ಚೀನದಲ್ಲಿಯ ಐದು ಬಂದರಗಳು ತೆರೆದಿಡಲ್ಪಟ್ಟುವು. ೧೮೫೬—೫೭ರಲ್ಲಿ ಮತ್ತು ೧೮೫೯—೬೦ರಲ್ಲಿ ಹೀಗೆ ಚೀನದೊಡನೆ ಎರಡು ಸಲ ಯುದ್ಧವಾಯಿತು. ಇವೆರಡರಲ್ಲಿಯೂ ಚೀನವು ಸೋತಿತು. ಅನಂತರ ಒಪ್ಪಂದವಾಗಿ ಚೀನದಲ್ಲಿ ಇನ್ನೂ ಕೆಲವು ಸ್ಥಳಗಳು ಮತ್ತು ವ್ಯಾಪಾರದ ಸೌಲಭ್ಯಗಳು ಇಂಗ್ಲಂಡಿಗೆ ದೊರೆತುವು.

**ಚೀನದೊಡನೆ ಇತರ ರಾಷ್ಟ್ರಗಳ ಸಂಬಂಧವು**— ಇಂಗ್ಲಂಡಿನಂತೆ ಫ್ರಾನ್ಸ್, ಜರ್ಮನಿ, ರಶಿಯಾ, ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು ಮತ್ತು ಜಪಾನ ಈ ರಾಷ್ಟ್ರಗಳ ಸಂಬಂಧವಾದರೂ ಚೀನದೊಡನೆ ೧೯ನೆಯ ಶತಕದಲ್ಲಿ ಉಂಟಾಯಿತು. ಭೂಮಧ್ಯ ಸಮುದ್ರ, ಮತ್ತು ಹಿಂದುಸ್ಥಾನ ಸೀಮೆ ಇವುಗಳ ವಿಷಯದಲ್ಲಿಯ ರಶಿಯದ ಮಹತ್ವಾಕಾಂಕ್ಷೆ ಸಫಲವಾಗದುದರಿಂದ ಅದು ಪೂರ್ವದ ಸೈಬೇರಿಯಾ ಭಾಗದಲ್ಲಿ ತನ್ನ ಸಾಮ್ರಾಜ್ಯವನ್ನು ಬೆಳೆಯಿಸಿತು. ಇದ ರಿಂದ ಚೀನದ ಉತ್ತರ ಸೀಮೆಯ ಮೇಲೆ ರಶಿಯದ ಸಾಮ್ರಾಜ್ಯವು ಸ್ಥಾಪನ ವಾಯಿತು. ಆಗ ಚೀನದ ಕಾರಭಾರದಲ್ಲಿಯೂ ತನ್ನ ಕೈ ಇರಬೇಕೆಂದು ಅದು ಬಗೆದಿತು. ಫ್ರಾನ್ಸು ಚೀನದ ದಕ್ಷಿಣ ಸೀಮೆಯ ಮೇಲಿನ ಇಂಡೋಚಾಯನಾ ಎಂಬ ಪ್ರದೇಶವನ್ನು ತನ್ನ ಸ್ವಾಧೀನಪಡಿಸಿತು, ಮತ್ತು ಚೀನದಲ್ಲಿ ವ್ಯಾಪಾರದ ಸೌಲಭ್ಯಗಳನ್ನು ದೊರಕಿಸಲು ಪ್ರಯತ್ನಿಸಿತು. ಎರಡು ಮಿಶನರಿಗಳ ಕೊಲೆ ಯಾದ ನೆವವನ್ನು ಮುಂದೆ ಮಾಡಿ ಜರ್ಮನಿ ಕಿಯಾಚಿವು ಎಂಬ ಸ್ಥಳವನ್ನು ಹಿಡಿದುಕೊಂಡಿತು (೧೮೯೮). ಬಳಿಕ ಇಂಗ್ಲಂಡು ವೆಹಾವೆಹಿ ಎಂಬ ಸ್ಥಳವನ್ನು ಕಿತ್ತುಕೊಂಡಿತು. ೧೮೯೪—೯೫ರಲ್ಲಿ ನಡೆದ ಚೀನ-ಜಪಾನ ಯುದ್ಧದಿಂದ ಫಾರ್ಮೋಸಾ ನಡುಗಡ್ಡೆ ಮತ್ತು ೧೯೦೪—೫ರಲ್ಲಿ ನಡೆದ ರೂಸೋ-ಜಪಾನಿ ಯುದ್ಧದ ತರುವಾಯದಲ್ಲಿ ಕೋರಿಯಾ ಪ್ರಾಂತವು ಜಪಾನರ ಸ್ವಾಧೀನವಾ ಯಿತು (೧೯೧೦). ಚೀನದ ಪೂರ್ವದಲ್ಲಿಯ ಫಿಲಿಪಾಯಿನ್ ನಡುಗಡ್ಡೆಗಳು ಸ್ಪೇನದ ಕೈಯಲ್ಲಿ ಇದ್ದುವು. ೧೮೯೮ರಲ್ಲಿ ಅಮೇರಿಕೆಯ ಸಂಯುಕ್ತ ಸಂಸ್ಥಾನ ಗಳು ಅವನ್ನು ಸ್ಪೇನಿನಿಂದ ಗೆದ್ದುಕೊಂಡುವು. ಇದರಿಂದ ಚೀನಿ ಸಮುದ್ರ ದಲ್ಲಿ ಅಮೇರಿಕೆಯ ಹಿತಸಂಬಂಧವು ಉಂಟಾಯಿತು.

೧೯ನೆಯ ಶತಕದ ಕೊನೆಗೆ ಚೀನದಲ್ಲಿ ವ್ಯಾಪಾರದಂತೆ ಲೋಹಮಾರ್ಗ ವನ್ನು ಸಿದ್ಧಪಡಿಸುವುದು, ಬೇರೆ ಬೇರೆ ಪ್ರದೇಶಗಳಲ್ಲಿ ಖನಿಜ ಪದಾರ್ಥಗಳ ಕಣಿ ಗಳನ್ನು ಅಗಿವುದು ಈ ವಿಷಯದಲ್ಲಿಯೂ ಸೌಕರ್ಯಗಳನ್ನು ದೊರಕಿಸಲು ಪರರಾಷ್ಟ್ರಗಳು ಪ್ರಯತ್ನಿಸಿದುವು. ತಮ್ಮ ದೇಶದಲ್ಲಿ ಪರಕೀಯರು ನುಗ್ಗುತ್ತಿರು ವುದು ಚೀನದ ಕೆಲವು ಜನರಿಗೆ ಸರಿಬರಲಿಲ್ಲ. ಇಂತಹರು ಪರಕೀಯರನ್ನು ಚೀನ ದಿಂದ ಹೊರಗೆ ದೂಡಲು ಒಂದು ಮಂಡಲವನ್ನು ಸ್ಥಾಪಿಸಿದರು. ಇದರ ಹೆಸರು **ಬಾಕ್ಸರ ಮಂಡಲ.** ಈ ಮಂಡಲದವರು ಚೀನದಲ್ಲಿಯ ಪರಕೀಯರ ಮೇಲೆ ಏರಿಹೋಗಿ ಪೇಕಿಂಗ ಪಟ್ಟಣದಲ್ಲಿಯ ಯುರೋಪಿಯನ್ ಜನರನ್ನು ಕೈಸೆರೆ ಮಾಡಿ ದರು (೧೯೦೦). ಆಗ ಎಲ್ಲ ಯುರೋಪಿಯನ್ ರಾಷ್ಟ್ರಗಳು ತಮ್ಮದೊಂದು

ಸಂಯುಕ್ತ ಸೈನ್ಯವನ್ನು ಕಳುಹಿ ಈ ಒಳಸಂಚನ್ನು ಮುರಿಬಡಿದರು. ಅನಂತರ ಚೀನವು ಯುರೋಪಿಯನ್ ರಾಷ್ಟ್ರಗಳಿಗೆ ಬಹಳ ಕಪ್ಪಕಾಣಿಕೆಗಳನ್ನು ಮತ್ತು ಕೆಲವು ಹೆಚ್ಚಿನ ಸೌಕರ್ಯಗಳನ್ನು ಕೊಡಬೇಕಾಯಿತು. ಮುಂದೆ ಚೀನದಲ್ಲಿ ಜಾಗೃತಿಯಾಗಿ ೧೯೧೧ರಲ್ಲಿ ರಾಜ್ಯಕ್ರಾಂತಿಯಾಯಿತು. ಚೀನದ ಜನರು ಅಲ್ಲಿಯ ಅರಸನ ಅನಿಯಂತ್ರಿತ ಅಧಿಕಾರವನ್ನು ನಷ್ಟಗೊಳಿಸಿ ಪ್ರಜಾಪ್ರಭುತ್ವ ವನ್ನು ಸ್ಥಾಪಿಸಿದರು (೧೯೧೨). ಆದರೆ ದೇಶದಲ್ಲಿ ಸುವ್ಯವಸ್ಥೆ ಉಂಟಾಗಲಿಲ್ಲ. ಪರಸ್ಪರ ವಿರೋಧಿ ಪಕ್ಷಗಳು ಅನೇಕವಾಗಿದ್ದು ಅವುಗಳಲ್ಲಿ ಕಾದಾಟವು ನಡೆಯುತ್ತಿರುವುದರಿಂದ ಅಲ್ಲಿ ಅಶಾಂತಿಯೆ ಹಬ್ಬಿದೆ.

(೩) **ಹಿಂದುಸ್ಥಾನ — ಹಿಂದುಸ್ಥಾನದಲ್ಲಿ ಇಂಗ್ಲಿಶರ ರಾಜ್ಯವಿಸ್ತಾರವು** — ಮಾರ್ಕ್ವಿಸ ಆಫ ವೆಲೆಸ್ಲಿಯ ಸಬ್‌ಸಿಡಿಯರಿ ಪದ್ಧತಿಯಿಂದ (ಸಂರಕ್ಷಕ ಸೈನ್ಯದ ಪದ್ಧತಿ) ಹಿಂದುಸ್ಥಾನದ ಅನೇಕ ರಾಜರು ಇಂಗ್ಲಿಶರ ಮಾಂಡಲಿಕರಾದರು. ವೆಲೆಸ್ಲಿ ಮತ್ತು ಲಾರ್ಡ ಹೇಸ್ಟಿಂಗ್ಜ ಇವರ ಆಳಿಕೆಯಲ್ಲಿ ಟೀಪುವಿನೊಡನೆಯೂ ಮರಾಟರೊಡನೆಯೂ ಯುದ್ಧಗಳು ನಡೆದು ದಕ್ಷಿಣ ಹಿಂದುಸ್ಥಾನದ ಬಹುಭಾಗವು ಇಂಗ್ಲಿಶರ ಸ್ವಾಧೀನವಾಯಿತು. ಮುಂದೆ ಲಾರ್ಡ ಆಮಹರ್ಸ್ಟನ ಆಳಿಕೆಯಲ್ಲಿ ಬ್ರಹ್ಮದೇಶದೊಡನೆ ಯುದ್ಧವಾಯಿತು (೧೮೨೪—೨೬); ಅದರಲ್ಲಿ ಬ್ರಹ್ಮದೇಶದ ಕೆಲ ಭಾಗವು ಇಂಗ್ಲಿಶರಿಗೆ ದೊರೆತಿತು. ಆ ಮೇಲೆ ಇಂಗ್ಲಿಶರು ಸಿಂಧ ಪ್ರಾಂತವನ್ನು ಗೆದ್ದುಕೊಂಡರು (೧೮೪೩). ಮುಂದೆ ಲಾರ್ಡ ಹಾರ್ಡಿಂಜನ ಆಳಿಕೆಯಲ್ಲಿ ಪಂಜಾಬದ ಶೀಖ ಜನರೊಡನೆ ಎರಡು ಕಾಳಗಗಳಾದುವು (೧೮೪೬; ೧೮೪೮ — ೪೯). ಅವುಗಳಲ್ಲಿ ಶೀಖರು ಸೋತು ಪಂಜಾಬ ಪ್ರಾಂತವು ಇಂಗ್ಲಿಶರ ವಶಕ್ಕೆ ಬಂದಿತು. ಮುಂದೆ ಲಾರ್ಡ ಡಲಹೌಸಿ ಗವರ್ನರ ಜನರಲನಾದನು (೧೮೪೮—೫೬). ಈತನ ಆಳಿಕೆಯಲ್ಲಿ ಬಹಳ ಪ್ರದೇಶವು ಇಂಗ್ಲಿಶರ ಕೈಗೆ ಬಂದಿತು. ಔರಸ ಸಂತತಿಯಿಲ್ಲವೆಂದೂ ಅವ್ಯವಸ್ಥೆಯಿರುವುದೆಂದೂ ತೋರಿಸಿ ಈತನು ಝಾಂಸಿ, ಸಾತಾರಾ, ನಾಗಪೂರ, ಅಯೋಧ್ಯೆ ಮುಂತಾದ ಅನೇಕ ಸಂಸ್ಥಾನಗಳನ್ನು ಖಾಲಸಾಮಾಡಿದನು. ಈತನ ಆಳಿಕೆಯಲ್ಲಿ ಬ್ರಹ್ಮದೇಶದೊಡನೆ ಎರಡನೆಯ ಯುದ್ಧವು ನಡೆದು (೧೮೫೨) ಬ್ರಹ್ಮದೇಶದ ದಕ್ಷಿಣಭಾಗವು ಇಂಗ್ಲಿಶರಿಗೆ ದೊರೆತಿತು. ಮುಂದೆ ಕೆಲ ವರ್ಷಗಳಾದ ಬಳಿಕ ಅದರ ಉತ್ತರ ಭಾಗವಾದರೂ ಅವರ ವಶವಾಯಿತು. ಹೀಗೆ ವೆಲೆಸ್ಲಿ, ಹೇಸ್ಟಿಂಗ್ಜ, ಹಾರ್ಡಿಂಜ, ಡಲಹೌಸಿ ಈ ಗವರ್ನರ ಜನರಲರ ಆಳಿಕೆಯಲ್ಲಿ ಹಿಂದುಸ್ಥಾನದಲ್ಲಿಯ ಇಂಗ್ಲಿಶರ ರಾಜ್ಯವು ವಿಸ್ತಾರವಾಗುತ್ತಿರುವಾಗ ಬೆಂಟಿಂಕ ಮತ್ತು ಡಲಹೌಸಿ ಇವರ ಆಳಿಕೆ

ಯಲ್ಲಿ ಅಂತಃಸ್ಥ ವಿಷಯಗಳಲ್ಲಿ ಕೆಲವು ಮಹತ್ವದ ಸುಧಾರಣೆಗಳು ಆದುವು. ಬೆಂಟಿಂಕನ ಆಳಿಕೆಯಲ್ಲಿ ಸಹಗಮನದ ಪದ್ಧತಿಯನ್ನು ನಿಲ್ಲಿಸಲಾಯಿತು; ಠಗ ಜನರನ್ನು ನಿರ್ಮೂಲಗೊಳಿಸಲಾಯಿತು; ಸುಶಿಕ್ಷಿತ ಹಿಂದಿ ಜನರನ್ನು ದೊಡ್ಡ ದೊಡ್ಡ ಅಧಿಕಾರದ ಸ್ಥಳಗಳಲ್ಲಿ ನಿಯೋಜಿಸಲು ಪ್ರಾರಂಭವಾಯಿತು. ಲಾರ್ಡ ಡಲಹೌಸಿಯ ಆಳಿಕೆಯಲ್ಲಿ ಹಳೆಯ ಕಾಲುವೆಗಳನ್ನು ಸರಿಪಡಿಸಿ ಹೊಸವನ್ನು ಅಗಿಸಲಾಯಿತು, ಇದರಿಂದ ಒಕ್ಕಲತನವು ಸುಧಾರಿಸಲು ಸಾಹಾಯ್ಯವಾಯಿತು; ತಂತಿ ಮತ್ತು ರೇಲ್ವೆ ಪ್ರಾರಂಭವಾಗಿ ಸ್ವಲ್ಪ ವೆಚ್ಚದಲ್ಲಿ ಅಂಚೆಯನ್ನು ಒಯ್ಯುವ ವ್ಯವಸ್ಥೆ ಆಯಿತು ಮತ್ತು ಶಿಕ್ಷಣವು ಬೆಳೆಯಿತು.

ಲಾರ್ಡ ಡಲಹೌಸಿಯ ತರುವಾಯದಲ್ಲಿ ಲಾರ್ಡ ಕೆನಿಂಗನು ಗವರ್ನರ ಜನರಲನಾದನು (೧೮೫೬). ಈತನ ಆಳಿಕೆಯಲ್ಲಿ ಬಂಡಾಯವಾಯಿತು. ಡಲ ಹೌಸಿಯಿಂದ ಪ್ರಚಾರದಲ್ಲಿ ಬಂದ ಅಂಚೆ ಮತ್ತು ತಂತಿಯ ಸುಧಾರಣೆಯಿಂದ ತಮ್ಮ ಧರ್ಮಕ್ಕೆ ಗಂಡಾಂತರವು ಒದಗಿತೆಂದು ಹಳೆಯ ವಿಚಾರದ ಜನರಿಗೆ ಎನಿ ಸಿತು. ಡಲಹೌಸಿ ದತ್ತಕ ಮಾಡಿಕೊಳ್ಳಲು ಸಂಸ್ಥಾನಿಕರಿಗೆ ಅಪ್ಪಣೆಕೊಡದುದ ರಿಂದ ಅವರಲ್ಲಿಯೂ ಅಸಂತೋಷವು ಹಬ್ಬಿತು. ಕನಿಂಗನು ಅಯೋಧ್ಯಾ ಪ್ರಾಂತದ ಭೂಮಿಯ ತೆರಿಗೆಯ ವಿಷಯದಲ್ಲಿ ಹೊಸ ವ್ಯವಸ್ಥೆಯನ್ನು ಪ್ರಚುರ ಗೊಳಿಸಿದುದರಿಂದ ಅಲ್ಲಿಯ ಜಮೀನುದಾರರಲ್ಲಿ ಇಂಗ್ಲಿಷರ ವಿರುದ್ಧವಾಗಿ ಅಸಂತೋಷವು ಹಬ್ಬಿತು. ಈ ಅಸಂತೋಷವು ಬರುಬರುತ್ತ ಸೈನಿಕರಲ್ಲಿಯೂ ವ್ಯಾಪಿಸಿತು. ಈ ಕಾಲಕ್ಕೆ ಹೊಸ ಕಾಡತುಸಗಳು ಉಪಯೋಗದಲ್ಲಿ ಬಂದಿ ದ್ದುವು. ಅವುಗಳನ್ನು ಬಾಯಿಂದ ಕಡಿಯಬೇಕಾಗುತ್ತಿದ್ದಿತು. ಹಿಂದುಗಳಿಗೆ ಪವಿತ್ರವಾದ ಆಕಳ ಮತ್ತು ಮುಸಲ್ಮಾನರಿಗೆ ಅಸಹ್ಯವೆನಿಸುವ ಹಂದಿಯ ನೆಣದಲ್ಲಿ ಇವುಗಳನ್ನು ಎದ್ದುವರೆಂಬ ಸುದ್ದಿ ಎಲ್ಲೆಡೆಯಲ್ಲಿ ಹಬ್ಬಿ ಇದು ತಮ್ಮ ಧರ್ಮಗಳನ್ನು ಹಾಳು ಮಾಡಲು ಬ್ರಿಟಿಶರು ಒಡ್ಡಿದ ತಂತ್ರವಾಗಿದೆಂದು ಹಿಂದು ಮುಸಲ್ಮಾನರಿ ಬ್ಬರದೂ ಭಾವನೆಯಾಯಿತು. ಹೀಗೆ ಎಲ್ಲರ ಮನಸ್ಸುಗಳು ಅಸಂತುಷ್ಟವಾಗಿ ರಲು ಮೀರತದಲ್ಲಿ ಮೊದಲು ಬಂಡಾಯವು ಪ್ರಾರಂಭವಾಯಿತು. ಮುಂದೆ ಅದು ಉತ್ತರ ಮತ್ತು ಮಧ್ಯ ಹಿಂದುಸ್ಥಾನದಲ್ಲೆಲ್ಲ ಪಸರಿಸಿತು. ಅಯೋಧ್ಯಾ ಪ್ರಾಂತದ ಜಮೀನುದಾರರೂ ಸರದಾರರೂ ಸಿರಿವಂತರೂ ನಾಯಕತ್ವವನ್ನು ವಹಿಸಿದುದರಿಂದ ಆ ಪ್ರದೇಶದಲ್ಲಿಯೂ ಈ ಬೇಗೆ ತ್ವರೆಯಿಂದ ಹಬ್ಬಿತು. ದಿಲ್ಲಿ ಮತ್ತು ಅಯೋಧ್ಯೆ ಇವುಗಳ ನಡುವೆ ಹಿಂದಿ ಜನರ ಮತ್ತು ಬ್ರಿಟಿಶರ ನಡುವೆ ಕದನವಾಗಿ ಕಾನಪೂರ ದಲ್ಲಿ ಬ್ರಿಟಿಶ್ ಸೈನ್ಯದ ಒಂದು ಪಥಕವು ಸಂಹರಿಸಲ್ಪಟ್ಟಿತು (೧೮೫೭).

ಬಂಡಾಯದ ಬೇಗೆ ಉತ್ತರ ಹಿಂದುಸ್ಥಾನದಲ್ಲಿ ಹಬ್ಬಿತು. ಆದರೆ ಮುಂಬಯಿ ಮತ್ತು ಮದ್ರಾಸ ಭಾಗದಲ್ಲಿ ಹಬ್ಬಲಿಲ್ಲ. ಈ ಸಮಯದಲ್ಲಿ ಶಿಂದೆ, ಹೋಳಕರ, ಮತ್ತು ನಿಜಾಮ ಈ ಪ್ರಮುಖ ಸಂಸ್ಥಾನಿಕರು ರಾಜನಿಷ್ಠರಾಗಿ ಉಳಿದರು. ಪಂಜಾಬ ಪ್ರಾಂತದ ಶೀಖ ಸೈನ್ಯವು ರಾಜನಿಷ್ಠವಾಗಿ ಉಳಿದು ಬಂಡಾಯವನ್ನು ಮುರಿಯಲು ಬ್ರಿಟಿಷ್ ಸೇನೆಗೆ ನೆರವಾಯಿತು. ೧೮೫೮ರಲ್ಲಿ ಬಂಡಾಯವು ಮುರಿಯಲ್ಪಟ್ಟಿತು.

**ಹಿಂದುಸ್ಥಾನದ ಆಡಳಿತೆ ಈಸ್ಟ ಇಂಡಿಯಾ ಕಂಪನಿಯಿಂದ ಇಂಗ್ಲಂಡಿನ ರಾಣಿಯ ಕಡೆಗೆ ಬರುವುದು**—ಬಂಡಾಯವು ಮುರಿಯಲ್ಪಟ್ಟ ಬಳಿಕ ೧೮೫೮ರಲ್ಲಿ ಪಾರ್ಲಿಮೆಂಟು ಹಿಂದುಸ್ಥಾನವನ್ನು ಕುರಿತು ಒಂದು ಕಾಯದೆಯನ್ನು ಮಾಡಿತು. ಆ ಕಾಯದೆಯಂತೆ ಹಿಂದುಸ್ಥಾನದ ಆಡಳಿತದ ಎಲ್ಲ ಸೂತ್ರಗಳು ಈಸ್ಟ ಇಂಡಿಯಾ ಕಂಪನಿಯಿಂದ ಇಂಗ್ಲಂಡಿನ ರಾಣಿಯ ಕಡೆಗೆ ಬಂದುವು. ಇಂಗ್ಲಂಡಿನ ಮಂತ್ರಿಮಂಡಲದಲ್ಲಿ ಹಿಂದುಸ್ಥಾನಕ್ಕೆ ಸಂಬಂಧಿಸಿದ ಒಬ್ಬ ಕಾರ್ಯದರ್ಶಿಯನ್ನು ನೇಮಿಸಲಾಯಿತು. ಆತನ ನೇತೃತ್ವದಲ್ಲಿ ಬಾದಶಹನ ಹಿಂದುಸ್ಥಾನದ ಪ್ರತಿನಿಧಿಯಾಗಿ ವಾಯಿಸರಾಯ ಎಂಬ ಅಧಿಕಾರಿ ನಿಯೋಜಿಸಲ್ಪಟ್ಟನು. ಲಾರ್ಡ ಕನಿಂಗನೇ ಮೊದಲನೆಯ ವಾಯಿಸರಾಯನು. ಆಗ ವಿಕ್ಟೋರಿಯಾ ಮಹಾರಾಣಿ ಒಂದು ಪ್ರಕಟನೆಯನ್ನು ಹೊರಡಿಸಿದಳು. ಅದನ್ನು ೧ನೆಯ ನವೆಂಬರ ೧೮೫೮ರಲ್ಲಿ ಅಲಾಹಾಬಾದದಲ್ಲಿ ದೊಡ್ಡ ದರಬಾರವನ್ನು ನೆರೆಯಿಸಿ ಲಾರ್ಡ ಕನಿಂಗನು ಪ್ರಕಟಗೊಳಿಸಿದನು. 'ಹಿಂದಿ ಸಂಸ್ಥಾನಿಕರ ಮತ್ತು ಜನತೆಯ ಹಕ್ಕುಗಳು ಯೋಗ್ಯವಾಗಿ ಲಕ್ಷಿಸಲ್ಪಡುವುವು; ಸಂಸ್ಥಾನಿಕರೊಡನೆ ಮಾಡಿದ ಒಡಂಬಡಿಕೆ—ಒಪ್ಪಂದಗಳು ಸರಿಯಾಗಿ ಪಾಲಿಸಲ್ಪಡುವುವು; ದತ್ತಕಮಾಡಿಕೊಳ್ಳಲು ಸಂಸ್ಥಾನಿಕರಿಗೆ ಆತಂಕವು ಮಾಡಲ್ಪಡಲಿಕ್ಕಿಲ್ಲ; ಹಿಂದಿ ಜನರು ತಮ್ಮ ತಮ್ಮ ಧರ್ಮದಂತೆ ನಡೆಯಲು ಪೂರ್ಣ ಸ್ವತಂತ್ರರಿದ್ದು ಈ ವಿಷಯದಲ್ಲಿ ಬ್ರಿಟಿಶ್ ಸರಕಾರದವರು ಕೈಹಾಕಲಿಲ್ಲ; ಯೋಗ್ಯರಾದ ಹಿಂದಿಯರಿಗೆ ಯಾವುದೇ ಅಧಿಕಾರಸ್ಥಾನವು ದೊರೆಯಲು ಪ್ರತಿಬಂಧವಿಲ್ಲ; ಹಿಂದುಸ್ಥಾನದ ಆಡಳಿತವು ಹಿಂದುಸ್ಥಾನದ ಹಿತದ ದೃಷ್ಟಿಯಿಂದಲೆ ನಡೆಸಲಾಗುವುದು' ಮುಂತಾದ ಆಶ್ವಾಸನಗಳು ಈ ಪ್ರಕಟನೆಯಲ್ಲಿ ಅಡಕವಾಗಿದ್ದುವು. ೧೮೫೮ರಲ್ಲಿಯ ರಾಣಿಯ ಈ ಪ್ರಕಟನೆಯೆಂದರೆ ಹಿಂದಿಯರ ಮಗ್ನಾ ಚಾರ್ಟಾ ಎಂದೆ ತಿಳಿಯಲ್ಪಟ್ಟಿದೆ. ಬಳಿಕ ೧೮೭೭ರಲ್ಲಿ ದಿಲ್ಲಿಯಲ್ಲಿ ದೊಡ್ಡದಾದ ದರಬಾರವು ನೆರೆಯಿಸಲ್ಪಟ್ಟು ವಿಕ್ಟೋರಿಯಾ ಮಹಾರಾಣಿ ಕೈಸರ-ಇ-ಹಿಂದ (ಹಿಂದು

ಸ್ಥಾನದ ಸಾಮ್ರಾಜ್ಞಿ) ಎಂಬ ಬಿರುದನ್ನು ಧರಿಸಿರುವಳು ಎಂದು ಘೋಷಿಸಲ್ಪಟ್ಟಿತು.

**ಹಿಂದುಸ್ಥಾನದ ರಾಜ್ಯಘಟನೆಯಲ್ಲಿ ಸುಧಾರಣೆಗಳನ್ನು ಮಾಡುವ ವಿಷಯದಲ್ಲಿ ಕಾಯದೆಗಳು**—೧೮೫೮ರ ಪ್ರಕಟನೆಯಂತೆ ಸರಕಾರದಿಂದ ಅಭಿವಚನಗಳನ್ನು ಪೂರ್ಣಮಾಡಿಸಿಕೊಳ್ಳುವ ಮತ್ತು ಹಿಂದಿ ಜನರ ಆಕಾಂಕ್ಷೆಗಳು ಏನಿವೆಂಬದನ್ನು ವ್ಯಕ್ತಗೊಳಿಸುವ ಉದ್ದೇಶದಿಂದ ೧೮೮೫ರಲ್ಲಿ 'ರಾಷ್ಟ್ರೀಯ ಸಭೆ' (ಕಾಂಗ್ರೆಸ್) ಸ್ಥಾಪನವಾಯಿತು. ಹಿಂದಿಯರ ಆಕಾಂಕ್ಷೆಗಳು ಯಾವುವು ಎಂಬುದನ್ನು ಈ ರಾಷ್ಟ್ರೀಯ ಸಭೆ ಪ್ರಕಟಗೊಳಿಸಿದೆ. ಹಿಂದಿ ಜನರ ನ್ಯಾಯವಾದ ಚಳವಳಿಯ ಪರಿಣಾಮವಾಗಿ ೧೯೦೯ರಲ್ಲಿ ಹಿಂದುಸ್ಥಾನಕ್ಕೆ ಸಂಬಂಧಪಟ್ಟ ಒಂದು ಕಟ್ಟಳೆಯನ್ನು ಪಾರ್ಲಿಮೆಂಟು ಸಿದ್ಧಪಡಿಸಿ ಹಿಂದಿ ಜನರಿಗೆ ಕೆಲವು ಹಕ್ಕುಗಳನ್ನು ಕೊಟ್ಟಿತು. ಹಿಂದುಸ್ಥಾನದ ಸೆಕ್ರೆಟರಿ ಲಾರ್ಡ ಮೋರ್ಲೆ ಮತ್ತು ವಾಯಿಸರಾಯ ಲಾರ್ಡ ಮಿಂಟೊ ಇವರ ಸೂಚನೆಯಂತೆ ಈ ಸುಧಾರಣೆಗಳು ಆದುದರಿಂದ ಇವುಗಳಿಗೆ ಮೋರ್ಲೆ-ಮಿಂಟೊ ಸುಧಾರಣೆಗಳು ಎಂದು ಎನ್ನುವರು. ಮುಂದೆ ಇಂಗ್ಲಂಡಿನ **ಐದನೆಯ ಜಾರ್ಜ** ಚಕ್ರವರ್ತಿಗಳು ೧೯೧೧ರಲ್ಲಿ ಹಿಂದುಸ್ಥಾನಕ್ಕೆ ಬಂದು ದಿಲ್ಲಿಯಲ್ಲಿ ದೊಡ್ಡ ಸಭೆಯನ್ನು ನೆರೆಯಿಸಿ ಅಂದಿನಿಂದ ದಿಲ್ಲೀ ಪಟ್ಟಣವು ಹಿಂದುಸ್ಥಾನದ ರಾಜಧಾನಿಯಾಗಿ ಮಾಡಲ್ಪಟ್ಟಿದೆಂದು ಸಾರಿದರು. ಅನಂತರ ಸ್ವಲ್ಪ ದಿನಗಳಲ್ಲಿಯೇ ಮಹಾಯುದ್ಧವು ಪ್ರಾರಂಭವಾಯಿತು (೧೯೧೪). ಈ ಯುದ್ಧದಲ್ಲಿ ಹಿಂದೀ ಸೈನ್ಯವು ಮಹತ್ವದ ಕಾರ್ಯವನ್ನು ಮಾಡಿದುದರಿಂದ ೧೯೧೭ ಅಗಸ್ಟ ೨೦ನೆಯ ತಾರೀಖಿನ ದಿನ ಹಿಂದುಸ್ಥಾನದಲ್ಲಿ ಮೆಲ್ಲಮೆಲ್ಲನೆ 'ಹೊಣೆಗಾರ ರಾಜ್ಯಪದ್ಧತಿ'ಯನ್ನು ಸ್ಥಾಪಿಸುವುದು ತಮ್ಮ ವಿಚಾರವಿರುವುದಾಗಿ ಬ್ರಿಟಿಶ್ ಮಂತ್ರಿಮಂಡಲದವರು ಪಾರ್ಲಿಮೆಂಟಿನಲ್ಲಿ ಪ್ರಕಟಗೊಳಿಸಿದರು, ಮತ್ತು ಸಂಗತಿಗಳನ್ನು ಪ್ರತ್ಯಕ್ಷವಾಗಿ ತಿಳಿದುಕೊಳ್ಳಲು ಹಿಂದುಸ್ಥಾನದ ಸೆಕ್ರೆಟರಿ **ಮಾಂಟೆಗ್ಯೂ** ಇವರನ್ನು ಹಿಂದುಸ್ಥಾನದಲ್ಲಿ ಕಳುಹಿದರು. ಇವರು ಸೂಚಿಸಿದ ಯೋಜನೆಯಂತೆ ಬ್ರಿಟಿಶ್ ಪಾರ್ಲಿಮೆಂಟಿನವರು ೧೯೧೯ರಲ್ಲಿ ಹಿಂದುಸ್ಥಾನದ ರಾಜ್ಯಸುಧಾರಣೆಯ ಬಿಲ್ಲನ್ನು ಮಾನ್ಯಮಾಡಿದರು. ಈ ಹೊಸ ಘಟನೆಯಂತೆ ಕೆಲವು ರಾಜ್ಯಾಂಗಗಳಲ್ಲಿ ಹೊಣೆಗಾರ ರಾಜ್ಯಪದ್ಧತಿ ಪ್ರಾರಂಭವಾಯಿತು. ಬಳಿಕ ಹಿಂದುಸ್ಥಾನದ ರಾಜ್ಯಘಟನೆಯಲ್ಲಿ ಸುಧಾರಣೆಗಳನ್ನು ಸೂಚಿಸಲು **ಸರ್ ಜಾನ್ ಸಾಯಮನ್** ಇವರ ನೇತೃತ್ವದಲ್ಲಿ ಪಾರ್ಲಿಮೆಂಟು ಒಂದು ಮಂಡಲವನ್ನು ನಿಯೋಜಿಸಿತು. ಅದು ೧೯೩೦ರ ಜೂನ ತಿಂಗಳಲ್ಲಿ ತನ್ನ

ವರದಿಯನ್ನು ಪ್ರಸಿದ್ಧಿಸಿತು. ಬಳಿಕ ಹಿಂದುಸ್ಥಾನದ ರಾಜ್ಯಘಟನೆಯ ವಿಷಯ ದಲ್ಲಿ ಹಿಂದಿ ಮುಖಂಡರ ಅಭಿಪ್ರಾಯವನ್ನು ಕೇಳಲು ಹಿಂದೀ ಜನತೆ, ಸಂಸ್ಥಾನಿ ಕರು ಮತ್ತು ಬ್ರಿಟಿಶ್ ಪಾರ್ಲಿಮೆಂಟಿನ ಪ್ರತಿನಿಧಿಗಳು ಇವರದೊಂದು ವರ್ತುಲ ಪರಿಷತ್ತು (ರೌಂಡಟೇಬಲ್ ಕಾನ್‌ಫರನ್ಸ್) ಲಂಡನ್ ನಗರಿಯಲ್ಲಿ ಸೇರಿತು. ಇದರ ಉದ್ಘಾಟನೆಯ ಸಮಾರಂಭವು ಐದನೆಯ ಜಾರ್ಜ ಚಕ್ರವರ್ತಿಗಳ ಹಸ್ತದಿಂದ ೧೯೩೦ರ ನವೆಂಬರ ೧೨ನೆಯ ತಾರೀಖಿನ ದಿನ ನಡೆಯಿತು. ೧೯೩೧ ಸಪ್ಟಂಬರ ದಲ್ಲಿ ಕೂಡಿದ ಎರಡನೆಯ ವರ್ತುಲ ಪರಿಷತ್ತಿಗೆ ಮಹಾತ್ಮಾ ಗಾಂಧಿಯವರು ರಾಷ್ಟ್ರೀಯ ಸಭೆಯ ಪ್ರತಿನಿಧಿಯಾಗಿ ಹೋಗಿದ್ದರು. ೧೯೩೨ರ ನವೆಂಬರದಲ್ಲಿ ಪರಿಷತ್ತಿನ ಮೂರನೆಯ ಅಧಿವೇಶನವು ನೆರೆಯಿತು. ಆಮೇಲೆ ಹಿಂದುಸ್ಥಾನದ ರಾಜ್ಯಘಟನೆಯ ಕಾಯ್ದೆಯನ್ನು ಇಂಗ್ಲಿಶ್ 'ಪಾರ್ಲಿಮೆಂಟು ೧೯೩೫ರ ಅಗಸ್ಟ ೨ನೆಯ ತಾರೀಖಿನ ದಿನ ಮಾನ್ಯಮಾಡಿತು. ಈ ಹೊಸ ಕಟ್ಟಳೆಯಂತೆ ಬ್ರಿಟಿಶ್ ಹಿಂದುಸ್ಥಾನ ಮತ್ತು ಸಂಸ್ಥಾನಿ ಹಿಂದುಸ್ಥಾನ ಇವುಗಳ ಒಂದು ಸಂಯುಕ್ತವಾದ ರಾಷ್ಟ್ರವು (Federation) ಸ್ಥಾಪನೆಯಾಗಬೇಕಾಗಿದ್ದು ಈಗ ಪ್ರಾಂತಿಕ ಸರ ಕಾರಗಳ ಎಲ್ಲ ವಿಭಾಗಗಳಲ್ಲಿ ಹೊಣೆಗಾರ ರಾಜ್ಯಪದ್ಧತಿ ಪ್ರಾರಂಭವಾಗಿದೆ (೧ ಎಪ್ರಿಲ್ ೧೯೧೭).

## (೪) ಸ್ವಾಯತ್ತ ವಸಾಹತುಗಳು (ಡೊಮಿನಿಯನ್ಸ)

**ವಸಾಹತುಗಳೆಂದರೇನು?**—೧೬ನೆಯ ಶತಕದಿಂದ ಮುಂದಿನ ಮೂರು ನಾಲ್ಕು ನೂರು ವರ್ಷಗಳಲ್ಲಿ ಜಗತ್ತಿನ ಬೇರೆ ಬೇರೆ ಖಂಡಗಳಲ್ಲಿಯ ಪ್ರದೇಶ ವನ್ನು ಇಂಗ್ಲಂಡು ತನ್ನ ಅಂಕಿತದಲ್ಲಿ ತಂದಿತು. ಇವುಗಳಲ್ಲಿ ಕೆಲವು ಕಡೆಗೆ ಇಂಗ್ಲಿಶರು ಕೇವಲ ವ್ಯಾಪಾರಕ್ಕೋಸುಗ ಇಲ್ಲವೆ ರಾಜ್ಯಕಾರಭಾರವನ್ನು ಮಾಡುವುದಕ್ಕೋಸುಗ ಹೋಗುತ್ತಿದ್ದರು. ಆದರೆ ಅವರು ಕೆಲವು ಕಡೆಗೆ ಸ್ಥಾಯಿ ಯಾಗಿ ವಾಸವಾಗಿರಲು ಪ್ರಾರಂಭಿಸಿರುವರು. ಹೀಗೆ ನೆಲಸಿದ ಪ್ರದೇಶಗಳಿಗೆ ಉಪನಿವೇಶಗಳು ಇಲ್ಲವೆ ವಸಾಹತುಗಳು (Colonies) ಎಂದು ಹೆಸರು. ಇಂಗ್ಲಿಶರ ಸ್ವಾಧೀನವಾದ ಉಪನಿವೇಶಗಳಲ್ಲಿ ಕೆಲವು ಮೊದಲು ಫ್ರೆಂಚರ ಮತ್ತು ಡಚ್ಚರ ವಸಾಹತುಗಳಾಗಿದ್ದುವು. ಆಮೇಲೆ ಇಂಗ್ಲಿಶರು ಅಲ್ಲಿ ಹೋಗಿ ನೆಲ ಸಿದರು. ಹೀಗೆ ನೆಲಸಿದ ಇವರಿಗೆ ತಮ್ಮ ವಸಾಹತುಗಳ ಆಡಳಿತವು ತಮ್ಮ ಕೈಯಲ್ಲಿಯೇ ಇರಬೇಕೆಂದು ಎನಿಸುತ್ತಿದ್ದಿತು. ಈ ಜನರ ಇಚ್ಛೆಯನ್ನು ಇಂಗ್ಲಂಡು ಮೊದಮೊದಲು ಅಲಕ್ಷಿಸಿತು. ಆದುದರಿಂದ ಕೆನಡಾ ಉಪ

ನಿವೇಶದಲ್ಲಿ ಬಂಡಾಯವಾಯಿತು (೧೮೩೭). ಈ ಬಂಡಾಯವು ಅಡಗಿಸ ಲ್ಪಟ್ಟ ಬಳಿಕ ಅಲ್ಲಿಯ ಜನರ ಅಸಂತೋಷವನ್ನು ಕಳೆಯಲೆಂದು ಆ ಉಪ ನಿವೇಶಕ್ಕೆ ಸಾಮ್ರಾಜ್ಯಾಂತರ್ಗತ ಸ್ವರಾಜ್ಯದ (Self-Government) ಅಧಿ ಕಾರಗಳನ್ನು ಕೊಡಲಾಯಿತು. ಮೊದಲು ಕನಡಾ ಉಪನಿವೇಶಕ್ಕೆ ಸ್ವರಾಜ್ಯದ ಹಕ್ಕುಗಳು ದೊರೆತುವು (೧೮೪೦). ಆ ಬಳಿಕ ನ್ಯೂಫೌಂಡಲಂಡ್, ಆಸ್ಟ್ರೇಲಿಯಾ, ನ್ಯೂಝೀಲಂಡ, ದಕ್ಷಿಣ ಆಫ್ರಿಕಾ ಇವುಗಳಿಗೆ ಈ ಅಧಿಕಾರಗಳು ದೊರೆತುವು. ಸ್ವರಾಜ್ಯದ ಅಧಿಕಾರಗಳನ್ನು ಪಡೆದ ಈ ಉಪನಿವೇಶಗಳಿಗೆ ಮುಂದೆ "ಡೊಮಿ ನಿಯನ್" (Dominion) ಎಂದು ಹೆಸರು ಬಂದಿತು.

## ಕೆನಡಾ

ಕೆನಡಾ ಉಪನಿವೇಶವು ೧೭ನೆಯ ಶತಕದಲ್ಲಿ ಸೇಂಟ ಲಾರೆನ್ಸದ ಕಣಿವೆ ಯಲ್ಲಿ ಫ್ರೆಂಚಜನರಿಂದ ಸ್ಥಾಪನವಾಗಿತ್ತು. ಸಪ್ತವಾರ್ಷಿಕ ಯುದ್ಧದಲ್ಲಿ ಇದನ್ನು ಇಂಗ್ಲಂಡು ಗೆದ್ದುಕೊಂಡಿತು (೧೭೬೩). ಆಗ ಈ ಉಪನಿವೇಶದ ಪ್ರದೇಶವು ಬಹಳ ಚಿಕ್ಕದಾಗಿದ್ದು ಇಲ್ಲಿಯ ಜನಸಂಖ್ಯೆ ಅಲ್ಪವಾಗಿತ್ತು. ಈ ವಸಾಹತು ಇಂಗ್ಲಂಡಿನ ಸ್ವಾಧೀನವಾದ ಬಳಿಕ ಇಂಗ್ಲಿಶರು ಅಲ್ಲಿ ಹೋಗಿ ನೆಲಸಿದರು. ಮುಂದೆ ಅಮೇರಿಕೆಯ ಉಪನಿವೇಶಗಳೊಡನೆ ಇಂಗ್ಲಂಡಿನ ಯುದ್ಧವಾಗಿ ಅವು ಸ್ವತಂತ್ರ ವಾದುವು (೧೭೮೩). ಬ್ರಿಟಿಶ್ ಸಾಮ್ರಾಜ್ಯದೊಡನೆ ಸಂಬಂಧವನ್ನು ಬಿಡಲು ಬಯಸದ ಅನೇಕ ರಾಜನಿಷ್ಠರು ಅಲ್ಲಿಂದ ಕನಡಾ ಉಪನಿವೇಶದಲ್ಲಿ ವಾಸ ಮಾಡಲು ತೆರಳಿದರು. ಕನಡಾ ಉಪನಿವೇಶದ ವಾಯವ್ಯದ ವಿಸ್ತಾರವಾದ ಪ್ರದೇಶದಲ್ಲಿ ಇಂಗ್ಲಂಡಿನ ಹಡಸನ್ ಬೇ ಕಂಪನಿಯವರು ತಮ್ಮ ವ್ಯಾಪಾರದ ಕೆಲವು ಸ್ಥಳಗಳನ್ನು ಈ ಮುಂಚೆಯೇ ಸ್ಥಾಪಿಸಿದ್ದರು. ಆ ಭಾಗದಲ್ಲಿಯೂ ಹೊಸ ವಸತಿ ಬೆಳೆಯತೊಡಗಿತು. ಹೀಗೆ ಕನಡಾ ವಸಾಹತು ವಿಸ್ತಾರವಾಯಿತು. ೧೭೯೧ರಲ್ಲಿ ಪಿಟ್ಟನು (ಕಿರಿಯನು) ಮುಖ್ಯ ಮಂತ್ರಿಯಾಗಿರುವಾಗ ಪಾರ್ಲಿಮೆಂಟು ಕನಡಾ ಉಪನಿವೇಶಕ್ಕೆ ಸಂಬಂಧಪಟ್ಟ "ಕ್ವಿಬೆಕ್ ಅಕ್ಟ" ಎಂಬ ಕಾಯ್ದೆ ಯನ್ನು ಮಾಡಿತು. ಅದಕ್ಕನುಸಾರವಾಗಿ ಕನಡಾ ಉಪನಿವೇಶದಲ್ಲಿ ಅಂಟೇರಿಯೊ (ಉತ್ತರ ಕನಡಾ) ಮತ್ತು ಕ್ವಿಬೆಕ್ (ದಕ್ಷಿಣ ಕನಡಾ) ಎಂಬ ಎರಡು ಭಾಗ ಗಳನ್ನು ಮಾಡಲಾಯಿತು. ಅಂಟೇರಿಯೊ ಭಾಗದಲ್ಲಿಯ ಬಹು ಜನರು ಪ್ರಾಟೆಸ್ಟಂಟ ಪಂಥದ ಇಂಗ್ಲಿಶ್ ಜನರಾಗಿದ್ದರು. ಕ್ವಿಬೆಕ್ ಭಾಗದವರು ರೋಮನ್ ಕೆಥಲಿಕ್ ಫ್ರೆಂಚ ಜನರಾಗಿದ್ದರು. ಈ ಒಂದೊಂದು ಭಾಗಕ್ಕೆ

ಸ್ವತಂತ್ರ ಗವರ್ನರನನ್ನು ಮತ್ತು ಕಾಯ್ದೆ ಮಂಡಲವನ್ನು ಕೊಡಲಾಯಿತು, ಆದರೆ ಅಲ್ಲಿಯ ಮಂತ್ರಿಮಂಡಲವು ವಿಧಿಮಂಡಲಕ್ಕೆ ಹೊಣೆಗಾರವಿದ್ದಿಲ್ಲ. ವಿಧಿ-ಮಂಡಲದಲ್ಲಿ 'ಕೌನ್ಸಿಲ್' ಮತ್ತು 'ಅಸೆಂಬ್ಲಿ' ಎಂದು ಎರಡು ಸಭೆಗಳು ಇದ್ದುವು. ಅಸೆಂಬ್ಲಿಯಲ್ಲಿಯ ಎಲ್ಲ ಸದಸ್ಯರು ಜನನಿಯುಕ್ತರು, ಆದರೆ ಕೌನ್ಸಿಲಿನಲ್ಲಿಯ ಸದಸ್ಯರು ಸರಕಾರನಿಯುಕ್ತರಾಗಿರುತ್ತಿದ್ದರು. ಕನಡಾದಲ್ಲಿಯ ಫ್ರೆಂಚ ಮತ್ತು ಇಂಗ್ಲಿಶ್ ಜನರಿಗೆ ತಮ್ಮ ತಮ್ಮ ರೋಮನ್ ಕಥಲಿಕ ಇಲ್ಲವೆ ಪ್ರಾಟೆಸ್ಟಂಟ ಮತ ಸಂಪ್ರದಾಯದಂತೆ ಆಚರಿಸಲು ಪೂರ್ಣ ಸ್ವಾತಂತ್ರ್ಯವಿದ್ದಿತು. ಮುಂದೆ ಈ ಎರಡೂ ಭಾಗಗಳ ಜನರಲ್ಲಿ ಅಸಂತೋಷವು ಉಂಟಾಯಿತು. ಕ್ವಿಬೆಕ್ ಭಾಗ ದಲ್ಲಿ ಫ್ರೆಂಚ ಮತ್ತು ಇಂಗ್ಲಿಶರ ನಡುವೆ ವೈಮನಸ್ಸು ಉಂಟಾಗಿ ತಮ್ಮ ಹಿತ ಸಂಬಂಧವು ಅಲಕ್ಷಿಸಲ್ಪಡುತ್ತದೆಂದು ಫ್ರೆಂಚರ ದೂರು ಇದ್ದಿತು. ಅಂಟೇರಿಯೊ ಭಾಗದಲ್ಲಿ ಬಹು ಜನರು ಪ್ರಾಟೆಸ್ಟಂಟ ಪಂಥದ ಇಂಗ್ಲಿಶರೇ ಆಗಿದ್ದರು, ಆದರೆ ಕೌನ್ಸಿಲಿನಲ್ಲಿಯ ಸದಸ್ಯರು ಸರಕಾರನಿಯುಕ್ತರಾಗಿರದೆ ಜನನಿಯುಕ್ತರಾಗಿರ ಬೇಕೆಂದು ಅವರು ಕೇಳತೊಡಗಿದರು. ಹೀಗೆ ಉಂಟಾದ ಅಸಂತೋಷವು ಬೆಳೆದು ಕ್ವಿಬೆಕದಲ್ಲಿ ಪೆಪಿನೊ ಮತ್ತು ಅಂಟೇರಿಯೊ ಎಂಬಲ್ಲಿ ಮೆಕೆಂಝಿ ಇವರ ನಾಯಕತ್ವದಲ್ಲಿ ೧೮೩೭ರಲ್ಲಿ ಬಂಡಾಯವು ಪ್ರಾರಂಭವಾಯಿತು. ಉಗ್ರ ವಾದ ಉಪಾಯಗಳಿಂದ ಸರಕಾರದವರು ಅದನ್ನು ಮುರಿದರು. ಈ ಅಸಂತೋ ಷಕ್ಕೆ ಕಾರಣಗಳೇನು ಮತ್ತು ಅದನ್ನು ಕಳೆಯಲು ಯಾವ ಉಪಾಯವನ್ನು ಕೈಕೊಳ್ಳಬೇಕು ಎಂಬುದನ್ನು ಸೂಚಿಸಲು ಇಂಗ್ಲಂಡಿನ ಮಂತ್ರಿಮಂಡಲದವರು ೧೮೩೮ರಲ್ಲಿ ಲಾರ್ಡ ಡರ್‌ಹಮ ಎಂಬವನನ್ನು ಕನಡಾ ಉಪನಿವೇಶಕ್ಕೆ ಕಳಿಸಿ ದರು. ಆತನು ಅಲ್ಲಿಯ ಪರಿಸ್ಥಿತಿಯನ್ನು ಪ್ರತ್ಯಕ್ಷವಾಗಿ ಅವಲೋಕಿಸಿ ಅದನ್ನು ಕುರಿತು ಒಂದು ವರದಿಯನ್ನು ಬರೆದುಕಳಿಸಿದನು. ಅದರಲ್ಲಿ ಅವನು ಕನಡಾ ಉಪ ನಿವೇಶಕ್ಕೆ ಒಂದು ರಾಜ್ಯಘಟನೆಯನ್ನು ಸೂಚಿಸಿದನು. ಉಪನಿವೇಶಗಳ ರಾಜ್ಯ ಘಟನೆಯ ಚರಿತ್ರೆಯಲ್ಲಿ ಈ ವರದಿ ವಿಶೇಷವಾಗಿ ಪ್ರಸಿದ್ಧಿಯನ್ನು ಪಡೆದಿದೆ. ಏಕೆಂದರೆ ಇದರಲ್ಲಿ ಸೂಚಿಸಿದ ತತ್ವದಂತೆ ಮುಂದೆ ಇತರ ಉಪನಿವೇಶಗಳ ರಾಜ್ಯಘಟನೆ ಸಿದ್ಧಪಡಿಸಲಾಯಿತು. ಲಾರ್ಡ ಡರ್‌ಹಮನ ಸೂಚನೆಯಂತೆ ಪಾರ್ಲಿಮೆಂಟು ೧೮೪೦ರಲ್ಲಿ ಕನಡಾ ಉಪನಿವೇಶದ ಏಕೀಕರಣದ ಕಟ್ಟಳೆ ಯನ್ನು ಮಾಡಿತು. ಈ ಕಟ್ಟಳೆಯಂತೆ ಕನಡಾ ಉಪನಿವೇಶಕ್ಕೆ ಸ್ವರಾಜ್ಯದ (Self-Government) ಅಧಿಕಾರಗಳು ದೊರೆತು ಕೆಳಗೆ ಕಾಣಿಸಿದಂತೆ ವ್ಯವಸ್ಥೆ ಯಾಯಿತು. (೧) ಕನಡಾ ಉಪನಿವೇಶದಲ್ಲಿಯ ಎರಡು ಭಾಗಗಳನ್ನು ಕೂಡಿಸಲಾ

ಯಿತು. (೨) ಸಂಯುಕ್ತ ಕೆನಡಾ ದೇಶಕ್ಕಾಗಿ ಎರಡು ಮಂಡಲಗಳನ್ನೊಳಗೊಂಡ ಜನನಿಯುಕ್ತಪಾರ್ಲಿಮೆಂಟು ಸ್ಥಾಪಿಸಲಾಯಿತು, ಮತ್ತು ಅದಕ್ಕೆ ಕೆನಡಾದ ಅಂತ ರ್ಗತ ವಿಷಯಗಳನ್ನು ಕುರಿತು ಕಟ್ಟಳೆಗಳನ್ನು ರಚಿಸುವ ಅಧಿಕಾರವು ದೊರೆತಿತು. (೩) ಅಲ್ಲಿಯ ಮಂತ್ರಿಮಂಡಲವು ಈ ಪಾರ್ಲಿಮೆಂಟಿಗೆ ಹೊಣೆಗಾರವಾಗಿ ಮಾಡಲ್ಪಟ್ಟಿತು. (೪) ಇಂಗ್ಲಂಡು ಕಳುಹಿದ ಗವರ್ನರ ಜನರಲನು ಕಾರ್ಯ ನಿರ್ವಾಹಕ ಮಂಡಲದ ವಿಚಾರದಂತೆ ಆಡಳಿತವನ್ನು ನಡೆಯಿಸತಕ್ಕದ್ದು.

ಮುಂದೆ ೧೮೬೭ರಲ್ಲಿ ಪಾರ್ಲಿಮೆಂಟು ಕೆನಡಾ ದೇಶದ ವಿಷಯದಲ್ಲಿ **‘ನಾರ್ಥ ಅಮೇರಿಕಾ ಅಕ್ಟ’** ಎಂಬ ಕಟ್ಟಳೆಯನ್ನು ರಚಿಸಿತು. ಈ ಕಟ್ಟಳೆ ಯಿಂದ ಉತ್ತರ ಅಮೇರಿಕೆಯ ನೊವಾಸ್ಕೊಶಿಯಾ ಮತ್ತು ನ್ಯೂ ಬ್ರನ್ಸ-ವಿಕ್ ಈ ಉಪನಿವೇಶಗಳು ಕೆನಡಾ ದೇಶದಲ್ಲಿ ಸೇರಿಸಲ್ಪಟ್ಟುವು. ಬಳಿಕ ಪಶ್ಚಿಮ ಭಾಗದಲ್ಲಿ ಸ್ಥಾಪಿತವಾದ ಬ್ರಿಟಿಶ್ ಕೊಲಂಬಿಯಾ (೧೮೭೧), ಪ್ರಿನ್ಸ ಎಡ್ವರ್ಡ ದ್ವೀಪ (೧೮೭೩), ಮತ್ತು ಅಲ್ಬರ್ಟಾ ಮತ್ತು ಸಾಸಕಾಟಚೇವನ ಈ ವಸಾ ಹತುಗಳಾದರೂ ಕೆನಡಾದಲ್ಲಿ ಸೇರಿಕೊಂಡುವು. ನ್ಯೂಫೌಂಡಲಂಡ್ ಉಪ ನಿವೇಶಕ್ಕೆ ೧೮೫೫ರಲ್ಲಿಯೇ ಮೇಲೆ ಕಾಣಿಸಿದ ಹಕ್ಕುಗಳು ದೊರೆತಿದ್ದುವು. ಆದರೆ ಆ ವಸಾಹತು ಕೆನಡಾದಲ್ಲಿ ಸೇರಿಕೊಳ್ಳದೆ ಸ್ವತಂತ್ರವಾಗಿ ಉಳಿಯಿತು.

ಕೆನಡಾ ಉಪನಿವೇಶದಲ್ಲಿ ಕೆನಡಿಯನ್ ಪಸಿಫಿಕ್ ಎಂಬ ದೊಡ್ಡ ಲೋಹ ಮಾರ್ಗವು ೧೮೮೬ರಲ್ಲಿ ಪೂರ್ಣವಾಯಿತು. ಇದರಿಂದ ಒಳಭಾಗಗಳಲ್ಲಿ ಸಂಚಾರ ಸೌಕರ್ಯವು ಬೆಳೆದು ಒಕ್ಕಲತನ ಮತ್ತು ಕಚ್ಚಾ ಪದಾರ್ಥಗಳ ಅಭಿವೃದ್ಧಿ ಯಾಯಿತು.

## ಆಸ್ಟ್ರೇಲಿಯಾ

೧೭ನೆಯ ಶತಕದಲ್ಲಿ ಆಸ್ಟ್ರೇಲಿಯಾ ಮತ್ತು ನೂಝೀಲಂಡ್ ಈ ಪ್ರದೇಶ ಗಳನ್ನು ಡಚ್ಚರು ಶೋಧಿಸಿದ್ದರು. ಆದರೆ ಅವರು ಅಲ್ಲಿ ತಮ್ಮ ಉಪನಿವೇಶ ವನ್ನು ಸ್ಥಾಪಿಸಲಿಲ್ಲ. ಆ ಮೇಲೆ **ಕೆಪ್ಟನ್ ಕುಕ್** ಎಂಬ ಇಂಗ್ಲಿಶ್ ನಾವಿ ಕನು ಸು. ೧೭೭೦ರಲ್ಲಿ ಈ ಪ್ರದೇಶಗಳನ್ನು ಶೋಧಿಸಿ ಅವು ಬ್ರಿಟಿಶರ ಅಧಿಕಾರಕ್ಕೆ ಒಳಪಟ್ಟಿವೆ ಎಂದು ಸಾರಿದನು. ೧೭೭೬ರಲ್ಲಿ ಕುಕ್ಕನು ಈ ಪ್ರದೇಶಗಳತ್ತ ಮೂರನೆಯ ಸಲ ಪ್ರವಾಸಮಾಡಿ ಸೆಂಡವಿಚ್ ನಡುಗಡ್ಡೆಗಳನ್ನು ಶೋಧಿಸಿದನು. ಆದರೂ ಈ ಭೂಭಾಗಗಳು ಬಹಳ ದೂರವಿದ್ದುದರಿಂದ ಅಲ್ಲಿ ಉಪನಿವೇಶವನ್ನು ಸ್ಥಾಪಿಸಲು ಯಾರೂ ಪ್ರಯತ್ನಿಸಲಿಲ್ಲ. ಇಂಗ್ಲಂಡಿನ ಸೆರೆಯಾಳುಗಳನ್ನು ಮೊದಲು

ಅಮೇರಿಕೆಯ ಉಪನಿವೇಶಗಳಲ್ಲಿ ಕಳಿಸುತ್ತಿದ್ದರು. ಆದರೆ ಆ ಉಪನಿವೇಶಗಳು ೧೭೭೬ರಲ್ಲಿ ಸ್ವತಂತ್ರವಾದ ಬಳಿಕ ಸೆರೆಯಾಳುಗಳನ್ನು ಇಡಲು ಅನುಕೂಲ ಸ್ಥಳವೆಂದು ಆಸ್ಟ್ರೇಲಿಯವನ್ನು ಆರಿಸಲಾಯಿತು. ಈ ಯೋಜನೆಯಂತೆ ೧೭೮೮ರ ಜಾನೆವರಿ ತಿಂಗಳಲ್ಲಿ ಸೆರೆಯಾಳುಗಳಿಂದ ತುಂಬಿದ ಹಡಗು ನ್ಯೂ ಸಾವುಥ್ ವೇಲ್ಸದಲ್ಲಿಯ (ಆಸ್ಟ್ರೇಲಿಯದ ಪೂರ್ವ ದಂಡೆಯ ಪ್ರದೇಶ) ಜಕ್ಸನ್ ಬಂದರಕ್ಕೆ ಬಂದಿತು, ಮತ್ತು ಅಲ್ಲಿ ಅವರು ಒಕ್ಕಲಾದರು. ಆಸ್ಟ್ರೇಲಿಯದ ಭೂಮಿ




ಹುಲಸಾದುದು, ಅಲ್ಲಿಯ ವಾಯುಗುಣವು ಕುರಿ ಸಲಹುವ ಹೋರೆಯನ್ನು ಮಾಡಲು ಅನುಕೂಲವಿದ್ದುದರಿಂದ ಬೇರೆ ಅನೇಕ ಜನರು ಅಲ್ಲಿಗೆ ಬಂದು ನೆಲಸಿದರು. ಶಿಕ್ಷೆಯ ಅವಧಿಯನ್ನು ಮುಗಿಸಿದ ಸೆರೆಯಾಳುಗಳು ಅಲ್ಲಿಯೆ ಉಳಿದು ಮನೆ ಮಾಡಿದರು. ಹೀಗೆ ಜನಸಂಖ್ಯೆ ಬೆಳೆಯತೊಡಗಿತು. ಭೂಮಿ ವಿಪುಲ ವಾಗಿದ್ದುದರಿಂದ ಅಲ್ಲಿ ಒಕ್ಕಲಾಗುವವರಿಗೆ ಅದು ಹಣವಿಲ್ಲದೆ ದೊರೆಯುತ್ತಿತ್ತು. ೧೮೨೯ರಲ್ಲಿ ಎಡ್ವರ್ಡ ಗಿಬನ್ ವೇಕ್‌ಫೀಲ್ಡ ಎಂಬವನು ಹೊಸ ಉಪನಿವೇಶ ಗಳನ್ನು ಸ್ಥಾಪಿಸುವ ಕುರಿತು ಒಂದು ಗ್ರಂಥವನ್ನು ಪ್ರಕಟಿಸಿದನು. ಮಾತ್ರ

ಭೂಮಿಯಲ್ಲಿಯ ಸಾಮಾಜಿಕ ಪರಿಸ್ಥಿತಿಯನ್ನು ಉಪನಿವೇಶಗಳಲ್ಲಿ ಸ್ಥಾಪಿಸುವ ಉದ್ದೇಶವಿದ್ದರೆ ಅಲ್ಲಿಯ ಭೂಮಿಯನ್ನು ಹಣವಿಲ್ಲದೆ ಕೊಡದೆ ಕ್ರಯಕ್ಕೆ ಕೊಡಬೇಕು; ಇದರಿಂದ ಬಂದ ಹಣವನ್ನು ಉಪನಿವೇಶದ ಸಂಚಾರದ ಮಾರ್ಗಗಳು, ನೆಲದ ಸಾಗುವಳಿಗೆ ಬೇಕಾದ ಅಗತ್ಯಗಳು, ಒಕ್ಕಲಾಗುವವರಿಗೆ ಪ್ರೋತ್ಸಾಹಿಸುವುದು ಮುಂತಾದ ಕೆಲಸಕ್ಕೆ ವಿನಿಯೋಗಿಸಬೇಕು ಎಂದು ಆತನು ಸೂಚಿಸಿದನು. ವೇಕ್‌ಫೀಲ್ಡನ ಈ ತತ್ವಗಳು ಆ ಕಾಲದ ಉಪನಿವೇಶಗಳ ಸೆಕ್ರೆಟರಿಗೆ ಅತ್ಯಂತವಾಗಿ ಒಪ್ಪಿಗೆಯಾದುವು. ಆದುದರಿಂದ ೧೮೩೪ರಲ್ಲಿ ಉಪನಿವೇಶಸ್ಥಾಪಕ ಮಂಡಲವೊಂದು ಸ್ಥಾಪನವಾಯಿತು. ವೇಕ್‌ಫೀಲ್ಡನ ವಿಚಾರದಂತೆ ಅಲ್ಲಲ್ಲಿ ಉಪನಿವೇಶಗಳನ್ನು ಸ್ಥಾಪಿಸುವ ಪ್ರಯತ್ನಗಳು ಪ್ರಾರಂಭವಾದುವು. ನ್ಯೂ ಸಾವುಥ್ ವೇಲ್ಸ ಉಪನಿವೇಶದಂತೆ ದಕ್ಷಿಣ ಆಸ್ಟ್ರೇಲಿಯಾ, ವಿಕ್ಟೋರಿಯಾ, ಕ್ವೀನ್ಸಲಂಡ್, ಪಶ್ಚಿಮ ಆಸ್ಟ್ರೇಲಿಯಾ, ಉತ್ತರ ಪ್ರದೇಶಗಳು ಮತ್ತು ಟಸ್ಮಾನಿಯಾ ಈ ಉಪನಿವೇಶಗಳು ಮೆಲ್ಲಮೆಲ್ಲನೆ ಸ್ಥಾಪಿತವಾದುವು. ಇಲ್ಲಿ ಒಕ್ಕಲಾಗುವವರು ಕುರಿಗಳನ್ನು ಸಲಹಿ ಉಣ್ಣೆಯನ್ನು ಹೊರಡಿಸುವುದು, ಒಕ್ಕಲತನ ಈ ಉದ್ಯೋಗಗಳನ್ನೆ ಮಾಡುತ್ತಿದ್ದರು. ೧೮೫೧ರಲ್ಲಿ ನ್ಯೂ ಸಾವುಥ್ ವೇಲ್ಸ ಮತ್ತು ವಿಕ್ಟೋರಿಯಾ ಈ ಉಪನಿವೇಶಗಳಲ್ಲಿ ಚಿನ್ನದ ಕಣಿಗಳ ಶೋಧವಾದುದರಿಂದ ಕಾರಖಾನೆದಾರರು, ಕಲಾಕುಶಲರು ಮತ್ತು ಇಂಜಿನಿಯರರು ಮುಂತಾದ ಅನೇಕ ಜನರು ಆಸ್ಟ್ರೇಲಿಯದಲ್ಲಿ ಬರತೊಡಗಿದರು. ಇದರಿಂದ ಅಲ್ಲಿಯ ಜನಸಂಖ್ಯೆ ಬೆಳೆದು ಈ ಉಪನಿವೇಶಗಳು ಊರ್ಜಿತವಾದುವು. ನ್ಯೂ ಸಾವುಥ್ ವೇಲ್ಸ ಉಪನಿವೇಶಕ್ಕೆ ೧೮೫೫ರಲ್ಲಿ ಸ್ವರಾಜ್ಯದ (Self-Government) ಅಧಿಕಾರಗಳು ದೊರೆತುವು. ಮುಂದಿನ ನಾಲ್ವತ್ತು ವರ್ಷಗಳಲ್ಲಿ ಇತರ ಉಪನಿವೇಶಗಳಿಗೂ ಈ ಅಧಿಕಾರಗಳು ದೊರೆತುವು.

ಬಳಿಕ ಆಸ್ಟ್ರೇಲಿಯದ ಎಲ್ಲ ಉಪನಿವೇಶಗಳ ಒಂದು ಸಂಯುಕ್ತವಾದ ರಾಷ್ಟ್ರವನ್ನು ಸ್ಥಾಪಿಸಬೇಕೆಂದು ಅಲ್ಲಿಯ ಜನರಿಗೆ ಎನಿಸಿತು. ಈ ವಿಚಾರವು ಇಂಗ್ಲಿಶ್ ಪಾರ್ಲಿಮೆಂಟಿಗೆ ಮಾನ್ಯವಾಗಿ ೧೯೦೧, ಜಾನೆವರಿ ೧ನೆಯ ತಾರೀಖಿನ ದಿನ ಈ ವಿಷಯವನ್ನು ಕುರಿತು ಪಾರ್ಲಿಮೆಂಟು ಒಂದು ಕಟ್ಟಳೆಯನ್ನು ವಿಧಿಸಿತು. ಹೀಗೆ ಬ್ರಿಟಿಶರ ಸಾಮ್ರಾಜ್ಯಕ್ಕೆ ಸೇರಿದ **ಕಾಮನವೆಲ್ಥ ಆಫ್ ಆಸ್ಟ್ರೇಲಿಯಾ** ಎಂಬ ಒಂದು ಸಂಯುಕ್ತ ರಾಷ್ಟ್ರವು ಸ್ಥಾಪಿಸಲ್ಪಟ್ಟಿತು. **ಕನ್‌ಬೆರಾ** ಎಂಬುದು ಆಸ್ಟ್ರೇಲಿಯದ ರಾಜಧಾನಿಯಾಗಿದೆ.

## ನ್ಯೂಝೀಲಂಡ್

ಕ್ಯಾಪ್ಟನ್ **ಕುಕ್ಕನು** ೧೭೭೦ರಲ್ಲಿ ನ್ಯೂಝೀಲಂಡನ್ನು (ಇದರಲ್ಲಿ ಎರಡು ದ್ವೀಪಗಳಿವೆ) ಶೋಧಿಸಿದ್ದನು. ಆದರೆ ಅನೇಕ ವರ್ಷಗಳ ವರೆಗೆ ಅಲ್ಲಿ ಉಪನಿವೇಶವು ಸ್ಥಾಪನವಾಗಿರಲಿಲ್ಲ. ೧೮೩೯ರಲ್ಲಿ ವೆಲಿಂಗ್ಟನ್ ಎಂಬ ಸ್ಥಳದಲ್ಲಿ ಮೊದಲನೆಯ ಉಪನಿವೇಶವು ಸ್ಥಾಪನವಾಯಿತು. ನ್ಯೂಝೀಲಂಡಿನ ವಾಯುಗುಣವು ಚೆನ್ನಾಗಿರುವುದರಿಂದ ಅನೇಕ ಜನರು ಒಕ್ಕಲಾಗಲು ಅಲ್ಲಿಗೆ ಬಂದು ನೆಲಸಿದರು. ಅಲ್ಲಿಯ ಮೂಲನಿವಾಸಿಗಳಿಗೆ **ಮಾವರಿ** ಎಂದು ಹೆಸರು. ಇವರು ಶೂರರೂ ಬುದ್ಧಿವಂತರೂ ಇರುವರು. ಇವರು ೧೮೪೦ರಲ್ಲಿ **ವೆಟೆಂಗಿ** ಎಂಬಲ್ಲಿ ಇಂಗ್ಲಿಶರೊಡನೆ ಒಡಂಬಡಿಕೆಯನ್ನು ಮಾಡಿಕೊಂಡು ಇಂಗ್ಲಂಡಿನ ಆಧಿಪತ್ಯವನ್ನು ಒಪ್ಪಿಕೊಂಡರು. ಅನಂತರ ಉತ್ತರದಲ್ಲಿ ಆಕ್‌ಲಂಡ್ ಎಂಬ ಸ್ಥಳದಲ್ಲಿ ಇನ್ನೊಂದು ಉಪನಿವೇಶವು ಸ್ಥಾಪಿಸಲ್ಪಟ್ಟಿತು. ಮುಂದೆ ದಕ್ಷಿಣದ ದ್ವೀಪದಲ್ಲಿ ೧೮೪೧ರಲ್ಲಿ ನೆಲಸನ್, ೧೮೪೮ರಲ್ಲಿ ಒಟೆಂಗೊ ಮತ್ತು ೧೮೫೦ರಲ್ಲಿ ಕೆಂಟರಬರಿ ಈ ಉಪನಿವೇಶಗಳು ಸ್ಥಾಪನವಾದುವು. ನ್ಯೂಝೀಲಂಡಿನಲ್ಲಿಯ ಎಲ್ಲ ಉಪನಿವೇಶಗಳು ವೇಕ್‌ಫೀಲ್ಡನು ಸೂಚಿಸಿದ ಯೋಜನೆಯಂತೆ ಸ್ಥಾಪಿಸಲ್ಪಟ್ಟುವು. ಒಕ್ಕಲಾಗುವವರಿಗೆ ಹೊಲಗಳು ಉಚಿತವಾಗಿ ದೊರೆಯದೆ ಕ್ರಯಕ್ಕೆ ದೊರೆತುವು. ಹೊಲಗಳ ಮಾರಾಟದಿಂದ ಬರುವ ಹಣವನ್ನು ಮಾರ್ಗ, ಸೇತುವೆ ಮುಂತಾದ ಸಂಚಾರ ಸೌಕರ್ಯಗಳಿಗೆ ವಿನಿಯೋಗಿಸಲ್ಪಟ್ಟಿತು. ೧೮೫೨ರಲ್ಲಿ ನ್ಯೂಝೀಲಂಡ್ ಉಪನಿವೇಶಕ್ಕೆ ಪಾರ್ಲಿಮೆಂಟು ಸ್ವರಾಜ್ಯದ ಅಧಿಕಾರಗಳನ್ನು ಕೊಟ್ಟಿತು. ೧೮೬೧ರಿಂದ ೬೮ರ ವರೆಗೆ ಅಲ್ಲಿಯ ಮಾವರಿಯ ಜನರೊಡನೆ ವಸಾಹತುಗಾರರ ಹೋರಾಟವಾಗಿ ಕೊನೆಗೆ ಒಡಂಬಡಿಕೆಯಾಯಿತು. ಈ ಒಪ್ಪಂದದಂತೆ ಮಾವರಿ ಜನರಿಗೆ ಉಪನಿವೇಶದವರ ಸಮಾನವಾದ ಅಧಿಕಾರಗಳು ಇರಬೇಕೆಂದು ನಿರ್ಣಯವಾಯಿತು. ಅದರಿಂದ ಈಗ ಅಲ್ಲಿಯ ಶಾಸನಮಂಡಲದಲ್ಲಿ ಅವರ ಸದಸ್ಯರಿದ್ದು ಅಲ್ಲಿಯ ಆಡಳಿತದಲ್ಲಿಯೂ ಅವರ ಭಾಗವಿದೆ. ಮಾವರಿ ಜನರ ಸಂಖ್ಯೆ ಬಹಳ ಕಡಿಮೆ ಎಂದರೆ ಒಕ್ಕಲಾದವರ ೧/೮ದಷ್ಟು ಇದೆ. ೧೯೦೭ ಸಪ್ಟೆಂಬರದಿಂದ ನ್ಯೂಝೀಲಂಡ್ ಉಪನಿವೇಶಕ್ಕೆ 'ಡೊಮಿನಿಯನ್ ಆಫ್ ನ್ಯೂಝೀಲಂಡ್' ಎಂದು ಹೆಸರು ಪ್ರಾಪ್ತವಾಗಿದೆ.

## ದಕ್ಷಿಣ ಆಫ್ರಿಕೆ

ಪೋರ್ತುಗೀಜರು ಮೊದಲು ೧೫ನೆಯ ಶತಕದಲ್ಲಿ ಆಫ್ರಿಕೆಯ ದಕ್ಷಿಣ ತುದಿ ಯಾದ 'ಕೇಪ ಆಫ ಗುಡಹೋಪ' ಎಂಬುದನ್ನು ಶೋಧಿಸಿದರು. ಆದರೆ ಇದರ ಕಡೆಗೆ ಅವರು ಲಕ್ಷ್ಯಗೊಡಲಿಲ್ಲ. ಅನಂತರ ಇದರ ಕಡೆಗೆ ಡಚ್ಚರ ಲಕ್ಷ್ಯವು ಹೋಯಿತು. ತಾವು ಪೂರ್ವ ಪ್ರದೇಶಗಳಿಗೆ ಹೋಗುವ ಹಾದಿಯಲ್ಲಿಯ ನಟ್ಟನಡುವಿನ ಸ್ಥಳವೆಂದು ೧೬೫೫ರಲ್ಲಿ ಇಲ್ಲಿ ಅವರು ಒಂದು ಪಾಳ್ಯವನ್ನು ಸ್ಥಾಪಿ ಸಿದರು. ಮೆಲ್ಲಮೆಲ್ಲನೆ ಡಚ್ಚ ಜನರು ಇಲ್ಲಿಗೆ ಬಂದು ನೆಲಸತೊಡಗಿದರು. ಅವರು ಗುಲಾಮರನ್ನು ಇಟ್ಟುಕೊಂಡು ಅವರ ಸಾಹಾಯ್ಯದಿಂದ ಒಕ್ಕಲತನ ವನ್ನು ಮಾಡುತ್ತಿದ್ದರು. ಆದುದರಿಂದ ಅವರಿಗೆ ಬೋೞರ (ಡಚ್ಚ ಒಕ್ಕಲಿಗ) ಎಂಬ ಹೆಸರು ಬಂದಿತು. ಆಫ್ರಿಕೆಯ ಕಾಫೀರ, ಹಾಟೆಂಟಾಟ, ಝುಲು, ಬಟೋಸ ಮೊದಲಾದ ಕಾಡುಜನರೊಡನೆ ಹೋರಾಡಬೇಕಾದುದರಿಂದ ಅವರು ಸಾಹಸಿಗರೂ ಗಟ್ಟಿಗರೂ ಆದರು. ಸುಧಾರಿಸಿದ ಪ್ರಪಂಚದಿಂದ ಬಹಳ ದೂರ ಇರುತ್ತಿದ್ದುದರಿಂದ ಅವರ ಮನಸ್ಸು ಸಂಕುಚಿತವಾಗಿತ್ತು. ನೆಪೋಲಿಯನ ನೊಡನೆ ನಡೆದ ಯುದ್ಧಕಾಲದಲ್ಲಿ ಈ ಉಪನಿವೇಶವು ಫ್ರೆಂಚರ ಅಧಿಕಾರಕ್ಕೆ ಒಳಪಟ್ಟುದರಿಂದ ಇಂಗ್ಲಿಶರು ಅದನ್ನು ಗೆದ್ದುಕೊಂಡರು. ೧೮೧೪ರಲ್ಲಿ ಅದು ಪೂರ್ಣವಾಗಿ ಇಂಗ್ಲಂಡಿನ ಸ್ವಾಧೀನವಾಯಿತು. ಮುಂದೆ ೧೮೨೦ರಿಂದ ಇಂಗ್ಲಿ ಶರು ಇಲ್ಲಿ ಬಂದು ವಾಸಿಸತೊಡಗಿದರು. ಕಾಲಕ್ರಮದಲ್ಲಿ ಈ ಉಪನಿವೇಶದ ಪೂರ್ವಕ್ಕೆ ನಾತಾಳ ಎಂಬ ಇನ್ನೊಂದು ಉಪನಿವೇಶವು ಸ್ಥಾಪಿಸಲ್ಪಟ್ಟಿತು.

ಕೇಪ ಕಾಲನಿ ಉಪನಿವೇಶದಲ್ಲಿಯ ಬೋೞರರ ಮತ್ತು ಇಂಗ್ಲಿಶರ ಆಚಾರ ವಿಚಾರ, ನೀತಿ ನಡೆವಳಿ ಮತ್ತು ಗ್ರಹಿಕೆಗಳಲ್ಲಿ ಬಹಳ ವ್ಯತ್ಯಾಸವಿದ್ದುದರಿಂದ ಅವರ ನಡುವೆ ಕಲಹಗಳು ಆಗತೊಡಗಿದುವು. ಮೂಲನಿವಾಸಿಗಳನ್ನು ಸರಿ ಯಾಗಿ ನಡೆಸಿಕೊಳ್ಳಬೇಕು ಮತ್ತು ಗುಲಾಮರ ಮುಕ್ತತೆಯನ್ನು ಮಾಡಬೇಕು ಎಂದು ಇಂಗ್ಲಿಶ್ ಪಾರ್ಲಿಮೆಂಟು ಮಾಡಿದ ಕಟ್ಟಳೆಗಳೂ ಅವರಿಗೆ ಒಪ್ಪಿಗೆಯಾಗ ಲಿಲ್ಲ. ಈ ಕಟ್ಟಳೆಗಳಿಗೆ ತಲೆಬಾಗಿ ಇಂಗ್ಲಂಡಿನ ಅಂಕೆಯಲ್ಲಿ ಇರುವುದಕ್ಕಿಂತ ಬೇರೆ ಕಡೆಗೆ ಹೋಗಿ ಸ್ವತಂತ್ರವಾಗಿ ತಮ್ಮದೊಂದು ಉಪನಿವೇಶವನ್ನು ಸ್ಥಾಪಿಸ ಬೇಕೆಂದು ಅವರು ಇಚ್ಛಿಸಿದರು. ಆಮೇರೆಗೆ ಅನೇಕ ಬೋೞರರು ತಮ್ಮ ಹೆಂಡರು ಮಕ್ಕಳೊಂದಿಗೆ ಕೇಪ ಕಾಲನಿ ಉಪನಿವೇಶದಿಂದ ತೆರಳಿ, ಆರೆಂಜ ಮತ್ತು ವಾಲ ನದಿಗಳ ನಡುವಿನ ಪ್ರದೇಶದಲ್ಲಿ 'ಆರೆಂಜ ಫ್ರೀ ಸ್ಟೇಟ' ಮತ್ತು ವಾಲ

ನದಿಯ ಆಚೆಗೆ 'ಟ್ರೆನ್ಸವಾಲ' ಎಂಬ ಎರಡು ಉಪನಿವೇಶಗಳನ್ನು ಸ್ಥಾಪಿಸಿದರು (೧೮೩೫—೪೯). ಈ ಉಪನಿವೇಶಗಳ ಸ್ವಾತಂತ್ರ್ಯವನ್ನು ಇಂಗ್ಲಂಡು ಒಪ್ಪಿಕೊಂಡಿತು. ಈ ಉಪನಿವೇಶಗಳಿಗೆ ಸ್ವಾತಂತ್ರ್ಯವು ದೊರೆತರೂ ಅವುಗಳ ಉನ್ನತಿಯಾಗಲಿಲ್ಲ. ಉಪನಿವೇಶಗಳ ಆಡಳಿತವನ್ನು ಕುರಿತು ಅಲ್ಲಿಯ ಮುಖಂಡರಲ್ಲಿ ಮತಭೇದಗಳು ಉಂಟಾದುದರಿಂದ ಮೇಲಿಂದ ಮೇಲೆ ಜಗಳಗಳು ಆಗುತ್ತಿದ್ದುವು. ಉಪನಿವೇಶಗಳ ಉತ್ಪನ್ನವು ಕಡಿಮೆ ಇದ್ದು ವೆಚ್ಚವು ಹೆಚ್ಚು ಇದ್ದುದರಿಂದ ಬೆಲೆಗೆಡುವ (ದಿವಾಳಿ ತೆಗೆವ) ಸಂದರ್ಭಗಳು ಬರುತ್ತಿದ್ದುವು. ಇದಲ್ಲದೆ ಅಲ್ಲಿಯ ಮೂಲನಿವಾಸಿಗಳೊಡನೆ ಮೇಲಿಂದ ಮೇಲೆ ಬೋರ ಜನರ ತಿಕ್ಕಾಟವಾಗುತ್ತಿದ್ದುದರಿಂದ ಅವರು ಈ ಬಿಳಿಯ ಜನರ ವಿರುದ್ಧವಾಗಿ ಯಾವ ಕಾಲಕ್ಕೆ ಬಂಡನ್ನು ಮಾಡುವರೊ ಎಂಬ ಭೀತಿಯಿದ್ದಿತು. ಟ್ರೆನ್ಸವಾಲ ಉಪನಿವೇಶದ ಅಂತರ್ಗತ ಆಡಳಿತದಲ್ಲಿ ಕೈಯಿಕ್ಕದೆ ಇದ್ದರೆ ಇತರ ಉಪನಿವೇಶಗಳ ಮೇಲೆಯೂ ಸಂಕಟವನ್ನು ಕರೆತಂದಂತೆ ಎಂದು ಬ್ರಿಟಿಶ ಸರಕಾರಕ್ಕೆ ಎನಿಸತೊಡಗಿತು. ಇದೇ ಕಾಲಕ್ಕೆ ಕೇಪ ಕಾಲನಿಯಲ್ಲಿಯ **ಕಿಂಬರ್ಲೆ** ಎಂಬಲ್ಲಿ ವಜ್ರದ ಕಣಿಗಳು ದೊರೆತುದರಿಂದ ಅನೇಕ ಯುರೋಪಿಯನರು ಅಲ್ಲಿ ಹೋಗಿ ನೆಲಸಿದರು. ಹೀಗಾಗಲು ಮುಂದೆ ೧೮೭೭ರಲ್ಲಿ ಈ ಎರಡು ಉಪನಿವೇಶಗಳನ್ನು ಇಂಗ್ಲಂಡು ಸ್ವಾಧೀನ (ಖಾಲಸಾ) ಮಾಡಿತು. ಈ ಉಪನಿವೇಶಗಳು ಇಂಗ್ಲಿಶರ ಸ್ವಾಧೀನವಾದ ಬಳಿಕ ಟ್ರೆನ್ಸವಾಲದ ಸೀಮೆಯ ಮೇಲೆ ಇರುತ್ತಿದ್ದ ಝುಲು ಜನರೊಡನೆ ಬ್ರಿಟಿಶ್ ಸರಕಾರದ ಸಂಬಂಧವು ಹೆಚ್ಚಾಗಿ ಉಂಟಾಯಿತು. ಅವರೊಡನೆ ಜಗಳಗಳು ಹುಟ್ಟತೊಡಗಿದುವು. ಕೊನೆಗೆ ೧೮೭೯ರಲ್ಲಿ ಬ್ರಿಟಿಶ್ ಮತ್ತು ಝುಲು ಜನರಲ್ಲಿ ಯುದ್ಧವು ಪ್ರಾರಂಭವಾಯಿತು. ಝುಲು ಜನರ ಕೆಟಿವಾಯೊ ಎಂಬ ಮುಖಂಡನು ೪೦,೦೦೦ ದಂಡನ್ನು ಕೂಡಿಸಿ ಟ್ರೆನ್ಸವಾಲದ ಮೇಲೆ ಏರಿಬಂದನು. **ಇಸೆಂಡಲವ್ಹಾನಾ** ಎಂಬಲ್ಲಿ ಸಮರವೆಸಗಿ ಬ್ರಿಟಿಶ್ ಜನರ ಪರಾಜಯವಾಯಿತು. ಆದರೆ ಮುಂದೆ **ಉಲುಂಡಿ** ಎಂಬಲ್ಲಿ ಝುಲು ಜನರ ಪರಾಭವವಾಗಿ ಅವರ ಮುಖಂಡನಾದ ಕೆಟಿವಾಯೊ ಕೈಸೆರೆಯಾದನು. ತಮ್ಮ ಉಪನಿವೇಶಗಳನ್ನು ಇಂಗ್ಲಿಶರು ಸ್ವಾಧೀನಮಾಡಿಕೊಂಡುದು ಬೋರ ಜನರ ಮನಸ್ಸಿಗೆ ಬಂದಿರಲಿಲ್ಲ. ಝುಲು ಜನರ ಭಯವು ನಷ್ಟವಾದ ಬಳಿಕ ೧೮೮೧ರಲ್ಲಿ ಅವರು ಬಂಡನ್ನು ಹೂಡಿದರು. **ಮಾಜುಬಾ** ದಿನ್ನೆಯ ಬಳಿಯಲ್ಲಿ ಕೋಲೆ ಎಂಬವನ ಕೈಕೆಳಗಿನ ಬ್ರಿಟಿಶ ಸೈನ್ಯವನ್ನು ಅವರು ಸೋಲಿಸಿದರು. ಅನಂತರ ಒಡಂಬಡಿಕೆ ಆಯಿತು. ಗ್ಲಡ್‌ಸ್ಟನನ ಮಂತ್ರಿಮಂಡಲದವರು

ಟ್ರೆನ್ಸವಾಲ ಮತ್ತು ಆರೇಂಜ ಫ್ರೀ ಸ್ಟೇಟ ಈ ಬೋರ ಉಪನಿವೇಶಗಳ ಸ್ವಾತಂತ್ರ್ಯವನ್ನು ಮಾನ್ಯಮಾಡಿದರು.

ಟ್ರೆನ್ಸವಾಲ ಉಪನಿವೇಶವು ಸ್ವತಂತ್ರವಾದ ಬಳಿಕ ಅಲ್ಲಿ ಪ್ರಜಾಪ್ರಭುತ್ವವು ಸ್ಥಾಪನವಾಯಿತು. **ಪಾಲ ಕ್ರೂಗರ** ಎಂಬ ಬೋರ ಮುಖಂಡನು ಅದರ ಅಧ್ಯಕ್ಷನಾದನು. ಈತನು ಬಹಳ ಮಹತ್ವಾಕಾಂಕ್ಷಿಯಾಗಿದ್ದನು. ತಮ್ಮ ಉಪನಿವೇಶದ ಮೇರೆಗಳನ್ನು ಎಲ್ಲ ದಿಕ್ಕಿಗೆ ಹಿಗ್ಗಿಸಿ ತನ್ನ ರಾಷ್ಟ್ರವನ್ನು ಬಲಾಢ್ಯ ವಾಗಿಯೂ ಶ್ರೇಷ್ಠವಾಗಿಯೂ ಮಾಡಬೇಕೆಂದು ಹವಣಿಸುತ್ತಿದ್ದನು. ಆದರೆ ದಕ್ಷಿಣ ಆಫ್ರಿಕೆಯ ಕೇಪ ಕಾಲನಿ ಉಪನಿವೇಶದ ಮುಖ್ಯ ಮಂತ್ರಿಯಾದ **ಸೆಸಿಲ ರ್‍ಹೋಡ್ಸ** ಎಂಬ ಸಾಹಸಿ ಇಂಗ್ಲಿಶ್ ಪುರುಷನು ದಕ್ಷಿಣ ಆಫ್ರಿಕೆಯಲ್ಲಿ ಇಂಗ್ಲಿಶರ ಪ್ರದೇಶಗಳನ್ನು ಹೆಚ್ಚಿಸಬೇಕೆಂದು ಬಗೆಯುತ್ತಿದ್ದನು. ಆದುದರಿಂದ ಪಾಲ ಕ್ರೂಗ ರನ ಮಾರ್ಗದಲ್ಲಿ ಹಲವು ಆತಂಕಗಳು ಹುಟ್ಟಿದುವು. ಪಶ್ಚಿಮ ದಿಕ್ಕಿಗೆ ತನ್ನ ದೇಶ ವನ್ನು ಬೆಳೆಯಿಸಲು ಟ್ರೆನ್ಸವಾಲವು ಪ್ರಯತ್ನಿಸಿತು. ಅದನ್ನು ನೋಡಿ ಆ ಕಡೆಯ ಬಚೂಅನಾ ಲಂಡ್ ಎಂಬ ಈ ಪ್ರದೇಶವು ಬ್ರಿಟಿಶರ ಕಟಾಕ್ಷದಲ್ಲಿದೆ ಎಂದು ಇಂಗ್ಲಂಡು ಸಾರಿತು (೧೮೮೫). ಹೀಗೆಯೆ ಟ್ರೆನ್ಸವಾಲದ ಪೂರ್ವ ದಿಕ್ಕಿನ ವಿಸ್ತಾರಕ್ಕೂ ಎಡರಾಗಬೇಕೆಂದು ಆ ಕಡೆಯ 'ಝುಲುಲಂಡ್' ಪ್ರದೇ ಶದ ಮೇಲೆಯೂ ಇಂಗ್ಲಂಡು ತನ್ನ ವರ್ಚಸ್ಸನ್ನು ಪ್ರಸ್ಥಾಪಿಸಿತು (೧೮೮೭). ಅನಂತರ ೧೮೮೯ರಲ್ಲಿ 'ದಕ್ಷಿಣ ಆಫ್ರಿಕಾ ಕಂಪನಿ' ಎಂಬ ಮಂಡಲವು ಸೆಸಿಲ ರ್‍ಹೋಡ್ಸನ ನಾಯಕತ್ವದಲ್ಲಿ ಸ್ಥಾಪಿಸಲ್ಪಟ್ಟು ಟ್ರೆನ್ಸವಾಲದ ಉತ್ತರ ದಿಕ್ಕಿನ ವಿಸ್ತಾರವಾದ ಪ್ರದೇಶವನ್ನು ಸ್ವಾಧೀನಮಾಡಿಕೊಂಡಿತು. ಸೆಸಿಲ ರ್‍ಹೋಡ್ಸನ ಹೆಸರಿನಿಂದ ಆ ಭಾಗಕ್ಕೆ **ರ್‍ಹೋಡೇಶಿಯಾ** ಎಂದು ಹೆಸರು ಉಂಟಾ ಯ್ತು. ಹೀಗೆ ಪರಿಸ್ಥಿತಿ ಇರುವಾಗ ೧೮೮೬ರಲ್ಲಿ ಟ್ರೆನ್ಸವಾಲದಲ್ಲಿ ಚಿನ್ನದ ಕಣಿಗಳ ಶೋಧವಾದುದರಿಂದ ಟ್ರೆನ್ಸವಾಲದ ಅಂತರ್ಗತ ರಚನೆ ಬದಲಾಗ ತೊಡಗಿತು. ಯುರೋಪದ ಬೇರೆ ಬೇರೆ ದೇಶಗಳಿಂದ ಅನೇಕ ಜನರು ಈ ಉಪ ನಿವೇಶಕ್ಕೆ ಬರತೊಡಗಿದರು. **ಜೋಹಾನ್ಸಬರ್ಗ** ನಗರವು ಸ್ಥಾಪಿಸಲ್ಪ ಟ್ಟಿತು. ಚಿನ್ನದ ಕಣಿಯ ನಿಮಿತ್ತದಿಂದ ಟ್ರೆನ್ಸವಾಲದಲ್ಲಿ ಬರುವ ಯುರೋ ಪಿಯನ ಜನರ ಸಂಖ್ಯೆ ಬಹಳವಾಗಿ ಬೆಳೆಯುತ್ತ ಅಲ್ಪಾವಧಿಯಲ್ಲಿ ಅಲ್ಲಿಯ ಬೋರ ಜನರ ಅರ್ಧಕ್ಕಿಂತ ಹೆಚ್ಚಾಯಿತು. ಇವರಲ್ಲಿ ಬಹು ಜನರು ಇಂಗ್ಲಿ ಶರು ಆಗಿದ್ದರು. ಟ್ರೆನ್ಸವಾಲದ ಚಿನ್ನಕ್ಕಾಗಿ ಅಲ್ಲಿಗೆ ಬರುವ ಯುರೋಪಿಯನರ ವಿಷಯದಲ್ಲಿ ಪಾಲ ಕ್ರೂಗರನು ಸಹಾನುಭೂತಿಯುಳ್ಳವನಾಗಿರಲಿಲ್ಲ. ಈ ಜನರು

'ಯುಟಲಿಂಡರ್ಸ' ಎಂದರೆ 'ಪರಕೀಯ'ರೆಂದು ಕರೆಯಲ್ಪಡುತ್ತಿದ್ದರು. ಆತನು ಕಣಿಗಳಿಂದ ಹೊರಡುವ ಚಿನ್ನದ ಮೇಲೆ ಕಷ್ಟಕರವಾದ ಕರಗಳನ್ನು ಹಾಕಿದನು. ಟ್ರಾನ್ಸವಾಲದ ಆಡಳಿತದಲ್ಲಿ ಬೋರರಲ್ಲದ ಇತರ ಯುರೋಪಿಯನರಿಗೆ ಅನುವು ಇರಬಾರದೆಂದು ಆಯ್ಕೆಯಲ್ಲಿ ಮತಕೊಡುವ ವಿಧಿಮಂಡಲದ ಸದಸ್ಯರಾಗುವ ಮುಂತಾದ ಅಧಿಕಾರಗಳನ್ನು ಕೊಡಲಿಲ್ಲ. ಚಿನ್ನಕ್ಕಾಗಿ ಅಲ್ಲಿಗೆ ಬಂದ ಯುರೋಪಿಯನರು ಇಡಿಯ ಜನಸಂಖ್ಯೆಗೆ ಅರ್ಧಕ್ಕಿಂತ ಹೆಚ್ಚು ಸಂಖ್ಯೆಯುಳ್ಳವರು ಆಗಿದ್ದರು. ಇದಲ್ಲದೆ ವ್ಯಾಪಾರ, ಸಂಪತ್ತು ಮತ್ತು ಸಂಸ್ಕೃತಿ ಈ ವಿಷಯಗಳಲ್ಲಿ ಇವರು ಬೋರ ಜನರಿಗಿಂತ ಮುಂದುವರಿದವರು ಆಗಿದ್ದರು. ಹೀಗಿದ್ದು ಆಡಳಿತ್ತದಲ್ಲಿ ತಮಗೆ ಪಾಲು ದೊರೆಯದೆ ಇದ್ದುದು ಅವರಿಗೆ ರುಚಿಸಲಿಲ್ಲ. ಇಂತು ಟ್ರಾನ್ಸವಾಲದ ಈ ಪರಕೀಯರಲ್ಲಿ ಅಸಂತೋಷವು ಉಂಟಾಯಿತು. ತಮ್ಮ ಸ್ಥಿತಿಯನ್ನು ಉತ್ತಮಗೊಳಿಸುವ ಕುರಿತು ಅವರು ಯೋಚಿಸ ತೊಡಗಿದರು. ಮುಂದೆ ದೊಂಬೆಗಳು ಏಳತೊಡಗಿದುವು. ಆಗ ಅಲ್ಲಿಯ ಸಮಸ್ಯೆಗಳನ್ನು ಸಮಾಧಾನಕರವಾಗಿ ತೀರ್ಮಾನಿಸಬೇಕು ಮತ್ತು ಬ್ರಿಟಿಶ್ ಬೋರ ಜನರಲ್ಲಿ ಸ್ನೇಹಸಂಬಂಧವು ನೆಲೆಗೊಳ್ಳಬೇಕು ಎಂಬ ಉದ್ದೇಶದಿಂದ ಉಪನಿವೇಶದ ಕಾರ್ಯದರ್ಶಿ ಚೆಂಬರಲೇನ್ ಮತ್ತು ಕೇಪ ಕಾಲನಿ ಉಪನಿವೇಶದ ಬ್ರಿಟಿಶ್ ಹಾಯಕಮಿಶನರ ಮಿ. ಮಿಲ್ನರ ಇವರು ಒಡಂಬಡಿಕೆಗಾಗಿ ಹಲವು ಪ್ರಯತ್ನಗಳನ್ನು ಮಾಡಿದರು. ಆದರೆ ಪಾಲ ಕ್ರೂಗರನ ದುರಾಗ್ರಹದಿಂದ ಅವು ಸಫಲವಾಗಲಿಲ್ಲ. ಆ ಮೇಲೆ ಒಡನೆಯೆ ೧೮೯೯ರಲ್ಲಿ ಬೋರ ಮತ್ತು ಬ್ರಿಟಿಶ್ ಇವರ ನಡುವೆ ಯುದ್ಧವು ಪ್ರಾರಂಭವಾಯಿತು. ಆರೇಂಜ ಫ್ರೀ ಸ್ಟೇಟ ಉಪನಿವೇಶದವರು ಬೋರ ಪಕ್ಷವನ್ನು ಕಟ್ಟಿ ಬ್ರಿಟಿಶರೊಡನೆ ಕಾದಲು ನಿರ್ಧರಿಸಿದರು.

**ಬೋರರೊಡನೆ ಯುದ್ಧವು,** ೧೮೯೯-೧೯೦೨–ಎಂದಾದರೊಮ್ಮೆ ಬ್ರಿಟಿಶರೊಡನೆ ಯುದ್ಧವಾಗುವುದು ಖಂಡಿತವೆಂದರಿತು ಪಾಲ ಕ್ರೂಗರನು ಮೊದಲಿನಿಂದಲೂ ಸಮರಸಿದ್ಧತೆಯನ್ನು ನಡೆಯಿಸಿದ್ದನು. ಬಾಲ್ಯದಿಂದಲೂ ದಕ್ಷಿಣ ಆಫ್ರಿಕೆಯಲ್ಲಿಯೆ ಬೆಳೆದುದರಿಂದ ಬೋರ ಜನರಿಗೆ ಅಲ್ಲಿಯ ಪ್ರದೇಶಗಳು ಸುಪರಿಚಿತವಾಗಿದ್ದುವು. ಅವರು ದೃಢಕಾಯರು, ಕಷ್ಟಸಹಿಷ್ಣುಗಳು, ಸಾಹಸಿಗಳು ಇದ್ದುದರಿಂದ ಈ ಯುದ್ಧದ ಮೊದಮೊದಲು ಬ್ರಿಟಿಶಸೈನ್ಯವನ್ನು ಸೋಲಿಸಲು ಸಮರ್ಥರಾದರು. ಬೋರ ಜನರ ಒಂದು ಗುಂಪು ನಾತಾಳ ಉಪನಿವೇಶದ ಮೇಲೆ ದಾಳಿಮಾಡಿ ಬ್ರಿಟಿಶ್ ಸೇನಾಪತಿಯಾದ ಸರ ಜಾರ್ಜ ವ್ಹಾಯಿಟ ಎಂಬವನನ್ನು ಲೇಡಿ ಸ್ಮಿಥ ಎಂಬಲ್ಲಿ ಮುತ್ತಿ ನಿರ್ಬಂಧಿಸಿತು. ಇನ್ನೊಂದು ಗುಂಪು ಕಿಂಬರ್ಲೆಯ

ನೆರೆಯ ಪ್ರದೇಶವನ್ನು ಹಾಳುಗೆಡಹಿತು. ಮೂರನೆಯದು ಆರೇಂಜ ನದಿಯನ್ನು ದಾಟಿ ಕೇಪ ಕಾಲನಿ ಉಪನಿವೇಶದ ಮೇಲೆ ದಾಳಿಯಿಟ್ಟಿತು. ಹೀಗೆ ೧೮೯೯ರ ಡಿಸೆಂಬರ ತಿಂಗಳಲ್ಲಿ ಮೂರು ಕಡೆಯಲ್ಲಿ ಬ್ರಿಟಿಶರ ಪರಾಭವವಾಯಿತು.

ಕೇಪ ಕಾಲನಿಯ ಜನರು ಬ್ರಿಟಿಶರ ವಿರುದ್ಧ ಬಂಡನ್ನು ಹೂಡಿ ತಮಗೆ ನೆರವಾಗುವರೆಂದು ಬೋರರು ಎಣಿಸಿದುದು ಸುಳ್ಳಾಯಿತು. ಬ್ರಿಟಿಶರು ಯುದ್ಧವನ್ನು ಪ್ರಾರಂಭಿಸಿದುದರಿಂದ ಬೋರ ಜನರನ್ನು ಕುರಿತು ಅನೇಕ ಯುರೋಪಿಯನ್ ರಾಷ್ಟ್ರಗಳಿಂದ ಪಾಲ ಕ್ರೂಗರನಿಗೆ ಸಹಾನುಭೂತಿಯ ಸಂದೇಶಗಳು ಬಂದರೂ ಬೋರರ ಪ್ರತ್ಯಕ್ಷ ಸಾಹಾಯ್ಯಕ್ಕೆ ಯಾರೂ ಬರಲಿಲ್ಲ. ಬ್ರಿಟಿಶ್ ಸೈನ್ಯವು ಮೊದಲಿಗೆ ಸೋತುದರಿಂದ ಈ ಯುದ್ಧದ ಕಡೆಗೆ ಪೂರ್ಣ ಲಕ್ಷ್ಯವನ್ನು ಪೂರಯಿಸಿ ಬ್ರಿಟನ್ ರಾಷ್ಟ್ರವು ಹೆಚ್ಚಿನ ಸೇನಾಸನ್ನಾಹವನ್ನು ಕಳುಹಿತು. ಇದರಂತೆ ಮಾತೃಭೂಮಿಗೆ ನೆರವಾಗಬೇಕೆಂದು ಕೆನಡಾ, ಆಸ್ಟ್ರೇಲಿಯಾ, ನ್ಯೂಝೀಲಂಡ್ ಮುಂತಾದ ಸ್ವಾಯತ್ತ ಉಪನಿವೇಶಗಳು ತಾವಾಗಿ ಸೇನಾಸಾಹಾಯ್ಯವನ್ನು ಒದಗಿಸಿದುವು. ಈ ಮೇರೆಗೆ ೧೯೦೦ರ ಕೊನೆಯಲ್ಲಿ ಬ್ರಿಟಿಶ ಸಾಮ್ರಾಜ್ಯದ ಎರಡುವರೆ ಲಕ್ಷ ಸೇನೆ ಬೋರರೊಡನೆ ಕಾದಲು ದಕ್ಷಿಣ ಆಫ್ರಿಕೆಯಲ್ಲಿ ನೆರೆಯಿತು. **ಲಾರ್ಡ ರಾಬರ್ಟ್ಸ** ಎಂಬವನು ಮುಖ್ಯ ಸೇನಾಪತಿಯಾಗಿಯೂ **ಲಾರ್ಡ ಕಿಚನೇರ** ಎಂಬವನು ಆತನ ಸಹಾಯಕನಾಗಿಯೂ ಕಳಿಸಲ್ಪಟ್ಟರು.


ಲಾರ್ಡ ರಾಬರ್ಟ್ಸ.

ಬಳಿಕ ಸೇನಾಪತಿ ಫ್ರೆಂಚ ಈತನು ಕಿಂಬರ್ಲೆ ಮತ್ತು ಸೇನಾಪತಿ ಬುಲ್ಲರನು ಲೇಡಿ ಸ್ಮಿಥ ಎಂಬ ಸ್ಥಳಗಳನ್ನು ಕಿತ್ತುಕೊಂಡರು. ಬೋರ ಸೇನಾಪತಿ **ಕ್ರಾಂಜೆ** ಎಂಬವನು **ಪಾರ್ಡೆ** ಬರ್ಗ ಎಂಬಲ್ಲಿ ಕೈಸೆರೆಯಾದನು. ಇತ್ತ ಲಾರ್ಡ ರಾಬರ್ಟ್ಸನು ಮಾರ್ಚ ತಿಂಗಳಲ್ಲಿ ಆರೆಂಜ ಉಪನಿವೇಶದ ರಾಜಧಾನಿ **ಬ್ಲೂಮ್ ಫೊಂಟಿನ** ಮತ್ತು ಜೂನ ತಿಂಗಳಲ್ಲಿ ಟ್ರೆನ್ಸವಾಲದ ರಾಜಧಾನಿ **ಪ್ರಿಟೋರಿಯಾ** ಇವುಗಳನ್ನು ಗೆದ್ದುಕೊಂಡನು. ಈ ಎರಡು ರಾಜಧಾನಿಗಳು ಕೈಬಿಟ್ಟು ಹೋದರೂ ಬೋರರು ಎದೆಗುಂದಲಿಲ್ಲ. ಅವರು ಯುದ್ಧವನ್ನು ಹಾಗೆಯೇ ಮುಂದುವರಿಸಿದರು. ಬಯಲು ರಣರಂಗದಲ್ಲಿ ಹೋರಾಡಿದರೆ ಬ್ರಿಟಿಶ್

ಸೇನೆಯ ಮುಂದೆ ತಮ್ಮ ಆಟವು ಸಾಗದೆಂಬುದನ್ನು ಅರಿತು **ಬೋಥಾ** ಮತ್ತು **ಡೀ ವೇಟ** ಎಂಬ ನುರಿತವರೂ ಸಾಹಸಿಗರೂ ಆದ ಬೋರ ಸೇನಾಪತಿಗಳು ಕೂಟಯುದ್ಧದಿಂದ (Guerrilla Warfare) ಕಾದುತ್ತಿದ್ದರು. ಆದರೂ ಕೊನೆಗೆ ಅವರು ಸೋತರು. ಬಳಿಕ ೧೯೦೨ನೆಯ ಮೇ ೩೧ನೆಯ ದಿನ ಒಡಂಬಡಿಕೆಯಾಗಿ ಯುದ್ಧವು ನಿಂತಿತು. ಈ ಒಡಂಬಡಿಕೆಯಂತೆ, ಆರೆಂಜ ಫ್ರೀ ಸ್ಟೇಟ ಮತ್ತು ಟ್ರೆನ್ಸವಾಲ ಈ ಎರಡು ಬೋರ ಉಪನಿವೇಶಗಳು ಬ್ರಿಟಿಶ್ ಸಾಮ್ರಾಜ್ಯಕ್ಕೆ ಸೇರಿಸಲಾದುವು. ಅನಂತರ ೧೯೦೬ರಲ್ಲಿ ಅವುಗಳಿಗೆ ಸ್ವರಾಜ್ಯದ ಅಧಿಕಾರಗಳು ಕೊಡಲ್ಪಟ್ಟುವು.

**ದಕ್ಷಿಣ ಆಫ್ರಿಕೆಯಲ್ಲಿಯ ಬ್ರಿಟಿಶ್ ಉಪನಿವೇಶಗಳ ಏಕೀಕರಣವು,** ೧೯೧೦.–೧೯೧೧ರಲ್ಲಿ ದಕ್ಷಿಣ ಆಫ್ರಿಕೆಯಲ್ಲಿಯ ಆರೆಂಜ ಫ್ರೀ ಸ್ಟೇಟ, ಟ್ರೆನ್ಸವಾಲ, ಕೇಪ್ ಕಾಲನಿ, ಮತ್ತು ನಾತಾಳ ಈ ನಾಲ್ಕು ಉಪನಿವೇಶಗಳ ಏಕೀಕರಣವಾಯ್ತು. **ಬೋಥಾ** ಇವನು ದಕ್ಷಿಣ ಆಫ್ರಿಕೆಯ ಈ ಸಂಯುಕ್ತ ರಾಷ್ಟ್ರಕ್ಕೆ (Union of South Africa) ಮೊದಲನೆಯ ಮುಖ್ಯ ಮಂತ್ರಿಯಾದನು.

## (೫) ಹೊಸ ಶೋಧಗಳು, ಶಾಸ್ತ್ರೀಯ ಪ್ರಗತಿ ಮತ್ತು ವಾಙ್ಮಯ ವೃದ್ಧಿ.

ವಿಕ್ಟೋರಿಯಾ ರಾಣಿಯ ಆಳಿಕೆಯಲ್ಲಿ ಅನೇಕ ಹೊಸ ಶಾಸ್ತ್ರೀಯ ಶೋಧಗಳಾದುವು. ಅದರಿಂದ ಅನೇಕ ವಿಷಯಗಳಲ್ಲಿ ಪ್ರಗತಿಯಾಗಿ ಮಾನವ ಜಾತಿಯ ಜೀವನವು ಸುಖಕರವಾಗಲು ಸಾಹಾಯ್ಯವಾಯಿತು.

**ಸಂಚಾರದ ಸಾಧನಗಳಲ್ಲಿ ಪ್ರಗತಿ**—ಸು. ೧೮೩೦ರಲ್ಲಿ ಉಗೆಯಿಂದ ಓಡುವ ಗಾಡಿಗಳ ಮತ್ತು ಹಡಗುಗಳ ಶೋಧವಾಗಿತ್ತು. ವಿಕ್ಟೋರಿಯಾ ರಾಣಿಯ ಆಳಿಕೆಯಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಇವುಗಳ ಶಾಖೆಗಳು ಪ್ರಾರಂಭವಾದುವು. ಇದರಿಂದ ಬೇರೆ ಬೇರೆ ರಾಷ್ಟ್ರಗಳಲ್ಲಿ ಬಳಕೆ ಬೆಳೆದು ವ್ಯಾಪಾರಾಭಿವೃದ್ಧಿಗೆ ಸಾಹಾಯ್ಯವಾಯಿತು. ಯುದ್ಧದ ಹಡಗುಗಳನ್ನು ಮೊದಲಿನಂತೆ ಕಟ್ಟಿಗೆಯಿಂದ ಮಾಡದೆ ಉಕ್ಕಿನಿಂದ ಮಾಡತೊಡಗಿದರು.

**ತಂತಿ ಮತ್ತು ಟೆಲಿಫೋನು**—೧೮೩೭ರಲ್ಲಿ ವಿದ್ಯುತ್ತಿನ ಸಾಹಾಯ್ಯದಿಂದ ತಂತಿಗಳ ಮೂಲಕ ಸುದ್ದಿಯನ್ನು ಕಳುಹುವ ಯುಕ್ತಿಯ ಶೋಧವಾಯಿತು. ೧೮೪೩ರಲ್ಲಿ ಇಂಗ್ಲಂಡಿನಲ್ಲಿ ತಂತಿಯ ಯಂತ್ರವನ್ನು ಪ್ರಾರಂಭಿಸಿದರು. ೧೮೬೭ರಲ್ಲಿ

ಇಂಗ್ಲಂಡ್ ಮತ್ತು ಅಮೇರಿಕೆ ಇವುಗಳ ನಡುವೆ ಅಟ್ಲಾಂಟಿಕ ಮಹಾಸಾಗರದ ತಳದಲ್ಲಿ ತಂತಿಗಳನ್ನು ಹಾಕಿ ಸುದ್ದಿಯನ್ನು ಕಳುಹತೊಡಗಿದರು. ೧೮೭೬ರಲ್ಲಿ ಟೆಲಿಫೋನಿನ ಸಾಹಾಯ್ಯದಿಂದ ದೂರದ ಜನರೊಡನೆ ಮಾತಾಡುವುದನ್ನು ಶೋಧಿಸಲಾಯಿತು. ಆ ಮೇಲೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಟೆಲಿಫೋನಿನ ಜಾಳಿಗೆಯನ್ನು ಹಬ್ಬಿಸಲಾಯಿತು. ೧೮೯೬ರಲ್ಲಿ ತಂತಿಯಿಲ್ಲದ ಸಂದೇಶಯಂತ್ರವು (Wireless) ಶೋಧಿಸಲ್ಪಟ್ಟಿತು.

**ಇತರ ಶೋಧಗಳು**—೧೮೩೯ರಲ್ಲಿ ಫೊಟೊಗ್ರಾಫಿಯ ಶೋಧವಾಯಿತು. ಬರುಬರುತ್ತ ಮುಂದೆ ಇದರಲ್ಲಿ ಹೆಚ್ಚಿನ ಪ್ರಗತಿಯಾಯ್ತು. ಹೊಲಿಗೆಯ ಯಂತ್ರದ ಶೋಧವಾಗಿ ಮನೆಮನೆಗೆ ಈ ಯಂತ್ರಗಳು ಉಪಯೋಗದಲ್ಲಿ ಬಂದುವು. ೧೮೭೯ರಲ್ಲಿ ಎಣ್ಣೆಯ ಮತ್ತು ಗ್ಯಾಸಿನ ದೀಪಗಳ ಪ್ರತಿಯಾಗಿ ಹೆಚ್ಚು ಬೆಳಕಿನ ವಿದ್ಯುದ್ದೀಪಗಳು ಉಪಯೊಗಿಸಲ್ಪಡಲು ಆರಂಭವಾಯ್ತು. ೧೮೭೬ರಲ್ಲಿ ಫೊನೋಗ್ರಾಫಿನ ಶೋಧವಾಗಿ ಭಾಷಣ ಗಾಯನ ಸಂಭಾಷಣಗಳನ್ನು ಬಹುಕಾಲದ ತರುವಾಯದಲ್ಲಿಯೂ ಇದ್ದಕ್ಕಿದ್ದ ಹಾಗೆ ಕೇಳುವುದು ಸಾಧ್ಯವಾಯಿತು. ೧೮೮೧ರಲ್ಲಿ ಮೊದಲನೆಯ ಮೋಟಾರುಬಂಡಿ ಅಸ್ತಿತ್ವದಲ್ಲಿ ಬಂದಿತು.

**ವೈದ್ಯಶಾಸ್ತ್ರದಲ್ಲಿ ಪ್ರಗತಿ**—ನಾನಾ ವಿಧವಾದ ರೋಗಗಳನ್ನು ಗುಣಪಡಿಸುವ ಮತ್ತು ಬೇನೆಗಳು ಬಾರದಂತೆ ಪ್ರತಿಬಂಧಕ ಉಪಾಯಗಳನ್ನು ಯೋಜಿಸುವ ವಿಷಯಗಳಲ್ಲಿಯೂ, ಎಷ್ಟೋ ಪ್ರಗತಿಯಾಯ್ತು. **ಲುಯಿ ಪಾಶ್ಚುರ** ಎಂಬ ಫ್ರೆಂಚ ಮತ್ತು **ಲಾರ್ಡ ಲಿಸ್ಟರ** ಎಂಬ ಇಂಗ್ಲಿಶ್ ಡಾಕ್ಟರರು ನಾನಾ ರೋಗಗಳ ಹುಟ್ಟಿನ ಕಾರಣಗಳನ್ನು ಕಂಡುಹಿಡಿದರು ಮತ್ತು ಅವುಗಳಿಂದ ಸಂರಕ್ಷಿಸುವ ಉಪಾಯಗಳನ್ನು ಸೂಚಿಸಿದರು. ಮೊದಲು ಜನರ ಆರೋಗ್ಯದ ಕಡೆಗೆ ಸರಕಾರವು ಲಕ್ಷ್ಯಗೊಡುತ್ತಿರಲಿಲ್ಲ. ಆದರೆ ವಿಕ್ಟೋರಿಯಾ ರಾಣಿಯ ಆಳಿಕೆಯಲ್ಲಿ ಈ ವಿಷಯದಲ್ಲಿ ಕಟ್ಟಳೆಗಳನ್ನು ರಚಿಸಿ ಅಲ್ಲಲ್ಲಿಯ ಸ್ಥಾನಿಕ ಸಂಸ್ಥೆಗಳಿಗೆ ತಮ್ಮತಮ್ಮ ಸೀಮೆಯಲ್ಲಿ ಆರೋಗ್ಯವನ್ನು ಕಾಯ್ದು ರೋಗಪ್ರತಿಬಂಧಕ ಉಪಾಯಗಳನ್ನು ಯೋಜಿಸುವ ಕೆಲಸವು ಒಪ್ಪಿಸಲ್ಪಟ್ಟಿತು.

**ವಾಙ್ಮಯ ವಿಷಯಕ ಪ್ರಗತಿ**—ಈ ಕಾಲದಲ್ಲಿ ದೊಡ್ಡ ದೊಡ್ಡ ಲೇಖಕರು ಹುಟ್ಟಿ ಅವರು ತಮ್ಮ ಉತ್ತಮೋತ್ತಮವಾದ ಗ್ರಂಥಗಳಿಂದ ಇಂಗ್ಲಿಶ್ ಸಾಹಿತ್ಯವನ್ನು ಹೆಚ್ಚಿಸಿದರು. ಈ ವಾಙ್ಮಯಭಕ್ತರಲ್ಲಿ ಟೆನಿಸನ್, ಬ್ರೌನಿಂಗ, ಮತ್ತು ಮಥ್ಯು ಆರ್ನೊಲ್ಡ ಇವರು ಉತ್ತಮ ಕವಿಗಳಾಗಿದ್ದರು. ಮೆಕಾಲೆ

ಮತ್ತು ಕಾರ್ಲಾಯಿಲ್ ಇವರು ಶ್ರೇಷ್ಠವಾದ ಐತಿಹಾಸಿಕ ಗ್ರಂಥಗಳನ್ನು ಬರೆದರು. ಡಿಕೆನ್ಸ್, ಇಲಿಯಟ್, ಮತ್ತು ಥಕರೆ ಇವರು ನಾಮಾಂಕಿತ ಕಾದಂಬರಿಕಾರರಾಗಿ ಕೀರ್ತಿಪಡೆದರು. ರಸ್ಕಿನನು ಅನೇಕ ವಿಷಯಗಳನ್ನು ಕುರಿತು ಮತ್ತು ಡಾರ್ವಿನ್ ಮತ್ತು ಹಕ್ಸಲೆ ಇವರು ಶಾಸ್ತ್ರೀಯ ವಿಷಯಗಳನ್ನು ಕುರಿತು ಉತ್ತಮ ಗ್ರಂಥಗಳನ್ನು ರಚಿಸಿದರು. ಇದಲ್ಲದೆ ಪತ್ರಿಕೆಗಳ ಪ್ರಸಾರವು ಬಹುವಾಗಿ ಬೆಳೆದು ಅದರಿಂದ ಜನಶಿಕ್ಷಣಕ್ಕೆ ಬಹಳ ಸಾಹಾಯ್ಯವಾಯಿತು.

---

## ಸಾರಾಂಶವು

### ವಿಕ್ಟೋರಿಯಾ (೧೮೩೭—೧೯೦೧)

ವಿಕ್ಟೋರಿಯಾ ರಾಣಿಯ ರಾಜನೀತಿ—

(೧) ಯಾವುದೊಂದು ಪಕ್ಷಕ್ಕೆ ಸೇರಿಕೊಳ್ಳದೆ ಎಲ್ಲರನ್ನು ಸಮನಾಗಿ ನಡೆಸಿಕೊಳ್ಳುವುದು. ಪಾರ್ಲಿಮೆಂಟಿನ ಕಟ್ಟಳೆಯಂತೆ ಆಡಳಿತವನ್ನು ನಡೆಸುವುದು.

(೨) ಇಂಗ್ಲಂಡಿನ ರಾಜ್ಯಕರ್ತನು ಬ್ರಿಟಿಶ ಸಾಮ್ರಾಜ್ಯದ ಬೇರೆ ಬೇರೆ ಪ್ರದೇಶಗಳನ್ನು ಒಂದೆಡೆಗೆ ಸಂಧಿಸುವ ಕೊಂಡಿಯಾಗಿದ್ದುದರಿಂದ ಬೇರೆ ಬೇರೆ ಕಡೆಯ ಜನರಲ್ಲಿ ಪರಸ್ಪರರಲ್ಲಿ ಆತ್ಮೀಯ ಭಾವನೆಯನ್ನು ಹುಟ್ಟಿಸುವುದು.

ವಿಕ್ಟೋರಿಯಾ ರಾಣಿ ಮತ್ತು ಆಕೆಯ ಮಂತ್ರಿಗಳು—ರಾಣಿಯ ಆಳಿಕೆಯಲ್ಲಿ ಅನೇಕರು ಮುಖ್ಯ ಮಂತ್ರಿಗಳಾಗಿ ಕೆಲಸಮಾಡಿದರು. ಅವರಲ್ಲಿ ಮುಂದೆ ಕಾಣಿಸಿದವರು ವಿಶೇಷ ಪ್ರಸಿದ್ಧಿಯನ್ನು ಪಡೆದರು.

ಅಂತರ್ಗತ ವಿಷಯಗಳಲ್ಲಿ ಮಹತ್ವದ ಸುಧಾರಣೆಗಳನ್ನು ಮಾಡಿದವರು:—

ಪೀಲ (ಕಾಂರ್ಝರ್ವೇಟಿವ್ ೧೮೪೧—೪೬); ಡರ್ಬಿ (ಕಾಂರ್ಝರ್ವೇಟಿವ್ ೧೮೫೨—೧೮೫೮);

ಗ್ಲಾಡ್‌ಸ್ಟನ್ (ಲಿಬರಲ್ ೧೮೬೮—೭೪; ೧೮೮೦—೮೫; ೧೮೮೬; ೧೮೯೨—೯೪).

ಪರರಾಷ್ಟ್ರೀಯ ವಿಷಯಗಳ ಮತ್ತು ಸಾಮ್ರಾಜ್ಯವೃದ್ಧಿಯ ಕಡೆಗೆ ಲಕ್ಷ್ಯಗೊಟ್ಟವರು ಮತ್ತು ಬ್ರಿಟಿಶ ಸಾಮ್ರಾಜ್ಯದ ವೈಭವವನ್ನೂ ಮಹತ್ವವನ್ನೂ ಹೆಚ್ಚಿಸಿದವರು:—

ಪಾಮರ್ಸ್ಟನ್ (ಲಿಬರಲ್ ೧೮೫೫—೫೮; ೧೮೫೯—೬೫); ಡಿಝ್ರೇಲಿ (ಕಾಂರ್ಝರ್ವೇಟಿವ್ ೧೮೭೪—೮೦); ಸಾಲಿಸ್‌ಬರಿ (ಕಾಂರ್ಝರ್ವೇಟಿವ್ ೧೮೮೫—೮೬; ೧೮೮೬—೯೨; ೧೮೯೫—೧೯೦೨).

## (೧) ಅಂತಃಸ್ಥ ವಿಷಯಗಳು

(೧) ರಾಜಕೀಯ ಪಕ್ಷಗಳ ಹೊಸ ಹೆಸರುಗಳು—(ಅ) ಕಾಂಝರ್ವೇಟಿವ್ (ಪುರಾತನ ಪರಂಪರಾಭಿಮಾನಿ) ಟೋರಿ ಹೆಸರಿಗೆ ಪ್ರತಿಯಾಗಿ, ಸು. ೧೮೩೪; (ಆ) ಲಿಬರಲ್ (ಉದಾರ ಮತವಾದಿ) ವ್ಹಿಗ್ ಹೆಸರಿಗೆ ಪ್ರತಿಯಾಗಿ ಸು. ೧೮೩೦.

(೨) ಚಾರ್ಟಿಸ್ಟ್ ಆಂದೋಲನವು (೧೮೩೭-೪೮)—ಫರ್ಗಸ ಓಕೊನ್ನೊರನ ನಾಯಕತ್ವ. ಚಾರ್ಟಿಸ್ಟರ ಬೇಡಿಕೆಗಳು ಕ್ರಾಂತಿಕಾರಕವಾಗಿ ತೋರಿದುದರಿಂದ ಅವುಗಳಿಗೆ ವಿರೋಧಿಯಾಗಿ ಮಂತ್ರಿಮಂಡಲವು ಅನುಸರಿಸಿದ ನೀತಿ.

(೩) ಸಂರಕ್ಷಿತ ವ್ಯಾಪಾರ ಮತ್ತು ಅನಿರ್ಬಂಧ ವ್ಯಾಪಾರ (೧೮೩೯-೪೯)—ಇಂಗ್ಲಿಶ್ ಉದ್ಯೋಗ-ವ್ಯವಸಾಯಗಳಿಗೆ ಪ್ರೋತ್ಸಾಹವನ್ನು ಕೊಡಲು ಸಂರಕ್ಷಿತ ವ್ಯಾಪಾರದ ಪದ್ಧತಿ ಮೊದಲಿನಿಂದ ನಡೆದು ಬಂದಿತ್ತು. ಆದರೆ ಆದರಿಂದ ಬೆಲೆಗಳು ಏರಿ ಬಡಜನರ ಜೀವನದ ವೆಚ್ಚವು ಹೆಚ್ಚಿತು. ಆದುದರಿಂದ ಪರಕೀಯ ಸರಕುಗಳ ಮೇಲಿನ ಸುಂಕವನ್ನು ಕಿತ್ತುಹಾಕಿ ಅನಿರ್ಬಂಧ ವ್ಯಾಪಾರದ ಪದ್ಧತಿಯನ್ನು ಪ್ರಾರಂಭಿಸಬೇಕೆಂದು ಕಾಬಡೆನ್ ಮತ್ತು ಬ್ರಾಯಿಟ್ ಎಂಬ ಧುರೀಣರ ಚಳವಳಿ. ವಿದೇಶಗಳಿಂದ ಬರುವ ಅನೇಕ ಸರಕುಗಳ ಸುಂಕವನ್ನು ಪೀಲನು ಇಳಿಸಿದನು. ಕೊನೆಗೆ ಕಾಳಿನ ಮೇಲಿನ ಕರವನ್ನು ಕಿತ್ತುಹಾಕಿದನು (೧೮೪೬). ನೆವಿಗೇಶನ ಕಾಯದೆಯನ್ನು ಮತ್ತು ಸುಂಕವನ್ನು ರಸೆಲನು ರದ್ದುಗೊಳಿಸಿದನು (೧೮೪೯). ಹೀಗೆ ಅನಿರ್ಬಂಧ ವ್ಯಾಪಾರ ಪದ್ಧತಿಯ ಪ್ರಾರಂಭ.

(೪) ಸರ ರಾಬರ್ಟ ಪೀಲನ ಸುಧಾರಣೆಗಳು—

೧೮೪೨ ವಿದೇಶದ ಸರಕುಗಳಲ್ಲಿ ಕೆಲವುಗಳ ಮೇಲಿನ ಸುಂಕಗಳನ್ನು ಇಳಿಸಿದನು, ಕೆಲವುಗಳನ್ನು ತೆಗೆದುಹಾಕಿದನು.

೧೮೪೨ ಆದಾಯದ ಮೇಲಿನ ಕರವು.

೧೮೪೨ ಹೆಂಗುಸರನ್ನು ಮತ್ತು ಹುಡುಗರನ್ನು ಕಣಿಗಳಲ್ಲಿಯ ಕೆಲಸಕ್ಕೆ ಹಚ್ಚಕೂಡದು.

೧೮೪೪ ಬ್ಯಾಂಕ ಚಾರ್ಟರ ಅಕ್ಟ.

೧೮೪೬ ಕಾಳಿನ ಕರವು ಹೋದುದು.

(೫) ಪಾರ್ಲಿಮೆಂಟಿನ ಸುಧಾರಣೆ—

(ಅ) ೧೮೬೭ರ ರಿಫಾರ್ಮ ಬಿಲ್ (ಡರ್ಬಿ ಮತ್ತು ಡಿಝ್ರೇಲಿ ಇವರ ಸೂಚನೆಯಿಂದ). ಪಟ್ಟಣದ ಎಲ್ಲ ಮನೆಯೊಡೆಯರಿಗೆ ಮತ್ತು ವರ್ಷಕ್ಕೆ ಕನಿಷ್ಠ ೧೦ ಪೌಂಡ ಮನೆಬಾಡಿಗೆಯನ್ನು ಕೊಡುವವರಿಗೆ ಮತವು. ವರ್ಷಕ್ಕೆ ಕನಿಷ್ಠ ೧೨ ಪೌಂಡ ತೆರಿಗೆಯನ್ನು ಕೊಡುವ ಒಕ್ಕಲಿಗನಿಗೆ ಮತವು.

(೪) ೧೮೮೪—೮೫ರ ರಿಫಾರ್ಮ್ ಬಿಲ್ (ಗ್ಲೆಡ್‌ಸ್ಟನನ ಸೂಚನೆಯಿಂದ).

(೧) ಪಟ್ಟಣ ಮತ್ತು ಹಳ್ಳಿಯಲ್ಲಿ ಬಾಡಿಗೆಯಿಂದ ಇರುವ ಎಲ್ಲರಿಗೆ ಮತವು. ತೆರಿಗೆಯನ್ನು ಕೊಡುವ ಎಲ್ಲ ಒಕ್ಕಲಿಗರಿಗೆ ಮತವು.

(೨) ಜನಸಂಖ್ಯೆಯ ಪ್ರಮಾಣದಲ್ಲಿ ಸಮಾನ ಮತದಾರ ಸಂಘಗಳನ್ನು ರಚಿಸಲಾಯಿತು.

## (೬) ಗ್ಲೆಡ್‌ಸ್ಟನನು ಮಾಡಿದ ಸುಧಾರಣೆಗಳು—

೧೮೬೯ ಐರ್ಲಂಡಿನ ಪ್ರಾಟೆಸ್ಟಂಟ ಚರ್ಚಿಗೆ ಕೊಡುವ ಸರಕಾರಿ ಸಾಹಾಯ್ಯವು ಹೋಯಿತು.

೧೮೭೦ ಐರ್ಲಂಡಿನ ಭೂಮಿ ವಿಷಯದ ಕಟ್ಟಳೆ.

೧೮೭೦ ಪ್ರಾಥಮಿಕ ಶಿಕ್ಷಣದ ಕಟ್ಟಳೆ.

೧೮೭೧ ವಿಶ್ವವಿದ್ಯಾಲಯಗಳಲ್ಲಿ ಶಿಷ್ಯವೇತನಗಳನ್ನು ಮತ್ತು ಅಧಿಕಾರದ ಸ್ಥಳಗಳನ್ನು ದೊರಕಿಸಲು ಆತಂಕವಾದ ಧಾರ್ಮಿಕ ನಿರ್ಬಂಧಗಳನ್ನು ಕಿತ್ತುಹಾಕಲಾಯಿತು.

೧೮೭೨ ಗುಪ್ತ-ಮತದಾನದ ಯೋಜನೆ.

೧೮೭೩ ನ್ಯಾಯವಿಭಾಗದ ಪುನರ್ಘಟನೆ.

೧೮೭೫ ಟ್ರೇಡ ಯೂನಿಯನ್ ಅಕ್ಟ.

೧೮೮೧ ಐರ್ಲಂಡಿನ ಭೂಮಿಗಳ ವಿಷಯದ ಎರಡನೆಯ ಕಟ್ಟಳೆ.

೧೮೮೪—೮೫ ಪಾರ್ಲಿಮೆಂಟಿನ ಸುಧಾರಣೆಯ ಬಿಲ್.

೧೮೮೬ ಮತ್ತು ೧೮೯೩ ಐರ್ಲಂಡಿಗೆ 'ಹೋಮ್‌ರೂಲ'ನ್ನು (ಸ್ವರಾಜ್ಯ) ಕೊಡಬೇಕೆಂದು ಪಾರ್ಲಿಮೆಂಟಿನಲ್ಲಿ ಬಿಲ್ಲುಗಳು ಬಂದುವು, ಮಾನ್ಯವಾಗಲಿಲ್ಲ.

## (೭) ಇತರ ಮಂತ್ರಿಗಳ ಸುಧಾರಣೆಗಳು—

೧೮೭೫ ಟ್ರೇಡ ಯೂನಿಯನ್ ಕಟ್ಟಳೆ. ಕೆಲಸಗಾರರು ಸಂಪನ್ನು ಹೂಡಿದರೆ ಅದು ಅಕ್ರಮವಲ್ಲ (ಡಿಝ್ರೇಲಿಯ ಸೂಚನೆಯಿಂದ).

೧೮೮೦ ಒತ್ತಾಯದ ಪ್ರಾಥಮಿಕ ಶಿಕ್ಷಣವು (ಡಿಝ್ರೇಲಿಯ ಸೂಚನೆಯಿಂದ).

೧೮೮೮ ಸ್ಥಾನಿಕ ಸ್ವರಾಜ್ಯದ ಕಟ್ಟಳೆ. ಸ್ಥಾನಿಕ ಸಂಸ್ಥೆಗಳ ಕಡೆಗೆ ಆರೋಗ್ಯ, ಪ್ರಾಥಮಿಕ ಶಿಕ್ಷಣ ಮುಂತಾದ ವಿಷಯಗಳ ವ್ಯವಸ್ಥೆ (ಸಲಿಸ್‌ಬರಿಯ ಸೂಚನೆಯಿಂದ.)

## (೨) ಐರ್ಲಂಡ್.

ಐರ್ಲಂಡಿನಲ್ಲಿಯ ಅಸಂತೋಷದ ಕಾರಣಗಳು—ಐರ್ಲಂಡಿನ ಅಲ್ಸ್ಟರ ಭಾಗದ ಪ್ರಾಟೆಸ್ಟಂಟ ಪಂಥದ ವಸಾಹತುಗಾರರು ಮತ್ತು ಮೂಲನಿವಾಸಿಗಳಾದ ರೋಮನ್ ಕಥಲಿಕ್ ಜನಸಾಮಾನ್ಯರು ಇವರ ನಡುವಿನ ವೈರಭಾವನೆ; ಥೈಥ ಕರವು ಮತ್ತು ಅದರಿಂದ ಪ್ರಾಟೆಸ್ಟಂಟ ಚರ್ಚಿಗೆ ಸಾಹಾಯ್ಯ; ಇಂಗ್ಲಿಶ್ ಮತ್ತು ಸ್ಕಾಟಿಶ್ ಪ್ರಾಟೆಸ್ಟಂಟ ಪಂಗಡದ ಜಮೀನುದಾರರು ಮತ್ತು ಐರಿಶ್ ರೋಮನ್ ಕಥಲಿಕ್ ರೈತರು ಇವರ ನಡುವೆ ವೈಮನಸ್ಸು; ತಮ್ಮ ಸ್ಥಿತಿಯನ್ನು ಸುಧಾರಿಸಲು ಇಂಗ್ಲಿಶ್ ಪಾರ್ಲಿಮೆಂಟನೊಡನೆ ಇದ್ದ ಏಕೀಕರಣವನ್ನು ರದ್ದುಗೊಳಿಸಲು ಚಳವಳಿ.

ಐರ್ಲಂಡಿನಲ್ಲಿ ಪುಂಡಾಟಿಕೆ—ಡೆನಿಯಲ್ ಓಕಾನೆಲನು ಐರಿಶ್ ಜನರ ಧುರೀಣನು; ಆದರೆ ಆತನ ಸೌಮ್ಯ ಧೋರಣದಿಂದ ಆತನ ಜನಪ್ರಿಯತೆ ಕುಗ್ಗಿತು; 'ತರುಣ ಐರ್ಲಂಡ್' ಎಂಬ ಹೊಸ ಪಕ್ಷದ ಸ್ಥಾಪನೆ. ಐರ್ಲಂಡಿನಲ್ಲಿ ದುರ್ಭಿಕ್ಷವು (೧೮೪೫), ಆದರಿಂದ ರೈತರ ದುರ್ದೆಸೆ; ನಿರುದ್ಯೋಗವು ಹೆಚ್ಚುವುದು. ಐರ್ಲಂಡಿನಲ್ಲಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಲು ಸ್ಮಿಥ್ ಓಬ್ರಾಯನನ ಧುರೀಣತ್ವದಲ್ಲಿ ಬಂಡಾಯವು (೧೮೪೮); ಬಂಡಾಯವು ಮುರಿಯಲ್ಪಟ್ಟಿತು; ಆದರೆ ಅತ್ಯಾಚಾರವನ್ನು ಪ್ರೋತ್ಸಾಹಿಸುವ ಫೆನಿಯನ್ ಸೊಸಾಯಿಟಿ ಸ್ಥಾಪಿತವಾಗಿ, ಆದರಿಂದ ೧೮೬೬—೬೭ರಲ್ಲಿ ದೊಂಬೆಗಳು.

ಗ್ಲಡ್‌ಸ್ಟನನ ಸುಧಾರಣೆಗಳು—ಐರ್ಲಂಡಿನ ಅಸಂತೋಷವನ್ನು ಕಳೆಯಲು ೧೮೬೯ರಲ್ಲಿ ಗ್ಲಡ್‌ಸ್ಟನನು ಅಲ್ಲಿಯ ಪ್ರಾಟೆಸ್ಟಂಟ ಚರ್ಚಿಗೆ ಕೊಡುವ ಸರಕಾರಿ ಸಾಹಾಯ್ಯವನ್ನು ನಿಲ್ಲಿಸಿದನು. ೧೮೭೦ರಲ್ಲಿ ಮತ್ತು ೧೮೮೧ರಲ್ಲಿ ಹೊಲಗಳನ್ನು ಕುರಿತು ಕಟ್ಟಳೆ ಮಾಡಿದನು; ಆದರೂ ಅಸಂತೋಷವು ತಗ್ಗಲಿಲ್ಲ; ಪಾರ್ನೆಲನ ಧುರೀಣತ್ವದಲ್ಲಿ 'ಹೋಮ್‌ರೂಲ'ನ್ನು ದೊರಕಿಸುವ ಚಳವಳ ಪ್ರಾರಂಭವಾಯಿತು. ಆದಕ್ಕಾಗಿ ಗ್ಲಡ್‌ಸ್ಟನನು ಐರ್ಲಂಡಿಗೆ 'ಹೋಮ್‌ರೂಲ'ನ್ನು ಕೊಡುವ ಕುರಿತು ೧೮೮೬ರಲ್ಲಿ ಮತ್ತು ೧೮೯೩ರಲ್ಲಿ ಪಾರ್ಲಿಮೆಂಟನಲ್ಲಿ ಬಿಲ್ಲುಗಳನ್ನು ತಂದನು; ಆದರೆ ಅವು ಸ್ವೀಕೃತವಾಗಲಿಲ್ಲ.

ದಕ್ಷಿಣ ಐರ್ಲಂಡಿಗೆ ಹೋಮ್‌ರೂಲು, ೧೯೨೦—ಬಳಿಕ ೧೯೨೦ರಲ್ಲಿ ದಕ್ಷಿಣ ಐರ್ಲಂಡಿಗೆ ಹೋಮ್‌ರೂಲು ಕೊಡಲಾಯಿತು; ೧೯೨೨ರಲ್ಲಿ ಈ ರಾಜ್ಯಕ್ಕೆ 'ಐರಿಶ್ ಫ್ರೀ ಸ್ಟೇಟ' ಎಂದು ಹೆಸರು.

## (೩) ಇಂಗ್ಲಂಡಿನ ಪರರಾಷ್ಟ್ರೀಯ ನೀತಿ ಮತ್ತು ಸಾಮ್ರಾಜ್ಯ ವೃದ್ಧಿ.

(೧) ಪರರಾಷ್ಟ್ರೀಯ ಘಟನೆಗಳು—ಮೆಝಿನಿ' ಕಾಹೂರ, ಗರಿಬಾಲ್ಡಿ ಇವರ ಧುರೀಣತ್ವದಲ್ಲಿ ಇಟಲಿಯ ಸಂಸ್ಥಾನಗಳ ಏಕೀಕರಣವು; ವಿಕ್ಟರ ಇಮಾನ್ಯೂಲನು ಸಂಯುಕ್ತ ಇಟಲಿಯ ಅರಸು (೧೮೬೧).

೧೮೭೦—೭೧ ಫ್ರಾನ್ಸ್ ಜರ್ಮನಿ ಇವುಗಳ ನಡುವೆ ಯುದ್ಧ; ಫ್ರಾನ್ಸಿನಲ್ಲಿ ಪ್ರಜಾಪ್ರಭುತ್ವದ ಸ್ಥಾಪನೆ (೧೮೭೧).

ಬಿಸ್ಮಾರ್ಕನ ಪ್ರಯತ್ನದಿಂದ ಪ್ರಶಿಯದ ನಾಯಕತ್ವದಲ್ಲಿ ಜರ್ಮನ್ ಸಾಮ್ರಾಜ್ಯದ ಸ್ಥಾಪನೆ (೧೮೭೧).

(೨) ಇಂಗ್ಲಂಡಿನ ಪರರಾಷ್ಟ್ರೀಯ ನೀತಿ—

ರಶಿಯದೊಡನೆ ವಿರೋಧವು—ದಕ್ಷಿಣಕ್ಕೆ ಭೂಮಧ್ಯಸಮುದ್ರ ಮತ್ತು ಆಗ್ನೇಯಕ್ಕೆ ಹಿಂದುಸ್ಥಾನ, ಇರಾಣದ ಉಪಸಾಗರ ಇವುಗಳ ಕಡೆಗೆ ತನ್ನ ಸಾಮ್ರಾಜ್ಯವನ್ನು ಬೆಳೆಸಬೇಕೆಂದು ರಶಿಯದ ಮಹತ್ವಾಕಾಂಕ್ಷೆ. ಇದರಿಂದ ಹಿಂದುಸ್ಥಾನ, ಹಿಂದುಸ್ಥಾನಕ್ಕೆ ಹೋಗುವ ಮಾರ್ಗ ಮತ್ತು ಮೂಡಣ ದೇಶಗಳ ವ್ಯಾಪಾರ ಇವುಗಳಿಗೆ ಬಾಧೆ ಬರುವ ಸಂಭವ; ಅದಕ್ಕಾಗಿ ರಶಿಯವನ್ನು ತಡೆಯಲು ಇಂಗ್ಲಂಡು ಕೆಳಗೆ ಕಾಣಿಸಿದ ಯುದ್ಧಗಳನ್ನು ಮಾಡಿತು:—

(೧) ಅಫಗಾಣಿಸ್ತಾನದೊಡನೆ ೧ನೆಯ ಯುದ್ಧವು ೧೮೩೯—೪೨.

(೨) ಕ್ರಿಮಿಯನ ಯುದ್ಧವು ೧೮೫೪—೫೬ (ಇಂಗ್ಲಂಡಿನ ಮುಖ್ಯ ಮಂತ್ರಿ ಪಾಮರ್ಸ್ಟನ್).

(೩) ಇರಾಣದೊಡನೆ ಯುದ್ಧ ೧೮೫೫ (ಇಂಗ್ಲಂಡಿನ ಮುಖ್ಯ ಮಂತ್ರಿ ಪಾಮರ್ಸ್ಟನ್).

(೪) ರಶಿಯಾ ಮತ್ತು ತುರ್ಕಸ್ತಾನಗಳ ನಡುವೆ ಯುದ್ಧವಾದ ಬಳಿಕ (೧೮೭೭—೭೮) ರಶಿಯವು ಬರ್ಲಿನಿನಲ್ಲಿ ಸಂಧಿಯನ್ನು ಮಾಡಿಕೊಳ್ಳಬೇಕಾಯಿತು (೧೮೭೮)(ಇಂಗ್ಲಂಡಿನ ಮುಖ್ಯ ಮಂತ್ರಿ ಡಿಝ್‌ರೇಲಿ).

(೫) ಅಫಗಾಣಿಸ್ತಾನದೊಡನೆ ೨ನೆಯ ಯುದ್ಧವು ೧೮೭೮—೮೦ (ಇಂಗ್ಲಂಡಿನ ಮುಖ್ಯ ಮಂತ್ರಿ ಡಿಝ್‌ರೇಲಿ).

(೩) ಇಜಿಪ್ತ ಮತ್ತು ಸೂಡಾನ ಇವುಗಳ ವಿಷಯದಲ್ಲಿ ಇಂಗ್ಲಂಡು ಅನುಸರಿಸಿದ ನೀತಿ—ಹಿಂದುಸ್ಥಾನದ ಹಾದಿಯಲ್ಲಿರುವ ಇಜಿಪ್ತದ ಕಡೆಗೆ ಇಂಗ್ಲಂಡಿನ ಲಕ್ಷ್ಯವು. ಅತ್ತ ಫ್ರೆಂಚರದೂ ಲಕ್ಷ್ಯವು; ಫ್ರೆಂಚರು ಸುಯೆಝು ಕಾಲುವೆಯನ್ನು ಅಗಿಸಿದರು (೧೮೫೯—೬೯). ಇಜಿಪ್ತದ ಖೇದಿವನಾದ (ಮೇಲಧಿಕಾರಿ) ಇಸ್ಮಾಯಿಲ ಪಾಚ್ಛಾ ಇವನು ತುರ್ಕಸ್ತಾನದ ಮಾಂಡಲಿಕನು. ಇಸ್ಮಾಯಿಲ ಪಾಚ್ಛಾ ಇವನು ದುಂದುಗಾರನು, ವ್ಯಸನಿ; ಸಾಲಗಾರನಾಗಿ ತನ್ನ ಒಡೆತನದ ಸುಯೆಝು ಕನಾಲಿನ ಪಾಲುಗಳನ್ನು ಮಾರ ಬಯಸಿದನು. ಅವುಗಳನ್ನು ಇಂಗ್ಲಂಡಿನ ಪರವಾಗಿ ೪೦ ಲಕ್ಷ ಪೌಂಡಿಗೆ ಡಿಝ್‌ರೇಲಿ ಕೊಂಡನು. ಇದರಿಂದ ಇಜಿಪ್ತದ ಆಡಳಿತದಲ್ಲಿ ಇಂಗ್ಲಂಡ್-ಫ್ರಾನ್ಸುಗಳ ಪ್ರವೇಶ. ಇಸ್ಮಾಯಿಲನ ವರ್ತನೆ ಸುಧಾರಿಸದಿರಲು ಆತನನ್ನು ತಳ್ಳಿ ಟ್ಯುಫೀಕನನ್ನು ಇಜಿಪ್ತದ ಮೇಲಧಿಕಾರಿ ಮಾಡುವರು. ಪರಕೀಯರ ಕೈ ಇಜಿಪ್ತದಲ್ಲಿ ಸೇರಿತೆಂದು ಅರಾಬಿ ಪಾಚ್ಛನ ಬಂಡಾಯ (೧೮೮೨); ಇಂಗ್ಲಂಡು ಅದನ್ನು ಮುರಿಬಡಿಯಿತು. ಇಜಿಪ್ತವು ಇಂಗ್ಲಂಡಿನ ಸಂರಕ್ಷಣೆಯಲ್ಲಿ: ಅಲ್ಲಿಯ ಖೇದಿವನಿಗೆ ಮಂತ್ರಾಲೋಚಕ (ಕಾನ್ಸಲ್ ಜನರಲ್)ನೆಂದು

ಇಂಗ್ಲಂಡು ಲಾರ್ಡ ಕ್ರೋಮರನನ್ನು ಕಳುಹಿತು. ಅತನ ನೇತೃತ್ವದಲ್ಲಿ ಇಜಿಪ್ತದ ಸುಧಾರಣೆ, ಇಜಿಪ್ತದ ಸ್ವಾತಂತ್ರ್ಯವು ೧೯೨೨; ಆದರೆ ಸುಯೆಝು ಕೆನಾಲ ಮತ್ತು ಕೇಪ್ ಕಾಯರೊ ರೇಲ್ವೆ ಇವುಗಳನ್ನು ರಕ್ಷಿಸುವ ಹೊಣೆ ಇಂಗ್ಲಂಡಿಗೆ.

ಇಜಿಪ್ತದ ಅಂಕಿತದಲ್ಲಿದ್ದ ಸೂಡಾನದಲ್ಲಿ ಮಹಾದಿಯ ಪುಂಡಾಟಿಕೆ. ಅದನ್ನು ಮುರಿಯಲು ಹೋದ ಗಾರ್ಡನನ ಕೊಲೆ (೧೮೮೫). ೧೮೯೮ರಲ್ಲಿ ಲಾರ್ಡ ಕಿಚನೇರನು ಅಲ್ಲಿಯ ಜನರನ್ನು ಸೋಲಿಸಿ ಸೂಡಾನ ಪ್ರಾಂತವನ್ನು ಬ್ರಿಟಿಶರ ಅಂಕೆಗೆ ತಂದನು.

(೪) ಆಫ್ರಿಕಾ ಖಂಡದೊಳಗಿನ ಇತರ ಪ್ರದೇಶಗಳು—೧೯ನೆಯ ಶತಮಾನ ದಲ್ಲಿ ಪೂರ್ವ ಆಫ್ರಿಕಾ, ಪಶ್ಚಿಮ ಆಫ್ರಿಕಾ, ರ್‍ಹೊಡೇಶಿಯಾ, ಯುಗಾಂಡಾ, ನಾಯಗೇರಿಯಾ ಮುಂತಾದ ಪ್ರದೇಶಗಳು ಇಂಗ್ಲಂಡಿನ ಕೈಸೇರಿದುವು.

(೫) ಮೂಡಣ ಪ್ರದೇಶಗಳು—ಹಿಂದುಸ್ಥಾನ, ಸೀಲೋನ, ಬ್ರಹ್ಮದೇಶ, ಸ್ಟ್ರೇಟ್ಸ ಸೆಟಲ್‌ಮೆಂಟ ಮುಂತಾದ ಪ್ರದೇಶಗಳು ಇಂಗ್ಲಂಡಿನ ಸ್ವಾಧೀನವಾದುವು. ಚೀನದೊಡನೆ ಯುದ್ಧ; ಅಲ್ಲಿಯ ಕೆಲವು ಸ್ಥಳಗಳು ಇಂಗ್ಲಿಶರ ವಶದಲ್ಲಿ.

## (೪) ಉಪನಿವೇಶಗಳು.

(೧) ಕೆನಡಾ—ಈ ಉಪನಿವೇಶದಲ್ಲಿ ಫ್ರೆಂಚ-ಇಂಗ್ಲಿಶರ ನಡುವೆ ವಿರೋಧ; ತಮಗೆ ಹೆಚ್ಚಿನ ಅಧಿಕಾರವು ದೊರೆಯಬೇಕೆಂದು ಪುಂಡಾಟಿಕೆ (೧೮೩೭). ಅದನ್ನು ಮುರಿದ ಬಳಿಕ ಲಾರ್ಡ ಡರಹೆಮನ ಸೂಚನೆಯಂತೆ ಅಲ್ಲಿಯ ಜನರಿಗೆ ಸಾಮ್ರಾಜ್ಯಾಂತರ್ಗತ ಸ್ವರಾಜ್ಯ ೧೮೪೦ರಲ್ಲಿ. ಉತ್ತರ ಅಮೇರಿಕೆಯ ನ್ಯೂಫೌಂಡಲಂಡನ್ನುಳಿದು ಮಿಕ್ಕ ಉಪನಿವೇಶಗಳು ಕೆನಡಾ ಉಪನಿ ವೇಶಕ್ಕೆ ಕೂಡಿಸಲ್ಪಟ್ಟು ಏಕೀಕರಣವು.

(೨) ಆಸ್ಟ್ರೇಲಿಯಾ—ಇದನ್ನು ಕೆಪ್ಟನ್ ಕುಕ್ ಇವನು ೧೭೭೦ರಲ್ಲಿ ಶೋಧಿಸಿ ದನು. ಸೆರೆಯಾಳುಗಳನ್ನಿಡುವ ಸ್ಥಳ. ಇತರ ಇಂಗ್ಲಿಶ್ ಉಪನಿವೇಶದವರು. ಚಿನ್ನದ ಕಣಿಯ ಶೋಧದಿಂದ ಜನವಸತಿ ವೃದ್ಧಿಯಾಯಿತು. ಅಲ್ಲಿ ಒಟ್ಟು ಆರು ಉಪನಿವೇಶಗಳು; ಅವುಗಳಿಗೆ ಸ್ವರಾಜ್ಯಾಧಿಕಾರ. ೧೯೦೧ರಲ್ಲಿ 'ಕಾಮನ್‌ವೆಲ್ಥ ಆಫ್ ಆಸ್ಟ್ರೇಲಿಯಾ' ಎಂದು ಉಪನಿವೇಶಗಳ ಏಕೀಕರಣ.

(೩) ನ್ಯೂಝೀಲಂಡ್—ಇದನ್ನು ೧೭೭೦ರಲ್ಲಿ ಕೆಪ್ಟನ್ ಕುಕ್ ಅವನು ಶೋಧಿ ಸಿದನು. ಅಲ್ಲಿಯ ಮಾವರಿ ಜನರೊಡನೆ ೧೮೪೦ರಲ್ಲಿ ಒಡಂಬಡಿಕೆ; ಇಂಗ್ಲಿ ಶರು ಒಕ್ಕಲಾದರು, ೧೮೫೫ರಲ್ಲಿ ಸ್ವರಾಜ್ಯದ ಅಧಿಕಾರ. ೧೮೭೦ರಲ್ಲಿ ಮಾವರಿ ಜನರೊಡನೆ ಯುದ್ಧ. ೧೯೦೭ರಲ್ಲಿ 'ಡೊಮಿನಿಯನ್ ಆಫ್ ನ್ಯೂಝೀಲಂಡ್'' ಎಂದು ಉಪನಿವೇಶದ ಹೆಸರು.

(೪) ನ್ಯೂ ಫೌಂಡಲಂಡ್—ಉತ್ತರ ಅಮೇರಿಕೆಯ ಬಳಿಯ ಉಪನಿವೇಶವು. ಯುಟ್ರೆಕ್ಟದ ಒಪ್ಪಂದದಿಂದ ಇಂಗ್ಲಿಶರ ವಶವಾಯಿತು. ೧೮೫೫ರಲ್ಲಿ ಸ್ವರಾಜ್ಯದ ಅಧಿಕಾರ.

(೫) ದಕ್ಷಿಣ ಆಫ್ರಿಕೆ—ಡಚ್ಚರ ಕೇಪ ಕಾಲನಿ ಉಪನಿವೇಶವು ಇಂಗ್ಲಂಡಿನ ಸ್ವಾಧೀನ (೧೮೧೪); ಇದಲ್ಲದೆ ನಾತಾಳ ಎಂಬ ಇಂಗ್ಲಿಶ್ ಉಪನಿವೇಶವು ಸ್ಥಾಪನವಾಯಿತು. ಬೋೞರ (ಡಚ್ಚ ಒಕ್ಕಲಿಗರು) ಬ್ರಿಟಿಶರ ನಡುವೆ ವಿರೋಧ; ಅದಕ್ಕಾಗಿ ಬೋೞರರು ಆರೆಂಜ ಫ್ರೀ ಸ್ಟೇಟ ಮತ್ತು ಟ್ರೆನ್ಸವಾಲ ಈ ಸ್ವತಂತ್ರ ಉಪನಿವೇಶಗಳನ್ನು ಸ್ಥಾಪಿಸುವರು. ಅಲ್ಲಿ ವಜ್ರದ ಕಣಿಗಳ ಶೋಧವಾಗಿ ಇಂಗ್ಲಿಶರು ನೆಲಸುವರು. ಮೂಲನಿವಾಸಿಗಳಾದ ಝುಲು ಜನರೊಡನೆ ಬೋೞರರ ಯುದ್ಧಗಳು. ಇದರಿಂದ ಇಂಗ್ಲಿಶ್ ಉಪನಿವೇಶಗಳಿಗೆ ಭೀತಿ; ಅದಕ್ಕಾಗಿ ಬೋೞರ ಉಪನಿವೇಶಗಳ ಮೇಲೆ ಇಂಗ್ಲಿಶರ ವರ್ಚಸ್ಸು; ಆದರೆ ಝುಲು ಜನರು ಸೋತ ಬಳಿಕ ಅವು ಸ್ವತಂತ್ರ. ಟ್ರೆನ್ಸವಾಲದಲ್ಲಿ ಚಿನ್ನದ ಕಣಿಯ ಶೋಧ; ಅಲ್ಲಿ ಇಂಗ್ಲಿಶ್ ಮತ್ತು ಇತರ ಯುರೋಪಿಯನರ ವಸತಿ ಹೆಚ್ಚುವುದು; ಆದರೆ ಬೋೞರರು ಅವರಿಗೆ ರಾಜಕೀಯ ಅಧಿಕಾರಗಳನ್ನು ಕೊಡದಿರಲು ಬ್ರಿಟಿಶ್-ಬೋೞರರಲ್ಲಿ ವಿರೋಧ ಮತ್ತು ಯುದ್ಧ (೧೮೯೯—೧೯೦೨). ಬೋೞರರ ಪರಾಭವ. ಆ ಉಪನಿವೇಶಕ್ಕೆ ಸಾಮ್ರಾಜ್ಯಾಂತರ್ಗತ ಸ್ವರಾಜ್ಯ. ಕೇಪ ಕಾಲನಿ, ನಾತಾಳ, ಟ್ರೆನ್ಸವಾಲ ಮತ್ತು ಆರೆಂಜ ಫ್ರೀ ಸ್ಟೇಟ ಇವುಗಳ ಏಕೀಕರಣ, ೧೯೧೦.

## ಹೊಸ ಶೋಧಗಳು, ಶಾಸ್ತ್ರೀಯ ಪ್ರಗತಿ ಮತ್ತು ವಾಙ್ಮಯ ವೃದ್ಧಿ:

ಸರಿಬಳಕೆ ಮತ್ತು ಸುಖಸೌಕರ್ಯಗಳು—ಉಗೆಬಂಡಿ ಮತ್ತು ಉಗೆಹಡಗುಗಳ ವೃದ್ಧಿ. ತಂತಿಯಂತ್ರವು ೧೮೪೩ರಲ್ಲಿ ಇಂಗ್ಲಂಡಿನಲ್ಲಿ ಪ್ರಾರಂಭ; ೧೮೬೭ರಲ್ಲಿ ಇಂಗ್ಲಂಡ್ ಅಮೇರಿಕೆಗಳ ನಡುವೆ ಪ್ರಾರಂಭ. ೧೮೭೬ರಲ್ಲಿ ಟೆಲಿಫೋನಿನ ಶೋಧ. ೧೮೩೯ರಲ್ಲಿ ಫೊಟೊಗ್ರಾಫಿಯ ಶೋಧ. ೧೮೭೯ರಲ್ಲಿ ವಿದ್ಯುದ್ದೀಪಗಳು. ೧೮೯೧ರಲ್ಲಿ ಮೊದಲನೆಯ ಮೋಟರು.

ವೈದ್ಯಶಾಸ್ತ್ರ— ಲುಯಿ ಪಾಶ್ಚೂರ ಮತ್ತು ಲಾರ್ಡ ಲಿಸ್ಟರ ಈ ಡಾಕ್ಟರರ ವೈದ್ಯಕೀಯ ಶೋಧಗಳು ಮತ್ತು ರೋಗನಿವಾರಕ ಉಪಾಯಗಳು.

ವಾಙ್ಮಯ—ಟೆನಿಸನ್, ಬ್ರೌನಿಂಗ ಮತ್ತು ಮ್ಯಾಥ್ಯೂ ಅರ್ನೋಲ್ಡ ಇವರು ಕವಿಗಳು. ಮೆಕಾಲೆ ಮತ್ತು ಕಾರ್ಲಾಯಿಲ್ ಇವರು ಐತಿಹಾಸಿಕ ಗ್ರಂಥಕರ್ತರು; ರಸ್ಕಿನ್ ವಿವಿಧ ವಿಷಯಗಳ ಲೇಖಕ; ಡಿಕೆನ್ಸ, ಇಲಿಯಟ್, ಥ್ಯಾಕರೆ ಇವರು ಕಾದಂಬರೀಕಾರರು; ಡಾರ್ವಿನ್ ಮತ್ತು ಹಕ್ಸಲೆ ಶಾಸ್ತ್ರೀಯ ವಿಷಯಗಳ ಲೇಖಕರು.

# ಪರಿಶಿಷ್ಟ ೧.

## ೧೯ನೆಯ ಶತಕದ ಪ್ರಸಿದ್ಧ ಪುರುಷರು.

ಡೆನಿಯಲ್ ಓಕಾನೆಲ್ (೧೭೭೫—೧೮೪೭)— ಐರಿಶ್ ದೇಶಭಕ್ತನು ಮತ್ತು ಐರಿಶ್ ಜನನಾಯಕನೆಂದು ಕೀರ್ತಿಪಡೆದನು. ಉತ್ತಮ ವಾಗ್ಮಿ ಮತ್ತು ಚತುರ ಬೆರಿಸ್ಟರನು ಎಂದೂ ಹೆಸರಾಗಿದ್ದನು. ರೋಮನ್ ಕೆಥಲಿಕ ಐರಿಶ್ ಜನರಿಗೆ ಇಂಗ್ಲಂಡಿನ ಪಾರ್ಲಿಮೆಂಟಿನ ಸದಸ್ಯರಾಗಲು ಅತಂಕವಿರಬಾರದೆಂದು ಚಳವಳಿಯನ್ನು ಹೂಡಿದನು. ಇದರ ಪರಿಣಾಮವಾಗಿ ರೋಮನ್ ಕೆಥಲಿಕ್ ಐರಿಶ್ ಜನರ ಮೇಲಿನ ರಾಜಕೀಯ ನಿರ್ಬಂಧಗಳು ದೂರವಾಗಿ (೧೮೨೯), ಅವರು ಪಾರ್ಲಿಮೆಂಟಿನ ಸದಸ್ಯರಾಗಲು ಅನುವಾಯಿತು. ಈತನು ಪಾರ್ಲಿಮೆಂಟಿನ ಸದಸ್ಯನಾದನು. ಅದರೆ ಐರ್ಲಂಡಿನ ನಿಕೃಷ್ಟವಾದ ಆರ್ಥಿಕ ಸ್ಥಿತಿಯನ್ನು ಮತ್ತು ಐರಿಶ್ ರೈತರ ಕಷ್ಟಕರ ಸ್ಥಿತಿಯನ್ನು ಸುಧಾರಿಸಲು ಪಾರ್ಲಿಮೆಂಟು ಪ್ರಯತ್ನ ಪಡದಿರುವುದನ್ನು ನೋಡಿ ಇಂಗ್ಲಿಶ್ ಪಾರ್ಲಿಮೆಂಟಿನೊಡನೆ ಸಂಧಿಸಿದ ಐರಿಶ್ ಪಾರ್ಲಿಮೆಂಟಿನ ಏಕೀಕರಣವನ್ನು ಖಂಡಿಸಿ ಐರ್ಲಂಡಿನಲ್ಲಿ ಸ್ವತಂತ್ರ ಪಾರ್ಲಿಮೆಂಟನ್ನು ಸ್ಥಾಪಿಸುವುದಕ್ಕಾಗಿ ಈತನು 'ಹೋಮ್‌ರೂಲ್' ಚಳವಳಿಯನ್ನು ಪ್ರಾರಂಭಿಸಿದನು. ಈತನು ಸೌಮ್ಯವಾದಿಯಾಗಿದ್ದು ನ್ಯಾಯವಾದ ಮಾರ್ಗದಿಂದ ಚಳವಳಿಮಾಡಬೇಕು, ಪುಂಡಾಟಿಕೆಮಾಡಬಾರದು ಎಂಬ ಮತದವನಾಗಿದ್ದನು. ಅದರೆ ಐರ್ಲಂಡಿನ ಉಗ್ರವೃತ್ತಿಯ ಯುವಕರಿಗೆ ಈ ನೀತಿ ಸರಿದೋರಲಿಲ್ಲ. ಇದರಿಂದ ಈತನ ಜನಪ್ರಿಯತೆ ಬಹಳವಾಗಿ ಕುಗ್ಗಿತು. ೧೮೪೭ರಲ್ಲಿ ಇವನು ಮರಣಹೊಂದಿದನು.

ಸರ ರಾಬರ್ಟ ಪೀಲ್ (೧೭೮೮—೧೮೫೦)—೧೯ನೆಯ ಶತಕದ ಪೂರ್ವಾರ್ಧದಲ್ಲಿ ಬಾಳಿದ ಪ್ರಸಿದ್ಧ ರಾಜ್ಯತಂತ್ರವಿಶಾರದನು ಮತ್ತು ಮುಖ್ಯ ಮಂತ್ರಿ. ೨೧ನೆಯ ವಯಸ್ಸಿಗೆ ಟೋರಿ ಪಂಗಡದ ಪರವಾಗಿ ಪಾರ್ಲಿಮೆಂಟಿನಲ್ಲಿ ಆರಿಸಿ ಬಂದನು. ೧೮೨೨ರಲ್ಲಿ ಅಂತಃಸ್ಥ ವಿಷಯಗಳ ಮಂತ್ರಿಯಾದನು. ಈ ಅಧಿಕಾರದಲ್ಲಿರುವಾಗ ಅವನು ಫೌಜದಾರಿ ಕಾಯದೆಯಲ್ಲಿ ಸುಧಾರಣೆಗಳನ್ನು ಮಾಡಿದನು. ಇದರಿಂದ ಅಪರಾಧಿಗಳಿಗೆ ಅವರ ಅಪರಾಧಕ್ಕೆ ತಕ್ಕ ಶಾಸನವನ್ನು ಕೊಡಬೇಕೆಂದು ಗೊತ್ತಾಯಿತು. ಮೊದಲು ಅನೇಕ ಸಣ್ಣಪುಟ್ಟ ಅಪರಾಧಕ್ಕಾಗಿಯೂ ಗಲ್ಲಿನ ಶಿಕ್ಷೆಯಾಗುತ್ತಿತ್ತು. ಇದರಂತೆ ಈತನು ಪೋಲಿಸ ಪದ್ಧತಿಯನ್ನು ಸ್ಥಾಪಿಸಿದನು. ಯೋಗ್ಯರು, ಕುಶಲರು ಮತ್ತು ಕಾರ್ಯದಕ್ಷರು ಆದವರನ್ನು ಈ ವಿಭಾಗದಲ್ಲಿ ನಿಯೋಜಿಸಿದನು. ಇದರಿಂದ ಅಪರಾಧಿಗಳ ಶೋಧವಾಗಿ ಜನರಿಗಾಗುತ್ತಿದ್ದ ಉಪದ್ರವವು ಕಡಿಮೆಯಾಯಿತು. ಕೆಥಲಿಕ್ ಜನರ ಮೇಲಿನ ನಿರ್ಬಂಧಗಳನ್ನು ದೂರಮಾಡಲು ಈತನು ಮೊದಲು ವಿರೋಧ ಮಾಡಿದರೂ ಕೊನೆಗೆ ಅದನ್ನು ದೂರ ಮಾಡುವ ಬಿಲ್ಲಿಗೆ ಬೆಂಬಲಕೊಟ್ಟನು. ೧೮೩೨ರ ತರುವಾಯ ಪಾರ್ಲಿಮೆಂಟಿನ ಸದಸ್ಯರಲ್ಲಿ ಮಧ್ಯಮ ವರ್ಗದ ಜನರ ಪ್ರತಿನಿಧಿಗಳ ಸಂಖ್ಯೆ ಬೆಳೆಯತೊಡಗಿತು. ಈ ಸಮಯಕ್ಕೆ ಟೋರಿ ಪಂಗಡದವರಿಗೂ ಪೂರ್ವ ಪರಂಪರೆಯನ್ನು ಬಿಡದೆ ಅವಶ್ಯಕವಿದ್ದ ಸುಧಾರಣೆಗಳನ್ನು ಮಾಡುವುದು ಯುಕ್ತವೆಂದು ಎನಿಸತೊಡಗಿತ್ತು, ಈ ಹೊಸ ನೀತಿಯಂತೆ

ಟೋರಿ ಪಂಗಡದವರು 'ಕಾಂಝರ್ವೇಟಿವ್' (ಹಳೆಯ ಪರಂಪರೆಯ ಅಭಿಮಾನಿ) ಎಂಬ ಹೆಸರನ್ನು ಸ್ವೀಕರಿಸಿದ್ದರು. ಪೀಲನು ಕಾಂಝರ್ವೇಟಿವ್ ಪಕ್ಷದ ಧುರೀಣನಾದನು. ೧೮೪೮ರಲ್ಲಿ ಅವನು ಮುಖ್ಯ ಮಂತ್ರಿಯಾದನು. ಈ ಕಾಲಕ್ಕೆ ಇಂಗ್ಲಂಡಿನಲ್ಲಿ ಸಂರಕ್ಷಿತ ವ್ಯಾಪಾರದ ಪದ್ಧತಿ ರೂಢಿಯಲ್ಲಿದ್ದಿತು. ಆದರೆ ಅದನ್ನು ತೆಗೆದು ಅನಿರ್ಬಂಧ ವ್ಯಾಪಾರ ವನ್ನು ಪ್ರಾರಂಭಿಸಲು ಚಳವಳಿ ನಡೆಯಿತು. ಅದಕ್ಕೆ ಪೀಲನ ಸಹಾನುಭೂತಿಯೂ ದೊರೆತಿತು. ಈ ನೀತಿಯಂತೆ ಈತನು ಅನೇಕ ಕಚ್ಚಾ ಆಯಾತ ಸರಕುಗಳ ಮೇಲಿನ ಸುಂಕವನ್ನು ಇಳಿಸಿದನು; ಮತ್ತು ಇದರಿಂದಾದ ಹಾನಿಯನ್ನು ತುಂಬಲು 'ಆದಾಯದ ಕರ'ವನ್ನು ಹೇರಿದನು. ೧೮೪೬ರಲ್ಲಿ ಕಾಳಿನ ಕರವನ್ನೂ ಕಿತ್ತು ಹಾಕಿದನು. ಆದರೆ ಈ ನೀತಿಯಿಂದ ಈತನಿಗೆ ತನ್ನ ಕಾಂಝರ್ವೇಟಿವ್ ಪಕ್ಷದ ಬೆಂಬಲವೆ ಕುಗ್ಗಿತು. ಇದಕ್ಕಾಗಿ ಈತನು ಮಂತ್ರಿಪದವನ್ನು ತ್ಯಜಿಸಬೇಕಾಯಿತು. ಈತನು ೧೮೫೦ರಲ್ಲಿ ಕುದುರೆಯ ಮೇಲಿಂದ ಬಿದ್ದು ಮರಣಹೊಂದಿದನು.

ಲಾರ್ಡ ಪಾಮರ್ಸ್ಟನ್ (೧೭೮೪—೧೮೬೫)—೧೯ನೆಯ ಶತಕದಲ್ಲಿ ಇಂಗ್ಲಂಡಿನ ವಿದೇಶ ಮಂತ್ರಿಯೆಂದು ನಾಮಾಂಕಿತನಾದನು. ಈತನು ಐರ್ಲಂಡಿ ನಲ್ಲಿಯ ಲಾರ್ಡನಿದ್ದುದರಿಂದ ಕಾಮನ್ಸ ಸಭೆಯ ಸದಸ್ಯನಾಗಲು ಸಾಧ್ಯವಾಯಿತು. ೨೩ನೆಯ ವಯಸ್ಸಿಗೆ ಟೋರಿ ಪಂಗಡದ ಪರವಾಗಿ ಪಾರ್ಲಿಮೆಂಟಿಗೆ ಬಂದನು. ಮುಂದೆ ಸಾಯುವ ವರೆಗೆ ೫೮ ವರ್ಷ ಕಾಮನ್ಸ ಸಭೆಯ ಸದಸ್ಯನಾಗಿದ್ದನು. ೧೮೦೯ರಿಂದ ೧೮೨೮ರ ವರೆಗೆ ಯುದ್ಧವಿಭಾಗದ ಮಂತ್ರಿಯಾಗಿ ಕೆಲಸ ಮಾಡಿದನು. ಈತನು ಮೊದಲು ಟೋರಿ ಪಕ್ಷದವನಾಗಿದ್ದನು. ಮುಂದೆ ಈತನ ಮತಗಳು ಮಾರ್ಪಟ್ಟು ಲಿಬರಲ್ ಪಕ್ಷಕ್ಕೆ ಸೇರಿದನು. ಬಳಿಕ ಬೇರೆ ಬೇರೆ ಲಿಬರಲ್ ಮಂತ್ರಿಮಂಡಲಗಳಲ್ಲಿ (೧೮೩೦—೩೪; ೧೮೩೫—೪೧; ೧೮೪೬—೧೮೫೧) ವಿದೇಶಮಂತ್ರಿಯಾಗಿ ಕೆಲಸಮಾಡಿ ದನು. ಇದರಿಂದ ವಿದೇಶವಿಷಯಗಳಲ್ಲಿ ನುರಿತ ರಾಜ್ಯತಂತ್ರಪ್ರವೀಣನಾದನು. ಈತನ ರಾಜ್ಯತಂತ್ರಕೌಶಲದಿಂದ ಪರರಾಷ್ಟ್ರೀಯ ರಾಜನೀತಿಯಲ್ಲಿ ಇಂಗ್ಲಂಡಿನ ಮಹತ್ವವೂ ಪ್ರಭಾವವೂ ಬಹುವಾಗಿ ಬೆಳೆಯಿತು. ಕ್ರಿಮಿಯನ್ ಯುದ್ಧದಲ್ಲಿ ಈತನು ಯೋಗ್ಯರೂ ದಕ್ಷರೂ ಆದ ಅಧಿಕಾರಿಗಳನ್ನು ಕಳುಹಿ ಯುದ್ಧದ ವ್ಯವಸ್ಥೆಯನ್ನು ಸರಿಯಾಗಿ ಏರ್ಪ ಡಿಸಿದನು. ಇದರಿಂದ ಇಂಗ್ಲಂಡು ಜಯಶಾಲಿಯಾಗಿ ರಶಿಯದ ಮಹತ್ವಾಕಾಂಕ್ಷೆಗೆ ತಡೆ ಉಂಟಾಯಿತು. ಯುರೋಪದ ಬೇರೆ ಬೇರೆ ರಾಷ್ಟ್ರಗಳಲ್ಲಿಯ ಜನರು ತಮ್ಮ ಅರ ಸರಿಂದ ಹೆಚ್ಚಿನ ಅಧಿಕಾರಗಳನ್ನು ದೊರಕಿಸಲು ಹೂಡಿದ ಚಳವಳಿಗೆ ಈತನ ಸಹಾ ನುಭೂತಿ ಇದ್ದಿತು. ಆದರೆ ಇಂಗ್ಲಂಡಿನ ಅಂತಃಸ್ಥ ವಿಷಯಗಳಲ್ಲಿ ಪಾರ್ಲಿಮೆಂಟು ಹೆಚ್ಚಿನ ಸುಧಾರಣೆಯನ್ನು ಮಾಡುವುದು ಅಗತ್ಯವಿಲ್ಲವೆಂದು ಈತನ ಅಭಿಪ್ರಾಯ ವಿದ್ದಿತು. ಈತನು ೧೮೫೫ರಿಂದ ೫೮ ಮತ್ತು ೧೮೫೯ರಿಂದ ೧೮೬೫ರ ವರೆಗೆ ಮುಖ್ಯ ಮಂತ್ರಿಯಾಗಿದ್ದನು. ೧೮೬೫ರಲ್ಲಿ ಈತನು ಮರಣಹೊಂದಿದನು.

ಬೆಂಜಾಮಿನ್ ಡಿಝ್ರೇಲಿ (೧೮೦೪—೮೧)—ಲಾರ್ಡ ಬೇಕನ್ಸಫೀಲ್ಡ— ೧೯ನೆಯ ಶತಕದ ಉತ್ತರಾರ್ಧದಲ್ಲಿ ಕಾಂಝರ್ವೇಟಿವ್ ಪಂಗಡದ ಪ್ರಸಿದ್ಧ ಧುರೀಣನು,

ಈತನು ಪರರಾಷ್ಟ್ರೀಯ ವಿಷಯಗಳನ್ನು ಲಕ್ಷಿಸುತ್ತಿದ್ದನು. ಇಂಗ್ಲಂಡಿನ ಸಾಮ್ರಾಜ್ಯ ವನ್ನು ಮತ್ತು ವರ್ಚಸ್ಸನ್ನು ಬೆಳೆಯಿಸಲು ಪ್ರಯತ್ನಿಸಿದನು. ೧೮೩೭ರಲ್ಲಿ ಟೋರಿ ಪಕ್ಷದ ಪರವಾಗಿ ಪಾರ್ಲಿಮೆಂಟಿನ ಸದಸ್ಯನಾದನು. ಪೀಲನ ಅನುಯಾಯಿಯಾಗಿ ದ್ದನು. ಆದರೆ ಪೀಲನ ಸಂರಕ್ಷಿತ ವ್ಯಾಪಾರಕ್ಕೆ ವಿರೋಧಿಯಾದ ನೀತಿ ಮತ್ತು ಧಾನ್ಯದ ಕರವನ್ನು ಕಿತ್ತುಹಾಕಿದುದು ಈತನಿಗೆ ಸರಿದೋರಲಿಲ್ಲ. ಆದುದರಿಂದ ಈತನು ಈ ವಿಷಯಗಳಲ್ಲಿ ಪೀಲನಿಗೆ ವಿರೋಧಮಾಡಿದನು. ಹೀಗೆ ಈತನು ಮೆಲ್ಲಮೆಲ್ಲನೆ ಕಾಮನ್ಸ ಸಭೆಯಲ್ಲಿ ಕಾಂಝರ್‌ವೇಟಿವ್ ಪಕ್ಷದ ನಾಯಕನಾದನು. ಲಾರ್ಡ ಡರ್ಬಿ ಮುಖ್ಯ ಮಂತ್ರಿಯಾಗಿರುವಾಗ (೧೮೫೨, ೧೮೫೮–೫೯ ಮತ್ತು ೧೮೬೬–೬೮) ಈತನು ಚೆನ್ಸೆಲರ ಆಫ ದಿ ಎಕ್ಸಚೆಕರನಾಗಿದ್ದನು. ಪಾರ್ಲಿಮೆಂಟಿನ ಸುಧಾರಣೆಯ ಎರಡ ನೆಯ ಬಿಲ್ಲನ್ನು ಸ್ವೀಕಾರಗೊಳಿಸುವ ಕೆಲಸದಲ್ಲಿ (೧೮೬೭) ಈತನು ಅಗ್ರೇಸರನಾಗಿ ದ್ದನು. ೧೮೭೪–೮೦ರಲ್ಲಿ ಮುಖ್ಯ ಮಂತ್ರಿಯಾಗಿದ್ದನು. ಇಜಿಪ್ತದ ಖೇದಿವನ ಕಡೆ ಯಿಂದ ಸುಯೆಝು ಕನಾಲ ಕಂಪನಿಯ ಪಾಲುಗಳನ್ನು ಇಂಗ್ಲಂಡಿನ ಪರವಾಗಿ ಕೊಂಡನು. ಇದರಿಂದ ಈ ಜಲಮಾರ್ಗದಲ್ಲಿ ಇಂಗ್ಲಂಡಿಗೆ ಪ್ರವೇಶ ದೊರೆತು ಇಜಿಪ್ತ ದಲ್ಲಿ ಇಂಗ್ಲಂಡಿನ ಪ್ರಭಾವವು ಹೆಚ್ಚಿತು. ರಶಿಯದ ಭೂಮಧ್ಯಸಮುದ್ರದ ಮತ್ತು ಮೂಡಣಕಡೆಯ ಮಹತ್ವಾಕಾಂಕ್ಷೆಗೆ ಈತನು ತಡೆಯಿಕ್ಕಿದನು. ೧೮೭೬ರಲ್ಲಿ ರಾಣಿ 'ಅರ್ಲ ಆಫ ಬೇಕನ್ಸಫೀಲ್ಡ' ಎಂದು ಈತನನ್ನು ಲಾರ್ಡನಾಗಿ ಮಾಡಿದಳು. ಈತನ ಸೂಚನೆ ಯಂತೆ ರಾಣಿ ೧೮೭೭ರಲ್ಲಿ 'ಹಿಂದುಸ್ಥಾನದ ಸಾಮ್ರಾಜ್ಞಿ' ಎಂಬ ಬಿರುದನ್ನು ಧರಿಸಿದಳು. ಈತನು ಉತ್ತಮ ವಾಗ್ಮಿಯಾಗಿದ್ದು ಈತನ ಭಾಷಣವು ಬಹಳ ಪರಿಣಾಮಕಾರಿಯಾ ಗಿತ್ತು. ಲಿಬರಲ್ ಪಕ್ಷದ ಧುರೀಣನಾದ ಗ್ಲಾಡ್‌ಸ್ಟನನು ಈತನಿಗೆ ರಾಜಕೀಯ ರಂಗ ದಲ್ಲಿ ಪ್ರತಿಸ್ಪರ್ಧಿಯಾಗಿದ್ದನು. ೧೮೮೧ರಲ್ಲಿ ಈತನು ನಿಧನಹೊಂದಿದನು.

ಚಾರ್ಲಸ್ ಸ್ಟುವರ್ಟ ಪಾರ್ನೆಲ್ (೧೮೪೬–೯೧)–ಐರ್ಲಂಡಿಗೆ ಹೋಮ್ ರೂಲು ದೊರೆಯಬೇಕೆಂದು ಐರ್ಲಂಡಿನಲ್ಲಿ ನಡೆದ ಚಳವಳಿಗೆ ಈತನು ನಾಯಕನಾ ದನು. ಪಾರ್ಲಿಮೆಂಟ ಸಭೆಯಲ್ಲಿಯ ಐರಿಶ್ ಸದಸ್ಯರ ಧುರೀಣನು ಈತನೇ ಆಗಿದ್ದನು. ಐರಿಶ್ ಸಮಸ್ಯೆಯ ಕಡೆಗೆ ಪಾರ್ಲಿಮೆಂಟಿನ ಲಕ್ಷ್ಯವನ್ನು ಎಳೆದು ಐರ್ಲಂಡಿಗೆ ಹೋಮ್ ರೂಲನ್ನು ದೊರಕಿಸಲು ಈತನು ಮತ್ತು ಈತನ ಅನುಯಾಯಿಗಳು ಪಾರ್ಲಿಮೆಂಟ ನಲ್ಲಿ ಎಡರಾಗುವ ಕ್ರಮವನ್ನು ಆರಂಭಿಸಿದರು. ಉದ್ದುದ್ದಾದ ಭಾಷಣಗಳನ್ನು ಮಾಡಿ ಪಾರ್ಲಿಮೆಂಟಿನ ಕಾಲಹರಣವನ್ನು ಮಾಡುವುದು, ಮಂತ್ರಿಮಂಡಲವು ಐರ್ಲಂಡಿಗೆ ಹೋಮ್‌ರೂಲನ್ನು ಕೊಡಲು ವಿರೋಧಿಯಾಗಿದ್ದರೆ ವಿರುದ್ಧ ಪಕ್ಷಕ್ಕೆ ಮತವನ್ನು ಕೊಟ್ಟು ಆ ಮಂತ್ರಿಮಂಡಲವನ್ನು ಪದಚ್ಯುತವಾಗಿ ಮಾಡುವುದು ಮುಂತಾದುವು ಈ ಎಡರು ಗಾರಿಕೆಯ ಉಪಾಯಗಳಾಗಿದ್ದುವು. ಈತನು ಐರ್ಲಂಡಿನಲ್ಲಿಯ ಹೋಮ್‌ರೂಲ ಚಳ ವಳಿಯಲ್ಲಿ ಶಕ್ತಿಯನ್ನು ಉಂಟುಮಾಡಿದನು. ಇದರಿಂದ ಅನೇಕ ಕಡೆಯಲ್ಲಿ ಪುಂಡಾ ಟಿಕೆ ಪ್ರಾರಂಭವಾಯಿತು. ಆದಕ್ಕಾಗಿ ಗ್ಲಾಡ್‌ಸ್ಟನನು ಈತನನ್ನು ಸೆರೆಯಲ್ಲಿರಿಸಿದನು. ಮುಂದೆ ಈತನ ಬಿಡುಗಡೆಯಾಯಿತು. ಈತನು ೧೮೯೧ರಲ್ಲಿ ಮರಣಹೊಂದಿದನು.

ವಿಲಿಯಮ್ ಎವರ್ಟ ಗ್ಲಾಡ್‌ಸ್ಟನ್ (೧೮೦೯—೯೮)—೧೯ನೆಯ ಶತಕದಲ್ಲಿ ಬಾಳಿದ ಪ್ರಸಿದ್ಧ ಲಿಬರಲ್ ರಾಜ್ಯತಂತ್ರವಿಶಾರದನು ಈತನು. ೨೩ನೆಯ ವಯಸ್ಸಿನಲ್ಲಿ ಟೋರಿ ಪಕ್ಷದ ಪರವಾಗಿ ಪಾರ್ಲಿಮೆಂಟಿನಲ್ಲಿ ಆರಿಸಿ ಬಂದನು. ಈತನು ಪೀಲನ ಅನುಯಾಯಿಯಾಗಿದ್ದನು. ಆತನ ಕೈಕೆಳಗೆ ಜೊಕ್ಕಸದ ಲಾರ್ಡನಾಗಿ ಕೆಲಸಮಾಡಿದನು. ಬಳಿಕ ಈತನು ಉಪನಿವೇಶಗಳ ಉಪಕಾರ್ಯದರ್ಶಿಯಾಗಿ ನಿಯೋಜಿತನಾದನು. ೧೮೪೧ರಲ್ಲಿ ಪೀಲನು ಮುಖ್ಯ ಮಂತ್ರಿಯಾಗಲು ಈತನ ಕಡೆಗೆ ವ್ಯಾಪಾರ ವಿಷಯದ ಬೋರ್ಡಿನ ಅಧ್ಯಕ್ಷನ ಕೆಲಸವು ಬಂದಿತು (೧೮೪೩). ಪೀಲನು ಧಾನ್ಯದ ಮೇಲಿನ ಕರಗಳನ್ನು ಕಿತ್ತುಹಾಕಿದುದಕ್ಕೆ ಈತನ ಬೆಂಬಲವಿದ್ದಿತು. ಆದುದರಿಂದ ಈತನು ಕಾಂಝರ್ವೇಟಿವ್ ಪಕ್ಷವನ್ನು ಬಿಡಬೇಕಾಯಿತು. ಬಳಿಕ ಈತನು ಲಿಬರಲ್ ಪಕ್ಷಕ್ಕೆ ಸೇರಿದನು. ಮುಂದೆ ಅದರ ನಾಯಕನಾದನು. ೧೮೫೨ರಲ್ಲಿ ಆಬರ್ಡೀನನ ಮಂತ್ರಿಮಂಡಲದಲ್ಲಿ, ಆ ಬಳಿಕ ಪಾಮರ್ಸ್ಟನನ ಮಂತ್ರಿಮಂಡಲದಲ್ಲಿ (೧೮೫೯—೬೫) ಈತನ ಕಡೆಗೆ ಚಾನ್ಸೆಲರ ಆಫ್ ದಿ ಎಕ್ಸಚೆಕರ (ಅರ್ಥಸಚಿವ) ಕೆಲಸವಿದ್ದಿತು. ಗ್ಲಾಡ್‌ಸ್ಟನನ ಮತಗಳು ಉದಾರವಾಗಿದ್ದುವು. ಐರ್ಲಂಡಿನಲ್ಲಿಯ ಅಸಂತೋಷವನ್ನು ಕಳೆಯಲು ಈತನು ಐರ್ಲಂಡಿನ ಪ್ರಾಟೆಸ್ಟಂಟ ಚರ್ಚನ್ನು ರದ್ದುಗೊಳಿಸಿದನು (೧೮೬೯). ಐರ್ಲಂಡಿನ ಒಕ್ಕಲಿಗರ ಸ್ಥಿತಿಯನ್ನು ಸುಧಾರಿಸಲು ೧೮೭೦ರಲ್ಲಿ ಮತ್ತು ೧೮೮೧ರಲ್ಲಿ ಹೊಲಗಳ ವಿಷಯವಾಗಿ ಕಟ್ಟಳೆಗಳನ್ನು ಮಾಡಿದನು. ಐರ್ಲಂಡಿಗೆ ಹೋಮ್‌ರೂಲು ದೊರೆಯಬೇಕೆಂದು ೧೮೮೬ರಲ್ಲಿ ಮತ್ತು ೧೮೯೩ರಲ್ಲಿ ಪಾರ್ಲಿಮೆಂಟಿನಲ್ಲಿ ಹೋಮ್‌ರೂಲ್ ಬಿಲ್ಲುಗಳನ್ನು ತಂದನು. ಆದರೆ ಅವು ಮಾನ್ಯವಾಗಲಿಲ್ಲ. ಇಂಗ್ಲಂಡಿನ ಅಂತಃಸ್ಥ ವಿಷಯಗಳಲ್ಲಿಯೂ ಈತನು ಮಹತ್ವದ ಸುಧಾರಣೆಗಳನ್ನು ಮಾಡಿದನು. ೧೮೭೦ರಲ್ಲಿ ಪ್ರಾಥಮಿಕ ಶಿಕ್ಷಣದ ಕಟ್ಟಳೆ, ೧೮೭೨ರಲ್ಲಿ ಗುಪ್ತಮತದಾನ ಪದ್ಧತಿ, ೧೮೮೪—೮೫ರಲ್ಲಿ ಪಾರ್ಲಿಮೆಂಟಿನ ಸುಧಾರಣೆಯ ಮೂರನೆಯ ಬಿಲ್ಲು ಮುಂತಾದ ಕಟ್ಟಳೆಗಳನ್ನು ಈತನ ಸೂಚನೆಯ ಮೇರೆಗೆ ಪಾರ್ಲಿಮೆಂಟು ಸ್ವೀಕರಿಸಿತು. ಪರರಾಷ್ಟ್ರೀಯ ವಿಷಯಗಳನ್ನು ಈತನು ಹೆಚ್ಚಾಗಿ ಲಕ್ಷಿಸುತ್ತಿರಲಿಲ್ಲ. ಸಾಮ್ರಾಜ್ಯವನ್ನು ಬೆಳೆಯಿಸಿ ಇಂಗ್ಲಂಡು ತನ್ನ ಹೊಣೆಯನ್ನು ಹೆಚ್ಚಿಸಿಕೊಳ್ಳಬಾರದೆಂದು ಈತನ ಮತವಿದ್ದಿತು. ಈತನು ಉತ್ತಮ ವಕ್ತಾರನಾಗಿದ್ದನು. ಕಾಂಝರ್ವೇಟಿವ್ ಪಕ್ಷದ ಡಿಝ್‌ರೇಲಿಗೆ ರಾಜಕೀಯ ಕ್ಷೇತ್ರದಲ್ಲಿ ಪ್ರತಿಸ್ಪರ್ಧಿಯಾಗಿದ್ದನು. ಈತನು ೧೮೯೮ರಲ್ಲಿ ಮರಣಹೊಂದಿದನು.

## ಪರಿಶಿಷ್ಟ ೨.

### ಇಂಗ್ಲಂಡಿನಲ್ಲಿಯ ಬೇರೆಬೇರೆ ಕಾಲದ ರಾಜಕೀಯ ಪಕ್ಷಗಳು.

ರೌಂಡ ಹೆಡ್ಸ ಮತ್ತು ರಾಯಲಿಸ್ಟ್ಸ—೧೬೪೨ರಲ್ಲಿ ಅರಸು ಮತ್ತು ಪಾರ್ಲಿಮೆಂಟ್ ಇವರ ನಡುವೆ ಅಂತಃಸ್ಥ ಯುದ್ಧವು ಪ್ರಾರಂಭವಾಯಿತು. ಆಗ ಅರಸನ ಪಕ್ಷದವರು ಮತ್ತು ಪಾರ್ಲಿಮೆಂಟಿನ ಪಕ್ಷದವರು ಹೀಗೆ ಎರಡು ಬಣಗಳು ನಿರ್ಮಾಣ

ವಾದುವು. ಅರಸನ ಪಕ್ಷದವರಿಗೆ 'ರಾಯಲಿಸ್ಟ' ಮತ್ತು ಪಾರ್ಲಿಮೆಂಟಿನ ಪಕ್ಷದ ವರಿಗೆ 'ರೌಂಡ ಹೆಡ್ಸ' ಎಂಬ ಹೆಸರುಗಳು ಬಂದುವು.

ಪಿಟೆಶನರ್ಸ ಮತ್ತು ಅಬಾರ್ಹರ್ರ್ಸ—೨ನೆಯ ಚಾರ್ಲಸನ ತಮ್ಮನಾದ ಜೇಮ್ಸನು ರೋಮನ್ ಕಥಲಿಕ್ ಪಂಥದವನಿದ್ದುದರಿಂದ ಚಾರ್ಲಸನ ತರುವಾಯ ಆತನಿಗೆ ಪಟ್ಟವು ದೊರೆಯಬಾರದು, ಆತನ ಬದಲು ಚಾರ್ಲಸನ ದಾಸೀ ಪುತ್ರನಾದ ಪ್ರಾಟೆಸ್ಟಂಟ ಪಂಥದ ಮನ್‌ಮಥನೆಂಬವನಿಗೆ ಪಟ್ಟವು ದೊರೆಯಬೇಕು ಎಂಬ ಉದ್ದೇಶ ದಿಂದ ಇಂಗ್ಲಂಡಿನ ಪಟ್ಟದ ಮೇಲಿನ ಜೇಮ್ಸನ ಅಧಿಕಾರವನ್ನು ಹಾರಿಸಲು 'ಎಕ್ಸ ಕ್ಲೂಜನ್ ಬಿಲ್ಲ್' ಎಂಬ ಬಿಲ್ಲನ್ನು ೧೬೮೦ರಲ್ಲಿ ಶೆಫ್ಟ್ಸಬರಿ ಈತನು ಪಾರ್ಲಿಮೆಂಟಿನಲ್ಲಿ ಮಂಡಿಸಿದನು. ಆದರೆ ಚಾರ್ಲಸನು ಪಾರ್ಲಿಮೆಂಟನ್ನು ವಿಸರ್ಜಿಸಿದುದರಿಂದ ಅದು ಮಾನ್ಯವಾಗಲಿಲ್ಲ. ಆ ಕಾಲಕ್ಕೆ ಚಾರ್ಲಸನು ಪಾರ್ಲಿಮೆಂಟನ್ನು ಕರೆಯಬೇಕೆಂದು 'ಪಿಟೆಶನ್' (ವಿಜ್ಞಾಪನೆಯನ್ನು) ಮಾಡುವ ಶೆಫ್ಟ್ಸಬರಿ ಪಕ್ಷದವರಿಗೆ 'ಪಿಟಿಶನರ್ಸ' ಎಂದು, ಮತ್ತು ಅರಸನ ಅಧಿಕಾರದಲ್ಲಿ ವಿನಾಕಾರಣವಾಗಿ ಕೈಹಾಕಬಾರದೆಂದು ಅಭಿ ಪ್ರಾಯದ ಬೇರೆ ಜನರಿಗೆ ಅಬಾರ್ಹರ್ರ್ಸ, ಎಂದು ಹೆಸರುಗಳು ಉಂಟಾದುವು.

ವ್ಹಿಗ್ ಮತ್ತು ಟೋರಿ—ಚಾರ್ಲಸನ ತರುವಾಯದಲ್ಲಿ ಜೇಮ್ಸನಿಗೆ ಪಟ್ಟವನ್ನು ಕೊಡಬೇಕು ಅಥವಾ ಕೊಡಬಾರದು ಎಂಬುದನ್ನು ನಿರ್ಣಯಿಸಲಿಕ್ಕೆ ಎಕ್ಸ್‌ಕ್ಲೂಜನ್ ಬಿಲ್ಲು ಪಾರ್ಲಿಮೆಂಟಿನಲ್ಲಿ ಬರಲು, ಅಬಾರ್ಹರ್ರ್ಸ ಮತ್ತು ಪಿಟಿಶನರ್ಸ ಇವರು ಪರಸ್ಪರ ರನ್ನು ಹೀಯಾಳಿಸಲು 'ವ್ಹಿಗ್' ಮತ್ತು 'ಟೋರಿ ಎಂಬ ಹೆಸರುಗಳನ್ನು ಉಪಯೋಗಿಸ ತೊಡಗಿದರು. ವ್ಹಿಗ್ ಎಂಬ ಹೆಸರು ಮೊತ್ತಮೊದಲು ೨ನೆಯ ಚಾರ್ಲಸನ ಆಳ್ಕೆ ಯಲ್ಲಿ ಸ್ವೀಕೃತವಾದ ಧಾರ್ಮಿಕ ಶಾಸನಗಳನ್ನು ವಿರೋಧಿಸುವ ಸ್ಕಾಟಲಂಡಿನ ಕಾವೆ ನಂಟರ್ಸ ಜನರಿಗೆ ಕೊಡಲ್ಪಟ್ಟಿತು. ತರುವಾಯದಲ್ಲಿ ರಾಜನನ್ನು ವಿರೋಧಿಸುವ ಪಕ್ಷವು ಆ ಹೆಸರಿನಿಂದ ಕರೆಯಲ್ಪಡಲಾರಂಭಿಸಿತು. ಟೋರಿ ಎಂಬ ಹೆಸರು ಮೊದಲು ಕ್ರಾಮವೆಲನನ್ನು ವಿರೋಧಿಸಿದುದರಿಂದ ಯಾರ ಭೂಮಿಗಳು ಜಪ್ತಮಾಡಲ್ಪಟ್ಟಿದ್ದುವು ಮತ್ತು ಯಾರು 'ನ್ಯಾಯಬಾಹ್ಯ'ರೆಂದು (out-law) ನಿಶ್ಚಯಿಸಲ್ಪಟ್ಟಿದ್ದರು ಅಂತಹ ಐರಿಶ್ ರೋಮನ್ ಕಥಲಿಕ್ ಜನರಿಗೆ ಕೊಡಲ್ಪಟ್ಟಿತ್ತು. ಆ ಬಳಿಕ ರಾಜನ ಪಕ್ಷದ ಜನರು ಆ ಹೆಸರಿನಿಂದ ಕರೆಯಲ್ಪಡಲಾರಂಭಿಸಿದರು. ಆದರೆ ಮುಂದೆ 'ವ್ಹಿಗ್' ಮತ್ತು 'ಟೋರಿ' ಎಂಬ ಶಬ್ದಗಳ ಮೂಲದ ಹೀನಾರ್ಥಗಳು ಹೋಗಿ ಅವು ಇಂಗ್ಲಂಡಿನ ರಾಜ ಕೀಯ ಪಕ್ಷಗಳ ರೂಢ ಹೆಸರುಗಳಾದುವು. ಧಾರ್ಮಿಕ ವಿಷಯಗಳಲ್ಲಿ ಪ್ರತಿಯೊಬ್ಬನಿಗೆ ತನ್ನ ಮತದಂತೆ ನಡೆಯಲು ಸ್ವಾತಂತ್ರ್ಯವಿರಬೇಕೆಂಬುದು ವ್ಹಿಗ್ ಪಕ್ಷದ ಅಭಿಪ್ರಾಯವು, ಆದರೆ ಇಂಗ್ಲಡಿನ ಎಪಿಸ್‌ಕೊಪೇಲಿಯನ್ ಪಂಥದ ಅನುಯಾಯಿಗಳಲ್ಲದ ಇತರ ಜನರಿಗೆ ಧಾರ್ಮಿಕ ಸೌಕರ್ಯಗಳನ್ನು ಕೊಡಬಾರದೆಂಬುದು ಟೋರಿ ಪಕ್ಷದ ಮತವು. ೧೬೮೮ರಲ್ಲಿ ನಡೆದ ರಾಜ್ಯಕ್ರಾಂತಿ ಮತ್ತು ಅದರಿಂದ ಸ್ಥಾಪಿತವಾದ ಪಾರ್ಲಿಮೆಂಟಿನ ಶ್ರೇಷ್ಠತ್ವ ಇವನ್ನು ಕುರಿತು ವ್ಹಿಗ್ ಪಕ್ಷದವರು ಅಭಿಮಾನವುಳ್ಳವರಾಗಿದ್ದರು. ಟೋರಿ ಪಕ್ಷದವರಿಗೆ 'ರಾಜನ ಅಧಿಕಾರವು ಈಶ್ವರದತ್ತವಾದುದು' (Divine Right) ಎಂಬ

ತತ್ವವು ಮಾನ್ಯವಿದ್ದಿತು, ಆದುದರಿಂದ ಅರಸನ ಕೈಯಲ್ಲಿ ಹೆಚ್ಚಾಗಿ ಅಧಿಕಾರವಿರುವುದು ಆವಶ್ಯವೆಂದು ಈ ಪಕ್ಷದವರ ಅಭಿಪ್ರಾಯವಿದ್ದಿತು. ಇಂಗ್ಲಂಡಿನ ವ್ಯಾಪಾರದ ಮತ್ತು ಸಾಮ್ರಾಜ್ಯದ ವೃದ್ಧಿಗೋಸುಗ ಯುದ್ಧಮಾಡಬೇಕೆಂಬುದು ವ್ಹಿಗ್ ಪಕ್ಷದವರ ನೀತಿಯಾಗಿತ್ತು, ಆದರೆ ಇಂಗ್ಲಂಡು ಸಾಮ್ರಾಜ್ಯವಿಸ್ತಾರದ ಗೊಂದಲಕ್ಕೆ ಹೋಗಬಾರದೆಂದು ಟೋರಿ ಪಕ್ಷದವರ ಅಭಿಪ್ರಾಯವಿದ್ದಿತು. ಆನ್ ರಾಣಿ ಮಡಿದ ಬಳಿಕ ಇಂಗ್ಲಂಡಿನ ರಾಜ್ಯ ಪದವು ಹನೋವರ ವಂಶದವರಿಗೆ ಬರಬೇಕೆಂದು ವ್ಹಿಗ್ ಪಕ್ಷದವರಿಗೆ ಎನಿಸುತ್ತಿತ್ತು. ಆದರೆ ಟೋರಿ ಪಕ್ಷದವರಿಗೆ ೨ನೆಯ ಜೇಮ್ಸನ ಮಗನಿಗೆ ರಾಜ್ಯಪದವು ದೊರೆಯಬೇಕೆಂದು ಎಣಿಸುತ್ತಿತ್ತು. ಆನ್ ರಾಣಿಯ ಕಾಲದಲ್ಲಿ 'ವ್ಹಿಗ್' ಮತ್ತು 'ಟೋರಿ' ಎಂಬ ಹೆಸರುಗಳು ವಿಶೇಷವಾಗಿ ಪ್ರಾಮುಖ್ಯಕ್ಕೆ ಬಂದುವು.

ಕಾಂಝರ್ವೇಟಿವ್ ಮತ್ತು ಲಿಬರಲ್—೧೮೩೪ರಲ್ಲಿ ಪೀಲನು ಮುಖ್ಯ ಮಂತ್ರಿಯಾಗಿರುವಾಗ ತ್ವರೆಪಟ್ಟು ಇಂಗ್ಲಂಡಿನ ರಾಜ್ಯಘಟನೆಯನ್ನು ಮಾರ್ಪಡಿಸದೆ ಅಗತ್ಯವಾದ ಸುಧಾರಣೆಗಳನ್ನು ನಿಧಾನವಾಗಿ ಮಾಡಬೇಕು, ಆರ್ಥಿಕ ಮತ್ತು ವ್ಯಾಪಾರ ವಿಷಯದಲ್ಲಿ 'ಸಂರಕ್ಷಿತ ವ್ಯಾಪಾರ'ದ ತತ್ವವನ್ನು ರೂಢಿಸಬೇಕು, ಮತ್ತು ಈ ಮೂಲಕ ಇಂಗ್ಲಂಡಿನ ವ್ಯಾಪಾರ ಮತ್ತು ಉದ್ಯೋಗದಲ್ಲಿ ಉನ್ನತಿಯನ್ನು ಸಾಧಿಸಬೇಕು ಎಂಬುದಾಗಿ ಟೋರಿ ಪಕ್ಷದವರು ತಮ್ಮ ನೀತಿಯನ್ನು ನಿರ್ಧರಿಸಿದರು. ಈ ನೀತಿಗೆ ಅನುಗುಣವಾಗಿ ಈ ಪಕ್ಷವು ತನ್ನ ಮೊದಲಿನ ಹೆಸರನ್ನು ಬಿಟ್ಟು 'ಕಾಂಝರ್ವೇಟಿವ್' (ಹಳೆಯ ಪರಂಪರೆಯ ಅಭಿಮಾನಿ) ಎಂಬ ಹೊಸ ಹೆಸರನ್ನು ಇಟ್ಟುಕೊಂಡಿತು.

'ಅನಿರ್ಬಂಧ ವ್ಯಾಪಾರ'ದ ತತ್ವವನ್ನು ಅಂಗೀಕರಿಸಿ ಉಪಜೀವನದ ವೆಚ್ಚವನ್ನು ಕಡಿಮೆಮಾಡುವುದು, ಪಾರ್ಲಿಮೆಂಟಿನ ಘಟನೆಯನ್ನು ಸುಧಾರಿಸುವುದು, ಕೆಲಸಗಾರರ ಮತ್ತು ಕೂಲಿಕಾರ ಜನರ ಸ್ಥಿತಿಯನ್ನು ಸುಧಾರಿಸಲು ಕಟ್ಟಳೆಗಳನ್ನು ಮಾಡುವುದು ಮುಂತಾದ ವಿಷಯಗಳನ್ನು ವ್ಹಿಗ್ ಪಕ್ಷದವರು ತಮ್ಮ ಕಾರ್ಯಕ್ರಮದಲ್ಲಿ ಸೇರಿಸಿಕೊಂಡಿದ್ದರು. ಅದಕ್ಕಾಗಿ ವ್ಹಿಗ್ ಪಕ್ಷಕ್ಕೆ ೧೮೫೦ರಲ್ಲಿ ಲಿಬರಲ್ (ಉದಾರ ಮತವಾದಿ) ಎಂದು ಹೆಸರು ಉಂಟಾಯಿತು.

ಯುನಿಯನಿಸ್ಟ ಮತ್ತು ಹೋಮ್‌ರೂಲರ್ಸ—ಇಂಗ್ಲಿಶ್ ಪಾರ್ಲಿಮೆಂಟಿನೊಂದಿಗೆ ಕೂಡಿದ ಐರಿಶ್ ಪಾರ್ಲಿಮೆಂಟಿನ ಏಕೀಕರಣವನ್ನು (ಯೂನಿಯನ್) ಹಾಗೆಯೆ ಸ್ಥಿರ ಪಡಿಸಬೇಕೊ ಅಥವಾ ಐರಿಶ್ ರೋಮನ ಕೆಥಲಿಕರ ಇಚ್ಛೆಯಂತೆ ಐರ್ಲಂಡಿಗೆ ಸ್ವತಂತ್ರ ಪಾರ್ಲಿಮೆಂಟನ್ನು (ಹೋಮ್‌ರೂಲ್) ಕೊಡಬೇಕೊ ಎಂಬ ಸಮಸ್ಯೆ ೧೮೮೬ರಲ್ಲಿ ಪ್ರಾಮುಖ್ಯವಾಗಿ ಪಾರ್ಲಿಮೆಂಟಿನ ಮುಂದೆ ಬಂದಿತು. ಕಾಂಝರ್ವೇಟಿವ್ ಪಕ್ಷದ ಬಹುಜನರಿಗೆ ಮತ್ತು ಲಿಬರಲ್ ಪಕ್ಷದ ಕೆಲವರಿಗೆ ಐರಿಶ್ ಪಾರ್ಲಿಮೆಂಟಿನ ತಳಕನ್ನು ಸ್ಥಿರಪಡಿಸಬೇಕು ಎಂದು ಎನಿಸುತ್ತಿದ್ದಿತು. ಆದುದರಿಂದ ಏಕೀಕರಣವು ಶಾಶ್ವತವಾಗಿ ಉಳಿಯಬೇಕು ಎಂಬ ಮತದವರಿಗೆ 'ಯುನಿಯನಿಸ್ಟ್ಸ' ಎಂಬ ಹೆಸರು ಬಂದಿತು. ಐರ್ಲಂಡಿಗೆ ಸ್ವತಂತ್ರ ಪಾರ್ಲಿಮೆಂಟು ದೊರೆಯಬೇಕು ಎಂಬ ಮತದವರಿಗೆ 'ಹೋಮ್‌ರೂಲರ್ಸ' ಎಂಬ ಹೆಸರು ಬಂದಿತು.

ಕಾಂಝರ್ವೇಟಿವ್, ಲಿಬರಲ್ ಮತ್ತು ಕೂಲಿಕಾರ— ಕೂಲಿಕಾರರ ಮತ್ತು ಬಂಡವಾಳಗಾರರ ನೀತಿ ಪರಸ್ಪರ ವಿರುದ್ಧವಿದ್ದುದರಿಂದ ಸ್ವತಂತ್ರವಾದ ತಮ್ಮ ಪಕ್ಷವನ್ನು ಸ್ಥಾಪಿಸಿದ ಹೊರತು ತಮ್ಮ ಹಿತಸಂಬಂಧದ ಕಡೆಗೆ ಪಾರ್ಲಿಮೆಂಟಿನ ಲಕ್ಷ್ಯವು ಹೋಗಲಾರದೆಂದು ತೋರಿ ಕೂಲಿಕಾರ ವರ್ಗದವರು ೧೯೦೯ರಲ್ಲಿ 'ಕೂಲಿಕಾರ' (ಲೇಬರ) ಎಂಬ ತಮ್ಮದೊಂದು ರಾಜಕೀಯ ಪಕ್ಷವನ್ನು ನಿರ್ಮಿಸಿದರು. ಕೂಲಿಕಾರರ ಮತ್ತು ಕೆಲಸಗಾರರ ಹಿತದ ಕಡೆಗೆ ಮೊದಲಿನಿಂದಲೂ ಲಿಬರಲ್‌ಪಕ್ಷದ ಲಕ್ಷ್ಯವಿದ್ದಿತು. ಆದುದರಿಂದ ಈ ಹೊಸ ಪಕ್ಷವು ಹುಟ್ಟಿದ ಬಳಿಕ ಲಿಬರಲ್ ಪಕ್ಷದ ಕೆಲವು ಜನರು ಅದನ್ನು ಹೂಡಿದರು. ಇದರಿಂದ ಲಿಬರಲ್ ಪಕ್ಷವು ನಿರ್ಬಲವಾಯಿತು. ಕೂಲಿಕಾರ ಪಕ್ಷವು ಅಂದಿನಿಂದ ಮುಂದೆ ಬರತೊಡಗಿತು. ಈಗ ಇಂಗ್ಲಂಡಿನಲ್ಲಿ ಕಾಂಝರ್ವೇಟಿವ್, ಕೂಲಿಕಾರ ಮತ್ತು ಲಿಬರಲ್ ಹೀಗೆ ಮೂರು ಪ್ರಮುಖ ರಾಜಕೀಯ ಪಕ್ಷಗಳು ಇರುವುವು.

---

# ೨೫ನೆಯ ಪ್ರಕರಣವು

## ಏಳನೆಯ ಎಡ್ವರ್ಡ

ಜನ್ಮವು (೧೮೪೧); ರಾಜ್ಯಾರೋಹಣವು (೬೦ನೆಯ ವರ್ಷದಲ್ಲಿ)
೧೯೦೧; ಮೃತ್ಯು ೧೯೧೦.

(೧೯೦೧—೧೯೧೦).

### ಮಹತ್ವದ ಇಸ್ವಿಗಳು.

**೧೯೦೨ ಬೋರ್ ಜನರ ಪರಾಭವ ಮತ್ತು ಅವರೊಡನೆ ಒಡಂಬಡಿಕೆ.**
**೧೯೦೨ ಶಿಕ್ಷಣ ವಿಷಯುಕ ಕಟ್ಟಳೆ.**
**೧೯೦೩ 'ಸಂರಕ್ಷಿತ ವ್ಯಾಪಾರ'ದ ಬಗ್ಗೆ ಆಂದೋಲನ.**
**೧೯೦೪-೧೯೦೫ ರೂಸೋ ಜಪಾನಿ ಯುದ್ಧ.**
**೧೯೦೬-೧೯೧೧ ಲಿಬರಲ್ ಮಂತ್ರಿಮಂಡಲದ ಸುಧಾರಣೆಗಳು.**

ಏಳನೆಯ ಎಡ್ವರ್ಡನು—ವಿಕ್ಟೋರಿಯಾ ರಾಣಿಯ ತರುವಾಯ ಅವಳ ಮಗನಾದ ಆಲ್‌ಬರ್ಟ ಎಡ್ವರ್ಡನು ಏಳನೆಯ ಎಡ್ವರ್ಡನೆಂದು ತನ್ನ ವಯಸ್ಸಿನ ೬೦ನೆಯ ವಯಸ್ಸಿಗೆ ಇಂಗ್ಲಂಡಿನ ಅರಸನಾದನು. ಪಟ್ಟಕ್ಕೆ ಬರುವ ಮೊದಲು ಈತನು ಅನೇಕ ಸಂದರ್ಭಗಳಲ್ಲಿ ವಿಕ್ಟೋರಿಯಾ ರಾಣಿಯ ಪ್ರತಿನಿಧಿಯಾಗಿ ನಾನಾ ವಿಧವಾದ ಸಮಾರಂಭಗಳಲ್ಲಿ ಭಾಗವನ್ನು ವಹಿಸಿದ್ದನು. ಆದುದರಿಂದ ಈತನಿಗೆ ಹೆಚ್ಚಾಗಿ ರಾಜ್ಯಕಾರ್ಯದ ಪರಿಚಯವು ಆಗಿದ್ದಿತು. ಎಡ್ವರ್ಡನಿಗೆ ಬಹಳ ವಾಗಿ ಪ್ರವಾಸ ಮಾಡುವ ಲವಲವಿಕೆ ಇದ್ದುದರಿಂದ ಪಟ್ಟಕ್ಕೆ ಬರುವ ಮೊದಲು ಈತನು ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಸಂಚಾರ ಮಾಡಿ ಪ್ರತ್ಯಕ್ಷವಾಗಿ ಅಲ್ಲಿಯ ಸ್ಥಿತಿಯನ್ನು ತಿಳಿದುಕೊಂಡಿದ್ದನು. ಇದಲ್ಲದೆ ಪರರಾಷ್ಟ್ರಗಳೊಡನೆ ಸ್ನೇಹಸಂಬಂಧವನ್ನು ಬೆಳೆಯಿಸಿ ಅವುಗಳೊಡನೆ ಮಿತ್ರತ್ವದಒಡಂಬಡಿಕೆಯನ್ನು ಮಾಡಿ ಕೊಳ್ಳುವ ಕೆಲಸದಲ್ಲಿ ಈತನು ಹೆಚ್ಚಾಗಿ ನೆರವಾದನು. ವಿಕ್ಟೋರಿಯಾ ರಾಣಿ ಯಂತೆ ಈತನು ಯಾವುದೊಂದು ರಾಜಕೀಯ ಪಕ್ಷದೊಡನೆ ಬೆರತುಕೊಳ್ಳದೆ ಎಲ್ಲ ಪಕ್ಷಗಳೊಡನೆ ಸಹಾನುಭೂತಿಯ ನೀತಿಯನ್ನು ತಳೆದಿದ್ದನು. ಆದರಿಂದ ಈತ ನಿಗೆ ಎಲ್ಲ ಪಕ್ಷಗಳ ಪ್ರೇಮವನ್ನು ಸಂಪಾದಿಸಲು ಸಾಧ್ಯವಾಯಿತು. ಈತನ ಸ್ವಭಾವವು ಉದಾರವೂ ಕೂಡಿ ಹೋಗುವಂತಹುದೂ ಆಗಿದ್ದಿತು. ಆದುದ

ರಿಂದ ಈತನ ಆಳ್ಕೆಯಲ್ಲಿ ರಾಜನ ಮತ್ತು ಮುಖ್ಯ ಮಂತ್ರಿಯ ಅಥವಾ ಮಂತ್ರಿ ಮಂಡಲದ ಇತರ ಮಂತ್ರಿಗಳ ನಡುವೆ ಮತಭೇದವು ಹುಟ್ಟಿ ಒಬ್ಬರೊಬ್ಬರಲ್ಲಿ ಅವಿಶ್ವಾಸವನ್ನು ತಳೆವ ಸಂದರ್ಭಗಳು ಉಂಟಾಗಲಿಲ್ಲ.



ಏಳನೆಯ ಎಡ್ವರ್ಡನು.

**ಎಡ್ವರ್ಡನೂ ಆತನ ಮಂತ್ರಿಗಳೂ**—ಎಡ್ವರ್ಡನ ಆಳ್ಕೆಯ ಪ್ರಾರಂಭದಲ್ಲಿ ಲಾರ್ಡ ಸ್ಯಾಲಿಸ್‌ಬರಿ—(ಕಾಂಝರ್‌ವೇಟಿವ್ ಯೂನಿಯನಿಸ್ಟ) ಮುಖ್ಯಮಂತ್ರಿಯಾಗಿದ್ದನು (೧೯೦೧-೧೯೦೨). ಆದರೆ ಅನಾರೋಗ್ಯದ ಮೂಲಕ ಆತನು ೧೯೦೨ರ ಜುಲೈ ತಿಂಗಳಲ್ಲಿ ಅಧಿಕಾರತ್ಯಾಗವನ್ನು ಮಾಡಿದನು. ಬಳಿಕ ಅದೇ ಕಾಂಝರ್‌ವೇಟಿವ್ ಪಂಗಡಕ್ಕೆಸೇರಿದ **ಬಾಲ್‌ಫೋರ್** ಎಂಬವನು ಮುಖ್ಯಮಂತ್ರಿಯಾದನು (೧೯೦೨-೧೯೦೫). ಮುಂದೆ ಲಿಬರಲ್ ಪಕ್ಷದ ಸರ್ ಹೆನ್ರಿ **ಕೆಂಪ್‌ಬೆಲ್-ಬ್ಯಾನರ್‌ಮನ್** (೧೯೦೬-೧೯೦೮) ಮತ್ತು **ಅಸ್‌ಕ್ವಿಥ್** (೧೯೦೮-೧೯೧೬) ಇವರು ಮುಖ್ಯ ಮಂತ್ರಿಗಳಾದರು.



ಲಾರ್ಡ ಬಾಲ್ಫೋರ.

**ಬಾಲ್‌ಫೋರನ ಮಂತ್ರಿಮಂಡಲವು ಮತ್ತು ೧೯೦೨ರಲ್ಲಿಯ ಶಿಕ್ಷಣ ವಿಷಯಕ ಕಟ್ಟಳೆ**—ಬಾಲ್‌ಫೋರನ ಮಂತ್ರಿಮಂಡಲವು ೧೯೦೨ರಲ್ಲಿ ಶಿಕ್ಷಣ ವಿಷಯಕ ಕಟ್ಟಳೆಯನ್ನು ನಿರ್ಮಿಸಿತು. ಈ ಕಟ್ಟಳೆಯಂತೆ ೧೮೭೦ರ ಕಾಯದೆಯಿಂದ ಸ್ಥಾಪನವಾದ ಸ್ಕೂಲ ಬೋರ್ಡುಗಳನ್ನು ರದ್ದುಮಾಡಿ ಆ ವಿಭಾಗದಲ್ಲಿಯ ಶಿಕ್ಷಣವ್ಯವಸ್ಥೆಯನ್ನು ಕೌಂಟಿ

ಕೌನ್ಸಿಲಿಗೆ ಒಪ್ಪಿಸಲಾಯಿತು. ಇದಲ್ಲದೆ ಮಾಧ್ಯಮಿಕ ಶಿಕ್ಷಣದ ವ್ಯವಸ್ಥೆಯಾದರೂ ಅವುಗಳಿಂದಲೇ ನಡೆಯಬೇಕೆಂದು ಗೊತ್ತಾಯಿತು. ಪ್ರಾಥಮಿಕ ಶಿಕ್ಷಣವು ಪುಕ್ಕಟೆಯಾದುದೂ ಒತ್ತಾಯವಾದುದೂ ಆಗಿತ್ತು. ಆದರೆ ಮಾಧ್ಯಮಿಕ ಶಿಕ್ಷಣವು ಮಾತ್ರ ಹಾಗೆ ಆಗಿರಲಿಲ್ಲ.

**ಹೊಸ ವಿಶ್ವವಿದ್ಯಾಲಯಗಳು**—ಉಚ್ಚ ಶಿಕ್ಷಣದ ವ್ಯವಸ್ಥೆಯಾಗಬೇಕೆಂದು ಖಾಸಗಿ ಪ್ರಯತ್ನದಿಂದ ಬರಮಿಂಗ್‌ಹಮ್, ಲಿವರಪೂಲ್, ಮಂಚೆಸ್ಟರ್, ಲೀಡ್ಸ್ ಮತ್ತು ಬ್ರಿಸ್ಟಲ್ ಈ ಊರುಗಳಲ್ಲಿ ಹೊಸ ವಿಶ್ವವಿದ್ಯಾಲಯಗಳು ಸ್ಥಾಪಿಸಲ್ಪಟುವು.

**ಭೂಮಿಯನ್ನು ಕೊಳ್ಳುವ ವಿಷಯದಲ್ಲಿ ಕಟ್ಟಳೆ** (Land Purchase-Act)—(೧೯೦೩)—ಐರ್ಲಂಡಿನ ಒಕ್ಕಲಿಗರ ಸ್ಥಿತಿ ಸುಧಾರಿಸಬೇಕೆಂದು ಈ ಮಂತ್ರಿಮಂಡಲದವರು ೧೯೦೩ರಲ್ಲಿ ಒಂದು ಕಟ್ಟಳೆಯನ್ನು ರಚಿಸಿದರು. ಈ ಕಟ್ಟಳೆಯಿಂದ ತಮ್ಮ ಹೊಲಗಳನ್ನು ತಿರುಗಿ ಕೊಂಡುಕೊಳ್ಳಬೇಕೆಂಬ ಒಕ್ಕಲಿಗರಿಗೆ ಆ ಕೆಲಸಕ್ಕಾಗಿ ಸರಕಾರದಿಂದ ಸಾಲವು ದೊರೆವಂತೆ ವ್ಯವಸ್ಥೆ ಮಾಡಲಾಯಿತು.

**ಇಂಗ್ಲಂಡಿನ ಪರರಾಷ್ಟ್ರೀಯ ನೀತಿ**—೧೯ನೆಯ ಶತಕದ ಕೊನೆಯಲ್ಲಿ ಪರರಾಷ್ಟ್ರಗಳ ವಿಷಯಗಳಲ್ಲಿ ಇಂಗ್ಲಂಡು ತಟಸ್ಥ ನೀತಿಯನ್ನು ಅವಲಂಬಿಸಿತ್ತು. ಅದರಿಂದ ಸಂಕಟ ಪ್ರಸಂಗದಲ್ಲಿ ಇಂಗ್ಲಂಡಿಗೆ ನೆರವಾಗುವಂತಹುದು ಒಂದು ರಾಷ್ಟ್ರವೂ ಇರಲಿಲ್ಲ. ಇಂಗ್ಲಂಡ್ ಮತ್ತು ಜರ್ಮನಿ ಇವುಗಳಲ್ಲಿ ಸ್ನೇಹ ಸಂಬಂಧವು ಇದ್ದಿತು. ಆದರೆ ವ್ಯಾಪಾರ, ನೌಕಾದಲ ಮತ್ತು ಉಪನಿವೇಶಗಳ ವಿಷಯದಲ್ಲಿ ಈ ರಾಷ್ಟ್ರಗಳ ನಡುವೆ ಅತಿಶಯವಾದ ಸ್ಪರ್ಧೆ ಉತ್ಪನ್ನವಾಗಿ ಅದರಿಂದ ಈ ಸ್ನೇಹಭಾವವು ಮೆಲ್ಲಮೆಲ್ಲನೆ ಕಡಿಮೆಯಾಗತೊಡಗಿತು. ರಶಿಯದ ಮಹತ್ವಾಕಾಂಕ್ಷೆಯನ್ನು ಇಂಗ್ಲಂಡು ಹಲವು ಸಲ ವಿರೋಧಿಸಿತ್ತು. ಆದುದರಿಂದ ಇವೆರಡು ರಾಷ್ಟ್ರಗಳಲ್ಲಿ ಪರಸ್ಪರ ವೈರಭಾವವಿದ್ದಿತು. ಇದಲ್ಲದೆ ಆಫ್ರಿಕೆಯಲ್ಲಿಯ ಇಜಿಪ್ತ ಮೊದಲಾದ ದೇಶಗಳನ್ನು ಕುರಿತು ಫ್ರಾನ್ಸ್ ಮತ್ತು ಇಂಗ್ಲಂಡ್ ಈ ರಾಷ್ಟ್ರಗಳಿಗೆ ಪರಸ್ಪರ ಅವಿಶ್ವಾಸದ ಭಾವನೆ ಇದ್ದಿತು. ಈ ಮೇರೆಗೆ ಪರರಾಷ್ಟ್ರಗಳೊಡನೆ ಯಾವ ಕಾಲಕ್ಕೆ ಕಲಹವು ಉಂಟಾಗಿ ನಾಲ್ಕೂ ಖಂಡಗಳಲ್ಲಿ ಪಸರಿಸಿದ ತನ್ನ ಸಾಮ್ರಾಜ್ಯಕ್ಕೆ ವೈರಿಗಳಿಂದ ಯಾವ ಕಾಲಕ್ಕೆ ಬಾಧೆ ಉಂಟಾಗಬಹುದೆಂಬುದು ಹೇಳಲಿಕ್ಕೆ ಬರುವಂತಿರಲಿಲ್ಲ. ಅದಕ್ಕಾಗಿ ಇಂಗ್ಲಂಡು ತನ್ನ ನೌಕಾದಲವನ್ನು ಬೆಳೆಯಿಸಬೇಕಾಯಿತು. ಮೇಲಾಗಿ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ತನ್ನ ಸಾಹಾಯ್ಯವು ದೊರೆಯಬೇಕೆಂದು ಇತರ ರಾಷ್ಟ್ರಗಳೊ

ಡನೆ ಸಂಧಿ ಮಾಡಿಕೊಳ್ಳುವುದು ಅಗತ್ಯವಾಯಿತು. ೧೯೦೨ರಲ್ಲಿ ಇಂಗ್ಲಂಡು ಜಪಾನದೊಡನೆ ಮಿತ್ರತ್ವದ ಒಪ್ಪಂದವನ್ನು ಮಾಡಿಕೊಂಡು ಜಪಾನದ ಮೇಲೆ ಒಂದಕ್ಕಿಂತ ಹೆಚ್ಚಿನ ರಾಷ್ಟ್ರಗಳು ದಾಳಿ ಮಾಡಿದಲ್ಲಿ ನೆರವಾಗಲು ಒಡಂಬಟ್ಟಿತು. ಇದರ ತರುವಾಯ ಇನ್ನೊಂದು ದೊಡ್ಡ ಒಡಂಬಡಿಕೆ ಇಂಗ್ಲಂಡ್ ಮತ್ತು ಫ್ರಾನ್ಸ್ ಈ ರಾಷ್ಟ್ರಗಳ ನಡುವೆ ಆಯಿತು. ೧೯೦೪ರಲ್ಲಿ ಆದ ಈ ಒಪ್ಪಂದದಿಂದ ಈ ಎರಡೂ ರಾಷ್ಟ್ರಗಳ ಆಫ್ರಿಕಾಖಂಡದಲ್ಲಿಯ ಹಿತಸಂಬಂಧಗಳು ಸಮಾಧಾನಕರವಾಗಿ ನಿರ್ಧರಿಸಲಾದುವು. ಮುಂದೆ ೧೯೦೭ರಲ್ಲಿ ಇಂಗ್ಲಂಡು ರಶಿಯದೊಡನೆಯೂ ಸಂಧಿಯನ್ನು ಮಾಡಿಕೊಂಡಿತು. ಅದರಲ್ಲಿ ಇರಾಣ ಮತ್ತು ಅಫಗಾಣಿಸ್ತಾನ ಈ ದೇಶಗಳನ್ನು ಕುರಿತು ಪರಸ್ಪರ ಸಂಬಂಧಗಳು ಯಾವ ರೀತಿಯವಾಗಿರಬೇಕೆಂಬುದು ಗೊತ್ತಾಯಿತು.

ಎಡ್ವರ್ಡನು ಪಟ್ಟಕ್ಕೆ ಬಂದ ಸಮಯದಲ್ಲಿ ದಕ್ಷಿಣ ಆಫ್ರಿಕೆಯಲ್ಲಿ ಇಂಗ್ಲಂಡು ಬೋರ ಜನರೊಡನೆ ಯುದ್ಧವನ್ನು ಪ್ರಾರಂಭಿಸಿತ್ತು. ಈ ಯುದ್ಧದಲ್ಲಿ ಬೋರ ಜನರು ಪರಾಜಯಹೊಂದಿದರು (೧೯೦೨). ಬಳಿಕ ಅವರ ವಸಾಹತಿಗೆ ಬ್ರಿಟಿಶ್ ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಕೊಡಲಾಯಿತು (೧೯೦೬). ಮುಂದೆ ೧೯೧೦ರಲ್ಲಿ ದಕ್ಷಿಣ ಆಫ್ರಿಕೆಯಲ್ಲಿಯ ಬ್ರಿಟಿಶ್ ಉಪನಿವೇಶಗಳ ಏಕೀಕರಣವಾಗಿ ಅದಕ್ಕೆ 'ಯೂನಿಯನ್ ಆಫ್ ಸೌಥ್ ಆಫ್ರಿಕಾ' ಎಂಬ ಹೆಸರು ದೊರೆತಿತು.

ಫ್ರಾನ್ಸ್, ರಶಿಯಾ ಮತ್ತು ಜಪಾನ ಈ ರಾಷ್ಟ್ರಗಳೊಡನೆ ಸ್ನೇಹವನ್ನು ಸಾಧಿಸಿ ಮಿಕ್ಕ ರಾಷ್ಟ್ರಗಳೊಡನೆ ಇರುವ ಸ್ನೇಹ ಸಂಬಂಧವನ್ನು ದೃಢಪಡಿಸುವ ಕಾರ್ಯದಲ್ಲಿ ಎಡ್ವರ್ಡ ರಾಜನು ಮಹತ್ವದ ಭಾಗವನ್ನು ವಹಿಸಿದ್ದನು. ಪರರಾಷ್ಟ್ರಗಳಲ್ಲಿ ಆಗಾಗ ಸಂಚಾರಮಾಡಿ ಅಲ್ಲಲ್ಲಿಯ ಅರಸರನ್ನು, ಪ್ರಜಾಪ್ರಭುತ್ವದ ಅಧ್ಯಕ್ಷರನ್ನು ಮತ್ತು ಪ್ರಮುಖ ರಾಜ್ಯತಂತ್ರವಿಶಾರದರನ್ನು ಸಂದರ್ಶಿಸಿ ಆ ಆ ರಾಷ್ಟ್ರಗಳೊಡನೆ ಸ್ನೇಹಭಾವವನ್ನು ಬೆಳೆಯಿಸುವ ಕೆಲಸವನ್ನು ಎಡ್ವರ್ಡನು ಅಖಂಡವಾಗಿ ಸಾಗಿಸಿದುದರಿಂದ ಆತನನ್ನು 'ಶಾಂತತಾ ಸ್ಥಾಪಕ ಎಡ್ವರ್ಡ'ನೆಂದು ಕರೆವುದುಂಟು.

**ರೂಸೋ ಜಪಾನಿ ಯುದ್ಧವು (೧೯೦೪ — ೧೯೦೫)** — ಈ ಕಾಲಕ್ಕೆ ಪೂರ್ವ ಏಶಿಯದಲ್ಲಿ ಬೇರೊಂದು ಪರಿಸ್ಥಿತಿ ಉಂಟಾಯಿತು. ಅದು ಯಾವುದೆಂದರೆ ಜಪಾನ ಮತ್ತು ರಶಿಯಾ ಈ ರಾಷ್ಟ್ರಗಳ ನಡುವೆ ಯುದ್ಧವು. ಚೀನ ಸಾಮ್ರಾಜ್ಯದಲ್ಲಿಯ ಮಂಚೂರಿಯಾ ಪ್ರಾಂತದಲ್ಲಿ

ರಶಿಯವು ತನ್ನ ಪ್ರಭಾವವನ್ನು ಸ್ಥಾಪಿಸುತ್ತ ಮೆಲ್ಲಮೆಲ್ಲನೆ ಕೋರಿಯಾ ಪ್ರಾಂತವನ್ನು ನುಂಗಿಬಿಡಲು ಹವಣಿಸಿದ್ದಿತು. ಆದುದರಿಂದ ಈ ವಿಷಯ ದಲ್ಲಿ ರಶಿಯವು ತನ್ನ ಕೈಯನ್ನು ಹಿಂದೆಗೆಯಬೇಕೆಂದು ಜಪಾನವು ಕೆಲವು ಸೂಚನೆಗಳನ್ನು ಕಳುಹಿಸಿತು (೧೯೦೩). ಆದರೆ ರಶಿಯವು ಅವನ್ನು ಧಿಕ್ಕರಿಸಿತು. ಆಗ ಮಂಚೂರಿಯದಲ್ಲಿಯ ತನ್ನ ಹಿತಸಂಬಂಧಕ್ಕೆ ತೊಂದರೆ ಯುಂಟಾಗುತ್ತದೆಂದು ಹೇಳಿ ೧೯೦೪ ಫೆಬ್ರುವರಿ ತಿಂಗಳಲ್ಲಿ ಜಪಾನವು ರಶಿಯ ದೊಡನೆ ಸಂಗ್ರಾಮವನ್ನು ಸಾರಿತು. ರಶಿಯದ ಸಾಮ್ರಾಜ್ಯವು ದೊಡ್ಡದಾ ಗಿದ್ದಿತು. ಆದರೂ ಅಲ್ಲಿಯ ಅಧಿಕಾರಿಗಳು ಅಯೋಗ್ಯರಾಗಿದ್ದರು. ಅವರ ಸೈನ್ಯವು ಮತ್ತು ನೌಕಾಬಲವು ಅವ್ಯವಸ್ಥಿತವಾಗಿದ್ದುವು. ಆದರೆ ಜಪಾನವು ಕಳೆದ ೪೦ ವರ್ಷಗಳಲ್ಲಿ ತನ್ನ ಉನ್ನತಿಯನ್ನು ಕಲ್ಪನಾತೀತವಾಗಿ ಮಾಡಿ ಕೊಂಡಿತ್ತು. ಹೊಸ ಪದ್ಧತಿಯ ಯುದ್ಧ ಸಾಮಗ್ರಿಗಳನ್ನು ಕೂಡಿಸಿ, ಶಿಸ್ತನ್ನು ಕಲಿತು, ಅಚ್ಚುಕಟ್ಟಾಗಿ ಕಾದುವ ಸೈನ್ಯದ ಮತ್ತು ಹಡಗುಪಡೆಯ ಸಾಹಾಯ್ಯ ದಿಂದ ಜಪಾನವು ರಶಿಯದ ವಶದಲ್ಲಿರುವ **ಪೋರ್ಟ ಆರ್ಥರ** ಎಂಬ ಹಡಗು ಪಡೆಯ ಸ್ಥಳವನ್ನು ಗೆದ್ದುಕೊಂಡಿತು. ಮುಂದೆ ಮಂಚೂರಿಯಾ ಪ್ರಾಂತದಲ್ಲಿ ರಶಿಯನ್ ಸೈನ್ಯವನ್ನು ಹಲವು ಕಡೆಯಲ್ಲಿ ಸೋಲಿಸಿ **ಥ್ಯುಶಿಮಾ** ಎಂಬಲ್ಲಿಯ ಜಲಯುದ್ಧದಲ್ಲಿ ರಶಿಯನ್ ನೌಕಾಬಲವನ್ನು ಮುರಿದಿಕ್ಕಿತು. ಆಗ ರಶಿಯವು ಜಪಾನದೊಡನೆ ಒಡಂಬಡಿಕೆ ಮಾಡಿಕೊಂಡಿತು (೧೯೦೫). ಈ ಒಪ್ಪಂದದಿಂದ ಜಪಾನಕ್ಕೆ ಪೋರ್ಟ ಆರ್ಥರ ಬಂದರವು ದೊರೆಯಿತು, ದಕ್ಷಿಣ ಮಂಚೂರಿಯಾ ಪ್ರಾಂತವು ಅದರ ಕೈ ಸೇರಿತು ಮತ್ತು ಕೋರಿಯಾ ಪ್ರಾಂತವು ಅದರ ವರ್ಚಸ್ಸಿಗೆ ಒಳಪಟ್ಟಿತು. ಮುಂದೆ ೧೯೧೦ರಲ್ಲಿ ಅದನ್ನು ಜಪಾನವು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿತು. ಇಂತು ರಶಿಯದ ಪೂರ್ವದಿಕ್ಕಿನ ಮಹತ್ವಾಕಾಂಕ್ಷೆಗೆ ಜಪಾನವು ತಡೆಯನ್ನು ಒದಗಿಸಿತು. ಇದರಿಂದ ಪೂರ್ವ ಏಶಿಯಾ ಮತ್ತು ಪಸಿ ಫಿಕ್ ಸಮುದ್ರದಲ್ಲಿ ಜಪಾನದ ಮಹತ್ವವು ವಿಶೇಷವಾಗಿ ಬೆಳೆಯಿತು.

ಮುಂದೆ ಜಪಾನವು ಮಂಚೂರಿಯದಲ್ಲಿ ತನ್ನ ಅಧಿಕಾರದ ಕೆಳಗೆ ಮೆಂಚುಕೊ ಎಂಬ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿತು (೧೯೩೨). ಅಲ್ಲಿ **ಪ್ಯೂ-ಯಿ** (Pu-yi) ಎಂಬ ಚೀನದ ಹಿಂದಿನ ಅಧಿಪತಿಯನ್ನು ಅದರ ಅರಸನಾಗಿ ಮಾಡಿತು.

**ಚೆಂಬರ್ಲೇನನ ವ್ಯಾಪಾರ ವಿಷಯಕ ನೀತಿ**—ರಾಜ್ಯಕಾರ್ಯ ಕುಶಲನಾದ ಜೋಸೆಫ್ ಚೆಂಬರ್ಲೇನನ ಕಡೆಗೆ ಉಪನಿವೇಶಗಳ ಕಾರ್ಯ ದರ್ಶಿಯ ಕೆಲಸವು ಇತ್ತು. ಇಂಗ್ಲಂಡು ಅಂಗೀಕರಿಸಿದ 'ಅನಿರ್ಬಂಧ ವ್ಯಾಪಾರದ

ನೀತಿಯಲ್ಲಿ ವ್ಯತ್ಯಾಸಮಾಡಿ ಪರರಾಷ್ಟ್ರಗಳಿಂದ ಬರುವ ಸರಕುಗಳ ಮೇಲೆ ಸುಂಕಗಳನ್ನು ಹಾಕಬೇಕು, ಮತ್ತು ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಉಪನಿವೇಶ ಮೊದಲಾದ ಪ್ರದೇಶಗಳಿಗೆ ಕೆಲವು ಸೌಕರ್ಯಗಳನ್ನು ಕೊಟ್ಟು ಸಂರಕ್ಷಿತ ವ್ಯಾಪಾರದ ಪದ್ಧತಿಯನ್ನು ಆರಂಭಿಸಬೇಕೆಂದು ಈತನಿಗೆ ಎನಿಸಿತು. ಈ ನೀತಿಯನ್ನು ಅವಲಂಬಿಸಿದರೆ ದೇಶದಲ್ಲಿಯ ಉದ್ಯೋಗಗಳಿಗೆ ಉತ್ತೇಜನವು ದೊರೆವುದು ಮತ್ತು ಸಾಮ್ರಾಜ್ಯದ ಬೇರೆಬೇರೆ ಭಾಗಗಳ ಸಂಬಂಧವು ಹೆಚ್ಚು ಸ್ನೇಹಯುಕ್ತವಾಗುವುದು ಎಂಬುದು ಆತನ ಅಭಿಪ್ರಾಯವಾಗಿತ್ತು. ಆದರೆ ಅನಿರ್ಬಂಧ ವ್ಯಾಪಾರದ ನೀತಿಯಿಂದಲೇ ಇಂಗ್ಲಂಡಿನ ಅಭಿವೃದ್ಧಿಯೂ ಉತ್ಕರ್ಷೆಯೂ ಆಗಬಲ್ಲುದೆಂದು ಸಾರ್ವಜನಿಕವಾದ ತಿಳವಳಿಕೆ ಇದ್ದಿತು. ಸಂರಕ್ಷಿತ ವ್ಯಾಪಾರದ ಪದ್ಧತಿಯನ್ನು ಆಚರಣೆಗೆ ತಂದರೆ ಅಗತ್ಯದ ಪದಾರ್ಥಗಳು ಕೂಡ ತುಟ್ಟಿಯಾಗುವುವು ಎಂದು ಲಿಬರಲ್ ಪಕ್ಷವು ಈ ನೀತಿಯನ್ನು ವಿರೋಧಿಸುತ್ತಿತ್ತು. ಚೆಂಬರ್ಲೇನನ ಈ ನೀತಿ ಮುಖ್ಯಮಂತ್ರಿ ಬಾಲಫೋರನಿಗೆ ಮತ್ತು ಮಂತ್ರಿಮಂಡಲದ ಇತರ ಸದಸ್ಯರಿಗೆ ಸಮ್ಮತವಿರಲಿಲ್ಲ. ಆದುದರಿಂದ ಆತನು ತನ್ನ ಮತವನ್ನು ಬಲವಾಗಿಯೂ ನಿರಾತಂಕವಾಗಿಯೂ ಜನತೆಯ ಮುಂದೆ ವಿವರಿಸಲು ಅನುಕೂಲವಾಗಬೇಕೆಂದು ಮಂತ್ರಿಮಂಡಲದಲ್ಲಿಯ ತನ್ನ ಅಧಿಕಾರವನ್ನು ಬಿಟ್ಟನು (೧೯೦೪). ಬಳಿಕ ಚೆಂಬರ್ಲೇನನು ಅನೇಕ ಕಡೆಯಲ್ಲಿ ಉಪನ್ಯಾಸಗಳನ್ನು ಹೇಳಿ ಜನತೆಯಿಂದ ತನ್ನ ನೀತಿಗೆ ಬೆಂಬಲವು ದೊರೆವಂತೆ ಪ್ರಯತ್ನಮಾಡಿದನು.


ಅಸ್‌ಕ್ವಿಥನು.

**ಲಿಬರಲ್ ಮಂತ್ರಿಮಂಡಲವು, ೧೯೦೬-೧೯೧೬.**— ೧೯೦೬ರಲ್ಲಿ ಹೊಸ ಚುನಾವಣೆ ಆಯಿತು. ಆಗ ಲಿಬರಲ್ ಪಕ್ಷವೇ ಕಾಮನ್ಸ್ ಸಭೆಯಲ್ಲಿ ಬಹು ಸಂಖ್ಯಾಕವಾಗಿದ್ದುದು ಕಂಡುಬಂದಿತು. ಆದುದರಿಂದ ಸರ್ ಕಂಪ್‌ಬೆಲ್-ಬನರ್‌ಮನ್ ಈತನು ಮುಖ್ಯಮಂತ್ರಿಯಾದನು. ಮುಂದೆ ೨ ವರ್ಷಗಳಲ್ಲಿ ಅನಾರೋಗ್ಯದ ಮೂಲಕ ಆತನು ಅಧಿಕಾರತ್ಯಾಗವನ್ನು ಮಾಡಿದನು (೧೯೦೮). ಬಳಿಕ ಸ್ವಲ್ಪ ದಿವಸದಲ್ಲಿ ಆತನು ಮರಣಹೊಂದಿದನು. ತರುವಾಯ ಅಸ್‌ಕ್ವಿಥನು ಮುಖ್ಯಮಂತ್ರಿಯಾದನು. ಅಸ್‌ಕ್ವಿಥನ ಮಂತ್ರಿಮಂಡಲ

ದಲ್ಲಿ ಲಾಯಿಡ್ ಜಾರ್ಜ ಎಂಬವನ ಕಡೆಗೆ ಚೆನ್ಸೆಲರ್ ಆಫ್ ದಿ ಎಕ್ಸಚೆಕರ್ (ಅರ್ಥಸಚಿವ) ಕೆಲಸವು ಬಂದಿತು. ಸರ್ ಎಡ್ವರ್ಡ ಗ್ರೇ ಈತನು ಪರರಾಷ್ಟ್ರ ವಿಷಯದ ಕಾರ್ಯದರ್ಶಿ, ಮೋರ್ಲೆ ಈತನು ಭಾರತ ಮಂತ್ರಿ, ಮತ್ತು ಹಾಲ್ಡೆನ್ ಈತನು ಯುದ್ಧಮಂತ್ರಿಯಾಗಿದ್ದರು. ಇದಲ್ಲದೆ ಕಾಂಝರ್‌ವೇಟಿವ್ ಪಕ್ಷವನ್ನು ಬಿಟ್ಟು ಬಂದಂತಹ ವಿನ್‌ಸ್ಟನ್ ಚರ್ಚಿಲ್ ಈತನಿಗಾದರೂ ಮಂತ್ರಿಮಂಡಲದಲ್ಲಿ ಸ್ಥಳವನ್ನು ಕೊಡಲಾಯಿತು. ಈತನು ವ್ಯಾಪಾರಮಂತ್ರಿ (೧೯೦೮), ಅಂತರ್ಗತ ವಿಷಯಗಳ ಮಂತ್ರಿ, ಒಳಿಕ ನೌಕಾಮಂತ್ರಿ (೧೯೧೧—೧೬) ಆಗಿ ಕೆಲಸಮಾಡಿದನು.

ಇದೇ ಸಮಯದಲ್ಲಿ ಇಂಗ್ಲಂಡಿನ ರಾಜಕಾರಣದಲ್ಲಿ ಕೂಲಿಕಾರ ಮತ್ತು ಕೆಲಸಗಾರ ವರ್ಗದ ಹಿತಸಂಬಂಧಗಳನ್ನು ಕಾಪಾಡುವ '**ಕೂಲಿಕಾರ ಪಕ್ಷವು**' ಹೆಚ್ಚು ಸುಸಂಘಟಿತವಾಗಿ ಮುಂದಕ್ಕೆ ಬರಲು ತೊಡಗಿತ್ತು. ಈ ಕಾಲಕ್ಕೆ ಈ ಪಕ್ಷದ ೫೪ ಸದಸ್ಯರು ಪಾರ್ಲಿಮೆಂಟಿನಲ್ಲಿದ್ದರು. ಇದಲ್ಲದೆ ೮೦ ಸದಸ್ಯರ ಐರಿಶ್ ಪಕ್ಷವು ಇದ್ದಿತು. ಐರ್ಲಂಡಿಗೆ ಹೋಮ್‌ರೂಲನ್ನು ದೊರಕಿಸಿಕೊಡುವದೆ ಈ ಪಕ್ಷದ ನೀತಿಯಾಗಿದ್ದಿತು.

**ಲಿಬರಲ್ ಮಂತ್ರಿಮಂಡಲವು ಮಾಡಿದ ಸುಧಾರಣೆಗಳು (೧೯೦೬-೧೯೧೦)—(ಅ) ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗಳು**—ಸರ್ ಕೆಂಪ್‌ಬೆಲ್-ಬನರ್‌ಮನ್ (೧೯೦೬—೧೯೦೮) ಮತ್ತು ಅಸ್‌ಕ್ವಿಥ್ (೧೯೦೮—೧೯೧೬) ಇವರ ನಾಯಕತ್ವದಲ್ಲಿ ಲಿಬರಲ್ ಮಂತ್ರಿಮಂಡಲವು ಕೆಳಗೆ ಕಾಣಿಸಿದಂತೆ ಕೂಲಿಕಾರ ಮತ್ತು ಕೆಲಸಗಾರ ವರ್ಗದ ಹಿತದ ಕಟ್ಟಳೆಗಳನ್ನು ಮಾಡಿತು. (೧) **ಶಾಂತವಾದ ಪಿಕೆಟಿಂಗ್ ಕ್ರಮಯುಕ್ತವಾದುದು**—ಶಾಂತತೆಯಿಂದ ಪಿಕೆಟಿಂಗ್ ಮಾಡುವುದು ಕಟ್ಟಳೆಗೆ ವಿರುದ್ಧವಲ್ಲ ಎಂದು ನಿರ್ಣಯಿಸಲಾಯಿತು (೧೯೦೬). (೨) **ಕೆಲಸಗಾರ ಜನರಿಗೆ ಹಾನಿಯನ್ನು ತುಂಬಿ ಕೊಡುವುದು, ೧೯೦೬**—ಕೆಲಸಗಾರ ಜನರು ಗಿರಣಿಯಲ್ಲಿ ಇಲ್ಲವೆ ಕಾರ್ಯಾಲಯದಲ್ಲಿ ಕೆಲಸಮಾಡುವಾಗ ಗಾಯಪಟ್ಟರೆ ಅವರಿಗೆ ಹಾನಿಯನ್ನು ತುಂಬಿಕೊಡಲು ಸ್ವಲ್ಪ ಹಣವನ್ನು ಕೊಡುವದು. (೩) **ಮುಪ್ಪಿನಲ್ಲಿ ಪೆನ್‌ಶನ್, ೧೯೦೮**—೭೦ನ್ನು ಮೀರಿದ ವಯಸ್ಸುಳ್ಳ ಬಡವರಿಗೆ ಪ್ರತಿವಾರ ೫ ಶಿಲಿಂಗುಗಳಂತೆ ಮುಪ್ಪಿನ ಪೆನ್‌ಶನ್ ಕೊಡುವದು. (೪) **ಕಲ್ಲಿದ್ದಲಿಯ ಕಣಿಯ ಕಟ್ಟಳೆ, ೧೯೦೮**—ಕಲ್ಲಿದ್ದಲಿಯ ಕಣಿಯಲ್ಲಿ ೮॥ ಗಂಟೆಗಳಿಗಿಂತ ಹೆಚ್ಚು ಕೆಲಸವನ್ನು ಯಾರಿಂದಲೂ ತೆಗೆದುಕೊಳ್ಳಬಾರದು, ಇದಲ್ಲದೆ ಚಿಕ್ಕ ಹುಡುಗರನ್ನು ಕೆಲ

ಸಕ್ಕೆ ಹಚ್ಚಿದರೆ ಅವರಿಗೆ ಹೆಚ್ಚಿನ ಸೌಕರ್ಯಗಳನ್ನು ಕೊಡಬೇಕು. (೫) **ಲೇಬರ ಎಕ್ಸ್‌ಚೇಂಜ ಅಕ್ಟ, ೧೯೦೯**—ಕೂಲಿಕಾರರಿಗೆ ಕೆಲಸವನ್ನು ದೊರಕಿಸಿ ಕೊಡುವುದು, ಕಾರ್ಯಾಲಯ ಮತ್ತು ಗಿರಣಿಗಳ ಒಡೆಯರಿಗೆ ಕೂಲಿಕಾರರನ್ನು ಪೂರೈಸುವುದು ಈ ಕೆಲಸಕ್ಕಾಗಿ ಒಂದು ಕಚೇರಿಯನ್ನು ತೆರೆಯಲಾಯಿತು.

(ಆ) **ನೌಕಾಬಲ ಮತ್ತು ಸೈನ್ಯ ಇವುಗಳ ವಿಷಯದಲ್ಲಿ ಸುಧಾರಣೆಗಳು**—ಮೇಲೆ ಕಾಣಿಸಿದಂತೆ ಜನಹಿತದ ಕೆಲಸಗಳು ನಡೆಯುತ್ತಿರುವಾಗ ಇಂಗ್ಲಂಡಿನ ನೌಕಾಪ್ರಭಾವಕ್ಕೆ ಮತ್ತು ಸೇನಾಬಲಕ್ಕೆ ಕೊರತೆಯುಂಟಾಗಬಾರದು, ಮತ್ತು ಪರರಾಷ್ಟ್ರಗಳು ಇಂಗ್ಲಂಡಿನ ಮತ್ತು ಇಂಗ್ಲಂಡಿನ ಅಧಿಕಾರಕ್ಕೆ ಒಳಪಟ್ಟ ಪ್ರದೇಶಗಳ ಮೇಲೆ ದಾಳಿಮಾಡಿದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ಸಂರಕ್ಷಣವನ್ನು ಮಾಡಲು ಸಾಧ್ಯವಾಗಬೇಕು ಎಂದು ನೌಕಾಮಂತ್ರಿ **ವಿನ್‌ಸ್ಟನ್ ಚರ್ಚಿಲ್** ಮತ್ತು ಯುದ್ಧಮಂತ್ರಿ **ಹಾಲ್ಡೆನ್** ಇವರ ಸೂಚನೆಯಂತೆ ನೌಕಾಬಲದಲ್ಲಿ ಮತ್ತು ಸೈನ್ಯದಲ್ಲಿ ಮಹತ್ವದ ಸುಧಾರಣೆಗಳನ್ನು ಮಾಡಲಾಯಿತು. ಬ್ರಿಟಿಶ್ ನೌಕಾಬಲವು ಮಿಕ್ಕ ಯಾವುವೇ ಎರಡು ಪ್ರಬಲ ರಾಷ್ಟ್ರಗಳ ನೌಕಾಬಲಕ್ಕೆ ಸಮಾನವಾದುದು ಆಗಿರಬೇಕು ಎಂಬ ನೀತಿಯನ್ನು ನಿರ್ಧರಿಸಿ ಇಂಗ್ಲಂಡಿನ ಹಡಗುಪಡೆಯಲ್ಲಿಯ ಭದ್ರನೌಕೆಗಳ ಸಂಖ್ಯೆಯನ್ನು ಹೆಚ್ಚಿಸಲಾಯಿತು. ಇದಲ್ಲದೆ ಅವಶ್ಯವೆನಿಸಿದರೆ ದೂರದವರೆಗೆ ಕೂಡಲೇ ಸೈನ್ಯವನ್ನು ಕಳುಹಲು ಸಾಧ್ಯವಾಗಬೇಕೆಂದು ೧ ಲಕ್ಷ ೪೦ ಸಾವಿರ ಎಕ್ಸ್‌ಪಿಡಿಶನರಿ ಸೇನೆಯನ್ನು ಸಜ್ಜಾಗಿ ಇರಿಸಲಾಯಿತು. ಇದಲ್ಲದೆ ದೇಶದ ಸಂರಕ್ಷಣಕ್ಕಾಗಿ ಟೆರಿಟೋರಿಯಲ್ ಸೈನ್ಯವನ್ನು ನಿರ್ಮಾಣಮಾಡಿ ಅದರಲ್ಲಿಯೇ ಜನರಿಗೆ ಉಚಿತವಾದ ಸೇನಾಶಿಕ್ಷಣವನ್ನು ಕೊಡುವ ವ್ಯವಸ್ಥೆಮಾಡಲಾಯಿತು. ಇದೇ ಮೇರೆಗೆ ವೈಮಾನಿಕ ದಲವನ್ನೂ (Royal Air Force) ಏರ್ಪಡಿಸಲಾಯಿತು.

**ಲಾಯಿಡ್ ಜಾರ್ಜನ ಬಜೆಟ್, ೧೯೦೯**—೧೯೦೯ರಲ್ಲಿ ಅರ್ಥಸಚಿವನಾದ **ಲಾಯಿಡ್ ಜಾರ್ಜನು** ಒಂದು ಬಜೆಟನ್ನು (ವಾರ್ಷಿಕ ಆಯವ್ಯಯ ಪತ್ರಿಕೆ) ಸಿದ್ಧಪಡಿಸಿ ಅದನ್ನು ಪಾರ್ಲಿಮೆಂಟಿಗೆ ಒಪ್ಪಿಸಿದನು. ಮುಪ್ಪಿನ ಪೆನ್‌ಶನ್, ಯುದ್ಧ ನೌಕೆಗಳ ಬೆಳವಣಿಗೆ ಮುಂತಾದ ವಿಷಯಗಳ ಮೂಲಕ ಸರಕಾರದ ವೆಚ್ಚವು ಬೆಳೆದಿತ್ತು. ಆದುದರಿಂದ ಹೊಸ ಕರಗಳನ್ನು ಕೂಡಿಸುವುದು ಅವಶ್ಯವಾಗಿತ್ತು. ಆದುದರಿಂದ ಪ್ರಾಪ್ತಿಯಮೇಲಿನ ಉತ್ಪನ್ನದ ವಿಷಯದಲ್ಲಿ ಹೆಚ್ಚು ಉತ್ಪನ್ನವುಳ್ಳವನಿಗೆ ಹೆಚ್ಚಿನ ಪ್ರಮಾಣದಿಂದ ತೆರಿಗೆ ಬೀಳುವಂತೆ ಈ ಬಜೆಟ್ಟಿನಲ್ಲಿ ಏರ್ಪಡಿಸಲಾಗಿತ್ತು. ಇದಲ್ಲದೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಭೂಮಿಯ

ಬೆಲೆ ಮಿತಿಮೀರಿ ಬೆಳೆದು ಯಾವ ಕ್ರಮವೂ ಇಲ್ಲದೆ ಭೂಮಿಯ ಒಡೆಯರಿಗೆ ದೊರೆಯುತ್ತಿರುವ (Unearned Increment) ಹೆಚ್ಚಿನ ಲಾಭದ ಮೇಲೆ ಮೊದಲನೆಯ ಸಲ ಕರವು ಕೂಡಿಸಲ್ಪಟ್ಟಿತು. ಇದೇ ಮೇರೆಗೆ ಕಣಿಯಲ್ಲಿ ಹೊರಡುವ ಖನಿಜ ಪದಾರ್ಥಗಳಿಗೋಸುಗ ಸರಕಾರಕ್ಕೆ ಸ್ವಲ್ಪ ತೆರಿಗೆ ಸಲ್ಲು ವಂತೆ ಯೋಜಿಸಲಾಗಿತ್ತು. ೧೯೦೯ರಲ್ಲಿ ಪಾರ್ಲಿಮೆಂಟಿನ ಮುಂದೆ ಬಂದಿರುವ ಈ ಬಜೆಟ್ಟಿನಲ್ಲಿ ಈ ವಿಷಯಗಳು ಹೊಸದಾಗಿ ಬಂದುವು. ಆದುದರಿಂದ ಇದ ರಲ್ಲಿ ಸೂಚಿಸಿದ ಈ ಕರಗಳನ್ನು ತೆಗೆದುಕೊಳ್ಳುವುದೆಂದರೆ ಶ್ರೀಮಂತರನ್ನು ಸುಲಿ ವುದು ಎಂದು ಅನೇಕ ಜನರಿಗೆ ತೋರಿತು. ಕಾಮನ್ಸ್ ಸಭೆಯಲ್ಲಿಯೂ ಈ ಬಜೆಟ್ಟಿನ ಮೇಲೆ ಬಹಳ ಹೋರಾಟವಾಗಿ ಕೊನೆಯಲ್ಲಿ ಬಹಳ ಪ್ರಯಾಸದಿಂದ ಅದು ಸ್ವೀಕೃತವಾಯಿತು. ಆದರೆ ಲಾರ್ಡ್ಸ್ ಸಭೆ ಅದನ್ನು ನಿರಾಕರಿಸಿತು. ಆಗ ಕಠಿಣವಾದ ಪರಿಸ್ಥಿತಿ ಹುಟ್ಟಿತು. ಈ ವಿಷಯವನ್ನು ಕುರಿತು ಜನಮತವನ್ನು ತೂಗಿ ನೋಡಲು ಅಸ್‌ಕ್ವಿಥನು ಆ ಪಾರ್ಲಿಮೆಂಟನ್ನು ವಿಸರ್ಜಿಸಿ ಹೊಸ ಚುನಾ ವಣೆಯನ್ನು ಮಾಡಿಸಿದನು (೧೯೧೦). ಚುನಾವಣೆ ಆದ ಬಳಿಕ ಕಾಮನ್ಸ್ ಸಭೆಯಲ್ಲಿ ಲಿಬರಲ್ ಪಕ್ಷದ ಬಹುಮತವು ಯುನಿಯನಿಸ್ಟ (ಕಾಂಝರ್‌ವೇಟಿವ್) ಪಕ್ಷಕ್ಕಿಂತ ಕೇವಲವಾಗಿ ಎರಡೇ ಮತಗಳಿಂದ ಇದೆ ಎಂದು ಕಾಣಬಂದಿತು. ಇದರಿಂದ ಲಿಬರಲ್ ಮಂತ್ರಿಮಂಡಲವು ಅಧಿಕಾರ ರೂಢವಾದರೂ ಅದು ಬಹು ದುರ್ಬಲವಾಯಿತು. ಆದರೆ ಐರಿಶ್ ಹೋಮ್‌ರೂಲ್ ಮತ್ತು ಕೂಲಿಕಾರ ಪಕ್ಷಗಳ ೧೨೦ ಸದಸ್ಯರು ಲಿಬರಲ್ ಪಕ್ಷವನ್ನು ಎತ್ತಿ ಹಿಡಿದುದರಿಂದ ಈ ಬಜೆಟ್ಟು ಕಾಮನ್ಸ್ ಸಭೆಯಲ್ಲಿ ಮಾನ್ಯವಾಗಿ ಲಾರ್ಡ್ಸ್ ಸಭೆಯಲ್ಲಿಯೂ ಮಾನ್ಯ ವಾಯಿತು.

೭ನೆಯ ಎಡ್ವರ್ಡನು ೧೯೧೦ನೆಯ ಇಸ್ವಿಯ ಮೇ ೬ನೆಯ ತಾರೀಖಿನ ದಿನ ಮರಣಹೊಂದಿದನು.

---

## ಸಾರಾಂಶವು

### ೭ನೆಯ ಎಡ್ವರ್ಡ (೧೯೦೧ – ೧೯೧೦).

೭ನೆಯ ಎಡ್ವರ್ಡ — ಪ್ರವಾಸದ ಅಭಿರುಚಿ. ಬೇರೆ ಬೇರೆ ರಾಷ್ಟ್ರಗಳ ರಾಜರ, ಅಧ್ಯಕ್ಷರ, ಮಂತ್ರಿಗಳ ಸಂದರ್ಶನ. ಇದರಿಂದ ಅವರೊಡನೆ ಸ್ನೇಹಸಂಬಂಧ. ಶಾಂತತಾ ಪ್ರವರ್ತಕ ಎಡ್ವರ್ಡ್.

೭ನೆಯ ಎಡ್ವರ್ಡನ ಮುಖ್ಯ ಮಂತ್ರಿಗಳು—

೧೯೦೧—೧೯೦೨ ಸಲಿಸ್‌ಬೆರಿ (ಕಾಂಝರ್ವೇಟಿವ್).
೧೯೦೨—೧೯೦೫ ಬಾಲ್‌ಫೋರ್ (ಕಾಂಝರ್ವೇಟಿವ್).
೧೯೦೬—೧೯೦೮ ಸರ್ ಹೆನ್ರಿ ಕೆಂಪ್‌ಬೆಲ್-ಬೆನರ್‌ಮನ್ (ಲಿಬರಲ್).
೧೯೦೮—೧೯೧೬ ಆಸ್ಕ್ವಿಥ್ (ಲಿಬರಲ್).

ಪರರಾಷ್ಟ್ರೀಯ ಘಟನೆಗಳು ಮತ್ತು ಇಂಗ್ಲಂಡಿನ ಪರರಾಷ್ಟ್ರೀಯ ನೀತಿ—

೧೯೦೨ ಇಂಗ್ಲಂಡ್ ಮತ್ತು ಜಪಾನ ಇವುಗಳಲ್ಲಿ ಒಡಂಬಡಿಕೆ.
೧೯೦೪ ಇಂಗ್ಲಂಡ್ ಮತ್ತು ಫ್ರಾನ್ಸ್ ಇವುಗಳ ನಡುವೆ ಒಪ್ಪಂದ.
೧೯೦೪—೧೯೦೫ ರೂಸೋ ಜಪಾನಿ ಯುದ್ಧ, ರಶಿಯದ ಪರಾಭವ. ಅದು ದುರ್ಬಲವಾಯಿತು.
೧೯೦೭ ಇಂಗ್ಲಂಡ್ ಮತ್ತು ರಶಿಯಾ ಇವುಗಳ ನಡುವೆ ಒಪ್ಪಂದ.

ಸಾಮ್ರಾಜ್ಯದಲ್ಲಿಯ ಘಟನೆಗಳು—

೧೮೯೯—೧೯೦೨ ಆಫ್ರಿಕೆಯ ಬೋರ(ಡಚ್)ಜನರೊಡನೆ ಇಂಗ್ಲಂಡಿನ ಯುದ್ಧ. ಬೋರ ಜನರ ಪರಾಭವವು.
೧೯೦೬ ಬೋರ ಉಪನಿವೇಶಕ್ಕೆ ಸಾಮ್ರಾಜ್ಯಾಂತರ್ಗತ ಸ್ವರಾಜ್ಯ.
೧೯೧೦ ದಕ್ಷಿಣ ಆಫ್ರಿಕೆಯಲ್ಲಿಯ ಬ್ರಿಟಿಶ್ ಉಪನಿವೇಶಗಳ ಏಕೀಕರಣ (ಯುನಿಯನ್ ಆಫ್ ಸೌಥ್ ಆಫ್ರಿಕಾ).
೧೯೦೩ ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಭಾಗಗಳಲ್ಲಿ ಸಂಘಟನೆ ದೃಢವಾಗಬೇಕೆಂದು ಅವುಗಳಿಗೆ ಸೌಕರ್ಯಗಳನ್ನು ಸಲ್ಲಿಸಿ ಪರಕೀಯ ಸರಕುಗಳ ಮೇಲೆ ಸುಂಕವನ್ನು ಹಾಕಬೇಕು ಎಂದು ಜೋಸೆಫ್ ಚೇಂಬರ್ಲೇನನ ಯೋಜನೆ ಮತ್ತು ಅದಕ್ಕಾಗಿ ಚಳವಳಿ.

ಅಂತರ್ಗತ ವಿಷಯಗಳು—

(೧) ೧೯೦೯ರಲ್ಲಿ 'ಕೂಲಿಕಾರ' ಎಂಬ ಹೊಸ ರಾಜಕೀಯ ಪಕ್ಷದ ಸ್ಥಾಪನೆ.
(೨) (ಅ) ಲಿಬರಲ್ ಮಂತ್ರಿಮಂಡಲದ ಲೋಕೋಪಯುಕ್ತ ಸುಧಾರಣೆಗಳು—
(೧) ಶಾಂತವಾಗಿ ಪಿಕೆಟಿಂಗ್ ಮಾಡುವುದು ಕಟ್ಟಳೆಗೆ ವಿರುದ್ಧವಲ್ಲ ೧೯೦೬.
(೨) ಕೂಲಿಕಾರ ಜನರಿಗೆ ಹಾನಿಯನ್ನು ತುಂಬಿಕೊಡುವುದು ೧೯೦೬.
(೩) ಮುಪ್ಪಿನಲ್ಲಿ ಪೆನ್‌ಶನ್ ೧೯೦೮.

(೪) ನೌಕಾಬಲದಲ್ಲಿ ಮತ್ತು ಸೈನ್ಯದಲ್ಲಿ ಸುಧಾರಣೆ—

(೧) ಇಂಗ್ಲಂಡಿನ ಹಡಗುಪಡೆ ಎರಡು ಪ್ರಬಲ ರಾಷ್ಟ್ರಗಳಷ್ಟು ಇರಬೇಕೆಂಬ ನೀತಿ; ಡ್ರೆಡ್‌ನಾಟ್ಸ್ ಹಡಗುಗಳ ಬೆಳವಣಿಗೆ.

(೨) ಸೈನ್ಯದ ಪುನರ್ಘಟನೆ. ಎಕ್ಸ್‌ಪಿಡಿಶನರಿ ಮತ್ತು ಟೆರಿಟೋರಿಯಲ್ ಸೇನೆ.

(೩) ಕಾಮನ್ಸ್ ಸಭೆಯಲ್ಲಿ ಸ್ವೀಕೃತವಾದ ಬಿಲ್ಲಿಗೆ ಲಾರ್ಡ್ಸ್ ಸಭೆಯ ವಿರೋಧ. ಅದಕ್ಕಾಗಿ ಲಾರ್ಡ್ಸ್ ಸಭೆಯ ಅಧಿಕಾರವನ್ನು ಕಡಿಮೆ ಮಾಡುವ ಪ್ರಶ್ನೆ (೧೯೧೦).

---

# ೨೬ನೆಯ ಪ್ರಕರಣವು

## ಐದನೆಯ ಜಾರ್ಜ

ಜನ್ಮವು ೧೮೬೫ ಜೂನ ೩; ರಾಜ್ಯಾರೋಹಣವು (೪೫ನೆಯ ವರ್ಷದಲ್ಲಿ)
೧೯೧೦

ಮೃತ್ಯು ೧೯೩೬ ಜಾನೆವರಿ ೨೦.

೧೯೧೦—೩೬.

### ಮಹತ್ವದ ಇಸ್ವಿಗಳು.

| | |
|---|---|
| ೧೯೧೧ | ಪಾರ್ಲಿಮೆಂಟ್ ಅ್ಯಕ್ಟ, ನೆಶನಲ್ ಇನ್ಸ್ಯುರನ್ಸ ಅ್ಯಕ್ಟ. |
| ೧೯೧೪—೧೮ | ಮಹಾಯುದ್ಧವು. |
| ೧೯೧೪ | (ಸಪ್ಟೆಂಬರ—ಅಕ್ಟೋಬರ) ಪಶ್ಚಿಮ ರಣಾಂಗಣದಲ್ಲಿ ಮಾರ್ನ ಮತ್ತು ಎಪ್ರ ಇಲ್ಲಿಯ ಯುದ್ಧಗಳು. |
| ೧೯೧೫ | ಅ್ಯಸ್ಕ್ವಿಥನ ನಾಯಕತ್ವದಲ್ಲಿ ರಾಷ್ಟ್ರೀಯ ಮಂತ್ರಿಮಂಡಲವು. |
| ೧೯೧೫—೧೬ | ಡಾರ್ಡಾನೆಲ್ಸಿನ ದಂಡಯಾತ್ರೆ ನಿಷ್ಫಲವಾಗುವುದು. |
| ೧೯೧೬ | ಜಟ್‌ಲಂಡಿನ ನೌಕಾಸಮರ, ಜರ್ಮನಿಯ ಸೋಲು, ಐರ್ಲಂಡಿನಲ್ಲಿ ಬಂಡಾಯ. |
| ೧೯೧೬—೨೨ | ಲಾಯಿಡ ಜಾರ್ಜನು ಮುಖ್ಯ ಮಂತ್ರಿ. |
| ೧೯೧೬ | ಒತ್ತಾಯದ ಸೇನಾಸೇವೆಯ ಕಟ್ಟಳೆ. |
| ೧೯೧೭ | ಅಮೇರಿಕೆ ಜರ್ಮನಿಯ ವಿರುದ್ಧ ಸಂಗ್ರಾಮವನ್ನು ಸಾರುವುದು. ರಶಿಯದಲ್ಲಿ ರಾಜ್ಯಕ್ರಾಂತಿ. |
| ೧೯೧೭ | ತುರ್ಕಸ್ತಾನದ ಮೆಸೊಪೊಟೆಮಿಯಾ, ಸೀರಿಯಾ, ಪೆಲೆಸ್ಟಾಯಿನ, ಈ ಪ್ರಾಂತಗಳನ್ನು ಇಂಗ್ಲಂಡು ಗೆದ್ದುಕೊಳ್ಳುವುದು. |
| ೧೯೧೭ | ಸಾಮ್ರಾಜ್ಯದ ಪ್ರತಿನಿಧಿಗಳ ಸಮರ ವಿಷಯಕ ಕೆಬಿನೆಟ್. |
| ೧೯೧೮ | ನವೆಂಬರ ೧೧, ಯುದ್ಧಸಮಾಪ್ತಿ. |
| ೧೯೧೮ | ರಿಪ್ರೆಝೆಂಟೇಟಿವ್ ಆಫ್ ಪೀಪಲ್ಸ ಅ್ಯಕ್ಟ, ಸ್ತ್ರಿಯರಿಗೆ ಮತಾಧಿಕಾರವು ದೊರೆವುದು. |
| ೧೯೧೯ | ಜೂನ ೨೮, ವರ್ಸೆಲ್ಸಿನ ಒಪ್ಪಂದವು. |
| ೧೯೧೯ | ಹಿಂದುಸ್ಥಾನದ ರಾಜ್ಯಘಟನೆಯ ಕಟ್ಟಳೆ. |
| ೧೯೨೦ | ಜಾನೆವರಿ, ರಾಷ್ಟ್ರಸಂಘದ ಸ್ಥಾಪನೆ. |
| ೧೯೨೨ | 'ಐರಿಶ್ ಫ್ರೀ ಸ್ಟೇಟ'ದ ಸ್ಥಾಪನೆ. |

| | |
|---|---|
| ೧೯೨೪ | ಜಾನೆವರಿ, ಮೆಕ್‌ಡೊನಲ್ಡನ ನಾಯಕತ್ವದಲ್ಲಿ ಕೂಲಿಕಾರ ಮಂತ್ರಿ ಮಂಡಲ. |
| ೧೯೨೪ | ನವೆಂಬರ, ಬಾಲ್ಡವಿನನ ನೇತೃತ್ವದಲ್ಲಿ ಕಾಂಝರ್ವೇಟಿವ್ ಮಂತ್ರಿ ಮಂಡಲ. |
| ೧೯೨೬ | ಸಾರ್ವತ್ರಿಕ ಸಂಪು. |
| ೧೯೩೫ | ಹಿಂದುಸ್ಥಾನದ ರಾಜ್ಯಘಟನೆಯ ಕಟ್ಟಳೆ. |

ಐದನೆಯ ಜಾರ್ಜ—೭ನೆಯ ಎಡ್ವರ್ಡನ ತರುವಾಯದಲ್ಲಿ ಅವನ ಮಗನಾದ ಜಾರ್ಜನು ಇಂಗ್ಲಂಡಿನ ಪಟ್ಟಕ್ಕೆ ಬಂದನು. ಬಾಲ್ಯದಲ್ಲಿ ಅವನು ನೌಕಾ ಶಿಕ್ಷಣವನ್ನು ಪಡೆದಿದ್ದನು ಮತ್ತು ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಪ್ರವಾಸ ಮಾಡಿದ್ದನು. ಜಾರ್ಜನು ಯುವರಾಜನಿದ್ದಾಗ ೧೯೦೫—೬ರಲ್ಲಿ, ಬಳಿಕ ಪಟ್ಟಕ್ಕೆ ಬಂದ ಮೇಲೆ ಸಮ್ರಾಟನೆಂದು, ಹಿಂದುಸ್ಥಾನವನ್ನು ಸಂದರ್ಶಿಸಿದನು. ಆ ಕಾಲಕ್ಕೆ ೧೯೧೧ ಡಿಸೆಂಬರ ೧೨ನೆಯ ತಾರೀಖಿನ ದಿನ ದಿಲ್ಲಿ ನಗರಿಯಲ್ಲಿ ದೊಡ್ಡ ಓಲಗವು ನೆರೆಯಿಸಲಾಯಿತು. ಇವನು ಒಳ್ಳೆಯ ವಾಗ್ಮಿ ಆಗಿದ್ದನು. ಆದುದರಿಂದ ತನ್ನ ಅಭಿಪ್ರಾಯವನ್ನು ಜನರ ಮೇಲೆ ಚೆನ್ನಾಗಿ ಬಿಂಬಿಸಬಲ್ಲವನಾಗಿದ್ದನು. ಇವನು ೧೮೯೩ರಲ್ಲಿ ದೂರದ ಆಪ್ತ ಸಂಬಂಧದವಳಾದ


ಐದನೆಯ ಜಾರ್ಜ.

ಮೇರಿ ಎಂಬವಳೊಡನೆ ಮದುವೆಯಾದನು. ಮೇರಿಯ ತಂದೆ ಜರ್ಮನನಾಗಿದ್ದರೂ ಆಕೆಯ ಎಲ್ಲ ಶಿಕ್ಷಣವು ಇಂಗ್ಲಂಡಿನಲ್ಲಿಯೆ ನಡೆಯಿತು. ಆದುದರಿಂದ ಆಕೆಗೆ ಸ್ವಾಭಾವಿಕವಾಗಿಯೆ ಇಂಗ್ಲಿಶರ ವಿಷಯದಲ್ಲಿ ಪ್ರೇಮಭಾವನೆಯಿದ್ದಿತು. ಜಾರ್ಜ ರಾಜನು ಮತ್ತು ರಾಣಿ ಮೇರಿ ಉಭಯರಿಗೂ ಇಂಗ್ಲಂಡಿನ ವಿಷಯದಲ್ಲಿ ಪ್ರೀತಿಯೂ ಆತ್ಮೀಯತೆಯೂ ಇದ್ದುದರಿಂದ ಜಾರ್ಜನು ಜರ್ಮನಿಯೊಡನೆ ಮಹಾಯುದ್ಧವು ಆರಂಭವಾದ ಬಳಿಕ ತನ್ನ ಎಲ್ಲ ಜರ್ಮನ ಬಿರುದುಗಳನ್ನೂ ಪದವಿಗಳನ್ನೂ ತೊರೆದನು ಮತ್ತು ಇನ್ನು ಮುಂದೆ ತಮ್ಮ ಮನೆತನಕ್ಕೆ 'ವಿಂಡಸರ ವಂಶ'ವೆಂದು ಕರೆಯಬೇಕಾಗಿ ನಿರ್ಧರಿಸಿದರು.

**ಲಾರ್ಡ್ಸ್ ಸಭೆಯ ಅಧಿಕಾರಗಳನ್ನು ಕಡಿಮೆಮಾಡುವ ವಿಚಾರ**— ಕಾಮನ್ಸ ಸಭೆಯಲ್ಲಿ ಸ್ವೀಕೃತವಾದ ಕೆಲವು ಬಿಲ್ಲುಗಳು ಲಾರ್ಡ್ಸ್ ಸಭೆಯಲ್ಲಿ ಮಾನ್ಯವಾಗುವುದಿಲ್ಲವೆಂದು ಅನುಭವವು ಬಂದುದರಿಂದ ಲಾರ್ಡ್ಸ್ ಸಭೆಯ ಅಧಿಕಾರಗಳನ್ನು ಬಹಳ ಮಟ್ಟಿಗೆ ನಿಯಂತ್ರಿಸಲು ಮುಖ್ಯ ಮಂತ್ರಿ ಅಸ್ಕ್ವಿಥನು ೭ನೆಯ ಎಡ್ವರ್ಡನ ಆಳಿಕೆಯಲ್ಲಿಯೆ ಒಂದು ಯೋಜನೆಯನ್ನು ಸೂಚಿಸಿದ್ದನು. ಆದರೆ ಮುಂದೆ ಸ್ವಲ್ಪ ದಿನಗಳಲ್ಲಿಯೆ ಎಡ್ವರ್ಡನು ಮರಣಹೊಂದಿದುದರಿಂದ ಈ ವಿಚಾರವನ್ನು ಮುಂದಕ್ಕೆ ಹಾಕಲಾಯಿತು. ಜಾರ್ಜನು ಪಟ್ಟಕ್ಕೆ ಬಂದ ಬಳಿಕ ಈ ವಿಚಾರವು ಮತ್ತೆ ಜನತೆಯ ಮುಂದೆ ಬಂದಿತು. ಈ ವಿಷಯದಲ್ಲಿ ದೊಡ್ಡ ದೊಡ್ಡ ರಾಜನೀತಿಜ್ಞರಲ್ಲಿಯೂ ಮತಭೇದವು ಇದ್ದುದರಿಂದ ಲಾರ್ಡ್ಸ್ ಸಭೆ ಮತ್ತು ಕಾಮನ್ಸ ಸಭೆ ಇವುಗಳಲ್ಲಿಯ ಬೇರೆ ಬೇರೆ ಪಕ್ಷಗಳ ಧುರೀಣರದೊಂದು ಪರಿಷತ್ತನ್ನು ನೆರೆಯಿಸಿ ಸಾಮೋಪಾಯದಿಂದ ಈ ಸಮಸ್ಯೆಯನ್ನು ಬಗೆಹರಿಸುವ ಪ್ರಯತ್ನವು ನಡೆಯಿತು. ಆದರೆ ಈ ಪರಿಷತ್ತಿನಲ್ಲಿ ಯಾವ ಮಾತೂ ನಿಶ್ಚಿತವಾಗಲಿಲ್ಲ. ಆ ಮೇಲೆ ಈ ವಿಷಯದಲ್ಲಿ ಇಂಗ್ಲಂಡಿನ ಜನತೆಯ ಅಭಿಪ್ರಾಯವೇನೆಂಬುದನ್ನು ತಿಳಿದುಕೊಳ್ಳಲು ೧೯೧೦ ಜಾನೆವರಿಯಲ್ಲಿ ಆರಿಸಿ ಬಂದ ಪಾರ್ಲಿಮೆಂಟನ್ನು ಅದೇ ವರ್ಷದ ನವೆಂಬರದಲ್ಲಿ ವಿಸರ್ಜಿಸಲಾಯಿತು. ಬಳಿಕ ಈ ವಿಷಯವನ್ನು ಮುಂದೆ ಇಟ್ಟುಕೊಂಡು ಡಿಸೆಂಬರ ತಿಂಗಳಲ್ಲಿ ಹೊಸ ಚುನಾವಣೆ ನಡೆಯಿಸಲ್ಪಟ್ಟಿತು.

**ಪಾರ್ಲಿಮೆಂಟ್ ಅಕ್ಟ, ೧೯೧೧**—ಅನಂತರ ಕೂಡಿದ ಪಾರ್ಲಿಮೆಂಟ್ ಸಭೆಯ ಮುಂದೆ ಲಾರ್ಡ್ಸ್ ಸಭೆಯ ಅಧಿಕಾರವನ್ನು ಕಡಿಮೆ ಮಾಡುವ ಬಿಲ್ಲನ್ನು ಇರಿಸಲಾಯಿತು. ಈ ಬಿಲ್ಲು ಕಾಮನ್ಸ ಸಭೆಯಲ್ಲಿ ಮಾನ್ಯವಾಯಿತು. ಆದರೆ ಅದು ಲಾರ್ಡ್ಸ್ ಸಭೆಯಲ್ಲಿ ಮಾನ್ಯವಾಗಲಿಕ್ಕಿಲ್ಲವೆಂದೆನಿಸಿತು. ಆಗ ಅದು ಲಾರ್ಡ್ಸ್ ಸಭೆಯಲ್ಲಿ ಸ್ವೀಕೃತವಾಗಬೇಕೆಂಬ ಉದ್ದೇಶದಿಂದ ಅವಶ್ಯವು ತೋರಿದರೆ ಕೆಲವು ಜನರನ್ನು ಹೊಸದಾಗಿ ಲಾರ್ಡರಾಗಿ ಮಾಡಬೇಕು ಎಂಬ ಮಂತ್ರಿಮಂಡಲದ ಸೂಚನೆಗೆ ಜಾರ್ಜನು ತನ್ನ ಸಮ್ಮತಿಯನ್ನು ತೋರಿದುದರಿಂದ ಮುಂದೆ ಲಾರ್ಡ್ಸ್ ಸಭೆಯಲ್ಲಿ ಆ ಬಿಲ್ಲಿಗೆ ವಿರೋಧವಾಗಲಿಲ್ಲ. ಅದು ಅಲ್ಲಿಯೂ ಮಾನ್ಯವಾಯ್ತು. (೧೯೧೧). ಈ ಕಟ್ಟಳೆಯಲ್ಲಿ ಕೆಳಗಿನ ವಿಷಯಗಳು ಗೊತ್ತುಪಡಿಸಲ್ಪಟ್ಟುವು.

(೧) ಹಣಕಾಸಿನ ಬಿಲ್ಲಿನಲ್ಲಿ ಹೆಚ್ಚು ಕಡಿಮೆ ಮಾಡುವ ಅಧಿಕಾರವು ಲಾರ್ಡ್ಸ್ ಸಭೆಗೆ ಇರಲಿಲ್ಲ. ಈ ಕಟ್ಟಳೆಯಿಂದ ಇಂತಹ ಬಿಲ್ಲನ್ನು ಅಮಾನ್ಯ ಮಾಡುವ ಅಧಿಕಾರವಾದರೂ ಲಾರ್ಡ್ಸ್ ಸಭೆಗೆ ಇಲ್ಲವೆಂದು ನಿರ್ಧರಿಸಲಾಯಿತು.

(೨) ಮಿಕ್ಕ ವಿಷಯಗಳ ಬಿಲ್ಲು ಕಾಮನ್ಸ ಸಭೆಯ ಮೂರು ಅಧಿವೇಶನಗಳಲ್ಲಿ ಏಕಪ್ರಕಾರವಾಗಿ ಮಾನ್ಯವಾಗಿದ್ದ ಪಕ್ಷದಲ್ಲಿ ಲಾರ್ಡ್ಸ ಸಭೆ ಅದನ್ನು ನಿರಾಕರಿಸಿದರೂ ಅದು ಮಾನ್ಯವಾಯಿತೆಂದು ತಿಳಿಯಬೇಕು.

(೩) ಒಮ್ಮೆ ಆರಿಸಿದ ಪಾರ್ಲಿಮೆಂಟು ಐದು ವರ್ಷಕ್ಕಿಂತ ಹೆಚ್ಚು ಕಾಲ ಬಾಳಕೂಡದು. ಕಾಮನ್ಸ ಸಭೆಯ ಸದಸ್ಯರಿಗೆ ಪ್ರತಿಯೊಬ್ಬನಿಗೆ ೪೦೦ ಪೌಂಡುಗಳಂತೆ ಸಂಬಳವನ್ನು ಕೊಡಬೇಕು ಎಂಬ ಸೂಚನೆ ಮಾನ್ಯವಾಯಿತು.

**ಕೂಲಿಕಾರ ಮತ್ತು ಶ್ರಮಜೀವಿ ವರ್ಗದ ಹಿತದ ಕಟ್ಟಳೆಗಳು**— ಅಸ್ಕ್ವಿಥನ ಲಿಬರಲ್ ಮಂತ್ರಿಮಂಡಲವು ಶ್ರಮಜೀವಿ ವರ್ಗಕ್ಕೆ ಹಿತಕರವಾದ ಕೆಳಗೆ ಕಾಣಿಸಿದ ಕಟ್ಟಳೆಗಳನ್ನು ಮಾನ್ಯ ಮಾಡಿಸಿತು.

(೧) **ನೆಶನಲ್ ಹೆಲ್ಥ ಇನ್ಶ್ಯುರನ್ಸ ಕಟ್ಟಳೆ, ೧೯೧೧**—ಈ ಕಟ್ಟಳೆಯಿಂದ ಗಿರಣಿ ಇಲ್ಲವೆ ಕಾರಖಾನೆಗಳ ಒಡೆಯ, ಬಡ ಕೂಲಿಕಾರ ಮತ್ತು ಸರಕಾರ ಇವರ ಕಡೆಯಿಂದ ಪ್ರತಿವಾರ ಸ್ವಲ್ಪ ಹಣದಂತೆ ಕೂಡಿಸಿ ಉಂಟಾದ ನಿಧಿಯೊಳಗಿಂದ ಕೂಲಿಕಾರರಿಗೆ ಬೇನೆಬೇಸರಿಕೆಗಳು ಬಂದಾಗ ಅವರಿಗೆ ವೈದ್ಯಕೀಯ ಸಾಹಾಯ್ಯವು ದೊರೆವಂತೆ ವ್ಯವಸ್ಥೆಯನ್ನು ಮಾಡಲಾಯಿತು.

(೨) **ನಿರುದ್ಯೋಗಕ್ಕೋಸುಗ ಇನ್ಶ್ಯುರನ್ಸ, ೧೯೧೧**—ಈ ಕಟ್ಟಳೆ ಕೂಲಿಕಾರರ ಕಡೆಯಿಂದ ಪ್ರತಿವಾರ ಸ್ವಲ್ಪ ಹಣದಂತೆ ನಿಧಿಯನ್ನು ಕೂಡಿಸಿ ತನ್ನ ತಪ್ಪಿಲ್ಲದೆ ಕೆಲಸಗೇಡಿಯಾದ ಕೂಲಿಕಾರನಿಗೆ ಸಾಹಾಯ್ಯವು ದೊರೆವ ವ್ಯವಸ್ಥೆಯಾಯ್ತು.

**ಸಾರ್ವಜನಿಕ ಅಶಾಂತಿ ಮತ್ತು ಸಂಪುಗಳು**—ಲಿಬರಲ್ ಮಂತ್ರಿಮಂಡಲವು ೭ನೆಯ ಎಡ್ವರ್ಡ ಮತ್ತು ೫ನೆಯ ಜಾರ್ಜ ಇವರ ಆಳಿಕೆಯಲ್ಲಿ ಶ್ರಮಜೀವಿ ವರ್ಗದ ಹಿತಕ್ಕಾಗಿ ಅನೇಕ ಕಟ್ಟಳೆಗಳನ್ನು ಏರ್ಪಡಿಸಿತು. ಆದರೂ ಕೂಲಿಕಾರ ಜನರಲ್ಲಿಯ ಅಸಂತೋಷವು ಅಳಿಯಲಿಲ್ಲ. ಈ ಅಸಂತೋಷವು ಇರಲಿಕ್ಕೆ ಅನೇಕ ಕಾರಣಗಳು ಇದ್ದುವು. ವ್ಯಾಪಾರದ ಮಾಂದ್ಯದಿಂದ ಉದ್ಯೋಗ-ವ್ಯವಸಾಯಗಳ ಹಬ್ಬುಗೆ ಕಡಿಮೆಯಾಗುತಲಿತ್ತು. ಅದರಿಂದ ಕೂಲಿಯ ದರವು ಇಳಿದು ನಿರುದ್ಯೋಗವು ಹೆಚ್ಚಿತು. ಉಗೆಬಂಡಿ ಮತ್ತು ಕಣಿಗಳಂತಹ ದೊಡ್ಡ ವ್ಯವಸಾಯಗಳಲ್ಲಿಯಂತೂ ಕೂಲಿಯ ದರವು ಬಹಳವಾಗಿ

ಇಳಿಯಿತು. ಇಷ್ಟು ಅಲ್ಪ ಕೂಲಿಯಲ್ಲಿ ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳು ವುದು ಕೂಲಿಯವರಿಗೆ ಕಠಿಣವಾಯಿತು. ಗಿರಣಿಯವರು ಮತ್ತು ಕೂಲಿಕಾರರು ಇವರಲ್ಲಿ ವೈಮನಸ್ಯವು ಬೆಳೆಯ ತೊಡಗಿತು. ಆಗ ದೊಡ್ಡ ಪ್ರಮಾಣದಲ್ಲಿ ಸಂಪನ್ನು ಹೂಡಿ ಕೆಲಸವನ್ನು ನಿಲ್ಲಿಸಿದರೆ ಕೂಲಿಯ ದರವು ಏರಬಹುದೆಂದು ಬಗೆದು ಕೂಲಿಕಾರ ಸಂಘದವರು ಸಂಪುಗಳನ್ನು ಸಾರುತ್ತಿದ್ದರು. ೧೯೦೬ರಲ್ಲಿ ಕಲ್ಲಿದ್ದಲಿಯ ಕಣಿಯೊಳಗಿನ ಕೆಲಸಗಾರರು, ೧೯೧೦ರಲ್ಲಿ ಹಡಗಿನ ಹೋರೆಯವರು ಮತ್ತು ೧೯೧೧ರಲ್ಲಿ ಉಗೆಬಂಡಿ ಮತ್ತು ಬಂದರುಗಳಲ್ಲಿಯ ಕೂಲಿಯವರು ಮತ್ತು ಕೆಲಸಗಾರರು ಸಂಪುಗಳನ್ನು ಸಾರಿದ್ದರು. ಇಂತು ಶ್ರಮಜೀವಿವರ್ಗದಲ್ಲಿ ಅಸಂತೋಷವು ನೆಲೆಸಿತ್ತು.

ಮತಕೊಡಲು ಮತ್ತು ಪಾರ್ಲಿಮೆಂಟಿನ ಸದಸ್ಯರಾಗಲು ಅಧಿಕಾರವು ತಮಗೂ ಇರಬೇಕೆಂದು ಹೆಂಗುಸರೂ ಆಂದೋಲನವನ್ನು ಹೂಡಿದ್ದರು. ಅವರಲ್ಲಿ ಕೆಲವರಂತೂ ಇದಕ್ಕಾಗಿ ದೊಂಬೆಗಳನ್ನು ಎಬ್ಬಿಸಿ ಅತ್ಯಾಚಾರಗಳನ್ನು ಮಾಡಲೂ ಆರಂಭಿಸಿದರು. ಇಂತಹ ಸ್ತ್ರೀಯರಿಗೆ 'ಸಫ್ರೆಜೆಟ್ಸ' ಎಂದು ಹೆಸರು.

ಈ ಬಗೆಯಾಗಿ ದೇಶದಲ್ಲಿ ಎಲ್ಲ ಕಡೆಗೆ ಅಸಾಂತಿ ಹಬ್ಬಿರುವಾಗ ಮಹಾಯುದ್ಧವು ಪ್ರಾರಂಭವಾಗಿ ಇಂಗ್ಲಂಡು ತನ್ನ ಎಲ್ಲ ಲಕ್ಷ್ಯವನ್ನು ಆ ಕಡೆಗೆ ತಿರುಗಿಸಬೇಕಾಯಿತು. ಯುದ್ಧಕ್ಕೆ ಅವಶ್ಯವಿರುವ ವಸ್ತುಗಳನ್ನು ಸಿದ್ಧಪಡಿಸುವ ಉದ್ಯೋಗದಲ್ಲಿ ಕೂಲಿಕಾರರೆಂದು, ದಂಡಾಳುಗಳೆಂದು, ನಾವಿಕರೆಂದು ಅನೇಕ ಜನರಿಗೆ ಕೆಲಸವು ದೊರೆತುದರಿಂದ ನಿರುದ್ಯೋಗದ ಉಗ್ರತೆ ಕಡಿಮೆಯಾಯಿತು.

**ಐರ್ಲಂಡಿನಲ್ಲಿಯ ಪ್ರಕ್ಷೋಭ**—ಮುಂದೆ ೧೯೧೨ರಲ್ಲಿ ಅಸ್ಕ್ವಿಥನು ಐರ್ಲಂಡಿಗೆ ಹೋಮ್‌ರೂಲನ್ನು (ಸ್ವರಾಜ್ಯ) ಕೊಡುವ ಬಿಲ್ಲನ್ನು ಪಾರ್ಲಿಮೆಂಟಿನಲ್ಲಿ ತಂದನು. ಆದರೆ ಅದಕ್ಕೆ ಯೂನಿಯನಿಸ್ಟ (ಕಾಂಝರ್‌ವೇಟಿವ್) ಪಕ್ಷದ ಮತ್ತು ಐರ್ಲಂಡಿನ ಅಲ್ಸ್ಟರ ಪ್ರದೇಶದ ಪ್ರಾಟೆಸ್ಟಂಟರ ವಿರೋಧವಿತ್ತು. ಕಾಮನ್ಸ ಸಭೆ ಅದನ್ನು ಸಹಿತವಾಗಿ ಮೂರು ಸಲ ಮಾನ್ಯಮಾಡಿತು. ಆದರೆ ಲಾರ್ಡ್ಸ ಸಭೆ ಮಾತ್ರ ಅದನ್ನು ಅಂಗೀಕರಿಸಲಿಲ್ಲ (೧೯೧೪). ಆದರೂ ೧೯೧೧ರ ಪಾರ್ಲಿಮೆಂಟಿನ ಕಟ್ಟಳೆಯಂತೆ ಆ ಬಿಲ್ಲು ಮಾನ್ಯವಾಗಬೇಕಾದುದರಿಂದ ಈ ವಿಷಯದಲ್ಲಿ ಐರ್ಲಂಡಿನಲ್ಲಿ ಬಹಳ ಕ್ಷೋಭೆ ಉಂಟಾಯಿತು. ಅಲ್ಸ್ಟರ ಪ್ರದೇಶದ ಪ್ರಾಟೆಸ್ಟಂಟ ಪಂಗಡದವರಿಗೆ ಗ್ರೇಟ ಬ್ರಿಟನ್ನಿನ ಪಾರ್ಲಿಮೆಂಟಿನೊಡನೆ ಬೆರೆತಿರುವುದು ಬೇಕಾಗಿದ್ದಿತು. ಐರ್ಲಂಡಿನಲ್ಲಿ ಈ ಕ್ಷೋಭೆ ನಡೆದಿರುವಾಗ ಯುರೋಪದಲ್ಲಿ ಮಹಾಯುದ್ಧವು ಪ್ರಾರಂಭವಾಯ್ತು (೧೯೧೪). ಅತ್ತ ಇಂಗ್ಲಂಡು ಲಕ್ಷ್ಯ

ವನ್ನು ಕೊಡಬೇಕಾದುದರಿಂದ ಯುದ್ಧವು ಮುಗಿವವರೆಗೆ ಐರ್ಲಂಡಿನಲ್ಲಿ ಹೋಮ್ ರೂಲ ಕಟ್ಟಳೆಯನ್ನು ಪ್ರಚಾರದಲ್ಲಿ ತರುವುದನ್ನು ತಡೆಯಬೇಕೆಂದು ಪಾರ್ಲಿಮೆಂಟು ಕಟ್ಟಳೆಯನ್ನು ರಚಿಸಿತು. ಆದರೆ ಅದರಿಂದ ದಕ್ಷಿಣ ಐರ್ಲಂಡಿನಲ್ಲಿ ಅಶಾಂತಿಯುಂಟಾಯಿತು. ಮುಂದೆ ಅಲ್ಲಿ ಬಂಡಾಯವೂ ಎದ್ದಿತು (೧೯೧೬).

## ಮಹಾಯುದ್ಧವು.

**ಮಹಾಯುದ್ಧವು (೧೯೧೪-೧೮)**—೧೯೧೪ ಜುಲೈ ತಿಂಗಳಲ್ಲಿ ಯುರೋಪದಲ್ಲಿ ದೊಡ್ಡ ಯುದ್ಧವು ಪ್ರಾರಂಭವಾಗಿ ಅದು ೧೯೧೮ರ ವರೆಗೆ ನಡೆಯಿತು. ಈ ಯುದ್ಧದಲ್ಲಿ ಜಗತ್ತಿನ ಅನೇಕ ಪ್ರಮುಖ ರಾಷ್ಟ್ರಗಳು ಸೇರಿದುವು. ಅದರಿಂದ ಇದರ ಬೇಗೆ ಎಲ್ಲ ಕಡೆಗೆ ಹಬ್ಬಿತು.

**ಮಹಾಯುದ್ಧದ ಕಾರಣಗಳು**—ಇಂಗ್ಲಂಡ್, ಜರ್ಮನಿ, ಫ್ರಾನ್ಸ್, ರಶಿಯಾ, ಆಸ್ಟ್ರಿಯಾ ಮತ್ತು ಇಟಲಿ ಇವು ಯುರೋಪದಲ್ಲಿಯ ಪ್ರಮುಖ ರಾಷ್ಟ್ರಗಳು. ಇವುಗಳಲ್ಲಿ ಫ್ರಾನ್ಸ್ ಮತ್ತು ಜರ್ಮನಿ ಇವುಗಳ ನಡುವೆ ೧೮೭೦—೭೧ ರಲ್ಲಿ ಸಂಗ್ರಾಮವು ನಡೆದು ಅದರಲ್ಲಿ ಫ್ರಾನ್ಸು ಸೋತಿತು. ಅದರಿಂದ ಫ್ರಾನ್ಸು ತನ್ನ ಅಲ್ಸೆಸ ಮತ್ತು ಲಾರೆನ ಪ್ರಾಂತಗಳನ್ನು ಮತ್ತು ಬಹಳಷ್ಟು ಕಪ್ಪವನ್ನು ಜರ್ಮನಿಗೆ ಕೊಡಬೇಕಾಯಿತು. ಅದಕ್ಕಾಗಿ ಪ್ರಸಂಗವು ಬಂದರೆ ತನ್ನ ಪರಾಜಯದ ಸೇಡನ್ನು ತೀರಿಸಿಕೊಂಡು, ಅಲ್ಸೆಸ ಮತ್ತು ಲಾರೆನ ಪ್ರಾಂತಗಳನ್ನು ತಿರುಗಿ ದೊರಕಿಸಬೇಕು ಎಂಬುದು ಫ್ರಾನ್ಸಿನ ಮಹತ್ವಾಕಾಂಕ್ಷೆ ಆಗಿದ್ದಿತು. ಹೀಗೆ ಫ್ರಾನ್ಸಿನಿಂದ ಅಪಾಯವಾಗಬಾರದೆಂದು ಜರ್ಮನಿ ೧೮೭೯ರಲ್ಲಿ ಆಸ್ಟ್ರಿಯ ದೊಡನೆ ಸ್ನೇಹದ ಒಪ್ಪಂದವನ್ನು ಮಾಡಿತು. ೧೮೮೨ರಲ್ಲಿ ಇಟಲಿಯೂ ಆ ಸಂಘದಲ್ಲಿ ಸೇರಿತು. ಹೀಗೆ ಜರ್ಮನಿ, ಆಸ್ಟ್ರಿಯಾ ಮತ್ತು ಇಟಲಿ ಈ ರಾಷ್ಟ್ರಗಳದೊಂದು ಮುಪ್ಪುರಿಯ ಸಂಘವು (Triple Alliance) ಸ್ಥಾಪಿಸಲ್ಪಟ್ಟಿತು (೧೮೮೨). ಈ ಮುಪ್ಪುರಿ ಸಂಘದಿಂದ ಫ್ರಾನ್ಸಿಗೆ ಭಯವು ತೋರಿತು. ಭೂಮಧ್ಯಸಮುದ್ರದ ಕಡೆಗೆ ತನ್ನ ಸೀಮೆಯನ್ನು ಬೆಳೆಯಿಸಬೇಕೆಂದು ರಶಿಯದ ಮಹತ್ವಾಕಾಂಕ್ಷೆ ಇದ್ದುದರಿಂದ ಬಾಲ್ಕನ್ ದ್ವೀಪಕಲ್ಪದ ಕಡೆಗೆ ರಶಿಯದ ಲಕ್ಷ್ಯವು ಇತ್ತು. ಬರ್ಲಿನ್ ಒಪ್ಪಂದದಿಂದ ಬಾಲ್ಕನ್ ದ್ವೀಪಕಲ್ಪದಲ್ಲಿಯ ಬಾಸ್ನಿಯಾ ಸಂಸ್ಥಾನವು ಆಸ್ಟ್ರಿಯದ ವರ್ಚಸ್ಸಿಗೆ ಒಳಪಟ್ಟ ಬಳಿಕ ಬಾಲ್ಕನ್ ದ್ವೀಪಕಲ್ಪದಲ್ಲಿ ತನ್ನದೂ ಕೈ ಇರಬೇಕೆಂದು ಆಸ್ಟ್ರಿಯಕ್ಕೆ ಎನಿಸಿದುದರಿಂದ ರಶಿಯಾ-ಆಸ್ಟ್ರಿಯಗಳ ನಡುವೆ ಸ್ಪರ್ಧೆ ಉಂಟಾಗಿತ್ತು. ಅದರಿಂದ ಮೇಲಿನ ಮುಪ್ಪುರಿ ಸಂಘದಿಂದ ತಮಗೆ ಬಾಧೆ ಬರ

ಬಾರದೆಂದು ರಶಿಯಾ ಮತ್ತು ಫ್ರಾನ್ಸ್ ಇವು ೧೮೯೫ರಲ್ಲಿ ಸ್ನೇಹದ ಒಡಂಬಡಿಕೆಯನ್ನು ಮಾಡಿಕೊಂಡುವು. ೧೯ನೆಯ ಶತಕದ ಕೊನೆಯಲ್ಲಿ ಜರ್ಮನಿಯ ಮಹತ್ವಾಕಾಂಕ್ಷಿ ಸಮ್ರಾಟನಾದ ಕೈಸರ ೨ನೆಯ ವಿಲಿಯಮನ ಆಳಿಕೆಯಲ್ಲಿ ತನ್ನ ಸಾಮ್ರಾಜ್ಯವನ್ನು, ಉಪನಿವೇಶಗಳನ್ನು ಮತ್ತು ವ್ಯಾಪಾರವನ್ನು ಹೆಚ್ಚಿಸಲು ಜರ್ಮನಿ ಅತ್ಯಧಿಕವಾಗಿ ಪ್ರಯತ್ನಿಸಿತು. ಅದು ಉತ್ತರ ಸಮುದ್ರದಲ್ಲಿಯ ಹೆಲಿಗೊಲಂಡ್ ನಡುಗಡ್ಡೆಯನ್ನು ಇಂಗ್ಲಂಡಿನಿಂದ ಮರಳಿ ದೊರಕಿಸಿ ಅದನ್ನು ಭದ್ರಗೊಳಿಸಿತು. ಬಾಲ್ಟಿಕ್ ಸಮುದ್ರದಿಂದ ನೇರವಾಗಿ ಉತ್ತರ ಸಮುದ್ರದಲ್ಲಿ ಹೋಗಲು ಬರಬೇಕೆಂದು ಕೈಸರನು ಕೀಲಕಾಲುವೆಯನ್ನು ಅಗಿಸಿದನು. ಆತನು ಸೈನ್ಯವನ್ನೂ ಹಡಗುಪಡೆಯನ್ನೂ ಹೆಚ್ಚಿಸಿ ಪ್ರಬಲಗೊಳಿಸಿದನು ಮತ್ತು ಆಫ್ರಿಕಾ ಖಂಡದಲ್ಲಿಯ ಪಶ್ಚಿಮ ಮತ್ತು ಪೂರ್ವ ದಂಡೆಯ ಪ್ರದೇಶವನ್ನು ತನ್ನ ಅಧಿಕಾರದಲ್ಲಿ ತಂದು ಅವಕ್ಕೆ ಜರ್ಮನ್ ಪಶ್ಚಿಮ ಆಫ್ರಿಕಾ ಮತ್ತು ಜರ್ಮನ್ ಪೂರ್ವ ಆಫ್ರಿಕಾ ಎಂದು ಹೆಸರುಗಳನ್ನು ಕೊಟ್ಟನು. ಆತನು ತುರ್ಕಸ್ತಾನದೊಡನೆ ಸಖ್ಯವನ್ನು ಮಾಡಿ ತುರ್ಕಸ್ತಾನ ಸಾಮ್ರಾಜ್ಯದಲ್ಲಿ ಬಗದಾದದ ವರೆಗೆ ಉಗೆಬಂಡಿಯ ಮಾರ್ಗವನ್ನು ಸಿದ್ಧಪಡಿಸುವ ಯೋಜನೆಯನ್ನು ಸಂಕಲ್ಪಿಸಿದನು, ಈ ಯೋಜನೆ ಪೂರ್ಣವಾಗಿದ್ದರೆ ಬರ್ಲಿನಿನಿಂದ ಹಿಂದುಸ್ಥಾನದ ಸೀಮೆಯ ವರೆಗೆ ಹೋಗುವಂತಹ ಉಗೆಬಂಡಿಯ ಮಾರ್ಗವು ಸಿದ್ಧವಾಗಬಹುದಾಗಿತ್ತು. ಇದೇ ಮೇರೆಗೆ ಕೈಸರ ವಿಲಿಯಮನು ಆಫ್ರಿಕೆಯ ಬೋರ್ ಜನರೊಡನೆ ಇಂಗ್ಲಂಡಿನ ಯುದ್ಧವು ನಡೆದಿರುವಾಗ ಬೋರ್ ಜನರಿಗೆ ಸಹಾನುಭೂತಿಯನ್ನು ತೋರಿಸಿದನು. ವ್ಯಾಪಾರ, ಉಪನಿವೇಶ ಮತ್ತು ಸಾಮ್ರಾಜ್ಯ ಈ ಮೂರು ವಿಷಯಗಳಲ್ಲಿ ಇಂಗ್ಲಂಡು ಜಗತ್ತಿನಲ್ಲಿ ಪ್ರಮುಖ ರಾಷ್ಟ್ರವು ಆಗಿದ್ದುದರಿಂದ ಇಂಗ್ಲಂಡಿನೊಡನೆ ಜರ್ಮನಿಯ ಸ್ಪರ್ಧೆ ಆರಂಭವಾಯಿತು. ಈ ಹೊಸ ಪರಿಸ್ಥಿತಿ ನಿರ್ಮಾಣವಾದಕಾಲದಲ್ಲಿ ಯುರೋಪದಲ್ಲಿಯ ಯಾವ ಪ್ರಮುಖ ರಾಷ್ಟ್ರದೊಡನೆಯೂ ಇಂಗ್ಲಂಡಿನ ಸ್ನೇಹ ಸಂಬಂಧವಿರಲಿಲ್ಲ. ಅದಕ್ಕಾಗಿ ಈ ಸ್ಥಿತಿ ಸುರಕ್ಷಿತವಲ್ಲವೆಂದು ತಿಳಿದು ಇಂಗ್ಲಂಡು ೧೯೦೨ರಲ್ಲಿ ಪೂರ್ವದ ಜಪಾನ ದೇಶದೊಡನೆ ಸ್ನೇಹದ


ಕೈಸರ ೨ನೆಯ ವಿಲಿಯಮ್.

ಒಡಂಬಡಿಕೆಯನ್ನು ಮಾಡಿಕೊಂಡಿತು. ಅನಂತರ ೧೯೦೪ರಲ್ಲಿ ಫ್ರಾನ್ಸಿನೊಡನೆ ಮತ್ತು ೧೯೦೭ರಲ್ಲಿ ರಶಿಯದೊಡನೆ ಸ್ನೇಹದ ಸಂಧಾನವಾಯಿತು. ಇಂತು ಜರ್ಮನಿ, ಆಸ್ಟ್ರಿಯಾ ಮತ್ತು ಇಟಲಿ ಈ ರಾಷ್ಟ್ರಗಳ ಮುಪ್ಪುರಿ ಸಂಘವನ್ನು ಇದಿರಿಸಲು ಫ್ರಾನ್ಸ್, ರಶಿಯಾ ಮತ್ತು ಇಂಗ್ಲಂಡ್ ಇವುಗಳ ತ್ರಿಕೂಟವು (Triple Entente) ಸಿದ್ಧವಾಯಿತು. ಬಳಿಕ ಯುರೋಪದಲ್ಲಿಯ ಈ ಎರಡು ಸಂಘಗಳಲ್ಲಿ ಸ್ಪರ್ಧೆ ಪ್ರಾರಂಭವಾಯಿತು. ಇವು ಸೈನ್ಯವನ್ನೂ ಹಡಗು ಪಡೆಯನ್ನೂ ಸಜ್ಜಾಗಿ ಇರಿಸಲು ಮತ್ತು ಯುದ್ಧ ಸಾಮಗ್ರಿಯನ್ನೂ ಸಂಹಾರಕ ಸಾಧನಗಳನ್ನೂ ನಿರ್ಮಿಸಲು ಮಿತಿಮೀರಿ ವೆಚ್ಚವನ್ನು ಮಾಡತೊಡಗಿದುವು. ಆಗ ಒಂದು ನಿಮಿತ್ತವು ದೊರೆತೊಡನೆ ಈ ಸಂಘಗಳಲ್ಲಿ ಯುದ್ಧವು ಪ್ರಾರಂಭವಾಗುವು ದೆಂದು ತೋರಿತು.

ಬರ್ಲಿನಿನ ಒಪ್ಪಂದದಿಂದ (೧೮೭೮) ಬಾಲ್ಕನ್ ಸಂಸ್ಥಾನಗಳಲ್ಲಿಯ ಬಾಸ್ನಿಯಾ ಸಂಸ್ಥಾನವು ಆಸ್ಟ್ರಿಯದ ವರ್ಚಸ್ಸಿಗೆ ಒಳಪಟ್ಟಿತ್ತು. ೧೯೦೮ರಲ್ಲಿ ಆಸ್ಟ್ರಿಯವು ಈ ಸಂಸ್ಥಾನದ ಸ್ವತಂತ್ರರಾಜ್ಯವ್ಯವಸ್ಥೆಯನ್ನು ಭಂಗಗೊಳಿಸಿ ಅದನ್ನು ತನ್ನ ರಾಜ್ಯದ ಒಂದು ಪ್ರಾಂತವಾಗಿ ಚಿರಕಾಲಿಕವಾಗಿ ಸೇರಿಸಿಕೊಂಡಿತು. ಈ ಮಾತಿಗೆ ಬಾಸ್ನಿಯದಲ್ಲಿಯ ಸ್ಲಾವಜಾತಿಯ ಜನರ ಒಪ್ಪಿಗೆ ಇರಲಿಲ್ಲ. ಆಸ್ಟ್ರಿಯದ ಈ ಕೃತ್ಯವನ್ನು ಸರ್ವಿಯಾ ಸಂಸ್ಥಾನವು (ಇಲ್ಲಿಯ ಜನರು ಸ್ಲಾವ ಜಾತಿಯವರಾಗಿದ್ದರು) ನಿಷೇಧಿಸಿತು. ಆದರೆ ಇದರ ಕಡೆಗೆ ಯಾರೂ ಲಕ್ಷ್ಯ ಗೊಡಲಿಲ್ಲ. ಬಳಿಕ ಆಸ್ಟ್ರಿಯದ ವಿಷಯದಲ್ಲಿ ಬಾಲ್ಕನ್ ಸಂಸ್ಥಾನಗಳಲ್ಲಿಯ ಜನರ ಅಸಂತೋಷವು ಹೆಚ್ಚುತ್ತಲೇ ಹೋಯಿತು (೧೯೦೮–೧೪). ಈ ಸಂದರ್ಭ ದಲ್ಲಿ ರಶಿಯವು ಸರ್ವಿಯಕ್ಕೆ ಬೆಂಬಲವನ್ನು ಕೊಡುತ್ತಲಿತ್ತು.

ಇಂತಹ ಪರಿಸ್ಥಿತಿಯಲ್ಲಿ ೧೯೧೪ ಜೂನ್ ೨೮ನೆಯ ತಾರೀಖಿನ ದಿನ ಆಸ್ಟ್ರಿಯದ ಯುವರಾಜನಾದ ಆರ್ಚ್ ಡ್ಯೂಕ್ ಫ್ರಾನ್ಸಿಸ್ ಫೋರ್ಡ ಫರ್ಡಿನಂಡ್ ಈತನು ಬಾಸ್ನಿಯದ ರಾಜಧಾನಿ ಸರ್‌ಜೇವೋ ಎಂಬಲ್ಲಿ ಕೊಲ್ಲಲ್ಪಟ್ಟನು. ಈ ಕೊಲೆಯ ಬೇರು ಸರ್ವಿಯದಲ್ಲಿ ಇದ್ದುದಾಗಿ ಕಾಣಬಂದಿತು. ಮುಂದೆ ಜುಲೈ ೨೩ನೆಯ ತಾರೀಖಿನ ದಿವಸ ಆಸ್ಟ್ರಿಯವು ಸರ್ವಿಯಕ್ಕೆ ಒಂದು ಅಗತ್ಯದ ಪತ್ರಿಕೆಯನ್ನು ಕಳುಹಿಸಿ ಈ ಕೊಲೆಯ ವಿಷಯವಾಗಿ ಸರ್ವಿಯದಲ್ಲಿ ವಿಚಾರಣೆಯನ್ನು ನಡೆಯಿಸಲು ಆಸ್ಟ್ರಿಯಕ್ಕೆ ಅಪ್ಪಣೆಯಿರಬೇಕೆಂದು ಕೇಳಿತು, ಮತ್ತು ತನ್ನ ಈ ಪತ್ರಿಕೆಗೆ ಎರಡು ದಿನಗಳಲ್ಲಿ ಉತ್ತರವನ್ನು ಕೊಡಬೇಕೆಂದು ವಿಧಿಸಿತು. ಜರ್ಮನಿ ಈ ವಿಷಯದಲ್ಲಿ ಆಸ್ಟ್ರಿಯವನ್ನು ಎತ್ತಿ ಹಿಡಿಯಿತು.

ಸಂಚುಗಾರರನ್ನು ಸೆರೆಹಿಡಿದು ತಕ್ಕ ರೀತಿಯಲ್ಲಿ ಅವರನ್ನು ದಂಡಿಸಬೇಕೆಂಬ ಉದ್ದೇಶದಿಂದ ಆಸ್ಟ್ರಿಯವು ಕೇಳಿದ ಬೇಡಿಕೆ ನ್ಯಾಯವಾಗಿದ್ದರೂ ಆಸ್ಟ್ರಿಯವು ಕಳುಹಿದ ಪತ್ರಿಕೆಯಲ್ಲಿಯ ವಿಷಯಗಳನ್ನು ಯಾವ ನಿರ್ಬಂಧವನ್ನೂ ಹಾಕದೆ ಮಾನ್ಯಮಾಡುವುದೆಂದರೆ ತನ್ನ ಸ್ವಾತಂತ್ರ್ಯಕ್ಕೆ ಕುಂದಕವೆಂದು ಸರ್ವಿಯಕ್ಕೆ ತೋರಿತು. ಈ ವಿಷಯದಲ್ಲಿ ಸರ್ವಿಯವು ರಶಿಯದ ಆಲೋಚನೆಯನ್ನು ಕೇಳಿತು. ಆಗ ಈ ಕೊಲೆಯನ್ನು ಕುರಿತು ಸರ್ವಿಯದ ಸೀಮೆಯಲ್ಲಿ ನಡೆವ ವಿಚಾರಣೆ ಆಸ್ಟ್ರಿಯನ್ ಅಧಿಕಾರಿಗಳಿಂದ ನಡೆಯದೆ ಸರ್ವಿಯನ್ ಅಧಿಕಾರಿಗಳಿಂದ ನಡೆವುದು ಇಷ್ಟವಾಗಿದೆಂದು ರಶಿಯವು ಸರ್ವಿಯಕ್ಕೆ ಸೂಚಿಸಿತು. ಫ್ರಾನ್ಸು ಮತ್ತು ಇಂಗ್ಲಂಡು ಈ ಪತ್ರಿಕೆಗೆ ಉತ್ತರಕೊಡಲು ಸರ್ವಿಯಕ್ಕೆ ಹೆಚ್ಚು ಅವಕಾಶವನ್ನು ಸಲ್ಲಿಸಬೇಕೆಂದು ಆಸ್ಟ್ರಿಯಕ್ಕೆ ಸೂಚಿಸಿದುವು. ಆದರೆ ಗೊತ್ತುಪಡಿಸಿದ ಅವಧಿಯ ಒಳಗೆ ತನ್ನ ಪತ್ರಿಕೆಗೆ ಉತ್ತರವು ಬಾರದುದನ್ನು ನೋಡಿ ಆಸ್ಟ್ರಿಯವು ಜರ್ಮನಿಯ ಬೆಂಬಲವು ತನಗೆ ಪೂರ್ತಿಯಾಗಿ ಇದ್ದುದನ್ನು ಕಂಡು ಜುಲೈ ೨೮ನೆಯ ದಿನ ಸರ್ವಿಯದ ವಿರುದ್ಧವಾಗಿ ಯುದ್ಧವನ್ನು ಸಾರಿತು. ಜಾತಿಯಲ್ಲಿ ಮತ್ತು ಧರ್ಮದಲ್ಲಿ ಸರ್ವಿಯದ ಜನರು ರಶಿಯದೊಡನೆ ಸಂಬಂಧಿಕರಾದುದರಿಂದ ಸರ್ವಿಯವು ರಶಿಯದ ಸಾಹಾಯ್ಯವನ್ನು ಬೇಡಿತು. ಅದನ್ನು ನೀಡಲು ರಶಿಯವು ಸೈನ್ಯವನ್ನು ಸಂಗ್ರಹಿಸತೊಡಗಿತು (ಜುಲೈ ೩೧). ಸೈನ್ಯವನ್ನು ಕೂಡಿಸಬಾರದೆಂದು ಜರ್ಮನಿ ರಶಿಯಕ್ಕೆ ರಾಯಸವನ್ನು ಕಳುಹಿತು. ಆದರೆ ಜರ್ಮನಿಯ ಈ ಸೂಚನೆಯಂತೆ ವರ್ತಿಸಲು ರಶಿಯವು ನಿರಾಕರಿಸಿತು. ಆಗ ಆಸ್ಟ್ರಿಯಾ ಮತ್ತು ಜರ್ಮನಿ ರಶಿಯದ ವಿರುದ್ಧವಾಗಿ ಸಂಗ್ರಾಮವನ್ನು ಘೋಷಿಸಿದುವು (೧ ಅಗಸ್ಟ). ರಶಿಯಾ ಮತ್ತು ಫ್ರಾನ್ಸು ಇವುಗಳಲ್ಲಿ ಒಡಂಬಡಿಕೆಯಾಗಿದ್ದಂತೆ ರಶಿಯಕ್ಕೆ ನೆರವಾಗಲು ಫ್ರಾನ್ಸು ತನ್ನ ಶಸ್ತ್ರವನ್ನು ಹಿಡಿಯಿತು (ಅಗಸ್ಟ ೨). ಶೀಘ್ರದಲ್ಲಿ ಫ್ರಾನ್ಸನ್ನು ಸೋಲಿಸಿ ಆ ಮೇಲೆ ರಶಿಯದ ಕಡೆ ಹೊರಳಬೇಕೆಂದು ಜರ್ಮನಿಗೆ ತೋಚಿತು. ಫ್ರಾನ್ಸಿನ ಮೇಲೆ ದಾಳಿಮಾಡಲು ಹೋಗಬೇಕಾದರೆ ಸಮೀಪದ ಮತ್ತು ಸುಲಭವಾದ ಮಾರ್ಗವು ಬೆಲ್ಜಮ್ ದೇಶದೊಳಗಿಂದ ಹೋಗಿತ್ತು. ಅದಕ್ಕಾಗಿ ಬೆಲ್ಜಮಿನ ಸಮ್ಮತಿ ಇರದೆ ಇದ್ದರೂ ಜರ್ಮನಿ ಬೆಲ್ಜಮಿನೊಳಗಿಂದ ತನ್ನ ದಂಡನ್ನು ಮುಂದೆ ದೂಡಿತು. ಬೆಲ್ಜಮಿನ ಇಚ್ಛೆಗೆ ವಿರುದ್ಧವಾಗಿ ಹೀಗೆ ದಂಡನ್ನು ಒಯ್ಯುವುದು ಬೆಲ್ಜಮಿನ ಸ್ವತಂತ್ರತೆಗೆ ಕುಂದಕವೇ ಸೈ, ಆದುದರಿಂದ ಜರ್ಮನಿ ಬೆಲ್ಜಮಿನೊಳಗಿಂದ ತನ್ನ ಸೈನ್ಯವನ್ನು ಹಾಯಿಸಬಾರದೆಂದು ಇಂಗ್ಲಂಡು ಜರ್ಮನಿಗೆ ಸೂಚಿಸಿತು. ಅದನ್ನು ಜರ್ಮನಿ ಎಷ್ಟೂ

ಲಕ್ಷಿಸಲಿಲ್ಲ. ಇಂಗ್ಲಂಡು ಬೆಲ್ಜಮಿನ ಸ್ವತಂತ್ರತೆಗೆ ಹೊಣೆಯಾಗಿತ್ತು. ಆದುದರಿಂದ ಜರ್ಮನಿಯ ಈ ಕೃತ್ಯಕ್ಕಾಗಿ ಇಂಗ್ಲಂಡು ೧೯೧೪ ಅಗಸ್ಟ ೪ನೆಯ ತಾರೀಖಿನ ದಿನ ಜರ್ಮನಿಯ ವಿರುದ್ಧವಾಗಿ ಯುದ್ಧವನ್ನು ಸಾರಿತು. ಇಂತು ಮಹಾ ಯುದ್ಧವು ಪ್ರಾರಂಭವಾಯಿತು.

**ಮಹಾಯುದ್ಧದಲ್ಲಿ ಸೇರಿದ ರಾಷ್ಟ್ರಗಳು ಮತ್ತು ರಣಕ್ಷೇತ್ರಗಳು**— ಹೀಗೆ ಜರ್ಮನಿ ಮತ್ತು ಆಸ್ಟ್ರಿಯಾ ಈ ಶತ್ರುರಾಷ್ಟ್ರಗಳೊಡನೆ ಹೋರಾಡಲು ರಶಿಯಾ, ಫ್ರಾನ್ಸ್, ಸರ್ವಿಯಾ ಮತ್ತು ಇಂಗ್ಲಂಡ್ ಇವು ಸಿದ್ಧವಾದುವು. ಈ ಯುದ್ಧವು ನಡೆದ ಬಳಿಕ ಶತ್ರುಪಕ್ಷಕ್ಕೆ ತುರ್ಕಸ್ತಾನವು (೧೯೧೪ ನವೆಂಬರ) ಮತ್ತು ಬಲ್ಗೇರಿಯಾ (೧೯೧೫ ಅಕ್ಟೋಬರ) ಈ ರಾಷ್ಟ್ರಗಳು ಕೂಡಿದುವು; ಮತ್ತ ಮಿತ್ರರಾಷ್ಟ್ರಗಳಿಗೆ ಬೆಲ್ಜಮ್, ಇಟಲಿ (೧೯೧೫ ಮೇ), ರುಮಾನಿಯಾ (೧೯೧೬) ಮತ್ತು ಅಮೇರಿಕೆ (೧೯೧೭ ಎಪ್ರಿಲ್) ಈ ರಾಷ್ಟ್ರಗಳು ಸೇರಿದುವು. ಇದರಿಂದ ಈ ಸಮರವು ಯುರೋಪದ ಮಟ್ಟಿಗೆ ಮರ್ಯಾದಿತವಾಗಿರದೆ ಅದು ಎಲ್ಲ ಜಗತ್ತಿನಲ್ಲಿ ಹಬ್ಬಿತು. ಯಾವ ಯಾವ ಎಡೆಗಳಲ್ಲಿ ಶತ್ರುರಾಷ್ಟ್ರಗಳ ಮತ್ತು ಮಿತ್ರ ರಾಷ್ಟ್ರಗಳ ಪರಸ್ಪರ ಸಂಬಂಧಗಳು ಉಂಟಾದುವು ಆ ಆ ಎಡೆಗಳಲ್ಲಿ ತಿಕ್ಕಾಟಗಳೂ ಹೋರಾಟಗಳೂ ಮುಂದುವರಿದುವು. ಈ ಯುದ್ಧದ ದೊಡ್ಡ ದೊಡ್ಡ ಕಾಳೆಗ ಗಳು ಕೆಳಗೆ ಕಾಣಿಸಿದ ರಣರಂಗಗಳಲ್ಲಿ ನಡೆದುವು. ಶತ್ರುರಾಷ್ಟ್ರಗಳ **ಪಶ್ಚಿಮ ಸೀಮೆಯಲ್ಲಿ** (Western Front) ಎಂದರೆ ಬೆಲ್ಜಮ್ ಮತ್ತು ಫ್ರಾನ್ಸಿನ ಉತ್ತರಭಾಗಗಳಲ್ಲಿ ಜರ್ಮನ ಸೈನ್ಯಕ್ಕೆ ವಿರುದ್ಧವಾಗಿ ಫ್ರೆಂಚ್ ಮತ್ತು ಇಂಗ್ಲಿಶ್ ಸೇನೆ ಕಾದುತಿತ್ತು. ಶತ್ರುರಾಷ್ಟ್ರಗಳ **ಪೂರ್ವ ಸೀಮೆಯಲ್ಲಿ** (Eastern Front) ಜರ್ಮನಿ ಮತ್ತು ಆಸ್ಟ್ರಿಯನ್ ಸೇನೆಗೆ ವಿರುದ್ಧವಾಗಿ ರಶಿಯನ್ ಸೈನ್ಯವು ಕಾದುತಿತ್ತು. ಸರ್ವಿಯನ್ ಮತ್ತು ಇಟಾಲಿಯನ್ ದಂಡುಗಳು ಆಸ್ಟ್ರಿಯನ್ ಮತ್ತು ಜರ್ಮನ್ ದಂಡುಗಳೊಡನೆ ಕೈ ಕೈ ಮಾಡುತ್ತಿದ್ದುವು. ಇದಲ್ಲದೆ ಡಾರ್ಡಾನೆಲ್ಸ್, ಮೆಸೊಪೊಟೇಮಿಯಾ, ಇಜಿಪ್ತ ಮತ್ತು ಪಲೆಸ್ಟಾಯಿನ್ ಈ ಸ್ಥಳಗಳಲ್ಲಿ ಬ್ರಿಟಿಶ್ ಮತ್ತು ತುರ್ಕಸ್ತಾನದ ದಂಡುಗಳು ಇರಿದಾಡುತ್ತಿದ್ದುವು. ಇದಲ್ಲದೆ ಉತ್ತರ ಸಮುದ್ರದಲ್ಲಿ ಜರ್ಮನ್ ಬ್ರಿಟಿಶ್ ರಣನೌಕೆಗಳಲ್ಲಿ ಜಲ ಯುದ್ಧಗಳು ನಡೆದಿದ್ದುವು. ಆಫ್ರಿಕಾಖಂಡದಲ್ಲಿಯ ಜರ್ಮನ್ ಉಪನಿವೇಶ ಗಳನ್ನು ಕೈವಶಮಾಡಿಕೊಳ್ಳಲು ದಕ್ಷಿಣ ಆಫ್ರಿಕದ ಬ್ರಿಟಿಶ್ ಮತ್ತು ಹಿಂದೀ ಸೈನಿಕರು ಪ್ರಯತ್ನಗಳನ್ನು ನಡೆಯಿಸಿದ್ದರು.

**ಮಹಾಯುದ್ಧವನ್ನು ಕುರಿತು ಇಂಗ್ಲಂಡು ಮಾಡಿದ ವ್ಯವಸ್ಥೆ**—

ಮಹಾಯುದ್ಧವು ಆರಂಭವಾದ ಕಾಲಕ್ಕೆ ಲಿಬರಲ್ ಪಕ್ಷದ **ಅಸ್‌ಕ್ವಿಥನು** ಮುಖ್ಯಮಂತ್ರಿಯಾಗಿದ್ದನು ಮತ್ತು **ಸರ ಎಡ್ವರ್ಡ ಗ್ರೇ** ಈತನು ಪರರಾಷ್ಟ್ರೀಯ ವಿಭಾಗದ ನಾಯಕನಾಗಿದ್ದನು. ಈ ಮಂತ್ರಿಗಳು ಯುದ್ಧವನ್ನು ಯಶಸ್ವಿಯಾಗಿ ಮುಂದುವರಿಸಲು ಬಹುವಾಗಿ ಪ್ರಯತ್ನಪಟ್ಟರು. ಇವರು **ಅರ್ಲ ಹೇಗ್** ಇವನನ್ನು ಬ್ರಿಟಿಶ್ ಸೇನೆಯ ಮುಖ್ಯ ದಂಡಾಧಿಪತಿಯಾಗಿ ನಿಯೋಜಿಸಿದರು. **ಲಾರ್ಡ ಕಿಚನೇರ್** ಇವನನ್ನು ಯುದ್ಧವಿಭಾಗದ ಕಾರ್ಯದರ್ಶಿಯಾಗಿ ನಿಯೋಜಿಸಿ



ಲಾರ್ಡ ಕಿಚನೇರ್ ೧೯೧೪—೧೬.



ಲಾಯಿಡ್ ಜಾರ್ಜ ೧೯೧೬—೨೨.

ಯುದ್ಧಕ್ಕೋಸುಗ ಅವಶ್ಯವಿರುವ ಸೇನೆಯನ್ನು ಕೂಡಿಸುವ ಕೆಲಸವನ್ನು ಆತನಿಗೆ ಒಪ್ಪಿಸಿದರು. **ಅಡ್‌ಮಿರಲ್ ಬೇಟಿ** ಈತನು ಬ್ರಿಟಿಶ್ ಹಡಗುಪಡೆಗೆ ಅಧಿಪತಿಯಾಗಿ ನಿಯುಕ್ತನಾದನು. **ಅಡ್‌ಮಿರಲ್ ಜೆಲಿಕೊ** ಆತನ ಸಹಾಯಕನಾದನು. ಒಳಿಕ ಯುದ್ಧಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಇತರ ಪಕ್ಷಗಳ ಪ್ರಮುಖರು ತನಗೆ ನೆರವಾಗಬೇಕೆಂದು ಬಗೆದು ಅಸ್‌ಕ್ವಿಥನು ೧೯೧೫ರಲ್ಲಿ ಕಾಂಝರ್‌ವೇಟಿವ್ ಮತ್ತು ಕೂಲಿಕಾರ ಪಕ್ಷಗಳ ಪ್ರಮುಖರನ್ನು ತನ್ನ ಮಂತ್ರಿಮಂಡಲದಲ್ಲಿ ಸೇರಿಸಿಕೊಂಡನು. ಆದುದರಿಂದ ಈ ಮಂತ್ರಿಮಂಡಲಕ್ಕೆ **ರಾಷ್ಟ್ರೀಯ ಮಂತ್ರಿಮಂಡಲ** (National Government)ವೆಂದು ಹೆಸರು ಬಂದಿತು. ಈ ಮಂತ್ರಿಮಂಡಲವು ಯುದ್ಧಕ್ಕೆ ಸಾಕಷ್ಟು ಸೈನಿಕರು ದೊರೆಯಬೇಕೆಂದು ೧೯೧೬ ಜಾನೆವರಿಯಲ್ಲಿ ಒತ್ತಾಯದ **ಸೈನ್ಯಸೇವೆಯ ಕಟ್ಟಳೆಯನ್ನು**

(Conscription) ಮಾನ್ಯಮಾಡಿಸಿಕೊಂಡಿತು. ಈ ಮಹಾಯುದ್ಧದಲ್ಲಿ ಇಂಗ್ಲಂಡ್ ಮತ್ತು ಬ್ರಿಟಿಶ್ ಸಾಮ್ರಾಜ್ಯದೊಳಗಿನ ಈತರ ದೇಶಗಳ ಎಂಬತ್ತು ಲಕ್ಷ ಸೈನಿಕರು ಭಾಗಿಗಳಾಗಿದ್ದರು. ಇದಲ್ಲದೆ ಲಕ್ಷಾವಧಿ ಜನರು ಯುದ್ಧ ಸಾಮಗ್ರಿಯನ್ನು ಸಿದ್ಧಪಡಿಸುವುದರಲ್ಲಿ ತೊಡಗಿದ್ದರು. ಈ ಯುದ್ಧದಲ್ಲಿ ಇಂಗ್ಲಂಡಿಗೆ ಬಹಳ ವೆಚ್ಚವು ತಗಲಿತು. ಅದರಿಂದ ಇಂಗ್ಲಂಡಿನ ರಾಷ್ಟ್ರೀಯ ಸಾಲವು ೮೦೦ ಕೋಟಿ ಪೌಂಡಿನಷ್ಟು ಬೆಳೆಯಿತು. ಇದರಲ್ಲಿ ನೂರು ಕೋಟಿ ಪೌಂಡು ಅಮೇರಿಕೆಯಿಂದ ತೆಗೆದುಕೊಂಡ ಸಾಲವಾಗಿತ್ತು.

ಈ ಯುದ್ಧವು ಸಾಗಿರುವಾಗ ಲಾರ್ಡ ಕಿಚನೇರನು ಜಲಮಾರ್ಗದಿಂದ ರಶಿಯದ ಕಡೆಗೆ ಹೋಗುತ್ತಿರುವಾಗ ಆತನ ರಣನೌಕೆ ಜರ್ಮನಿ ಸಮುದ್ರದಲ್ಲಿ ಬಿತ್ತಿದ ಸುರಂಗಗಳಿಗೆ (Mines) ತಾಗಿ ಒಡೆದುಹೋಯಿತು. ಅದರಿಂದ ಲಾರ್ಡ ಕಿಚನೇರನು ಮುಳುಗಿ ಮಡಿದನು. ಬಳಿಕ ಮಂತ್ರಿಮಂಡಲದಲ್ಲಿಯ ಲಿಬರಲ್ ಪಕ್ಷದ ಒಬ್ಬ ಮುಖ್ಯ ಮಂತ್ರಿಯಾದ ಲಾಯಿಡ್ ಜಾರ್ಜನು ಯುದ್ಧ ವಿಭಾಗದ ಕಾರ್ಯದರ್ಶಿಯಾಗಿ ನಿಯೋಜಿಸಲ್ಪಟ್ಟನು (೧೯೧೬).

ಈ ಮಹಾಯುದ್ಧವು ಬಹುಕಾಲ ಸಾಗಿತು. ಆಗ ಇದನ್ನು ಯಶಸ್ವಿಯಾಗಿ ಕೊನೆಗಾಣಿಸಲು ಇನ್ನೂ ಕೆಲವು ವಿಷಯಗಳನ್ನು ಏರ್ಪಡಿಸುವುದು ಅವಶ್ಯವಿದೆಂದು ಲಾಯಿಡ್ ಜಾರ್ಜನು ಅಸ್‌ಕ್ವಿಥನಿಗೆ ಸೂಚಿಸಿದನು. ಇದರಲ್ಲಿ ಆತನಿಗೆ ಮಿಕ್ಕ ಮಂತ್ರಿಗಳು ಬೆಂಬಲವಾಗಿದ್ದರು. ಆದರೆ ಈ ಸಂದರ್ಭದಲ್ಲಿ ಅಸ್‌ಕ್ವಿಥ್ ಮತ್ತು ಲಾಯಿಡ್ ಜಾರ್ಜ ಇವರಲ್ಲಿ ಮತಭೇದವಾಯಿತು. ಅದಕ್ಕಾಗಿ ಆಸ್‌ಕ್ವಿಥನು ತನ್ನ ಮುಖ್ಯ ಮಂತ್ರಿಪದಕ್ಕೆ ತ್ಯಾಗಪತ್ರವನ್ನು ಕೊಟ್ಟನು (೧೯೧೬). ಬಳಿಕ ಮುಖ್ಯಮಂತ್ರಿಯ ಸೂತ್ರಗಳು ಲಾಯಿಡ್ ಜಾರ್ಜನ ಕೈಯಲ್ಲಿ ಬಂದುವು (೧೯೧೭).

ಲಾಯಿಡ್ ಜಾರ್ಜನು ಮುಖ್ಯಮಂತ್ರಿಯಾದ ಮೇಲೆ ಯುದ್ಧಕ್ಕೆ ಸಂಬಂಧಪಟ್ಟ ಎಲ್ಲ ವ್ಯವಸ್ಥೆ ತ್ವರೆಯಿಂದ ನಡೆಯಬೇಕೆಂದು ಐದು ಮಂತ್ರಿಗಳ ಒಂದು ವಿಶಿಷ್ಟ "ಸಂಗ್ರಾಮ ಸಮಿತಿ"ಯನ್ನು ನಿರ್ಮಿಸಿದನು. ಅವರ ಕಡೆಗೆ ಯುದ್ಧಕ್ಕೆ ಸಂಬಂಧಪಟ್ಟ ಎಲ್ಲ ಕೆಲಸವು ಒಪ್ಪಿಸಲಾಯಿತು. ಇದಲ್ಲದೆ ಯುದ್ಧದ ನೀತಿ ಯೋಗ್ಯವಾಗಿ ಯೋಜಿಸಲ್ಪಡಬೇಕೆಂಬ ಉದ್ದೇಶದಿಂದ ಯುದ್ಧದ ವಿಷಯಗಳಲ್ಲಿ ತಜ್ಞರಾದ ಜನರದೊಂದು ಸಮಿತಿ ಲಂಡನಿನಲ್ಲಿ ಸ್ಥಾಪಿಸಲ್ಪಟ್ಟಿತು. ಈ ಮಂಡಲದ ವಿಚಾರದಂತೆ ಯುದ್ಧಸಾಮಗ್ರಿ ಸಾಕಷ್ಟು ಹುಟ್ಟಿ ಯುದ್ಧದಲ್ಲಿ ತೊಡಗಿರುವ ಸೈನಿಕರಿಗೆ ಅವಶ್ಯವಿರುವ ಎಲ್ಲ ವಸ್ತುಗಳು ವಿಪುಲ

ವಾಗಿ ದೊರೆಯಬೇಕೆಂಬ ಉದ್ದೇಶದಿಂದ ಬೇರೆ ಬೇರೆ ವಿಭಾಗಗಳನ್ನು ನಿರ್ಮಿಸಲಾಯಿತು.

**ಮಹಾಯುದ್ಧದಲ್ಲಿ ಸ್ತ್ರೀಯರು ಕೈಕೊಂಡ ಕಾರ್ಯಗಳು**—ಈ ಮಹಾಯುದ್ಧದಲ್ಲಿ ಗ್ರೇಟ ಬ್ರಿಟನಿನ ಹತ್ತು ಲಕ್ಷ ಜನರು ಕೊಲ್ಲಲ್ಪಟ್ಟರು. ಆದುದರಿಂದ ಯುದ್ಧವು ನಡೆದಿರುವಾಗ ಸಾವಿರಾರು ಸ್ತ್ರೀಯರು ಶುಶ್ರೂಷಿಕೆಯರಾದರು, ಅನೇಕರು ಪೋಸ್ಟಮೆನರ ಕೆಲಸವನ್ನು ಕೈಕೊಂಡರು, ಟ್ರಾಮ್ ಗಾಡಿಗಳನ್ನೂ ಮೋಟಾರುಗಳನ್ನೂ ನಡೆಯಿಸುವುದರಲ್ಲಿ ಕೆಲವರು ತೊಡಗಿದರು, ಹಲವರು ಯುದ್ಧಸಾಮಗ್ರಿಗಳನ್ನು ಸಿದ್ಧಗೊಳಿಸುವ ಕಾರಖಾನೆಗಳಲ್ಲಿ ಕೆಲಸ ಮಾಡಲು ಹೋದರು. ಸ್ತ್ರೀಯರು ಹೀಗೆ ಮುಂದೆ ಬಂದುದರಿಂದ ಇಂಗ್ಲಂಡಿನ ಪುರುಷರು ರಣಕ್ಷೇತ್ರಕ್ಕೆ ತೆರಳುವುದು ಸಾಧ್ಯವಾಯಿತು.

## ಪಶ್ಚಿಮ ರಣಾಂಗಣ.

**ಮಾರ್ನದ ಕಾಳಗ, ೬-೧೦ ಸಪ್ಟೆಂಬರ ೧೯೧೪**—ಈ ಮಹಾಯುದ್ಧವು ಆರಂಭವಾದೊಡನೆ ಫ್ರಾನ್ಸಿನ ಉತ್ತರ ಮತ್ತು ಈಶಾನ್ಯ ದಿಕ್ಕಿಗೆ ಭದ್ರವಾದ ಕೋಟೆಗಳ ಸಾಲು ನೆಲಸಿದ್ದರಿಂದ ಬೆಲ್ಜಮಿನೊಳಗಿಂದ ಫ್ರಾನ್ಸಿನ ಮೇಲೆ ದಾಳಿ ಮಾಡಿದರೆ ಫ್ರೆಂಚ ಸೈನ್ಯವನ್ನು ಸೋಲಿಸುವುದು ಸಾಧ್ಯವಾಗಬಹುದೆಂದು ಯೋಚಿಸಿ ಜರ್ಮನಿ ಬೆಲ್ಜಮಿನ ಜನರ ಇಚ್ಛೆಯ ವಿರುದ್ಧವಾಗಿ ತನ್ನ ಸೇನೆಯನ್ನು ಫ್ರಾನ್ಸಿನ ಸೀಮೆಯ ಕಡೆಗೆ ನಡೆಯಿಸಿತು. ಜರ್ಮನ್ ಸೇನೆಯ ಪ್ರಚಂಡವಾದ ಈ ಪ್ರವಾಹವನ್ನು ತಡೆಗಟ್ಟಲು ಬೆಲ್ಜಮಿನ ಜನರು ಪ್ರಯತ್ನಿಸಿದರು. ಆದರೆ ಅವರಿಗೆ ಯಶಸ್ಸು ದೊರೆಯಲಿಲ್ಲ. ಜರ್ಮನ್ ಸೈನ್ಯವು ಫ್ರಾನ್ಸಿನ ಮಾರ್ನ್ ಹೊಳೆಯವರೆಗೆ ನುಗ್ಗಿ ಪ್ಯಾರಿಸಿನ ಕಡೆಗೆ ಹೊರಳಿ ಮುಂದೆ ಸಾಗಿತು. ಶತ್ರುಸೇನೆ ಪ್ಯಾರಿಸಿನ ಬಳಿಗೆ ಬರುವುದನ್ನು ನೋಡಿ ಫ್ರೆಂಚ್ ಸರಕಾರವು ದಕ್ಷಿಣಕ್ಕೆ ಬೋರ್ಡೋ ಎಂಬ ಪಟ್ಟಣಕ್ಕೆ ತನ್ನ ಸ್ಥಳವನ್ನು ಕಿತ್ತುಕೊಂಡು ಹೋಯಿತು. ಪ್ಯಾರಿಸಿನ ಸಂರಕ್ಷಣೆಗೆ ದೊಡ್ಡದಾದ ದಂಡು ಸಜ್ಜಾಗಿ ಇರಿಸಲಾಯಿತು. ಇದೇ ಹೊತ್ತಿಗೆ ಇಂಗ್ಲಿಶ್ ಸೈನ್ಯವು ಫ್ರೆಂಚರ ಸಾಹಾಯ್ಯಕ್ಕೆ ಬಂದು ಒದಗಿತು. ಮಿತ್ರರಾಷ್ಟ್ರಗಳ ಈ ಸಂಯುಕ್ತ ಸೇನೆಗಳು ಬಹಳ ಆವೇಶದಿಂದ ಹಗೆಯ ಮೇಲೆ ಏರಾಟವನ್ನು ಹೂಡಿದುವು. ಮಾರ್ನ (Marne) ಹೊಳೆಯ ಸಮೀಪದಲ್ಲಿ ನಡೆದ ಕಾಳೆಗದಲ್ಲಿ (೬-೧೦ ಸಪ್ಟೆಂಬರ ೧೯೧೪) ಜರ್ಮನ ಸೇನೆ ಸೋತಿತು. ಬಳಿಕ ಅದು ಹಿಂದೆಗೆದು ಏನ್ (Aisne) ಹೊಳೆಯ ಸಮೀಪಕ್ಕೆ ತನ್ನ ಪಾಳ್ಯ

ವನ್ನು ಊರಿತು. ಪ್ಯಾರಿಸ ಪಟ್ಟಣವನ್ನು ತೆಗೆದುಕೊಳ್ಳಬೇಕೆಂಬ ಜರ್ಮನ ಸೇನೆಯ ಹೊಂಚು ಈ ಮೇರೆಗೆ ಹುಸಿಯಾದ ಮೇಲೆ ಡೋವರ ಸಾಮುದ್ರಧುನಿಯ ನೆರೆಯ ಬೆಲ್ಜಿಯಮಿನ ಎಲ್ಲ ಪ್ರದೇಶವನ್ನು ಮತ್ತು ಕಲೆ ಬಂದರವನ್ನು ತನ್ನ ಅಂಕೆಯಲ್ಲಿ ತರಲು ಜರ್ಮನ ಸೇನೆ ಪ್ರಯತ್ನಿಸಿತು. ಆದರೆ ಈ ವಿಷಯದಲ್ಲಿಯೂ ಮಿತ್ರರಾಷ್ಟ್ರಗಳು ವಿರೋಧಿಸಿದುದರಿಂದ ಸಮುದ್ರದ ದಂಡೆಯ ವರೆಗೆ ಬರುವುದು ಸಾಧ್ಯವಾಗಲಿಲ್ಲ. ಕಲೆಯ ದಾರಿಯಲ್ಲಿರುವ ಬೆಲ್ಜಿಯಮಿನ ಎಪ್ರ (Apre) ಎಂಬ ಸ್ಥಳವನ್ನು ಗೆದ್ದುಕೊಳ್ಳಲು ಜರ್ಮನಿ ವಿಶ್ವಪ್ರಯತ್ನಮಾಡಿತು (ಅಕ್ಟೋಬರ ೧೯೧೪). ಆದರೆ ಅದಕ್ಕೆ ಜಯವು ದೊರೆಯಲಿಲ್ಲ.

ಈ ಕಾಳೆಗದಲ್ಲಿ ಮಿತ್ರರಾಷ್ಟ್ರಗಳ ಮತ್ತು ಜರ್ಮನಿಯ ಎರಡೂ ಸೇನೆಗಳಲ್ಲಿ ಬಹಳವಾಗಿ ಜನಹಿಂಸೆಯಾಯಿತು. ಫ್ರಾನ್ಸಿನ ಮೇಲೆ ಒಮ್ಮಿಂದೊಮ್ಮೆ ದಾಳಿ ಮಾಡಿ ಫ್ರೆಂಚ ಸೇನೆಯನ್ನು ಸೋಲಿಸಿ ಫ್ರಾನ್ಸಿನ ದಂಡಯಾತ್ರೆಯನ್ನು ೨|೩ ತಿಂಗಳುಗಳಲ್ಲಿ ಮುಗಿಸಿಬಿಟ್ಟರೆ ತನಗೆ ಪೂರ್ವ ಸೀಮೆಯತ್ತ ರಶಿಯದ ಕಡೆಗೆ ಪೂರ್ಣವಾಗಿ ಲಕ್ಷ್ಯವನ್ನು ಕೊಡಲು ಅನುಕೂಲವಾಗುವುದೆಂದು ಜರ್ಮನಿ ಬಗೆದಿದ್ದಿತು. ಆದರೆ ಮಿತ್ರರಾಷ್ಟ್ರಗಳ ಸೇನೆಯ ಪರಾಕ್ರಮದ ಮತ್ತು ದೀರ್ಘ ಪ್ರಯತ್ನದ ಮೂಲಕವಾಗಿ ಜರ್ಮನ್ ಸೇನೆಗೆ ಫ್ರಾನ್ಸಿನಲ್ಲಿ ನುಗ್ಗುವುದು ಸಾಧ್ಯವಾಗಲಿಲ್ಲ; ಡೋವರ್ ಸಾಮುದ್ರಧುನಿಯ ನೆರೆಯ ಪ್ರದೇಶವನ್ನಾದರೂ ಸ್ವಾಧೀನಪಡಿಸುವುದು ಶಕ್ಯವಾಗಲಿಲ್ಲ. ಆದುದರಿಂದ ಫ್ರಾನ್ಸಿನ ಉತ್ತರ ಸೀಮೆಯ ಮೇಲೆಯೇ ಕಂದಕವನ್ನು ಅಗಿದು ಅದರ ಆಶ್ರಯದಲ್ಲಿ ಜರ್ಮನ್ ಸೇನೆ ಇರಬೇಕಾಯಿತು.

ಮುಂದೆ ಚಳಿಗಾಲವು ಮುಗಿದ ಬಳಿಕ ಎಪ್ರವನ್ನು ವಶಪಡಿಸಲು ಜರ್ಮನ್ ಸೇನೆ ಮತ್ತೆ ಕಟ್ಟಿನ ಸಾಹಸವನ್ನು ಎಸಗಿತು (೧೯೧೫ ಎಪ್ರಿಲ ೨೨ರಿಂದ ಮೇ ೧೩). ಆದರೆ ಈ ಪ್ರಯತ್ನವು ನಿಷ್ಫಲವಾಗಿ ಸಮುದ್ರತೀರವು ಅದಕ್ಕೆ ನಿಲುಕದಾಯಿತು. ಆಂತರರಾಷ್ಟ್ರೀಯ ಕಟ್ಟಳೆಯಂತೆ ಕಾಳೆಗದಲ್ಲಿ ವಿಷದ ಹೊಗೆಯನ್ನು ಉಪಯೋಗಿಸಬಾರದೆಂದು ಗೊತ್ತುಪಡಿಸಲಾಗಿತ್ತು. ಆದರೂ ಈ ಯುದ್ಧದಲ್ಲಿ ಜರ್ಮನಿ ವಿಷದ ಹೊಗೆಯನ್ನು ಉಪಯೋಗಿಸಿತು. ಅದರಿಂದ ಬಹಳ ಮನುಷ್ಯಸಂಹಾರವಾಯಿತು. ಅದಕ್ಕಾಗಿ ಮಿತ್ರರಾಷ್ಟ್ರಗಳಾದರೂ ಏಟಿಗೆ ಏಟು ಎಂಬಂತೆ ಅದೇ ಮಾರ್ಗವನ್ನು ಕೈಕೊಳ್ಳಬೇಕಾಯಿತು. ಈ ಕಾಳೆಗದಲ್ಲಿ ಲಾರ್ಡ್ ಕಿಚನೇರನ ನೇತೃತ್ವದಲ್ಲಿ ಸಜ್ಜುಗೊಳಿಸಿದ ಸೈನ್ಯದ ಕೆಲವು ಪಥಕಗಳು ಪಶ್ಚಿಮ ರಣಾಂಗಣಕ್ಕೆ ಬಂದಿದ್ದುವು. ಇದಲ್ಲದೆ ಯುದ್ಧಸಾಮಗ್ರಿಯನ್ನು ಪೂರೈಸುವ ಮಂತ್ರಿಯಾದ ಲಾಯಿಡ್ ಜಾರ್ಜನ ನಾಯಕತ್ವದಲ್ಲಿ

ಮದ್ದು ಗುಂಡು ಮತ್ತು ಬೇರೆ ಯುದ್ಧಸಾಮಗ್ರಿ ವಿಪುಲವಾಗಿ ಮಿತ್ರರಾಷ್ಟ್ರ ಗಳಿಗೆ ದೊರೆಯಲು ಆರಂಭವಾಗಿತ್ತು. ಪರಿಸ್ ಮತ್ತು ಡೋವರದ ಕಡೆಗೆ ನುಗ್ಗಲು ಬಯಸಿದ ಜರ್ಮನ ಸೇನೆಯ ಪ್ರಚಂಡವಾದ ಪ್ರವಾಹವನ್ನು ತಡೆ ಗಟ್ಟಿದ ಬಳಿಕ ಮಿತ್ರರಾಷ್ಟ್ರಗಳ ಸೇನೆಯಾದರೂ ದೊಡ್ಡ ದೊಡ್ಡ ತಗ್ಗುಗಳನ್ನು ತೋಡಿಕೊಂಡು ಹೊಂಚುಹಾಕಿಕೊಂಡು ಕುಳಿತಿತು.

**ವರ್ಡೂನ್ ಮತ್ತು ಸಾಮೆ** (Somme) **ಎಂಬಲ್ಲಿಯ ಕಾಳಗಗಳು,** (೧೯೧೬)—ಈ ಮೇರೆಗೆ ಶತ್ರುರಾಷ್ಟ್ರಗಳ ಮತ್ತು ಮಿತ್ರರಾಷ್ಟ್ರಗಳ ಸೈನ್ಯಗಳು ಪಶ್ಚಿಮದಲ್ಲಿ ಉತ್ತರ ಸಮುದ್ರದಿಂದ ಪೂರ್ವದಲ್ಲಿ ಸ್ವಿಝರ್ಲಂಡಿನ ವರೆಗಿನ ೪೦೦ ಮೈಲುಗಳ ಪ್ರದೇಶದಲ್ಲಿ ಅಲ್ಲಲ್ಲಿ ದೊಡ್ಡ ದೊಡ್ಡ ತಗ್ಗುಗಳನ್ನು ಅಗಿದುಕೊಂಡು ೧೯೧೪ ನವೆಂಬರದಿಂದ ೧೯೧೮ ಮಾರ್ಚದ ವರೆಗೆ ಕಾದುಕೊಂಡಿದ್ದವು. ಹೀಗಿರಲು ಅತ್ತ ಪೂರ್ವದಲ್ಲಿ ಫ್ರೆಂಚರ ವರ್ಡೂನ ಎಂಬ ಭದ್ರವಾದ ಕೋಟೆಯನ್ನು ಕಿತ್ತು ಕೊಂಡು ಆ ಕಡೆಯಿಂದ ಫ್ರೆಂಚ ಸೇನೆಯ ಸಾಲನ್ನು ಮುರಿದು ಫ್ರಾನ್ಸಿನಲ್ಲಿ ನುಗ್ಗಲು ಜರ್ಮನಿ ಕಠೋರವಾದ ಸಾಹಸವನ್ನು ಮಾಡಿತು (೧೯೧೬ ಮಾರ್ಚ ದಿಂದ ಜೂನ). ಆದರೆ ಫ್ರೆಂಚರ ಮುಖ್ಯ ಸೇನಾಪತಿ **ಮಾರ್ಶಲ್ ಫಾಕ್** ಈತನ ನಾಯಕತ್ವದಲ್ಲಿ ಫ್ರೆಂಚ್ ಸೇನೆ ಜರ್ಮನ್ ಸೇನೆಯನ್ನು ಬಲವಾಗಿ ವಿರೋ ಧಿಸಿದುದರಿಂದ ಜರ್ಮನಿ ಈ ಪ್ರಯತ್ನವನ್ನಾದರೂ ಬಿಡಬೇಕಾಯಿತು. ಬಳಿಕ ಇಂಗ್ಲಿಶ್ ಮುಖ್ಯ ಸೇನಾಪತಿ **ಸರ್ ಡಗಲಸ್ ಹೇಗ್** ಈತನ ಆಧಿಪತ್ಯದಲ್ಲಿ ಇಂಗ್ಲಿಶ್ ಸೇನೆ ಪಶ್ಚಿಮ ಭಾಗದಲ್ಲಿ ಸಾಮೆ ಹೊಳೆಯ ಹತ್ತರ ಜರ್ಮನ್ ಸೇನೆ ಯನ್ನು ಮುರಿಬಡಿಯಲು ಅತಿಶಯವಾಗಿ ಪ್ರಯತ್ನಿಸಿತು (೧೯೧೬ ಜೂಲೈ). ಆದರೆ ಈ ಪ್ರಯತ್ನವು ಅಷ್ಟೊಂದು ಯಶಸ್ವಿಯಾಗಲಿಲ್ಲ. ಸಾಮೆ ಯುದ್ಧ ದಲ್ಲಿ ಇಂಗ್ಲಿಶರು ಮೊದಲ ಬಾರಿ ಕವಚಯುಕ್ತ ಮೋಟಾರುಗಳನ್ನು (Tank) ಉಪಯೋಗಿಸಿದರು. ವರ್ಡೂನ ಮತ್ತು ಸಾಮೆಯ ಕಾಳಗಗಳಲ್ಲಿ ಉಭಯ ಸೇನೆಗಳು ಬಹಳ ಪ್ರಾಣಹಾನಿಗೆ ಗುರಿಯಾದುವು. ೧೯೧೬ ಜಾನೆವರಿಯಲ್ಲಿ ಇಂಗ್ಲಂಡು 'ಒತ್ತಾಯದ ಸೈನ್ಯಸೇವೆಯ ಕಟ್ಟಳೆ'ಯನ್ನು ಸ್ವೀಕರಿಸಿದುದರಿಂದ ಯುದ್ಧಕ್ಕೆ ಸಾಲುವಷ್ಟು ಸೈನಿಕರನ್ನು ಕಳುಹಲು ಅದಕ್ಕೆ ಶಕ್ಯವಾಯ್ತು.

## ಪೂರ್ವ ರಣಾಂಗಣ.

**ವ್ಹಾನ್ ಹಿಂಡೆನ್‌ಬರ್ಗನು ರಶಿಯನ್ ಸೇನೆಯನ್ನು ಸೋಲಿಸು ವನು** (೧೯೧೪-೧೫)—ಮಹಾಯುದ್ಧವು ಪ್ರಾರಂಭವಾದ ಬಳಿಕ ರಶಿ

ಯನ್ ಸೇನೆ ಆಸ್ಟ್ರಿಯದ ಮೇಲೆ ದಾಳಿ ಮಾಡಿ ಅದನ್ನು ಅನೇಕ ಕಡೆಯಲ್ಲಿ ಸೋಲಿಸಿತು (೧೯೧೪). ಮುಂದೆ ರಶಿಯನ್ ಸೇನೆ ಪ್ರಶಿಯದ ಪೂರ್ವ ಭಾಗ ದಲ್ಲಿ ನುಗ್ಗಿತು. ರಶಿಯನ್ ಸೈನ್ಯದ ಬಲವಾದ ಏರಾಟಕ್ಕೆ ಪ್ರಶಿಯನ್ ಸೈನ್ಯವು ಹಿಂದಿರುಗಬೇಕಾಯಿತು. ಅನಂತರ ರಶಿಯನ್ ಸೇನೆ ಜರ್ಮನಿಯ ರಾಜಧಾನಿಯಾದ ಬರ್ಲಿನ್ ನಗರಿಯನ್ನು ತೆಗೆದುಕೊಳ್ಳಲು ಹೊರಟಿತು. ಜರ್ಮನಿಯ ಮೇಲೆ ಒದಗಿದ ಈ ಗಂಡಾಂತರವನ್ನು ಕಂಡು ಜರ್ಮನಿಯ ಮುಖ್ಯ ಸೇನಾಪತಿ **ವ್ಹಾನ್ ಹಿಂಡೆನ್‌ಬರ್ಗನು** ಬರ್ಲಿನಿನ ರಕ್ಷಣೆಗೋಸುಗ ಪೂರ್ಣ ಸಿದ್ಧತೆಯನ್ನು ಮಾಡಿದನು. ತನ್ನ ಕೈಕೆಳಗಿನ ದಂಡಿನ ಸಾಹಾಯ್ಯಕ್ಕೆ ಪಶ್ಚಿಮ ರಣಾಂಗಣಕ್ಕೆ ಫ್ರೆಂಚ್ ಮತ್ತು ಇಂಗ್ಲಿಶ್ ಸೈನ್ಯದೊಡನೆ ಕಾದಲು ಹೊರಟಿರುವ ಕೆಲವು ದಳಗಳನ್ನು ತಿರುಗಿ ಕರೆಯಿಸಿದನು. ಆ ಮೇಲೆ ಈತನು ಬರ್ಲಿನಿನ ಕಡೆಗೆ ಸಾಗಿಬರುತ್ತಿರುವ ರಶಿಯನ್ ಸೈನ್ಯದ ಮೇಲೆ ಬಲವಾದ ಏರಾಟವನ್ನು ಹೂಡಿ **ಟನೆನ್‌ಬರ್ಗ್** ಎಂಬಲ್ಲಿ ರಶಿಯನ್ ಸೇನೆಯನ್ನು ಪೂರ್ತಿಯಾಗಿ ಪರಾಭವಗೊಳಿಸಿದನು (೧೯೧೪ ಅಗಸ್ಟ). ಮುಂದೆ ಹಿಂಡೆನ್‌ಬರ್ಗನು ರಶಿಯನ್ ಸೇನೆಯನ್ನು ಬೆಂಬತ್ತಿ ಅದನ್ನು ರಶಿಯದ ಪೂರ್ವಭಾಗದಿಂದ ಹೊರದೂಡಿದನು ಮತ್ತು ರಶಿಯದ ವಶದಲ್ಲಿರುವ ಪೋಲಂಡ್ ಮತ್ತು ಬಾಲ್ಟಿಕ್ ಸಮುದ್ರದ ಬಳಿಯ ಪ್ರದೇಶದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದನು (೧೯೧೫).



ವ್ಹಾನ್ ಹಿಂಡೆನ್‌ಬರ್ಗ.

**ಜನರಲ್ ಮೆಕೆನ್‌ಸನ್** ಈತನು ಆಸ್ಟ್ರಿಯದಲ್ಲಿ ರಶಿಯನ್ ಸೇನೆಯನ್ನು ಸೋಲಿಸುವನು—ಅತ್ತ ಆಸ್ಟ್ರಿಯದಲ್ಲಿ ನೆಲಸಿರುವ ರಶಿಯನ್ ಸೇನೆ ಆಸ್ಟ್ರಿಯವನ್ನು ಸೋಲಿಸಿ ಆಸ್ಟ್ರಿಯದ ಉತ್ತರ ಭಾಗದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿತು (೧೯೧೪). ರಶಿಯವು ಸಂಪಾದಿಸಿದ ಈ ವಿಜಯದಿಂದ ಸರ್ವಿಯಾ ದೇಶವು ಪ್ರೋತ್ಸಾಹಗೊಂಡಿತು, ಮತ್ತು ಸರ್ವಿಯನ್ ಸೇನೆ ಆಸ್ಟ್ರಿಯನ್ ಸೇನೆಯನ್ನು ಸರ್ವಿಯದಿಂದ ಹೊರನೂಕಿತು (೧೯೧೫). ಇದೇ ಕಾಲಕ್ಕೆ ಇಟಲಿ

ಶತ್ರುರಾಷ್ಟ್ರಗಳನ್ನು ಕೂಡದೆ ಮಿತ್ರರಾಷ್ಟ್ರಗಳ ಪರವಾಗಿ ಯುದ್ಧದಲ್ಲಿ ಸೇರಿತು (೧೯೧೫ ಮೇ). ಆದುದರಿಂದ ಆಸ್ಟ್ರಿಯವು ಇಟಲಿಯನ್ನು ಇದಿರಿಸಲು ತನ್ನ ದಕ್ಷಿಣ ಸೀಮೆಯ ಕಡೆಗೆ ಲಕ್ಷ್ಯವನ್ನು ಕೊಡಬೇಕಾಯಿತು. ಇಂತಹ ಬಿಕ್ಕಟ್ಟಿನ ಸ್ಥಿತಿಯಲ್ಲಿ ಜರ್ಮನ್ ಸೇನೆಗೆ ನಾಯಕನಾದ **ಜನರಲ್ ಮಕೆನ್‌ಸನನು** ಆಸ್ಟ್ರಿಯದ ನೆರವಿಗೆ ಬಂದನು (೧೯೧೫). ಆತನು ರಶಿಯನ್ ಸೇನೆಯ ಮೇಲೆ ಆವೇಶದ ಏರಾಟವನ್ನು ಹೂಡಿ ಅದನ್ನು ಪರಾಭವಗೊಳಿಸಿ ಆಸ್ಟ್ರಿಯದಿಂದ ಹೊರದೂಡಿದನು (೧೯೧೫ ಅಕ್ಟೋಬರ). ರಶಿಯನ್ ಸೇನೆ ಸೋತ ಬಳಿಕ ಬಲ್ಗೇರಿಯವು ಶತ್ರುರಾಷ್ಟ್ರಗಳನ್ನು ಕೂಡಿತು. ಅದು ಸರ್ವಿಯದ ಮೇಲೆ ದಾಳಿಮಾಡಿ ತನ್ನ ಹೆಚ್ಚಳವನ್ನು ಬೀರಿತು. ತುರ್ಕಸ್ತಾನವು ೧೯೧೪ ನವೆಂಬರ ತಿಂಗಳಲ್ಲಿಯೇ ಶತ್ರುರಾಷ್ಟ್ರಗಳನ್ನು ಸೇರಿದುದರಿಂದ ಕಾನ್‌ಸ್ಟಾಂಟಿನೋಪಲಿನೊಳಗಿನ ಮಾರ್ಗವು ಜರ್ಮನಿಗೆ ನಿರಾತಂಕವಾಯಿತು.

ಡಾರ್ಡಾನೆಲ್ಸ ಸಾಮುದ್ರಧುನಿಯ ಮಾರ್ಗವಾಗಿ ರಶಿಯಕ್ಕೆ ಸಾಹಾಯ್ಯವಾಗಲು ಇಂಗ್ಲಂಡು ಬಹುವಾಗಿ ಸಾಹಸಪಟ್ಟಿತು (೧೯೧೫ ಮಾರ್ಚ). ಇದರಲ್ಲಿ ಬ್ರಿಟಿಶ್ ಸೇನೆ ಬಹಳ ಪ್ರಾಣಹಾನಿಗೆ ಗುರಿಯಾಯಿತು, ಆದರೆ ತುರ್ಕಸ್ತಾನದ ಇದಿರಿನಲ್ಲಿ ಇಂಗ್ಲಂಡಿಗೆ ನಿಲ್ಲಲಾಗಲಿಲ್ಲ; ಅದು ಸೋತಿತು.

ರಶಿಯನ್ ಸೇನೆ ಆಸ್ಟ್ರಿಯದಲ್ಲಿ ಸೋತುಹೋಗಿದ್ದರೂ ಅದು ಮತ್ತೆ ಪ್ರಯತ್ನಶೀಲವಾಗಿ ಆಸ್ಟ್ರಿಯದ ಸಾಮ್ರಾಜ್ಯದೊಳಗಿನ ಹಂಗೇರಿ ಪ್ರಾಂತದ ಮೇಲೆ ಏರಿಹೋಯ್ತು (೧೯೧೬). ಇದೇ ಹೊತ್ತಿಗೆ ರುಮಾನಿಯವು ಮಿತ್ರರಾಷ್ಟ್ರಗಳನ್ನು ಕೂಡಿ ರಶಿಯನ್ ಸೇನೆಗೆ ಸಾಹಾಯ್ಯಮಾಡಿತು (೧೯೧೬ ಅಗಸ್ಟ). ಅದರಿಂದ ಹಂಗೇರಿ ರಶಿಯದ ವಶಕ್ಕೆ ಬರುವ ಲಕ್ಷಣವು ತೋರಿತು. ಆದರೆ ಜನರಲ್ ಮಕೆನ್‌ಸನ್ ಈತನ ನೇತೃತ್ವದಲ್ಲಿರುವ ಜರ್ಮನ್ ಮತ್ತು ಆಸ್ಟ್ರಿಯನ್ ಸೈನ್ಯಗಳು ರಶಿಯನ್ ಸೇನೆಯನ್ನು ಮುತ್ತಿ ರಶಿಯನ್ ಮತ್ತು ರುಮಾನಿಯನ್ ದಂಡುಗಳನ್ನು ಪೂರ್ತಿಯಾಗಿ ಸೋಲಿಸಿ ಅವನ್ನು ಹಂಗೇರಿಯಿಂದ ಹೊರಗೆ ಅಟ್ಟಿದುವು.

**ರಶಿಯದ ರಾಜ್ಯಕ್ರಾಂತಿ (೧೯೧೭)**—೧೯೧೭ ಮಾರ್ಚ ತಿಂಗಳಲ್ಲಿ ರಶಿಯದಲ್ಲಿ ರಾಜ್ಯಕ್ರಾಂತಿಯಾಯಿತು. ಅಲ್ಲಿಯ ಅರಸನಿಗೆ ಅನಿಯಂತ್ರಿತವಾದ ಸತ್ತೆಯಿದ್ದು ರಶಿಯನ್ ಪ್ರಜೆಗಳಿಗೆ ಯಾವ ಹಕ್ಕುಗಳೂ ಇದ್ದಿರಲಿಲ್ಲ. ಆದುದರಿಂದ ಅಲ್ಲಿ ಅನೇಕ ವರ್ಷಗಳಿಂದ ಅಶಾಂತಿ ನೆಲೆಗೊಂಡು ಅರಸನ ವಿರುದ್ಧವಾಗಿ ಗುಪ್ತ

ವಾದ ಒಳಸಂಚುಗಳು ನಡೆದಿದ್ದುವು. ಜರ್ಮನಿ ಮತ್ತು ಆಸ್ಟ್ರಿಯಾ ಇವುಗಳೊಡನೆ ನಡೆದ ಸಂಗ್ರಾಮದಲ್ಲಿ ಅನೇಕ ಎಡೆಗಳಲ್ಲಿ ರಶಿಯನ್ ಸೇನೆ ಸೋತುದನ್ನು ಕಂಡು ಅಲ್ಲಿಯ ಕ್ರಾಂತಿಕಾರಕ ಜನರು ರಾಜ್ಯಕ್ರಾಂತಿಯನ್ನು ಉಂಟುಮಾಡಿದರು. ರಶಿಯದ ಸವ್ರಾಟನಾದ **ಝೂರ್ ೨ನೆಯ ನಿಕೋಲಸ್** ಈತನನ್ನು ಪಟ್ಟದಿಂದ ತಳ್ಳಿ ಅವರು ಎಲ್ಲ ಅಧಿಕಾರವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡರು ಮತ್ತು ರಶಿಯದ ಆಡಳಿತೆ 'ಲೋಕಸತ್ತಾತ್ಮಕ'ವಾಯ್ತೆಂದು ಸಾರಿದರು. ಮೆಲ್ಲಮೆಲ್ಲನೆ **ಬೋಲ್‌ಶೇವಿಕ್** ಪಂಗಡದವರ (ಉಗ್ರಕ್ರಾಂತಿಕಾರಕರ) ಕೈಯಲ್ಲಿ ಎಲ್ಲ ಅಧಿಕಾರವು ಹೋಯಿತು (೧೯೧೭ ನವೆಂಬರ). ಅವರು ಜರ್ಮನಿ ಮತ್ತು ಆಸ್ಟ್ರಿಯಗಳೊಡನೆ ನಡೆದ ಯುದ್ಧವನ್ನು ನಿಲ್ಲಿಸಿದರು (೧೯೧೭ ಡಿಸೆಂಬರ) ಮತ್ತು **ಬ್ರೆಸ್ಟ್ ಲಿಟೋವಾಸ್ಕ್** ಎಂಬಲ್ಲಿ ಒಡಂಬಡಿಕೆಯನ್ನು ಮಾಡಿಕೊಂಡರು (೧೯೧೮ ಮಾರ್ಚ).

**ಇಟಲಿ ಮತ್ತು ಶತ್ರುರಾಷ್ಟ್ರಗಳು (೧೯೧೫-೧೮)**—ಇಟಲಿ ಮಿತ್ರರಾಷ್ಟ್ರಗಳ ಪರವಾಗಿ ೧೯೧೫ ಮೇ ತಿಂಗಳಲ್ಲಿ ಯುದ್ಧದಲ್ಲಿ ಸೇರಿಕೊಂಡಿತು. ಆ ಮೇಲೆ ಅದು ತನ್ನ ಈಶಾನ್ಯ ಸೀಮೆಯಲ್ಲಿ ಆಸ್ಟ್ರಿಯದ ಮೇಲೆ ಏರಿಹೋಯ್ತು, ಮತ್ತು ಆ ಕಡೆಯ ಆಸ್ಟ್ರಿಯದ ವಶದಲ್ಲಿರುವ ಪ್ರದೇಶವನ್ನು ತನ್ನ ಅಂಕೆಗೆ ಒಳಪಡಿಸಿತು. ಆದರೆ ಅನಂತರದಲ್ಲಿ ಆಸ್ಟ್ರಿಯನ್ ಸೇನೆಗೆ ಜರ್ಮನ್ ಸೇನೆಯ ನೆರವು ದೊರೆತು ಈ ಸಂಯುಕ್ತ ಸೇನೆ ಇಟಾಲಿಯನ್ ಸೈನ್ಯದ ಮೇಲೆ ಬಲವಾಗಿ ದಾಳಿಯನ್ನು ಹೂಡಿ ಅದನ್ನು ಇಟಲಿಯಲ್ಲಿ ಓಡಿಸಿಬಿಟ್ಟಿತು. ಮುಂದೆ ಶತ್ರುಸೇನೆ ಇಟಲಿಯಲ್ಲಿಯ ವೆನಿಸ್ ಪಟ್ಟಣವನ್ನು ತೆಗೆದುಕೊಳ್ಳಲು ಪ್ರಯತ್ನಿಸಿತು. ಆದರೆ ಈ ಸಮಯಕ್ಕೆ ಇಟಾಲಿಯನ್ ಸೇನೆಗೆ ಫ್ರೆಂಚ್ ಮತ್ತು ಇಂಗ್ಲಿಶ್ ಸೇನೆಯ ಸಾಹಾಯ್ಯವು ದೊರೆತುದರಿಂದ ಶತ್ರುಸೈನ್ಯವು ಹಿಂದೆಗೆಯಿತು. ಬಳಿಕ ೧೯೧೮ರಲ್ಲಿ ಇಟಾಲಿಯನ್ ಸೇನೆ ಆಸ್ಟ್ರಿಯದ ಮೇಲೆ ಮತ್ತೊಮ್ಮೆ ಬಲವಾಗಿ ದಾಳಿಯಿಟ್ಟಿತು. ಹೀಗೆ ಏಕಪ್ರಕಾರವಾಗಿ ೩ ವರ್ಷಗಳವರೆಗೆ ಯುದ್ಧವು ನಡೆದುದರಿಂದ ಕೊನೆಗೆ ೧೯೧೮ ನವೆಂಬರದಲ್ಲಿ ಆಸ್ಟ್ರಿಯವು ಮಿತ್ರರಾಷ್ಟ್ರಗಳೊಡನೆ ಸಂಧಾನ ಮಾಡಿಕೊಂಡಿತು.

**ಡಾರ್ಡಾನೆಲ್ಸಿಗೆ ದಂಡಯಾತ್ರೆ (೧೯೧೫ ಎಪ್ರಿಲ್—೧೯೧೬ ಜಾನೆವರಿ)**—ಪೂರ್ವ ದಿಕ್ಕಿನಲ್ಲಿ ಡಾರ್ಡಾನೆಲ್ಸ್ ಸಾಮುದ್ರಧುನಿ ಮತ್ತು ಮೆಸೊಪೊಟೇಮಿಯಾ ಇವು ಹನ್ನೆರಡು ರಣಾಂಗಣಗಳು ಆಗಿದ್ದುವು. ತುರ್ಕಸ್ತಾನವು ಶತ್ರುಪಕ್ಷವನ್ನು ಕೂಡಿದುದರಿಂದ (೧೯೧೪ ನವೆಂಬರ) ಸುಯೇಜ

ಕಾಲುವೆ ಮತ್ತು ಪೂರ್ವದ ಪ್ರದೇಶ ಇವುಗಳಿಗೆ ತುರ್ಕಸ್ತಾನದಿಂದ ಭಯವು ಉಂಟಾಗಬಹುದೆಂದು ಇಂಗ್ಲಂಡಿಗೆ ತೋರಿತು. ಆದುದರಿಂದ ಸುಯೇಜದ ಮಾರ್ಗವು ಸುರಕ್ಷಿತವಾಗಬೇಕಾದರೆ ಇಜಿಪ್ತದ ಖೇದಿವನೊಡನೆ ಸ್ನೇಹ ಸಂಬಂಧ ವನ್ನು ಬೆಳೆಯಿಸುವುದು ಇಂಗ್ಲಂಡಿಗೆ ಅವಶ್ಯವಾಗಿತ್ತು. ಆದರೆ ಇಜಿಪ್ತದ ಖೇದಿ ವನು ತುರ್ಕಸ್ತಾನವನ್ನು ಕೂಡಬೇಕೆಂದು ನಿರ್ಧರಿಸಿದುದರಿಂದ ಇಂಗ್ಲಂಡು ಅವನನ್ನು ಪದಚ್ಯುತನಾಗಿ ಮಾಡಿ ಅಲ್ಲಿಯ ಅರಸುಮನೆತನದಲ್ಲಿಯ ಬ್ರಿಟಿಶರ ಪಕ್ಷದ ಒಬ್ಬನಿಗೆ ಇಜಿಪ್ತದ ಪಟ್ಟವನ್ನು ಕೊಟ್ಟಿತು. ಬಳಿಕ ಜಲಮಾರ್ಗದಿಂದ ರಶಿ ಯದೊಡನೆ ಸಂಬಂಧವನ್ನು ಇಟ್ಟುಕೊಳ್ಳುವುದು ಸಾಧ್ಯವಾಗಬೇಕೆಂದು ಕಾನ್ ಸ್ಟಾಂಟಿನೋಪಲಿನ ಬಳಿಯ ಡಾರ್ಡಾನೆಲ್ಸ್ ಸಾಮುದ್ರಧುನಿಯ ಮೇಲೆ ತನ್ನ ಪ್ರಭಾ ವವನ್ನು ಬೀರಲು ಇಂಗ್ಲಂಡು ವಿಶ್ವಪ್ರಯತ್ನವನ್ನು ಮಾಡಿತು. ಅದಕ್ಕಾಗಿ ಅದು ಗೆಲಿಪೋಲಿ ದ್ವೀಪಕಲ್ಪದ ಮೇಲೆ ದಾಳಿಯಿಕ್ಕಿತು. ಈ ಸಮಯಕ್ಕೆ ಬಲ್ಗೇರಿಯಾ, ಜರ್ಮನಿ ಮತ್ತು ಆಸ್ಟ್ರಿಯಾ ಈ ರಾಷ್ಟ್ರಗಳಿಂದ ತುರ್ಕಸ್ತಾನಕ್ಕೆ ಸಾಹಾಯ್ಯವು ದೊರೆತಿತು. ಅದರಿಂದ ಬ್ರಿಟಿಶ್ ಸೈನ್ಯವು ಎಷ್ಟು ಸಾಹಸವನ್ನು ಮಾಡಿದರೂ (೧೯೧೫ ಎಪ್ರಿಲ—೧೯೧೬ ಜಾನೆವರಿ) ಅದು ಅಪಜಯಕ್ಕೆ ಗುರಿಯಾಗಿ ವಿಶೇಷ ವಾದ ಪ್ರಾಣಹಾನಿಗೆ ಈಡಾಯಿತು. ಆಗ ಈ ದಂಡಯಾತ್ರೆಯನ್ನು ಬಿಟ್ಟುಬಿಡ ಬೇಕಾಯಿತು.

**ಮೆಸೊಪೊಟೇಮಿಯಕ್ಕೆ ದಂಡಯಾತ್ರೆ (೧೯೧೫-೭೧)**—ಮುಂದೆ ತುರ್ಕಸ್ತಾನ ಸಾಮ್ರಾಜ್ಯದೊಳಗಿನ ಮೆಸೊಪೊಟೇಮಿಯಾ ಪ್ರಾಂತದ ಮೇಲೆ ಬ್ರಿಟಿಶ್ ಸೇನೆ (ಹಿಂದಿ ಮತ್ತು ಇಂಗ್ಲಿಶ್) ಏರಿಹೋಯಿತು (೧೯೧೫ ನವೆಂಬರ). ಈ ಸೇನೆಗೆ ಮೊದಲು ಜಯವು ದೊರೆತು ಅದು ಬಗದಾದ ನಗರವನ್ನು ಸಮೀಪಿ ಸಿತು. ಆದರೆ ಅಲ್ಲಿ ಇದನ್ನು ಬಹು ದೊಡ್ಡದಾದ ತುರ್ಕಸ್ತಾನದ ಸೇನೆ ಸುತ್ತು ಗಟ್ಟಿತು. ಹೆಚ್ಚಿನ ಶೌರ್ಯದಿಂದ ಕಾದುತ್ತ ತನ್ನನ್ನು ಉಳುಹಿಕೊಳ್ಳಲು ಈ ಸೈನ್ಯವು ಮಾಡಿದ ಪ್ರಯತ್ನವು ಸಫಲವಾಗಲಿಲ್ಲ. ಕೊನೆಗೆ ಉಪವಾಸದಿಂದಿರುವ ಪ್ರಸಂಗವು ಬಂದುದರಿಂದ ಈ ೧೦ ಸಾವಿರ ದಂಡಾಳುಗಳು ಶತ್ರುಗಳಿಗೆ ಶರಣಾ ಗತರಾದರು (೧೯೧೬ ಎಪ್ರಿಲ್). ಈ ದಂಡಯಾತ್ರೆ ಅಯಶಸ್ವಿಯಾದರೂ ಇಂಗ್ಲಂಡು ಮತ್ತೆ ಸೈನ್ಯವನ್ನು ಕೂಡಿಸಿ **ಮಾಡ್** ಎಂಬ ಸೇನಾನಾಯಕನ ಆಧಿಪತ್ಯದಲ್ಲಿ ಮತ್ತೆ ಮೆಸೊಪೊಟೇಮಿಯದ ಮೇಲೆ ದಂಡಯಾತ್ರೆಯನ್ನು ಹೊರ ಡಿಸಿತು. ಈ ಕಾಳಗದಲ್ಲಿ ಮೊಡನು ತುರ್ಕಸ್ತಾನದ ಸೈನ್ಯವನ್ನು ಸೋಲಿಸಿ ೧೯೧೭ ಮಾರ್ಚ ತಿಂಗಳಲ್ಲಿ ಬಗದಾದ ನಗರಿಯನ್ನು ಸ್ವಾಧೀನಪಡಿಸಿಕೊಂಡನು.

ಈ ಪರಾಭವವಾದುದರಿಂದ ಹಿಂದುಸ್ಥಾನದ ಮೇಲೆ ದಾಳಿಮಾಡಬೇಕೆಂಬ ತುರ್ಕಸ್ತಾನದ ಸಂಕಲ್ಪವು ಹುಸಿಯಾಯಿತು.

**ಪೆಲೆಸ್ಟಾಯಿನಿಗೆ ದಂಡಯಾತ್ರೆ** (೧೯೧೬-೧೮)—೧೯೧೫ರಲ್ಲಿ ತುರ್ಕಸ್ತಾನವು ಸುಯೇಜ ಕಾಲುವೆಯನ್ನು ಮತ್ತು ಇಜಿಪ್ತ ಪ್ರಾಂತವನ್ನು ತನ್ನ ವಶಕ್ಕೆ ತರಲು ಪ್ರಯತ್ನಿಸಿತು. ಆದರೆ ಬ್ರಿಟಿಶ್ ಸೇನೆ ಅದನ್ನು ಬಲವಾಗಿ ಇದಿರಿಸಿದುದರಿಂದ ಆ ಪ್ರಯತ್ನವು ನಿಷ್ಫಲವಾಯಿತು. ಬಳಿಕ ಮತ್ತೊಮ್ಮೆ ೧೯೧೬ರಲ್ಲಿ ತುರ್ಕಸ್ತಾನವು ಸುಯೇಜದ ಕಡೆ ತನ್ನ ಸೈನ್ಯವನ್ನು ಕಳುಹಿತು. ಆದರೆ ಈ ಸಲವೂ ಬ್ರಿಟಿಶ್ ಸೈನ್ಯವು ಅದನ್ನು ಸೋಲಿಸಿ ಓಡಿಸಿತು. ಅನಂತರ ಬ್ರಿಟಿಶ್ ಸೈನ್ಯವು ತುರ್ಕಸ್ತಾನದ ವಶದಲ್ಲಿರುವ ಪಲೆಸ್ಟಾಯಿನ್ ಭಾಗದ ಮೇಲೆ ದಾಳಿಯಿಕ್ಕಿತು. ಸೇನಾಪತಿಯಾದ **ಜನರಲ್ ಅಲೆನ್‌ಬಿ** ಈತನು ೧೯೧೭ ಡಿಶೆಂಬರದಲ್ಲಿ **ಜರುಸಲೇಮ್** ಪಟ್ಟಣವನ್ನು ತೆಗೆದುಕೊಂಡನು. ಮುಂದೆ ೧೯೧೮ ಸಪ್ಟೆಂಬರದಲ್ಲಿ ಸೀರಿಯಾ ಪ್ರಾಂತವನ್ನಾದರೂ ತನ್ನ ಅಂಕೆಗೆ ತಂದನು.

## ಸಮುದ್ರದ ಮೇಲಿನ ಸಂಗ್ರಾಮಗಳು.

**ವ್ಯಾಪಾರದ ಮುತ್ತಿಗೆ**—ಇಂಗ್ಲಂಡಿನ ಹಡಗುಪಡೆ ಬಲಿಷ್ಠವಾದುದರಿಂದ ಇಂಗ್ಲಂಡಿನೊಡನೆ ಇದಿರುನಿಂತು ನೌಕಾಯುದ್ಧವನ್ನುಮಾಡದೆ ಕೂಟಯುದ್ಧವನ್ನು ನಡೆಯಿಸಲು ಜರ್ಮನಿ ಸಂಕಲ್ಪಿಸಿತು. ಆ ಮೇರೆಗೆ ಇಂಗ್ಲಂಡಿನ ಯುದ್ಧನೌಕೆಗಳ ಮೇಲೆ ಕಳುವಿನಿಂದ ದಾಳಿಮಾಡುವುದು, ಇಂಗ್ಲಂಡಿನ ಕಡೆಗೆ ಬರುವ ವ್ಯಾಪಾರದ ಮತ್ತು ಅನ್ನಸಾಮುಗ್ರಿಯಿಂದ ತುಂಬಿದ ಹಡಗುಗಳನ್ನು ಹಾದಿಯಲ್ಲಿ ಹಿಡಿವುದು ಮುಂತಾದ ಕಾಯಕವನ್ನು ಜರ್ಮನಿ ನಡೆಯಿಸಿತು. ಈ ರೀತಿಯ ವರ್ತನೆಯಿಂದ ತಾನು ಇಂಗ್ಲಂಡನ್ನು ವ್ಯಾಪಾರದ ಮುತ್ತಿಗೆಯಿಂದ ಬಿಗಿದು ಅದಕ್ಕೆ ಅನ್ನವು ಬಾರದಂತೆ ಮಾಡಿ ಅದನ್ನು ಕೊಲ್ಲಬಹುದೆಂದು ಜರ್ಮನಿ ಬಗೆದಿತು. ಈ ಕೆಲಸದಲ್ಲಿ ಜರ್ಮನಿ ಮೊದಲು ಯಶಸ್ವಿಯಾಯ್ತು. ಆದರೆ ಕೊನೆಗೆ ಅದರ ಯುದ್ಧದ ಹಡಗುಗಳು ಇಂಗ್ಲಂಡಿನ ಹಡಗುಪಡೆಯ ಕೈಗೆ ಸಿಕ್ಕಲಾರಂಭಿಸಿದುವು. ಅನಂತರ ಇಂಗ್ಲಂಡೂ ಜರ್ಮನಿಯನ್ನು ವ್ಯಾಪಾರದ ಮುತ್ತಿಗೆಯನ್ನು ಕಟ್ಟಲು ಪ್ರಯತ್ನಿಸಿತು. ಸಮುದ್ರದ ಮೇಲೆ ಇಂಗ್ಲಂಡು ಪ್ರಭಾವಶಾಲಿಯಾದುದರಿಂದ ಅದರ ಈ ಪ್ರಯತ್ನವು ಯಶಸ್ವಿಯಾಗತೊಡಗಿತು.

**ಜಲಯುದ್ಧಗಳು**—೧೯೧೪ ಅಗಸ್ಟದಲ್ಲಿ ಕೆಲವು ಇಂಗ್ಲಿಶ್ ಯುದ್ಧನಾವೆ

ಗಳು ಹೆಲಿಗೋಲೆಂಡ್ ನಡುಗಡ್ಡೆಯ ನೆರೆಯಲ್ಲಿಯ ಜರ್ಮನ್ ಯುದ್ಧ ನೌಕೆಗಳ ಮೇಲೆ ದಾಳಿ ಮಾಡಿ ಅವನ್ನು ಸೋಲಿಸಿದುವು.

೧೯೧೬ ಜೂನ ತಿಂಗಳಲ್ಲಿ ಜಟ್‌ಲಂಡಿನ (ಡೆನ್‌ಮಾರ್ಕ) ಸಮೀಪದಲ್ಲಿ ಇಂಗ್ಲಿಶ್ ಮತ್ತು ಜರ್ಮನ್ ರಣನೌಕೆಗಳ ನಡುವೆ ಘೋರವಾದ ಸಮರವು ನಡೆಯಿತು. ಅದರಲ್ಲಿ ಉತ್ತಮವಾದ ಕೆಲವು ಬ್ರಿಟಿಶ್ ಹಡಗುಗಳು ಮುಳುಗಿದವು. ಆದರೆ ಜರ್ಮನಿಯವಾದರೂ ಅನೇಕ ಹಡಗುಗಳು ನಿರುಪಯುಕ್ತವಾದುದರಿಂದ ಸಮುದ್ರದ ಮೇಲೆ ಇಂಗ್ಲಂಡಿನ ವರ್ಚಸ್ಸು ಸ್ಥಿರವಾಗಿ ಬಾಳಿತು. ಇದರಿಂದ ಮುಂದೆ ಬ್ರಿಟಿಶ್ ಹಡಗುಪಡೆಯೊಡನೆ ಕಾದಾಡುವ ಧೈರ್ಯವು ಜರ್ಮನಿಗೆ ಉಳಿಯಲಿಲ್ಲ. ಆಗ ಅದು ಇಂಗ್ಲಂಡಿನ ದಿಗ್ಬಂಧನಕ್ಕಾಗಿ ನೀರಲ್ಲಿ ಮುಳುಗುವ ನಾವೆಗಳನ್ನು ಉಪಯೋಗಿಸತೊಡಗಿತು.

**ಜರ್ಮನಿಯ ಉಪನಿವೇಶಗಳು ಮತ್ತು ಅದರ ವಶದಲ್ಲಿಯ ಪ್ರದೇಶಗಳು ಮಿತ್ರರಾಷ್ಟ್ರಗಳ ಸ್ವಾಧೀನವಾಗುವುವು**–ಸಮುದ್ರದ ಮೇಲೆ ಇಂಗ್ಲಂಡು ಬಲಾಢ್ಯವಾದುದರಿಂದ ಜರ್ಮನಿಯ ಉಪನಿವೇಶಗಳನ್ನು ಮತ್ತು ಅಂಕಿತ ಪ್ರದೇಶಗಳನ್ನು ಗೆದ್ದುಕೊಳ್ಳಲು ಮಿತ್ರರಾಷ್ಟ್ರಗಳು ಬಹಳ ಶ್ರಮಪಡಬೇಕಾಗಿಲ್ಲ. ಇಂಗ್ಲಂಡಿನ ದಕ್ಷಿಣ ಆಫ್ರಿಕೆಯ ಉಪನಿವೇಶದವರು ಜರ್ಮನಿಯ ಪಶ್ಚಿಮ ಆಫ್ರಿಕೆಯ ಉಪನಿವೇಶವನ್ನು ಜಯಿಸಿಕೊಂಡರು. ಬ್ರಿಟಿಶ್ (ಹಿಂದಿ ಮತ್ತು ಇಂಗ್ಲಿಶ್) ಸೇನೆ ಜರ್ಮನಿಯ ಪೂರ್ವ ಆಫ್ರಿಕೆಯ ಉಪನಿವೇಶವನ್ನು ಗೆದ್ದುಕೊಂಡಿತು. ಫ್ರೆಂಚರು ಜರ್ಮನಿಯ ವಶದಲ್ಲಿರುವ ಆಫ್ರಿಕೆಯ ಕೆಮೆರೂನ ಪ್ರದೇಶವನ್ನು ಗೆದ್ದುಕೊಂಡರು. ಜಪಾನವು ಮಿತ್ರರಾಷ್ಟ್ರಗಳ ಪರವಾಗಿ ಯುದ್ಧದಲ್ಲಿ ಭಾಗವಹಿಸಿ ಚೀನದ ದಂಡೆಯ ಬಳಿಯ ಕಿವೊ-ಚೀವೊ ಎಂಬ ಜರ್ಮನ್ ಪಾಳ್ಯವನ್ನು ತೆಗೆದುಕೊಂಡಿತು. ಇದಲ್ಲದೆ ಪೆಸಿಫಿಕ್ ಮಹಾಸಾಗರದಲ್ಲಿಯ ಜರ್ಮನಿಯ ವಶದಲ್ಲಿರುವ ನಡುಗಡ್ಡೆಗಳನ್ನು ವಶಮಾಡಿಕೊಳ್ಳಲು ಮಿತ್ರರಾಷ್ಟ್ರಗಳಿಗೆ ಜಪಾನವು ನೆರವಾಯಿತು. ಮತ್ತು ಅದು ತನ್ನ ಹಡಗುಪಡೆಯ ಬಲದಿಂದ ಪೂರ್ವ ದಿಕ್ಕಿನ ಪ್ರದೇಶಗಳನ್ನು ಸಂರಕ್ಷಿಸುವುದಾಗಿ ಆಶ್ವಾಸನವಿತ್ತಿತು.

**ಬ್ರಿಟಿಶ್ ಸಾಮ್ರಾಜ್ಯದೊಳಗಿನ ದೇಶಗಳು ಮಹಾಯುದ್ಧದಲ್ಲಿ ಮಾಡಿದ ಸಾಹಾಯ್ಯವು**–ಬ್ರಿಟಿಶ್ ಸಾಮ್ರಾಜ್ಯದ ಕೆನಡಾ, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕಾ, ನ್ಯೂಝೀಲಂಡ್, ಹಿಂದುಸ್ಥಾನ ಮುಂತಾದ ದೇಶಗಳು ಈ ಮಹಾಯುದ್ಧದಲ್ಲಿ ಭಾಗಿಯಾದುವು. ಐರ್ಲಂಡಿನ ಸಿನ್‌ಫೇನ್ ಪಕ್ಷದವರು ೧೯೧೬ರಲ್ಲಿ ಬಂಡಾಯವನ್ನು ಹೂಡಿದ್ದರು. ಆದರೆ ಅದನ್ನು ಕೂಡಲೇ ಮುರಿಬಡಿ

ಯಲಾಯಿತು. ಕೆನಡಾದಲ್ಲಿಯ ಫ್ರೆಂಚರು, ದಕ್ಷಿಣ ಆಫ್ರಿಕೆಯ ಡಚ್ಚರು ಮತ್ತು ಹಿಂದುಸ್ಥಾನದ ಹಿಂದಿಯರು ಇಂಗ್ಲಂಡಿಗೆ ನೆರವಾಗಲಿಕ್ಕಿಲ್ಲೆಂದು ಜರ್ಮನಿ ತಿಳಿದಿದ್ದಿತು. ಆದರೆ ಈ ಎಣಿಕೆ ವ್ಯರ್ಥವಾಗಿ ಸಾಮ್ರಾಜ್ಯದ ಎಲ್ಲ ದೇಶಗಳು ಸೈನ್ಯ, ದುಡ್ಡು, ಅನ್ನಸಾಮಗ್ರಿ ಬಟ್ಟೆಬರೆ ಮುಂತಾದ ವಿಷಯದಲ್ಲಿ ಉದಾರವಾಗಿ ಇಂಗ್ಲಂಡಿಗೆ ಸಾಹಾಯ್ಯವನ್ನು ನೀಡಿದುವು. ಸಾಮ್ರಾಜ್ಯದ ಬೇರೆ ಬೇರೆ ದೇಶಗಳಲ್ಲಿ ಸಂಬಂಧವು ಬೆಳೆದು ಹಗೆಯ ವಿರುದ್ಧವಾಗಿ ಯೋಜಿಸಲಾಗುವ ನೀತಿಯಲ್ಲಿ ಅವುಗಳಿಗೂ ಭಾಗವಿರಬೇಕೆಂದು ೧೯೧೭ರಲ್ಲಿ **ಸಾಮ್ರಾಜ್ಯದ ಸಮರ ವಿಷಯಕ ಕಬಿನೆಟ್** ಎಂಬ ಹೆಸರಿನ ಒಂದು ಸಮ್ಮೇಲನವನ್ನು ಕೂಡಿಸಲಾಯಿತು. ಅದರಲ್ಲಿ ಇಂಗ್ಲಂಡಿನ ಪ್ರತಿನಿಧಿಗಳ ಜೊತೆಗೆ ಕನಡಾ ದೇಶದ ಪರವಾಗಿ 'ಬಾರ್ಡನ್, ದಕ್ಷಿಣ ಆಫ್ರಿಕೆಯಿಂದ ಜನರಲ್ ಸ್ಮಟ್ಸ್, ಆಸ್ಟ್ರೇಲಿಯದಿಂದ ಹ್ಯೂಜೆಸ್, ನ್ಯೂಝೀಲಂಡಿನಿಂದ ಮಸಿ, ಮತ್ತು ಹಿಂದುಸ್ಥಾನದ ಪರವಾಗಿ ಸರ್ ಸತ್ಯೇಂದ್ರ ಸಿಂಹರು ಮತ್ತು ಬಿಕಾನೇರದ ಮಹಾರಾಜರು ಭಾಗವನ್ನು ವಹಿಸಿದ್ದರು.

**ಜರ್ಮನಿಯ ಮುಳುಗುನಾವೆಗಳ ಮತ್ತು ಝೆಪೆಲಿನ್‌ಗಳ (ಆಕಾಶ) ನೌಕೆಗಳ ದಾಳಿ (೧೯೧೫-೧೮)**—ಇಂಗ್ಲಂಡಿಗೆ ವ್ಯಾಪಾರದ ಮುತ್ತಿಗೆಯನ್ನು ಹಾಕಿ ಅದನ್ನು ಉಪವಾಸದಿಂದ ಕೊಲ್ಲಲು ೧೯೧೫ರಲ್ಲಿ ಜರ್ಮನಿ ಮುಳುಗುನಾವೆಗಳ (Submarines) ಹಾವಳಿಯನ್ನು ಆರಂಭಿಸಿತು. ಈ ನಾವೆಗಳು ಯುದ್ಧದ ಹಡಗುಗಳನ್ನಲ್ಲದೆ ವ್ಯಾಪಾರದ ಮತ್ತು ಪ್ರವಾಸದ ಹಡಗುಗಳನ್ನೂ ಮುಳುಗಿಸತೊಡಗಿದುವು. ಇವುಗಳಲ್ಲಿ ಕೆಲವು ತಟಸ್ಥ ರಾಷ್ಟ್ರಗಳ ಹಡಗುಗಳೂ ಇದ್ದುವು. ಅದಕ್ಕಾಗಿ ಅವು ಜರ್ಮನಿಯನ್ನು ದೂರಿಕೊಂಡುವು. ೧೯೧೫ ಮೇ ತಿಂಗಳಲ್ಲಿ ಐರ್ಲಂಡಿನ ದಂಡೆಯ ಬಳಿಯಲ್ಲಿ ೧೨೦೦ ಪ್ರವಾಸಿಕರುಳ್ಳ **ಲುಸಿಟಾನಿಯಾ** ಎಂಬ ಹಡಗನ್ನು ಮುಳುಗಿಸಲಾಯಿತು. ಅದರಲ್ಲಿ ತಟಸ್ಥ ರಾಷ್ಟ್ರವಾದ 'ಅಮೇರಿಕೆಯ ಸಂಯುಕ್ತ ಸಂಸ್ಥಾನ'ದ ೧೨೦ ಪ್ರಯಾಣಿಕರು ಇದ್ದರು. ಆದುದರಿಂದ ಆ ದೇಶದ ಅಧ್ಯಕ್ಷನಾದ **ಪ್ರೆಸಿಡೆಂಟ್ ವಿಲ್‌ಸನ್** ಈತನು ಈ ವಿಷಯದಲ್ಲಿ ಜರ್ಮನಿಗೆ ತನ್ನ ನಿಷೇಧವನ್ನು ತಿಳುಹಿದನು ಮತ್ತು ಜರ್ಮನಿಯ ಮುಳುಗುನಾವೆಗಳು ತಟಸ್ಥ ರಾಷ್ಟ್ರಗಳ ಹಡಗುಗಳನ್ನು ಹಿಂಸೆಪಡಿಸದಂತೆ ಎಚ್ಚರಗೊಳ್ಳಲು ಜರ್ಮನಿಗೆ ಸೂಚಿಸಿದನು. ಜರ್ಮನಿ ಅದನ್ನು ಲಕ್ಷಿಸಲಿಲ್ಲ. ಇಷ್ಟೇ ಅಲ್ಲದೆ ತನ್ನೀ ಹಾವಳಿಯಿಂದ ಇಂಗ್ಲಂಡಿನ ವ್ಯಾಪಾರವು ಮುಗ್ಗುರಿಸಿ ಅದು ಕೂಳುಗೇಡಿಯಾಗುತ್ತಿರುವುದನ್ನು ನೋಡಿ ಅದೇ ಕ್ರಮವನ್ನು ಇನ್ನಿಷ್ಟು ಬಲವಾಗಿ ಮುಂದುವರಿಸಿತು. ಜರ್ಮನಿಯ ಈ ನೀತಿಯಿಂದ ಅಮೇರಿಕೆಯ ವ್ಯಾಪಾರದ

ಹಡಗುಗಳು ನಷ್ಟವಾಗುತ್ತಿದ್ದು ಜರ್ಮನಿಯ ಪ್ರೇರಣೆಯಿಂದ ಅಮೇರಿಕೆಯಲ್ಲಿಯೆ ಒಳಸಂಚುಗಳು ನಡೆಯುತ್ತಿರುವುವೆಂಬುದನ್ನು ಮನಗಂಡು ಪ್ರೆಸಿಡೆಂಟ್ ವಿಲ್ಸನನು ೧೯೧೭ ಎಪ್ರಿಲದಲ್ಲಿ ಜರ್ಮನಿಯೊಡನೆ ಸಂಗ್ರಾಮವನ್ನು ಸಾರಿದನು.

ಮಿತ್ರರಾಷ್ಟ್ರಗಳ ಸಮರನೌಕೆಗಳಿಂದ ತನ್ನನ್ನು ಸಂರಕ್ಷಿಸಿಕೊಳ್ಳಲು ಜರ್ಮನಿ ತನ್ನ ನೌಕಾಸ್ಥಾನಗಳ ಸುತ್ತಲು ಸಮುದ್ರದಲ್ಲಿ ತೇಲಾಡುವ ಸುರಂಗಗಳನ್ನು ಹರಿಬಿಟ್ಟಿತ್ತು. ಜರ್ಮನಿ ಆರಂಭಿಸಿದ ವ್ಯಾಪಾರದ ಮುತ್ತಿಗೆಯಿಂದ ಅನ್ನಸಾಮಗ್ರಿಯ ಕೊರತೆ ಉಂಟಾಗಬಾರದೆಂದು ಇಂಗ್ಲಂಡು ಅನ್ನದ ಸಂಗ್ರಹ ವಿಧಾನದಲ್ಲಿ ನಿರ್ಬಂಧವನ್ನು ಹಾಕಿತು. ಅದರಿಂದ ಪ್ರತಿಯೊಬ್ಬನಿಗೂ ಕ್ಲಪ್ತವಾದ ಅನ್ನಸಾಮಗ್ರಿ ದೊರೆಯಲಾರಂಭಿಸಿತು.

ಮುಳುಗುಹಡಗುಗಳಂತೆ ಝೆಪೆಲಿನ್ ಮತ್ತು ವಿಮಾನಗಳ ಸಾಹಾಯ್ಯದಿಂದ ಆಕಾಶ ಮಾರ್ಗವಾಗಿ ಇಂಗ್ಲಂಡಿನ ಮೇಲೆ ಬಂದು ದೊಡ್ಡದೊಡ್ಡ ಪಟ್ಟಣಗಳ ಮೇಲೆ ಸಿಡಿಗುಂಡುಗಳನ್ನು ಒಗೆದು ಜನರನ್ನು ಗಾಬರಿಗೊಳಿಸಲು ಜರ್ಮನಿ ಪ್ರಯತ್ನಿಸಿತು. ಈ ಅತ್ಯಾಚಾರಗಳಿಂದ ಪ್ರಾಣಹಾನಿ ಬಹಳವಾಯಿತು ಮತ್ತು ಮನೆಮಾರುಗಳೂ ವಸ್ತುಒಡವೆಗಳೂ ಹಾಳಾಗತೊಡಗಿದುವು. ಆಗ ತೋಪುಗಳ ಹೊಡೆತಗಳಿಂದ ಶತ್ರುಗಳ ಕೆಲವು ವಿಮಾನಗಳನ್ನು ನಾಶಮಾಡಲಾಯಿತು. ಇದರಿಂದ ವಿಮಾನಮಾರ್ಗವಾಗಿ ಉಂಟಾದ ಸಂಕಟವು ಕಡಿಮೆಯಾಯಿತು.

**ಪಶ್ಚಿಮ ರಣಾಂಗಣದಲ್ಲಿ ಜರ್ಮನಿಯ ಏರಾಟವು**—ಪಶ್ಚಿಮ ಸಮರಾಂಗಣದಲ್ಲಿ ಬೆಲ್ಜಿಯಮಿನಿಂದ ಸ್ವಿಝರ್ಲಂಡ ಸೀಮೆಯ ವರೆಗೆ ಸುಮಾರು ೩೦೦ ಮೈಲುಗಳ ಪ್ರದೇಶದಲ್ಲಿ ಮಿತ್ರರಾಷ್ಟ್ರಗಳ ಸೈನ್ಯವೂ ಜರ್ಮನಿಯ ಸೈನ್ಯವೂ ೧೯೧೬ರಿಂದ ಕಂದಕಗಳನ್ನು ಆಶ್ರಯಿಸಿ ಹೊಂಚುಹಾಕಿಕೊಂಡು ಕುಳಿತಿದ್ದುವು. ಈ ದಂಡುಗಳು ಸಂಧಿ ದೊರೆತಾಗ ಒಬ್ಬರೊಬ್ಬರ ಮೇಲೆ ದಾಳಿಮಾಡಿ ಗುಂಡಿನ ಮಳೆಯನ್ನು ಸುರಿಸುತ್ತಿದ್ದುವು. ಇದರಿಂದ ವಿಶೇಷವಾದ ಪ್ರಾಣಹಾನಿ ಸಂಭವಿಸಿದರೂ ಸಂಗ್ರಾಮವು ಕೊನೆಗಾಣಲು ಅದರಿಂದ ಪ್ರಯೋಜನವಾಗಲಿಲ್ಲ. ಹೀಗೆ ಪಶ್ಚಿಮ ರಣಾಂಗಣದಲ್ಲಿ ಕಾದಾಟವು ದೀರ್ಘಕಾಲದ ವರೆಗೆ ಸಾಗಿತು. ಆದರೆ ಮುಂದೆ ಈ ಸ್ಥಿತಿ ಮಾರ್ಪಡುವ ಚಿಹ್ನವು ತೋರಿತು. ೧೯೧೭ರಲ್ಲಿ (ಮಾರ್ಚದಿಂದ ಸಪ್ಟೆಂಬರ) ರಶಿಯದಲ್ಲಿ ರಾಜ್ಯಕ್ರಾಂತಿಯಾಗಿ ಪ್ರಜಾಪ್ರಭುತ್ವದ ಸ್ಥಾಪನೆಯಾಯಿತು. ಈ ಪ್ರಜಾಪ್ರಭುತ್ವದವರು ಜರ್ಮನಿಯೊಡನೆ ನಡೆದ ಯುದ್ಧವನ್ನು ನಿಲ್ಲಿಸಿದರು. ಅದರಿಂದ ತನ್ನ ಪೂರ್ವ ರಣಾಂಗಣದಲ್ಲಿ ತೊಡಗಿರುವ ಸೈನ್ಯದ ಬಹು ಭಾಗವನ್ನು ಪಶ್ಚಿಮ ರಣಾಂಗಣಕ್ಕೆ ತರುವುದು ಜರ್ಮನಿಗೆ ಸಾಧ್ಯವಾ

ಯಿತು. ಇದರಿಂದ ಮಿತ್ರರಾಷ್ಟ್ರಗಳ ಮೇಲೆ ಬಿಕ್ಕಟ್ಟಿನ ಪ್ರಸಂಗವು ಒದಗಿತ್ತು. ಆದರೆ ಇದಕ್ಕೆ ಮೊದಲು ಜರ್ಮನಿಯ ಮುಳುಗುಹಡಗುಗಳ ಬಾಧೆಗೆ ಬೇಸತ್ತು ಅಮೇರಿಕೆ ಜರ್ಮನಿಯ ವಿರುದ್ಧವಾಗಿ ಸಮರವನ್ನು ಸಾರಿದುದರಿಂದ ಮಿತ್ರ ರಾಷ್ಟ್ರಗಳಿಗೆ ಅಮೇರಿಕನ್ ಸೈನ್ಯದ ಸಾಹಾಯ್ಯವು ದೊರೆವ ಆಶೆ ಹುಟ್ಟಿತು. ಮಿತ್ರರಾಷ್ಟ್ರಗಳಿಗೆ ಈ ಸಾಹಾಯ್ಯವು ದೊರೆವ ಪೂರ್ವದಲ್ಲಿಯೇ ಅವರ ಸೈನ್ಯದ ಮೇಲೆ ದಾಳಿಯಿಡುವುದು ಅವಶ್ಯಕವೆಂದು ಜರ್ಮನಿಗೆ ತೋರಿತು. ಅದ ರಂತೆ ಅದು ಪಶ್ಚಿಮ ರಣಾಂಗಣದ ಮಿತ್ರರಾಷ್ಟ್ರಗಳ ಸೈನ್ಯದ ಮೇಲೆ ೧೯೧೮ರ ಮಾರ್ಚದಿಂದ ಮೇ ತಿಂಗಳ ವರೆಗೆ ಭೀಕರವಾದ ಏರಾಟವನ್ನು ಹೂಡಿತು. ಅದನ್ನು ತಡೆಯಲಾರದೆ ಮಿತ್ರರಾಷ್ಟ್ರಗಳ ಸೈನ್ಯವು ಕೆಲವೆಡೆಗಳಲ್ಲಿ ಹಿಮ್ಮೆಟ್ಟ ಬೇಕಾಯಿತು.

**ಮಾರ್ಶಲ್ ಫಾಕ್ ಈತನು ಮಿತ್ರರಾಷ್ಟ್ರಗಳ ಸೇನೆಗೆ ಮುಖ್ಯಾಧಿ ಕಾರಿಯಾಗಿ ನಿಯುಕ್ತನಾದನು (೧೯೧೮ ಎಪ್ರಿಲ)**—ಮಿತ್ರರಾಷ್ಟ್ರಗಳ ಮೇಲೆ ಹೀಗೆ ಬಿಕ್ಕಟ್ಟಿನ ಸಮಯವು ಬಂದಿರಲು, ಪರಿಸ್ಥಿತಿಯನ್ನು ಇದಿರಿಸುವದಕ್ಕಾಗಿ ಪಶ್ಚಿಮ ಸಮರಾಂಗಣದ ಮಿತ್ರಸೇನೆಗಳ ನಾಯಕತ್ವವನ್ನು ಒಬ್ಬ ಸೇನಾಪತಿಗೇ ಒಪ್ಪಿಸಿದರೆ ಬೇರೆ ಬೇರೆ ಕಡೆಯ ಹೋರಾಟಗಳನ್ನು ಏಕ ವಿಚಾರದಿಂದಲೂ ಏಕ ಶಕ್ತಿಯಿಂದಲೂ ವ್ಯವಸ್ಥಿತವಾಗಿ ನೆರವೇರಿಸಲು ಸಾಧ್ಯವಾಗುವುದೆಂದು ಯೋಚಿಸಿ ಫ್ರೆಂಚ ಮುಖ್ಯ ಸೇನಾಪತಿಯಾದ ಮಾರ್ಶಲ್ ಫಾಕ್ ಈತನನ್ನೇ ಮಿತ್ರರಾಷ್ಟ್ರಗಳ ಸೇನೆಯ ಪ್ರಧಾನ ಸೇನಾನಾಯಕನಾಗಿ ನಿಯೋಜಿಸಲಾಯಿತು (೧೯೧೮ ಎಪ್ರಿಲ). ಇದೇ ಸಮಯಕ್ಕೆ ಪ್ರತಿವಾರ ೩೦,೦೦೦ರಂತೆ ಸಾವಿರಾರು ಅಮೇರಿಕನ್ ಸೈನಿಕರು ಮಿತ್ರರಾಷ್ಟ್ರಗಳಿಗೆ ಸಾಹಾಯ್ಯ ಮಾಡಲು ಫ್ರಾನ್ಸಿನಲ್ಲಿ ಬರತೊಡಗಿದರು. ಹೊಸ ಹುರುಪಿನ ಈ ಸೈನ್ಯವು ತನ್ನ ನೆರವಿಗೆ ಬಂದುದನ್ನು ನೋಡಿ ಮಾರ್ಶಲ್ ಫಾಕನು ೧೯೧೮ರ ಜುಲೈ ತಿಂಗಳಲ್ಲಿ ತಾನಾಗಿ ಜರ್ಮನ್ ಸೇನೆಯ ಮೇಲೆ ಏರಿಹೋಗಲು ನಿಶ್ಚಯಿಸಿದನು. ಈ ಸೈನ್ಯದ ಏರಾಟ,



ಮಾರ್ಶಲ್ ಫಾಕ್,
ಮಿತ್ರರಾಷ್ಟ್ರಗಳ ಮುಖ್ಯಸೇನಾಪತಿ

ಗುಂಡುಗಳ ಸುರಿಮಳೆ ಮತ್ತು ಕೌಚಧಾರಿ ಸಂಗ್ರಾಮ ಮೋಟಾರುಗಳ ಹುಯಿಲು, ಇವುಗಳ ಇದಿರಲ್ಲಿ ಜರ್ಮನಿ ನಿಲ್ಲದಾಯಿತು. ಮಿತ್ರರಾಷ್ಟ್ರಗಳ ಈ ಆಕ್ರಮಣ ವನ್ನು ಪ್ರತಿಭಟಿಸಲು ಜರ್ಮನಿ ಅತಿಶಯವಾಗಿ ಪ್ರಯತ್ನಿಸಿತು. ಆದರೆ ಅದರಲ್ಲಿ ಅದಕ್ಕೆ ಯಶಸ್ಸು ದೊರೆಯದೆ ಅದು ಹಿಂದಿರುಗಬೇಕಾಯಿತು.

**ಮಹಾಯುದ್ಧವು ನಿಲ್ಲಿಸಲಾಯಿತು (ನವೆಂಬರ ೧೧, ೧೯೧೮)**— ಪಶ್ಚಿಮ ರಣಾಂಗಣದಲ್ಲಿ ಮಿತ್ರರಾಷ್ಟ್ರಗಳಿಗೆ ಜಯವು ದೊರೆಯುತ್ತಿರುವಾಗ ಪೂರ್ವ ರಣಾಂಗಣದಲ್ಲಿ ಅನುಕೂಲ ಪರಿಸ್ಥಿತಿ ಉಂಟಾಗುತ್ತಿತ್ತು. ಮಿತ್ರ ರಾಷ್ಟ್ರಗಳು ಬಲ್ಗೇರಿಯವನ್ನು ಸೋಲಿಸಿ ಒಪ್ಪಂದ ಮಾಡಿಕೊಳ್ಳಲು ಒತ್ತಾಯ ಪಡಿಸಿದುವು (ಸಪ್ಟಂಬರ೧೯೧೮). ತುರ್ಕಸ್ತಾನವಾದರೂ ಎಲ್ಲೆಡೆಯಲ್ಲಿ ಸೋತಿತು. ಅದರ ಮೆಸೊಪೊಟೇಮಿಯಾ, ಸೀರಿಯಾ ಮತ್ತು ಪಲೆಸ್ಟಾಯಿನ್ ಈ ಪ್ರಾಂತ ಗಳನ್ನು ಇಂಗ್ಲಿಶರು ಗೆದ್ದುಕೊಂಡರು. ಆದುದರಿಂದ ತುರ್ಕಸ್ತಾನವು ೧೯೧೮ ಅಕ್ಟೋಬರದಲ್ಲಿ ಮಿತ್ರರಾಷ್ಟ್ರಗಳೊಡನೆ ನಡೆದಿರುವ ಯುದ್ಧವನ್ನು ನಿಲ್ಲಿಸಿತು. ಆಸ್ಟ್ರಿಯನ್ ಸೇನೆ ಒಂದೇ ಸವನೆ ನಾಲ್ಕು ವರ್ಷಗಳ ವರೆಗೆ ಯುದ್ಧ ಮಾಡಿ ದಣಿದಿದ್ದಿತು. ಇದಲ್ಲದೆ ಈಗ ಅದರಲ್ಲಿ ದೊಂಬೆಗಳು ಆರಂಭವಾದುದರಿಂದ ಅದು ೧೯೧೮ ನವೆಂಬರ ೩ನೆಯ ತಾರೀಖಿನ ದಿನ ಯುದ್ಧವನ್ನು ನಿಲ್ಲಿಸಿ ಮಿತ್ರರಾಷ್ಟ್ರಗಳೊಡನೆ ಒಡಂಬಡಿಕೆಯ ಮಾತುಗಳನ್ನು ಮುಂದೆ ಮಾಡಿತು. ಇಂಗ್ಲಂಡು ಹಾಕಿದ ವ್ಯಾಪಾರದ ಮುತ್ತಿಗೆಯಿಂದ ಜರ್ಮನಿಗೆ ಬರಗಾಲದ ಬವಣೆ ಬಾಧಿಸುತ್ತಲಿತ್ತು. ಜರ್ಮನಿಯ ಸಮ್ರಾಟನಾದ ಕೈಸರ ೨ನೆಯ ವಿಲಿ ಯಮನ ರಾಜನೀತಿಯೆ ಜರ್ಮನಿಯ ಈ ವಿಪತ್ತಿಗೆ ಗುರಿಯಾಗಿದೆ ಎಂಬ ಭಾವನೆಯಿಂದ ಜರ್ಮನಿಯಲ್ಲಿ ಬಂಡಾಯವು ಆರಂಭವಾಯಿತು. ಆಗ ಕೈಸರ ೨ನೆಯ ವಿಲಿಯಮನು ರಾಜ್ಯತ್ಯಾಗ ಮಾಡಿ ಹಾಲಂಡಿಗೆ ಓಡಿಹೋದನು. ಆ ಮೇಲೆ ಯುದ್ಧ ವನ್ನು ನಿಲ್ಲಿಸಬೇಕೆಂದು ಜರ್ಮನಿ ಬೇಡಿಕೊಂಡಿತು. ಮಿತ್ರರಾಷ್ಟ್ರಗಳು ಸೂಚಿಸಿದ ಕರಾರುಗಳನ್ನು ಜರ್ಮನಿ ಒಪ್ಪಿಕೊಂಡುದರಿಂದ ೧೯೧೮ ನವೆಂ ಬರ ೧೧ನೆಯ ತಾರೀಖಿನ ದಿನ ಮುಂಜಾವಿನ ೧೧ ಘಂಟೆಗೆ ಮಹಾಯುದ್ಧವು ನಿಲ್ಲಿಸಲ್ಪಟ್ಟಿತು.


ಪ್ರೆಸಿಡೆಂಟ್ ವಿಲ್‌ಸನ್

**ವರ್ಸೆಲ್ಸಿನ ಒಪ್ಪಂದವು, ೧೯೧೯ ಜೂನ**

೨೮—ಈ ಮಹಾಯುದ್ಧವು ಮುಗಿದ ಬಳಿಕ ವರ್ಸೆಲ್ಸ್ ಎಂಬಲ್ಲಿ ೧೯೧೯ ಜೂನ ೨೮ನೆಯ ದಿನ ಒಡಂಬಡಿಕೆಯಾಯಿತು. ಈ ಸಂಧಿಯ ಕರಾರುಗಳನ್ನು ನಿರ್ಧರಿಸುವುದರಲ್ಲಿ ಅಮೇರಿಕೆಯ ಸಂಯುಕ್ತ ಸಂಸ್ಥಾನದ ಅಧ್ಯಕ್ಷನಾದ **ಪ್ರೆಸಿಡೆಂಟ್ ವಿಲ್‌ಸನ್** ಈತನು ಪ್ರಮುಖ ಭಾಗವನ್ನು ವಹಿಸಿದ್ದನು.

**ವರ್ಸೆಲ್ಸಿನ ಸಂಧಿ, ೧೯೧೯ ಜೂನ**—ಈ ಒಪ್ಪಂದದಿಂದ ಕೆಳಗಿನ ಘಟನೆಗಳು ಸಂಭವಿಸಿದುವು.

(೧) ಅಲ್‌ಸೆಸ್ ಮತ್ತು ಲೊರೆನ್ ಈ ಪ್ರಾಂತಗಳು ಜರ್ಮನಿಯಿಂದ ಫ್ರಾನ್ಸಿಗೆ ತಿರುಗಿ ದೊರೆತುವು.

(೨) ಫ್ರಾನ್ಸಿನ ಉತ್ತರಭಾಗದಲ್ಲಿ ಜರ್ಮನಿ ಬಹಳವಾಗಿ ಹಾನಿಯನ್ನು ಮಾಡಿತ್ತು. ಅದನ್ನು ತುಂಬಿಕೊಡಲು ಜರ್ಮನಿ ಫ್ರಾನ್ಸಿಗೆ ಕಪ್ಪವಾಗಿ ಬಹಳ ಹಣವನ್ನು ಕೊಡಬೇಕೆಂದು ನಿರ್ಣಯಿಸಲಾಯಿತು. ಒಪ್ಪಂದದ ಈ ಕರಾರು ಪೂರ್ತಿಯಾಗುವವರೆಗೆ ಕಬ್ಬಿಣದ ಮತ್ತು ಕಲ್ಲಿದ್ದಲಿಯ ಕಣಿಗಳಿಗಾಗಿ ಪ್ರಸಿದ್ಧವಾಗಿರುವ ಸಾರ್ (Saar) ಎಂಬ ಜರ್ಮನಿಯ ಪ್ರದೇಶವು ಮಿತ್ರ ರಾಷ್ಟ್ರಗಳ ವಶದಲ್ಲಿ ಇರಬೇಕು ಎಂದು ನಿರ್ಣಯವಾಯಿತು.

(೩) ಜರ್ಮನಿಯ ಆಫ್ರಿಕಾಖಂಡದಲ್ಲಿಯ ಉಪನಿವೇಶಗಳು ಇಂಗ್ಲಂಡಿನ ಮತ್ತು ಮಿತ್ರರಾಷ್ಟ್ರಗಳ ಅಧಿಕಾರಕ್ಕೆ ಒಳಪಡಬೇಕು.

(೪) ಜರ್ಮನಿ ತನ್ನ ಹಡಗುಪಡೆಯನ್ನು ಮಿತ್ರರಾಷ್ಟ್ರಗಳ ಕೈಗೆ ಸೇರಿಸಬೇಕು ಮತ್ತು ದೇಶದ ಆಂತರಿಕ ಶಾಂತತೆಗೆ ಆವಶ್ಯಕವಿರುವ ಸೈನ್ಯವನ್ನಷ್ಟೇ ಇಡಬೇಕು.

(೫) ತುರ್ಕಸ್ತಾನದಿಂದ ಗೆದ್ದುಕೊಂಡ ಮೆಸೊಪೊಟೇಮಿಯಾ, ಪೆಲೆಸ್ಟಾಯಿನ್ ಮತ್ತು ಸೀರಿಯಾ ಈ ಪ್ರದೇಶಗಳು ಮಿತ್ರರಾಷ್ಟ್ರಗಳ ವಶದಲ್ಲಿರಬೇಕು. (ಇವುಗಳಲ್ಲಿ ಮೆಸೊಪೊಟೇಮಿಯಾ ಮತ್ತು ಪೆಲೆಸ್ಟಾಯಿನ್ ಈ ಪ್ರಾಂತಗಳನ್ನು ರಾಷ್ಟ್ರಸಂಘವು ಇಂಗ್ಲಂಡಿನ ವಿಚಾರಣೆಗೆ ಕೊಟ್ಟಿರುತ್ತದೆ.)

(೬) ಶತ್ರುರಾಷ್ಟ್ರಗಳ ಅಂಕಿತದಲ್ಲಿರುವ ಯಾವುದೇ ದೇಶವಾಗಲಿ, ಜನಾಂಗವಾಗಲಿ, ಸ್ವತಂತ್ರವಾಗಲು ಬಯಸಿದರೆ ಅದಕ್ಕೆ ಸ್ವಾತಂತ್ರ್ಯವು ದೊರೆಯಬೇಕೆಂದು ಸ್ವಯಂನಿರ್ಣಯ ತತ್ವವನ್ನು (Self-determination) ಬಳಕೆಗೆ ತರಲಾಯಿತು. ಅದರಿಂದ ಯುರೋಪದಲ್ಲಿ ಹೀಗೆ ಹೊಸ ರಾಷ್ಟ್ರಗಳು ನಿರ್ಮಾಣವಾದುವು:— (೧) **ಪೋಲಂಡ್**—ಜರ್ಮನಿ, ಆಸ್ಟ್ರಿಯಾ ಮತ್ತು ರಶಿಯಾ ಈ ರಾಷ್ಟ್ರಗಳಲ್ಲಿ ಪೋಲಂಡ್ ದೇಶವು ಹರಿದು ಹಂಚಿಹೋಗಿತ್ತು. ಅದರ ಭಾಗಗಳು ಒಂದು

ಗೂಡಿಸಲ್ಪಟ್ಟು ಪೋಲಂಡಿನ ಸ್ವತಂತ್ರರಾಷ್ಟ್ರವು ನಿರ್ಮಾಣವಾಯಿತು. (೨) ಹಂಗೇರಿ—ಆಸ್ಟ್ರಿಯದ ಅಧೀನವಾಗಿದ್ದ ಹಂಗೇರಿ ದೇಶವು ಸ್ವತಂತ್ರವಾಯಿತು. (೩) ಆಸ್ಟ್ರಿಯದ ದೊಡ್ಡ ಸಾಮ್ರಾಜ್ಯವು ಬಹಳ ಮಟ್ಟಿಗೆ ಕುಗ್ಗಿ ಆಸ್ಟ್ರಿಯದ ಈಶಾನ್ಯ ದಿಕ್ಕಿಗೆ ಝೆಕೊಸ್ಲೊವಕಿಯಾ ಮತ್ತು ಆಗ್ನೇಯಕ್ಕೆ ಯುಗೋಸ್ಲಾವಿಯಾ ಎಂಬ ಸ್ಲಾವ ಜನಾಂಗದ ಎರಡು ರಾಜ್ಯಗಳು ಉತ್ಪನ್ನವಾದುವು.




ಈಮೇರೆಗೆ ಈ ಮಹಾಯುದ್ಧವು ಜಗತ್ತಿನ ರಾಜಕೀಯ ಭೂಪಟವನ್ನು ಬಹುವಾಗಿ ಮಾರ್ಪಡಿಸಿತು. ಇದಲ್ಲದೆ ಜರ್ಮನಿ, ಆಸ್ಟ್ರಿಯಾ, ರಶಿಯಾ ಮತ್ತು ತುರ್ಕಸ್ತಾನ (೧೯೨೩) ಈ ದೇಶಗಳಲ್ಲಿ ಪ್ರಜಾಪ್ರಭುತ್ವವು ಸ್ಥಾಪನವಾಯಿತು.

ತುರ್ಕಸ್ತಾನದೊಡನೆ ಲಾಸೇನದಲ್ಲಿ ಒಡಂಬಡಿಕೆ—ಮಿತ್ರರಾಷ್ಟ್ರಗಳು ತುರ್ಕಸ್ತಾನದೊಡನೆ ಸೆವರ್ಸ ಎಂಬಲ್ಲಿ ಒಂದು ಒಡಂಬಡಿಕೆಯನ್ನು ಸೂಚಿಸಿದ್ದುವು. ಅದರಲ್ಲಿ ಸೂಚಿತವಾದ ಯೋಜನೆಯಂತೆ ಯುರೋಪದಲ್ಲಿಯ ತುರ್ಕಸ್ತಾನದ ರಾಜ್ಯದಲ್ಲಿ ಕಾನ್‌ಸ್ಟಂಟಿನೋಪಲಿನ ಬಳಿಯ ಕೆಲವು ಭಾಗವು ಮತ್ತು ಗಲಿಪೊಲಿ

ದ್ವೀಪಕಲ್ಪವು ಇದಿಷ್ಟೆ ಪ್ರದೇಶವು ಸಮಾವೇಶವಾಗುವುದಿತ್ತು, ಆದರೆ ಈ ವಿಷಯವು ತುರ್ಕಸ್ತಾನದಲ್ಲಿ ಸ್ಥಾಪಿತವಾದ ರಾಷ್ಟ್ರೀಯ ಪಕ್ಷಕ್ಕೆ ಸಮ್ಮತವಾಗಲಿಲ್ಲ. ಈ ಪಕ್ಷದವರು **ಮುಸ್ತಫಾ ಕೇಮಾಲ ಪಾಶಾ** ಈತನ ನಾಯಕತ್ವದಲ್ಲಿ ಏಶಿಯಾ ಮೈನಾರದಲ್ಲಿಯ **ಅಂಗೋರಾ** ಎಂಬಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಿಕೊಂಡಿದ್ದರು; ಅದಕ್ಕಾಗಿ ತುರ್ಕಸ್ತಾನದ ಸುಲ್ತಾನನಾದ ಎರಡನೆಯ ಮಹಮ್ಮದನು ರಾಜ್ಯತ್ಯಾಗಮಾಡಿದನು. ಆಮೇಲೆ ತುರ್ಕಸ್ತಾನದಲ್ಲಿ ಪ್ರಜಾಪ್ರಭುತ್ವವು ಸ್ಥಾಪನವಾಗಿ ಮುಸ್ತಫಾ ಕೇಮಾಲ ಪಾಶಹನು ಅದರ ಅಧ್ಯಕ್ಷನಾದನು (೧೯೨೩). ಈ ಪ್ರಜಾಪ್ರಭುತ್ವದೊಂದಿಗೆ ಮಿತ್ರರಾಷ್ಟ್ರಗಳು **ಲಾಸೇನ** ಎಂಬಲ್ಲಿ ಸಂಧಿಯನ್ನು ಮಾಡಿಕೊಂಡುವು. ಅದರಲ್ಲಿ ಅಡ್ರಿಯಾನೋಪಲಿನ ವರೆಗಿರುವ ಪ್ರದೇಶದ ಮೇಲೆ ತುರ್ಕಸ್ತಾನದ ಅಧಿಕಾರವನ್ನು ಮಾನ್ಯಮಾಡಲಾಯಿತು.

**ರಾಷ್ಟ್ರಸಂಘದ ಸ್ಥಾಪನೆ, ೧೯೨೦ ಜಾನೆವರಿ ೧೦** – ಮಹಾಯುದ್ಧದಲ್ಲಿ ಯುರೋಪದ ಬಹುಶಃ ಎಲ್ಲ ಪ್ರಮುಖ ರಾಷ್ಟ್ರಗಳು ಭಾಗಿಯಾಗಿದ್ದು ಅದರಲ್ಲಿ ಅತಿಶಯ ಮನುಷ್ಯ ಸಂಹಾರವಾಯ್ತು, ಕೋಟ್ಯವಧಿ ರೂಪಾಯಿಗಳ ಮತ್ತು ಸಂಪತ್ತಿನ ನಾಶವೂ ಆಯ್ತು. ಎಲ್ಲ ರಾಷ್ಟ್ರಗಳು ಇದರ ಪರಿಣಾಮಗಳನ್ನು ಭೋಗಿಸಬೇಕಾಯಿತು. ಆದುದರಿಂದ ಇಂತಹ ಮಹಾಯುದ್ಧವು ಮರಳಿ ಆಗಬಾರದು, ಆಂತರರಾಷ್ಟ್ರೀಯ ಕಲಹಗಳು ಸಾಮೋಪಾಯದಿಂದ ನಿರ್ಣಯವಾಗುವಂತೆ ಪ್ರಯತ್ನವಾಗಬೇಕು, ಮತ್ತು ಮಾನವಜಾತಿಯ ಹಿತಕ್ಕಾಗಿ ಎಲ್ಲರು ಪ್ರಯತ್ನಿಸಬೇಕು ಎಂಬ ಉದ್ದೇಶದಿಂದ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ **ಪ್ರೆಸಿಡೆಂಟ್ ವಿಲ್‍ಸನ್** ಈತನು ಸೂಚಿಸಿದಂತೆ ರಾಷ್ಟ್ರಸಂಘ (League of Nations) ಎಂಬ ಸಂಸ್ಥೆ ೧೯೨೦ ಜಾನೆವರಿ ೧೦ನೆಯ ದಿನ ಸ್ಥಾಪನವಾಯಿತು. ಅದರಲ್ಲಿ ಜಗತ್ತಿನ ೪೮ ರಾಷ್ಟ್ರಗಳು ಸೇರಿದುವು. ಈಗ ೫೦ ಆಗಿರುವುವು. ಇಂಗ್ಲಂಡ್, ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಸ್ವಯಂ ಪ್ರಭುತ್ವವುಳ್ಳ (Self-Governed) ಉಪನಿವೇಶಗಳು ಮತ್ತು ಹಿಂದುಸ್ಥಾನವು ರಾಷ್ಟ್ರಸಂಘದ ಸದಸ್ಯವಾಗಿರುವುವು. ಪರರಾಷ್ಟ್ರೀಯ ತೊಡಕಿನಲ್ಲಿ ಬೀಳಬಾರದೆಂಬುದು ಅಮೇರಿಕೆಯ ಸಂಯುಕ್ತ ಸಂಸ್ಥಾನದ ನೀತಿ ಇದ್ದುದರಿಂದ ಈ ರಾಷ್ಟ್ರವು ಈ ಸಂಸ್ಥೆಯ ಸದಸ್ಯವಾಗಿಲ್ಲ. ಈ ಸಂಘದಲ್ಲಿ ಸೇರಿದ ಎಲ್ಲ ರಾಷ್ಟ್ರಗಳಿಂದ ಬರುವ ಪ್ರತಿನಿಧಿಗಳು ಪ್ರತಿ ವರ್ಷ ಒಂದು ಸಲ ಜಿನೇವಾ ಎಂಬಲ್ಲಿ ಕೂಡುವರು. ಅವರ ಸಭೆಗೆ **ಅಸೆಂಬ್ಲಿ** ಎನ್ನುವರು. ಈ ಅಸೆಂಬ್ಲಿ **ಕೌನ್ಸಿಲ್** ಎಂಬ ಒಂದು ಚಿಕ್ಕ ಸಮಿತಿಯನ್ನು ನಿಯೋಜಿಸಿರುತ್ತದೆ. ಇದಲ್ಲದೆ ಆಂತರರಾಷ್ಟ್ರೀಯ ಜಗಳಗಳನ್ನು

ಬಗೆಹರಿಸಲು ಈ ಸಂಘದ ಪರವಾಗಿ ಹೇಗ್ ಎಂಬಲ್ಲಿ ಒಂದು ಅಂತರರಾಷ್ಟ್ರೀಯ ನ್ಯಾಯಸ್ಥಾನವು ಸ್ಥಾಪಿಸಲಾಗಿದೆ.

ಹಡಗುಪಡೆಯ ನಿಯಂತ್ರಣಕ್ಕಾಗಿ ಪರಿಷತ್ತುಗಳು—ವಾಶಿಂಗ್‌ಟನ್ (೧೯೨೧-೨೨), ಲಂಡನ್ (೧೯೩೦), ಮತ್ತು ಜಿನೇವಾ (೧೯೩೨)—ಜಗತ್ತಿನ ಪ್ರಮುಖ ರಾಷ್ಟ್ರಗಳು ತಮ್ಮ ಸಂರಕ್ಷಣಕ್ಕೆ ಅವಶ್ಯವಿರುವಷ್ಟೆ ಹಡಗುಪಡೆಯನ್ನು ಇಟ್ಟುಕೊಂಡು ಮಿಕ್ಕದ್ದನ್ನು ತೆಗೆದುಹಾಕಬೇಕು, ಮತ್ತು ಇತರ ಯುದ್ಧಸಾಧನಗಳನ್ನಾದರೂ ಕಡಿಮೆ ಮಾಡಬೇಕು; ಹೀಗಾದರೆ ರಾಷ್ಟ್ರಗಳಲ್ಲಿ ಪರಸ್ಪರ ವಿಷಯಗಳಲ್ಲಿ ತೋರುವ ಅವಿಶ್ವಾಸವು ಕಡಿಮೆಯಾಗುವುದು, ಮತ್ತು ಅದರಿಂದ ಜಗತ್ತಿನಲ್ಲಿ ಶಾಂತಿ ಸ್ಥಾಪನವಾಗಲು ಸಾಹಾಯ್ಯವಾಗುವುದು ಎಂದು ಪ್ರೆಸಿಡೆಂಟ್ ವಿಲ್‌ಸನನು ಸೂಚಿಸಿದ್ದನು. ಅದಕ್ಕಾಗಿ ಈ ವಿಷಯವನ್ನು ಆಚರಣೆಯಲ್ಲಿ ತರಲು ಪ್ರೆಸಿಡೆಂಟ್ ವಿಲ್‌ಸನನ ತರುವಾಯ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾದ **ಹಾರ್ಡಿಂಜನು** ೧೯೨೧ರಲ್ಲಿ **ವಾಶಿಂಗ್‌ಟನ್** ಎಂಬಲ್ಲಿ ಒಂದು ಪರಿಷತ್ತನ್ನು ನೆರೆಯಿಸಿದನು.

(೧) **ವಾಶಿಂಗ್‌ಟನ್ ಪರಿಷತ್ತು** (೧೯೨೧-೨೨)—ಈ ಪರಿಷತ್ತಿಗೆ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು, ಇಂಗ್ಲಂಡು, ಇಟಲಿ, ಫ್ರಾನ್ಸ್ ಮತ್ತು ಜಪಾನ ಈ ರಾಷ್ಟ್ರಗಳ ಪ್ರತಿನಿಧಿಗಳು ಬಂದಿದ್ದರು. ಅದರಲ್ಲಿ ಅವರು ಹಡಗುಪಡೆಯಲ್ಲಿಯ ಸಮರನೌಕೆಗಳ ಸಂಖ್ಯೆಯನ್ನು ಕಡಿಮೆಮಾಡಲು ಒಪ್ಪಿಕೊಂಡು ಬ್ರಿಟನ್, ಅಮೇರಿಕೆಯ ಸಂಸ್ಥಾನಗಳು, ಜಪಾನ, ಇಟಲಿ, ಮತ್ತು ಫ್ರಾನ್ಸ್ ಈ ರಾಷ್ಟ್ರಗಳ ಹಡಗುಪಡೆ ಅನುಕ್ರಮವಾಗಿ ೫:೫:೩:೧$\frac{೩}{೪}$:೧$\frac{೩}{೪}$ ಈ ಪ್ರಮಾಣದಲ್ಲಿ ಇರತಕ್ಕದ್ದು ಎಂದು ನಿರ್ಣಯಿಸಿದುವು. ಅದೇ ಮೇರೆಗೆ ವಿಷವಾಯುವನ್ನು ಮತ್ತು ಮುಳುಗುಹಡಗುಗಳನ್ನು ಯುದ್ಧದಲ್ಲಿ ಉಪಯೋಗಿಸಬಾರದು ಎಂದು ಸಮ್ಮತವಾಯಿತು.

(೨) **ಲಂಡನ್ ಪರಿಷತ್ತು** (೧೯೩೦)—ಇಂಗ್ಲಂಡಿನ ಮುಖ್ಯ ಮಂತ್ರಿ ರೆಮುಸೆ ಮೆಕ್ಡೊನಲ್ಡ್ ಈತನು ೧೯೩೦ರಲ್ಲಿ ಹಡಗುಪಡೆಯ ನಿಯಂತ್ರಣಕ್ಕಾಗಿ ೨ನೆಯ ಪರಿಷತ್ತನ್ನು ಲಂಡನಿನಲ್ಲಿ ನೆರೆಯಿಸಿದನು. ಈ ಪರಿಷತ್ತಿಗೆ ಇಂಗ್ಲಂಡ್, ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು, ಫ್ರಾನ್ಸ್, ಇಟಲಿ ಮತ್ತು ಜಪಾನ ಈ ರಾಷ್ಟ್ರಗಳ ಪ್ರತಿನಿಧಿಗಳು ಬಂದಿದ್ದರು. ವಾಶಿಂಗ್‌ಟನ್ ಪರಿಷತ್ತಿನಲ್ಲಿ ಸಮರನೌಕೆಗಳ ಸಂಖ್ಯೆಯನ್ನು ನಿಯಂತ್ರಿಸಲಾಗಿತ್ತು. ಈ ಪರಿಷತ್ತಿನಲ್ಲಿ ಮುಳುಗುನಾವೆಗಳನ್ನು ಮತ್ತು ವಿಧ್ವಂಸಕ ಹಡಗುಗಳನ್ನು ನಿಯಂತ್ರಿಸುವುದಾಗಿ ನಿರ್ಣಯವಾಯಿತು.

(೩) **ಜಿನೇವಾ ಪರಿಷತ್ತು (೧೯೩೨)**—ಮುಂದೆ ರಾಷ್ಟ್ರಸಂಘದ ಸೂಚನೆ ಯಂತೆ ಹಡಗುಪಡೆಯ ನಿಯಂತ್ರಣ ಮತ್ತು ನಿಃಶಸ್ತ್ರೀಕರಣ ಈ ವಿಷಯಗಳನ್ನು ಕುರಿತು ಜಿನೇವಾ ಎಂಬಲ್ಲಿ ೧೯೩೨ರಲ್ಲಿ ಒಂದು ದೊಡ್ಡ ಪರಿಷತ್ತು ನೆರೆಯಿತು. ಈ ಪರಿಷತ್ತಿಗೆ ಜಗತ್ತಿನ ಬಹುತರ ಎಲ್ಲ ಪ್ರಮುಖ ರಾಷ್ಟ್ರಗಳು ಪ್ರತಿನಿಧಿಗಳನ್ನು ಕಳಿಸಿದ್ದುವು. ಹಡಗುಪಡೆ, ಸೈನ್ಯ, ವಿಮಾನಯುದ್ಧ, ಯುದ್ಧದಲ್ಲಿ ವಿಷ ವಾಯುವಿನ ಉಪಯೋಗ, ಒತ್ತಾಯದ ಸೈನಿಕಶಿಕ್ಷಣ ಮುಂತಾದ ವಿಷಯ ಗಳು ನಷ್ಟವಾಗಬೇಕು, ಮತ್ತು ಜಗತ್ತಿನಲ್ಲಿ ಶಾಂತಿಯನ್ನು ಕಾಯಲು ಒಂದು ಆಂತರರಾಷ್ಟ್ರೀಯ ಸಂರಕ್ಷಕ ಸೈನ್ಯವನ್ನು ಸ್ಥಾಪಿಸಬೇಕು ಮುಂತಾಗಿ ಅನೇಕ ಸೂಚನೆಗಳು ಈ ಪರಿಷತ್ತಿನಲ್ಲಿ ಬಂದಿದ್ದುವು. ಆದರೆ ಇವನ್ನು ಕುರಿತು ಮತಭೇದ ವಾದುದರಿಂದ ನಿಶ್ಚಿತವಾದ ಯಾವುವೊಂದು ಯೋಜನೆ ಈ ಪರಿಷತ್ತಿನಲ್ಲಿ ನಿರ್ಧರಿಸ ಲಾಗಲಿಲ್ಲ. ಆದರೂ ಜಗತ್ತಿನಲ್ಲಿ ಶಾಂತಿ ಉಳಿಯಬೇಕಾದರೆ ಇಂತಹ ಒಂದು ವ್ಯವಸ್ಥೆಯಾಗುವುದು ಅವಶ್ಯವೆಂದು ತೋರಿತು.

**ಜಗತ್ತಿನ ಶಾಂತಿರಕ್ಷಣೆಗಾಗಿ ಒಡಂಬಡಿಕೆಗಳು—ಲೊಕರ್ನೊ ಪೆಕ್ಟ್, ಕೆಲಾಗ್ ಪೆಕ್ಟ್ (ಪೆರಿಸ್ ಪೆಕ್ಟ್)**—ಹಡಗುಪಡೆಯ ನಿಯಂತ್ರಣಕ್ಕಾಗಿ ಕೂಡಿದ ಪರಿಷತ್ತಿನಲ್ಲಿ ಬೇರೆ ಬೇರೆ ರಾಷ್ಟ್ರಗಳ ಪ್ರತಿನಿಧಿಗಳು ತಮ್ಮ ತಮ್ಮ ರಾಷ್ಟ್ರಗಳ ಹಡಗುಪಡೆಯ ಮೇಲೆ ನಿರ್ಬಂಧವನ್ನು ಹಾಕಿಕೊಳ್ಳಲು ಒಪ್ಪಿ ಕೊಂಡಿದ್ದರು. ಅದೇ ಮೇರೆಗೆ ಶಾಂತಿಯನ್ನು ಕಾಯುವುದಕ್ಕಾಗಿಯೂ ಆ ರಾಷ್ಟ್ರಗಳು ಹೊಣೆಯನ್ನು ಹೊರಬೇಕು ಎಂಬೀ ಉದ್ದೇಶದಿಂದ ಇಂಗ್ಲಂಡು ಇತರ ರಾಷ್ಟ್ರಗಳೊಡನೆ ಕೆಲವು ಒಡಂಬಡಿಕೆಗಳನ್ನು ಮಾಡಿತು.

(೧) **ಲೊಕರ್ನೊ ಪೆಕ್ಟ್**—೧೯೨೫ ಅಕ್ಟೋಬರದಲ್ಲಿ ಇಂಗ್ಲಂಡ್, ಫ್ರಾನ್ಸ್, ಜರ್ಮನಿ, ಬೆಲ್ಜಮ್, ಇಟಲಿ ಈ ರಾಷ್ಟ್ರಗಳು ಸ್ವಿಝರ್ಲಂಡಿನಲ್ಲಿಯ ಲೊಕರ್ನೊ ಎಂಬಲ್ಲಿ ಒಂದು ಒಡಂಬಡಿಕೆಯನ್ನು ಮಾಡಿದುವು. ಅದರಲ್ಲಿ ವರ್ಸೆಲ್ಸ ಸಂಧಿಯಿಂದ ನಿರ್ಣಯವಾದ ಪಶ್ಚಿಮ ಯುರೋಪದ ರಾಷ್ಟ್ರಗಳ ಮೇರೆ ಗಳಿಗೆ ಅವು ಮಾನ್ಯತೆಯನ್ನು ಕೊಟ್ಟುವು ಮತ್ತು ಪಶ್ಚಿಮ ಯುರೋಪದಲ್ಲಿ ಶಾಂತಿಯನ್ನು ನೆಲೆಗೊಳಿಸಲು ಹೊಣೆಯನ್ನು ಹೊತ್ತುವು.

(೨) **ಕೆಲಾಗ್ ಪೆಕ್ಟ್** (Kellogg Pact) ೧೯೨೮—ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಪ್ರತಿನಿಧಿಯಾದ ಕೆಲಾಗ್ ಎಂಬವನು ಪೆರಿಸಿನಲ್ಲಿ ಜಗತ್ತಿನ ರಾಷ್ಟ್ರಗಳ ಪ್ರತಿನಿಧಿಗಳದೊಂದು ಪರಿಷತ್ತನ್ನು ಕರೆದನು (೧೯೨೮). ಈ ಪರಿಷತ್ತಿಗೆ ರಾಷ್ಟ್ರಸಂಘದಲ್ಲಿ ಸೇರಿದ ರಾಷ್ಟ್ರಗಳ ಪ್ರತಿನಿಧಿಗಳಲ್ಲದೆ ಸೇರದೆ

ಇದ್ದ ರಾಷ್ಟ್ರಗಳ ಪ್ರತಿನಿಧಿಗಳೂ ಬಂದಿದ್ದರು. ಈ ಪರಿಷತ್ತಿನಲ್ಲಿ ಆಂತರ ರಾಷ್ಟ್ರೀಯ ಕಲಹಗಳು ಉತ್ಪನ್ನವಾದರೆ ಅವುಗಳನ್ನು ಬಗೆಹರಿಸಲು ಯುದ್ಧ ವನ್ನು ಅವಲಂಬಿಸದೆ ಶಾಂತಿಯಿಂದ ಪ್ರಯತ್ನಿಸಬೇಕು ಎಂಬ ಗೊತ್ತುವಳಿ ಸ್ವೀಕೃತ ವಾಯಿತು. ಅದಕ್ಕೆ ೬೦ ರಾಷ್ಟ್ರಗಳು ತಮ್ಮ ಒಪ್ಪಿಗೆಯನ್ನು ಕೊಟ್ಟುವು. ಈ ಒಡಂಬಡಿಕೆಗೆ ಪರಿಸ್ ಪಕ್ಟ್ ಎಂದು ಹೆಸರು.

**ಸಫ್ರೇಜೆಟ್ ಚಳವಳಿ**—ಪಾರ್ಲಿಮೆಂಟಿನ ಚುನಾವಣೆಯ ಕಾಲದಲ್ಲಿ ಸ್ತ್ರೀಯರಿಗೆ ಮತಕೊಡುವ ಅಧಿಕಾರವಿರಬೇಕೆಂದು ಮಿಸೆಸ್ ಪಂಕಹರ್ಸ್ಟ್ ಎಂಬ ಮಹಿಳೆಯ ನಾಯಕತ್ವದಲ್ಲಿ ೧೯೧೧ರಲ್ಲಿ ಚಳವಳಿ ಆರಂಭವಾಗಿತ್ತು. ಇದಕ್ಕೆ ಸಫ್ರೇಜೆಟ್ ಚಳವಳಿ ಎಂದು ಹೆಸರು (Suffrage=ಮತಕೊಡುವ ಅಧಿ ಕಾರ). ಲಿಬರಲ್ ಪಕ್ಷದ ಸದಸ್ಯರು ಅನೇಕ ಸುಧಾರಣೆಗಳನ್ನು ಮಾಡಿದ್ದರು. ಆದರೂ ಈ ಸುಧಾರಣೆಯನ್ನು ಅವರು ವಿರೋಧಿಸಿದರು. ಆದುದರಿಂದ ಸ್ತ್ರೀಯ ರಿಗೆ ಮತಾಧಿಕಾರವು ದೊರೆಯಬೇಕೆಂದು ಪಾರ್ಲಿಮೆಂಟಿನಿಂದ ಕಟ್ಟಳೆಯನ್ನು ಸಿದ್ಧಪಡಿಸಲು ಮಹಿಳೆಯರು ಈ ಚಳವಳಿಯನ್ನು ಹೂಡಿದರು. ಅವರು ಅನೇಕ ಕಡೆಗಳಲ್ಲಿ ದೊಂಬೆಗಳನ್ನೂ ಎಬ್ಬಿಸುವ ಕ್ರಮವನ್ನು ನಡೆಯಿಸಿದರು. ಈ ಅತ್ಯಾ ಚಾರಕ್ಕಾಗಿ ಕೆಲವು ಸ್ತ್ರೀಯರನ್ನು ಸೆರೆಮನೆಯಲ್ಲಿ ಇಡಲಾಯಿತು. ಈ ಚಳವಳಿ ನಡೆದಿರುವಾಗ ಮಹಾಯುದ್ಧವು ಆರಂಭವಾಯಿತು. ಆಗ ಮಹಿಳೆಯರು ಇದನ್ನು ನಿಲ್ಲಿಸಿದರು. ಮಹಾಯುದ್ಧವು ನಡೆದಿರುವಾಗ ಪುರುಷರನೇಕರು ಸೇನೆಯಲ್ಲಿ ಸೇರಿ ರಣಾಂಗಣಕ್ಕೆ ಹೋಗಬೇಕಾಯಿತು. ಆಗ ಸ್ತ್ರೀಯರು ಅವರ ಸ್ಥಳದಲ್ಲಿ ಅಂಚೆಯಮನೆ, ಟ್ರಾಮ್ ಬಂಡಿ, ಮೋಟಾರ ಮುಂತಾದೆಡೆಯಲ್ಲಿ ಕೆಲಸ ಗಳನ್ನು ಮಾಡಿದರು. ಮುಂದೆ ಮಹಾಯುದ್ಧವು ನಿಂತ ಬಳಿಕ ಅವರು ಮಾಡಿದ ಉಪಯುಕ್ತವಾದ ಕೆಲಸಗಳಿಂದ ಅನುಕೂಲ ಪರಿಣಾಮವಾಗಿ ಅವರಿಗೆ ಮತಾಧಿ ಕಾರವನ್ನು ಕೊಡುವ ವಿಷಯದಲ್ಲಿ ಹೆಚ್ಚಿನ ವಿರೋಧವು ಉಂಟಾಗಲಿಲ್ಲ. ೧೯೧೮ರ ಮತ್ತು ೧೯೨೮ರ ಕಾಯದೆಗಳಿಂದ ಅವರಿಗೆ ಮತಾಧಿಕಾರವು ದೊರೆತಿತು ಮತ್ತು ಪಾರ್ಲಿಮೆಂಟಿನಲ್ಲಿ ಸದಸ್ಯೆಯರಾಗಿಯೂ ಆರಿಸಿಬರುವುದು ಸಾಧ್ಯವಾಯಿತು.

**ಮುಖ್ಯ ಮಂತ್ರಿ ಲಾಯಿಡ್ ಜಾರ್ಜನ ನಾಯಕತ್ವದಲ್ಲಿ ಮಿಶ್ರ ಮಂತ್ರಿಮಂಡಲವು ಮಾಡಿದ ಕಾರ್ಯವು (೧೯೧೬-೨೨)**—ಮಹಾ ಯುದ್ಧವು ನಡೆದಿರುವಾಗ ೧೯೧೬ರಿಂದ ಲಾಯಿಡ್ ಜಾರ್ಜ್ ಈತನು ಮುಖ್ಯ ಮಂತ್ರಿಯಾಗಿ ೧೯೨೨ರ ವರೆಗೆ ಆ ಕೆಲಸದಲ್ಲಿದ್ದನು. ಈತನು ಲಿಬರಲ್ ಪಕ್ಷ ದವನಾದರೂ ಈತನ ಮಂತ್ರಿಮಂಡಲದಲ್ಲಿ ಕಾಂಝರ್ವೇಟಿವ್ ಮತ್ತು ಕೂಲಿ

ಕಾರ ಪಕ್ಷದ ಮಂತ್ರಿಗಳು ಸೇರಿದ್ದರು. ಅದಕ್ಕಾಗಿ ಈ ಮಂತ್ರಿಮಂಡಲಕ್ಕೆ ಮಿಶ್ರ ಇಲ್ಲವೆ ರಾಷ್ಟ್ರೀಯ ಮಂತ್ರಿಮಂಡಲವೆಂದು ಹೆಸರು. ಲಾಯಿಡ್ ಜಾರ್ಜನು ಯುದ್ಧಕ್ಕೆ ಸಂಬಂಧಪಟ್ಟ ವಿಷಯಗಳನ್ನು ವಿಶೇಷವಾಗಿ ಲಕ್ಷಿಸಿದನು. ಸೈನ್ಯ, ಧನ ಮತ್ತು ಯುದ್ಧಸಾಮಗ್ರಿ ಇವುಗಳನ್ನು ವಿಪುಲವಾಗಿ ಸಂಗ್ರಹಿಸಿದನು. ಅದರಿಂದ ಮಹಾಯುದ್ಧದ ಘೋರ ಆಪತ್ತಿನಲ್ಲಿ ಇಂಗ್ಲಂಡ್ ಮತ್ತು ಮಿತ್ರರಾಷ್ಟ್ರಗಳು ಜಯಶಾಲಿಯಾಗಲು ಸಾಹಾಯ್ಯವಾಯಿತು. ಯುದ್ಧವು ಮುಗಿದ ಬಳಿಕ ಸಂಧಿಯ ಕರಾರುಗಳನ್ನು ನಿರ್ಧರಿಸುವಲ್ಲಿಯೂ ಆತನು ಮುಖ್ಯ ಭಾಗವನ್ನು ವಹಿಸಿದನು. ೧೯೧೮ರಲ್ಲಿ ಪಾರ್ಲಿಮೆಂಟಿನ ಹೊಸ ಆಯ್ಕೆ ನಡೆಯಿತು. ಆ ಕಾಲಕ್ಕೆ ಲಾಯಿಡ್ ಜಾರ್ಜನಿಗೆ ಬೆಂಬಲಿಗರಾದ ಸದಸ್ಯರೇ ಬಹುಸಂಖ್ಯರಾಗಿದ್ದುದು ಕಾಣಬಂದಿತು. ಅದಕ್ಕಾಗಿ ಮುಂದೆ ೧೯೨೨ರ ವರೆಗೆ ಲಾಯಿಡ್ ಜಾರ್ಜನ ನಾಯಕತ್ವದಲ್ಲಿ ಮಿಶ್ರಮಂತ್ರಿಮಂಡಲದ ಕೈಯಲ್ಲಿ ಅಧಿಕಾರವು ಉಳಿದುಕೊಂಡಿತು. ಈ ಅವಧಿಯಲ್ಲಿ ಈ ಮಂತ್ರಿಮಂಡಲದವರು ಮಹತ್ವದ ಅನೇಕ ಸುಧಾರಣೆಗಳನ್ನು ಮಾಡಿದರು.

(೧) 'ರಿಪ್ರೆಜೆಂಟೇಶನ್ ಆಫ್ ದಿ ಪೀಪಲ್ ಅಕ್ಟ್' (೧೯೧೮)—ಈ ಕಟ್ಟಳೆಯಿಂದ ಪಾರ್ಲಿಮೆಂಟಿನ ಚುನಾವಣೆಯ ಸಮಯದಲ್ಲಿ ೨೧ ವರ್ಷಕ್ಕೆ ಮೀರಿದ ವಯಸ್ಸಿನ ಪ್ರಬುದ್ಧ ಪುರುಷನಿಗೆ ಮತಕೊಡುವ ಅಧಿಕಾರವು ದೊರೆತಿತು. ಅದರಂತೆ ೩೦ ವರ್ಷವನ್ನು ಮಿಕ್ಕಿದ ವಯಸ್ಸಿನ ಸ್ತ್ರೀಗೆ ಮತಕೊಡುವ ಮತ್ತು ಪಾರ್ಲಿಮೆಂಟಿನ ಸದಸ್ಯೆಯಾಗಿ ಆರಿಸಿಬರುವ ಅಧಿಕಾರವು ದೊರೆತಿತು.

ಬಳಿಕ ೧೯೨೮ರಲ್ಲಿ ೨೧ ವರ್ಷವನ್ನು ಮೀರಿದ ಸ್ತ್ರೀಯರಿಗೂ ಈ ಅಧಿಕಾರವು ದೊರೆತಿತು. ಈ ಕಟ್ಟಳೆಗಳಿಂದ ಮತದಾರರ ಸಂಘವು ಬಹಳ ವಿಸ್ತೃತವಾಯ್ತು. ಇಂಗ್ಲಂಡಿನ ಜನಸಂಖ್ಯೆಯ ಅರ್ಧದಷ್ಟು ಜನರಿಗೆ ಮತಕೊಡುವುದು ಶಕ್ಯವಾಯಿತು. ಇದರಿಂದ ಇಂಗ್ಲಂಡಿನ ಕಾಮನ್ಸ್ ಸಭೆ ಪೂರ್ಣವಾಗಿ ಜನಮತನಿದರ್ಶಕವಾಯಿತು.

(೨) ಹಿಂದುಸ್ಥಾನದ ರಾಜ್ಯಘಟನೆಯ ಕಟ್ಟಳೆಗಳು, ೧೯೧೯ ಮತ್ತು ೧೯೩೫—೧೯೧೯ರ ಕಟ್ಟಳೆಯಿಂದ ಹಿಂದುಸ್ಥಾನದ ರಾಜ್ಯಘಟನೆಯಲ್ಲಿ ಮಹತ್ವದ ಸುಧಾರಣೆಗಳಾದುವು. ಪ್ರಾಂತಿಕ ಆಡಳಿತದ ಕೆಲವು ವಿಭಾಗಗಳಲ್ಲಿ ಹೊಣೆಗಾರ ರಾಜ್ಯಪದ್ಧತಿಯ ಆರಂಭವಾಯ್ತು.

೧೯೩೫ರಲ್ಲಿ ಹಿಂದುಸ್ಥಾನದ ರಾಜ್ಯಘಟನೆಯ ವಿಷಯದಲ್ಲಿ ಕಟ್ಟಳೆ ಮಾಡಲ್ಪಟ್ಟಿತು. ಈ ಕಟ್ಟಳೆಯಿಂದ ಪ್ರಾಂತಿಕ ಸರಕಾರದ ಎಲ್ಲ ಅಂಗ (ಖಾತೆ)ಗಳಲ್ಲಿ

ಮತ್ತು ಹಿಂದುಸ್ಥಾನ ಸರಕಾರದ ಕೆಲವು ಅಂಗಗಳಲ್ಲಿ ಜವಾಬದಾರ ರಾಜ್ಯ ಪದ್ಧತಿ ಪ್ರಾರಂಭವಾಗುವುದಿದೆ. ಬ್ರಿಟಿಶ್ ಹಿಂದುಸ್ಥಾನ ಮತ್ತು ಸಂಸ್ಥಾನ ಹಿಂದುಸ್ಥಾನ ಇವುಗಳದು ಒಂದು ಸಂಯುಕ್ತ ರಾಷ್ಟ್ರವು (Federation) ಆಗುವುದಿದೆ.

(೩) **'ಐರಿಶ್ ಫ್ರೀ ಸ್ಟೇಟ್ ಎಂಬ ಕಟ್ಟಳೆ (೧೯೨೨)**— ಐರ್ಲಂಡಿನಲ್ಲಿ ಅಸಂತೋಷವು ಇದ್ದಿತು. ಬಂಡಾಯಗಳೂ ದೊಂಬೆಗಳೂ ನಡೆದಿದ್ದುವು. ಅದಕ್ಕಾಗಿ ಐರ್ಲಂಡಿನ ಜನರನ್ನು ಸಂತೈಸಲು ಸಿನ್‌ಫೇನ್ ಪಕ್ಷದ ಮುಖಂಡರು ಅಲ್‌ಸ್ಟರದ ಪ್ರಾಟೆಸ್ಟಂಟ್ ಪಂಗಡದ ಪ್ರತಿನಿಧಿಗಳು ಮತ್ತು ಇಂಗ್ಲಂಡಿನ ಪ್ರತಿನಿಧಿಗಳು ಇವರದೊಂದು ಪರಿಷತ್ತನ್ನು ೧೯೨೧ರಲ್ಲಿ ನೆರೆಯಿಸಲಾಯಿತು. ಇದರಲ್ಲಿ ಎಲ್ಲರಿಗೂ ಸಮ್ಮತವಾದ ಯೋಜನೆಯಂತೆ ಐರ್ಲಂಡಿಗೆ ಹೋಮ್ ರೂಲನ್ನು ಕೊಡಲು ಪಾರ್ಲಿಮೆಂಟು ಒಂದು ಕಟ್ಟಳೆಯನ್ನು ಮಾಡಿತು (೧೯೨೨). ಈ ಕಟ್ಟಳೆಯಿಂದ ದಕ್ಷಿಣ ಐರ್ಲಂಡಿಗೆ ಕನಡಾ ಉಪನಿವೇಶದಂತಹ ಹೋಮ್ ರೂಲು ಕೊಡಲಾಯಿತು, ಅದಕ್ಕೆ ಐರಿಶ್ ಫ್ರೀ ಸ್ಟೇಟ್ ಎಂಬ ಹೆಸರು ದೊರೆತಿತು, ಮತ್ತು ಅಲ್ಲಿ ಸ್ವತಂತ್ರವಾದ ಕಾಯ್ದೆಮಂಡಲವು ಸ್ಥಾಪನವಾಯಿತು. ಉತ್ತರ ಐರ್ಲಂಡಿನಿಂದ (ಅಲ್‌ಸ್ಟರ್) ಮಾತ್ರ ಮೊದಲಿನಂತೆ ಇಂಗ್ಲಂಡಿನ ಪಾರ್ಲಿಮೆಂಟಿಗೆ ಸದಸ್ಯರು ಬರತೊಡಗಿದರು. ಈ ವಿಷಯದಲ್ಲಿ ಹೆಚ್ಚಿನ ವಿವರಗಳನ್ನು ಈ ಮೊದಲು (೫೦೧ನೆಯ ಮತ್ತು ೫೦೨ನೆಯ ಪುಟಗಳಲ್ಲಿ) ಕೊಡಲಾಗಿದೆ.

**ಮುಖ್ಯ ಮಂತ್ರಿಗಳು — ಲಾಯಿಡ್ ಜಾರ್ಜ, ಬೋನರ್ ಲಾ, ಬಾಲ್ಡ್ವಿನ್ ಮತ್ತು ಮಕ್ಡೊನಲ್ಡ (೧೯೧೬-೧೯೩೪)**— ಲಿಬರಲ್ ಪಕ್ಷದ ಲಾಯಿಡ್ ಜಾರ್ಜನು ೧೯೧೬ರಿಂದ ಮುಖ್ಯ ಮಂತ್ರಿಯಾಗಿದ್ದನು. ಅವನ ಮಂತ್ರಿಮಂಡಲದಲ್ಲಿ ಕಾಂಝರ್‌ವೇಟಿವ್ ಮತ್ತು ಕೂಲಿಕಾರ ಪಕ್ಷದವರಾದರೂ ಮಂತ್ರಿಗಳಾಗಿದ್ದರು. ಮಹಾಯುದ್ಧವು ಮುಗಿದ ಬಳಿಕ ಈ ಮಿಶ್ರಮಂತ್ರಿ ಮಂಡಲದ ಅಗತ್ಯವು ತೋರದಾಯಿತು. ಇದಲ್ಲದೆ ಮಹಾಯುದ್ಧವಾದ ಬಳಿಕ ವ್ಯಾಪಾರದ ಮಂದತೆ, ನಿರುದ್ಯೋಗ ಮತ್ತು ಏರುಬೆಲೆ ಇವುಗಳಿಂದ ಇಂಗ್ಲಂಡಿನ ಅಶಾಂತಿ ಉಂಟಾಯಿತು. ಅದನ್ನು ಕಳೆಯಲು ಯೋಜಿಸಬೇಕಾದ ಉಪಾಯಗಳನ್ನು ಕುರಿತು ಮಂತ್ರಿಗಳಲ್ಲಿ ಮತಭೇದವು ಉಂಟಾಯಿತು. ಪಾರ್ಲಿಮೆಂಟಿನಲ್ಲಿ ಕಾಂಝರ್‌ವೇಟಿವ್ ಪಕ್ಷವು ಬಹುಸಂಖ್ಯವಾದುದರಿಂದ ಲಾಯಿಡ್ ಜಾರ್ಜನು ೧೯೨೨ ಅಕ್ಟೋಬರದಲ್ಲಿ ತನ್ನ ಅಧಿಕಾರಕ್ಕೆ ತ್ಯಾಗಪತ್ರವನ್ನು ಕೊಟ್ಟನು. ಆ ಮೇಲೆ ಕಾಂಝರ್‌ವೇಟಿವ್ ಪಕ್ಷದ ನಾಯಕನಾದ ಬೋನಾರ್ ಲಾ ಈತನು ಮುಖ್ಯ ಮಂತ್ರಿಯಾದನು.

ಮುಂದೆ ೧೯೨೩ರಲ್ಲಿ ಪಾರ್ಲಿಮೆಂಟಿನ ಹೊಸ ಆಯ್ಕೆಯಾಯಿತು. ಅದರಲ್ಲಿ ಕಾಂಝರ್‌ವೇಟಿವ್ ಪಕ್ಷವೇ ಬಹುಸಂಖ್ಯವಾಗಿ ಆರಿಸಿ ಬಂದಿತು. ಆದುದ



ಲಾರ್ಡ್ ಕರ್ಝನ್.



ಬೋನಾರ್ ಲಾ.

ರಿಂದ ಬೋನಾರ್ ಲಾ ಈತನೇ ಮುಖ್ಯ ಮಂತ್ರಿಯಾದನು. ಆ ಮೇಲೆ ಸ್ವಲ್ಪ ದಿನಗಳಲ್ಲಿ ಈತನು ಮರಣಹೊಂದಿದನು. ಆಗ ಕಾಂಝರ್‌ವೇಟಿವ್ ಪಕ್ಷದಲ್ಲಿ ಬಾಲ್ಡ್‌ವಿನ್ ಮತ್ತು ಲಾರ್ಡ್ ಕರ್ಝನ್ ಇವರು ಪ್ರಮುಖರಾಗಿದ್ದರು. ಇವರಲ್ಲಿ ಬಾಲ್ಡ್‌ವಿನನು ಮುಖ್ಯ ಮಂತ್ರಿಯಾದನು (೧೯೨೩). ಈ ಮಂತ್ರಿಮಂಡಲವು ವ್ಯಾಪಾರದ ಮಂದತೆ ಮತ್ತು ನಿರುದ್ಯೋಗ ಈ ಸಮಸ್ಯೆಗಳ ಕಡೆಗೆ ಲಕ್ಷ್ಯಕೊಡಬೇಕಾಯಿತು. ಸಂರಕ್ಷಿತ ವ್ಯಾಪಾರದ ಪದ್ಧತಿಯನ್ನು ಆರಂಭಿಸಿ ಬ್ರಿಟಿಶ್ ಸಾಮ್ರಾಜ್ಯದೊಳಗಿನ ದೇಶಗಳಿಂದ ಬರುವ ಸರಕುಗಳಿಗೆ ಸೌಕರ್ಯಗಳನ್ನು ಕೊಟ್ಟರೆ ಇಂಗ್ಲಂಡಿನ ಉದ್ಯೋಗಗಳಿಗೆ ಉತ್ತೇಜನವು ಉಂಟಾಗಿ ನಿರುದ್ಯೋಗವು ಮಾಯವಾಗುವುದು ಎಂದು ಕಾಂಝರ್‌ವೇಟಿವ್ ಪಕ್ಷದ ಮಂತ್ರಿಮಂಡಲದ ಅಭಿಪ್ರಾಯವಾಗಿತ್ತು. ಆದರೆ ಕೂಲಿಕಾರ ಮತ್ತು ಲಿಬರಲ್ ಪಕ್ಷಗಳಿಗೆ ಈ ನೀತಿ ಸಮ್ಮತವಿರಲಿಲ್ಲ. ಅನಿರ್ಬಂಧ ವ್ಯಾಪಾರದ ನೀತಿಯನ್ನು ಬಿಟ್ಟು ಸಂರಕ್ಷಿತ ವ್ಯಾಪಾರದ ಪದ್ಧತಿಯನ್ನು ಸ್ವೀಕರಿಸಿದರೆ ಇಂಗ್ಲಂಡಿನ ವ್ಯಾಪಾರದ ಅಭಿವೃದ್ಧಿ ಕುಗ್ಗಿ ಏರುಬೆಲೆಯಾಗಿ ಬಡವರ ಹೊಟ್ಟೆ ಬಟ್ಟೆಯ ವೆಚ್ಚವು ಹೆಚ್ಚುವುದು ಎಂದು ಅವರ ಅಭಿಪ್ರಾಯವಾಗಿತ್ತು. ಕೂಲಿ

ಕಾರ ಮತ್ತು ಲಿಬರಲ್ ಪಕ್ಷಗಳು ಈ ಸಂದರ್ಭದಲ್ಲಿ ಒಬ್ಬರೊಬ್ಬರನ್ನು ಕೂಡಿದರೆ ಅವರ ಬಹುಮತವು ಆಗಬಹುದಾಗಿತ್ತು. ಆದುದರಿಂದ ಈ ವಿಷಯಗಳನ್ನು



ರೆಮ್ಸೆ ಮೆಕ್ಡೊನಲ್ಡ್.



ಬಾಲ್ಡ್ವಿನ್.

ಕುರಿತು ೧೯೨೪ ಜಾನೆವರಿ ತಿಂಗಳಲ್ಲಿ ಹೊಸ ಚುನಾವಣೆಯಾಯಿತು. ಅದರಲ್ಲಿ ಕಾಂಝರ್ವೇಟಿವ್ ಪಕ್ಷದ ೨೫೮, ಕೂಲಿಕಾರ ಪಕ್ಷದ ೧೯೧ ಮತ್ತು ಲಿಬರಲ್ ಪಕ್ಷದ ೧೫೫ ಮತ್ತು ಇತರರು ೧೦ ಹೀಗೆ ಸದಸ್ಯರಿದ್ದರು. ಇವರಲ್ಲಿ ಕಾಂಝುರ್ವೇಟಿವ್ ಪಕ್ಷದ ಬಹುಮತವಿದ್ದಿತು. ಆದರೂ ವ್ಯಾಪಾರದ ನೀತಿಯ ವಿಷಯದಲ್ಲಿ ಲಿಬರಲ್ ಪಕ್ಷವು ಕೂಲಿಕಾರ ಪಕ್ಷಕ್ಕೆ ಬೆಂಬಲಕೊಡುವುದಾಗಿ ನಿರ್ಧರಿಸಿದುದರಿಂದ ಬಾಲ್ಡ್ವಿನನು ಸೋತು ಕೂಲಿಕಾರ ಪಕ್ಷದ ನಾಯಕನಾದ ರೆಮ್ಸೆ ಮೆಕ್ಡೊನಲ್ಡ್ ಈತನು ಮುಖ್ಯ ಮಂತ್ರಿಯಾದನು (೧೯೨೪ ಜಾನೆವರಿ).

ರೆಮ್ಸೆ ಮೆಕ್ಡೊನಲ್ಡನ ಕೂಲಿಕಾರ ಮಂತ್ರಿಮಂಡಲ (ಜಾನೆವರಿಯಿಂದ ಅಕ್ಟೋಬರ ೧೯೨೪)—೧೯೦೬ರಿಂದ ಕೂಲಿಕಾರ ಪಕ್ಷದ ಪ್ರತಿನಿಧಿಗಳು ಪಾರ್ಲಿಮೆಂಟ ಸಭೆಯಲ್ಲಿ ಬರತೊಡಗಿದ್ದರು. ೧೯೨೪ರಲ್ಲಿ ಈ ಪಕ್ಷದ ಮಂತ್ರಿಮಂಡಲದ ಕೈಯಲ್ಲಿ ಅಧಿಕಾರವು ಬಂದಿತು. ಆದರೆ ಈ ಪಕ್ಷವು ಬಲಿಷ್ಠವಾಗಿರಲಿಲ್ಲ. ಆದುದರಿಂದ ಇದರ ಅಧಿಕಾರವು ಲಿಬರಲ್ ಪಕ್ಷದಿಂದ ದೊರೆವ ಬೆಂಬಲವನ್ನು ಅವಲಂಬಿಸಿದ್ದಿತು. ವ್ಯಾಪಾರದ ವಿಷಯದಲ್ಲಿ ಈ ಪಕ್ಷ

ವನ್ನು ಲಿಬರಲ್ ಪಕ್ಷದವರು ಎತ್ತಿಹಿಡಿದರು. ಆದರೆ ಮಿಕ್ಕ ವಿಷಯದಲ್ಲಿ ಲಿಬರಲ್ ಪಕ್ಷದ ಆಧಾರವು ದೊರೆವ ನಿಶ್ಚಯವಿರಲಿಲ್ಲ. ಈ ಕಾಲಕ್ಕೆ ರಶಿಯ ದಲ್ಲಿ ಪ್ರಜಾಪ್ರಭುತ್ವವು ಇದ್ದಿತು ಮತ್ತು ಅಲ್ಲಿ ಕಮ್ಯುನಿಸ್ಟ (Commu- nist=ಸಮಾಜ ಪ್ರಭುತ್ವವಾದಿ) ಪಕ್ಷದ ಕೈಯಲ್ಲಿ ಅಧಿಕಾರವಿದ್ದಿತು. ಈ ಕಮ್ಯುನಿಸ್ಟ ಪಕ್ಷದ ವಿಷಯದಲ್ಲಿ ಕೂಲಿಕಾರ ಪಕ್ಷಕ್ಕೆ ಸಹಾನುಭೂತಿ ಇದ್ದು ದರಿಂದ ಅದು ರಶಿಯದೊಡನೆ ಒಪ್ಪಂದವನ್ನು ಮಾಡಿಕೊಳ್ಳುವ ಆಲೋಚನೆ ಯನ್ನು ಮಾಡಿತು. ಇದರಿಂದ ಇಂಗ್ಲಂಡಿನಲ್ಲಿ ಕಮ್ಯುನಿಸ್ಟ ಮತವನ್ನು ಪ್ರಚಾರಗೊಳಿಸುವುದು ಮಂತ್ರಿಮಂಡಲದ ಉದ್ದೇಶವಿರಬಹುದೆಂದು ಕೆಲವರಿಗೆ ಸಂದೇಹವು ಬರತೊಡಗಿತು. ಕೂಲಿಕಾರ ಮಂತ್ರಿಮಂಡಲದ ಈ ನೀತಿ ಲಿಬರಲ್ ಪಕ್ಷದವರ ಮನಸ್ಸಿಗೆ ಬರಲಿಲ್ಲ. ಆ ಪಕ್ಷದವರು ಈ ಸಂದರ್ಭ ದಲ್ಲಿ ಕೂಲಿಕಾರ ಪಕ್ಷಕ್ಕೆ ವಿರುದ್ಧವಾಗಿ ಕಾಂಝರ್‌ವೇಟಿವ್ ಪಕ್ಷಕ್ಕೆ ಅನು ಕೂಲವಾಗಿ ಮತವನ್ನು ಕೊಟ್ಟುದರಿಂದ ಕೂಲಿಕಾರ ಪಕ್ಷದ ಪರಾಭವವಾಯ್ತು. ಆಗ ಈ ಸಂದರ್ಭದಲ್ಲಿ ತಪ್ಪು ತಿಳಿವಳಿಕೆಯಾಗಿದೆ. ಅದಕ್ಕಾಗಿ ಎಲ್ಲ ರಾಷ್ಟ್ರದ ಮತವು ಹೇಗಿದೆಂಬುದನ್ನು ತಿಳಿವುದು ಸಾಧ್ಯವಾಗಬೇಕೆಂಬ ಉದ್ದೇಶದಿಂದ ಜಾರ್ಜ ರಾಜನು ಮುಖ್ಯ ಮಂತ್ರಿ ರೆಮ್ಸೆ ಮಕ್ಡೊನಲ್ಡನ ಸಲಹೆಯಂತೆ ಆ ಪಾರ್ಲಿಮೆಂಟ ಸಭೆಯನ್ನು ವಿಸರ್ಜಿಸಿದನು ಮತ್ತು ಹೊಸ ಆಯ್ಕೆಯನ್ನು ಮಾಡಿಸಿದನು (೧೯೨೪ ಅಕ್ಟೋಬರ).

**ಬಾಲ್ಡ್‌ವಿನನ ಕಾಂಝರ್‌ವೇಟಿವ್ ಮಂತ್ರಿಮಂಡಲ (೧೯೨೪–೨೯)**—ಈ ಹೊಸ ಚುನಾವಣೆಯಲ್ಲಿ ಕಾಂಝರ್‌ವೇಟಿವ್ ಪಕ್ಷದ ೪೧೩, ಕೂಲಿ ಕಾರ ಪಕ್ಷದ ೧೫೦, ಲಿಬರಲ್ ಪಕ್ಷದ ಕೇವಲ ೪೦ ಮತ್ತು ಇತರ ೧೨ ಹೀಗೆ ಸದಸ್ಯರು ಆರಿಸಿ ಬಂದರು. ಆದುದರಿಂದ ಮೆಕ್ಡೊನಲ್ಡನು ಅಧಿಕಾರತ್ಯಾಗ ಮಾಡಿದನು. ಮತ್ತು ಸ್ಟನ್ಲೆ ಬಾಲ್ಡ್‌ವಿನ್ ಈತನ ನೇತೃತ್ವದಲ್ಲಿ ಕಾಂಝರ್ ವೇಟಿವ್ ಮಂತ್ರಿಮಂಡಲವು ಸ್ಥಾಪನವಾಯಿತು (೧೯೨೪ ಅಕ್ಟೋಬರ). ವ್ಯಾಪಾರಮಂದತೆ ಏರುಬೆಲೆ ಮತ್ತು ನಿರುದ್ಯೋಗ ಇವುಗಳ ಮೂಲಕ ದೇಶದಲ್ಲಿ ಅಶಾಂತಿ ಹಬ್ಬಿ **ಸಾರ್ವತ್ರಿಕ ಸಂಪು** (General Strike) ಆಯಿತು. ಅದರ ಕಡೆಗೆ ಮತ್ತು ಜರ್ಮನಿಯಿಂದ ದೊರೆಯಬೇಕಾದ ಕಪ್ಪದ ಕಡೆಗೆ, ಮತ್ತು ಮಹಾಯುದ್ಧಕ್ಕೋಸುಗ ಆದ ಸಾಲವನ್ನು ಹೇಗೆ ತೀರಿಸಬೇಕೆಂಬ ಮತ್ತು ಇನ್ನು ಕೆಲವು ವಿಷಯಗಳ ಕಡೆಗೆ ಈ ಮಂತ್ರಿಮಂಡಲವು ಲಕ್ಷ್ಯವೀಯಬೇಕಾಯ್ತು.

**ಸಾರ್ವತ್ರಿಕ ಸಂಪು (೧೯೨೬)**—ವ್ಯಾಪಾರದ ಮಂದತೆಯಿಂದಲೂ

ನಿರುದ್ಯೋಗದಿಂದಲೂ ದೇಶದಲ್ಲಿ ಅಶಾಂತಿಯುಂಟಾಯಿತು. ಅದರ ಉಗ್ರತೆ ಕಣಿಗಳಲ್ಲಿ ಕೆಲಸ ಮಾಡುವ ಕೂಲಿಕಾರರಿಗೆ ಬಹುವಾಗಿ ಬಾಧಿಸತೊಡಗಿತು. ಆಗ ಕಣಿಯೊಳಗಿನ ಕೂಲಿ ಕೆಲವೊಂದು ವಿಶಿಷ್ಟ ಪ್ರಮಾಣಕ್ಕಿಂತ ಕೆಳಗೆ ಇಳಿಯ ಬಾರದೆಂದು ಸರಕಾರದವರು ಕೆಲವು ತಿಂಗಳುಗಳ ವರೆಗೆ ಗ್ರಂಟನ್ನು ಕೊಡಲು ನಿಶ್ಚಯಿಸಿದರು. ಆದರೆ ೧೯೨೬ರಲ್ಲಿ ಈ ಗ್ರಂಟು ನಿಂತು ಹೋದಬಳಿಕ ಕಣಿಯೊಳಗಿನ ಕೂಲಿಯ ದರವು ಕಡಿಮೆಯಾಯಿತು. ಆದುದರಿಂದ ಕಣಿಗಳ ಕೂಲಿಕಾರ ಸಂಘವು ಸಂಪನ್ನು ಹೂಡಿತು. ಅವರಿಗೆ ಸಹಾನುಭೂತಿಯನ್ನು ತೋರಿಸಲು ರೇಲ್ವೆ ಮತ್ತು ಇತರ ಸಂಚಾರಸಾಧನಗಳಲ್ಲಿಯ ಕೂಲಿಕಾರರು ಸಂಪನ್ನು ಹೂಡಿದರು. ಹೀಗೆ ಈ ಸಂಪು ಎಲ್ಲೆಡೆಗೆ ಹಬ್ಬಿದುದರಿಂದ ಇದಕ್ಕೆ **ಸಾರ್ವತ್ರಿಕ ಸಂಪು** (General Strike) ಎಂದು ಹೆಸರು ಬಂದಿತು. ಈ ಸಂಪು ಒಂದು ವಾರದ ವರೆಗೆ ನಡೆಯಿತು. ಅದರಂತೆ ಜನರಿಗೆ ಬಹಳ ಅನಾನುಕೂಲವಾಯಿತು. ಆದರೆ ಸರಕಾರದವರು ತಮ್ಮ ಬಿಗುವನ್ನು ಬಿಡಲಿಲ್ಲವಾದುದರಿಂದ ಸಂಪು ಮುರಿದುಹೋಯಿತು ಮತ್ತು ಎಲ್ಲ ಕೂಲಿಕಾರರು ಮೊದಲಿನಂತೆ ಕೆಲಸಕ್ಕೆ ಬಂದರು.

**ರಮ್ಸೆ ಮಕ್ಡೊನಲ್ಡನ ನಾಯಕತ್ವದಲ್ಲಿ ಕೂಲಿಕಾರ ಮಂತ್ರಿ ಮಂಡಲವು** (National Government), ೧೯೨೯-೧೯೩೧— ೧೯೨೯ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಯಿತು. ಅದರಲ್ಲಿ ಕೂಲಿಕಾರ ಪಕ್ಷದ ೨೮೨, ಕಾಂಝರ್ವೇಟಿವ್ ೨೬೮, ಲಿಬರಲ್ ಮತ್ತು ಇತರ ೬೫ ಹೀಗೆ ಸದಸ್ಯರು ಆರಿಸಿಬಂದರು. ಅವರಲ್ಲಿ ಕೂಲಿಕಾರ ಪಕ್ಷಕ್ಕೆ ಬಹುಮತವಿದ್ದು ಲಿಬರಲ್ ಪಕ್ಷವು ಅವರಿಗೆ ಬೆಂಬಲವಾಗಿತ್ತು. ಅದಕ್ಕಾಗಿ ಬಾಲ್ಡ್ವಿನನು ಅಧಿಕಾರತ್ಯಾಗಮಾಡಿದನು. ಬಳಿಕ ರಮ್ಸೆ ಮಕ್ಡೊನಲ್ಡನ ನೇತೃತ್ವದಲ್ಲಿಯ ಕೂಲಿಕಾರ ಮಂತ್ರಿಮಂಡಲದ ಕೈಯಲ್ಲಿ ಅಧಿಕಾರವು ಬಂದಿತು. ಈ ಕಾಲದಲ್ಲಿ ದೇಶದಲ್ಲಿ ಹೆಚ್ಚುತ್ತಿರುವ ನಿರುದ್ಯೋಗ ಮತ್ತು ವ್ಯಾಪಾರ ಮಾಂದ್ಯಗಳ ಮೂಲಕ ವೆಚ್ಚದ ಮಾನದಿಂದ ರಾಷ್ಟ್ರದ ಉತ್ಪನ್ನವು ಬಹಳ ಕಡಿಮೆಯಾಗಿತ್ತು. ಆಗ ಈ ಕೊರತೆಯನ್ನು ತುಂಬಲು ಹೊಸ ತೆರಿಗೆಗಳನ್ನು ಹಾಕುವುದು ಅವಶ್ಯವಾಯಿತು. ಆದರೆ ಯಾವ ತೆರಿಗೆಗಳನ್ನು ಹಾಕಬೇಕೆಂಬ ವಿಷಯದಲ್ಲಿ ಮುಖ್ಯ ಮಂತ್ರಿ ರಮ್ಸೆ ಮಕ್ಡೊನಲ್ಡ್ ಮತ್ತು ಅರ್ಥಸಚಿವನಾದ ಸ್ನೋಡನ್ ಇವರಲ್ಲಿ ಮತಭೇದವು ಹುಟ್ಟಿತು. ಆಗ ಕೂಲಿಕಾರ ಪಕ್ಷದ ಸ್ನೋಡನ್ ಮತ್ತು ಅವನ ಗುಂಪಿನ ಕೆಲವು ಮಂತ್ರಿಗಳು ಅಧಿಕಾರ

ತ್ಯಾಗ ಮಾಡಿದರು. ಬಳಿಕ ಈ ಆರ್ಥಿಕ ಸಮಸ್ಯೆಯ ವಿಷಯದಲ್ಲಿ ದೇಶವು ವಿಪತ್ತಿಗೆ ಗುರಿಯಾಗಿ ರಾಷ್ಟ್ರದ ಪ್ರತಿಷ್ಠೆ ಕಡಿಮೆಯಾಗಬಾರದೆಂದು ಕೂಲಿಕಾರ ಪಕ್ಷದ ಮೆಕ್ಡೊನಲ್ಡನು ಕಾಂಝರ್ವೇಟಿವ್ ಮತ್ತು ಲಿಬರಲ್ ಪಕ್ಷದ ಪ್ರಮುಖರೊಡನೆ ಆಲೋಚನೆ ಮಾಡಿ ರಾಷ್ಟ್ರೀಯ ಪಕ್ಷವೆಂಬ ಹೊಸ ಪಕ್ಷವನ್ನು ಸ್ಥಾಪಿಸಿದನು. ಈ ಪಕ್ಷಕ್ಕೆ ಜನತೆಯ ಬೆಂಬಲವು ಎಷ್ಟಿದೆ ಎಂಬುದನ್ನು ಪರೀಕ್ಷಿಸಲು ಅವನು ೧೯೩೧ರಲ್ಲಿ ಪಾರ್ಲಿಮೆಂಟನ್ನು ವಿಸರ್ಜಿಸಿ ಹೊಸ ಚುನಾವಣೆಯನ್ನು ಮಾಡಿಸಿದನು.

**ರಾಷ್ಟ್ರೀಯ ಮಂತ್ರಿಮಂಡಲವು** (National Government) (**೧೯೩೧ರಿಂದ**)—೧೯೩೧ರ ಅಕ್ಟೋಬರದಲ್ಲಿ ಹೊಸ ಚುನಾವಣೆಯಾಯಿತು. ಅದರಲ್ಲಿ ರಾಷ್ಟ್ರೀಯ ಪಕ್ಷಕ್ಕೆ ಬೆಂಬಲವಾಗಿದ್ದ ಸದಸ್ಯರು ಬಹು ಸಂಖ್ಯರಾಗಿರುವರೆಂಬುದು ಕಾಣಬಂದಿತು. ಆದುದರಿಂದ ಕೂಲಿಕಾರ ಪಕ್ಷದ ರಮ್ಸೆ ಮೆಕ್ಡೊನಲ್ಡನೇ ಮುಖ್ಯ ಮಂತ್ರಿಯಾದನು. ಈತನ ಮಂತ್ರಿಮಂಡಲದಲ್ಲಿ ಕಾಂಝರ್ವೇಟಿವ್ ಪಕ್ಷದ ಬಾಲ್ಡ್ವಿನ್ ಮತ್ತು ಲಿಬರಲ್ ಪಕ್ಷದ ಲಾರ್ಡ ರೀಡಿಂಗ್ ಮುಂತಾದ ಪ್ರಮುಖರು ಮಂತ್ರಿಗಳಾಗಿದ್ದರು. ೧೯೩೫ರಲ್ಲಿ ಅನಾರೋಗ್ಯದ ಮೂಲಕ ರಮ್ಸೆ ಮೆಕ್ಡೊನಲ್ಡನು ಅಧಿಕಾರತ್ಯಾಗ ಮಾಡಿದನು. ತರುವಾಯ ಬಾಲ್ಡ್ವಿನನು ಮುಖ್ಯ ಮಂತ್ರಿಯಾದನು. ಮುಂದೆ ಹೊಸ ಚುನಾವಣೆಯಾಯಿತು (೧೯೩೫). ಅದರಲ್ಲಿ ರಾಷ್ಟ್ರೀಯ ಪಕ್ಷವೇ ಬಹು ಸಂಖ್ಯವಾದುದರಿಂದ ಬಾಲ್ಡ್ವಿನನು ಮುಖ್ಯ ಮಂತ್ರಿಯಾಗಿ ಉಳಿದನು.

**ರೌಪ್ಯ ಮಹೋತ್ಸವ** (**ಮೇ ೧೯೩೫**)—೫ನೆಯ ಜಾರ್ಜರ ಆಳ್ಕೆಗೆ ೨೫ ವರ್ಷಗಳು ಪೂರ್ಣವಾಗಲು ಇಂಗ್ಲಂಡಿನಲ್ಲಿಯೂ ಸಾಮ್ರಾಜ್ಯದ ಎಲ್ಲ ದೇಶಗಳಲ್ಲಿಯೂ ೧೯೩೫ ಮೇ ತಿಂಗಳಲ್ಲಿ ರೌಪ್ಯ ಮಹೋತ್ಸವವು (Silver Jubilee) ವಿಜೃಂಭಣೆಯಿಂದ ನೆರವೇರಿಸಲಾಯಿತು.

**ಇಟಲಿ ಮತ್ತು ಅಬ್‌ಸೀನಿಯಾ ಇವುಗಳ ನಡುವೆ ಯುದ್ಧ**—ಆಫ್ರಿಕೆಯ ಪೂರ್ವಭಾಗದಲ್ಲಿರುವ ಅಬ್‌ಸೀನಿಯಾ ಮತ್ತು ಇಟಲಿಯ ಉಪನಿವೇಶ ಇವುಗಳ ನಡುವೆ ಜಗಳವು ಹುಟ್ಟಿತು. ಈ ಜಗಳವನ್ನು ಸಾಮೋಪಾಯದಿಂದ ತೀರಿಸಲು ರಾಷ್ಟ್ರಸಂಘವು ಪ್ರಯತ್ನಿಸಿತು. ಆದರೆ ಇಟಲಿಯ ಸರ್ವಾಧಿಕಾರಿಯಾದ (Dictator) ಮುಸಲೋನಿ ಆಫ್ರಿಕಾಖಂಡದಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸುವ ಮಹತ್ವಾಕಾಂಕ್ಷೆಯನ್ನು ತಳೆದುದರಿಂದ ಈ ಜಗಳವು ಶಾಂತಿಯಿಂದ ಬಗೆಹರಿಯಲಿಲ್ಲ. ೧೯೩೫ ಅಕ್ಟೋಬರದಲ್ಲಿ ಇಟಲಿ

ಮತ್ತು ಅಬ್‌ಸೀನಿಯಾ ಈ ರಾಷ್ಟ್ರಗಳಲ್ಲಿ ಯುದ್ಧವು ಆರಂಭವಾಯಿತು. ಅದರಲ್ಲಿ ಇಟಲಿ ಅಬ್‌ಸೀನಿಯವನ್ನು ಗೆದ್ದುಕೊಂಡಿತು (೧೯೩೭ ಮೇ). ರಾಷ್ಟ್ರ ಸಂಘಕ್ಕೆ ಸೇರಿದ ರಾಷ್ಟ್ರಗಳು ಇಟಲಿಯ ವಿರುದ್ಧವಾಗಿ ಆರ್ಥಿಕ ದಂಡಯೋಜನೆಯನ್ನು ಹೂಡಿದ್ದವು. ಆದರೆ ಅದರ ಪ್ರಯೋಜನವಾಗಲಿಲ್ಲ.

ಐದನೆಯ ಜಾರ್ಜರ ನಿಧನ, ೧೯೩೬ ಜಾನೆವರಿ ೨೦—೧೯೩೬ ಜಾನೆವರಿ ೨೦ನೆಯ ದಿನ ತಮ್ಮ ವಯಸ್ಸಿನ ೭೦ನೆಯ ವರ್ಷದಲ್ಲಿ ಐದನೆಯ ಜಾರ್ಜರು ನಾರ್‌ಫಾಕ್ ವಿಭಾಗದಲ್ಲಿ ತಮ್ಮ ಪ್ರೀತಿಯ ಸಂಡ್ರಿಂಗ್‌ಹಮ್ ಅರಮನೆಯಲ್ಲಿ ಮರಣಹೊಂದಿದರು. ಅವರ ವಿಷಯದಲ್ಲಿ ಎಲ್ಲರಲ್ಲಿಯೂ ಪ್ರೇಮ, ಆದರ, ಆತ್ಮೀಯ ಭಾವನೆ ಇದ್ದುದರಿಂದ ಅವರ ನಿಧನದಿಂದ ಬ್ರಿಟಿಶ್ ಸಾಮ್ರಾಜ್ಯದ ದೇಶಗಳಷ್ಟೇ ಅಲ್ಲ, ಜಗತ್ತಿನ ಎಲ್ಲ ದೇಶಗಳಲ್ಲಿಯೂ ದುಃಖದ ಛಾಯೆ ಹಬ್ಬಿತ್ತು. ಐದನೆಯ ಜಾರ್ಜರಿಗೆ ಯುವರಾಜ ಎಡ್ವರ್ಡ, ರಾಜಪುತ್ರ ಅಲ್‌ಬರ್ಟ್ ಜಾರ್ಜ, ರಾಜಕನ್ಯೆ ಮೇರಿ, ರಾಜಪುತ್ರ ಹೆನ್ರಿ, ರಾಜಪುತ್ರ ಜಾರ್ಜ ಹೀಗೆ ಮಕ್ಕಳು ಇರುವರು.

---

## ಸಾರಾಂಶವು.

### ಐದನೆಯ ಜಾರ್ಜ (೧೯೧೦—೧೯೩೬)

ಜಾರ್ಜ ರಾಜರ ಆಳ್ಕೆಯಲ್ಲಿಯ ಮಂತ್ರಿಮಂಡಲಗಳು.

೧೯೧೦—೧೫ ಅಸ್ಕ್ವಿಥನ ಲಿಬರಲ್ ಮಂತ್ರಿಮಂಡಲ.
೧೯೧೫—೧೬ ಅಸ್‌ಕ್ವಿಥನ ರಾಷ್ಟ್ರೀಯ ಮಂತ್ರಿಮಂಡಲ.
೧೯೧೬—೨೨ ಲಾಯಿಡ್ ಜಾರ್ಜನ ರಾಷ್ಟ್ರೀಯ ಮಂತ್ರಿಮಂಡಲ.
೧೯೨೨—೨೩ ಬೋನಾರ್ ಲಾ ಇವನ ಕಾಂರ್ಝರ್‌ವೇಟಿವ್ ಮಂತ್ರಿಮಂಡಲ.
೧೯೨೩—೨೪ ಬಾಲ್ಡ್‌ವಿನನ ಕಾಂರ್ಝರ್‌ವೇಟಿವ್ ಮಂತ್ರಿಮಂಡಲ.
೧೯೨೪ (ಜಾನೆವರಿಯಿಂದ ಅಕ್ಟೋಬರ) ರಮ್ಸೆ ಮೆಕ್ಡೊನಲ್ಡನ ಕೂಲಿಕಾರ ಮಂತ್ರಿಮಂಡಲ.
೧೯೨೪—೨೯ ಬಾಲ್ಡ್‌ವಿನನ ಕಾಂರ್ಝರ್‌ವೇಟಿವ್ ಮಂತ್ರಿಮಂಡಲ.
೧೯೨೯—೩೧ ರಮ್ಸೆ ಮೆಕ್ಡೊನಲ್ಡನ ಕೂಲಿಕಾರ ಮಂತ್ರಿಮಂಡಲ.
೧೯೩೧—೩೫ ರಮ್ಸೆ ಮೆಕ್ಡೊನಲ್ಡನ ರಾಷ್ಟ್ರೀಯ ಮಂತ್ರಿಮಂಡಲ.
೧೯೩೫—೩೭ ಬಾಲ್ಡ್‌ವಿನನ ರಾಷ್ಟ್ರೀಯ ಮಂತ್ರಿಮಂಡಲ.

ಅಂತಃಸ್ಥ ಸುಧಾರಣೆಗಳು—

ನೆಶನಲ್ ಹೆಲ್ಥ್ ಇನ್ಶೂರನ್ಸ ೧೯೧೧.

ನಿರುದ್ಯೋಗಕ್ಕಾಗಿ ಇನ್ಶೂರನ್ಸ ೧೯೧೧.

ಪಾರ್ಲಿಮೆಂಟಿನ ವಿಷಯದಲ್ಲಿ ಕಟ್ಟಳೆಗಳು—

(೧) ಪಾರ್ಲಿಮೆಂಟರಿ ಆ್ಯಕ್ಟ (೧೯೧೧). ಪಾರ್ಲಿಮೆಂಟಿನ ಅವಧಿ ೫ ವರ್ಷ. ಲಾರ್ಡ ಸಭೆಯ ಅಧಿಕಾರಗಳು ಕಡಿಮೆಯಾಗುವುವು.

(೨) ರಿಪ್ರೆಜೆಂಟೇಶನ್ ಆ್ಯಫ್ ಪೀಪಲ್ ಆ್ಯಕ್ಟ (೧೯೧೮). ಬಡಬಗ್ಗರಿಗೆ, ದಂಡಾಳುಗಳಿಗೆ, ನಾವಿಕರಿಗೆ, ಮತ್ತು ೩೦ನ್ನು ಮಿಕ್ಕಿದ ವಯಸ್ಸಿನ ಸ್ತ್ರೀಯರಿಗೆ ಮತಾಧಿಕಾರ. ೧೯೨೮ರಲ್ಲಿ ೨೧ ವಯಸ್ಸಿನ ಸ್ತ್ರೀಯರಿಗೂ ಮತಾಧಿಕಾರ.

ಸಾಮ್ರಾಜ್ಯದೊಳಗಿನ ಇತರ ದೇಶಗಳನ್ನು ಕುರಿತು ಕಟ್ಟಳೆಗಳು—

೧೯೧೯ ಹಿಂದುಸ್ಥಾನದ ರಾಜ್ಯಘಟನೆಯ ಕಟ್ಟಳೆ.
ಪ್ರಾಂತಿಕ ಸರಕಾರದ ಕೆಲವು ರಾಜ್ಯಾಂಗಗಳಲ್ಲಿ ಹೊಣೆಗಾರ ರಾಜ್ಯಪದ್ಧತಿ.

೧೯೩೫ ಅಗಸ್ಟ. ಹಿಂದುಸ್ಥಾನದ ಆಡಳಿತೆಯ ಕಟ್ಟಳೆ (The Government of India Act, 1935).

೧೯೨೨ ದಕ್ಷಿಣ ಐರ್ಲಂಡಿನ ರಾಜ್ಯಘಟನೆಯ ಕಟ್ಟಳೆ.
ಐರಿಶ್ ಫ್ರೀ ಸ್ಟೇಟಿನ ಸ್ಥಾಪನೆ.

೧೯೨೨ ಇಜಿಪ್ತಕ್ಕೆ ಸ್ವತಂತ್ರತೆ.

ಇತರ ವಿಷಯಗಳು—

(೧) ೧೯೨೦ ಜಾನೆವರಿ—ರಾಷ್ಟ್ರಸಂಘದ ಸ್ಥಾಪನೆ.

(೨) ಸಾರ್ವತ್ರಿಕ ಸಂಪು (೧೯೨೬). ವ್ಯಾಪಾರಮಾಂದ್ಯ, ಏರುಬೆಲೆ, ನಿರುದ್ಯೋಗ ಇವುಗಳಿಂದ ದೇಶದಲ್ಲಿ ಅಶಾಂತಿ; ಕಣಿಯೊಳಗಿನ ಕೂಲಿಕಾರರ ಸಂಪು, ಅವರಿಗೆ ಇತರ ಉದ್ಯೋಗಗಳ ಕೂಲಿಕಾರರ ಸಂಘಗಳು ಸೇರಿ ಸಾರ್ವತ್ರಿಕ ಸಂಪು.

(೩) ಹಡಗುಪಡೆಯನ್ನು ಕಡಿಮೆ ಮಾಡುವ ಕುರಿತು ಪ್ರಮುಖ ರಾಷ್ಟ್ರಗಳ ಪರಿಷತ್ತುಗಳು—ವಾಶಿಂಗ್‌ಟನ್ ೧೯೨೧ ಮತ್ತು ಲಂಡನ್ ೧೯೩೦.

(೪) ಶಾಂತತೆಯನ್ನು ಸ್ಥಾಪಿಸಲು ಒಪ್ಪಂದಗಳು—(೧) ಲೋಕಾರ್ನೊ ಪ್ಯಾಕ್ಟ ೧೯೨೫. (೨) ಕೆಲಾಗ್ ಪ್ಯಾಕ್ಟ ೧೯೨೮.

ಮಹಾಯುದ್ಧವು ೧೯೧೪—೧೮.

ಕಾರಣಗಳು: (೧) ಯುರೋಪದಲ್ಲಿಯ ಎರಡು ಸಂಘಗಳು, ಅವುಗಳಲ್ಲಿಯ ಸ್ಪರ್ಧೆ. (ಅ) ಜರ್ಮನಿ, ಆಸ್ಟ್ರಿಯಾ, ಇಟಲಿ. (ಆ) ಫ್ರಾನ್ಸ್, ರಶಿಯಾ, ಇಂಗ್ಲಂಡ್.

(೨) ಫ್ರಾನ್ಸ್ ಮತ್ತು ಜರ್ಮನಿ ಇವುಗಳ ನಡುವೆ ವೈರ.

(೩) ಇಂಗ್ಲಂಡಿನ ಸಾಮ್ರಾಜ್ಯ, ಹಡಗುಪಡೆಯ ಶಕ್ತಿ ಮತ್ತು ವ್ಯಾಪಾರ ಇವುಗಳ ಬಗ್ಗೆ ಜರ್ಮನಿಗೆ ಮತ್ಸರವು ಹುಟ್ಟಿದುದು.

(೪) ಬಾಲ್ಕನ್ ದ್ವೀಪಕಲ್ಪದಲ್ಲಿ ತಮ್ಮ ವರ್ಚಸ್ಸು ಇರಬೇಕೆಂದು ಆಸ್ಟ್ರಿಯಾ ಮತ್ತು ರಶಿಯಾ ಇವುಗಳಲ್ಲಿ ಸ್ಪರ್ಧೆ. ಸರ್ವಿಯವು ಆಸ್ಟ್ರಿಯದ ಮಹತ್ವಾಕಾಂಕ್ಷೆಯನ್ನು ವಿರೋಧಿಸಿದುದು. ಬಾಸ್ನಿಯಾ ಪ್ರಾಂತದಲ್ಲಿ ಆಸ್ಟ್ರಿಯದ ಯುವ ರಾಜನ ಕೊಲೆ. ಅದರಲ್ಲಿ ಸರ್ವಿಯದ ಜನರ ಭಾಗವಿದೆಂದು ಆಸ್ಟ್ರಿಯಾ ಮತ್ತು ಸರ್ವಿಯಾ ಇವುಗಳ ನಡುವೆ ಯುದ್ಧವು ಆರಂಭವಾದುದು; ಈ ಯುದ್ಧದಲ್ಲಿ ಇತರ ರಾಷ್ಟ್ರಗಳು ಸೇರಿ ಮಹಾಯುದ್ಧವಾಯಿತು.

(೫) ಸ್ವತಂತ್ರವೂ ತಟಸ್ಥವೂ ಆದ ಬೆಲ್ಜಮ್ ದೇಶದೊಳಗಿಂದ ಬೆಲ್ಜಮಿನ ಸಮ್ಮತಿ ಇಲ್ಲದೆ ಜರ್ಮನಿ ಸೈನ್ಯವನ್ನು ಒಯ್ದಿತು. ಅದಕ್ಕಾಗಿ ಇಂಗ್ಲಂಡು ಜರ್ಮನಿಯ ವಿರುದ್ಧವಾಗಿ ಯುದ್ಧದಲ್ಲಿ ಸೇರಿತು (೧೯೧೪ ಅಗಸ್ಟ)

ಯುದ್ಧದಲ್ಲಿ ಸೇರಿದ ರಾಷ್ಟ್ರಗಳು—

(೧) ಮಿತ್ರರಾಷ್ಟ್ರಗಳ ಪರವಾಗಿ—ಇಂಗ್ಲಂಡ್, ಫ್ರಾನ್ಸ್, ರಶಿಯಾ, ಸರ್ವಿಯಾ, ಬೆಲ್ಜಮ್, ರುಮಾನಿಯಾ, ಇಟಲಿ, ಅಮೇರಿಕಾ, ಜಪಾನ.

(೨) ಶತ್ರುಪಕ್ಷದಲ್ಲಿ—ಜರ್ಮನಿ, ಆಸ್ಟ್ರಿಯಾ, ತುರ್ಕಸ್ತಾನ, ಬಲ್ಗೇರಿಯಾ.

ಯುದ್ಧದಲ್ಲಿ ತೊಡಗಿದ ಸೇನಾಪತಿಗಳು—ಮಾರ್ಶಲ್ ಫೋಶ್ (ಫ್ರೆಂಚ್); ಸರ ಜಾನ್ ಫ್ರೆಂಚ್, ಅರ್ಲ ಹೇಗ್ (ಇಂಗ್ಲಂಡಿನವರು); ಪೂರ್ವದಿಕ್ಕಿನಲ್ಲಿ ಜನರಲ್ ಅಲೆನ್‌ಬಿ ಮತ್ತು ಮೊಡ್ (ಇಂಗ್ಲಂಡ್); ಅಡ್‌ಮಿರಲ್ ಬೇಟಿ (ಇಂಗ್ಲಂಡಿನ ನೌಕಾ ದಳಪತಿ).

ಶತ್ರುಪಕ್ಷದಲ್ಲಿ—ಹಿಂಡೆನ್‌ಬರ್ಗ್ ಮತ್ತು ಮೆಕೆನ್‌ಸನ್ (ಜರ್ಮನಿ).

ಯುದ್ಧ ಕಾರ್ಯಗಳ ವ್ಯವಸ್ಥಾಪಕರು—ಲಾಯಿಡ್ ಜಾರ್ಜನು ಮೊದಲು ಮದ್ದು ಗುಂಡು ಮತ್ತು ಯುದ್ಧಸಾಮುಗ್ರಿಯನ್ನು ಸಿದ್ಧಪಡಿಸುವ ಕೆಲಸದಲ್ಲಿ, ಮುಂದೆ ೧೯೧೬

ರಿಂದ ಮುಖ್ಯ ಮಂತ್ರಿ; ಲಾರ್ಡ್ ಕಿಚನೇರ್—ಸೇನಾಸಂಗ್ರಹ ಮತ್ತು ಸಂಗ್ರಾಮದ ಕಾರ್ಯದರ್ಶಿ ಈ ಕೆಲಸದಲ್ಲಿ.

ಮಹಾಯುದ್ಧ—

(ಅ) ಪಶ್ಚಿಮ ರಣಾಂಗಣ—ಪ್ಯಾರಿಸಿನ ಮೇಲೆ ತ್ವರೆಯಿಂದ ದಾಳಿಮಾಡಲು ಸುಲಭವಾಗಬೇಕೆಂದು ಜರ್ಮನಿ ಬೆಲ್ಜಿಯಮಿನೊಳಗಿಂದ ಸೈನ್ಯವನ್ನು ಒಯ್ದಿತು. ಆದರೆ ಫ್ರಾನ್ಸಿನ ಸೀಮೆಯ ಮೇಲೆ ಫ್ರೆಂಚ್ ಇಂಗ್ಲಿಶ್ ಸೈನ್ಯಗಳು ಅದನ್ನು ವಿರೋಧಿಸಿದುವು. ಮಾರ್ನ (೧೯೧೪—೧೫), ಎಪ್ರ (೧೯೧೫), ವರ್ಡೂನ್ (೧೯೧೬), ಸಾಮ್ (೧೯೧೬), ಈ ಸ್ಥಳಗಳಲ್ಲಿಯ ಯುದ್ಧಗಳು. ಎರಡೂ ಸೈನ್ಯಗಳು ಕಂದಕಗಳನ್ನು ಆಶ್ರಯಿಸುವುವು. ೧೯೧೭ರಲ್ಲಿ ಅಮೇರಿಕನ್ ಸೈನ್ಯದ ಸಾಹಾಯ್ಯ. ೧೯೧೮ ಮಿತ್ರಸೇನೆಗಳ ಏರಾಟ. ಜರ್ಮನ ಸೈನ್ಯವು ಹಿಮ್ಮೆಟ್ಟುವುದು.

(ಆ) ಪೂರ್ವ ರಣಾಂಗಣ—(೧) ರಶಿಯನ್ ಸೇನೆ ಪೂರ್ವ ಪ್ರಶಿಯದ ಮೇಲೆ ದಾಳಿಮಾಡಿದುದು (೧೯೧೪), ಆದರೆ ಜನರಲ್ ಹಿಂಡೆನ್‌ಬರ್ಗನು ಟ್ಯಾನೆನ್‌ಬರ್ಗ ಎಂಬಲ್ಲಿ ಆ ಸೈನ್ಯವನ್ನು ಸೋಲಿಸಿದನು (೧೯೧೫).

(೨) ಆಸ್ಟ್ರಿಯಾ ಹಂಗೇರಿಯ ಮೇಲೆ ರಶಿಯನ್ ಸೈನ್ಯದ ದಾಳಿ, ಮ್ಯಾಕೆನ್ ಸನನು ಈ ಸೇನೆಯನ್ನು! ಸೋಲಿಸುವನು (೧೯೧೫ ಮತ್ತು ೧೬). ರಶಿಯದಲ್ಲಿ ರಾಜ್ಯಕ್ರಾಂತಿ (೧೯೧೭). ರಶಿಯಾ ದೇಶವು ವೈರಿಯೊಡನೆ ಒಪ್ಪಂದ ಮಾಡಿಕೊಂಡು ಯುದ್ಧದಿಂದ ಹೊರಗೆ ಬರುವುದು (೧೯೧೮).

(೩) ಡಾರ್ಡಾನೆಲ್ಸ್ ಮಾರ್ಗವಾಗಿ ರಶಿಯಕ್ಕೆ ಸಾಹಾಯ್ಯವಾಗಲು ಇಂಗ್ಲಂಡು ಮಾಡಿದ ಪ್ರಯತ್ನವು ನಿಷ್ಫಲವಾಯಿತು (೧೯೧೫—೧೬).

(೪) ಸುಯೇಜ್ ಕೆನಲ್ ಮತ್ತು ಇಜಿಪ್ತದ ಮೇಲೆ ದಾಳಿಮಾಡಲು ತುರ್ಕಸ್ತಾನದ ಪ್ರಯತ್ನಗಳು (೧೯೧೫—೧೬); ಅವು ನಿಷ್ಫಲವಾದುವು. ಇಂಗ್ಲಂಡು ಹಿಂದಿ ಸೈನ್ಯದ ಸಾಹಾಯ್ಯದಿಂದ ತುರ್ಕಸ್ತಾನದ ಮೆಸೊಪೊಟೇಮಿಯಾ (ಇರಾಕ್) ಮತ್ತು ಪ್ಯಾಲೆಸ್ಟಾಯಿನ್ ಈ ಪ್ರದೇಶಗಳನ್ನು ಗೆದ್ದುಕೊಂಡಿತು (೧೯೧೭).

ಇತರ ಸ್ಥಳಗಳಲ್ಲಿ—

(೧) ಆಫ್ರಿಕೆಯಲ್ಲಿಯ ಜರ್ಮನಿಯ ಉಪನಿವೇಶಗಳನ್ನು ಇಂಗ್ಲಂಡು ಮತ್ತು ಬ್ರಿಟಿಶ್ ಉಪನಿವೇಶಗಳು ಗೆದ್ದುಕೊಂಡುವು.

(೨) ಪೆಸಿಫಿಕ್ ಸಮುದ್ರದಲ್ಲಿಯ ಜರ್ಮನ್ ಸ್ಥಳಗಳನ್ನು ಜಪಾನವು ಗೆದ್ದುಕೊಂಡಿತು.

ಸಮುದ್ರದ ಮೇಲಿನ ಮತ್ತು ವೈಮಾನಿಕ ಯುದ್ಧಪ್ರಸಂಗಗಳು.

(೧) ಇಂಗ್ಲಂಡಿಗೆ ವ್ಯಾಪಾರದ ಮುತ್ತಿಗೆಯನ್ನು ಹಾಕಬೇಕೆಂದು ಜರ್ಮನಿ ಮುಳುಗುನಾವೆಗಳ ಹಾವಳಿಯನ್ನು ಆರಂಭಿಸಿತು (೧೯೧೫); ಆದರೆ

ಆದರಿಂದ ತಟಸ್ಥ ರಾಷ್ಟ್ರಗಳಿಗೆ ಬಾಧೆಯಾದುದರಿಂದ ಅಮೇರಿಕೆ ಜರ್ಮನಿಯ ವಿರುದ್ಧವಾಗಿ ಮಿತ್ರರಾಷ್ಟ್ರಗಳಿಗೆ ನೆರವಾಯಿತು (೧೯೧೭).

(೨) ಜಟ್‌ಲಂಡಿನ ಸಮುದ್ರಯುದ್ಧದಲ್ಲಿ (೧೯೧೬) ಜರ್ಮನ್ ಹಡಗು-ಪಡೆ ಹಾನಿಗೆ ಗುರಿಯಾಯಿತು.

(೩) ಇಂಗ್ಲಂಡಿನ ಮೇಲೆ ಜರ್ಮನ್ ವಿಮಾನಗಳಿಂದ ಬಾಂಬುಗಳು ಬಿದ್ದುವು. ಆದರೆ ತೋಫುಗಳ ಸಾಹಾಯ್ಯದಿಂದ ಆ ವಿಮಾನಗಳ ನಾಶವು.

ವರ್ಸೆಲ್ಸಿನ ಒಪ್ಪಂದ, ೨೮ ಜೂನ ೧೯೧೯—೧೯೧೮ ನವೆಂಬರ ೧೧ನೆಯ ತಾರೀಕಿನ ದಿನ ಮಹಾ ಯುದ್ಧವು ನಿಂತಿತು; ವರ್ಸೆಲ್ಸಿನಲ್ಲಿ ೧೯೧೯ ಜೂನ ತಿಂಗಳಲ್ಲಿ ಒಡಂಬಡಿಕೆ. ಇದರಿಂದ ಜರ್ಮನಿಯ ಕಡೆಯಿಂದ ಫ್ರಾನ್ಸಿಗೆ ಅಲ್‌ಸೇಸ್ ಮತ್ತು ಲೊರೆನ್ ಪ್ರಾಂತಗಳು ಮತ್ತು ವಿಶೇಷ ಕಪ್ಪವು ದೊರೆತಿತು. ಜರ್ಮನಿಯ ನೌಕಾದಲವು ಮಿತ್ರರಾಷ್ಟ್ರಗಳ ವಶವಾಯಿತು. ಜರ್ಮನಿಯ ಅಫ್ರಿಕೆಯಲ್ಲಿಯ ಉಪನಿವೇಶಗಳು ಮತ್ತು ತುರ್ಕಸ್ತಾನದ ಮೆಸೊಪೊಟೇಮಿಯಾ ಪ್ರಾಂತವು ಕೆಲಕಾಲ ಇಂಗ್ಲಂಡಿನ ವಶದಲ್ಲಿ ಬಂದಿತು.

---

# ೨೭ನೆಯ ಪ್ರಕರಣವು

## ಎಂಟನೆಯ ಎಡ್ವರ್ಡ

ಜನ್ಮವು ೨೩ ಜೂನ ೧೮೯೪;

ರಾಜ್ಯಾರೋಹಣವು ೨೧ ಜಾನೆವರಿ ೧೯೩೬

(೪೧ನೆಯ ವರ್ಷ)

(ಜಾನೆವರಿ ೨೧ರಿಂದ ಡಿಸೆಂಬರ ೧೦, ೧೯೩೬).

**ಎಂಟನೆಯ ಎಡ್ವರ್ಡ**—ಐದನೆಯ ಜಾರ್ಜರ ತರುವಾಯ ಅವರ ಹಿರಿಯ ಮಕ್ಕಳಾದ ಎಡ್ವರ್ಡ ಅಲ್ಬರ್ಟ ಇವರು ತಮ್ಮ ೪೧ನೆಯ ವಯಸ್ಸಿನಲ್ಲಿ ಇಂಗ್ಲಂಡಿನ ಪಟ್ಟಕ್ಕೆ ಬಂದರು. ಇವರು ಚಿಕ್ಕಂದಿನಲ್ಲಿ ಹಡಗುಪಡೆಯ ಶಿಕ್ಷಣ ವನ್ನು ಪಡೆದು ಸೈನ್ಯದಲ್ಲಿ ಅನುಭವವನ್ನು ದೊರಕಿಸಿದ್ದರು. ಇದಲ್ಲದೆ ಇವರು ಪ್ರವಾಸಪ್ರಿಯರು, ಆಟಪಾಟಗಳಲ್ಲಿ ಆಸಕ್ತಿಯುಳ್ಳ ಕ್ರೀಡಾವೃತ್ತಿಯವರು, ರಾಷ್ಟ್ರೋನ್ನತಿಯ ಎಲ್ಲ ಕಾರ್ಯಗಳಲ್ಲಿ ಆಸ್ಥೆವಹಿಸುವವರು, ಬಡಜನರ ಕಡೆಗೆ ಸಹಾನುಭೂತಿಯನ್ನು ಜೀರುವವರು, ಮತ್ತು ಅವರ ಹಿತಕ್ಕೋಸುಗ ಪ್ರಯತ್ನಿಸು ವವರು.

ಎಡ್ವರ್ಡ ರಾಜರು ಬಾಲ್ಯದಲ್ಲಿ ನೌಕಾವಿದ್ಯೆಯ ಶಿಕ್ಷಣವನ್ನು ಆರಂಭಿಸಿ ಅದನ್ನು ೧೯೧೧ರಲ್ಲಿ ಎಂದರೆ ತಮ್ಮ ವಯಸ್ಸಿನ ೨೦ನೆಯ ವರ್ಷ ಮುಗಿಸಿದರು. ಇವರು ಯುವರಾಜರಿರುವಾಗ ಮಹಾಯುದ್ಧವು ನಡೆಯಿತು. ಆಗ ಇವರು ಫ್ರಾನ್ಸಿನಲ್ಲಿ ಸೈನ್ಯದಲ್ಲಿಯ ಅಧಿಕಾರಿಯೆಂದು, ಬಳಿಕ ಭೂಮಧ್ಯಸಮುದ್ರದಲ್ಲಿ ನೌಕಾ ವಿಭಾಗದ ಅಧಿಕಾರಿಯೆಂದು ಕೆಲಸ ಮಾಡಿದರು. ಇದಲ್ಲದೆ ಇವರು ಯುದ್ಧವು ಸಾಗಿರುವಾಗ ಇಜಿಪ್ತ, ಸೂಡಾನ ಮತ್ತು ಇಟಲಿ ಈ ಪ್ರದೇಶಗಳಿಗೂ ಸ್ವತಃ ಸಂಚರಿಸಿ ಬಂದರು.

ಅವರು ಪ್ರವಾಸದಲ್ಲಿ ಬಹಳ ಅಭಿಲಾಷೆಯುಳ್ಳವರು. ಮಹಾಯುದ್ಧವು ಮುಗಿದ ಬಳಿಕ ಬೇರೆ ಬೇರೆ ದೇಶಗಳ ಸ್ಥಿತಿಗತಿಗಳನ್ನು ಪ್ರತ್ಯಕ್ಷವಾಗಿ ನೋಡ ಬೇಕೆಂದು ಇವರು ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಕನಡಾ, ನ್ಯೂಝೀಲಂಡ್, ಆಸ್ಟ್ರೇಲಿಯಾ, ಏಡನ್, ಜಿಬ್ರಾಲ್ಟರ, ಹಿಂದುಸ್ಥಾನ, ಹಾಂಗಕಾಂಗ, ದಕ್ಷಿಣ ಆಫ್ರಿಕಾ, ಪೂರ್ವ ಆಫ್ರಿಕಾ ಇವುಗಳನ್ನು ಮತ್ತು ಫ್ರಾನ್ಸ್, ಜರ್ಮನಿ, ನಾರ್ವೆ

ಜಪಾನ, ದಕ್ಷಿಣ ಅಮೇರಿಕಾ, ಇಟಲಿ ಮುಂತಾದ ಪರಕೀಯ ದೇಶಗಳನ್ನು ಸಂದರ್ಶಿಸಿ ಅಲ್ಲಿಯ ಪರಿಸ್ಥಿತಿಯನ್ನು ಕಣ್ಣುಮುಟ್ಟಿ ಅವಲೋಕಿಸಿರುವರು. ಇವುಗಳಲ್ಲಿ ಕೆಲವು ದೇಶಗಳ ಪ್ರವಾಸವನ್ನು ಅವರು ವಿಮಾನಮಾರ್ಗದಿಂದ ಮಾಡಿರುವರು.

ಬೆಲ್ಜಿಯಮಿನ ರಾಜಧಾನಿಯಾದ ಬ್ರುಸೆಲ್ಸಿನಲ್ಲಿ ಮಹಾಯುದ್ಧದಲ್ಲಿ ಮರಣಹೊಂದಿದ ವೀರರ ಸ್ಮಾರಕದ ಅನಾವರಣಮಾಡುವ ಸಮಾರಂಭವು ೧೯೨೩ರಲ್ಲಿ ಇವರ ಕೈಯಿಂದಲೆ ನೆರವೇರಿತು. ೧೯೨೪ರಲ್ಲಿ ವಿಂಬಲಡೆನ್ ಎಂಬಲ್ಲಿ ಬ್ರಿಟಿಶ್ ಸಾಮ್ರಾಜ್ಯದ ದೊಡ್ಡದಾದ ಔದ್ಯೋಗಿಕ ಪ್ರದರ್ಶನವು ಇವರ ನೇತೃತ್ವದಲ್ಲಿ ನಡೆಯಿತು. ೧೯೩೧ರಲ್ಲಿ ಬ್ರಿಟಿಶ್ ವ್ಯಾಪಾರವು ವೃದ್ಧಿಯಾಗಬೇಕೆಂದು ಇವರು ಬಹುವಾಗಿ ಪ್ರಯತ್ನಿಸಿದರು.

ಕಣಿಯಲ್ಲಿ ಕೆಲಸಮಾಡುವ ಕೂಲಿಕಾರರ, ಉದ್ಯೋಗಹೀನರ ಮತ್ತು ಬಡಜನರ ವಿಷಯದಲ್ಲಿ ಇವರಿಗೆ ಸಹಾನುಭೂತಿಯಿದೆ. ಈ ಜನರ ಸ್ಥಿತಿಯನ್ನು ಕಣ್ಣಾರೆ ಕಾಣಲು ಇವರು ಕಲ್ಲಿದ್ದಲಿಯ ಕಣಿಗಳನ್ನು ಮತ್ತು ಬಡವರ ಮನೆಗಳನ್ನು ಸಂದರ್ಶಿಸಿ ಅವರೊಡನೆ ಮಾತುಕತೆಗಳನ್ನು ಆಡಿರುವುದುಂಟು.

ಎಡ್ವರ್ಡ ರಾಜರು ಒಳಿತಾದ ವಾಗ್ಮಿಗಳೂ ಆಗಿರುವರು. ಅನೇಕ ಕಡೆಗಳಲ್ಲಿ ಭಾಷಣಗಳನ್ನು ಮಾಡಿ ಅವರು ತರುಣಜನರ ಮುಂದೆ ಉಚ್ಚವಾದ ಗುರಿಯನ್ನು ಇರಿಸಿದ್ದಾರೆ. **ನಿಯಮಪಾಲನೆ** (Discipline), **ಸಂಧಿ ಮತ್ತು ಮೈತ್ರಿ** ಈ ಮೂರು ಸದ್ಗುಣಗಳು ಇದ್ದಲ್ಲಿ ತರುಣಜನರ ಉನ್ನತಿಯಾಗುವುದು ಎಂದು ಅವರು ಒಂದು ಉಪನ್ಯಾಸದಲ್ಲಿ ಪ್ರತಿಪಾದಿಸಿರುವರು. ಆಲಸ್ಯವು ಅವರಿಗೆ ಸೇರುವುದಿಲ್ಲ. ಒಂದು ಸಂದರ್ಭದಲ್ಲಿ ಅವರು 'ನಾನು ಸಿರಿವಂತನಾಗಿರಬಹುದು, ಆದರೆ ಸೋಮಾರಿಯಾಗಿಲ್ಲ' ಎಂದು ಸಾರಿರುವರು.

ಎಡ್ವರ್ಡ ರಾಜರು ಆಟಗಳ ಪ್ರೇಮಿಗಳೂ ಕ್ರೀಡಾವೃತ್ತಿಯವರೂ ಆಗಿರುವರು. ಬೇಟೆ, ಪೋಲೊ, ಗೋಲ್ಫ್ ಇವು ಅವರ ಪ್ರೀತಿಯ ಆಟಗಳಾಗಿವೆ. ಅವರು ಎಲ್ಲರೊಡನೆ ಕೂಡಿ ಬಳಸುವರು. ಆದುದರಿಂದ ಅವರ ವಿಷಯದಲ್ಲಿ ಎಲ್ಲರಿಗೂ ಪ್ರೇಮಾದರದ ಭಾವನೆಯುಂಟು.

**ಎಂಟನೆಯ ಎಡ್ವರ್ಡರ ರಾಜ್ಯತ್ಯಾಗವು, ಡಿಸೆಂಬರ ೧೦, ೧೯೩೬**—ಎಂಟನೆಯ ಎಡ್ವರ್ಡರು ಅವಿವಾಹಿತರಾಗಿದ್ದರು. ಅವರು ಒಬ್ಬ ಮಹಿಳೆಯನ್ನು ಮದುವೆಯಾಗಲು ಇಚ್ಛಿಸಿ, ಆ ಸಂಬಂಧದಲ್ಲಿ ಅವಶ್ಯವಿರುವ ಕಟ್ಟಳೆ ಪಾರ್ಲಿಮೆಂಟಿಗೆ ಮಾನ್ಯವಾಗುವುದು ಸಾಧ್ಯವಿದೆಯೊ ಹೇಗೆ ಎಂಬುದಕ್ಕೆ ಮುಖ್ಯ

ಮಂತ್ರಿಗಳಾದ ಬಾಲ್ಡ್‌ವಿನರ ಆಲೋಚನೆಯನ್ನು ಕೇಳಿದರು. ಬಾಲ್ಡ್‌ವಿನರು ಕಬಿನೆಟಿನಲ್ಲಿಯ ತಮ್ಮ ಸಹಕಾರಿಗಳ, ವಿರುದ್ಧ ಪಕ್ಷದ ಮುಖಂಡರ ಮತ್ತು ಸ್ವಾಯತ್ತನಿವೇಶಗಳ (ಡೊಮಿನಿಯನ್ಸ) ಮುಖ್ಯ ಮಂತ್ರಿಗಳ ಅಭಿಪ್ರಾಯವನ್ನು ವಿಚಾರಿಸಿದರು. ಆಮೇಲೆ ಎಡ್ವರ್ಡ ರಾಜರು ಬಯಸಿದ ಮಹಿಳೆಯೊಡನೆ ಮದುವೆಯಾಗುವ ವಿಷಯದಲ್ಲಿ ಅವಶ್ಯವಿರುವ ಕಟ್ಟಳೆಯನ್ನು ಸ್ವೀಕರಿಸುವುದು ಸಾಧ್ಯವಿಲ್ಲವೆಂದು ಬಾಲ್ಡ್‌ವಿನರು ಎಡ್ವರ್ಡರಿಗೆ ನಿರೂಪಿಸಿದರು. ಬಳಿಕ ಎಡ್ವರ್ಡರು ಈ ಎರಡರಲ್ಲಿ ಒಂದನ್ನು ಮಾಡುವ ನಿರ್ಧಾರಮಾಡಬೇಕಾಯಿತು:—ತಾವು ಬಯಸಿದ ಮಹಿಳೆಯನ್ನು ಮದುವೆಯಾಗದಿರುವುದು, ಇಲ್ಲವೆ ರಾಜ್ಯತ್ಯಾಗ ಮಾಡಿ ಆಮೇಲೆ ಮದುವೆಯಾಗುವುದು. ಈ ಸಂದರ್ಭದಲ್ಲಿ ಎಡ್ವರ್ಡ ರಾಜರು ಶಾಂತವಾಗಿ ಎಲ್ಲ ಪರಿಯಿಂದ ವಿಚಾರ ಮಾಡಿ ರಾಜ್ಯತ್ಯಾಗವನ್ನು ನಿಶ್ಚಯಿಸಿದರು. ಅದರಂತೆ ೧೯೩೬, ಡಿಸೆಂಬರ ೧೧ನೆಯ ತಾರೀಖಿನ ದಿನ ರಾಜ್ಯತ್ಯಾಗ ಮಾಡಿ, ರಾಜ್ಯಭಾರದ ಎಲ್ಲ ಸೂತ್ರಗಳನ್ನು ತಮ್ಮ ತಮ್ಮಂದಿರಾದ ಅಲ್ಬರ್ಟ ಜಾರ್ಜ ಇವರ ಕೈಯಲ್ಲಿ ಒಪ್ಪಿಸಿದರು. ಮುಂದೆ ಇವರು ಅವರನ್ನು, ರಾಜ ಕುಟುಂಬದವರನ್ನು, ಮತ್ತು ಇತರ ಪ್ರಮುಖರನ್ನು ಪ್ರೀತಿಯಿಂದ ಬೀಳ್ಕೊಂಡು ಇಂಗ್ಲಂಡಿನಿಂದ ಫ್ರಾನ್ಸಿಗೆ ಪ್ರಯಾಣಮಾಡಿದರು.

ಎಂಟನೆಯ ಎಡ್ವರ್ಡರು ರಾಜ್ಯತ್ಯಾಗಮಾಡುವ ಆಲೋಚನೆ ನಡೆದಿರುವಾಗ ಎಲ್ಲ ಇಂಗ್ಲಿಶ್ ಜನತೆಯಾದರೂ ಬಿಕ್ಕಟ್ಟಿನದಾದ ಈ ಪ್ರಸಂಗದಲ್ಲಿ ಭಾವನಾವಶವಾಗದೆ ಆದರಭಾವನೆಯಿಂದ ವರ್ತಿಸಿ ತನ್ನ ನಿಯಮಪಾಲನೆಯನ್ನು ಲೋಕದ ನಿದರ್ಶನಕ್ಕೆ ತಂದುಕೊಟ್ಟಿತು.

———————

# ೨೮ನೆಯ ಪ್ರಕರಣವು

## ಆರನೆಯ ಜಾರ್ಜ

ಜನ್ಮವು ೧೪ ಜೂನ ೧೮೯೫;

ರಾಜ್ಯಾರೋಹಣವು

(೪೨ನೆಯ ವರ್ಷದಲ್ಲಿ)

(ಡಿಸೆಂಬರ ೧೧, ೧೯೩೬ರಿಂದ)

**ಬಾಲ್ಯವು ಮತ್ತು ಶಿಕ್ಷಣವು**— ಆರನೆಯ ಜಾರ್ಜರು ೧೮೯೫, ಜೂನ ೧೪ ನೆಯ ತಾರೀಖಿನ ದಿನ ಹುಟ್ಟಿದರು. ಇವರ ಪೂರ್ಣ ಹೆಸರು ಅಲ್ಬರ್ಟ ಫ್ರೆಡರಿಕ್ ಆರ್ಥರ ಜಾರ್ಜ. ಇವರ ಅಣ್ಣಂದಿರಾದ ಎಡ್ವರ್ಡರು ಇವರಿಗಿಂತ ಒಂದು ವರ್ಷ ಹಿರಿಯರು ಮತ್ತು ತಂಗಿ ಮೇರಿ ಒಂದು ವರ್ಷ ದಿಂದ ಕಿರಿಯಳು. ಈ ಸೋದರರು ಸಾಧಾರಣ ವಾಗಿ ಸಮಾನ ವಯಸ್ಸಿನವರು ಇದ್ದುದರಿಂದ ಇವರ ಎಳತನದ ದಿನಗಳು ಒಬ್ಬರೊಬ್ಬರ ಸಹವಾಸದಲ್ಲಿಬಹಳ ಆನಂದದಿಂದ ಕಳೆದುವು. ಜಾರ್ಜರ ಒಲವು ಬಾಲ್ಯ ದಿಂದಲೂ ಯಂತ್ರಕಲೆಯೆಡೆಗೆ ಹರಿಯುತ್ತಿತ್ತು. ಆಟದ ಮೋಟರು ಮತ್ತು ಉಗೆ ಬಂಡಿಗಳು ಮುರಿದರೆ ಅವನ್ನು ತಾವೇ ಸರಿಪಡಿಸಬೇಕೆಂದು ಇವರಿಗೆ ಎನಿಸುತ ಲಿತ್ತು. ಈ ಕೆಲಸದಲ್ಲಿ



ಆರನೆಯ ಜಾರ್ಜ.

ಅವರಿಗೆ ಉತ್ತೇಜನವು ದೊರೆಯಬೇಕೆಂದು ಅವರು ಇರುವ ಸ್ಥಳದ ಬಳಿಯಲ್ಲಿ ಅವರ ಉಪಯೋಗಕ್ಕೆ ಒಂದು ಚಿಕ್ಕ ಯಂತ್ರಾಲಯವು ಏರ್ಪಡಿಸಲಾಗಿತ್ತು.

೧೨ನೆಯ ವಯಸ್ಸಿನವರಿರುವಾಗಲೆ ಜಾರ್ಜರಿಗೆ ಕುದುರೆಸವಾರಿ, ಬೇಟೆ ಮುಂತಾದ ವಿಷಯಗಳು ಕಲಿಸಲ್ಪಟ್ಟವು. ಅವರು ೧೪ನೆಯ ವಯಸ್ಸಿಗೆ ಆಸಬೊರ್ನದಲ್ಲಿಯ ನೌಕಾಶಾಲೆಯಲ್ಲಿ ಮತ್ತು ೧೬ನೆಯ ವರ್ಷಕ್ಕೆ ಡಾರ್ಥ ಮಾವುಥದಲ್ಲಿಯ ನೌಕಾವಿದ್ಯಾಲಯದಲ್ಲಿ ಹಡಗುಪಡೆಯ ಶಿಕ್ಷಣಕ್ಕಾಗಿ ಹೋದರು. ಅಲ್ಲಿ ಇರುವಾಗ ಬೇರೆ ಸಹಾಧ್ಯಾಯಿಗಳೊಡನೆ ಅವರು ಸರಿಸ ಮಾನತೆಯಿಂದ ವರ್ತಿಸಬೇಕಾಗುತ್ತಿತ್ತು. ಜಾರ್ಜರ ದೇಹಪ್ರಕೃತಿ ಬಾಲ್ಯದಿಂದ ಸರಿಯಾಗಿರಲಿಲ್ಲ. ಹೊಟ್ಟೆಯಲ್ಲಿಯ ವಿಕಾರದಿಂದ ಆಗಾಗ ಅವರು ಬೇನೆಗೆ ಗುರಿಯಾಗುತ್ತಿದ್ದರು. ಈ ಕಾರಣದಿಂದ ೧೯೧೫ರಲ್ಲಿ ಮತ್ತು ೧೯೧೭ರಲ್ಲಿ ಅವರಿಗೆ ಶಸ್ತ್ರಕ್ರಿಯೆಯನ್ನು ಮಾಡಬೇಕಾಯಿತು. ಆ ಬಳಿಕ ಅವರ ಪ್ರಕೃತಿ ಗುಣಪಟ್ಟಿತು. ಆದರೆ ಉಗೆಹಡಗದ ಗಾಳಿ ಅವರಿಗೆ ಹಿತವಾಗುತ್ತಿರಲಿಲ್ಲವಾದುದರಿಂದ ಅವರು ವಿಮಾನವಿದ್ಯೆಯನ್ನು ಕಲಿತರು. ಆ ಮೇಲೆ ಅವರು ಉಚ್ಚ ಶಿಕ್ಷಣಕ್ಕೋಸುಗ ೧೯೧೯ರಲ್ಲಿ ಕೇಂಬ್ರಿಜಿಗೆ ಹೋದರು. ಅಲ್ಲಿಯ ವಿಶ್ವವಿದ್ಯಾಲಯದಲ್ಲಿ ಇತಿಹಾಸ, ಅರ್ಥಶಾಸ್ತ್ರ ಸಮಾಜಶಾಸ್ತ್ರಗಳನ್ನು ಅವರು ಅಭ್ಯಾಸಿಸಿದರು. ಟೆನಿಸ್ ಆಟದಲ್ಲಿಯೂ ಪ್ರಾವೀಣ್ಯವನ್ನು ಪಡೆದರು. ವಿಶ್ವವಿದ್ಯಾಲಯದ ಶಿಕ್ಷಣದಿಂದ ಅವರ ದೃಷ್ಟಿ ವ್ಯಾಪಕವಾಯಿತು.

**ಜಾರ್ಜ ರಾಜರ ವಿವಾಹ**—೧೯೨೩ರ ಎಪ್ರಿಲ ತಿಂಗಳಲ್ಲಿ ಸ್ಕಾಟಲಂಡಿನಲ್ಲಿಯ ಸರದಾರರಾದ ಸ್ಟ್ರಥಮೋರ ಇವರ ಕುವರಿ ಎಲಿಝಾಬೆಥ್ ಇವಳನ್ನು ಇವರು ಮದುವೆಯಾದರು. ವಿವಾಹ ಸಮಯದಲ್ಲಿ ಎಲಿಝಾಬೆಥ್ ಇವರು ೨೨ ವರ್ಷದವರಿದ್ದರು. ಈ ಸಂಬಂಧದಿಂದ ಇವರಿಗೆ ೧೯೨೬ರಲ್ಲಿ ಎಲಿಝಾಬೆಥ್ ಮತ್ತು ೧೯೩೦ರಲ್ಲಿ ಮಾರ್ಗಾರೆಟ್ ಎಂಬ ಇಬ್ಬರು ಹುಡುಗಿಯರು ಹುಟ್ಟಿದರು.

**ಜಾರ್ಜ ರಾಜರು ಮಾಡಿದ ಪ್ರವಾಸಗಳು ಮತ್ತು ಸಂಚಾರಗಳು**—ಜಾರ್ಜರು ಸಾಮ್ರಾಜ್ಯದ ದೂರದೂರದ ಪ್ರದೇಶಗಳಲ್ಲಿಯೂ ಯುರೋಪದಲ್ಲಿಯೂ ಪ್ರವಾಸಮಾಡಿದುದರಿಂದ ಅವರಿಗೆ ಪ್ರತಿಯೊಂದು ಕಡೆಯ ಪ್ರತ್ಯಕ್ಷ ಪರಿಚಯವು ಇದೆ. ೧೯೧೩ರಲ್ಲಿ ಇವರು ವೆಸ್ಟ ಇಂಡೀಜ ಮತ್ತು ಕನಡಾ ಇವುಗಳಲ್ಲಿ ಸಂಚಾರ ಮಾಡಿದರು. ೧೯೧೬ರಲ್ಲಿ ಕಾಲಿಂಗವುಡ್ ಹಡಗದ ಮೇಲೆ ದುಯ್ಯಮ ನೌಕಾಧಿಕಾರಿಯೆಂದು ಅವರು ನಿಯೋಜಿಸಲ್ಪಟ್ಟುದರಿಂದ ಆ ಕಾಲದಲ್ಲಿ ನಡೆದಿದ್ದ ಯುದ್ಧದಲ್ಲಿ ಅವರು ಭಾಗವಹಿಸಬೇಕಾಯಿತು. ೧೯೨೪ರಲ್ಲಿ ಉತ್ತರ ಐರ್ಲಂಡಿನಲ್ಲಿ,

೧೯೨೮ರಲ್ಲಿ ಜರ್ಮನಿಯಲ್ಲಿ, ೧೯೩೦—೩೧ರಲ್ಲಿ ಸಾಮ್ರಾಜ್ಯದ ಬೇರೆ ಬೇರೆ ದೇಶಗಳಲ್ಲಿ, ಹೀಗೆ ಅನೇಕ ಕಡೆಗಳಲ್ಲಿ ಇವರು ಸಂಚರಿಸಿರುವರು.

**ಸಾರ್ವಜನಿಕ ಮತ್ತು ಜನೋಪಯುಕ್ತ ಕೆಲಸಗಳಲ್ಲಿ ಆಸಕ್ತಿ—** ಎಳತನದಿಂದಲೂ ಜಾರ್ಜರಿಗೆ ಯಾಂತ್ರಿಕ ಮತ್ತು ಔದ್ಯೋಗಿಕ ವಿಷಯಗಳಲ್ಲಿ ಲಕ್ಷ್ಯವಿದೆ. ೧೯೨೧ರಲ್ಲಿ ಇವರು ಔದ್ಯೋಗಿಕ ಹಿತಸಂವರ್ಧಕ ಸಂಘಕ್ಕೆ ಮತ್ತು ೧೯೨೪—೨೫ರಲ್ಲಿ ವೆಂಬ್ಲೆ ಪ್ರದರ್ಶನಕ್ಕೆ ಅಧ್ಯಕ್ಷರಾಗಿದ್ದರು. ೧೯೩೫ರಲ್ಲಿ ಇವರು ೫ನೆಯ ಜಾರ್ಜರ ರೌಪ್ಯಮಹೋತ್ಸವದ ಕಾರ್ಯದರ್ಶಿಗಳಾಗಿ ಕೆಲಸ ಮಾಡಿರುವರು.

ಕಣಿಗಳಲ್ಲಿಯ ಕೆಲಸಗಾರರ ಸ್ಥಿತಿಯನ್ನು ಸುಧಾರಿಸುವುದರ ಕಡೆಗೆ ಇವರ ಲಕ್ಷ್ಯವಿದೆ. ಆದುದರಿಂದ ಇವರು ಕಣಿಗಳನ್ನು ಸಂದರ್ಶಿಸಿದ ಕಾಲದಲ್ಲಿ ಅಲ್ಲಿಯ ಕೂಲಿಯವರ ಪರಿಸ್ಥಿತಿಯನ್ನು ಪ್ರತ್ಯಕ್ಷವಾಗಿ ವಿಚಾರಿಸಿ ತಿಳಿದುಕೊಳ್ಳುತ್ತಿದ್ದರು. ಕೂಲಿಕಾರರಂತೆ ಚಿಕ್ಕ ಬಾಲಕರೂ ಇವರ ಲಕ್ಷ್ಯವನ್ನು ಎಳೆಯುತ್ತಿದ್ದರು. ಬಡ ಕೂಲಿಕಾರರ ಮತ್ತು ಉಚ್ಚವರ್ಗದ ಸಿರಿವಂತರ ಮಕ್ಕಳನ್ನು ಕೆಲಕಾಲ ಒಂದೆಡೆಗೆ ಪರಸ್ಪರರ ಸಹವಾಸದಲ್ಲಿ ಇರಿಸಿದರೆ ಅವರಲ್ಲಿ ಒಬ್ಬರೊಬ್ಬರ ಪರಿಸ್ಥಿತಿಯ ಜ್ಞಾನವಾಗಿ ಆತ್ಮೀಯತೆ ಹುಟ್ಟಿ ಅದರಿಂದ ರಾಷ್ಟ್ರಕ್ಕೆ ಹಿತವು ಸಂಭವಿಸುವುದೆಂದು ಯೋಚಿಸಿ ಇವರು ೧೯೨೧ರಲ್ಲಿ ಬೇರೆ ಬೇರೆ ಪರಿಸ್ಥಿತಿಯಲ್ಲಿಯ ಬಾಲಕರ ಶಿಬಿರವನ್ನು ಏರ್ಪಡಿಸಿ ಅದರಲ್ಲಿ ತಾವು ಪ್ರತ್ಯಕ್ಷನಾಗಿ ಭಾಗವಹಿಸಿದರು. ಆ ಬಳಿಕ ಇವರು ಹಲವು ಸಲ ಇಂತಹ ಬಾಲ ಸಮ್ಮೇಲನಗಳನ್ನು ನೆರೆಯಿಸಿದರು. ಜಾರ್ಜರು ಅರಸರಾದ ಮೇಲೆಯೂ ೧೯೩೭ ಆಗಸ್ಟದ ಒಂದನೆಯ ವಾರದಲ್ಲಿ ಇಂತಹ ಶಿಬಿರವನ್ನು ಸಂದರ್ಶಿಸಿದರು ಮತ್ತು ಹುಡುಗರ ಸಹವಾಸದಲ್ಲಿ ಒಂದು ದಿನವನ್ನು ಕಳೆದರು.

**ಜಾರ್ಜರಿಗೆ ರಾಜ್ಯಪದ ಪ್ರಾಪ್ತಿ ಮತ್ತು ರಾಜ್ಯಾರೋಹಣ ಸಮಾರಂಭವು—** ಜಾರ್ಜರು ಐದನೆಯ ಜಾರ್ಜರ ಎರಡನೆಯ ಮಕ್ಕಳಾದುದರಿಂದ ತಮಗೆ ರಾಜ್ಯಪದವು ದೊರೆವುದೆಂದು ಅವರಿಗೆ ಎಷ್ಟೂ ಕಲ್ಪನೆಯಿರಲಿಲ್ಲ. ಆದರೆ ೧೯೩೬ ಡಿಸೆಂಬರದಲ್ಲಿ ಅಕಸ್ಮಾತ್ತಾಗಿ ಹೊಸ ಪರಿಸ್ಥಿತಿ ನಿರ್ಮಾಣವಾಗಿ ಎಂಟನೆಯ ಎಡ್ವರ್ಡರು ರಾಜ್ಯತ್ಯಾಗಮಾಡಿದುದರಿಂದ ೧೯೩೬ ಡಿಸೆಂಬರ ೧೧ನೆಯ ತಾರೀಖಿನ ದಿನ ಇವರಿಗೆ ರಾಜ್ಯಪದವು ದೊರೆತಿತು.

ಆದರೆ ರಾಜ್ಯಾರೋಹಣ ಸಮಾರಂಭವು ಮಾತ್ರ ಮುಂದುಹಾಕಲಾಯಿತು. ಈ ಸಮಾರಂಭವು ೧೯೩೭ ಮೇ ೧೨ನೆಯ ತಾರೀಖಿನ ದಿನ ಲಂಡನ ನಗರಿಯ

ವೆಸ್ಟ್‌ಮಿನ್‌ಸ್ಟರ ಅಬೆಯಲ್ಲಿ ಬಹು ವಿಜೃಂಭಣೆಯಿಂದ ನೆರವೇರಿತು. ಈ ಉತ್ಸವಕ್ಕೆ ಜಗತ್ತಿನ ಪ್ರಮುಖ ರಾಷ್ಟ್ರಗಳ ಪ್ರತಿನಿಧಿಗಳು, ಬ್ರಿಟಿಶ್ ಸಾಮ್ರಾಜ್ಯದ ಸ್ವಾಯತ್ತ ಉಪನಿವೇಶಗಳ (ಡೊಮಿನಿಯನ್ಸ) ಮತ್ತು ಹಿಂದುಸ್ಥಾನದ ಪ್ರತಿನಿಧಿಗಳು ಮತ್ತು ಅನೇಕ ಹಿಂದಿ ಸಂಸ್ಥಾನಿಕರು ಬಂದಿದ್ದರು.

**ಸಾಮ್ರಾಜ್ಯ ಪರಿಷತ್ತು**—೧೯೩೭ ಮೇ ೧೪ನೆಯ ದಿನ ಮುಖ್ಯ ಮಂತ್ರಿ ಬಾಲ್ಡ್‌ವಿನರ ಅಧ್ಯಕ್ಷತೆಯಲ್ಲಿ ಬ್ರಿಟಿಶ್ ಸಾಮ್ರಾಜ್ಯ ಪರಿಷತ್ತು ನೆರೆಯಿತು. ಈ ಪರಿಷತ್ತಿಗೆ ಐರ್ಲಂಡನ್ನು ಉಳಿದು ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಎಲ್ಲ ಸ್ವಾಯತ್ತ ದೇಶಗಳು ಮತ್ತು ಹಿಂದುಸ್ಥಾನವು ಪ್ರತಿನಿಧಿಗಳನ್ನು ಕಳಿಸಿದ್ದುವು. ಈ ಪರಿಷತ್ತಿನ ಕಾರ್ಯವು ಸುಮಾರು ಒಂದು ತಿಂಗಳವರೆಗೆ ನಡೆಯಿತು. ನಡುವೆ ಬಾಲ್ಡ್‌ವಿನರು ತಮ್ಮ ಮಂತ್ರಿಪದಕ್ಕೆ ತ್ಯಾಗಪತ್ರ ಕೊಟ್ಟುದರಿಂದ ಹೊಸ ಮುಖ್ಯ ಮಂತ್ರಿಗಳಾದ ನೆವಿಲ್ ಚೆಂಬರ್ಲೇನ ಇವರ ಅಧ್ಯಕ್ಷತೆಯಲ್ಲಿ ಕೆಲಸವು ಮುಂದುವರಿಯಿತು. ಈಗ ಜಗತ್ತಿನ ಪ್ರತಿಯೊಂದು ಪ್ರಮುಖ ರಾಷ್ಟ್ರವು ತನ್ನ ಸೇನೆ, ಹಡಗುಪಡೆ, ವಿಮಾನ ದಲ ಮತ್ತು ಯುದ್ಧಸಾಮುಗ್ರಿ ಇವನ್ನು ಹೆಚ್ಚಿಸುತ್ತಿರುವುದರಿಂದ ಸಾಮ್ರಾಜ್ಯದ ಸಂರಕ್ಷಣದ ಯೋಜನೆ, ಪರರಾಷ್ಟ್ರೀಯ ನೀತಿ, ಸಾಮ್ರಾಜ್ಯದ ರಾಜ್ಯಘಟನೆ, ವ್ಯಾಪಾರ ಮತ್ತು ಸಂಚಾರ ಮಾರ್ಗಗಳು ಮುಂತಾದ ವಿಷಯಗಳು ಈ ಪರಿಷತ್ತಿನಲ್ಲಿ ಚರ್ಚಿಸಲಾದುವು. ಜಗತ್ತಿನಲ್ಲಿ ಶಾಂತಿ ನೆಲೆಗೊಳ್ಳುವುದಕ್ಕಾಗಿ ಯುದ್ಧೋಪಯೋಗದ ಸಾಹಿತ್ಯವನ್ನು ಮತ್ತು ನೌಕಾಬಲವನ್ನು ನಿಯಂತ್ರಿಸಲು ಇತರ ರಾಷ್ಟ್ರಗಳ ಮನಸ್ಸನ್ನು ಒಲಿಸಬೇಕು ಮತ್ತು ಸಾಮ್ರಾಜ್ಯದ ರಕ್ಷಣಕ್ಕಾಗಿ ಪ್ರಯತ್ನಿಸಬೇಕು ಎಂದು ಈ ಪರಿಷತ್ತಿನಲ್ಲಿ ನಿರ್ಧರಿಸಲಾಯಿತು.

**ಬಾಲ್ಡ್‌ವಿನರ ಅಧಿಕಾರತ್ಯಾಗ**—ಇಂಗ್ಲಂಡಿನ ಮುಖ್ಯ ಮಂತ್ರಿ ಬಾಲ್ಡ್‌ವಿನರು ರಾಜ್ಯಾರೋಹಣ ಸಮಾರಂಭವು ನೆರವೇರಿದ ಬಳಿಕ ಮುಖ್ಯ ಮಂತ್ರಿತ್ವದ ಆಯಾಸಕಾರ್ಯದಿಂದ ಬಿಡುಗಡೆ ಮಾಡಿಕೊಂಡು ಸೇವಾನಿವೃತ್ತರಾಗಬೇಕೆಂದು ಕೆಲವು ತಿಂಗಳುಗಳ ಮುಂಚೆಯೆ ನಿಶ್ಚಯಿಸಿದ್ದರು. ಆ ಮೇರೆಗೆ ೧೯೩೭ ಮೇ ೨೮ನೆಯ ದಿನ ಅವರು ತಮ್ಮ ಕೆಲಸವನ್ನು ಬಿಟ್ಟುಬಿಟ್ಟರು. ಬಾಲ್ಡ್‌ವಿನರು ಮೂರನೆಯ ಸಲ ೧೯೩೫ರಿಂದ ಮುಖ್ಯಮಂತ್ರಿಗಳಾಗಿದ್ದರು. ಇದಕ್ಕೂ ಪೂರ್ವದಲ್ಲಿ ಒಮ್ಮೆ ೧೯೨೩—೨೪ರಲ್ಲಿ ಮೊದಲನೆಯ ಸಲ ಮತ್ತೊಮ್ಮೆ ೧೯೨೪ರಿಂದ ೨೯ರ ವರೆಗೆ ಎರಡನೆಯ ಸಲ ಅವರು ಮುಖ್ಯ ಮಂತ್ರಿಗಳಾಗಿದ್ದರು. ಇವರು ಮೊದಲನೆಯ ಸಲ ೧೯೦೮ರಲ್ಲಿ ಕಾಂಝರ್ವೇಟಿವ್ ಪಕ್ಷದ ಪರವಾಗಿ ಕಾಮನ್ಸ ಸಭೆಯ ಸದಸ್ಯರಾದರು. ಲಾಯಿಡ್ ಜಾರ್ಜರ ರಾಷ್ಟ್ರೀಯ ಮಂತ್ರಿಮಂಡಲದಲ್ಲಿ ೧೯೧೭ರಲ್ಲಿ ಆರ್ಥಿಕ

ಸೆಕ್ರೆಟರಿ ಎಂದು ಮತ್ತು ೧೯೨೧ರಲ್ಲಿ ವ್ಯಾಪಾರ ವಿಷಯಕ ಬೋರ್ಡಿನ ಅಧ್ಯಕ್ಷ ರೆಂದು ಇವರು ಕೆಲಸಮಾಡಿದರು. ಬೋನಾರ್ ಲಾ ಇವರ ಮಂತ್ರಿಮಂಡಲ ದಲ್ಲಿ ಇವರು ಅರ್ಥಸಚಿವನ ಕಾರ್ಯವನ್ನು ವಹಿಸಿದ್ದರು. ಬೋನಾರ್ ಲಾ ಇವರ ಮರಣದನಂತರ ೧೯೨೪ರಲ್ಲಿ ಇವರು ಮೊದಲನೆಯ ಸಲ ಮುಖ್ಯ ಮಂತ್ರಿಯಾ ದರು. ೧೯೨೩ರಲ್ಲಿ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಋಣಪರಿಹಾರಕ್ಕಾಗಿ ಕೊಡಬೇಕಾದ ಹಣ, ೧೯೨೪ರಲ್ಲಿಯ ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ದೇಶಗಳು ವ್ಯಾಪಾರದಲ್ಲಿ ಪರಸ್ಪರರಿಗೆ ಸೌಕರ್ಯಗಳನ್ನು ಒದಗಿಸುವುದು, ೧೯೨೬ರಲ್ಲಿಯ ಸಾರ್ವತ್ರಿಕ ಸಂಪು, ೧೯೩೫—೩೬ರಲ್ಲಿಯ ಇಟಲಿ-ಅಬಿಸೀನಿಯಾ ಸಂಗ್ರಾಮ ಮತ್ತು ಅದನ್ನು ಕುರಿತು ರಾಷ್ಟ್ರಸಂಘದ ನೀತಿ, ಸ್ಪೇನದಲ್ಲಿಯ ಅಂತರ್ಯುದ್ಧ ಮತ್ತು ಆ ಯುದ್ಧದ ಬೇಗೆ ಯುರೋಪದಲ್ಲಿ ಹಬ್ಬದಿರಲು ಇತರ ರಾಷ್ಟ್ರಗಳು ತಟಸ್ಥ ವಾಗಿರಬೇಕು ಎಂದು ಇಂಗ್ಲಂಡಿನ ಪ್ರಯತ್ನ, ೧೯೩೬ ಡಿಸೆಂಬರದಲ್ಲಿ ಎಂಟನೆಯ ಎಡ್ವ ರ್ಡರ ರಾಜ್ಯತ್ಯಾಗ ಮುಂತಾದ ಅನೇಕ ಮಹತ್ವದ ಸಮಸ್ಯೆಗಳನ್ನು ಇವರು ಬಿಡಿಸಬೇಕಾಯಿತು. ಈ ಘಟನೆಗಳಲ್ಲಿ ಮತ್ತು ಬಿಕ್ಕಟ್ಟಿನ ಸಂದರ್ಭಗಳಲ್ಲಿ ಇವರು ಮಾಡಿದ ಮಹಾಕಾರ್ಯಗಳಿಂದ ಎಲ್ಲ ಪಕ್ಷಗಳ ಜನರಿಗೆ ಇವರ ವಿಷಯ ದಲ್ಲಿ ಆದರವು ಹುಟ್ಟಿ ಇವರು ಲೋಕಪ್ರಿಯರಾದರು. ಇದೇ ಪರಿಸ್ಥಿತಿಯಲ್ಲಿ ಇವರು ಮಂತ್ರಿಪದವನ್ನು ಬಿಟ್ಟು ಸೇವಾನಿವೃತ್ತರಾದರು. ಬಳಿಕ ಆರನೆಯ ಜಾರ್ಜರು ಇವರನ್ನು ಲಾರ್ಡರಾಗಿ ಮಾಡಿದರು.

**ನೆವಿಲ್ ಚೆಂಬರ್ಲೇನರ ಮಂತ್ರಿಮಂಡಲ, ೧೯೩೭ ಮೇ ೨೮ರಿಂದ**--ಬಾಲ್ಡ್ವಿನರು ಅಧಿಕಾರತ್ಯಾಗಮಾಡಿದ ಬಳಿಕ ಅರ್ಥಸಚಿವರಾಗಿದ್ದ ಕಾಂಝರ್ ವೇಟಿವ್ ಪಕ್ಷದ ನೆವಿಲ್ ಚೆಂಬರ್ಲೇನ್ ಇವರನ್ನು ಜಾರ್ಜ ರಾಜರು ಮುಖ್ಯ ಮಂತ್ರಿಯಾಗಿ ನಿಯೋಜಿಸಿ ಮಂತ್ರಿಮಂಡಲವನ್ನು ರಚಿಸಲು ಅಪ್ಪಣೆ ಮಾಡಿ ದರು. ಅದರಂತೆ ಚೆಂಬರ್ಲೇನರು ಮಂತ್ರಿಮಂಡಲವನ್ನು ರಚಿಸಿರುವರು. ಇದ ರಲ್ಲಿ ೨೧ ಮಂತ್ರಿಗಳು ಇರುವರು. ಅವರಲ್ಲಿ ೧೫ ಜನರು ಕಾಂಝರ್‌ವೇಟಿವ್, ೪ ಜನರು ರಾಷ್ಟ್ರೀಯ ಲಿಬರಲ್ ಮತ್ತು ಇಬ್ಬರು ರಾಷ್ಟ್ರೀಯ ಕೂಲಿಕಾರ ಪಕ್ಷದವರು ಇರುವರು. ಈ ಮಂತ್ರಿಮಂಡಲದಲ್ಲಿ ಬೇರೆ ಪಕ್ಷದ ಮಂತ್ರಿಗಳೂ ಇದ್ದುದರಿಂದ ಇದಕ್ಕೆ ರಾಷ್ಟ್ರೀಯ ಮಂತ್ರಿಮಂಡಲವೆಂದು ಕರೆವುದುಂಟು. ಈ ಮಂತ್ರಿಮಂಡಲದಲ್ಲಿ ಸರ್ ಜಾನ್ ಸಾಯಮನ್ ಇವರು ಅರ್ಥಸಚಿವರು, ಸರ ಸೆಮ್ಯುಅಲ್ ಹೋರ್ ಇವರು ಗೃಹಮಂತ್ರಿ, ಅಂಥನಿ ಎಡನ್ ಇವರು ಪರ ರಾಷ್ಟ್ರೀಯಮಂತ್ರಿ, ಡಫ್ ಕೂಪರ್ ಇವರು ನೌಕಾಮಂತ್ರಿ, ಹೋರ್ ಬೆಲಿಶ್

ಇವರು ಸಂಗ್ರಾಮಮಂತ್ರಿ, ಲಾರ್ಡ ಸ್ವಿನಟನ್ ಇವರು ವಿಮಾನಮಂತ್ರಿ, ಸರ್ ಥಾಮಸ್ ಇನ್ಸ್ಕಿಪ್ ಇವರು ಸಂರಕ್ಷಣಮಂತ್ರಿ, ಮಾಲಕಮ್ ಮಕ್ಡೊನಲ್ಡ ಇವರು ಡೊಮಿನಿಯನಮಂತ್ರಿ ಮತ್ತು ಲಾರ್ಡ ಝೆಟ್‌ಲಂಡ್ ಇವರು ಭಾರತಮಂತ್ರಿ ಹೀಗೆ ಮಂತ್ರಿಗಳಿರುವರು. ಇವರಲ್ಲಿ ಅಂತನಿ ಏಡನ್ ಮತ್ತು ಕೆಲವು ತಿಂಗಳುಗಳಾದ ಬಳಿಕ ಡಫ್ ಕೂಪರ್ ಇವರು ಪರರಾಷ್ಟ್ರೀಯ ವಿಷಯದ ನೀತಿಯನ್ನು ಕುರಿತು ಮುಖ್ಯಮಂತ್ರಿಯ ಮತ್ತು ಇವರ ನಡುವೆ ಮತಭೇದವಾದುದರಿಂದ ಮಂತ್ರಿಪದವನ್ನು ತ್ಯಜಿಸಿದರು (೧೯೩೮).

---

# ೨೮ನೆಯ ಪ್ರಕರಣವು

## ಬ್ರಿಟಿಶ್ ಸಾಮ್ರಾಜ್ಯವು

**ಬ್ರಿಟಿಶ್ ಸಾಮ್ರಾಜ್ಯದ ಘನತೆ**— ಕಳೆದ ನಾಲ್ಕು ನಾಲ್ಕುವರೆ ಶತಕಗಳಲ್ಲಿ ಐದೂ ಖಂಡಗಳಲ್ಲಿಯ ದೊಡ್ಡ ಪ್ರದೇಶಗಳನ್ನು ಇಂಗ್ಲಂಡು ತನ್ನ ಅಧಿಕಾರಕ್ಕೆ ಒಳಪಡಿಸಿಕೊಂಡುದರಿಂದ ಬ್ರಿಟಿಶ್ ಸಾಮ್ರಾಜ್ಯವು ಬಹುವಾಗಿ ವಿಸ್ತಾರಗೊಂಡಿತು. ಪ್ರಪಂಚದ ಒಟ್ಟು ಕ್ಷೇತ್ರಫಲದ ೧/೪ ಭಾಗದ ಮೇಲೆ ಈ ಸಾಮ್ರಾಜ್ಯವು ಪಸರಿಸಿರುವುದು. ಅದೇ ಮೇರೆಗೆ ಜಗತ್ತಿನ ಒಟ್ಟು ಜನಸಂಖ್ಯೆಯಲ್ಲಿ ೧/೪ರಷ್ಟು ಬ್ರಿಟಿಶ್ ಸಾಮ್ರಾಜ್ಯದಲ್ಲಿ ಅಡಗಿದೆ. ಬ್ರಿಟಿಶ್ ಸಾಮ್ರಾಜ್ಯದ ಜನಸಂಖ್ಯೆ ಸು. ೪೮ ಕೋಟಿ ಇದೆ. ಅದರಲ್ಲಿ ಸು. ೭ ಕೋಟಿ ಯುರೋಪಿಯನ್ ಮತ್ತು ಬಿಳಿ ಬಣ್ಣದವರು ಇರುವರು. ಮಿಕ್ಕ ೪೧ ಕೋಟಿ ಜನಸಂಖ್ಯೆಯಲ್ಲಿ ನಾಸಿಪುಡಿ, ಕಪ್ಪು ಮತ್ತು ಅರಿಸಿನ ಬಣ್ಣದವರು ಇರುವರು. ಅದರಲ್ಲಿ ಒಂದು ಹಿಂದುಸ್ಥಾನದ ಜನಸಂಖ್ಯೆಯೆ ೩೫ ಕೋಟಿ ಇದೆ. ಬ್ರಿಟಿಶ್ ಸಾಮ್ರಾಜ್ಯದಲ್ಲಿ ಬೇರೆ ಬೇರೆ ಧರ್ಮದ ಜನರು ಇರುವರು. ಅದೇ ಮೇರೆಗೆ ಅವರ ಸಂಸ್ಕೃತಿ, ಆಚಾರ ವಿಚಾರ ಮತ್ತು ಇರುವಿಕೆ ಇವುಗಳಲ್ಲಿಯೂ ವಿಶೇಷ ವ್ಯತ್ಯಾಸವು ಕಾಣಬರುತ್ತದೆ. ಐದು ಖಂಡಗಳಲ್ಲಿ ಹರಡಿಕೊಂಡ ಈ ದೊಡ್ಡ ಸಾಮ್ರಾಜ್ಯದ ಸಂರಕ್ಷಣೆಗಾಗಿ ಇಂಗ್ಲಂಡು ದೊಡ್ಡದಾದ ಹಡಗುಪಡೆಯನ್ನು ಇಟ್ಟುಕೊಂಡಿದೆ. ಇಂತು ವಿಸ್ತಾರ, ಜನಸಂಖ್ಯೆ, ಶಕ್ತಿ ಮತ್ತು ಸಂಪತ್ತು ಈ ಎಲ್ಲ ವಿಷಯಗಳಲ್ಲಿ ಬ್ರಿಟಿಶ್ ಸಾಮ್ರಾಜ್ಯವು ಜಗತ್ತಿನಲ್ಲಿ ಇದುವರೆಗೆ ಬಾಳಿಹೋದ ಮತ್ತು ಈಗ ಬಾಳುತ್ತಿರುವ ಯಾವ ಸಾಮ್ರಾಜ್ಯಕ್ಕಿಂತಲೂ ಶ್ರೇಷ್ಠವಾಗಿದೆ.

**ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ದೇಶಗಳೊಡನೆ ಮತ್ತು ಉಪನಿವೇಶಗಳೊಡನೆ ಇಂಗ್ಲಂಡಿನ ಸಂಬಂಧವು**— ಬ್ರಿಟಿಶ್ ಸಾಮ್ರಾಜ್ಯದಲ್ಲಿ ಸೇರಿರುವ ಬೇರೆ ಬೇರೆ ದೇಶಗಳ ರಾಜ್ಯಘಟನೆ, ಆಡಳಿತದ ಪದ್ಧತಿ ಮತ್ತು ಗ್ರೇಟಬ್ರಿಟನ್ನಿನೊಡನೆ ಅವುಗಳ ಸಂಬಂಧ ಇವುಗಳಲ್ಲಿ ಅನೇಕ ವೈಲಕ್ಷಣ್ಯಗಳಿವೆ. ಇಂಗ್ಲಿಶ್ ಪಾರ್ಲಿಮೆಂಟು ಕೆಲವು ದೇಶಗಳಿಗೆ ಸ್ವರಾಜ್ಯದ ಅಧಿಕಾರವನ್ನು (Self-Government) ಕೊಟ್ಟು ಅಲ್ಲಿಯ ಅಂತರ್ಗತ ಆಡಳಿತದ ಎಲ್ಲ ವ್ಯವಸ್ಥೆಯನ್ನು ಅಲ್ಲಿಯ ಜನರ ವಶಕ್ಕೆಯೆ ಒಪ್ಪಿಸಿದೆ. ಕೆಲವು ದೇಶಗಳಿಗೆ ಸ್ವಲ್ಪ ಅಧಿಕಾರಗಳು ಇವೆ; ಕೆಲವು ದೇಶಗಳಿಗೆ ಎಷ್ಟೂ ಇಲ್ಲ, ಮತ್ತು ಇಂತಹ ದೇಶಗಳು ಪೂರ್ಣವಾಗಿ ಇಂಗ್ಲಂಡಿನ

ಅಧಿಕಾರಕ್ಕೆ ಒಳಪಟ್ಟಿವೆ. ಕೆಲವು ದೇಶಗಳು ಇಂಗ್ಲಂಡಿನ ಪಾಲನೆಯಲ್ಲಿ ಇರುವುವು. ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಬೇರೆ ಬೇರೆ ದೇಶಗಳ ರಾಜ್ಯಪದ್ಧತಿಯಲ್ಲಿ ಹೀಗೆ ವ್ಯತ್ಯಾಸವಿದ್ದರೂ ಆ ಎಲ್ಲ ದೇಶಗಳ ಮೇಲೆ (೧) **ಇಂಗ್ಲಂಡಿನ ಪಾರ್ಲಿಮೆಂಟ್**, (೨) **ಇಂಗ್ಲಂಡಿನ ಕೆಬಿನೆಟ್** ಮತ್ತು (೩) **ಇಂಗ್ಲಂಡಿನ ನ್ಯಾಯಸ್ಥಾನ** ಇವುಗಳ ಅಧಿಕಾರವು ಇದೆ. ಇಂಗ್ಲಂಡಿನ ಪಾರ್ಲಿಮೆಂಟು ರಚಿಸಿದ ಕಟ್ಟಳೆಯಂತೆ ಬೇರೆ ಬೇರೆ ದೇಶಗಳ ರಾಜ್ಯಘಟನೆಗಳು ಗೊತ್ತುಪಡಿಸಲಾಗಿರುವುವು. ಇಂಗ್ಲಂಡಿನ ಕೆಬಿನೆಟಿನ ಆಲೋಚನೆಯಂತೆಯೆ ಸಾಮ್ರಾಜ್ಯದ ಬೇರೆ ಬೇರೆ ದೇಶಗಳ ಮೇಲೆ ಗವರ್ನರ್ ಜನರಲ್, ವ್ಹಾಯಿಸರಾಯ್, ಗವರ್ನರ್, ಹಾಯ್ ಕಮಿಶನರ್, ಏಜಂಟ್ ಮೊದಲಾದ ದೊಡ್ಡ ದೊಡ್ಡ ಅಧಿಕಾರಿಗಳನ್ನು ಇಂಗ್ಲಂಡಿನ ಅರಸನು ನಿಯೋಜಿಸುವನು. ಇಂಗ್ಲಂಡಿನ ಕೆಬಿನೆಟಿನ ಡೊಮಿನಿಯನ್ ಸೆಕ್ರೆಟರಿ, ಉಪನಿವೇಶಗಳ ಸೆಕ್ರೆಟರಿ ಮತ್ತು ಹಿಂದುಸ್ಥಾನದ ಸೆಕ್ರೆಟರಿ ಈ ಮಂತ್ರಿಗಳು ಸಾಮ್ರಾಜ್ಯದ ಬೇರೆ ಬೇರೆ ದೇಶಗಳ ಆಡಳಿತವನ್ನು ಮೇಲ್ವಿಚಾರಿಸುವರು. ಅದೇ ಮೇರೆಗೆ ಇಂಗ್ಲಂಡಿನ ಪ್ರಿವಿ ಕೌನ್ಸಿಲ್ ಸಭೆಯ ನ್ಯಾಯಸಮಿತಿ ಸಾಮ್ರಾಜ್ಯದಲ್ಲಿಯ ಎಲ್ಲ ದೇಶಗಳ ಹಾಯಕೋರ್ಟುಗಳಿಗೆ ಮೇಲ್ಪಟ್ಟುದು ಆಗಿದ್ದು ಅದರ ಕಡೆಗೆ ಅಪೀಲುಗಳನ್ನು ಒಯ್ಯಲಾಗುತ್ತದೆ. **ಇಂಗ್ಲಂಡಿನ ರಾಜನು** ಸಾಮ್ರಾಜ್ಯದಲ್ಲಿಯ ಎಲ್ಲ ದೇಶಗಳ ರಾಜನೂ ಸಮ್ರಾಟನೂ ಆಗಿರುವನು. ಅಲ್ಲದೆ ಇಂಗ್ಲಂಡಿನ **ಯೂನಿಯನ್ ಜೆಕ್** ಧ್ವಜವು ಸಾಮ್ರಾಜ್ಯದ ಎಲ್ಲ ದೇಶಗಳಿಗೂ ಧ್ವಜವಾಗಿರುವುದು.

ಬ್ರಿಟಿಶ್ ಸಾಮ್ರಾಜ್ಯದ ಬೇರೆ ಬೇರೆ ದೇಶಗಳ ಮೇಲೆ ಇಂಗ್ಲಂಡಿನ ರಾಜನು ನಿಯೋಜಿಸಿದ ಗವರ್ನರ್ ಜನರಲ್ ಮುಂತಾದ ಅಧಿಕಾರಿಗಳು ಇಂಗ್ಲಂಡಿನ ರಾಜನ ಪ್ರತಿನಿಧಿ ಮತ್ತು ದೇಶದಲ್ಲಿಯ ಅತ್ಯುಚ್ಚನಾದ ಅಧಿಕಾರಿ ಈ ಎರಡೂ ದೃಷ್ಟಿಗಳಿಂದ ಆಡಳಿತವನ್ನು ನಡೆಯಿಸಬೇಕಾಗುತ್ತದೆ. ಆತನು ಇಂಗ್ಲಂಡಿನ ರಾಜನ ಪ್ರತಿನಿಧಿಯಾಗಿರುವುದರಿಂದ ಆ ಉಪನಿವೇಶದ ಆಂತರಿಕ ಆಡಳಿತವನ್ನುಳಿದು ಮಿಕ್ಕ ವಿಷಯಗಳಲ್ಲಿ ಇಂಗ್ಲಂಡಿನ ಮಂತ್ರಿಮಂಡಲದ ಇಚ್ಛೆಯಂತೆ ವರ್ತಿಸಬೇಕಾಗುತ್ತದೆ. ಆತನು ಆ ದೇಶದ ಸರ್ವ ಶ್ರೇಷ್ಠ ಅಧಿಕಾರಿಯಾಗಿದ್ದುದರಿಂದ ಅಲ್ಲಿಯ ಅಂತಃಸ್ಥ ಆಡಳಿತವನ್ನು ಕುರಿತು ಅಲ್ಲಿಯ ವಿಧಿಮಂಡಲವು ರಚಿಸಿದ ಕಟ್ಟಳೆಗಳನ್ನು ಕೃತಿಯಲ್ಲಿ ತರಬೇಕಾಗುತ್ತದೆ.

ಸ್ವರಾಜ್ಯದ ಅಧಿಕಾರಗಳನ್ನು ಪಡೆದ ಉಪನಿವೇಶಗಳಿಗೆ ತಮ್ಮ ಇಷ್ಟದಂತೆ ತಮ್ಮ ವ್ಯಾಪಾರವಿಷಯಕ ನೀತಿಯನ್ನು ನಿರ್ಧರಿಸುವ, ಪರರಾಷ್ಟ್ರ ಇಲ್ಲವೆ

ಸಾಮ್ರಾಜ್ಯದ ಬೇರೆ ಭಾಗಗಳಿಂದ ಬರುವ ಸರಕುಗಳ ಮೇಲೆ ಸುಂಕವನ್ನು ಹಾಕುವ ಇಲ್ಲವೆ ಬಿಡುವ ಮುಂತಾದ ಅಧಿಕಾರಗಳು ಇರುತ್ತವೆ. ಆದರೆ ಸಾಮ್ರಾಜ್ಯದೊಳಗಿನ ಯಾವ ದೇಶಕ್ಕೂ ರಾಜಕೀಯ ವಿಷಯದಲ್ಲಿ ಬೇರೆ ರಾಷ್ಟ್ರದೊಡನೆ ವ್ಯವಹರಿಸುವ ಅಧಿಕಾರವಿಲ್ಲ.

**ಬ್ರಿಟಿಶ್ ಸಾಮ್ರಾಜ್ಯದೊಳಗಿನ ದೇಶಗಳು ಮತ್ತು ಅವುಗಳ ಅಧಿಕಾರಗಳು** – ಬ್ರಿಟಿಶ್ ಸಾಮ್ರಾಜ್ಯದೊಳಗಿನ ಬೇರೆ ಬೇರೆ ದೇಶಗಳು ಪಡೆದುಕೊಂಡ ಅಧಿಕಾರಗಳ ಮಾನದ್ದಿಂದ ಅವುಗಳಲ್ಲಿ (೧) ಡೊಮಿನಿಯನ್ಸ (೨) ಸ್ವಾಧೀನ ದೇಶ (೩) ಕ್ರೌನ್ ಕಾಲನೀಜ ಮತ್ತು (೪) ಸಂರಕ್ಷಿತ ಸಂಸ್ಥಾನಗಳು (Protected States) ಹೀಗೆ ವಿಭಾಗಗಳನ್ನು ಕಲ್ಪಿಸಲಾಗಿದೆ.

(೧) **ಡೊಮಿನಿಯನ್ಸ** — ಕೆಲವು ಉಪನಿವೇಶಗಳಿಗೆ ಇಂಗ್ಲಿಶ್ ಪಾರ್ಲಿಮೆಂಟಿನವರು ಸ್ವರಾಜ್ಯದ (Self-Government) ಅಧಿಕಾರಗಳನ್ನು ಕೊಟ್ಟಿರುವರು. ಅದರಿಂದ ಅಲ್ಲಿಯ ಆಂತರಿಕ ವಿಷಯಗಳಲ್ಲಿ ಕಟ್ಟಳೆ ರಚಿಸುವ ಅಧಿಕಾರವು ಅಲ್ಲಿಯ ಜನನಿಯುಕ್ತ ವಿಧಿಮಂಡಲಕ್ಕೆ ಬಂದಿರುತ್ತದೆ. ಈ ವಿಧಿಮಂಡಲಕ್ಕೆ ಹೊಣೆಗಾರವಾದ ಮಂತ್ರಿಮಂಡಲವು (ಕಬಿನೆಟ್) ಅಲ್ಲಿಯ ಆಡಳಿತವನ್ನು ನಡೆಯಿಸುತ್ತದೆ. ಇಂತಹ ಸ್ವಾಯತ್ತ ಉಪನಿವೇಶಗಳಿಗೆ ಡೊಮಿನಿಯನ್ (Dominion) ಎನ್ನುವರು. ಬ್ರಿಟಿಶ್ ಸಾಮ್ರಾಜ್ಯದ ಎಲ್ಲ ಡೊಮಿನಿಯನುಗಳು ರಾಷ್ಟ್ರಸಂಘದ ಸದಸ್ಯವಾಗಿರುವುವು. ಇದೇ ಬಗೆಯಾಗಿ ಮುಖ್ಯವಾಗಿ ಸಾಮ್ರಾಜ್ಯದ ಆರ್ಥಿಕ ಮತ್ತು ವ್ಯಾಪಾರ ವಿಷಯಕ ಸಮಸ್ಯೆಗಳನ್ನು ವಿಚಾರಿಸಲು ನೆರೆವ **ಸಾಮ್ರಾಜ್ಯಪರಿಷತ್ತಿನಲ್ಲಿ** ಡೊಮಿನಿಯನುಗಳ ಮುಖ್ಯಮಂತ್ರಿಗಳು ಇಂಗ್ಲಂಡಿನ ಕಬಿನೆಟಿನ್ನ ಪ್ರತಿನಿಧಿಗಳ ಜೊತೆಯಲ್ಲಿ ಸಮಾನಸ್ಕಂಧರಾಗಿ ಭಾಗವಹಿಸುವರು. (೧) ಕನಡಾ (೨) ಆಸ್ಟ್ರೇಲಿಯಾ (೩) ನ್ಯೂಝೀಲಂಡ್ (೪) ದಕ್ಷಿಣ ಆಫ್ರಿಕಾ (೫) ದಕ್ಷಿಣ ಐರ್ಲಂಡ್ (೬) ನ್ಯೂಫೌವುಂಡ್‌ಲಂಡ್ ಈ ದೇಶಗಳು ಸದ್ಯಕ್ಕೆ ಡೊಮಿನಿಯನ್ ಎಂದು ಕರೆಯಲ್ಪಡುತ್ತವೆ.

(೨) **ಸ್ವಾಧೀನ ದೇಶವು – ಹಿಂದುಸ್ಥಾನವು** – ಜನಸಂಖ್ಯೆ, ಭೂವಿಸ್ತಾರ, ವ್ಯಾಪಾರ, ಪ್ರಾಚೀನ ಸಂಸ್ಕೃತಿ ಈ ವಿಚಾರದಲ್ಲಿ ಹಿಂದುಸ್ಥಾನವು ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಬಹಳ ಮಹತ್ವದ ಭಾಗವಾಗಿದೆ. ಆದುದರಿಂದಲೆ ಅದಕ್ಕೆ ಬ್ರಿಟಿಶ್ ಸಾಮಾಜ್ಯದಲ್ಲಿಯ 'ದೇದೀಪ್ಯಮಾನ ರತ್ನ'ವೆಂದು ಹೇಳುವರು. ಈ ದೇಶಕ್ಕೆ ಮೇಲೆ ಕಾಣಿಸಿದ ಡೊಮಿನಿಯನುಗಳಂತೆ ಸ್ವರಾಜ್ಯದ ಅಧಿಕಾರಗಳನ್ನು ಕೊಟ್ಟಿರುವುದಿಲ್ಲ. ಆದರೂ ಅದರ ಪೂರ್ವ ಸಿದ್ಧತೆಯಾಗಿ ೧೯೩೫ರ ಕಟ್ಟಳೆ

ಯಂತೆ ಪ್ರಾಂತಿಕ ಸರಕಾರಗಳ ಆಡಳಿತದಲ್ಲಿ ಎಲ್ಲ ರಾಜ್ಯಾಂಗಗಳಲ್ಲಿ ಹೊಣೆಗಾರ ರಾಜ್ಯಪದ್ಧತಿ ಪ್ರಾರಂಭಿಸಲ್ಪಟ್ಟಿದೆ. ಬ್ರಿಟಿಶ್ ಸಾಮ್ರಾಜ್ಯದ ಮೇಲ್ಕಾಣಿಸಿದ ಡೊಮಿನಿಯನುಗಳಂತೆ ತನಗೂ ಸ್ವರಾಜ್ಯದ ಅಧಿಕಾರಗಳೂ ಸ್ಥಾನಮಾನಗಳೂ ದೊರೆಯಬೇಕು ಎಂಬುದು ಹಿಂದುಸ್ಥಾನದ ಮಹತ್ವಾಕಾಂಕ್ಷೆಯಾಗಿದೆ. ಹಿಂದುಸ್ಥಾನದ ಮಹತ್ವವನ್ನು ಲಕ್ಷಿಸಿ ಸಾಮ್ರಾಜ್ಯಪರಿಷತ್ತಿನ ಅಧಿವೇಶನಕಾಲಕೆ ಡೊಮಿನಿಯನಿನಂತೆ ಹಿಂದುಸ್ಥಾನದ ಪ್ರತಿನಿಧಿಗಳು ನಿಮಂತ್ರಿಸಲ್ಪಡುತ್ತಾರೆ. ಹಿಂದುಸ್ಥಾನವು ರಾಷ್ಟ್ರಸಂಘದ ಸದಸ್ಯವೂ ಆಗಿದೆ.

(೩) **ಕ್ರೌನ್ ಕಾಲನೀಜ**—(ಉಪನಿವೇಶಗಳು) ಇವುಗಳಲ್ಲಿ ಬ್ರಿಟಿಶ್ ಸಾಮ್ರಾಜ್ಯದೊಳಗಿನ ಅನೇಕ ಚಿಕ್ಕ ದೊಡ್ಡ ದೇಶಗಳೂ ಪಾಳ್ಯಗಳೂ ಸೇರಿವೆ. ಇವುಗಳಲ್ಲಿ ಕೆಲವು ಕಡೆಗೆ ಸರಕಾರವು ಮತ್ತು ಜನರು ಆರಿಸಿದ ವಿಧಿಮಂಡಲಗಳು ಇದ್ದು, ಅಲ್ಲಿಯ ಜನರಿಗೆ ಕೆಲವು ವಿಷಯಗಳಲ್ಲಿ ಸ್ವಲ್ಪ ಅಧಿಕಾರವನ್ನು ಕೊಡಲಾಗಿದೆ. ಕೆಲವು ಕಡೆಗೆ ಇಂತಹ ವಿಧಿಮಂಡಲಗಳೂ ಇರುವುದಿಲ್ಲ. (೧) **ಅಮೇರಿಕೆಯಲ್ಲಿ**—ಬ್ರಿಟಿಶ್ ಹಾಂಡೂರಾಸ, ಬ್ರಿಟಿಶ್ ಗಯಾನಾ, ಬಹಾಮಾಜ, ಜಮೇಕಾ, ಬಾರ್ಬೆಡಾಸ, ಲೀವರ್ಡ ನಡುಗಡ್ಡೆಗಳು, ವಿಂಡವರ್ಡ ದ್ವೀಪಗಳು, ಟ್ರಿನಿಡಾಡ, ಟೊಬಗೊ, ಫಾಕಲಂಡ್ ನಡುಗಡ್ಡೆಗಳು; (೨) **ಆಸ್ಟ್ರೇಲಿಯಾದಲ್ಲಿ**—ಬ್ರಿಟಿಶ್ ನ್ಯೂ ಗಯಾನಾ; (೩) **ಏಶಿಯಾ ಖಂಡದಲ್ಲಿ**—ಸೀಲೋನ, ಸ್ಟ್ರೇಟ್ಸ ಸೆಟಲಮೆಂಟ, ಮಾರಿಶಸ್, ಬ್ರಿಟಿಶ್ ಬೋರ್ನಿಓ, ಹಾಂಗಕಾಂಗ, ಫಿಜಿ ದ್ವೀಪಗಳು; (೪) **ಆಫ್ರಿಕಾ ಖಂಡದಲ್ಲಿ**—ಬಸೊಟೊಲಂಡ, ರ್ಹೊಡೆಶಿಯಾ, ಗಂಬಿಯಾ, ಸೀರಿಯಾ ಲೋಸೆ, ಗೋಲ್ಡ ಕೋಸ್ಟ, ಕೆನಿಯಾ, ಬ್ರಿಟಿಶ ಪೂರ್ವ ಆಫ್ರಿಕಾ, ಸೇಂಟ ಹೆಲೆನಾ; (೫) **ಯುರೋಪ ಖಂಡದಲ್ಲಿ**—ಜಿಬ್ರಾಲ್ಟರ, ಮಾಲ್ಟಾ, ಸೈಪ್ರಸ್.

(೪) **ಸಂರಕ್ಷಿತ ಸಂಸ್ಥಾನಗಳು**—ಇಂತಹ ಸಂಸ್ಥಾನಗಳಿಗೆ ಅಂತಃಸ್ಥ ವಿಷಯಗಳಲ್ಲಿ ಬಹುಮಟ್ಟಿಗೆ ಸ್ವಾತಂತ್ರ್ಯವು ಇರುವುದು. ಆದರೆ ಪರರಾಷ್ಟ್ರೀಯ ವಿಷಯಗಳಲ್ಲಿ ಮಾತ್ರ ಇವು ಪೂರ್ಣವಾಗಿ ಇಂಗ್ಲಂಡಿನ ಅಧಿಕಾರಕ್ಕೆ ಒಳಪಟ್ಟಿರುತ್ತವೆ. ಮೊದಲು ಸಂರಕ್ಷಿತ ಸಂಸ್ಥಾನಗಳಾಗಿದ್ದ ಕೆಲವು ದೇಶಗಳನ್ನು ಅಲ್ಲಿಯ ಅನಾಯಕತ್ವದ ಮತ್ತು ಅವ್ಯವಸ್ಥೆಯ ಮೂಲಕ ಇಂಗ್ಲಂಡು ತನ್ನ ಸ್ವಾಧೀನಕ್ಕೆ ತೆಗೆದುಕೊಂಡಿತು. ಬಳಿಕ ಅವುಗಳಿಗೆ ಕ್ರೌನ್ ಕಾಲನೀಜ ಎಂದು ಕರೆಯಲಾರಂಭವಾಯಿತು. ಬ್ರಿಟಿಶ್ ಸಾಮ್ರಾಜ್ಯದಲ್ಲಿ ಕೆಳಗೆ ಕಾಣಿಸಿದುವು ಸಂರಕ್ಷಿತ ಸಂಸ್ಥಾನಗಳಾಗಿವೆ.


ಬ್ರಿಟಿಶ್ ಸಾಮ್ರಾಜ್ಯದ ರಾಜ್ಯವ್ಯವಸ್ಥೆ
ಇಂಗ್ಲಂಡಿನ ರಾಜನು
ಪಾರ್ಲಿಮೆಂಟು
(ಪಾರ್ಲಿಮೆಂಟಿನ ಕಟ್ಟಳೆಯಂತೆ ಸಾಮ್ರಾಜ್ಯದ ಬೇರೆ ಬೇರೆ ದೇಶಗಳ ರಾಜ್ಯಘಟನೆಗಳು ಏರ್ಪಟ್ಟಿವೆ)
ಪ್ರಿವ್ಹಿ ಕೌನ್ಸಿಲ್
ಕ್ಯಾಬಿನೆಟ್ (೨೦ - ೨೨ ಸದಸ್ಯರು)
(ಪಾರ್ಲಿಮೆಂಟಿಗೆ ಹೊಣೆಗಾರವಾಗಿದೆ)
ಪ್ರಿವ್ಹಿ ಕೌನ್ಸಿಲಿನ ನ್ಯಾಯಸಮಿತಿ
ಸಾಮ್ರಾಜ್ಯದ ಬೇರೆ ಬೇರೆ ದೇಶಗಳ ನ್ಯಾಯಾಲಯಗಳು
ಮುಖ್ಯ ಮಂತ್ರಿ
ಡೊಮಿನಿಯನ ಸೆಕ್ರೆಟರಿ
ಡೊಮಿನಿಯನಗಳಲ್ಲಿಯ ಗವ್ಹರ್ನರ ಜನರಲರೆಂಬ ಅಧಿಕಾರಿಗಳು
ಹಿಂದುಸ್ಥಾನದ ಸೆಕ್ರೆಟರಿ
ವ್ಹಾಯಿಸರಾಯ
ಉಪನಿವೇಶಗಳ ಸೆಕ್ರೆಟರಿ
ಉಪನಿವೇಶಗಳ ಗವ್ಹರ್ನರ ಮುಂತಾದ ಅಧಿಕಾರಿಗಳು

(೧) ಆಫ್ರಿಕಾ ಖಂಡದಲ್ಲಿ – ಉತ್ತರ ರ್‍ಹೊಡೇಶಿಯಾ, ಬೆಚೂನಾಲ್ಯಂಡ್, ಸ್ವೆಝೀಲಂಡ್, ನಾಯ್ಜೇರಿಯಾ, ಯುಗಾಂಡಾ, ಝಾಂಜಿಬಾರ, ನ್ಯಸಾಲಂಡ್, ಸೋಮಾಲಿಲಂಡ್; (೨) ಏಶಿಯಾ ಖಂಡದಲ್ಲಿ – ವೆಈ-ಹಿ-ವೆಈ, ಮಲಾಯಾ ಸಂಸ್ಥಾನಗಳ ಸಂಘ.

ಇಂಗ್ಲಂಡಿನ ಮೇಲ್ವಿಚಾರಣೆಗೆ ಒಳಪಟ್ಟ ಪ್ರದೇಶಗಳು (Mandated Territories) – ಮಹಾ ಯುದ್ಧವಾದ ಬಳಿಕ ತುರ್ಕಸ್ಥಾನದ ಮೆಸೊಪೊಟೇಮಿಯಾ (ಇರಾಕ) ಮತ್ತು ಪಲೆಸ್ಟಯಿನ; ಮತ್ತು ಜರ್ಮನಿಯ ಜರ್ಮನ್ ಈಸ್ಟ ಆಫ್ರಿಕಾ (ಟೆಂಗಾನಿಕಾ) ಮತ್ತು ಜರ್ಮನ್ ವೆಸ್ಟ ಆಫ್ರಿಕಾ ಈ ದೊಡ್ಡ ಪ್ರದೇಶಗಳು ರಾಷ್ಟ್ರಸಂಘದ ಪರವಾಗಿ ಕೆಲವು ವರ್ಷಗಳವರೆಗೆ ಇಂಗ್ಲಂಡಿನ ಮೇಲ್ವಿಚಾರಣೆಗೆ ಒಳಪಟ್ಟಿರುವುವು.

ಇದೇ ಪರಿಯಾಗಿ ಜರ್ಮನಿಯ ಪಶ್ಚಿಮ ಆಫ್ರಿಕಾ, ಪೆಸಿಫಿಕ್ ಸಮುದ್ರದಲ್ಲಿಯ ನ್ಯೂ ಗಾಯನಾ ಮತ್ತು ಸಮೊಅ ಈ ಪ್ರದೇಶಗಳನ್ನು ಅನುಕ್ರಮವಾಗಿ ಬ್ರಿಟಿಶ್ ದಕ್ಷಿಣ ಆಫ್ರಿಕಾ, ಆಸ್ಟ್ರೇಲಿಯಾ ಮತ್ತು ನ್ಯೂಝೀಲಂಡ್ ಇವುಗಳ ಮೇಲ್ವಿಚಾರಣೆಗೆ ರಾಷ್ಟ್ರಸಂಘವು ಒಪ್ಪಿಸಿರುತ್ತದೆ.

ಸ್ವಾಯತ್ತ ದೇಶಗಳ (ಡೊಮಿನಿಯನ್ಸ) ಮುಂದಿರುವ ಪ್ರಶ್ನೆ – ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಸ್ವಾಯತ್ತದೇಶಗಳಿಗೆ ಆಂತರಿಕ ವಿಷಯದಲ್ಲಿ ಸ್ವರಾಜ್ಯದ ಅಧಿಕಾರಗಳು ದೊರೆತಿವೆ. ಆದರೂ ಸಾಮ್ರಾಜ್ಯದ ಪ್ರಮೇಯಗಳನ್ನು ಮತ್ತು ಪರರಾಷ್ಟ್ರೀಯ ವಿಷಯಗಳನ್ನು ಕುರಿತು ಇಂಗ್ಲಂಡಿನ ಕೆಬಿನೆಟಿನಿಂದ ನಿರ್ಧರಿಸಲಾಗುವ ನೀತಿಯಲ್ಲಿ ತನ್ನದೂ ಭಾಗವು ಇರಬೇಕೆಂದು ಅವುಗಳ ಮಹತ್ವಾಕಾಂಕ್ಷೆ ಇದೆ. ೧೯೨೬ನೆಯ ಇಸ್ವಿಯಲ್ಲಿ ನೆರೆದ ಸಾಮ್ರಾಜ್ಯ ಪರಿಷತ್ತಿನ ವೃತ್ತಾಂತವು ಪ್ರಸಿದ್ಧವಾಗಿದ್ದು, ಅದರಲ್ಲಿ 'ಇಂಗ್ಲಂಡ್ ಮತ್ತು ಬ್ರಿಟಿಶ್ ಸಾಮ್ರಾಜ್ಯದ ಸ್ವಾಯತ್ತ ಉಪನಿವೇಶಗಳ' (ಡೊಮಿನಿಯನ್ಸ) ಸ್ಥಾನಮಾನವು ಸರಿಸಮಾನವಾಗಿರುವುದರಿಂದ 'ಬ್ರಿಟಿಶ್ ಸಾಮ್ರಾಜ್ಯವು' ಇಂಗ್ಲಂಡಿನ ರಾಜನ ನಾಯಕತ್ವದಲ್ಲಿಯ 'ಸಮಾನ ಯೋಗ್ಯತೆಯ ಬ್ರಿಟಿಶ್ ರಾಷ್ಟ್ರಗಳ ಸಂಘ'ವಾಗಿದೆ (British Commonwealth of Nation) ಎಂದು ನಿರ್ದೇಶಿಸಲಾಗಿದೆ.

ಮುಂದೆ ೧೯೩೦ರಲ್ಲಿ ಕೂಡಿದ ಸಾಮ್ರಾಜ್ಯ ಪರಿಷತ್ತಿನ ಕಾಲಕ್ಕೆ ಹಿಂದೆ ಪಾರ್ಲಿಮೆಂಟಿನವರು ಉಪನಿವೇಶಗಳ ನಿಯಂತ್ರಣಕ್ಕಾಗಿ ಏರ್ಪಡಿಸಲಾದ, ಆದರೆ ಈ ಉಪನಿವೇಶಗಳಿಗೆ ಸ್ವರಾಜ್ಯದ ಅಧಿಕಾರಗಳು ದೊರೆತುದರಿಂದ, ನಿರರ್ಥಕವಾದ ಕಟ್ಟಳೆಗಳನ್ನು ತೊಡೆದು ಹಾಕಬೇಕೆಂದು ಪಾರ್ಲಿಮೆಂಟಿಗೆ ಸೂಚಿಸಲಾಯಿತು.

ಈ ಸೂಚನೆಯಂತೆ ಬ್ರಿಟಿಶ್ ಪಾರ್ಲಿಮೆಂಟು ಆ ಕಟ್ಟಳೆಗಳನ್ನು ತೊಡೆದುಹಾಕಿ 'ಸ್ಟೆಟೂಟ ಆಫ ವೆಸ್ಟಮಿನ್ಸ್ಟರ' ಎಂಬ ಕಟ್ಟಳೆಯನ್ನು ತೀರ್ಮಾನಿಸಿತು (೧೯೩೧). ಈ ಕಟ್ಟಳೆಯಿಂದ ಇಂಗ್ಲಂಡ್ ಮತ್ತು ಬ್ರಿಟಿಶ್ ಸಾಮ್ರಾಜ್ಯದ ಸ್ವಾಯತ್ತ ಉಪನಿವೇಶಗಳ ಸ್ಥಾನಮಾನಗಳು ಸರಿಸಮಾನವಾಗಿವೆ ಎಂದು ನಿರ್ಧರಿಸಲಾಯಿತು. ಇದರಿಂದ ತಮ್ಮ ದೇಶಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಅರಸನನ್ನು ಸಂದರ್ಶಿಸಿ ಆತನಿಗೆ ಆಲೋಚನೆಯನ್ನು ನಿವೇದಿಸುವ ಅಧಿಕಾರವು ಡೊಮಿನಿಯನುಗಳಿಗೆ ದೊರೆತಿತು. ಇದರ ಲಾಭವನ್ನು ಪಡೆದು ತನ್ನ ಉಪನಿವೇಶದ ಮುಖ್ಯ ನ್ಯಾಯಾಧೀಶನಾದ ಸರ್ ಐಝಕ ಐಝಕ್ಸ ಈತನನ್ನು ತನ್ನ ಉಪನಿವೇಶದ ಗವರ್ನರ ಜನರಲನಾಗಿ ನಿಯೋಜಿಸಬೇಕೆಂದು ಆಸ್ಟ್ರೇಲಿಯವು ಅರಸನಿಗೆ ಆಲೋಚನೆ ಹೇಳಿತು. ಆ ಮೇರೆಗೆ ಆತನನ್ನು ಅಲ್ಲಿಯ ಗವರ್ನರ ಜನರಲನಾಗಿ ನೇಮಿಸಲಾಯಿತು.

ಬ್ರಿಟಿಶ್ ಕಬಿನೆಟಿನಲ್ಲಿಯ ಉಪನಿವೇಶಮಂತ್ರಿಯ ವಶದಲ್ಲಿ ಎಲ್ಲ ಉಪನಿವೇಶಗಳಿಗೆ ಸಂಬಂಧಪಟ್ಟ ಕಾರ್ಯಭಾರವು ಇದ್ದಿತು. ಆದರೆ ೧೯೩೦ರಲ್ಲಿ ಡೊಮಿನಿಯನುಗಳ ಕಾರ್ಯಭಾರವನ್ನು ನಡೆಯಿಸುವುದಕ್ಕೆ 'ಡೊಮಿನಿಯನ ಮಂತ್ರಿ' ಎಂಬ ಸ್ವತಂತ್ರನಾದ ಒಬ್ಬ ಮಂತ್ರಿ ಬ್ರಿಟಿಶ್ ಕಬಿನೆಟನಲ್ಲಿ ನಿಯೋಜಿಸಲ್ಪಟ್ಟಿರುವನು.

೧೯೩೨ರಲ್ಲಿ ಓಟಾವಾ ಎಂಬಲ್ಲಿ ಸಾಮ್ರಾಜ್ಯ ಪರಿಷತ್ತು ಕೂಡಿತು. ಅದರಲ್ಲಿ ಹಿಂದುಸ್ಥಾನದ ಪ್ರತಿನಿಧಿಯೂ ಭಾಗವಹಿಸಿದ್ದನು. ಸಾಮ್ರಾಜ್ಯದ ಬೇರೆ ಬೇರೆ ದೇಶಗಳು ಒಬ್ಬರೊಬ್ಬರಿಗೆ ವ್ಯಾಪಾರ ವಿಷಯದಲ್ಲಿ ಯಾವ ಬಗೆಯ ಸೌಕರ್ಯಗಳನ್ನು ಸಲಿಸಬೇಕು ಮತ್ತು ಪರಸ್ಪರರಲ್ಲಿ ಆರ್ಥಿಕ ಮತ್ತು ವ್ಯಾಪಾರ ವಿಷಯದ ಸಂಘಟನೆಯನ್ನು ಹೇಗೆ ಹೆಚ್ಚಿಸಬೇಕು ಎಂಬ ಸಂಗತಿಗಳನ್ನು ಕುರಿತು ಈ ಪರಿಷತ್ತಿನಲ್ಲಿ ವಿಚಾರವಿನಿಮಯವು ನಡೆದು ಮಹತ್ವದ ನಿರ್ಧಾರಗಳು ಗೊತ್ತುಪಡಿಸಲಾದುವು.

೧೯೩೬ರ ಡಿಸೆಂಬರದಲ್ಲಿ ೮ನೆಯ ಎಡ್ವರ್ಡರ ರಾಜ್ಯತ್ಯಾಗ ಮತ್ತು ೬ನೆಯ ಜಾರ್ಜರ ರಾಜ್ಯಾರೋಹಣ ಈ ವಿಷಯಗಳನ್ನು ಕುರಿತು ಎಲ್ಲ ಸ್ವಾಯತ್ತ ಉಪನಿವೇಶಗಳ (ಡೊಮಿನಿಯನ್ಸ) ಆಲೋಚನೆಯನ್ನು ಇಂಗ್ಲಂಡಿನ ಮುಖ್ಯಮಂತ್ರಿಗಳಾದ ಬಾಲ್ಡ್ವಿನರು ತೆಗೆದುಕೊಂಡಿದ್ದರು.

**೧೯೩೭ರಲ್ಲಿಯ ಸಾಮ್ರಾಜ್ಯ ಪರಿಷತ್ತು**—೧೯೩೭ರ ಮೇ ೧೨ನೆಯ ದಿನ ೬ನೆಯ ಜಾರ್ಜರ ರಾಜ್ಯಾರೋಹಣ ಸಮಾರಂಭವು ನೆರವೇರಿದ ಬಳಿಕ ಅದೇ

ತಿಂಗಳಲ್ಲಿ ಲಂಡನ ನಗರಿಯಲ್ಲಿ ಬ್ರಿಟಿಶ್ ಸಾಮ್ರಾಜ್ಯ ಪರಿಷತ್ತು ಕೂಡಿತು. ಐರ್ಲಂಡನ್ನುಳಿದು ಸಾಮ್ರಾಜ್ಯದ ಎಲ್ಲ ಸ್ವಾಯತ್ತ ರಾಷ್ಟ್ರದವರು ಈ ಪರಿಷತ್ತಿಗೆ ತಮ್ಮ ಪ್ರತಿನಿಧಿಗಳನ್ನು ಕಳುಹಿದ್ದರು. ಈಗ ಜಗತ್ತಿನ ಪ್ರತಿಯೊಂದು ಪ್ರಮುಖ ರಾಷ್ಟ್ರವು ತನ್ನಷ್ಟಕ್ಕೆ ಸೇನೆ, ಹಡಗುಪಡೆ, ವಿಮಾನಬಲ ಮತ್ತು ಸಮರಸಾಮಗ್ರಿಯನ್ನು ಹೆಚ್ಚಿಸುತ್ತಿರುವುದರಿಂದ ಸಾಮ್ರಾಜ್ಯದ ಬೇರೆ ಬೇರೆ ದೇಶಗಳ ಮತ್ತು ಮಹತ್ವದ ಸೈನಿಕ, ವೈಮಾನಿಕ ಮತ್ತು ಹಡಗುಪಡೆಯ ಪಾಳ್ಯಗಳ ಸಂರಕ್ಷಣೆಯ ವ್ಯವಸ್ಥೆಯನ್ನು ಮಾಡುವುದು ಅಗತ್ಯವಾಗಿತ್ತು. ಅದಕ್ಕಾಗಿ ಈ ಪರಿಷತ್ತಿನಲ್ಲಿ ಸಾಮ್ರಾಜ್ಯ ಸಂರಕ್ಷಣದ ಯೋಜನೆ, ಪರರಾಷ್ಟ್ರೀಯ ನೀತಿ, ಸಾಮ್ರಾಜ್ಯದ ರಾಜ್ಯಘಟನೆ, ವ್ಯಾಪಾರ ಮತ್ತು ಸಂಚಾರಗಳ ಮಾರ್ಗ ಮುಂತಾದ ವಿಷಯಗಳನ್ನು ಕುರಿತು ಚರ್ಚೆಯಾಗಿ ಸಾಮ್ರಾಜ್ಯದ ಬೇರೆ ಬೇರೆ ರಾಷ್ಟ್ರಗಳಲ್ಲಿ ಈ ವಿಷಯಗಳನ್ನು ಕುರಿತು ಹೆಚ್ಚಿನ ಸಂಘಟನೆಯನ್ನು ಉಂಟುಮಾಡುವ ಯೋಜನೆಯೊಂದು ಏರ್ಪಡಿಸಲಾಯಿತು.

---

## ಸಾರಾಂಶವು.

ಭೂವಿಸ್ತಾರ, ಜನಸಂಖ್ಯೆ, ಶಕ್ತಿ, ಸಂಪತ್ತು ಈ ಎಲ್ಲ ವಿಷಯಗಳಲ್ಲಿ ಬ್ರಿಟಿಶ್ ಸಾಮ್ರಾಜ್ಯವು ಅತಿಶ್ರೇಷ್ಠವಾಗಿದೆ. ಈ ಸಾಮ್ರಾಜ್ಯದಲ್ಲಿಯ ಕೆನಡಾ, ಆಸ್ಟ್ರೇಲಿಯಾ, ನ್ಯೂಝೀಲಂಡ್, ದಕ್ಷಿಣ ಅಫ್ರಿಕಾ ಮತ್ತು ದಕ್ಷಿಣ ಐರ್ಲಂಡ್ ಇವುಗಳಿಗೆ ಸ್ವರಾಜ್ಯದ ಅಧಿಕಾರಗಳು ದೊರೆತಿವೆ. ಇವುಗಳಿಗೆ ಸ್ವಾಯತ್ತ ಉಪನಿವೇಶಗಳು ಇಲ್ಲವೆ ಡೊಮಿನಿಯನ್ಸ ಎನ್ನುವರು. ಈ ಡೊಮಿನಿಯನುಗಳ ಯೋಗ್ಯತೆ ಇಂಗ್ಲಂಡಿಗೆ ಸರಿಸಮಾನವಾಗಿದೆ. ಪರರಾಷ್ಟ್ರೀಯ ವಿಷಯಗಳ ನೀತಿ ಇಂಗ್ಲಂಡಿನ ಕೆಬಿನೆಟನಿಂದ ನಿರ್ಧರಿಸಲಾಗುತ್ತದೆ. ಅದರಲ್ಲಿ ತಮಗೂ ಭಾಗವಿರಬೇಕೆಂದು ಡೊಮಿನಿಯನುಗಳ ಮಹತ್ವಾಕಾಂಕ್ಷೆಯಾಗಿದೆ. ತನಗಾದರೂ ಸ್ವರಾಜ್ಯದ ಅಧಿಕಾರವು ದೊರೆಯಬೇಕು ಮತ್ತು ಡೊಮಿನಿಯನುಗಳ ಯೋಗ್ಯತೆ ಪ್ರಾಪ್ತವಾಗಬೇಕು ಎಂದು ಹಿಂದುಸ್ಥಾನದ ಮಹತ್ವಾಕಾಂಕ್ಷೆಯಾಗಿದೆ.

---

# ೩೦ನೆಯ ಪ್ರಕರಣವು

## ಇಂಗ್ಲಂಡಿನ ರಾಜ್ಯಘಟನೆಯ ವಿಕಾಸವು ಮತ್ತು ಸದ್ಯದ ರಾಜ್ಯಘಟನೆ.

**ಇಂಗ್ಲಂಡಿನ ರಾಜ್ಯಘಟನೆ**—ಸುವ್ಯವಸ್ಥಿತವಾದ ರಾಜ್ಯಯಂತ್ರದಿಂದ ಆಗ ತಕ್ಕ ಪ್ರಮುಖ ಕೆಲಸಗಳು ಮೂರು: (೧) ಕಾಯ್ದೆಗಳನ್ನು ಮಾಡುವುದು, (೨) ಅವುಗಳ ಸಾಹಾಯ್ಯದಿಂದ ಆಡಳಿತವನ್ನು ಸಾಗಿಸುವುದು, (೩) ನ್ಯಾಯ ದಾನ. ಈ ಕಾರ್ಯಗಳನ್ನು ಸುಸೂತ್ರವಾಗಿ ನೆರವೇರಿಸಲು ಬೇರೆ ಬೇರೆ ಜಾತಿಯ ರಾಜ್ಯಸಂಸ್ಥೆಗಳು ನಿರ್ಮಾಣವಾಗಿವೆ. ವಂಶಪಾರಂಪರ್ಯವಾಗಿ ಪಟ್ಟಕ್ಕೆ ಬರುವ ಒಬ್ಬ ಮನುಷ್ಯನ (ಅರಸು) ಇಚ್ಛೆಯಂತೆ ಈ ಕಾರ್ಯಗಳೆಲ್ಲ ನಡೆಯುತ್ತಿದ್ದರೆ, ಅಂತಹ ರಾಜ್ಯಪದ್ಧತಿಯನ್ನು 'ರಾಜಸತ್ತಾತ್ಮಕ ರಾಜ್ಯಪದ್ಧತಿ' (Monarchy) ಎಂದು ಕರೆವುದುಂಟು. ಕೆಲವು ವ್ಯಕ್ತಿಗಳ ತಂತ್ರದಿಂದ ಈ ಕಾರ್ಯಗಳು ನಡೆಯುತ್ತಿದ್ದರೆ, ಸರದಾರ ಸತ್ತಾತ್ಮಕ ರಾಜ್ಯಪದ್ಧತಿ (Aristocracy), ಜನಸಾಮಾನ್ಯರ ಇಲ್ಲವೆ ಅವರಿಂದ ಆರಿಸಲಾದ ಪ್ರತಿನಿಧಿಗಳ ಅಭಿಮತದಂತೆ ಅವು ನಡೆಯುತ್ತಿದ್ದಲ್ಲಿ, 'ಲೋಕಸತ್ತಾತ್ಮಕ ರಾಜ್ಯಪದ್ಧತಿ' (Democracy) ಎನ್ನುವರು. ಇಂಗ್ಲಂಡಿನಲ್ಲಿ ಸದ್ಯಕ್ಕೆ ನಡೆಯುತ್ತಿರುವ ರಾಜ್ಯಪದ್ಧತಿ ಮೇಲ್ಕಂಡ ಮೂರು ಜಾತಿಗಳಲ್ಲಿ ಯಾವುದೊಂದು ಜಾತಿಯದಾಗಿರುವುದಿಲ್ಲ. ಅದರಲ್ಲಿ ಈ ಮೂರೂ ಪದ್ಧತಿಗಳ ಸಮ್ಮೇಲನವಾಗಿರುವುದು. ಅರಸು, ಸರದಾರರು ಮತ್ತು ಜನಸಾಮಾನ್ಯರ ಪ್ರತಿನಿಧಿಗಳು ಈ ಮೂವರೂ ಕೂಡಿ ಸಿದ್ಧವಾದ ಪಾರ್ಲಿಮೆಂಟಿನಿಂದ ರಚಿಸಲಾದ ಮತ್ತು ಪಾರ್ಲಿಮೆಂಟಿಗೆ ಮಾನ್ಯವಾಗಿರುವ ಶಾಸನವಿಧಾನವನ್ನು ಅನುಸರಿಸಿ ಇಂಗ್ಲಂಡಿನ ಆಡಳಿತವು ಸಾಗುತ್ತಿರುವುದರಿಂದ ಇಂಗ್ಲಂಡಿನ ರಾಜ್ಯಪದ್ಧತಿ 'ಘಟನಾತ್ಮಕ ರಾಜಸತ್ತೆ'( Constitutional Monarchy) ಇಲ್ಲವೆ 'ನಿಯಂತ್ರಿತ ರಾಜಸತ್ತೆ' (Limited Monarchy) ಆಗಿದೆ ಎಂದು ಹೇಳಲಾಗುತ್ತದೆ.

ಇಂಗ್ಲಂಡಿನ ರಾಜ್ಯಘಟನೆ ಯಾವುದೇ ಒಂದು ಶಾಸನದಿಂದ ನಿರ್ಧರಿಸಲಾಗಿಲ್ಲ. ಇಂಗ್ಲಿಶ್ ಜನರ ಪರಂಪರಾಗತವಾದ ಸಂಪ್ರದಾಯಗಳು, ಅರಸರಿಂದ ಕಾಲಕಾಲಕ್ಕೆ ದೊರೆತ ರಾಯಸಗಳು (ಸನದುಗಳು) ಮತ್ತು ಪಾರ್ಲಿಮೆಂಟು ಬೇರೆ ಬೇರೆ ಸಮಯಗಳಲ್ಲಿ ವಿಧಿಸಿದ ಕಟ್ಟಳೆಗಳು ಇಂಗ್ಲಂಡಿನ ರಾಜ್ಯಘಟನೆಗೆ ಮೂಲಾಧಾರವಾಗಿವೆ. ಆದುದರಿಂದ ಈ ರಾಜ್ಯಘಟನೆ ಹೇಗೆ ನಿರ್ಮಾಣ

ವಾಗುತ್ತ ಹೋಯಿತು ಮತ್ತು ಅದರ ಇಂದಿನ ಸ್ವರೂಪವು ಎಂತಹದು ಎಂಬುದನ್ನು ಮುಂದಿನ (೧) ಇಂಗ್ಲಂಡಿನ ರಾಜ್ಯಘಟನೆಯ ವಿಕಾಸ ಮತ್ತು (೨) ಇಂಗ್ಲಂಡಿನ ಸದ್ಯದ ರಾಜ್ಯಘಟನೆ ಈ ಎರಡು ಭಾಗಗಳಲ್ಲಿ ವಿವರಿಸಲಾಗಿದೆ.

## (೧) ಇಂಗ್ಲಂಡಿನ ರಾಜ್ಯಘಟನೆಯ ವಿಕಾಸ.

**ಅಂಗ್ಲೊ ಸೆಕ್ಸನ್ ಅರಸರ ವಿಟನ್‌ಗೆಮೊಟ್**—ಹಿಂದೆ ಅಂಗ್ಲೊ ಸೆಕ್ಸನ್ ಅರಸರ ಆಳಿಕೆಗಳಲ್ಲಿ ವಿಟನ್‌ಗೆಮೊಟ್ (ಪ್ರಾಜ್ಞರ ಸಮಿತಿ) ಎಂಬ ಮಂಡಲವು ಅರಸನಿಗೆ ಮಂತ್ರಾಲೋಚನೆಯಲ್ಲಿ ಸಹಾಯಕವಾಗಿತ್ತು. ಅರಸುಮನೆತನದವರು, ಮಂತ್ರಿಗಳು, ಗಣ್ಯರಾದ ನಾಯಕರು ಮತ್ತು ಬೇರೆ ಬೇರೆಡೆಯ ಪ್ರತಿಷ್ಠಿತರಾದ ಪಂಡಿತರು ಈ ಮಂಡಲದ ಸದಸ್ಯರಾಗಿರುತ್ತಿದ್ದರು. ಅರಸನನ್ನು ಆರಿಸುವುದು, ಹೊಸ ಕಾಯ್ದೆಗಳನ್ನು ನಿರ್ಮಿಸುವುದು, ಪರರಾಷ್ಟ್ರಗಳೊಡನೆ ಕಾಳೆಗವನ್ನು ಸಾರುವುದು, ಒಡಂಬಡಿಕೆಗೆ ಒಪ್ಪಿಗೆಯನ್ನು ನೀಡುವುದು, ತೀರ್ಪು ತೀರ್ಮಾನ ಮುಂತಾದ ಕಾರ್ಯಗಳನ್ನು ಈ ಮಂಡಲವು ನೆರವೇರಿಸುತ್ತಲಿತ್ತು.

**ನಾರ್ಮನ್ ಅರಸರ ಗ್ರೇಟ್ ಕೌನ್ಸಿಲ್**—ಇಂಗ್ಲಂಡಿನಲ್ಲಿ ನಾರ್ಮನ್ ವಂಶವು ಸ್ಥಾಪನವಾದ ಬಳಿಕ ಸರಂಜಾಮಿ ಪದ್ಧತಿ ಆರಂಭವಾಯಿತು. ಇಂಗ್ಲಂಡಿನ ಭೂಮಿಗಳೆಲ್ಲ ಬಹುತರವಾಗಿ ಅರಸನ ಒಡೆತನಕ್ಕೆ ಒಳಪಟ್ಟಿವೆ ಎಂದು ೧ನೆಯ ವಿಲಿಯಮನು ಸಾರಿದನು. ಈ ಭೂಮಿಗಳನ್ನು ಆತನು ಸರಂಜಾಮಿ ಜಹಾಗೀರದಾರಿಯ ಕಟ್ಟಿನಂತೆ ಆತನು ನಾರ್ಮನ್ ಸರದಾರರಿಗೆ ಹಂಚಿಕೊಟ್ಟನು. ಮುಂದೆ ಆ ಸರದಾರರಿಂದ ಇವು ಕೆಲವು ಸರಂಜಾಮಿ ಜಹಾಗೀರಿಯ ಮತ್ತು ಕೆಲವು ಸಾಗುವಳಿಯ ಕಟ್ಟಿನಂತೆ ಇಂಗ್ಲಿಶ್ ಜನರಿಗೆ ದೊರೆತುವು. ಇಂತು ಇಂಗ್ಲಿಶ್ ಜನರ ಸ್ಥಾನಮಾನಗಳು ಹೊಸತಾಗಿ ಬಂದ ನಾರ್ಮನ್ ಸರದಾರರಿಗಿಂತಲೂ ಕೀಳಾದುವು. ಇಂಗ್ಲಂಡಿನಲ್ಲಿ ಸರಂಜಾಮಿ ಪದ್ಧತಿ ಪ್ರಾರಂಭವಾದ ಬಳಿಕ ಅರಸನಿಗೆ ಆಡಳಿತದ ಕೆಲಸದಲ್ಲಿ ಮಂತ್ರಾಲೋಚನೆಯನ್ನು ನೀಡಲು ಹಿಂದಿನ ವಿಟನ್‌ಗೆಮೊಟ್ ಮಂಡಲದ ಸ್ಥಳದಲ್ಲಿ ಗ್ರೇಟ್ ಕೌನ್ಸಿಲ್ ಎಂಬ ಮಂಡಲವು ಏರ್ಪಟ್ಟಿತು. ಅರಸನ ಪ್ರಮುಖ ಸರದಾರರು, ಮನ್ನೆಯರು, ಆರ್ಚ ಬಿಶಪ್ ಮತ್ತು ದೊಡ್ಡ ದೊಡ್ಡ ಬಿಶಪರು ಈ ಮಂಡಲದ ಸದಸ್ಯರಾಗಿರುತ್ತಿದ್ದರು. ಆದರೆ ಅರಸನ ಕೈಯಲ್ಲಿ ಹೆಚ್ಚು ಅಧಿಕಾರವು ಇರುತ್ತಿರುವುದರಿಂದ ಈ ಮಂಡಲದ ಪ್ರಭಾವವು ಅರಸನ ಮೇಲೆ ಆಗುತ್ತಿರಲಿಲ್ಲ.

**ನಾರ್ಮನ್ ಅರಸರ ಸತ್ತೆ**—ಸರಂಜಾಮಿ ಸರದಾರರ ಪ್ರತಿಷ್ಠೆ ಬೆಳೆಯ

ಬ್ಬಾರದು, ತಮ್ಮ ಕೈಯಲ್ಲಿ ಅನಿಯಂತ್ರಿತ ಅಧಿಕಾರವು ಇರಬೇಕು ಎಂಬುದು ನಾರ್ಮನ್ ಅರಸರ ರಾಜನೀತಿಯಾಗಿದ್ದಿತು. ಜನಸಾಮಾನ್ಯರು ತಮಗೆ ಬೆಂಬಲ ವಾಗಿ ತನ್ನ ವಿಷಯದಲ್ಲಿ ಸಹಾನುಭೂತಿಯುಳ್ಳವರಾಗಿರಬೇಕೆಂದು ೧ನೆಯ ಹೆನ್ರಿ, 'ನಾನು ಇಂಗ್ಲಂಡಿನ ಶಾಸನಗಳಿಗೆ ಮತ್ತು ಸಂಪ್ರದಾಯಗಳಿಗೆ ಅನುಸಾರ ವಾಗಿ ಆಳುವೆನು' ಎಂದು ಘೋಷಿಸಿದನು. ಅದರಿಂದ ಆತನಿಗೆ ಇಂಗ್ಲಿಶ್ ಜನರ ಸಹಾನುಭೂತಿ ಲಭಿಸಿ ಆತನು ಸರದಾರರ ಪ್ರತಿಷ್ಠೆಯನ್ನು ಇಳಿಸಲು ಸಮರ್ಥನಾ ದನು. ಆದರೆ ಮುಂದೆ ಸ್ಟೀಫನನ ಆಳಿಕೆಯಲ್ಲಿ ಸರದಾರರ ಪ್ರತಿಷ್ಠೆ ಬೆಳೆಯಿತು ಮತ್ತು ರಾಜಶಕ್ತಿ ಕುಗ್ಗಿ ಎಲ್ಲೆಡೆಯಲ್ಲಿ ಅನಾಯಕತ್ವವು ಆರಂಭವಾಯಿತು.

**೨ನೆಯ ಹೆನ್ರಿಯ ಸುಧಾರಣೆಗಳು**—೨ನೆಯ ಹೆನ್ರಿ ಮಹತ್ವದ ಅನೇಕ ಸುಧಾರಣೆಗಳನ್ನು ರಚಿಸಿದನು. ಅವನು ಸರದಾರರ ಪ್ರತಿಷ್ಠೆಯನ್ನು ತಗ್ಗಿಸಿ ಎಲ್ಲ ಕಡೆಯಲ್ಲಿ ತನ್ನ ಶಕ್ತಿಯನ್ನು ಸ್ಥಾಪಿಸಿದನು. ಸರದಾರರು ಜನರ ಮೇಲೆ ಬಲುಮೆ ಯನ್ನು ಮಾಡದಿರಲೆಂದು ಸಂಚಾರಿ ನ್ಯಾಯಾಧೀಶರನ್ನು ನೇಮಿಸಿದನು ಮತ್ತು ಇವರು ಪಂಚರ (ಜ್ಯೂರಿ) ನೆರವಿನಿಂದ ನ್ಯಾಯಗಳನ್ನು ತೀರ್ಮಾನಿಸಬೇಕೆಂದು ಗೊತ್ತುಪಡಿಸಿದನು. ರಾಷ್ಟ್ರದ ಮೇಲೆ ಪರಚಕ್ರವು ಒದಗಿದಲ್ಲಿ ಅರಸನಿಗೆ ನೆರ ವಾಗುವುದು ಪ್ರತಿಯೊಬ್ಬನ ಕರ್ತವ್ಯವಾದುದರಿಂದ ಪ್ರತಿಯೊಬ್ಬ ನಾಗರಿಕನು ಶಸ್ತ್ರಗಳನ್ನು ಧರಿಸುವುದಾಗಿ ಅವನು ವಿಧಿಸಿದನು. ಇದರಿಂದ ಸಾಮಾನ್ಯ ಜನರ ಪ್ರತಿಷ್ಠೆ ಬೆಳೆಯತೊಡಗಿತು.

ಆ ಕಾಲದಲ್ಲಿ ಅರಸನಿಗೆ ಸರಂಜಾಮಿಯ ಪ್ರಾಪ್ತಿ ವಿಶೇಷವಾಗಿದ್ದಿತು. ಆಡಳಿತದ ವೆಚ್ಚವಾದರೂ ಕಡಿಮೆಯಾಗಿತ್ತು. ಆದುದರಿಂದ ಹಣಕ್ಕೋಸುಗ **ಗ್ರೇಟ್ ಕೌನ್ಸಿಲಿನ** ಅಧಿವೇಶನಗಳನ್ನು ಕರೆವ ಪ್ರಸಂಗಗಳು ಕಡಿಮೆಯಾಗಿ ಬರುತ್ತಿದ್ದುವು.

**ಮಗ್ನಾ ಚಾರ್ಟಾ, ೧೨೧೫**—ಜಾನ್ ರಾಜನು ತನ್ನ ಆಳಿಕೆಯಲ್ಲಿ ಅಕ್ರಮದ ಅನೇಕ ಕೃತ್ಯಗಳನ್ನು ಮಾಡಿದನು. ಫ್ರಾನ್ಸಿನೊಡನೆ ಸಮರವನ್ನು ಹೂಡಲು ಅವನಿಗೆ ಹಣವು ಬೇಕಾಯಿತು. ಅದನ್ನು ಕೂಡಿಸಲು ಆತನು ಇಂಗ್ಲಂಡಿನ ಮನ್ನೆಯರ, ಧರ್ಮಾಧಿಕಾರಿಗಳ, ವರ್ತಕರ, ಜನಸಾಮಾನ್ಯರ ಮೇಲೆ ತನ್ನ ಅಧಿಕಾರಬಲದಿಂದ ಭಾರವಾದ ತೆರಿಗೆಯನ್ನು ಹೇರಿದನು. ತನಗೆ ವಿರೋಧಿಗಳಾದವರನ್ನು ಆತನು ವಿಚಾರಣೆಯಿಲ್ಲದೆ ಸೆರೆಮನೆಯಲ್ಲಿ ಇರಿಸುತ್ತಿ ದ್ದನು. ಹೀಗಾಗಿ ಅವನ ಆಳಿಕೆ ಎಲ್ಲರಿಗೂ ಅಸಹ್ಯವಾಯಿತು. ಜಾನನ ಅನ್ಯಾಯದ ಮತ್ತು ಅತ್ಯಾಚಾರದ ಕೃತಿಗಳಿಂದ ಮನ್ನೆಯರು, ಧರ್ಮಾಧಿಕಾರಿ

ಗಳು ಮತ್ತು ಜನಸಾಮಾನ್ಯರು ಒಂದಾದರು. ಪೂರ್ವಪರಂಪರೆಯಾಗಿ ತಮಗೆ ನಡೆಯುತ್ತ ಬಂದಿದ್ದ ಹಕ್ಕುಬಾಧ್ಯತೆಗಳ ಒಂದು ಸನದನ್ನು ಅವರು ಸಿದ್ಧಪಡಿಸಿ ಅದಕ್ಕೆ ಅಂಕಿತವನ್ನು ಹಾಕಲು ಜಾನನಿಗೆ ಒತ್ತಾಯಪಡಿಸಿದರು. ಈ ಸನದಿಗೆ **ಮಗ್ನಾ ಚಾರ್ಟಾ** ಎಂದು ಹೆಸರು. ಅದರಲ್ಲಿ ಅನೇಕ ಅಂಶಗಳು ನಿರ್ದಿಷ್ಟವಾಗಿವೆ. ಅವುಗಳಲ್ಲಿ ಮುಖ್ಯವಾದುವು ಇವು: (೧) ಗ್ರೇಟ್ ಕೌನ್ಸಿಲಿನ (ಮನ್ನೆಯರ ಮಂಡಲ) ಒಪ್ಪಿಗೆಯಿಲ್ಲದೆ ಕ್ಲಪ್ತವಾದ ಸರಂಜಾಮಿ ಕಂದಾಯಕ್ಕಿಂತ ಹೆಚ್ಚಿನ ತೆರಿಗೆಯನ್ನು ಅರಸನು ತೆಗೆದುಕೊಳ್ಳಲಾಗದು. (೨) ನ್ಯಾಯಾಸನದಿಂದ ಯೋಗ್ಯ ವಿಚಾರಣೆಯಾಗಿ ಅಪರಾಧವು ಸಿದ್ಧವಾಗುವವರೆಗೆ ಬರಿಯ ಸಂಶಯದಿಂದ ಯಾರನ್ನೂ ಸೆರೆಯಲ್ಲಿ ಇರಿಸಲಾಗದು. (೩) ಪರಂಪರಾಗತವಾಗಿ ನಡೆದು ಬಂದ ಕಟ್ಟಳೆಯ ಅನುಸರಣೆಯಿಂದಲೆ ನ್ಯಾಯದಾನವನ್ನು ಮಾಡಬೇಕು. ನ್ಯಾಯಕಾರ್ಯದಲ್ಲಿ ಬಡವರು ಸಿರಿವಂತರು ಎಂಬ ಭೇದವು ಇರಲಾಗದು. (೪) ಹಿಂದಿನಿಂದ ನಡೆದುಬಂದ ಚರ್ಚಿನ ವ್ಯವಸ್ಥೆಯಲ್ಲಿ ಅರಸನು ಕೈ ಹಾಕಕೂಡದು.

ಪೂರ್ವ ಪರಂಪರೆಯಿಂದ ನಡೆದುಬಂದ ಇಂಗ್ಲಿಶ್ ಜನರ ಅಧಿಕಾರಗಳಿಗೆ 'ಮ್ಯಗ್ನಾ ಚಾರ್ಟಾ' ಸನದಿನಿಂದ ಅರಸನ ಒಪ್ಪಿಗೆ ದೊರೆತುದರಿಂದ ಈ ಸನದು ಹೆಚ್ಚು ಮಹತ್ವವನ್ನು ಪಡೆದಿದೆ.

**ಪಾರ್ಲಿಮೆಂಟಿನ ಸ್ಥಾಪನೆ, ೧೨೬೫**—ಜಾನನ ಮಗನಾದ ೩ನೆಯ ಹೆನ್ರಿ ಫ್ರಾನ್ಸಿನಲ್ಲಿಯ ತನ್ನ ಆಪ್ತೇಷ್ಟರಿಗೆ ಇಂಗ್ಲಂಡಿನಲ್ಲಿಯ ಭೂಮಿಗಳನ್ನು ಮತ್ತು ಸರದಾರಿಯ ಉಂಬಳಿಗಳನ್ನು ಕೊಡಲು ಆರಂಭಿಸಿದನು. ಸ್ಕಾಟ್‌ಲಂಡ್ ಮತ್ತು ವೇಲ್ಸ ದೇಶಗಳನ್ನು ಗೆಲ್ಲಲು ಆತನು ಪ್ರಯತ್ನಿಸಿದನು. ಅದರಲ್ಲಿ ಆತನು ಬಹಳ ವೆಚ್ಚಕ್ಕೆ ಸಿಲುಕಿ ಸಾಲಗಾರನಾದನು. ಆಗ ಆತನು ತನ್ನ ಸ್ವಂತದ ಅಧಿಕಾರದಿಂದ ಜನರ ಮೇಲೆ ಭಾರವಾದ ತೆರಿಗೆಗಳನ್ನು ಹೇರಿದನು. ಪರಕೀಯರ ಕಡೆಗಿರುವ ಹೆನ್ರಿಯ ಒಲವು ಮತ್ತು ಮ್ಯಗ್ನಾ ಚಾರ್ಟಾ ಸನದಿಗೆ ವಿರೋಧವಾಗಿರುವ ಅವನ ವರ್ತನವು ಸರದಾರರಿಗೂ ಅನ್ಯರಿಗೂ ಸರಿಬರಲಿಲ್ಲ ಆಗ **ಸಾಯಮನ್ ಡಿ ಮಾಂಟಫರ್ಡ** ಎಂಬ ಸರದಾರನು ಈ ಸಂದರ್ಭದಲಿ ಹೆನ್ರಿಗೆ ವಿರುದ್ಧವಾಗಿ ನಾಯಕತ್ವವನ್ನು ವಹಿಸಿ ಹೆನ್ರಿಯನ್ನೂ ಅವನ ಮಗನಾದ ಎಡ್ವರ್ಡನನ್ನೂ ಸೋಲಿಸಿ ಸೆರೆಯಲ್ಲಿ ಇರಿಸಿದನು. ಬಳಿಕ ಅವನು ಆಡಳಿತವನ್ನು ನಡೆಯಿಸುವ ಮತ್ತು ಜನರ ಮೇಲೆ ತೆರಿಗೆಯನ್ನು ಹಾಕುವ ವಿಷಯಗಳನ್ನು ಕುರಿತು ಆಲೋಚಿಸಲು ಗ್ರೇಟ್ ಕೌನ್ಸಿಲಿನ ಮಂಡಲವನ್ನು ಕರೆದು

ಕೆಲವು ಪರಗಣೆಗಳ ಮತ್ತು ನಗರಗಳ ಪ್ರತಿನಿಧಿಗಳಿಗೂ ಔತಣವಿತ್ತನು. ಹೀಗೆ ಆಡಳಿತದ ಮತ್ತು ಕಂದಾಯದ ವಿಷಯಗಳಲ್ಲಿ ಪರಗಣೆಗಳ ಮತ್ತು ನಗರಗಳ ಜನಸಾಮಾನ್ಯರ ಪ್ರತಿನಿಧಿಗಳ ಅಭಿಮತವನ್ನು ಕೇಳುವ ಸಂಪ್ರದಾಯವನ್ನು ಆತನು ಮೊದಲು ಬಾರಿ ಸ್ಥಾಪಿಸಿದನು. ಇದೇ ಸಭೆಗೆ **ಪಾರ್ಲಿಮೆಂಟ್** (Parler=ಮಾತನಾಡು ಎಂಬ ಫ್ರೆಂಚ ಭಾಷೆಯಿಂದ ಈ ಶಬ್ದವು ಹುಟ್ಟಿದೆ) ಎಂಬ ಹೆಸರು ಬಳಕೆಗೆ ಬಂದಿತು. ಸಾಯಮನ್ ಡಿ ಮಾಂಟಫರ್ಡನು ಈ ಸಭೆಗೆ ತನಗೆ ಅನುಕೂಲರಾಗಿದ್ದ ಜನರನ್ನೇ ಕರೆದಿದ್ದನು.

೧ನೆಯ ಎಡ್ವರ್ಡ ರಾಜನು ವೇಲ್ಸಿನೊಡನೆಯೂ ಸ್ಕಾಟ್‌ಲಂಡಿನೊಡನೆಯೂ ಯುದ್ಧಮಾಡಬೇಕಾದುದರಿಂದ ಬಹಳ ವೆಚ್ಚಕ್ಕೆ ಗುರಿಯಾದನು. ಆಗ ಹೊಸ ತೆರಿಗೆಗಳನ್ನು ಹಾಕಲು ಮತ್ತು ಆಡಳಿತದಲ್ಲಿ ಮಂತ್ರಾಲೋಚನೆಯನ್ನು ಕೇಳಲು ಆತನು ಸಾಯಮನ್ ಡಿ ಮಾಂಟಫರ್ಡನ ಯೋಜನೆಯಂತೆ ಬರಿಯ ಗ್ರೇಟ್ ಕೌನ್ಸಿಲಿನ ಸದಸ್ಯರಲ್ಲದೆ ಪರಗಣೆಗಳ ಮತ್ತು ನಗರಗಳ ಪ್ರತಿನಿಧಿಗಳನ್ನೂ ಕರೆಯಿಸಿದನು (೧೨೯೫). ಈ ಮೇರೆಗೆ ಈ ಸಭೆಗೆ ದೇಶದಲ್ಲಿಯ ಧರ್ಮಾಧಿಕಾರಿಗಳ, ಮನ್ನೆಯರ ಮತ್ತು ಜನಸಾಮಾನ್ಯರ ವರ್ಗದವರು ಬಂದುದರಿಂದ ಈ ಪಾರ್ಲಿಮೆಂಟಿಗೆ **ಮಾದರಿಯ ಪಾರ್ಲಿಮೆಂಟ್** (Model Parliament) ಎನ್ನುವರು. ಆ ಕಾಲದಲ್ಲಿ ಪಾರ್ಲಿಮೆಂಟಿನಲ್ಲಿ ಎರಡು ಭಾಗಗಳು ಇರಲಿಲ್ಲ. ಎಲ್ಲ ಸದಸ್ಯರು ಒಂದೇ ಮಂದಿರದಲ್ಲಿ ಕುಳಿತು ಚರ್ಚಿಸುತ್ತಿದ್ದರು. ಮುಂದೆ ೧೩೩೦ರಲ್ಲಿ **ಲಾರ್ಡರ ಸಭೆ** ಮತ್ತು **ಕಾಮನ್ಸರ ಸಭೆ** ಎಂದು ಎರಡು ಭಾಗಗಳಾದುವು. ದೊಡ್ಡ ದೊಡ್ಡ ಧರ್ಮಾಧಿಕಾರಿಗಳು ಮತ್ತು ಪ್ರಮುಖ ಮನ್ನೆಯರು ಲಾರ್ಡರ ಸಭೆಯಲ್ಲಿ ಕೂಡುತ್ತಿದ್ದರು. ಪರಗಣೆಗಳ ಮತ್ತು ನಗರಗಳ ಪ್ರತಿನಿಧಿಗಳು ಕಾಮನ್ಸ ಸಭೆಯಲ್ಲಿ ಕೂಡತೊಡಗಿದರು.

**ಪ್ರೀವಿ ಕೌನ್ಸಿಲ್**—ನಾರ್ಮನ್ ಅರಸರ ಆಳಿಕೆಯಲ್ಲಿ ಹೊಸ ಕಟ್ಟಳೆಗಳನ್ನು ಮಾಡುವ ಮತ್ತು ತೆರಿಗೆಗಳನ್ನು ಹಾಕುವ ಕಾರ್ಯಗಳಲ್ಲಿ ಅರಸನಿಗೆ ಆಲೋಚನೆಯನ್ನು ಹೇಳಲು ಮನ್ನೆಯರ ಮತ್ತು ಸರಂಜಾಮಿ ಜಹಾಗೀರದಾರರ 'ಗ್ರೇಟ್ ಕೌನ್ಸಿಲ' ಎಂಬ ಸಭೆ ಏರ್ಪಟ್ಟಿತ್ತು. ಆದರೆ ಈ ಮಂಡಲವು ಯಾವಾಗಲೂ ಅರಸನ ಬಳಿಯಲ್ಲಿ ಇರುವುದು ಸಾಧ್ಯವಿರಲಿಲ್ಲ. ಆದುದರಿಂದ ಅರಸರು ತಮ್ಮ ನಿತ್ಯದ ಆಡಳಿತದಲ್ಲಿ ತಮ್ಮ ಪ್ರೀತಿ-ವಿಶ್ವಾಸಗಳಿಗೆ ಪಾತ್ರರಾದ ಸರದಾರರ ಆಲೋಚನೆಯನ್ನು ಸ್ವೀಕರಿಸುತ್ತಿದ್ದರು (೧೧೦೦). ಈ ಮಂತ್ರಾಲೋಚಕ ಮಂಡಲಕ್ಕೆ 'ಅರಸನ ಕೌನ್ಸಿಲ್' ಎನ್ನುತ್ತಿದ್ದರು. (೧) ಹೊಸ ಕಟ್ಟಳೆಗಳನ್ನು

ಸೂಚಿಸುವುದು, (೨) ಅವನ್ನು ಕಾರ್ಯರೂಪದಲ್ಲಿ ತರುವುದು ಮತ್ತು (೩) ನ್ಯಾಯವನ್ನು ಕೊಡುವುದು ಈ ಮೂರೂ ಕೆಲಸಗಳನ್ನು ಈ ಸಭೆ ಮಾಡಬೇಕಾಗಿದ್ದಿತು. ಬರುಬರುತ್ತ ಈ ಮಂತ್ರಾಲೋಚಕ ಮಂಡಲದ ಕಾರ್ಯವಿಸ್ತಾರವು ಹೆಚ್ಚಿದುದರಿಂದ ೧೧೫೦ರಲ್ಲಿ ಅದರಲ್ಲಿ ಎರಡು ಭಾಗಗಳನ್ನು ಮಾಡಲಾಯಿತು. ಅದರಲ್ಲಿ ಒಂದು ಭಾಗವು ನ್ಯಾಯವನ್ನು ಕೊಡುವ ಕೆಲಸದಲ್ಲಿ ಅರಸನಿಗೆ ನೆರವಾಗುತ್ತಿದ್ದಿತು, ಅದರಿಂದ ಅದಕ್ಕೆ 'ಅರಸನ ನ್ಯಾಯಮಂದಿರ' ಎಂಬ ಹೆಸರು ಬಂದಿತು (೧೨೫೦). ಇದರಲ್ಲಿ ಮುಂದೆ ಚನ್ಸರಿ ಕೋರ್ಟ್, ಎಕ್ಸಚೆಕರ ಕೋರ್ಟ್, ಕಾಮನ್ ಪ್ಲೀಜ ಕೋರ್ಟ್ ಮತ್ತು ಅರಸನ ಕೋರ್ಟ್ ಹೀಗೆ ನಾಲ್ಕು ಒಳಭಾಗಗಳು ಉಂಟಾದುವು. ಎರಡನೆಯ ಭಾಗವು ಆಡಳಿತದಲ್ಲಿ ಅರಸನಿಗೆ ಆಲೋಚನೆನೀಡುತ್ತಿದ್ದುದರಿಂದ ಅದಕ್ಕೆ 'ಅರಸನ ಕೌನ್ಸಿಲ್' ಅಥವಾ 'ಮಂತ್ರಾಲೋಚಕ ಮಂಡಲ' ಎಂಬ ಹೆಸರು ರೂಢವಾಯಿತು (೧೧೫೦). ಈ ಕೌನ್ಸಿಲಿನ ಕೆಲಸವಾದರೂ ಮೆಲ್ಲಮೆಲ್ಲನೆ ಬೆಳೆಯಲಾರಂಭಿಸಿತು. ಆದುದರಿಂದ ನಿತ್ಯದ ನಿಯತವಾದ ಕಾರ್ಯದ ಹೊರ್ತು ಬೇರೆ ಮಹತ್ವದ ಮತ್ತು ಆಡಳಿತದ ನೀತಿಯನ್ನು ಗೊತ್ತುಪಡಿಸುವ ಕೆಲಸದಲ್ಲಿ ಅರಸನು ತನಗೆ ಪ್ರೀತಿ-ವಿಶ್ವಾಸಗಳಿಗೆ ಪಾತ್ರರಾದಂತಹ ಜನರ ಆಲೋಚನೆಯನ್ನು ಕೇಳುತ್ತಿದ್ದನು. ಅದರಿಂದ ಈ ಚಿಕ್ಕ ಮಂತ್ರಾಲೋಚಕ ಮಂಡಲಕ್ಕೆ ಅರಸನ **ಪ್ರೀವಿ ಕೌನ್ಸಿಲ್** (Privy = ಅಂತರಂಗದ) ಎಂಬ ಹೆಸರು ಪ್ರಾಪ್ತವಾಯಿತು (೧೪೦೦). ನ್ಯಾಯವನ್ನು ಕೊಡಲು ಅಥವಾ ಆಡಳಿತದಲ್ಲಿ ಆಲೋಚನೆ ಹೇಳಲು ನಿಯೋಜಿಸಲಾದ ಬೇರೆ ಬೇರೆ ಸಮಿತಿಗಳ ಎಲ್ಲ ಸದಸ್ಯರು ಅರಸನಿಂದಲೆ ನಿಯೋಜಿತರಾಗಿರುತ್ತಿದ್ದು ಅವರು ತಮ್ಮ ಕೆಲಸದಲ್ಲಿ ಅರಸನಿಗೆ ಹೊಣೆಗಾರರಾಗಿರುತ್ತಿದ್ದರು. ಹೀಗಿರುವುದರಿಂದ ಈ ಎಲ್ಲ ಸಮಿತಿಗಳು ಅರಸನ ಇಚ್ಛೆಯಂತೆ ಕೆಲಸವನ್ನು ಮಾಡುತ್ತಿದ್ದುವು ಮತ್ತು ಅರಸನ ಪ್ರತಿಷ್ಠೆ, ಅಧಿಕಾರ, ಸ್ಥಾನಮಾನಗಳು ಬೆಳೆವಂತಹ ನೀತಿಯನ್ನೇ ಯೋಜಿಸುತ್ತಿದ್ದುವು.

**೧೪ನೆಯ ಮತ್ತು ೧೫ನೆಯ ಶತಕಗಳಲ್ಲಿಯ ಪಾರ್ಲಿಮೆಂಟಿನ ಅಧಿಕಾರವು**—ಪ್ರಮುಖ ಧರ್ಮಾಧಿಕಾರಿಗಳ, ಮನ್ನೆಯರ, ಮತ್ತು ಜನಸಾಮಾನ್ಯರ ಪ್ರತಿನಿಧಿಗಳಿಂದ ಕೂಡಿದ ಪಾರ್ಲಿಮೆಂಟ್ ಸಭೆ ೧೨೯೫ರಲ್ಲಿ ಸ್ಥಾಪನವಾಗಿದ್ದರೂ ಈ ಸಭೆಗಿರುವ ಅಧಿಕಾರವು ಬಹಳ ಸ್ವಲ್ಪವಾಗಿತ್ತು. ಪಾರ್ಲಿಮೆಂಟಿನ ಅಧಿವೇಶನವನ್ನು ಯಾವಾಗ ಕರೆಯಬೇಕೆಂಬುದನ್ನು ಅರಸನು ತಾನೇ ನಿರ್ಧರಿಸುತ್ತಿದ್ದನು. ಅರಸನ ಸರಂಜಾಮಿಯ ಆದಾಯವು ವಿಶೇಷವಾಗಿದ್ದು ಆ ಕಾಲದಲ್ಲಿ

ಆಡಳಿತದ ವೆಚ್ಚವು ಬಹಳ ಕಡಿಮೆಯಿದ್ದುದರಿಂದ ಹಣಕ್ಕೋಸುಗ ಪಾರ್ಲಿಮೆಂಟನ್ನು ಕರೆವ ಸಂದರ್ಭಗಳು ತೀರ ಕಡಿಮೆ ಬರುತ್ತಿದ್ದವು. ಯಾವುದಾದರೊಂದು ಯುದ್ಧವನ್ನು ಹೂಡಬೇಕಾಗಿ ವೆಚ್ಚವು ಬಹಳ ಆಗುತ್ತಿದ್ದ ಪಕ್ಷದಲ್ಲಿ ಮತ್ತು ಅದಕ್ಕಾಗಿ ಹೊಸ ತೆರಿಗೆಗಳನ್ನು ಹೇರುವ ಅಗತ್ಯವಿದ್ದಲ್ಲಿ ಪಾರ್ಲಿಮೆಂಟಿನ ಅಧಿವೇಶನವನ್ನು ಕರೆಯಲಾಗುತ್ತಿತ್ತು. ಪರರಾಷ್ಟ್ರಗಳಿಂದ ಬರುವ ಸರಕುಗಳ ಮೇಲೆ ಸುಂಕವನ್ನು ಹೇರಿದರೆ, ಅದರ ಭಾರವನ್ನು ಪರಕೀಯರಲ್ಲದೆ ಇಂಗ್ಲಿಶ್ ಜನರು ಸಹಿಸಬೇಕಾದುದಿಲ್ಲ ಎಂಬ ತಿಳವಳಿಕೆ ಇದ್ದುದರಿಂದ ಪಾರ್ಲಿಮೆಂಟಿನ ಒಪ್ಪಿಗೆಯಿಲ್ಲದೆ ತನಗೆ ಇಂತಹ ಸುಂಕವನ್ನು ಹಾಕುವ ಅಧಿಕಾರವಿದೆಂದು ರಾಜನಿಗೆ ಎನಿಸುತ್ತಿತ್ತು. ಯಾವುದಾದರೊಂದು ಹೊಸ ಕಟ್ಟಳೆಯನ್ನು ರಚಿಸಬೇಕಾದಲ್ಲಿ ಇಲ್ಲವೆ ಹಳೆಯದರಲ್ಲಿ ತಿದ್ದುಪಡೆಯನ್ನು ಮಾಡಬೇಕಾಗಿದ್ದಲ್ಲಿ ಪಾರ್ಲಿಮೆಂಟನ್ನು ಕರೆವುದು ಅಗತ್ಯವಾಗಿದ್ದಿತು. ಆದರೆ ಇಂತಹ ಸಂದರ್ಭಗಳಲ್ಲಿ ತಾತ್ಪೂರ್ತಿಕ ಪ್ರಕಟನೆಗಳನ್ನು (Proclamations) ಹೊರಡಿಸಲು ಅರಸನಿಗೆ ಅಧಿಕಾರವಿದ್ದಿತು. ಹೀಗೆ ಅರಸನು ತನ್ನ ಕೌನ್ಸಿಲಿನ ಆಲೋಚನೆಯಿಂದ ಇಂತಹ ಪ್ರಕಟನೆಗಳನ್ನು ಹೊರಡಿಸುತ್ತಿದ್ದನು. ಇಂತಹ ಪ್ರಕಟನೆಗಳು ತಾತ್ಪೂರ್ತಿಕ ಕಟ್ಟಳೆಗಳ ಸ್ವರೂಪವನ್ನು ಪಡೆಯುತ್ತಿದ್ದುವು. ನ್ಯಾಯಸ್ಥಾನಗಳ ನಿರ್ಣಯಗಳಾದರೂ ಇವುಗಳ ಪರ್ಯಾಲೋಚನೆಯಂತೆ ನಡೆಯುತ್ತಿದ್ದುವು. ಅರಸನ ಪ್ರೀವಿ ಕೌನ್ಸಿಲು ಮತ್ತು ನ್ಯಾಯಸ್ಥಾನಗಳು ಪಾರ್ಲಿಮೆಂಟಿಗೆ ಹೊಣೆಗಾರವಾಗಿರದೆ ಅರಸನಿಗೇ ಹೊಣೆಗಾರವಾಗಿದ್ದುವು. ಅರಸನ ಪ್ರೀವಿ ಕೌನ್ಸಿಲಿನ ಮಂತ್ರಿಗಳು ಲೋಕಹಿತಕ್ಕೆ ವಿರುದ್ಧವಾದ ಕೃತ್ಯಗಳನ್ನು ಮಾಡಿದರೆ, ಅದಕ್ಕಾಗಿ ಅವರನ್ನು ಹೊಣೆಗಾರರಾಗಿ ಮಾಡಲು ಅನುವಾಗಬೇಕೆಂದು ಪಾರ್ಲಿಮೆಂಟು ಅವರನ್ನು ವಿಚಾರಣೆಗೆ ಗುರಿಮಾಡುವ (Impeachment) ಪದ್ಧತಿಯನ್ನು ೧೩೭೬ರಿಂದ ಪ್ರಾರಂಭಿಸಿತು. ಈ ಇಂಪೀಚ್‌ಮೆಂಟಿನ ಕಾಲದಲ್ಲಿ ರಾಜನ ಮಂತ್ರಿಗಳ ಮೇಲಿನ ಆರೋಪಗಳನ್ನು ಸಿದ್ಧಮಾಡುವ ಕೆಲಸವು ಕಾಮನ್ಸ್ ಸಭೆಯದಾಗಿತ್ತು, ಮತ್ತು ಅವುಗಳ ಮೇಲೆ ನಿರ್ಣಯಗಳನ್ನು ಕೊಡುವುದು ಲಾರ್ಡ್ಸ್ ಸಭೆಯದಾಗಿತ್ತು. ಆದರೆ ರಾಜನ ಮಂತ್ರಿಗಳು ಘೋರವಾದ ಅಪರಾಧವನ್ನು ಮಾಡಿದರೆ ಇಲ್ಲವೆ ಲೋಕಹಿತಕ್ಕೆ ವಿರುದ್ಧವಾಗಿ ವರ್ತಿಸಿದರೆ ಮಾತ್ರ ಇಂತಹ ವಿಚಾರಣೆ ಆಗುತ್ತಿದ್ದುದರಿಂದ ನಿತ್ಯದ ಆಡಳಿತಕ್ಕಾಗಿ ಈ ಮಂತ್ರಿಗಳು ಪಾರ್ಲಿಮೆಂಟಿಗೆ ಹೊಣೆಗಾರರಾಗಿರುತ್ತಿದ್ದಿಲ್ಲ. ಆದುದರಿಂದ ಆಡಳಿತದ ವಿಷಯದಲ್ಲಿ ಪಾರ್ಲಿಮೆಂಟಿಗೆ ಅಧಿಕಾರವಿರಲಿಲ್ಲ. ಹೊಸ ಕಟ್ಟಳೆಯನ್ನು ಮಾಡುವ ವಿಷಯದಲ್ಲಿಯೂ ಪಾರ್ಲಿ

ಮೆಂಟಿನ ಅಧಿಕಾರವು ಅಲ್ಪವೆ ಆಗಿತ್ತು. ಹೊಸ ಕಟ್ಟಳೆಯನ್ನು ಮಾಡಬೇಕಾಗಿದ್ದಲ್ಲಿ ಇಲ್ಲವೆ ತನ್ನ ದೂರುಗಳ ವಿಚಾರವು ಆಗಬೇಕಾಗಿದ್ದಲ್ಲಿ ಈ ವಿಷಯಗಳನ್ನು ಕುರಿತು ಪಾರ್ಲಿಮೆಂಟು ಅರಸನಿಗೆ ವಿನಂತಿಪತ್ರವನ್ನು (Petition) ಸಲ್ಲಿಸಬೇಕಾಗುತ್ತಿತ್ತು. ಈ ವಿನಂತಿಪತ್ರವು ಉಚಿತವಾಗಿ ತೋರಿದರೆ ಅರಸನು ತನ್ನ ಪ್ರೀವಿ ಕೌನ್ಸಿಲಿನ ಸಲಹೆಯನ್ನು ಕೇಳಿ ಆ ವಿನಂತಿಪತ್ರಕ್ಕೆ ಅನುಸಾರವಾಗಿ ಕಟ್ಟಳೆಯ ಮಸೂದೆಯನ್ನು ರಚಿಸಿ ಅದನ್ನು ತನ್ನ ಮಂತ್ರಿಗಳ ಮುಖಾಂತರವಾಗಿ ಪಾರ್ಲಿಮೆಂಟಿನ ಮುಂದೆ ಇಡುತ್ತಿದ್ದನು. ಕಟ್ಟಳೆಯ ಈ ಮಸೂದೆ ಅರಸನಿಗೆ ಹೊಣೆಗಾರರಾದ ಮಂತ್ರಿಗಳು ಸಿದ್ಧಪಡಿಸುತ್ತಿದ್ದುದರಿಂದ ಅನೇಕ ಸಲ ಪಾರ್ಲಿಮೆಂಟಿನ ಮುಂದೆ ಇರಿಸಿದ ಮಸೂದೆ ಮೂಲ ವಿನಂತಿಪತ್ರಕ್ಕೆ ವಿಸಂಗತವಾಗಿರುತ್ತಿದ್ದಿತು. ಆದುದರಿಂದ ತನಗೆ ಬೇಕಾದಂತಹ ಕಟ್ಟಳೆಯನ್ನು ಮಾಡಿಸಿಕೊಳ್ಳಲು ಪಾರ್ಲಿಮೆಂಟಿಗೆ ಸುಲಭವಾಗುತ್ತಿರಲಿಲ್ಲ. ಪಾರ್ಲಿಮೆಂಟಿನ ಎರಡು ಸಭೆಗಳಲ್ಲಿ ಲಾರ್ಡರ ಸಭೆಯ ಸ್ಥಾನವು ಕಾಮನ್ಸ ಸಭೆಗಿಂತ ಉಚ್ಚತರವಾದುದಾಗಿ ಎಣಿಸಲಾಗುತ್ತಿತ್ತು. ಯಾವುದೆ ಕಟ್ಟಳೆ ಸ್ವೀಕೃತವಾದರೆ, ಅದರ ಮೇಲೆ "ಅರಸನಿಂದ ಕಾಮನ್ಸ ಸಭೆಯ ಬಿನ್ನಹದ ಮೇರೆಗೆ ಲಾರ್ಡರ ಸಭೆಯ ಸಮ್ಮತಿಯಿಂದ ಈ ಕಟ್ಟಳೆ ಸ್ವೀಕರಿಸಲ್ಪಟ್ಟಿರುವುದು" ಎಂದು ವಾಕ್ಯವು ಇರುತ್ತಿತ್ತು. ಇಂತು ತೆರಿಗೆ ಹಾಕುವುದು, ಕಟ್ಟಳೆಯನ್ನು ರಚಿಸುವುದು, ಅರಸನ ಮಂತ್ರಿಮಂಡಲದ ಹೊಣೆಯನ್ನು ನಿಯಮಿಸುವುದು ಈ ವಿಷಯಗಳಲ್ಲಿ ೧೪ನೆಯ ಶತಮಾನದ ವರೆಗೆ ಪಾರ್ಲಿಮೆಂಟಿನ ಅಧಿಕಾರವು ಮರ್ಯಾದಿತವಾಗಿತ್ತು. ಆದರೆ ಈ ಎಲ್ಲ ವಿಷಯಗಳಲ್ಲಿ ತನಗೆ ಹೆಚ್ಚು ಅಧಿಕಾರಗಳು ಇರಬೇಕೆಂದು ಪಾರ್ಲಿಮೆಂಟು ಹೆಣಗುತ್ತಲಿತ್ತು. ಪಾರ್ಲಿಮೆಂಟಿನ ವಿಶ್ವಾಸಪಾತ್ರರಾದಂತಹರನ್ನೇ ಅರಸನು ಪ್ರೀವಿ ಕೌನ್ಸಿಲಿನಲ್ಲಿ ಸೇರಿಸಿಕೊಂಡು ಅವರ ಆಲೋಚನೆಯಂತೆ ಆಡಳಿತವನ್ನು ನಡೆಯಿಸಬೇಕು, ಪಾರ್ಲಿಮೆಂಟಿಗೆ ಹೊಸ ಕಟ್ಟಳೆಯನ್ನು ರಚಿಸುವುದು ಅಗತ್ಯವೆನಿಸಿದರೆ ಅದಕ್ಕಾಗಿ ಅರಸನಿಗೆ ವಿಜ್ಞಾಪನೆಯನ್ನು ಸಲ್ಲಿಸದೆ ತನಗೆ ಬೇಕಾದ ಸ್ವರೂಪದಲ್ಲಿ ಗೊತ್ತುವಳಿಯಾಗಿ ಅದನ್ನು ಕಾಮನ್ಸ ಇಲ್ಲವೆ ಲಾರ್ಡ್ಸ ಸಭೆಯಲ್ಲಿ ಆ ಆ ಸದಸ್ಯರ ಮೂಲಕ ಮಂಡಿಸಲು ಅನುವಿರಬೇಕು, ಮತ್ತು ಪಾರ್ಲಿಮೆಂಟಿನ ಒಪ್ಪಿಗೆಯಿಲ್ಲದೆ ಅರಸನು ತೆರಿಗೆಯನ್ನು ಹಾಕಕೂಡದು ಎಂಬುದನ್ನು ಕುರಿತು ೧೫ನೆಯ ಶತಕದಲ್ಲಿ ಪಾರ್ಲಿಮೆಂಟು ಬಹುವಾಗಿ ಪ್ರಯತ್ನಿಸಿತು. ೧೪ನೆಯ ಶತಕದ ಕೊನೆಯಲ್ಲಿ ಪಾರ್ಲಿಮೆಂಟು ಅರಸನ ಮಂತ್ರಿಗಳ ವಿಚಾರಣೆಯನ್ನು (Impeachment) ಮಾಡಿ ಅವರಿಗೆ ಶಿಕ್ಷೆಯನ್ನು ವಿಧಿಸಿತು (೧೩೭೬); ಅದೇ

ಮೇರೆಗೆ ೨ನೆಯ ರಿಚರ್ಡ ರಾಜನನ್ನು ಪದಚ್ಯುತಗೊಳಿಸಿ ಲಿಂಕೆಸ್ಟರ ಮನೆತನದ ೪ನೆಯ ಹೆನ್ರಿಗೆ ಇಂಗ್ಲಂಡಿನ ಪಟ್ಟವನ್ನು ನೀಡಿತು (೧೩೯೯). ಇದರಿಂದ ಲಂಕೆಸ್ಟರ ವಂಶದವರ ಆಳಿಕೆಯಲ್ಲಿ ಪಾರ್ಲಿಮೆಂಟಿನ ಶಕ್ತಿ ಹೆಚ್ಚಿತು. ಆದರೂ ಇದರಿಂದ ಅರಸನ ಕಾರ್ಯವಿಧಾಯಕ ಮಂಡಲವು (ಪ್ರೀವಿ ಕೌನ್ಸಿಲ್) ಪಾರ್ಲಿಮೆಂಟಿಗೆ ಹೊಣೆಗಾರವಾಗಲಿಲ್ಲ. ಘೋರ ಅನ್ಯಾಯ ಅತ್ಯಾಚಾರಗಳು ಸಂಭವಿಸಿದಲ್ಲಿ ಪಾರ್ಲಿಮೆಂಟು ತನ್ನ ಸತ್ತೆಯನ್ನು ಪ್ರಕಟಿಸಲು ಪ್ರಯತ್ನಿಸುತ್ತಿತ್ತು.

**ಟ್ಯೂಡರರ ಆಳಿಕೆ**—೧೫ನೆಯ ಶತಕದಲ್ಲಿ ಪಾರ್ಲಿಮೆಂಟಿನ ವಶದಲ್ಲಿ ಸ್ವಲ್ಪ ಅಧಿಕಾರವು ಬಂದಿತು. ಆದರೆ ಮುಂದೆ ಟ್ಯೂಡರರ ಆಳಿಕೆಯಲ್ಲಿ ಅದು ಕುಗ್ಗಿ ರಾಜಶಕ್ತಿ ಅನಿಯಂತ್ರಿತವಾಯಿತು. ಹೀಗಾಗಲಿಕ್ಕೆ ಹಲವು ಕಾರಣಗಳು ಸಂಭವಿಸಿದುವು. ೧೫ನೆಯ ಶತಕದ ಉತ್ತರಾರ್ಧದಲ್ಲಿ ಇಂಗ್ಲಂಡಿನ ಪಟ್ಟಕ್ಕಾಗಿ ಅಲ್ಲಿಯ ಎರಡು ಪ್ರಮುಖ ಮನೆತನಗಳಲ್ಲಿ ಅಂತರ್ಯುದ್ಧವು ಉದ್ಭವಿಸಿ ಅದರಲ್ಲಿ ಸ್ಥಿತಿವಂತರು, ಮನ್ನೆಯರು, ಮೊದಲಾದ ಅನೇಕರು ಹತರಾದುದರಿಂದ ಟ್ಯೂಡರರ ಆಳಿಕೆಯಲ್ಲಿ ಲಾರ್ಡರ ಸಭೆಯಲ್ಲಿಯ ಸದಸ್ಯರ ಸಂಖ್ಯೆ ಬಹಳ ಕಡಿಮೆಯಾಯಿತು. ಟ್ಯೂಡರ ಅರಸರು ಕೆಲವು ಹೊಸ ಲಾರ್ಡರನ್ನು ನಿರ್ಮಿಸಿದರು; ಇವರು ರಾಜಪಕ್ಷದವರೇ ಆಗಿದ್ದರು. ಇದೇ ಮೇರೆಗೆ ಟ್ಯೂಡರರ ಆಳಿಕೆಯಲ್ಲಿ ಧರ್ಮಸುಧಾರಣೆಯ ಚಳವಳಿ ನಡೆದು ಅನೇಕ ಮಠಗಳು ರಾಜನ ಸ್ವಾಧೀನವಾದುದರಿಂದ ಲಾರ್ಡರ ಸಭೆಯಲ್ಲಿಯ ಧರ್ಮಾಧಿಕಾರಿಗಳ ಸಂಖ್ಯೆ ಮತ್ತು ಮಹತ್ವವು ಬಹಳ ಕಡಿಮೆಯಾಯಿತು. ಇದರಿಂದ ಲಾರ್ಡರ ಸಭೆ ಬಲಹೀನವಾಗಿ ಅರಸನ ಮೇಲಿನ ಅದರ ವರ್ಚಸ್ಸು ಕುಂದಿತು. ಲಾರ್ಡರ ಸಭೆಯ ನೆರವಿಲ್ಲದೆ ರಾಜಶಕ್ತಿಯನ್ನು ವಿರೋಧಿಸುವ ಸಾಮರ್ಥ್ಯವು ಕಾಮನ್ಸ ಸಭೆಯಲ್ಲಿ ಇರಲಿಲ್ಲ. ಅಲ್ಲದೆ ಆ ಸಭೆಯಲ್ಲಿ ಸಮರ್ಥರೂ ಸಂಪನ್ನರೂ ಆದ ಲೋಕನಾಯಕರೂ ಇರಲಿಲ್ಲ. ಈ ಪರಿಯಿಂದ ಟ್ಯೂಡರರ ಆಳಿಕೆಯಲ್ಲಿ ಪಾರ್ಲಿಮೆಂಟಿನ ಶಕ್ತಿ ಕುಂದಿ, ಕುಗ್ಗಿ ರಾಜಶಕ್ತಿ ಅನಿಯಂತ್ರಿತವಾಯಿತು. ಟ್ಯೂಡರ ಮನೆತನದ ಅರಸರು ಪಾರ್ಲಿಮೆಂಟಿನ ಶಕ್ತಿಯನ್ನು ಧಿಕ್ಕರಿಸಲು ಪ್ರಯತ್ನಿಸಲಿಲ್ಲ. ಪಾರ್ಲಿಮೆಂಟಿನ ಮನವೊಲಿಸಿ ತಮ್ಮ ಅನಿಯಂತ್ರಿತ ಅಧಿಕಾರಕ್ಕೆ ಅದರ ಒಪ್ಪಿಗೆಯನ್ನು ಸಂಪಾದಿಸುವುದು ಟ್ಯೂಡರ ಅರಸರ ನೀತಿಯಾಗಿದ್ದಿತು. ಈ ನೀತಿಗನುಸಾರವಾಗಿ ಅವರು ತಮ್ಮ ವಿಶ್ವಾಸದ ಜನರನ್ನು ಲಾರ್ಡರಾಗಿ ಮಾಡಿ ಲಾರ್ಡರ ಸಭೆಯ ಸದಸ್ಯರಾಗಿ ಮಾಡಿದರು. ಕಾಮನ್ಸ ಸಭೆಯ ಸದಸ್ಯರಾದರೂ ತಮ್ಮ ನೀತಿಗೆ

ಬೆಂಬಲಿಗರಾಗಲೆಂದು ಬಗೆದು, ಅವರು ಅನೇಕ ಹೊಸ ನಗರಗಳಿಗೆ ಕಾಮನ್ಸ ಸಭೆಗೆ ಸದಸ್ಯರನ್ನು ಕಳಿಸುವ ಅಧಿಕಾರವನ್ನು ಕೊಟ್ಟು, ಅಲ್ಲಿಂದ ತಮಗೆ ಅನುಕೂಲರಾದ ಸದಸ್ಯರೆ ಆರಿಸಿ ಬರುವಂತೆ ಪ್ರಯತ್ನಿಸಿದರು. ಈ ಮೇರೆಗೆ ಟ್ಯೂಡರ ಅರಸರ ವಶದಲ್ಲಿ ಅನಿಯಂತ್ರಿತ ಸತ್ತೆಯಿದ್ದರೂ ಸರದಾರ ಜನರ ಪ್ರತಿಷ್ಠೆಯನ್ನು ಇಳಿಸುವುದು ಮತ್ತು ವ್ಯಾಪಾರ, ಉದ್ಯೋಗ, ಜಲಸಂಚಾರ ಇವುಗಳನ್ನು ಪ್ರೋತ್ಸಾಹಿಸುವುದು ಅವರ ನೀತಿಯಾಗಿದ್ದುದರಿಂದ ಅನಿಯಂತ್ರಿತವಾದ ಅವರ ಆಳಿಕೆಯೂ ಜನಪ್ರಿಯವಾಯಿತು.

**ಸ್ಟುವರ್ಟರ ಆಳಿಕೆ: ಅರಸು ಪಾರ್ಲಿಮೆಂಟುಗಳಲ್ಲಿ ತಿಕ್ಕಾಟ (೧೬೦೩-೮೮)** – ಸ್ಟುವರ್ಟ ಮನೆತನದ ೧ನೆಯ ಜೇಮ್ಸನಿಗೆ ಇಂಗ್ಲಂಡಿನ ಪಟ್ಟವು ವಂಶಪರಂಪರೆಯ ಹಕ್ಕಿನಿಂದ ದೊರೆತುದರಿಂದ ಆತನು 'ಅರಸನ ಈಶ್ವರದತ್ತ ಅಧಿಕಾರ' (Divine Right Theory)ದ ತತ್ವವನ್ನು ಹೊಸತಾಗಿ ಮುಂದೆ ಚಾಚಿದನು. ಈ ತತ್ವದಂತೆ ಅರಸನು ಆಳಲು ಅಧಿಕಾರಿಯಾಗುವುದು ಪ್ರಜೆಗಳ ಇಚ್ಛೆಯಿಂದ ಅಲ್ಲ, ದೈವ ಯೋಜನೆಯಿಂದ; ಅರಸನು ತನ್ನ ಕೃತ್ಯಗಳಿಗಾಗಿ ಜನತೆಗೆ ಹೊಣೆಗಾರನಿರದೆ, ಕೇವಲ ಈಶ್ವರನಿಗಷ್ಟೆ ಹೊಣೆಗಾರನಾಗಿದ್ದಾನೆ; ಅದಕ್ಕಾಗಿ ಜನರು ಆತನನ್ನು ವಿರೋಧಿಸದೆ ಆತನ ಆಜ್ಞೆಯನ್ನು ಮಿಸುಕಾಡದೆ ಪಾಲಿಸತಕ್ಕುದು. ಪಾರ್ಲಿಮೆಂಟ ಸಂಸ್ಥೆ ಅರಸನ ಇಚ್ಛೆಯಿಂದಲೆ ಹುಟ್ಟಿಬಂದುದರಿಂದ ಪಾರ್ಲಿಮೆಂಟು ಮಾಡಿದ ಯಾವುದೆ ಕಟ್ಟಳೆಯನ್ನು ರದ್ದುಮಾಡುವ ಇಲ್ಲವೆ ಹೊಸ ಕಟ್ಟಳೆಯನ್ನು ರಚಿಸುವ ಅಧಿಕಾರವು ಅರಸನಿಗೆ ಇದೆ. ಆದರೆ ಯಾವ ಕಟ್ಟಳೆಯೂ ಆತನಿಗೆ ಬಂಧನಕರವಾಗಲಾರದು. ಇಂತು 'ಅರಸನ ಈಶ್ವರ ದತ್ತ ಅಧಿಕಾರ' ತತ್ವವನ್ನು ಅನುಸರಿಸಿ ೧ನೆಯ ಜೇಮ್ಸನ ಮತ್ತು ೧ನೆಯ ಚಾರ್ಲಸನ ತಿಳವಳಿಕೆಯಿತ್ತು. ಆದರೆ ಈ ತತ್ವದಲ್ಲಿ ಪಾರ್ಲಿಮೆಂಟಿನ ನಂಬುಗೆಯಿರಲಿಲ್ಲ. ಪಾರ್ಲಿಮೆಂಟು ಮಾಡಿದ ಕಟ್ಟಳೆಗಳು ಜನತೆಯಂತೆ ಅರಸನಿಗೂ ಬಂಧನಕರವಾಗಿವೆ ಎಂದು ಪಾರ್ಲಿಮೆಂಟಿನ ಅಭಿಪ್ರಾಯವಾಗಿತ್ತು. ಈ ರೀತಿಯಾಗಿ ಸ್ಟುವರ್ಟರ ಆಳಿಕೆಯಲ್ಲಿ ಅರಸು ಮತ್ತು ಪಾರ್ಲಿಮೆಂಟು ಇವರ ನಡುವೆ ರಾಜಶಕ್ತಿ ಮಿಗಿಲೊ ಇಲ್ಲವೆ ಪಾರ್ಲಿಮೆಂಟಿನ ಶಕ್ತಿ ಮಿಗಿಲೊ ಎಂಬುದಕ್ಕಾಗಿ ವಿರೋಧವು ಉಂಟಾಯಿತು. ೧ನೆಯ ಚಾರ್ಲಸನ ಅನಿಯಂತ್ರಿತ ಮತ್ತು ಕಟ್ಟಳೆ ಮೀರಿದ ಆಚರಣೆಗೆ ಆತಂಕವನ್ನು ಒಡ್ಡಲು ಪಾರ್ಲಿಮೆಂಟು 'ಪಿಟಿಶನ್ ಆಫ್ ರಾಯಿಟ್ಸ' ಎಂಬ ಕಟ್ಟಳೆಯನ್ನು ರೂಢಿಸಿತು (೧೬೨೮). ಆದರೂ ಚಾರ್ಲಸನು ತನ್ನ ನಡೆವಳಿಯನ್ನು ತಿದ್ದಿಕೊಳ್ಳಲಿಲ್ಲವಾದುದರಿಂದ ಪಾರ್ಲಿಮೆಂಟು ಆತನೊಡನೆ

ಯುದ್ಧವನ್ನು ಹೂಡಿತು. ಈ ಸಂಗ್ರಾಮದಲ್ಲಿ ಚಾರ್ಲಸನು ಸೋತನು. ಆಗ ಪಾರ್ಲಿಮೆಂಟು ಆತನ ಮೇಲೆ ಬಲುಮೆಗಾರ, ದೇಶದ್ರೋಹಿ, ರಾಷ್ಟ್ರಹಿತದ ವೈರಿ ಎಂಬ ಆರೋಪವನ್ನು ಹೊರಿಸಿ ಆತನನ್ನು ಶೂಲಕ್ಕೇರಿಸಿತು. ಬಳಿಕ ಇಂಗ್ಲಂಡಿನಲ್ಲಿ ಪ್ರಜಾಪ್ರಭುತ್ವದ ಆಡಳಿತವನ್ನು ನೆಲೆಗೊಳಿಸುವ ಉದ್ಯೋಗವು ನಡೆಯಿತು. ಆದರೆ ಅದರಲ್ಲಿ ಸೇನಾಪ್ರಭುತ್ವವೆ ಸ್ಥಾಪನೆಯಾಗುವ ಭಯವು ಉಂಟಾದುದರಿಂದ ೨ನೆಯ ಚಾರ್ಲಸನಿಗೆ ರಾಜಪದವನ್ನು ಸಲ್ಲಿಸಿ ಮತ್ತೆ ರಾಜ ಪ್ರಭುತ್ವವನ್ನು ಸ್ಥಾಪಿಸಲಾಯಿತು (೧೬೬೦). ಆದರೆ ಹಿಂದೆ ಸಂಭವಿಸಿದ ಘಟನೆ ಯಿಂದ ಚಾರ್ಲಸನು ಯಾವ ಪಾಠವನ್ನೂ ಕಲಿಯಲಿಲ್ಲ. ಅವನ ತರುವಾಯದಲ್ಲಿ ಪಟ್ಟಕ್ಕೆ ಬಂದ ೨ನೆಯ ಜೇಮ್ಸನು ಬಲುಮೆಯ ಮತ್ತು ಕಟ್ಟಳೆಮೀರಿದ ಅನೇಕ ಕೃತಿಗಳನ್ನು ಮಾಡಿದನು. ಅದರಿಂದ ಲೋಕಮತವು ಆತನಿಗೆ ವಿರುದ್ಧವಾಗಿ, ಪಾರ್ಲಿ ಮೆಂಟು ವಿಲಿಯಮನಿಗೆ ಇಂಗ್ಲಂಡಿನ ಪಟ್ಟವನ್ನು ನೀಡಿತು. ಆಗ ೨ನೆಯ ಜೇಮ್ಸನು ಇಂಗ್ಲಂಡಿನಿಂದ ಪಲಾಯನ ಮಾಡಿದನು ಮತ್ತು ೩ನೆಯ ವಿಲಿಯ ಮನು ಇಂಗ್ಲಂಡಿನ ದೊರೆಯಾದನು. ಇಂತು ಇಂಗ್ಲಂಡಿನಲ್ಲಿ ರಾಜ್ಯಕ್ರಾಂತಿ ಸಂಭವಿಸಿತು. ಅನಂತರ ವಿಲಿಯಮನು ಬಿಲ್ ಆಫ್ ರಾಯಿಟ್ಸ ಈ ಕಟ್ಟಳೆಗೆ ತನ್ನ ಒಪ್ಪಿಗೆಯಿತ್ತನು (೧೬೮೯). ೩ನೆಯ ವಿಲಿಯಮನಿಗೆ ದೊರೆತ ಇಂಗ್ಲಂಡಿನ ಪಟ್ಟವು ವಂಶಪರಂಪರೆಯ ಅಧಿಕಾರದಿಂದಿರದೆ ಪಾರ್ಲಿಮೆಂಟಿನ ಕಟ್ಟಳೆಯಿಂದ ಪ್ರಾಪ್ತವಾಯಿತು. ಇದರಿಂದ 'ಅರಸನ ಈಶ್ವರದತ್ತ ಅಧಿಕಾರ'ದ ತತ್ವವು ಅಳಿದು ಪಾರ್ಲಿಮೆಂಟಿನ ಶಕ್ತಿ ಶ್ರೇಷ್ಠವೆಂದು ನಿರ್ಣಯವಾಯಿತು. ಅದೇ ಮೇರೆಗೆ ಇಂಗ್ಲಂಡಿನ ರಾಜ್ಯಘಟನೆಯಲ್ಲಿ ಅರಸು ಮತ್ತು ಪಾರ್ಲಿಮೆಂಟು ಈ ಎರಡೂ ಸಂಸ್ಥೆಗಳು ಪರಸ್ಪರ ಪೋಷಕವೂ ಆವಶ್ಯಕವೂ ಆಗಿವೆ, ಮತ್ತು ಪಾರ್ಲಿಮೆಂಟು ರಚಿಸಿದ ಕಟ್ಟಳೆಗಳು ಜನತೆಯಂತೆ ರಾಜನಿಗಾದರೂ ಬಂಧನಕರವಾಗಿವೆ ಎಂದು ಸಿದ್ಧವಾಯಿತು.

**ಬಿಲ್ ಆಫ್ ರಾಯಿಟ್ಸ್ ೧೬೮೯**—ವಿಲಿಯಮನಿಗೆ ರಾಜಪದವನ್ನು ನೀಡುವಾಗ ಪಾರ್ಲಿಮೆಂಟು ಜನತೆಯ ಸ್ವಾಭಾವಿಕ ಅಧಿಕಾರಗಳ ಒಂದು ಪತ್ರಿಕೆ ಯನ್ನು ಸಿದ್ಧಪಡಿಸಿ ಅದಕ್ಕೆ ವಿಲಿಯಮನ ಒಪ್ಪಿಗೆಯನ್ನು ಪಡೆದುಕೊಂಡಿತು. ಮತ್ತು ವಿಲಿಯಮನು ಅರಸನಾದ ಬಳಿಕ ಆ ಪತ್ರಿಕೆಯನ್ನು ಅನುಸರಿಸಿ ಬಿಲ್ ಆಫ್ ರಾಯಿಟ್ಸ್ ಎಂಬ ಕಟ್ಟಳೆಯನ್ನು ಅದು ನಿರ್ಮಿಸಿತು (೧೬೮೯). ಇಂಗ್ಲಂಡಿನ ರಾಜ್ಯಘಟನೆಯ ಚರಿತ್ರೆಯಲ್ಲಿ ಮಗ್ನಾ ಚಾರ್ಟಾ ಮತ್ತು ಪಿಟಿಶನ್ ಆಫ್ ರಾಯಿಟ್ಸ ಕಟ್ಟಳೆಗಳಂತೆ ಈ ಕಟ್ಟಳೆಯೂ ಮಹತ್ವವುಳ್ಳದಾಗಿದೆ. ಈ ಕಟ್ಟಳೆ

ಯಲ್ಲಿಯ ಮುಂದೆ ಕಾಣಿಸಿದ ಅಂಶಗಳು ಘನವಾಗಿವೆ: (೧) ಪಾರ್ಲಿಮೆಂಟಿನ ಸಮ್ಮತಿಯನ್ನು ಪಡೆಯದೆ ಅರಸನಿಗೆ ಹಿಂದಿನ ಕಟ್ಟಳೆಗಳನ್ನು ಕೆಲಕಾಲವಾಗಲಿ ಚಿರಕಾಲವಾಗಲಿ ರದ್ದುಗೊಳಿಸುವ ಅಧಿಕಾರವು ಇಲ್ಲ. (೨) ಪಾರ್ಲಿಮೆಂಟ ಸಭೆಯನ್ನು ಮೇಲಿಂದ ಮೇಲೆ ಕರೆದು ಆಡಳಿತದ ವಿಷಯದಲ್ಲಿಯೂ ಜನತೆಯ ದೂರುಗಳನ್ನು ಪರಿಹರಿಸುವ ಕಾರ್ಯದಲ್ಲಿಯೂ ಪಾರ್ಲಿಮೆಂಟಿನ ಅಭಿಮತವನ್ನು ಕೇಳುವುದು ಅರಸನ ಕರ್ತವ್ಯವಾಗಿದೆ. (೩) ಅರಸನು ಶಾಂತಿಕಾಲದಲ್ಲಿ ಶಾಶ್ವತ ಸೇನೆಯನ್ನು ಇಡಕೂಡದು. (೪) ಪಾರ್ಲಿಮೆಂಟಿನ ಸಮತಿಯಿಲ್ಲದೆ ಅರಸನು ಪ್ರಜೆಗಳ ಮೇಲೆ ತೆರಿಗೆಯನ್ನು ಹಾಕಕೂಡದು. (೫) ಪಾರ್ಲಿಮೆಂಟಿನ ಸದಸ್ಯರ ವಾಕ್ ಸ್ವಾತಂತ್ರ್ಯವನ್ನು ಯಾವನೂ ನಿರ್ಬಂಧಿಸಕೂಡದು.

**ಆಡಳಿತವು ಪಾರ್ಲಿಮೆಂಟಿನ ನಿರೀಕ್ಷಣೆಯಲ್ಲಿ**—ಬಿಲ್ ಆಫ್ ರಾಯಿಟ್ಸ್ ಕಟ್ಟಳೆಯಿಂದ ಇಂಗ್ಲಿಶ್ ಜನರ ಸ್ವಾಭಾವಿಕ ಹಕ್ಕುಗಳಿಗೆ ಅರಸನ ಒಪ್ಪಿಗೆಯನ್ನು ಪಡೆದ ಬಳಿಕ, ಅರಸನ ನಿತ್ಯದ ಆಡಳಿತವು ಪಾರ್ಲಿಮೆಂಟಿನ ನಿರೀಕ್ಷಣೆಯಲ್ಲಿ (Supervision) ಇರಬೇಕು ಮತ್ತು ಅರಸನ ಮಂತ್ರಿಗಳು ಪಾರ್ಲಿಮೆಂಟಿಗೆ ಹೊಣೆಗಾರರಾಗಿರಬೇಕು ಎಂಬ ಉದ್ದೇಶದಿಂದ ಪಾರ್ಲಿಮೆಂಟು (೧) ಅರಸನಿಗೆ ಆಡಳಿತಕ್ಕಾಗಿ ಬೇಕಾಗುವ ವೆಚ್ಚವನ್ನು ಮತ್ತು ಅದಕ್ಕಾಗಿ ತೆರಿಗೆಯಿಂದ ಹುಟ್ಟುವ ಆದಾಯವನ್ನು ಹಿಂದಿನ ರೂಢಿಯಂತೆ ಅರಸನ ಜೀವಮಾನದ ವರೆಗೆ ಒಮ್ಮೆಯೆ ಮಾನ್ಯಮಾಡದೆ ಒಂದೊಂದು ವರ್ಷದ ಮಟ್ಟಿಗೆ ಮಾನ್ಯಮಾಡುವ ಸಂಪ್ರದಾಯವನ್ನು ಪ್ರಾರಂಭಿಸಿತು. ಇದರಿಂದ ಪಾರ್ಲಿಮೆಂಟಿನ ಬೊಕ್ಕಸದ ಮೇಲಿನ ಅಧಿಕಾರವು ಸ್ಥಾಪಿಸಲ್ಪಟ್ಟಿತು. ಅದೇ ರೀತಿಯಾಗಿ (೨) ಮ್ಯುಟಿನಿ ಆಕ್ಟ (ಸೈನ್ಯದ ಶಿಸ್ತಿನ ಕಟ್ಟಳೆ)ನ್ನಾದರೂ ಒಂದು ವರ್ಷದ ಮಟ್ಟಿಗೆಯೆ ಮಾನ್ಯಮಾಡಿತು. ಇದರಿಂದ ಆಡಳಿತದ ವೆಚ್ಚಕ್ಕೋಸುಗ ಮತ್ತು ಸೈನ್ಯಕ್ಕೋಸುಗ ಪಾರ್ಲಿಮೆಂಟಿನ ಮಾನ್ಯತೆಯನ್ನು ಪಡೆಯಲು ಅರಸನು ಪ್ರತಿ ವರ್ಷ ಪಾರ್ಲಿಮೆಂಟನ್ನು ಕೂಡಿಸುವ ಅಗತ್ಯವು ಉಂಟಾಯಿತು.

**ಕಬಿನೆಟಿನ ಮುಖಾಂತರ ಆಡಳಿತವು**—ಬಿಲ್ ಆಫ್ ರಾಯಿಟ್ಸ್, ಮ್ಯುಟಿನಿ ಆಕ್ಟ, ಮತ್ತು ಆಡಳಿತದ ವೆಚ್ಚಕ್ಕೆ ಪಾರ್ಲಿಮೆಂಟಿನ ವಾರ್ಷಿಕ ಮಾನ್ಯತೆ ಇವುಗಳ ಮೂಲಕ ಅರಸನು ಪಾರ್ಲಿಮೆಂಟಿಗೆ ಸಮ್ಮತವಾಗುವಂತಹ ಆಡಳಿತವನ್ನು, ಅದಾದರೂ ಪಾರ್ಲಿಮೆಂಟಿನ ವಿಶ್ವಾಸಕ್ಕೆ ಪಾತ್ರರಾದ ಮಂತ್ರಿಗಳ ಮುಖಾಂತರವಾಗಿ, ನಡೆಯಿಸುವುದು ಆವಶ್ಯಕವಾಯಿತು. ಅರಸನಿಗೆ ಆಡಳಿತದಲ್ಲಿ ಮಂತ್ರಾಲೋಚನೆಹೇಳುವ ಮಂತ್ರಿಮಂಡಲಕ್ಕೆ ೧೫ನೆಯ ಶತಕದಲ್ಲಿ ಪ್ರೀವಿ

**ಕೌನ್ಸಿಲ್** ಎಂಬ ಹೆಸರು ಬಂದಿತ್ತು. ಈ ಮಂಡಲದ ಎಲ್ಲ ಸದಸ್ಯರನ್ನು ಅರಸನೆ ನಿಯೋಜಿಸುತ್ತಿದ್ದನು. ಅವರು ತಮ್ಮ ಕೆಲಸದಲ್ಲಿ ಅರಸನಿಗೇ ಹೊಣೆಯಾಗಿರುತ್ತಿದ್ದರು. ಟ್ಯೂಡರ ಮತ್ತು ಸ್ಟುವರ್ಟ ಮನೆತನದ ಅರಸರು ಪ್ರೀವಿ ಕೌನ್ಸಿಲಿನ ಆಲೋಚನೆಯಂತೆ ಆಡಳಿತವನ್ನು ನಡೆಯಿಸುತ್ತಿದ್ದರು. ಈ ಕೌನ್ಸಿಲಿನ ಸದಸ್ಯರ ಸಂಖ್ಯೆ ಬಹಳವಾದುದರಿಂದ ಅವರೊಳಗಿನ ತನ್ನ ವಿಶ್ವಾಸದ ಕೆಲವು ಮಂತ್ರಿಗಳ ಮುಖಾಂತರವಾಗಿ ೨ನೆಯ ಚಾರ್ಲಸನು ಆಡಳಿತವನ್ನು ಸಾಗಿಸಿದನು. ಈ ಚಿಕ್ಕ ಮಂತ್ರಿಮಂಡಲಕ್ಕೆ **ಕೇಬಲ್** ಎಂದು ಹೆಸರು ಬಂದಿತ್ತು. ಆದರೆ ಈ 'ಪ್ರೀವಿ ಕೌನ್ಸಿಲ್' ಆಗಲಿ, 'ಕೇಬಲ್' ಮಂತ್ರಿಮಂಡಲವಾಗಲಿ ಪಾರ್ಲಿಮೆಂಟಿಗೆ ಹೊಣೆಗಾರವಾಗಿರಲಿಲ್ಲ.

ಮುಂದೆ ವಿಲಿಯಮನು ಅರಸನಾದ ಬಳಿಕ ಪಾರ್ಲಿಮೆಂಟಿನ ವಿಶ್ವಾಸಕ್ಕೆ ಅರ್ಹರಲ್ಲದ ಮಂತ್ರಿಗಳ ಮುಖಾಂತರವಾಗಿ ಆಡಳಿತವನ್ನು ನಡೆಯಿಸುವುದು ಸಾಧ್ಯವಿಲ್ಲವೆಂದು ಮನಗಂಡನು. ಆದುದರಿಂದ ಆತನು ಆ ಕಾಲಕ್ಕೆ ಪಾರ್ಲಿಮೆಂಟಿನಲ್ಲಿ ನೆಲಸಿದ್ದ ವ್ಹಿಗ್ ಮತ್ತು ಟೋರಿ ಈ ಎರಡೂ ಪಕ್ಷಗಳ ಪ್ರಮುಖರನ್ನು ತನ್ನ ಮಂತ್ರಿಮಂಡಲದಲ್ಲಿ ಸೇರಿಸಿಕೊಂಡು ಅವರ ಮುಖಾಂತರವಾಗಿ ಆಡಳಿತವನ್ನು ಸಾಗಿಸಿದನು. ಆದರೆ ಪರಸ್ಪರ ವಿರೋಧಿಯಾದ ನೀತಿಯುಳ್ಳ ಮಂತ್ರಿಗಳಿಂದ ಕೂಡಿದ ಮಂತ್ರಿಮಂಡಲದ ಮುಖಾಂತರವಾಗಿ ಆಡಳಿತವನ್ನು ನಡೆಯಿಸುವ ಈ ಪ್ರಯೋಗವು ಯಶಸ್ವಿಯಾಗಲಿಲ್ಲ. ಆಗ ವಿಲಿಯಮನು ಲಾರ್ಡ ಸಂಡರಲಂಡನ ಸೂಚನೆಯಂತೆ ಕಾಮನ್ಸ ಸಭೆಯಲ್ಲಿ ಬಹುಸಂಖ್ಯವಾಗಿರುವ ಪಕ್ಷದ ಪ್ರಮುಖರನ್ನು ಮಂತ್ರಿಮಂಡಲದಲ್ಲಿ ಸೇರಿಸಿಕೊಂಡು ಆಡಳಿತವನ್ನು ಸಾಗಿಸಿದನು. ಈ ಪ್ರಯತ್ನವು ಯಶಸ್ವಿಯಾಯ್ತು. ಇಂತಹ ಮಂತ್ರಿಮಂಡಲದ ನೀತಿಗೆ ಪಾರ್ಲಿಮೆಂಟಿನ ಬೆಂಬಲವು ದೊರೆತಿತು. ಅರಸನ ಅಧ್ಯಕ್ಷತೆಯಲ್ಲಿ ಈ ಕೌನ್ಸಿಲು (ಪ್ರಧಾನ ಮಂಡಲವು) ಒಂದು ಚಿಕ್ಕ ಮನೆಯಲ್ಲಿ (ಕಬಿನೆಟ್) ನೆರೆಯುತ್ತಿತ್ತು. ಅದರಿಂದ ಈ ಕೌನ್ಸಿಲಿಗೆ ಕಬಿನೆಟ್ **ಕೌನ್ಸಿಲ್** ಎಂಬ ಹೆಸರು ಬಂದಿತು. ಮುಂದೆ ಬರಿಯ **ಕಬಿನೆಟ್** ಎಂಬ ಹೆಸರಷ್ಟೆ ರೂಢಿಗೆ ಬಂದಿತು. ಅನ್ ರಾಣಿಯ ಆಳಿಕೆಯಲ್ಲಿಯೂ ಆಕೆಯ ಅಧ್ಯಕ್ಷತೆಯಲ್ಲಿಯೆ ಮಂತ್ರಿಮಂಡಲವು (ಕಬಿನೆಟ್) ಕೂಡುತ್ತಿತ್ತು. ಆದರೆ ೧ನೆಯ ಜಾರ್ಜ ಮತ್ತು ೨ನೆಯ ಜಾರ್ಜ ಇವರಿಗೆ ಇಂಗ್ಲಿಶ್ ಭಾಷೆ ತಿಳಿಯುತ್ತಿರಲಿಲ್ಲ ಮತ್ತು ಇಂಗ್ಲಂಡಿನ ರಾಜ್ಯವಿಚಾರದಲ್ಲಿ ಅವರಿಗೆ ಹೆಚ್ಚು ಆಸಕ್ತಿಯಿರಲಿಲ್ಲ. ಆದುದರಿಂದ ಕಬಿನೆಟ್ ಸಭೆಗಳಿಗೆ ಅವರು ಬರುತ್ತಿರಲಿಲ್ಲ. ಆಗ ಮಂತ್ರಿಮಂಡಲದಲ್ಲಿಯ ಪ್ರಮುಖನೂ ಪ್ರಭಾವಿಯೂ ಆದ

ಮಂತ್ರಿ ಕೆಬಿನೆಟ್ ಸಭೆಗಳಿಗೆ ಅಧ್ಯಕ್ಷನಾಗುವ ಪದ್ಧತಿ ಏರ್ಪಟ್ಟಿತು. ಅದಕ್ಕಾಗಿ ಆತನು ಮುಖ್ಯ ಮಂತ್ರಿಯೆಂದು (Prime Minister) ಕರೆಯಲ್ಪಡಲಾರಂಭಿಸಿದನು. ಕೆಬಿನೆಟ್ ಸಭೆಗಳಲ್ಲಿ ನಿಶ್ಚಿತವಾದ ನೀತಿಯನ್ನು ಆತನು ಅರಸನಿಗೆ ತಿಳಿಸುತ್ತಿದ್ದನು. ವಾಲಪೋಲನು ಈ ಬಗೆಯ ಮೊದಲನೆಯ ಮುಖ್ಯ ಮಂತ್ರಿಯಾಗಿದ್ದನು.

ಮುಖ್ಯ ಮಂತ್ರಿಯ ನಾಯಕತ್ವದಲ್ಲಿ ಪಾರ್ಲಿಮೆಂಟಿಗೆ ಹೊಣೆಗಾರವಾಗಿರುವ ಕೆಬಿನೆಟಿನ ಮುಖಾಂತರವಾಗಿ ಆಡಳಿತವನ್ನು ನಡೆಯಿಸುವ ಸಂಪ್ರದಾಯವು ೧ನೆಯ ಜಾರ್ಜನ ಆಳಿಕೆಯಲ್ಲಿ ಆರಂಭವಾಯಿತು. ಅದರಿಂದ ಪ್ರತ್ಯಕ್ಷವಾಗಿ ಆಳುವ ಅರಸನ ಅಧಿಕಾರವು ಬಹಳ ಕಡಿಮೆಯಾಯಿತು. ಮುಂದೆ ೩ನೆಯ ಜಾರ್ಜನು ಬಹಳ ಮಹತ್ವಾಕಾಂಕ್ಷಿಯಾಗಿದ್ದನು. ಎಲ್ಲ ಅಧಿಕಾರವು ತನ್ನ ವಶದಲ್ಲಿ ಇರಬೇಕು, ಮಂತ್ರಿಗಳು ತನ್ನ ಇಚ್ಛೆಯಂತೆ ಆಡಳಿತವನ್ನು ನಡೆಯಿಸುತ್ತ ತನಗೆ ಹೊಣೆಗಾರರಾಗಿರಬೇಕು ಎಂದು ಆತನ ಅಪೇಕ್ಷೆಯಿದ್ದಿತು. ಇದನ್ನು ಸಾಧಿಸಲು ಆತನು ವ್ಹಿಗ್ ಪಂಗಡದಲ್ಲಿ ಒಡಕನ್ನು ಹುಟ್ಟಿಸಿ ಟೋರಿ ಪಂಗಡದ ಸಹಾನುಭೂತಿಯನ್ನು ದೊರಕಿಸಿದನು. ಪಾರ್ಲಿಮೆಂಟಿನಲ್ಲಿಯೂ ಅವನ ಕಡೆಗೆ ಬಹುಮತವು ಒಲೆದಿತ್ತು. ಆದರೆ ತನ್ನ ವಶದಲ್ಲಿ ಎಲ್ಲ ಅಧಿಕಾರವನ್ನು ಇಟ್ಟುಕೊಳ್ಳಬೇಕೆಂಬ ಆತನ ಉದ್ಯೋಗವು ಕೈಗೂಡಲಿಲ್ಲ. ಆದುದರಿಂದ ಪಾರ್ಲಿಮೆಂಟಿನ ಕಾಮನ್ಸ ಸಭೆಗೆ ಹೊಣೆಗಾರವಾಗಿರುವ ಕೆಬಿನೆಟಿನ ಮುಖಾಂತರವಾಗಿ ಆಡಳಿತವನ್ನು ಸಾಗಿಸುವ ಸಂಪ್ರದಾಯವು ಮುಂದುವರಿದು ಅದೇ ಪದ್ಧತಿ ಇಂದಿಗೂ ಬಾಳಿದೆ.

ಇತರ ಕಟ್ಟಳೆಗಳು—೧೮ನೆಯ ಶತಕದಲ್ಲಿ ರಾಜ್ಯಘಟನೆಯ ವಿಚಾರದಲ್ಲಿ ಮಹತ್ವದ ಕೆಲವು ಕಟ್ಟಳೆಗಳು ಮಾನ್ಯವಾದುವು. ೧೭೦೧ರಲ್ಲಿ 'ಅಕ್ಟ ಆಫ್ ಸೆಟಲ್‌ಮೆಂಟ್' ಎಂಬ ಕಟ್ಟಳೆ ಪಾರ್ಲಿಮೆಂಟಿನಲ್ಲಿ ಅಂಗೀಕೃತವಾಯಿತು. ಈ ಕಟ್ಟಳೆಯಂತೆ ಇಂಗ್ಲಂಡಿನ ಪಟ್ಟವು ಪ್ರಾಟೆಸ್ಟಂಟ್ ಪಂಥದ ವಾರಸದಾರರಿಗೆಯೆ ಸಲ್ಲಬೇಕು ಎಂದು ನಿರ್ಧರಿಸಲಾಯಿತು. ಇದರಿಂದ ರಾಜಪದವು ಪಾರ್ಲಿಮೆಂಟಿನ ಕಟ್ಟಳೆಯಿಂದ ದೊರೆವುದು ಎಂದು ಸಿದ್ಧವಾಯಿತು. ಅದೇ ರೀತಿಯಲ್ಲಿ ಪಾರ್ಲಿಮೆಂಟಿನ ಅನುಮತಿಯಿಲ್ಲದೆ ನ್ಯಾಯಾಧೀಶರನ್ನು ಅಧಿಕಾರದಿಂದ ತೆಗೆಯಲು ಅರಸನಿಗೆ ಅಧಿಕಾರವಿಲ್ಲವೆಂದು ನಿರ್ಣಯಿಸಲಾಯಿತು. ೧೭೦೭ರಲ್ಲಿ ಇಂಗ್ಲಿಶ್ ಮತ್ತು ಸ್ಕಾಟಿಶ್ ಪಾರ್ಲಿಮೆಂಟುಗಳು ಏಕೀಕೃತವಾದುವು. ಸ್ಕಾಟಿಶ್ ಸರದಾರರು ಆರಿಸಿದ ಕೆಲವು ಸರದಾರರು ಮತ್ತು ಸ್ಕಾಟ್‌ಲಂಡಿನ ಕೆಲವು ಪರಗಣೆ

ಗಳ ಮತ್ತು ಪಟ್ಟಣಗಳ ಸಾಮಾನ್ಯ ಜನರು ಆರಿಸಿದ ಕೆಲವು ಪ್ರತಿನಿಧಿಗಳು ಇಂಗ್ಲಿಶ್ ಪಾರ್ಲಿಮೆಂಟಿನ ಲಾರ್ಡರ ಮತ್ತು ಕಾಮನ್ಸರ ಸಭೆಗಳಲ್ಲಿ ಬರತೊಡಗಿದರು. ಹೀಗೆ ಪಾರ್ಲಿಮೆಂಟು ಗ್ರೇಟ್ ಬ್ರಿಟನಿನ ಪಾರ್ಲಿಮೆಂಟು ಆಯಿತು.

೧೮೦೦ರಲ್ಲಿ ಗ್ರೇಟ್ ಬ್ರಿಟನಿನ ಪಾರ್ಲಿಮೆಂಟಿನೊಡನೆ ಐರಿಶ್ ಪಾರ್ಲಿಮೆಂಟು ಕೂಡಿಕೊಂಡಿತು ಮತ್ತು ಗ್ರೇಟ್ ಬ್ರಿಟನಿನ ಪಾರ್ಲಿಮೆಂಟಿನ ಲಾರ್ಡ್ಸ ಮತ್ತು ಕಾಮನ್ಸ ಸಭೆಗಳಲ್ಲಿ ಐರ್ಲಂಡಿನ ಸದಸ್ಯರು ಬರತೊಡಗಿದರು. ಮುಂದೆ ೧೯೨೦ರಲ್ಲಿ ಉಂಟಾದ ಕಟ್ಟಳೆಯಂತೆ ಬರಿಯ ಉತ್ತರ ಐರ್ಲಂಡಿನ ಸದಸ್ಯರಷ್ಟೆ ಬರತೊಡಗಿದರು.

**ಮತದಾತರ ಸಂಘವು ವಿಸ್ತಾರವಾಗುವುದು**—ಇಂಗ್ಲಂಡಿನ ರಾಜ್ಯ ಘಟನೆಯಲ್ಲಿ ಪಾರ್ಲಿಮೆಂಟಿನ ಶಕ್ತಿ ಶ್ರೇಷ್ಠವೆಂದು ನಿರ್ಣಯವಾಗಿತ್ತು, ಅದರಲ್ಲಿಯೂ ಹಣಕಾಸಿನ ಗೊತ್ತುವಳಿಯನ್ನು ಕಾಮನ್ಸ ಸಭೆಯಲ್ಲಿಯೆ ಮೊದಲು ತರಬೇಕೆಂಬ ನಿಯಮವಿದ್ದುದರಿಂದ ಮತ್ತು ಕಬಿನೆಟು ಕಾಮನ್ಸ ಸಭೆಗೆ ಹೊಣೆಯಾಗಿದ್ದುದರಿಂದ ಕಾಮನ್ಸ ಸಭೆಯ ಮಹತ್ವವು ಹೆಚ್ಚಾಗಿ ಬೆಳೆದಿತ್ತು. ಆದರೆ ೧೯ನೆಯ ಶತಕದ ಆರಂಭದ ವರೆಗೆ ಕಾಮನ್ಸ ಸಭೆಯ ಮೇಲೆ ಸರದಾರರ ಮತ್ತು ಜಮೀನುದಾರರ ವರ್ಗದ ಮತ್ತು ಸಿರಿವಂತರ ವರ್ಚಸ್ಸು ವಿಶೇಷವಾಗಿತ್ತು. ಹೀಗಾಗಿರಲು ಕೆಳಗೆ ಕಾಣಿಸಿದ ಸಂಗತಿಗಳು ಕಾರಣವಾಗಿದ್ದುವು. ಯಾವ ಸ್ಥಳದಿಂದ ಎಷ್ಟು ಪ್ರತಿನಿಧಿಗಳು ಆರಿಸಿ ಬರಬೇಕು ಎಂಬುದನ್ನು ಅಲ್ಲಿಯ ಜನಸಂಖ್ಯೆಯ ಪ್ರಮಾಣದಂತೆ ಗೊತ್ತುಪಡಿಸಿರಲಿಲ್ಲ. ಚುನಾವಣೆಯ ಕಾಲದಲ್ಲಿ ಮತಕೊಡುವ ಅಧಿಕಾರವು ಹೊಲಮನೆಯುಳ್ಳ ಸ್ಥಿತಿವಂತರ ಉಚ್ಚವರ್ಗದವರಿಗೆ ಸಂದಿತ್ತು. ಚುನಾವಣೆಯ ಸಮಯದಲ್ಲಿ ಪ್ರಕಟವಾಗಿ ಮತಕೊಡುವ ಪದ್ಧತಿ ಇದ್ದುದರಿಂದ ಮತದಾತರು ಅನ್ಯರ ವರ್ಚಸ್ಸಿಗೆ ಒಳಗಾಗುತ್ತಿದ್ದರು. ಲಂಚಗಾರಿಕೆಯ ಮತ್ತು ಬೆದರಿಕೆಯ ಕಾಯಕಗಳೂ ನಡೆಯುತ್ತಿದ್ದುವು. ಈ ಸ್ಥಿತಿ ಮಾರ್ಪಟ್ಟು ಕಾಮನ್ಸ ಸಭೆಯಲ್ಲಿ ಜನಸಾಮಾನ್ಯರ ಪ್ರತಿನಿಧಿಗಳು ಸೇರಬೇಕು ಎಂಬ ಉದ್ದೇಶದಿಂದ ಪಾರ್ಲಿಮೆಂಟು ೧೮೩೨, ೧೮೬೭, ಮತ್ತು ೧೮೮೪ರಲ್ಲಿ ಸುಧಾರಣೆಯ ಕಟ್ಟಳೆಗಳನ್ನು ರಚಿಸಿತು. ೧೮೮೫ರ ಕಟ್ಟಳೆಯಂತೆ ಜನಸಂಖ್ಯೆಯ ಪ್ರಮಾಣದಲ್ಲಿ ಮತದಾತರ ಸಂಘಗಳು ನಿರ್ಮಾಣವಾದುವು. ೧೯೧೮ರ ಮತ್ತು ೧೯೨೮ರ ಕಟ್ಟಳೆಗಳಿಂದ ಬಡಜನರಿಗೂ ಸ್ತ್ರೀಯರಿಗೂ ಮತಾಧಿಕಾರವು ದೊರೆತಿತು. ಇದರಿಂದ ದೇಶದ ಜನಸಂಖ್ಯೆಯಲ್ಲಿ ಅರ್ಧದಷ್ಟು ಜನರು ಮತದಾತರಾದರು.

೧೯೧೧ರ ಕಟ್ಟಳೆಯಿಂದ ಪಾರ್ಲಿಮೆಂಟಿನ ಲಾರ್ಡ್ಸ ಸಭೆಯ ಅಧಿಕಾರವು

# ಇಂಗ್ಲಂಡಿನ ರಾಜ್ಯಘಟನೆಯ ವಿಕಾಸವು.

- ವಿಟೆನ್‌ಗೆಮಾಟ್ (ಪ್ರಾಜ್ಞಮಂಡಲ) (ಆಂಗ್ಲೋ-ಸಕ್ಸನ್ ರಾಜರ ಕಾಲ.)
  - ಗ್ರೇಟ್ ಕೌನ್ಸಿಲ್ (ನಾರ್ಮನ್ ರಾಜರ ಆಳ್ಕೆ)
    - ಮನ್ನೆಯರ ಮಂಡಲ (೧೧೦೦)
      - ಲೋಕಪ್ರತಿನಿಧಿಗಳ ಮತ್ತು ಮನ್ನೆಯರ ಮಂಡಲ— ಪಾರ್ಲಿಮೆಂಟ್ ೧೨೯೫
        - ಮನ್ನೆಯರ ಮಂಡಲ (೧೩೩೦) ಲಾರ್ಡ್ಸ ಸಭೆ
        - ಲೋಕ ಸಭೆ (೧೩೩೦) ಕಾಮನ್ಸ ಸಭೆ
    - ಮಂತ್ರಾಲೋಚಕ ಮಂಡಲ (೧೧೦೦) (ರಾಜನಿಗೆ ಆಲೋಚನೆಹೇಳುವ ಮಂಡಲ)
      - ರಾಜನ ಕೌನ್ಸಿಲ್ (ಆಡಳಿತದಲ್ಲಿ ರಾಜನಿಗೆ ಆಲೋಚನೆ ಹೇಳುವ ಮಂಡಲ) ೧೧೫೦
        - ಪ್ರೀವಿ ಕೌನ್ಸಿಲ್ ೧೪೦೦
          - ಕೆಬಿನೆಟ್ (ಸಾಮ್ರಾಜ್ಯದ ಅತ್ಯುಚ್ಚ ನ್ಯಾಯಸ್ಥಾನವು)
          - ನ್ಯಾಯಸಮಿತಿ
          - ಬೇರೆ ಮಂಡಲಗಳು
            - ೧ ವಾಣಿಜ್ಯವಿಷಯಕ
            - ೨ ಶಿಕ್ಷಣವಿಷಯಕ
            - ೩ ಸ್ಥಾನಿಕ ಸ್ವರಾಜ್ಯವಿಷಯಕ
            - ೪ ಕೃಷಿವಿಷಯಕ
            - ೫ ಇತರ ಕಾರ್ಯವಿಷಯಕ
      - ನ್ಯಾಯದಾನದಲ್ಲಿ ರಾಜನಿಗೆ ಆಲೋಚನೆ ಹೇಳುವ ಮಂಡಲ ೧೧೫೦
        - ಚೆನ್ಸರಿ ಕೋರ್ಟ ೧೩೫೦
        - ಎಕ್ಸಚೆಕರ ಕೋರ್ಟ ೧೨೫೦
        - ಕಾಮನ್ ಪ್ಲೀಜ ೧೨೫೦
        - ರಾಜನ ಕೋರ್ಟ ೧೨೫೦
          - ಸುಪ್ರೀಮ್ ಕೋರ್ಟ ಆಫ್ ಜ್ಯುಡಿಕೇಚ್ಚರ (೧೮೭೩-೭೫)
            - ಲಾರ್ಡ್ಸ ಸಭೆ ಮತ್ತು ಸುಪ್ರೀಮ ಕೋರ್ಟ ಆಫ್ ಅಪೀಲ್
              - ಹೈಕೋರ್ಟ ಆಫ್ ಜಸ್ಟಿಸ್
                - ಕೌಂಟಿ ಕೋರ್ಟ (ದಿವಾಣಿ)
                - ಪೆಟಿ ಸೆಶನ್ (ಫೌಜದಾರಿ)

ಬಹು ಮಟ್ಟಿಗೆ ಕುಂದಿತು. ೧೮೭೨ರಲ್ಲಿಯ ಆಯ್ಕೆಯ ಸಮಯದಲ್ಲಿ ಗುಪ್ತವಾಗಿ ಮತಕೊಡುವ ಪದ್ಧತಿ ಆರಂಭವಾಯಿತು.

## (೨) ಇಂಗ್ಲಂಡಿನ ಸದ್ಯದ ರಾಜ್ಯಘಟನೆ.

**ಇಂಗ್ಲಂಡಿನ ರಾಜ್ಯಘಟನೆಯಲ್ಲಿ ಮೂರು ಪ್ರಮುಖ ಸಂಸ್ಥೆಗಳು**— ಇಂಗ್ಲಂಡಿನ ರಾಜ್ಯಘಟನೆಯಲ್ಲಿ (೧) ಶಾಸನವಿಧಾಯಕ ಪಾರ್ಲಿಮೆಂಟ್, (೨) ಕಾರ್ಯವಿಧಾಯಕ ಮತ್ತು ಆಡಳಿತವನ್ನು ನಡೆಯಿಸುವ ಕಬಿನೆಟ್ ಮತ್ತು (೩) ನ್ಯಾಯವನ್ನು ಕೊಡುವ ಲಾರ್ಡ್ಸ ಸಭೆ, ಸುಪ್ರೀಮ್ ಕೋರ್ಟ್ ಆಫ್ ಜ್ಯುಡಿಕೇಚರ ಈ ಮೂರು ಪ್ರಮುಖ ಸಂಸ್ಥೆಗಳು ಇರುವವು. ಇವುಗಳಲ್ಲಿ ಕಟ್ಟಳೆಗಳನ್ನು ರಚಿಸುವ ಪಾರ್ಲಿಮೆಂಟು ಪ್ರಧಾನವಾಗಿ ಎಣಿಸಲಾಗುತ್ತದೆ. ಏಕೆಂದರೆ ಪಾರ್ಲಿಮೆಂಟು ರಚಿಸಿದ ಕಟ್ಟಳೆಯಂತೆಯೆ ಕೆಬಿನೆಟು ಆಡಳಿತವನ್ನು ನೆರವೇರಿಸುತ್ತದೆ ಮತ್ತು ನ್ಯಾಯಸ್ಥಾನಗಳು ನ್ಯಾಯನಿರ್ಣಯಗಳನ್ನು ವಿಧಿಸುತ್ತವೆ. ಈ ಮೂರೂ ಸಂಸ್ಥೆಗಳೊಡನೆ ಇಂಗ್ಲಂಡಿನ ರಾಜನ ಸಂಬಂಧವಿರುವುದು.

### ಇಂಗ್ಲಂಡಿನ ರಾಜನು.

**ಇಂಗ್ಲಂಡಿನ ರಾಜನು**— ಇಂಗ್ಲಂಡಿನ ರಾಜ್ಯಘಟನೆಯಲ್ಲಿ ತಾತ್ವಿಕ ದೃಷ್ಟಿಯಿಂದ ನೋಡಿದರೆ ಅರಸನೇ ಸರ್ವಶ್ರೇಷ್ಠ ಪ್ರಧಾನಪುರುಷನಾಗಿದ್ದಾನೆ. ಇಂಗ್ಲಂಡಿನಲ್ಲಿಯ ರಾಜಸತ್ತೆ ವಂಶಪಾರಂಪರ್ಯವಾಗಿ ನಡೆವುದು; ಆದರೂ ಪಾರ್ಲಿಮೆಂಟು ಅವಶ್ಯವೆನಿಸಿದರೆ ತನ್ನ ಕಟ್ಟಳೆಗಳಿಂದ ಅದರಲ್ಲಿ ವ್ಯತ್ಯಾಸವನ್ನು ಕಲ್ಪಿಸಬಹುದು. ಇಂಗ್ಲಂಡಿನ ಅರಸು ಪ್ರಾಟೆಸ್ಟಂಟ್ ಪಂಥದವನಾಗಿರಬೇಕು ಮತ್ತು ಪ್ರಾಟೆಸ್ಟಂಟ್ ಪಂಥದ ಸ್ತ್ರೀಯನ್ನೆ ಮದುವೆಯಾಗಬೇಕು ಎಂದು ಪಾರ್ಲಿಮೆಂಟಿನ ಕಟ್ಟಳೆಯ ನಿರ್ಬಂಧವಿರುವುದು. ಪಾರ್ಲಿಮೆಂಟಿನ ಕಟ್ಟಳೆಯಂತೆ ಆಡಳಿತವನ್ನು ನಡೆಯಿಸುವೆನೆಂದು ರಾಜ್ಯಾರೋಹಣದ ಸಮಯದಲ್ಲಿ ಅರಸನು ಆಣೆಮಾಡಬೇಕಾಗುತ್ತದೆ. ಅರಸನ ಸ್ವಂತದ ವೆಚ್ಚಕ್ಕಾಗಿ ೪ ಲಕ್ಷ ೭೦ ಸಾವಿರ ಪೌಂಡಿನ ವರ್ಷಾಶನವು ಪಾರ್ಲಿಮೆಂಟಿನ ಕಟ್ಟಳೆಯಂತೆ ನಡೆಯುತ್ತದೆ. ರಾಣಿಗೆ ೩೩,೦೦೦ ಪೌಂಡು, ಅರಸುಮನೆತನದ ಮಿಕ್ಕವರಿಗೂ ಬೇರೆ ಬೇರೆ ವರ್ಷಾಶನಗಳು ಏರ್ಪಟ್ಟಿವೆ.

ಹಿಂದೆ ಅರಸನ ಕೈಯಲ್ಲಿ ವಿಶೇಷ ಅಧಿಕಾರವಿದ್ದಿತು. ಆಮೇಲೆ ಪಾರ್ಲಿಮೆಂಟಿನ ಕಟ್ಟಳೆಯಿಂದ ಅದು ಬಹುವಾಗಿ ಕಡಿಮೆಯಾಯಿತು. ಆದರೂ ರಾಜನ ಮಾನಪ್ರತಿಷ್ಠೆಗೆ ಅನುಗುಣವಾಗಿ ಅನೇಕ ವಿಶಿಷ್ಟಾಧಿಕಾರಗಳು (King's Prerogatives) ಆತನಿಗೆ ಸಲ್ಲುತ್ತಿವೆ.

**ಅರಸನ ವಿಶಿಷ್ಟಾಧಿಕಾರಗಳು**—(೧) ಪಾರ್ಲಿಮೆಂಟಿನ ಆಯ್ಕೆಯನ್ನು ಮಾಡಿಸುವುದು. ಪಾರ್ಲಿಮೆಂಟಿನ ಅಧಿವೇಶನವನ್ನು ಕರೆವುದು, ನಿಲ್ಲಿಸುವುದು, ವಿಸರ್ಜಿಸುವುದು. (೨) ಕಾಮನ್ಸ ಮತ್ತು ಲಾರ್ಡ್ಸ ಸಭೆಗಳು ಸ್ವೀಕರಿಸಿದ ಬಿಲ್ಲುಗಳು ರಾಜನ ಸಮ್ಮತಿಯನ್ನು ಪಡೆಯದೆ ಕಟ್ಟಳೆಯ ಸ್ವರೂಪವನ್ನು ಪಡೆಯಲಾರವು. (೩) ಅಗತ್ಯವೆನಿಸಿದಲ್ಲಿ ಕೆಲವರನ್ನು ಲಾರ್ಡರನ್ನು ಮಾಡಿ ಲಾರ್ಡ್ಸ ಸಭೆಯ ಸದಸ್ಯರನ್ನು ಆಗಿಸುವುದು. (೪) ತಾತ್ಪೂರ್ತಿಕ ಪ್ರಕಟನೆಗಳನ್ನು ಹೊರಡಿಸುವುದು. (೫) ಮುಖ್ಯಮಂತ್ರಿ, ಮಂತ್ರಿ ಮಂಡಲದಲ್ಲಿಯ ಇತರ ಮಂತ್ರಿಗಳು, ಸೈನ್ಯ, ಹಡಗುಪಡೆ, ವಿಮಾನದಳದ ಅಧಿಕಾರಿಗಳು, ಬ್ರಿಟಿಶ ಸಾಮ್ರಾಜ್ಯದ ಬೇರೆ ಬೇರೆ ದೇಶಗಳ ವ್ಹಾಯಿಸರಾಯ್, ಗವರ್ನರ್ ಜನರಲ್, ಗವರ್ನರ್, ಹಾಯಕಮಿಶನರ್, ಪರರಾಷ್ಟ್ರಗಳಲ್ಲಿಯ ರಾಯಭಾರಿಗಳು ಮುಂತಾದ ಉಚ್ಚ ಅಧಿಕಾರಿಗಳನ್ನು ನಿಯೋಜಿಸುವುದು. (೬) ಮಾನಸನ್ಮಾನದ ಬಿರುದುಗಳನ್ನು ಸಲ್ಲಿಸುವುದು. (೭) ನಾಣ್ಯಗಳನ್ನು ರೂಢಿಸುವುದು. (೮) ಯುದ್ಧ ಹೂಡುವುದು ಮತ್ತು ಒಡಂಬಡಿಕೆ ಮಾಡುವುದು. (೯) ನ್ಯಾಯಸ್ಥಾನಗಳು ಅಪರಾಧಿಗಳಿಗೆ ವಿಧಿಸಿದ ಶಿಕ್ಷೆಗಳನ್ನು ಅವಶ್ಯವೆನಿಸಿದಲ್ಲಿ ಕಡಿಮೆ ಮಾಡುವುದು, ದಯೆ ತೋರಿಸುವುದು—ಈ ಅನೇಕ ಅಧಿಕಾರಗಳು ಅರಸನಿಗೆ ಇವೆ.

ಆದರೆ ಇಂಗ್ಲಂಡಿನ ರಾಜನು ಆಡಳಿತದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುವುದಿಲ್ಲವಾದುದರಿಂದ ಇವುಗಳಲ್ಲಿ ಅನೇಕ ಅಧಿಕಾರಗಳನ್ನು ಅರಸನು ಮಂತ್ರಿಮಂಡಲದ ಮುಖಾಂತರವಾಗಿಯೆ ಉಪಯೋಗಿಸುತ್ತಾನೆ. ಅದಕ್ಕಾಗಿ ಆಡಳಿತದ ನೀತಿಯಲ್ಲಿ ಅರಸನು ಪಾರ್ಲಿಮೆಂಟಿಗೆ ಹೊಣೆಯಾಗಿರದೆ ಕಬಿನೆಟು ಹೊಣೆಯಾಗಿರುತ್ತದೆ. ಅರಸನು ಪಕ್ಷಭೇದಾತೀತನಾಗಿರುವನು. ಆದುದರಿಂದ ಎಲ್ಲ ಪಕ್ಷಗಳಿಗೆ ಆತನ ವಿಷಯದಲ್ಲಿ ಆದರಭಾವನೆ ಇರುತ್ತದೆ. ಇಂಗ್ಲಂಡಿನ ಅರಸು ಬ್ರಿಟಿಶ್ ಸಾಮ್ರಾಜ್ಯದ ಬೇರೆ ಬೇರೆ ದೇಶಗಳು ಒಂದೆಡೆಗೆ ಕೂಡಿಸುವ ಬಳೆಯಂತಿರುವನು. ಇದಕ್ಕೋಸುಗವೆ ಸಾಮ್ರಾಜ್ಯದ ದೂರದೂರ ಭಾಗದ ಜನಾಂಗಗಳಿಗೂ ಆತನ ವಿಷಯದಲ್ಲಿ ಆತ್ಮೀಯತೆ ಎನಿಸುತ್ತದೆ.

## ಪಾರ್ಲಿಮೆಂಟ್.

**ಪಾರ್ಲಿಮೆಂಟ್**—ಇದು ಇಂಗ್ಲಂಡಿನ ರಾಜ್ಯಘಟನೆಯಲ್ಲಿ ಕಟ್ಟಳೆಯನ್ನು ರಚಿಸುವ ಸಂಸ್ಥೆ. ಪಾರ್ಲಿಮೆಂಟಿನ ಅಧಿಕಾರವು ಬಹಳ ಹೆಚ್ಚಿನದು. ಇಂಗ್ಲಂಡ್ ಮತ್ತು ಬ್ರಿಟಿಶ್ ಸಾಮ್ರಾಜ್ಯದೊಳಗಿನ ಬೇರೆ ಯಾವುದೆ ದೇಶವನ್ನು ಕುರಿತು ಕಟ್ಟಳೆ

ಯನ್ನು ರಚಿಸುವುದು ಇಲ್ಲವೆ ಇದ್ದ ಕಟ್ಟಳೆಯನ್ನು ಕಿತ್ತುಹಾಕಲು ಪಾರ್ಲಿಮೆಂಟಿಗೆ ಅಧಿಕಾರವಿದೆ. ಪಾರ್ಲಿಮೆಂಟಿನಲ್ಲಿ (೧) ಇಂಗ್ಲಂಡಿನ ರಾಜನು (೨) ಲಾರ್ಡ್ಸ ಸಭೆ ಮತ್ತು (೩) ಕಾಮನ್ಸ ಸಭೆ ಹೀಗೆ ಮೂರು ವಿಭಾಗಗಳು ಇವೆ. (೧) ಧರ್ಮಾಧಿಕಾರಿಗಳು, (೨) ಸರದಾರರು ಮತ್ತು (೩) ಜನಸಾಮಾನ್ಯರು ಇವರು ರಾಷ್ಟ್ರದ ಮೂರು ಸಮಾಜಗಳು (Three estates of the Realm). ಇವರಲ್ಲಿ ದೊಡ್ಡ ಧರ್ಮಾಧಿಕಾರಿಗಳು ಮತ್ತು ಸರದಾರರು ಲಾರ್ಡ್ಸ ಸಭೆಯಲ್ಲಿ ಸೇರ್ಪಡೆಯಾಗುವರು ಮತ್ತು ಜನಸಾಮಾನ್ಯರು ಕಾಮನ್ಸ ಸಭೆಯಲ್ಲಿ. ಕಾಮನ್ಸ ಸಭೆಯಲ್ಲಿಯ ಎಲ್ಲ ಸದಸ್ಯರು ಜನನಿಯುಕ್ತರಾಗಿರುವರು. ಪಾರ್ಲಿಮೆಂಟಿನ (ಕಾಮನ್ಸ ಸಭೆ) ಅವಧಿ ಐದು ವರ್ಷ. ಈನಡುವೆ ಮಂತ್ರಿಮಂಡಲದ ಸಲಹೆಯಂತೆ ಅರಸನು ಪಾರ್ಲಿಮೆಂಟನ್ನು ವಿಸರ್ಜಿಸಬಹುದು. ಪಾರ್ಲಿಮೆಂಟು ವಿಸರ್ಜಿಸಲ್ಪಟ್ಟರೆ ಮತ್ತೆ ಕಾಮನ್ಸ ಸಭೆಯ ಆಯ್ಕೆ ನಡೆದು ಹೊಸ ಪಾರ್ಲಿಮೆಂಟು ಕೂಡುವುದು. ಹೊಸ ಪಾರ್ಲಿಮೆಂಟು ಆರಂಭವಾಗುವ ಸಮಯದಲ್ಲಿ ಲಾರ್ಡರ ಸಭಾಗೃಹದಲ್ಲಿ ಲಾರ್ಡ್ಸ ಸಭೆಯ ಮತ್ತು ಕಾಮನ್ಸ ಸಭೆಯ ಸದಸ್ಯರ ಸಂಯುಕ್ತ ಅಧಿವೇಶನವು ನೆರೆವುದು. ಆಗ ರಾಜನು ಭಾಷಣಮಾಡುವನು. ಈ ಭಾಷಣವನ್ನು ಮಂತ್ರಿಮಂಡಲವು ಸಿದ್ಧಪಡಿಸುತ್ತದೆ. ಇದರಲ್ಲಿ ಮಂತ್ರಿಮಂಡಲದ ಸಾಮಾನ್ಯ ನೀತಿ ವ್ಯಕ್ತವಾಗಿರುತ್ತದೆ.

(೧) **ರಾಜನು**—ರಾಜನು ಪಾರ್ಲಿಮೆಂಟಿನ ಒಂದು ಅಂಗವಾಗಿ ಎಣಿಸಲ್ಪಡುತ್ತಾನೆ. ಏಕೆಂದರೆ ಕಾಮನ್ಸ ಸಭೆಯಲ್ಲಿ ಆಗಲಿ ಲಾರ್ಡ್ಸ ಸಭೆಯಲ್ಲಿ ಆಗಲಿ ಸ್ವೀಕೃತವಾದ ಯಾವುದೆ 'ಬಿಲ್ಲಿ'ಗೆ ಕಟ್ಟಳೆಯ ಸ್ವರೂಪವು ಬರಬೇಕಾದರೆ ರಾಜನ ಒಪ್ಪಿಗೆ ಅವಶ್ಯವಾದುದು. ರಾಜನಿಗೆ ಈ ಒಪ್ಪಿಗೆಯನ್ನು ಕೊಡದಿರುವ ಅಧಿಕಾರ (Veto) ವಿದೆ. ಆದರೆ ಕಳೆದ ೨೦೦ ವರ್ಷಗಳಲ್ಲಿ ಅರಸನು ಈ ಅಧಿಕಾರವನ್ನು ಉಪಯೋಗಿಸಿಲ್ಲ.

## ಲಾರ್ಡ್ಸ ಸಭೆ.

(೨) **ಲಾರ್ಡ್ಸ ಸಭೆಯ ರಚನೆ**—ಈ ಸಭೆಯ ಸದಸ್ಯರ ಸಂಖ್ಯೆ ಕ್ಲಪ್ತವಾಗಿಲ್ಲ. ಈಗ ೭೪೦ ಸದಸ್ಯರು ಇರುವರು. ಇವರಲ್ಲಿ ೨೬ ಪ್ರಮುಖ ಧರ್ಮಾಧಿಕಾರಿಗಳು, ೬೭೦ ವಂಶಪರಂಪರೆಯ ಅಧಿಕಾರದಿಂದ ಬರುವ ಲಾರ್ಡರು (ಬರನ್, ಅರ್ಲ, ಡ್ಯೂಕ ಮುಂತಾದ ಮನ್ನೆಯರು), ಕಟ್ಟಳೆಯ ವಿಷಯದಲ್ಲಿ ಆಲೋಚನೆ ಹೇಳುವ ಆಜೀವವಾಗಿ ನಿಯೋಜಿಸಲ್ಪಟ್ಟ ೬ ಜನ ಕಾಯ್ದೆ ಪಂಡಿತ ಲಾರ್ಡರು,

ಸ್ಕಾಟಲಂಡಿನ ಸರದಾರರು ಪ್ರತಿ ಹೊಸ ಪಾರ್ಲಿಮೆಂಟಿನ ಸಮಯದಲ್ಲಿ ಪ್ರತಿನಿಧಿಯಾಗಿ ಆರಿಸಿ ಕಳುಹಿದ ೧೬ ಲಾರ್ಡರು, ಮತ್ತು ಉತ್ತರ ಐರ್ಲಂಡಿನ ಸರದಾರರು ಆರಿಸಿ ಕಳುಹಿದ ಕೆಲವು ಆಜೀವ ಲಾರ್ಡರು, ಹೀಗೆ ಸದಸ್ಯರು ಇರುವರು. ಅವಶ್ಯವೆನಿಸಿದಲ್ಲಿ ಬೇಕಾದವನನ್ನು ಲಾರ್ಡನಾಗಿ ಮಾಡುವ ಅಧಿಕಾರವು ಅರಸನಿಗೆ ಇದೆ. ಹೀಗೆ ಲಾರ್ಡನಾದವನಿಗೆ ಆ ಅಧಿಕಾರವು ವಂಶಪರಂಪರೆಯಾಗಿ ನಡೆವುದು. ಒಬ್ಬ ಲಾರ್ಡನ ಮರಣದ ತರುವಾಯದಲ್ಲಿ ಅವನ ಹಿರಿಯ ಮಗನು ಲಾರ್ಡನಾಗುವನು. ಆದರೆ ಆತನ ತಂದೆ ಜೀವಿಸಿರುವಾಗ ಆತನು ಕಾಮನ್ಸ ಸಭೆಯ ಸದಸ್ಯನು (ಆರಿಸಿ ಬಂದಲ್ಲಿ) ಆಗಬಹುದು.

**ಲಾರ್ಡ್ಸ ಸಭೆಯಿಂದ ನಡೆವ ಕಾರ್ಯಗಳು**—(೧) ಕಟ್ಟಳೆಗಳನ್ನು ರಚಿಸುವುದು, (೨) ಸಾರ್ವಜನಿಕ ವಿಷಯಗಳಲ್ಲಿ ಆಲೋಚನೆ ಹೇಳುವುದು ಮತ್ತು ಅವನ್ನು ಚರ್ಚಿಸುವುದು, ಮತ್ತು (೩) ನ್ಯಾಯದಾನ.

(೧) **ಕಟ್ಟಳೆಗಳನ್ನು ರಚಿಸುವುದು**—ಈ ವಿಷಯದಲ್ಲಿ ೧೯೧೧ರ ಕಟ್ಟಳೆಯಿಂದ ಈ ಸಭೆಯ ಅಧಿಕಾರವು ಬಹಳ ಕಡಿಮೆಯಾಗಿದೆ. ಈ ಸಭೆಯಲ್ಲಿ ಸ್ವೀಕೃತವಾದ 'ಬಿಲ್ಲು' ಕಾಮನ್ಸ ಸಭೆಯಲ್ಲಿ ಸ್ವೀಕೃತವಾಗಿ ಅರಸನ ಒಪ್ಪಿಗೆಯನ್ನು ಪಡೆದರೆ, ಅದಕ್ಕೆ ಕಟ್ಟಳೆಯ ಸ್ವರೂಪವು ಬರುತ್ತದೆ. ಆದರೆ ಕಾಮನ್ಸ ಸಭೆಯಲ್ಲಿ ಸ್ವೀಕೃತವಾದ 'ಬಿಲ್ಲಿ'ಗೆ ಬಹಳವೆಂದರೆ ೨ ವರ್ಷಗಳ ವರೆಗೆ ತಡೆದು ಹಿಡಿವ ಅಧಿಕಾರವು ಈ ಸಭೆಗೆ ಇರುವುದು. ಹಣಕಾಸಿನ ಬಿಲ್ಲನ್ನು ಕುರಿತು ಈ ಸಭೆಗೆ ಯಾವ ಅಧಿಕಾರವೂ ಇಲ್ಲ.

ಯಾವುದೆ ಬಿಲ್ಲು ಸ್ವೀಕೃತವಾಗುವ ಪೂರ್ವದಲ್ಲಿ ಮೂರು ವಾಚನಗಳು ನಡೆಯುತ್ತವೆ. ಮೂರನೆಯ ವಾಚನದ ಸಮಯದಲ್ಲಿ ಮತಗಣನೆಯಾಗಿ ಅದು ಸ್ವೀಕೃತವೊ ಅಸ್ವೀಕೃತವೊ ಎಂಬುದು ಬಹುಮತದಿಂದ ನಿರ್ಧರಿಸಲಾಗುತ್ತದೆ.

(೨) **ಸಾರ್ವಜನಿಕ ವಿಷಯದಲ್ಲಿ ಆಲೋಚನೆ ಮತ್ತು ಚರ್ಚೆ**—ಸಾರ್ವಜನಿಕ ವಿಷಯಗಳನ್ನು ಚರ್ಚಿಸಲು ಈ ಸಭೆಗೆ ಕಾಮನ್ಸ ಸಭೆಯಷ್ಟೆ ಅಧಿಕಾರವಿದೆ. ಈ ಸಭೆಯ ಸದಸ್ಯರಲ್ಲಿ ಅನೇಕರು ದೊಡ್ಡ ದೊಡ್ಡ ಅಧಿಕಾರದ ಕೆಲಸಗಳನ್ನು ಮಾಡಿದವರೂ ಅನುಭವಿಕರೂ ಇರುವುದರಿಂದ ಈ ಸಭೆಯಲ್ಲಿಯ ಚರ್ಚೆಯಿಂದ ಮಂತ್ರಿಮಂಡಲವು ಸರಿಯಾದ ನೀತಿಯನ್ನು ನಿರ್ಧರಿಸಲು ಸಾಹಾಯ್ಯವಾಗುತ್ತದೆ.

(೩) **ನ್ಯಾಯದಾನ**—ನ್ಯಾಯದಾನವು ಈ ಸಭೆಯ ವಿಶಿಷ್ಟಾಧಿಕಾರವಾಗಿದೆ. ಇದು ದೇಶದಲ್ಲಿಯ ಅತ್ಯುಚ್ಚವಾದ ಅಪೀಲ ಕೋರ್ಟು ಆಗಿದೆ.

ಲಾರ್ಡ್ಸ ಸಭೆ ನ್ಯಾಯದಾನದ ಕಾರ್ಯವನ್ನು ನಡೆಸಿರುವಾಗ ಅದರಲ್ಲಿ ಭಾಗಿಯಾಗಲು ಎಲ್ಲ ಸದಸ್ಯರಿಗೆ ಅಧಿಕಾರವಿದೆ. ಆದರೂ ಶಾಸನವಿಷಯದಲ್ಲಿ ಪರಿಜ್ಞಾನವುಳ್ಳವರು ಮತ್ತು ಶಾಸನವಿಧಾನದಲ್ಲಿ ಸಹಾಯಕರಾಗಲು ಉದ್ದೇಶಪೂರ್ವಕವಾಗಿ ಲಾರ್ಡ್ಸ ಸಭೆಯಲ್ಲಿ ನಿಯೋಜಿಸಲಾದ ಕಾಯ್ದೆ ಪಂಡಿತರು ಇವರಷ್ಟೆ ಈ ಕಾರ್ಯದಲ್ಲಿ ಭಾಗವಹಿಸುವರು.

**ಲಾರ್ಡ್ಸ ಸಭೆಯನ್ನು ಕುರಿತು ಇನ್ನೂ ಕೆಲವು ವಿಷಯಗಳು**— ಈ ಸಭೆಯ ಅಧಿಕಾರಗಳು ಬಹು ಮಟ್ಟಿಗೆ ಮರ್ಯಾದಿತವಾಗಿದ್ದರೂ ಈ ಸಭೆ ಬಹಳ ಉಪಯುಕ್ತವಾಗಿದೆ. ಕಾಮನ್ಸ ಸಭೆ ಅವಸರದಿಂದ ಯಾವುದಾದರೊಂದು ಬಿಲ್ಲನ್ನು ಸ್ವೀಕರಿಸಿದರೆ, ಈ ಸಭೆ ಅದನ್ನು ಎರಡು ವರ್ಷಗಳ ವರೆಗೆ ತಡೆದು ಹಿಡಿಯಬಹುದು. ಇದರಿಂದ ನಿಜವಾದ ಜನಾಭಿಪ್ರಾಯವು ಏನಿದೆ ಎಂಬುದನ್ನು ಪರೀಕ್ಷಿಸಲು ಸಾಧ್ಯವಾಗುವುದು. ಕಬಿನೆಟಿನ ಒಬ್ಬ ಮಂತ್ರಿಯಾದ ಲಾರ್ಡ್ ಹಾಯ್ ಚನ್ಸಲರನು ಈ ಸಭೆಗೆ ಅಧ್ಯಕ್ಷನಾಗಿರುವನು.

ಲಾರ್ಡ್ಸ ಸಭೆಯಲ್ಲಿಯ ಸದಸ್ಯರಿಗೆ ವೈಯಕ್ತಿಕವಾಗಿ ಕೆಲವು ವಿಶಿಷ್ಟಾಧಿಕಾರಗಳು ಇವೆ. ಅವು ಇಂತು: (೧) ಲಾರ್ಡ್ಸ ಸಭೆಯಲ್ಲಿ ಭಾಷಣಸ್ವಾತಂತ್ರ್ಯ, (೨) ಅರಸನನ್ನು ವೈಯಕ್ತಿಕವಾಗಿ ಸಂದರ್ಶಿಸುವುದು, (೩) ಜ್ಯೂರಿಯ ಕೆಲಸದಿಂದ ಬಿಡುಗಡೆ ಇತ್ಯಾದಿ.

ಆಯ್ಕೆ ನಡೆದು ಪಾರ್ಲಿಮೆಂಟಿನ ಹೊಸ ಅಧಿವೇಶನವು ಸೇರಿವಾಗ ಎರಡೂ ಸಭೆಗಳ ಸದಸ್ಯರ ಮುಂದೆ ಆಗುವ ಅರಸನ ಭಾಷಣವು ಲಾರ್ಡ್ಸ ಸಭಾಗೃಹದಲ್ಲಿಯೆ ಆಗುತ್ತದೆ.

## ಕಾಮನ್ಸ ಸಭೆ.

**(೩) ಕಾಮನ್ಸ ಸಭೆಯ ರಚನೆ**— ಈ ಸಭೆಯಲ್ಲಿ ೬೧೫ ಸದಸ್ಯರು ಇರುವರು. ಅವರಲ್ಲಿ ಇಂಗ್ಲಂಡಿನಿಂದ ೪೯೨, ವೇಲ್ಸಿನಿಂದ ೩೬, ಸ್ಕಾಟಲಂಡಿನಿಂದ ೭೪ ಮತ್ತು ಉತ್ತರ ಐರ್ಲಂಡಿನಿಂದ ೧೩ ಸದಸ್ಯರು ಬರುವರು. ಈ ಸದಸ್ಯರು ಪರಗಣೆ (ಜಿಲ್ಲೆ), ನಗರ, ಮತ್ತು ವಿಶ್ವವಿದ್ಯಾಲಯಗಳ ಪರವಾಗಿ ಬರುವರು. ಲಾರ್ಡ್ಸ ಸಭೆಯ ಸದಸ್ಯರಿಗೆ ಮತ್ತು ಸರಕಾರಿ ನೋಕರರಿಗೆ ಕಾಮನ್ಸ ಸಭೆಯ ಆಯ್ಕೆಯಲ್ಲಿ ಉಮೇದ್ವಾರನಾಗಿ ನಿಲ್ಲಲು ಬರುವುದಿಲ್ಲ. ಇವರನ್ನುಳಿದು ೨೧ ವಯಸ್ಸಿನ ಬೇಕಾದ ಸ್ತ್ರೀಪುರುಷರು ಉಮೇದ್ವಾರರಾಗಿ ನಿಲ್ಲಬಹುದು ಮತ್ತು ಮತವನ್ನು ಕೊಡಬಹುದು. ಪರಗಣೆಗಳನ್ನು ಮತ್ತು ನಗರಗಳನ್ನು ಜನಸಂಖ್ಯೆಯ ಪ್ರಮಾಣಕ್ಕೆ

ಅನುಗುಣವಾಗಿ ಸಮನಾಗಿ ವಿಭಾಗಿಸಲಾಗಿದೆ. ಈ ವಿಭಾಗಗಳಿಗೆ ಮತದಾತರ ಸಂಘವೆಂದು ಕರೆವರು. ಪ್ರತಿಯೊಂದು ಮತದಾತರ ಸಂಘದ ಪರವಾಗಿ ಒಬ್ಬ ಸದಸ್ಯನು ಆರಿಸಲ್ಪಡುವನು. ಕಾಮನ್ಸ ಸಭೆಯ ಸದಸ್ಯನಿಗೆ ವರ್ಷಕ್ಕೆ ೬೦೦ ಪೌಂಡು ಸಂಬಳವು ದೊರೆಯುತ್ತದೆ. ಒಮ್ಮೆ ಆರಿಸಿದ ಪಾರ್ಲಿಮೆಂಟು ಐದು ವರ್ಷ ಬಾಳುವುದು. ಆದರೆ ಇದಕ್ಕೂ ಮುಂಚೆ ಅದನ್ನು ವಿಸರ್ಜಿಸಿದರೆ ಕೂಡಲೆ ಇನ್ನೊಂದು ಆಯ್ಕೆ ನಡೆಯಬೇಕೆಂದು ನಿಯಮವಿರುವುದು. ಆಯ್ಕೆ ಗುಪ್ತಮತದಾನ ಪದ್ಧತಿಯಿಂದ ನಡೆವುದು.

ಸ್ಪೀಕರ್—ಕಾಮನ್ಸ ಸಭೆಯ ಅಧ್ಯಕ್ಷನಿಗೆ 'ಸ್ಪೀಕರ್' ಎನ್ನುವರು. ಆಯ್ಕೆಯಾದ ಬಳಿಕ ಕಾಮನ್ಸ ಸಭೆಯ ಮೊದಲನೆಯ ಅಧಿವೇಶನವು ನೆರೆಯಲು, ಮೊದಲು ಆತನ ಆಯ್ಕೆಯಾಗುವುದು. ಸ್ಪೀಕರನಾಗಿ ಆರಿಸಿ ಬಂದವನು ಪಕ್ಷಭೇದಕ್ಕೆ ಒಳಗಾಗದೆ ಅಧ್ಯಕ್ಷ ಕಾರ್ಯವನ್ನು ನಿರ್ವಹಿಸುವನು.

**ಕಾಮನ್ಸ ಸಭೆ ಮಾಡುವ ಕಾರ್ಯಗಳು**—(೧) ಕಟ್ಟಳೆಯನ್ನು ರಚಿಸುವುದು, (೨) ತೆರಿಗೆಗಳನ್ನು ಕೂಡಿಸುವುದು (೩) ಸಾರ್ವಜನಿಕ ವಿಷಯಗಳಲ್ಲಿ ಆಲೋಚನೆ ಹೇಳುವುದು ಮತ್ತು ಚರ್ಚಿಸುವುದು, (೪) ಕ್ಯಬಿನೆಟಿನ ಆಡಳಿತದ ಮೇಲೆ ಲಕ್ಷ್ಯವಿಡುವುದು ಮತ್ತು ಅದನ್ನು ಹೊಣೆಗಾರವಾಗಿ ಇಡುವುದು.

(೧) ಹೊಸ ಕಟ್ಟಳೆಗಳನ್ನು ರಚಿಸುವ ಅಥವಾ ಹಳೆಯ ಕಟ್ಟಳೆಗಳನ್ನು ರದ್ದುಗೊಳಿಸುವ ಕೆಲಸವು ಕಾಮನ್ಸ ಸಭೆಗೆ ಒಪ್ಪಿರುವುದು. ಕಬಿನೆಟಿನ ಸೂಚನೆಯ ಮೇರೆಗೆ ಅನೇಕ ಕಟ್ಟಳೆಗಳು ಮುಂದೆ ತರಲಾಗುತ್ತವೆ. ಯಾವುದೆ ಬಿಲ್ಲಿನ ಮೂರು ವಾಚನಗಳು ಮುಗಿದು ಅದು ಕಾಮನ್ಸ ಸಭೆಯಲ್ಲಿ ಸ್ವೀಕೃತವಾದ ಬಳಿಕ ಅದನ್ನು ಲಾರ್ಡ್ಸ ಸಭೆಗೆ ಕಳುಹುತ್ತಾರೆ. ಅಲ್ಲಿಯೂ ಮೂರು ಸಲ ವಾಚನವಾದ ಬಳಿಕ ರಾಜನ ಸಮ್ಮತಿಗೆ ಅದನ್ನು ಕಳುಹುತ್ತಾರೆ. ಅದಕ್ಕೆ ರಾಜನ ಸಮ್ಮತಿ ದೊರೆತು ಕಟ್ಟಳೆಯ ಸ್ವರೂಪವು ಉಂಟಾಗುತ್ತದೆ. ೧೯೧೧ರ ಕಟ್ಟಳೆಯಿಂದ ಈ ವಿಷಯದಲ್ಲಿಯ ಲಾರ್ಡ್ಸ ಸಭೆಯ ಅಧಿಕಾರವು ಕಡಿಮೆಯಾಗಿದೆ. ಕಾಮನ್ಸ ಸಭೆಯಲ್ಲಿ ಸ್ವೀಕೃತವಾದ ಬಿಲ್ಲು ಲಾರ್ಡ್ಸ ಸಭೆಯಲ್ಲಿ ಸ್ವೀಕೃತವಾಗದಿದ್ದರೆ ಅದನ್ನು ಮರಳಿ ಕಾಮನ್ಸ ಸಭೆಗೆ ಕಳುಹುತ್ತಾರೆ. ಅಲ್ಲಿ ಅದು ಮತ್ತೆ ಸ್ವೀಕೃತವಾಗಿ ಲಾರ್ಡ್ಸ ಸಭೆಗೆ ಬರುತ್ತದೆ. ಹೀಗೆ ಮೂರು ಸಲ ಕಾಮನ್ಸ ಸಭೆಯಲ್ಲಿ ಸ್ವೀಕೃತವಾದ ಬಿಲ್ಲು ಲಾರ್ಡ್ಸ ಸಭೆಯಲ್ಲಿ ಅಸ್ವೀಕೃತವಾದರೂ ಅದು ಎರಡೂ ಸಭೆಗಳಲ್ಲಿ ಸ್ವೀಕೃತವಾಗಿದೆ ಎಂದು ತಿಳಿದು ಅದು ಅರಸನ ಕಡೆಗೆ

ಕಳುಹಲ್ಪಡುತ್ತದೆ. ಅರಸನ ಒಪ್ಪಿಗೆ ಅದಕ್ಕೆ ದೊರೆತ ಬಳಿಕ ಅದಕ್ಕೆ ಕಟ್ಟಳೆಯ ಸ್ವರೂಪವು ಬರುತ್ತದೆ.

(೨) ಆಡಳಿತದ ವೆಚ್ಚಕ್ಕಾಗಿ ಹಣವನ್ನು ಮಾನ್ಯಮಾಡುವ ಮತ್ತು ಅದಕ್ಕಾಗಿ ಕರಗಳನ್ನು ಹಾಕುವ ಅಧಿಕಾರವು ಕಾಮನ್ಸ ಸಭೆಗಷ್ಟೆ ಇರುವುದು. ಆದುದರಿಂದ ಹಣಕಾಸಿನ ಬಿಲ್ಲು ಮೊದಲು ಕಾಮನ್ಸ ಸಭೆಯ ಮುಂದೆಯೆ ಬರುತ್ತದೆ. ಕೆಬಿನೆಟಿನಲ್ಲಿಯ ಚನ್ಸಲರ ಆಫ್ ದಿ ಎಕ್ಸ ಚೆಕರ ಎಂಬ ಮಂತ್ರಿ ವಾರ್ಷಿಕ ಆಯವ್ಯಯದ ಮುಂಗಡ ಪತ್ರಿಕೆಯನ್ನು (Budget) ಹೊಸ ವರ್ಷವು ಪ್ರಾರಂಭವಾಗುವ ಮೊದಲು (ಹೊಸ ವರ್ಷವು ೧ನೆಯ ಎಪ್ರಿಲಿನಿಂದ ಆರಂಭವಾಗುವುದು) ಕಾಮನ್ಸ ಸಭೆಯ ಮುಂದೆ ಇಡುವನು. ಆಗ ಅದನ್ನು ಕುರಿತು ಚರ್ಚೆ ನಡೆವುದು. ಆಡಳಿತದ ಯಾವ ಭಾಗಕ್ಕೆ ಹೆಚ್ಚೆಂದರೆ ಎಷ್ಟು ಹಣವನ್ನು ವೆಚ್ಚಮಾಡಬೇಕು ಎಂಬುದನ್ನು ಕುರಿತು ಚರ್ಚಿಸಿ ಅದನ್ನು ಮಾನ್ಯಮಾಡಲಾಗುತ್ತದೆ. ಆ ಮೇಲೆ ವೆಚ್ಚದ ಈ ಹಣವು ಸಂಗ್ರಹವಾಗಲು ಯಾವ ಹೊಸ ಕರಗಳನ್ನು ಹಾಕಬೇಕು ಇಲ್ಲವೆ ಹಳೆಯವನ್ನು ಮುಂದುವರಿಸಬೇಕು ಎಂಬುದನ್ನು ನಿರ್ಧರಿಸಲಾಗುತ್ತದೆ. ಈ ಮೇರೆಗೆ ಆಯ ವ್ಯಯ ಪತ್ರಿಕೆಯನ್ನು ಕುರಿತು ಚರ್ಚಿಸಿ ಕಾಮನ್ಸ ಸಭೆ ಮಾನ್ಯತೆಯನ್ನು ಇತ್ತ ಬಳಿಕ ಆ ಬಿಲ್ಲನ್ನು ಲಾರ್ಡ್ಸ ಸಭೆಗೆ ಕಳುಹುತ್ತಾರೆ. ಅದರಲ್ಲಿ ವ್ಯತ್ಯಾಸಗಳನ್ನು ಕಲ್ಪಿಸಲು ಇಲ್ಲವೆ ಅದನ್ನು ಕಿತ್ತುಹಾಕಲು ಲಾರ್ಡ್ಸ ಸಭೆಗೆ ಅಧಿಕಾರವಿಲ್ಲ. ಮುಂದೆ ಒಂದು ತಿಂಗಳಾಗಲು ಅದು ಅರಸನಲ್ಲಿಗೆ ಕಳುಹಲ್ಪಡುತ್ತದೆ. ಆ ಮೇಲೆ ಅರಸನ ಒಪ್ಪಿಗೆ ದೊರೆತು ಅದು ಕಟ್ಟಳೆಯಾಗಿ ಪರಿಣಮಿಸುತ್ತದೆ.

(೩) **ಸಾರ್ವಜನಿಕ ವಿಷಯಗಳನ್ನು ಕುರಿತು ಚರ್ಚಿಸುವುದು ಮತ್ತು ನೀತಿಯನ್ನು ನಿಶ್ಚಯಿಸುವುದು**–ಸಾರ್ವಜನಿಕ ವಿಷಯಗಳನ್ನು ಕುರಿತು ಕಾಮನ್ಸ ಸಭೆಯಲ್ಲಿ ನಡೆವ ಚರ್ಚೆ ಮಹತ್ತ್ವವುಳ್ಳುದಾಗಿರುತ್ತದೆ. ಇಂತಹ ಚರ್ಚೆಯ ಸಮಯದಲ್ಲಿ ಮಂತ್ರಿಮಂಡಲದ ನೀತಿಗೆ ಕಾಮನ್ಸ ಸಭೆಯ ಸಮ್ಮತಿ ದೊರೆವುದು ಅಗತ್ಯವಾದುದು.

(೪) ಇಂಗ್ಲಂಡಿನ ಮಂತ್ರಿಮಂಡಲವು ಕಾಮನ್ಸ ಸಭೆಗೆ ಹೊಣೆಯಾಗಿರುವುದರಿಂದ ಮಂತ್ರಿಮಂಡಲದ ಆಡಳಿತವನ್ನು ನಿಯಂತ್ರಿಸುವುದು ಮತ್ತು ಆಡಳಿತದ ವಿಷಯದಲ್ಲಿ ಅದನ್ನು ಹೊಣೆಯಾಗಿ ಹಿಡಿವುದು ಈ ಕೆಲಸವನ್ನು ಕಾಮನ್ಸ ಸಭೆ ಮಾಡುವುದು. ಮಂತ್ರಿಮಂಡಲವು ಸೂಚಿಸಿದ ಹಣಕಾಸಿನ ಯೋಜನೆಗೆ ಕಾಮನ್ಸ ಸಭೆಯ ಒಪ್ಪಿಗೆ ದೊರೆಯದೆ ಇದ್ದಲ್ಲಿ, ಇಲ್ಲವೆ ಕಾಮನ್ಸ ಸಭೆ ಮಂತ್ರಿಮಂಡಲದ

ವಿರುದ್ಧವಾಗಿ ಅವಿಶ್ವಾಸದ ಗೊತ್ತುವಳಿಯನ್ನು ಮಾನ್ಯಮಾಡಿದಲ್ಲಿ, ಇಲ್ಲವೆ ಯಾವುದೇ ಮಹತ್ತ್ವದ ವಿಷಯದಲ್ಲಿ ಮಂತ್ರಿಮಂಡಲದ ನೀತಿಗೆ ವಿರೋಧವಾಗಿ ಕಾಮನ್ಸ ಸಭೆ ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸಿದಲ್ಲಿ ಮಂತ್ರಿಮಂಡಲವು ಅಧಿಕಾರತ್ಯಾಗಮಾಡುವುದು; ಅಥವಾ ತನ್ನ ನೀತಿಗೆ ಜನತೆಯ ಜೆಂಬಲವು ದೊರೆವುದಾಗಿ ನಂಬಿಕೆ ತೋರಿದಲ್ಲಿ ಆ ಪಾರ್ಲಿಮೆಂಟನ್ನು ವಿಸರ್ಜಿಸಲು ಅರಸನಿಗೆ ಆಲೋಚನೆಹೇಳುವುದು; ಆ ಬಳಿಕ ಹೊಸದಾಗಿ ಆಯ್ಕೆ ನಡೆಯುತ್ತದೆ. ಆದರೆ ಆ ಪಾರ್ಲಿಮೆಂಟನ್ನು ವಿಸರ್ಜನಗೊಳಿಸದೆ ಮಂತ್ರಿಮಂಡಲವು ಅಧಿಕಾರ ತ್ಯಾಗಮಾಡಿದರೆ ಅರಸನು ವಿರೋಧಿಪಕ್ಷದ ಮುಂದಾಳನ್ನು ಮುಖ್ಯ ಮಂತ್ರಿಯಾಗಿ ನಿಯೋಜಿಸಿ ಆತನಿಗೆ ಹೊಸ ಮಂತ್ರಿಮಂಡಲದ ಹೆಸರುಗಳನ್ನು ಸೂಚಿಸಲು ಹೇಳುತ್ತಾನೆ.

ಈ ಮೇರೆಗೆ ಮಂತ್ರಿಮಂಡಲವು ಕಾಮನ್ಸ ಸಭೆಗೆ ಹೊಣೆಯಾಗಿದ್ದುದರಿಂದ ಅದರ ಅಧಿಕಾರವು ಹಿರಿದಾಗಿದೆ. ಮುಖ್ಯ ಮಂತ್ರಿಯೂ ಮಂತ್ರಿಮಂಡಲದ ಅನೇಕ ಮಂತ್ರಿಗಳೂ ಕಾಮನ್ಸ ಸಭೆಯ ಸದಸ್ಯರೆ ಆಗಿರುವರು. ಯಾವುದೊಂದು ಅಂಗದ ಮುಖ್ಯ ಮಂತ್ರಿ ಕಾಮನ್ಸ ಇಲ್ಲವೆ ಲಾರ್ಡ್ಸ ಸಭೆಗಳಲ್ಲಿ ಒಂದರ ಸದಸ್ಯನಾಗಿದ್ದಲ್ಲಿ, ಉಪಮಂತ್ರಿ ಇನ್ನೊಂದರ ಸದಸ್ಯನಾಗಿರುವನು. ಈ ಮೇರೆಗೆ ಎರಡೂ ಸಭೆಗಳಲ್ಲಿ ಸರಕಾರದ ಪಕ್ಷವನ್ನು ಪ್ರತಿಪಾದಿಸಲು ಹೊಣೆಗಾರ ಮಂತ್ರಿಗಳು ಇರುವರು.

**ಪಾರ್ಲಿಮೆಂಟ ಸಭೆಯಲ್ಲಿಯ ಪಕ್ಷಗಳು** — ಲಾರ್ಡ್ಸ ಮತ್ತು ಕಾಮನ್ಸ ಸಭೆಗಳಲ್ಲಿ ಬೇರೆ ಬೇರೆ ರಾಜಕೀಯ ಪಕ್ಷಗಳ ಸದಸ್ಯರು ಇರುವರು. ಪಾರ್ಲಿಮೆಂಟಿನಲ್ಲಿ ಸದ್ಯಕ್ಕೆ ಮೂರು ಮಹತ್ತ್ವದ ಪಕ್ಷಗಳು ಇವೆ. ಕಾಂಝರ್‌ವೇಟಿವ್, ಕೂಲಿಕಾರ, ಮತ್ತು ಲಿಬರಲ್. ಇವಲ್ಲದೆ ಬೇರೆ ಪಂಗಡಗಳೂ ಇವೆ. ಆದರೆ ಅವುಗಳ ಅನುಯಾಯಿಗಳ ಸಂಖ್ಯೆ ಬಹಳ ಅಲ್ಪವಾಗಿದೆ. ಕಾಮನ್ಸ ಸಭೆಯಲ್ಲಿ ಬಹುಸಂಖ್ಯವಾಗಿರುವ ಪಕ್ಷದ ಪ್ರಮುಖನನ್ನು ಅರಸನು ಮುಖ್ಯ ಮಂತ್ರಿಯಾಗಿ ನಿಯೋಜಿಸುವನು. ಅವನ ಆಲೋಚನೆಯಂತೆ ಮಂತ್ರಿಮಂಡಲದ ಬೇರೆ ಸದಸ್ಯರನ್ನು ನಿಯೋಜಿಸಲಾಗುತ್ತದೆ. ಬಹುಸಂಖ್ಯ ಪಕ್ಷದ ತರುವಾಯ ಮುಖ್ಯವಾಗಿರುವ ಪಕ್ಷಕ್ಕೆ 'ವಿರೋಧಿ ಪಕ್ಷ' (His Majesty's Opposition) ವೆಂದು ಹೆಸರು.

**ಇತರ ವಿಷಯಗಳು** — ಕಾಮನ್ಸ ಸಭೆಯ ಸದಸ್ಯರಿಗೆ ಭಾಷಣ ಸ್ವಾತಂತ್ರ್ಯ, ಪಂಚರ (ಜ್ಯೂರಿ) ಕೆಲಸದಿಂದ ಬಿಡುಗಡೆ, ಸ್ಪೀಕರನ ಮುಖಾಂತರ ಸಾಂಘಿಕವಾಗಿ ಅರಸನನ್ನು ಸಂದರ್ಶಿಸುವುದು ಮುಂತಾದ ಹಕ್ಕುಗಳು ಅವೆ.

ಕಾಮನ್ಸ ಸಭೆಯ ಸದಸ್ಯನಿಗೆ ವರ್ಷಕ್ಕೆ ೬೦೦ ಪೌಂಡು ವೇತನವು ದೊರೆವುದು.

## ಕಾರ್ಯನಿರ್ವಾಹಕ ವಿಭಾಗವು (Executive).

ಸುವ್ಯವಸ್ಥಿತವಾದ ಎಲ್ಲ ದೇಶಗಳಲ್ಲಿ ಕಟ್ಟಳೆಯ ಅನುಸಾರವಾಗಿ ಕಾರ್ಯವನ್ನು ನಿರ್ವಹಿಸಿ ಆಡಳಿತವನ್ನು ನಡೆಯಿಸುವ ವಿಭಾಗವೊಂದು ಏರ್ಪಟ್ಟಿರುತ್ತದೆ. ಇದಕ್ಕೆ ಕಾರ್ಯನಿರ್ವಾಹಕ ರಾಜ್ಯಾಂಗ (Executive) ವೆನ್ನುವರು. ಇಂಗ್ಲಂಡಿನ ರಾಜ್ಯಘಟನೆಯಲ್ಲಿ ಅರಸು, ಅರಸನ ಪ್ರಿವಿ ಕೌನ್ಸಿಲ್, ಕಬಿನೆಟ್ ಮತ್ತು ಸ್ಥಿರವಾದ ಅಧಿಕಾರಿ ವರ್ಗ ಇವರ ಮುಖಾಂತರವಾಗಿ ಕಾರ್ಯನಿರ್ವಾಹವು ಆಗುತ್ತದೆ. ಇವುಗಳಲ್ಲಿ ಆಡಳಿತದ ಮುಖ್ಯ ನೀತಿಯನ್ನು ನಿರ್ಧರಿಸುವ ಕೆಲಸವು ಕಬಿನೆಟಿನ ಕಡೆಗೆ ಇರುತ್ತದೆ. ಆದುದರಿಂದ ಇದರ ಮಹತ್ವವು ಹೆಚ್ಚಿನದಾಗಿದೆ.

**ರಾಜನು**—ತಾತ್ತ್ವಿಕ ದೃಷ್ಟಿಯಿಂದ ಇಂಗ್ಲಂಡಿನ ಕಾರ್ಯನಿರ್ವಾಹದ ಮುಖ್ಯ ಅಧಿಕಾರವು ಅರಸನ ಕಡೆಗೆ ಇದೆ. ಈ ವಿಭಾಗದ ಎಲ್ಲ ಪ್ರಮುಖ ಅಧಿಕಾರಿಗಳು ರಾಜನಿಂದ ಇಲ್ಲವೆ ರಾಜಾಜ್ಞೆಯಿಂದ ನಿಯೋಜಿಸಲಾಗುವರು. ಹೀಗೆ ಮುಖ್ಯಮಂತ್ರಿಯನ್ನು ಮೊದಲುಗೊಂಡು ಎಲ್ಲ ಪ್ರಮುಖ ಅಧಿಕಾರಿಗಳು ರಾಜನ ಸೇವಕರೇ ಆಗಿರುವರು. ತಾತ್ತ್ವಿಕ ವಿಚಾರವು ಹೀಗಿದ್ದರೂ ಇಂಗ್ಲಂಡಿನ ರಾಜನು ಪ್ರತ್ಯಕ್ಷವಾದ ಆಡಳಿತವನ್ನು ಸಾಗಿಸುವುದಿಲ್ಲ. ಆದುದರಿಂದ ಆಡಳಿತದ ನೀತಿಯ ವಿಷಯದಲ್ಲಿ ಆತನು ಪಾರ್ಲಿಮೆಂಟಿಗೆ ಹೊಣೆಗಾರನಾಗಿರುವುದಿಲ್ಲ. ಮುಖ್ಯಮಂತ್ರಿ ಮತ್ತು ಮಂತ್ರಿಮಂಡಲದ ಬೇರೆ ಮಂತ್ರಿಗಳು ರಾಜನ ಹೆಸರಿನಿಂದ ಆಡಳಿತದ ನೀತಿಯನ್ನು ನಿರ್ಧರಿಸಿ ಆಡಳಿತವನ್ನು ಸಾಗಿಸುವರು.

**ಪ್ರಿವಿ ಕೌನ್ಸಿಲ್**—ಈ ಸಮಿತಿಯಲ್ಲಿ ಇರಬೇಕಾದ ಸದಸ್ಯರ ಸಂಖ್ಯೆ ನಿಯಮಿತವಾಗಿಲ್ಲ. ಸದ್ಯಕ್ಕೆ ಸುಮಾರು ೩೦೦ ಸದಸ್ಯರಿದ್ದು ಅವರೆಲ್ಲರು ಅರಸನಿಂದ ನಿಯೋಜಿಸಲ್ಪಡುತ್ತಾರೆ. ಅವರಲ್ಲಿ ಹಿಂದಿನ ಮತ್ತು ಇಂದಿನ ಕಬಿನೆಟಿನಲ್ಲಿಯ ಎಲ್ಲ ಮಂತ್ರಿಗಳು, ಪಾರ್ಲಿಮೆಂಟಿನ ಎರಡೂ ಸಭೆಗಳಲ್ಲಿಯ ಕೆಲವು ಸದಸ್ಯರು, ಕಂಟರಬರಿಯ ಮತ್ತು ಯಾರ್ಕದ ಆರ್ಚಬಿಶಪರು, ಕೆಲವು ಪ್ರಮುಖ ನ್ಯಾಯಾಧೀಶರು, ಸೇನಾಪತಿ, ಬ್ರಿಟಿಶ್ ಸಾಮ್ರಾಜ್ಯದ ಬೇರೆ ಬೇರೆ ದೇಶದೊಳಗಿನ ಕೆಲವು ಪ್ರಮುಖ ರಾಜನೀತಿವಿಶಾರದರು, ಸಾಹಿತ್ಯಶಾಸ್ತ್ರ ಮುಂತಾದ ವಿಷಯಗಳಲ್ಲಿ ಹೆಚ್ಚಿನ ಕೆಲಸವನ್ನು ಮಾಡಿದ ಕೆಲವರು, ಮುಂತಾದವರು ಸದಸ್ಯರು

ಆಗಿರುವರು. ಈ ಸದಸ್ಯರಿಗೆ ಪ್ರಿವಿ ಕೌನ್ಸಿಲರ (P. C.) ಎನ್ನುವರು. ಈ ಸಭೆಯ ಅಧಿವೇಶನಗಳು ಔಪಚಾರಿಕವಾಗಿರುತ್ತವೆ, ಮತ್ತು ಅವು ರಾಜ್ಯಾಭಿಷೇಕ, ಮಂತ್ರಿಮಂಡಲದ ಮಂತ್ರಿಗಳ ಮತ್ತು ಮುಖ್ಯ ಧರ್ಮಾಧಿಕಾರಿಗಳ ಪ್ರತಿಜ್ಞಾ ವಿಧಿ ಮುಂತಾದ ಔಪಚಾರಿಕ ಪ್ರಸಂಗಗಳಲ್ಲಿ ಕೂಡಿಸಲಾಗುತ್ತವೆ. ಈ ಕೌನ್ಸಿಲಿನ ಆಲೋಚನೆಯಂತೆ ಅರಸನು ಪ್ರಕಟನೆಗಳನ್ನು ಮತ್ತು ಆಜ್ಞೆಗಳನ್ನು ಹೊರಡಿಸಬಹುದು. ಬ್ರಿಟಿಶ್ ಸಾಮ್ರಾಜ್ಯದ ಬೇರೆ ಬೇರೆ ದೇಶಗಳ ನ್ಯಾಯಾಸನಗಳ ನಿರ್ಣಯಗಳ ಅಪೀಲುಗಳನ್ನು ನಡೆಸುವ ಕೆಲಸವು ಪ್ರಿವಿ ಕೌನ್ಸಿಲಿನ ನ್ಯಾಯಸಮಿತಿಯ ಕಡೆಗೆ ಒಪ್ಪಿಸಲ್ಪಟ್ಟಿರುತ್ತದೆ. ಈ ಕೌನ್ಸಿಲಿನಲ್ಲಿಯ ಯಾವ ಸದಸ್ಯನ ಆಲೋಚನೆಯನ್ನು ಯಾವ ಪ್ರಸಂಗದಲ್ಲಿ ಕೇಳಬೇಕು ಎಂಬುದು ಅರಸನ ಮನದಿಚ್ಛೆಯಾಗಿದೆ. ಕಬಿನೆಟಿನಲ್ಲಿಯ ಲಾರ್ಡ ಪ್ರೆಸಿಡೆಂಟ್ ಆಫ್ ದಿ ಕೌನ್ಸಿಲ್ ಎಂಬ ಅಧಿಕಾರಿ ಅರಸನು ಇಲ್ಲದಿರುವಾಗ ಈ ಕೌನ್ಸಿಲಿಗೆ ಅಧ್ಯಕ್ಷನಾಗಿರುವನು. ಹಿಂದೆ ಈ ಕೌನ್ಸಿಲಗೆ ವಿಶೇಷವಾದ ಅಧಿಕಾರವು ಇದ್ದಿತು. ಆಗ ತನ್ನ ವಿಶ್ವಾಸವನ್ನು ಪಡೆದವರನ್ನು ಅರಸನು ಈ ಕೌನ್ಸಿಲಿನಲ್ಲಿ ತನ್ನ ಮಂತ್ರಿಗಳಾಗಿ ನಿಯೋಜಿಸಿ ಆಡಳಿತದಲ್ಲಿ ಅವರ ಆಲೋಚನೆಯನ್ನು ಕೇಳಬೇಕೆಂದು ಪಾರ್ಲಿಮೆಂಟು ಬೇಡಿತು. ಮುಂದೆ ರಾಜ್ಯಕ್ರಾಂತಿಯ ತರುವಾಯದಲ್ಲಿ ಪಾರ್ಲಿಮೆಂಟಿನ ಕಾಮನ್ಸ್ ಸಭೆಯ ವಿಶ್ವಾಸವನ್ನು ಪಡೆದವರನ್ನು ಅರಸನು ತನ್ನ ಪ್ರಿವಿ ಕೌನ್ಸಿಲಿನಲ್ಲಿ ನಿಯೋಜಿಸಿ ಅವರ ಆಲೋಚನೆಯನ್ನು ಕೇಳಲಾರಂಭಿಸಿದನು. ಈ ಸಂಪ್ರದಾಯದಿಂದ ಮುಂದೆ ಹೊಣೆಗಾರ ಕೆಬಿನೆಟ್ (ಮಂತ್ರಿಮಂಡಲ) ಅಸ್ತಿತ್ವದಲ್ಲಿ ಬಂದಿತು. ಹೀಗಿರುವುದರಿಂದ ಕಬಿನೆಟು ಈ ಪ್ರಿವಿ ಕೌನ್ಸಿಲಿನ ಒಂದು ಸಮಿತಿ ಎಂದು ಹೇಳಲ್ಪಡುತ್ತದೆ. ಇದೇ ಮೇರೆಗೆ ಬೇರೆ ಬೇರೆ ವಿಷಯಗಳನ್ನು ಕುರಿತು ಪ್ರಿವಿ ಕೌನ್ಸಿಲಿನ ಬೇರೆ ಬೇರೆ ಸಮಿತಿಗಳು ನಿಯೋಜಿಸಲ್ಪಟ್ಟವೆ. ಅವುಗಳಲ್ಲಿ ಪ್ರಮುಖವಾದುವು ಇವು: (೧) ಕಬಿನೆಟ್ (೨) ನ್ಯಾಯಸಮಿತಿ (೩) ವ್ಯಾಪಾರವಿಷಯಕ ಮಂಡಲ (೪) ಶಿಕ್ಷಣವಿಷಯಕ ಸಮಿತಿ. ಕಬಿನೆಟಿನ ಕೆಲವು ಮಂತ್ರಿಗಳು ಈ ಸಮಿತಿಗಳಿಗೆ ಅಧ್ಯಕ್ಷರಾಗಿರುವರು.

## ಕೆಬಿನೆಟ್

**ಕೆಬಿನೆಟ್ ಮತ್ತು ಮಿನಿಸ್ಟ್ರಿ**—ಹೊಸ ಆಯ್ಕೆಯಾದ ಬಳಿಕ ಕಾಮನ್ಸ ಸಭೆಯಲ್ಲಿ ಬಹುಸಂಖ್ಯವಾಗಿದ್ದ ಪಕ್ಷದ ಪ್ರಮುಖನನ್ನು ಅರಸನು ಮುಖ್ಯಮಂತ್ರಿಯಾಗಿ ನಿಯೋಜಿಸುವನು. ಆಮೇಲೆ ಆತನಿಗೆ ಮಂತ್ರಿ

ಮಂಡಲದಲ್ಲಿ ಆರಿಸಿಕೊಳ್ಳಬೇಕಾದವರ ಹೆಸರನ್ನು ಸೂಚಿಸಲು ಅವನು ಹೇಳು ವನು. ಮುಖ್ಯಮಂತ್ರಿ ಕಾಮನ್ಸ ಮತ್ತು ಲಾರ್ಡ್ಸ ಸಭೆಗಳಲ್ಲಿಯ ತನ್ನ ಪಕ್ಷದ ಸುಮಾರು ೫೦-೫೫ ಹೆಸರುಗಳನ್ನು ಸೂಚಿಸುವನು. ಈ ೫೦-೫೫ ಜನರ ಸಮಿತಿಗೆ **ಮಿನಿಸ್ಟ್ರಿ** ಎಂದು ಹೆಸರು. ಇವರಲ್ಲಿ ಪ್ರಮುಖರಾಗಿದ್ದ ೨೦-೨೨ ಸದ ಸ್ಯರ ಚಿಕ್ಕ ಸಮಿತಿಗೆ **ಕಬಿನೆಟ್** ಎಂದು ಹೆಸರು. ಕಾಮನ್ಸ ಸಭೆಯಲ್ಲಿ ಕಬಿ ನೆಟಿಗೆ ಸೋಲು ಒದಗಿದರೆ, ಕಬಿನೆಟಿನಲ್ಲಿಯ ಎಲ್ಲ ಮಂತ್ರಿಗಳು ಮತ್ತು ಮಿನಿಸ್ಟ್ರಿ ಯಲ್ಲಿಯ ಮಂತ್ರಿಗಳು ಕೂಡಿ ಒಟ್ಟು ೫೦-೫೫ ಮಂತ್ರಿಗಳು ಅಧಿಕಾರತ್ಯಾಗ ಮಾಡುವರು.

**ಕಬಿನೆಟನಿಂದ ಆಗುವ ಕಾರ್ಯಗಳು**—ಕಬಿನೆಟು ಅತ್ಯಂತ ಮಹ ತ್ವದ ಮಂಡಲವಾಗಿದೆ. ಕಾರ್ಯನಿರ್ವಾಹಕ ವಿಭಾಗದ (Executive)ಲ್ಲಿ ಇದು ಸರ್ವಶ್ರೇಷ್ಠ ಸಮಿತಿಯಾಗಿರುವುದರಿಂದ ಇದು ಆಡಳಿತದ ನೀತಿಯನ್ನು ನಿರ್ಧರಿಸುವ ಮತ್ತು ಆಡಳಿತವನ್ನು ನಡೆಯಿಸುವ ಕೆಲಸವನ್ನು ಮಾಡುತ್ತದೆ. ಮೇಲಾಗಿ ಕಾಮನ್ಸ ಸಭೆಯಲ್ಲಿ ಬಹುಸಂಖ್ಯವಾಗಿರುವ ಪಕ್ಷದ ಮುಖಂಡರಿಂದ ಇದರ ರಚನೆಯಾಗಿರುವುದರಿಂದ ಹೊಸ ಕಟ್ಟಳೆಯನ್ನು ನಿರ್ಮಿಸುವ ಮತ್ತು ಹಳೆ ಯದರಲ್ಲಿ ತಿದ್ದುಪಡೆಮಾಡುವ ಮುಂತಾದ ವಿಷಯದ ಬಿಲ್ಲುಗಳೆಲ್ಲ ಕಬಿನೆಟಿ ನಿಂದಲೆ ಸೂಚಿಸಲಾಗುತ್ತದೆ. ಅದೇ ಮೇರೆಗೆ ವಾರ್ಷಿಕ ಆಯವ್ಯಯದ ಮುಂಗಡ ಪತ್ರಿಕೆಯನ್ನು ಸಿದ್ಧಪಡಿಸಿ ಆ ವಿಷಯದ ಬಿಲ್ಲನ್ನು ಕಾಮನ್ಸ ಸಭೆಯಲ್ಲಿ ಸಂಘಟಿತವಾಗಿ ಇರಿಸುವ ಕೆಲಸವನ್ನಾದರೂ ಕಬಿನೆಟು ಮಾಡುತ್ತದೆ.

**ಕಬಿನೆಟ್ ಪದ್ಧತಿಯ ವೈಶಿಷ್ಟ್ಯ**—ಇಂಗ್ಲಂಡಿನಲ್ಲಿ ಕಬಿನೆಟ್ ಪದ್ಧತಿ ಹೇಗೆ ಬಳಕೆಯಲ್ಲಿ ಬಂದಿತು ಎಂಬುದರ ವೃತ್ತಾಂತವು 'ಇಂಗ್ಲಂಡಿನ ರಾಜ್ಯಘಟನೆಯ ವಿಕಾಸವು' ಎಂಬ ಭಾಗದಲ್ಲಿ ವಿವರಿಸಲಾಗಿದೆ. ಅದರ ವೈಶಿಷ್ಟ್ಯವನ್ನು ಮಾತ್ರ ಈ ಕೆಳಗೆ ಕಾಣಿಸಲಾಗಿದೆ.

(೧) ಕಬಿನೆಟಿನ ಅಧಿವೇಶನದ ಸಮಯದಲ್ಲಿ ಅರಸನು ಬಾರದಿರುವುದು—ಅರಸನಿಗೆ ಆಡಳಿತದಲ್ಲಿ ಆಲೋಚನೆ ಹೇಳಲು ಈ ಮಂಡಲವು ಏರ್ಪಟ್ಟಿದ್ದರೂ ಅದರ ಅಧಿವೇಶನದ ಸಮಯದಲ್ಲಿ ಅರಸನು ಉಪಸ್ಥಿತನಿರುವುದಿಲ್ಲ. ಅದರಿಂದ ಎಲ್ಲ ಮಂತ್ರಿಗಳು ಬಿಚ್ಚು ಮನಸ್ಸಿನಿಂದ ಚರ್ಚಿಸಲು ಅವಕಾಶವು ದೊರೆಯುತ್ತದೆ.

(೨) ಮುಖ್ಯಮಂತ್ರಿಯ ನಾಯಕತ್ವ—ಕಬಿನೆಟಿನ ಅಧಿವೇಶನಕ್ಕೆ ಮುಖ್ಯ ಮಂತ್ರಿ ಅಧ್ಯಕ್ಷನಾಗಿರುವನು. ಆತನ ನಾಯಕತ್ವದಲ್ಲಿಯೇ ಮಂಡಲದ ಎಲ್ಲ ಚರ್ಚೆಗಳು ನಡೆವುವು. ಯಾವುದೇ ಒಂದು ವಿಷಯವನ್ನು ಕುರಿತು ಮಂತ್ರಿಗಳಲ್ಲಿ

ಮತಭೇದವಿದ್ದರೂ ಎಲ್ಲ ಚರ್ಚೆ ಮುಗಿದು ಅದರ ವಿಷಯದಲ್ಲಿ ನೀತಿ ನಿಶ್ಚಿತವಾದ ಬಳಿಕ ಆ ನೀತಿ ಇಡಿಯ ಕಬಿನೆಟಿನದೆಂದು ತಿಳಿಯಲಾಗುತ್ತದೆ, ಮತ್ತು ಎಲ್ಲ ಮಂತ್ರಿಗಳು ಅದನ್ನು ಅನುಸರಿಸಿ ಕಾರ್ಯವನ್ನು ನಿರ್ವಹಿಸಬೇಕಾಗುತ್ತದೆ. ಯಾವನೊಬ್ಬ ಮಂತ್ರಿಗೆ ಈ ನೀತಿ ಸಮ್ಮತವಾಗದಿದ್ದರೆ ಅವನು ತನ್ನ ಅಧಿಕಾರವನ್ನು ಬಿಡಬೇಕಾಗುತ್ತದೆ. ಮುಖ್ಯ ಮಂತ್ರಿಯ ಕಡೆಗೆ ಆಡಳಿತದ ಒಂದೇ ವಿಭಾಗವಿದ್ದರೂ ಎಲ್ಲ ವಿಭಾಗಗಳನ್ನು ಆತನು ಮೇಲ್ವಿಚಾರಿಸುವನು. ಅದೇ ಮೇರೆಗೆ ಪರರಾಷ್ಟ್ರೀಯ ವಿಷಯಕವಾದ ಪತ್ರವ್ಯವಹಾರವನ್ನು ಪರರಾಷ್ಟ್ರೀಯ ಮಂತ್ರಿ ಆತನ ಅನುಮತಿಯಿಂದಲೆ ನಡೆಯಿಸುವನು. ಮುಖ್ಯ ಮಂತ್ರಿ ಕಾಮನ್ಸ ಸಭೆಯ ಸದಸ್ಯನಾಗಿರುವನು. ಆ ಸಭೆಯಲ್ಲಿ ಸರಕಾರದ (ಕಬಿನೆಟಿನ) ನೀತಿಯನ್ನು ಪಾರ್ಲಿಮೆಂಟಿನ ಮುಂದೆ ಪ್ರತಿಪಾದಿಸುವ ಕೆಲಸವನ್ನು ಆತನು ಮಾಡುವನು ಮತ್ತು ಬೇರೆ ಮಂತ್ರಿಗಳಿಂದ ಮಾಡಿಸುವನು. ಯಾವುದೊಂದು ವಿಷಯದಲ್ಲಿ ಕಬಿನೆಟಿನ ನೀತಿ ಹೇಗಿರುವುದೆಂಬುದನ್ನು ಅರಸನಿಗೆ ಅರಿಕೆಮಾಡುವುದು ಮತ್ತು ಆ ವಿಷಯದಲ್ಲಿಯ ಅರಸನ ಅಭಿಪ್ರಾಯವನ್ನು ಕಬಿನೆಟಿಗೆ ತಿಳಿಸುವುದು ಮುಂತಾದ ಸಂದರ್ಭಗಳು ಮುಖ್ಯ ಮಂತ್ರಿಯ ಮುಖಾಂತರವೆ ನಡೆವುವು. ಅರಸನು ಈತನ ಆಲೋಚನೆಯಂತೆಯೆ ಸಾಮ್ರಾಜ್ಯದ ದೇಶಗಳ ಮೇಲೆ ಮುಖ್ಯಾಧಿಕಾರಿಗಳನ್ನು ನಿಯೋಜಿಸುವನು. ಮುಖ್ಯ ಮಂತ್ರಿ ಮತ್ತು ಬೇರೆ ಮಂತ್ರಿಗಳು ಅರಸನ ಹೆಸರಿನಿಂದಲೆ ಆಡಳಿತವನ್ನು ನಡೆಯಿಸುವರು. ಪರರಾಷ್ಟ್ರೀಯ ವಿಷಯಗಳಲ್ಲಿ ಮುಖ್ಯ ಮಂತ್ರಿಯೆ ರಾಷ್ಟ್ರದ ಪ್ರತಿನಿಧಿಯೆಂದು ತಿಳಿಯಲ್ಪಡುವನು. ಈ ಮೇರೆಗೆ ಮುಖ್ಯ ಮಂತ್ರಿಯ ಸ್ಥಾನವು ಹಿರಿದಾಗಿರುತ್ತದೆ.

(೩) ಕಬಿನೆಟು ಪಾರ್ಲಿಮೆಂಟಿನ ಕಾಮನ್ಸ ಸಭೆಗೆ ಹೊಣೆಯಾಗಿರುತ್ತದೆ.

(೪) ಕಬಿನೆಟಿನಲ್ಲಿಯ ಎಲ್ಲ ಮಂತ್ರಿಗಳು ಸಾಮಾನ್ಯವಾಗಿ ಒಂದೆ ಪಕ್ಷಕ್ಕೆ ಸೇರಿದವರು ಆಗಿರುತ್ತಾರೆ. ಅವಶ್ಯವಿದ್ದಲ್ಲಿ ಎರಡು ಇಲ್ಲವೆ ಮೂರು ಪಕ್ಷಗಳಲ್ಲಿಯ ಪ್ರಮುಖರಿಂದ ಕೂಡಿದ 'ಮಿಶ್ರ' ಇಲ್ಲವೆ 'ರಾಷ್ಟ್ರೀಯ' ಕಬಿನೆಟು ಸ್ಥಾಪಿಸಲಾಗುತ್ತದೆ.

(೫) ಸಾಮೂಹಿಕ ಹೊಣೆಗಾರಿಕೆ— ಕಬಿನೆಟಿನ ಬೇರೆ ಬೇರೆ ಮಂತ್ರಿಗಳ ಕಡೆಗೆ ಬೇರೆ ಬೇರೆ ಆಡಳಿತದ ವಿಭಾಗಗಳು ಇದ್ದು ಆ ಆ ಮಂತ್ರಿಗಳು ತಮ್ಮ ತಮ್ಮ ವಿಭಾಗದ ಕೆಲಸವನ್ನು ನೆರವೇರಿಸುವರು. ಆದರೆ ಅವರ ಮೇಲೆ ಸಾಮೂಹಿಕ ಹೊಣೆಗಾರಿಕೆಯೂ ಇರುತ್ತದೆ. ಯಾವುದೊಂದು ವಿಭಾಗದ

ನೀತಿಗೆ ವಿರೋಧವಾಗಿ ಕಾಮನ್ಸ ಸಭೆಯಲ್ಲಿ ಬಹುಮತವಿದ್ದರೆ ಆ ವಿಭಾಗದ ಮಂತ್ರಿಯಷ್ಟೆ ಅಧಿಕಾರತ್ಯಾಗಮಾಡದೆ ಕಬಿನೆಟ್ ಮತ್ತು ಮಿನಿಸ್ಟ್ರಿಯಲ್ಲಿಯ ಎಲ್ಲ ಮಂತ್ರಿಗಳೂ ಅಧಿಕಾರ ತ್ಯಾಗಮಾಡುವರು.

**ಕಬಿನೆಟಿನ ರಚನೆ**— ಕಬಿನೆಟಿನಲ್ಲಿ ಸಾಮಾನ್ಯವಾಗಿ ಕೆಳಗೆ ಕಾಣಿಸಿದಂತೆ ೨೦-೨೨ ಮಂತ್ರಿಗಳು ಇರುವರು. (೧) ಬೊಕ್ಕಸದ ಪ್ರಥಮ ಲಾರ್ಡ (First Lord of the Treasury) ಎಂಬ ವರಿಷ್ಠ ಅಧಿಕಾರಿಯ ಸಾಹಾಯ್ಯಕ್ಕೆ ಬೇರೆ ಅಧಿಕಾರಿಗಳು ಇರುತ್ತಾರೆ. ಆದುದರಿಂದ ಆತನಿಗೆ ಕೆಲಸವು ಬಹಳ ಕಡಿಮೆ ಇರುತ್ತದೆ. ಮುಖ್ಯ ಮಂತ್ರಿಗೆ ತನ್ನ ವಿಭಾಗದ ಕೆಲಸವನ್ನು ತೂಗಿಸಿ ಬೇರೆ ವಿಭಾಗಗಳನ್ನು ಪರಿಶೀಲಿಸಬೇಕಾಗುತ್ತದೆ. ಆದುದರಿಂದ ಮುಖ್ಯ ಮಂತ್ರಿ ಸಾಮಾನ್ಯವಾಗಿ ಬೊಕ್ಕಸದ ಪ್ರಥಮ ಲಾರ್ಡನ ಕೆಲಸವನ್ನು ತನ್ನ ಕಡೆಗೆ ಇಟ್ಟುಕೊಳ್ಳುತ್ತಾನೆ.

(೨) ಲಾರ್ಡ ಹಾಯ್ ಚನ್ಸೆಲರ್ (Lord High Chancellor)— ಈತನು ಕಟ್ಟಳೆ ಮತ್ತು ನ್ಯಾಯ ಈ ರಾಜ್ಯಾಂಗಗಳ ಮಂತ್ರಿಯಾಗಿರುವನು. ನ್ಯಾಯವಿಭಾಗದಲ್ಲಿಯ ದೊಡ್ಡ ದೊಡ್ಡ ಅಧಿಕಾರಿಗಳನ್ನು ನೇಮಿಸುವ ಕೆಲಸವು ಈತನ ಕಡೆಗೆಯೆ ಇರುತ್ತದೆ. ಈತನು ಲಾರ್ಡ್ಸ ಸಭೆಯ ಅಧ್ಯಕ್ಷನಾಗಿರುವನು.

(೩) ಚನ್ಸೆಲರ್ ಆಫ್ ದಿ ಎಕ್ಸಚೆಕರ (Chancellor of the Exchequer) – ವಾರ್ಷಿಕ ವೆಚ್ಚದ ಮುಂಗಡ ಪತ್ರಿಕೆಯನ್ನು ಸಿದ್ಧಪಡಿಸಿ ಅದನ್ನು ಪಾರ್ಲಿಮೆಂಟಿನಲ್ಲಿ ಪುರಸ್ಕರಿಸುವ ಕೆಲಸವು ಈತನ ಕಡೆಗೆ ಇರುತ್ತದೆ.

(೪) ಆಂತರಿಕ ವಿಷಯಗಳ ಕಾರ್ಯದರ್ಶಿ (Secretary of State for Home Affairs) — ಸೆರೆಮನೆ, ಪೋಲಿಸ್ ಮುಂತಾದ ವಿಷಯಗಳ ಕೆಲಸಗಳು ಈ ಮಂತ್ರಿಯ ವಶದಲ್ಲಿ ಇರುವುವು.

(೫) ಪರರಾಷ್ಟ್ರೀಯ ವಿಷಯಗಳ ಕಾರ್ಯದರ್ಶಿ (Secretary of State for Foreign Affairs).

(೬) ಡೊಮಿನಿಯನ್ ಸೆಕ್ರೆಟರಿ (Secretary of State for Dominions) — ಸ್ವರಾಜ್ಯದ ಹಕ್ಕುಗಳು ದೊರೆತಿರುವ ಸ್ವಾಯತ್ತ ಉಪನಿವೇಶಗಳ ಕಾರ್ಯದರ್ಶಿ.

(೭) ಉಪನಿವೇಶಗಳ ಕಾರ್ಯದರ್ಶಿ (Secretary of State for Colonies) – ಮಿಕ್ಕ ಉಪನಿವೇಶಗಳ ಮತ್ತು ಹಿಂದುಸ್ಥಾನವನ್ನುಳಿದು ಬ್ರಿಟಿಶ್ ಸಾಮ್ರಾಜ್ಯದ ಬೇರೆ ಬೇರೆ ದೇಶಗಳ ಕಾರ್ಯದರ್ಶಿ.

(೮) ಭಾರತ ಮಂತ್ರಿ (Secretary of State for India).

(೯) ಸ್ಕಾಟ್‌ಲಂಡಿನ ಕಾರ್ಯದರ್ಶಿ.

(೧೦) ಐರ್ಲಂಡಿನ ಕಾರ್ಯದರ್ಶಿ.

(೧೧) ಸಂಗ್ರಾಮ ಕಾರ್ಯದರ್ಶಿ (Secretary of State for War)–ದೇಶದ ಸಂರಕ್ಷಣೆಗೋಸುಗ ಸೇನೆಯನ್ನು ಸಜ್ಜಾಗಿರಿಸಿ ಅದರಲ್ಲಿ ಕಟ್ಟು ನಿಟ್ಟನ್ನು ಏರ್ಪಡಿಸುವ ಮುಂತಾದ ಕೆಲಸಗಳು ಈತನ ವಶದಲ್ಲಿ ಇರುವವು.

(೧೨) ವೈಮಾನಿಕ ಕಾರ್ಯದರ್ಶಿ (Secretary of State for Air)–ದೇಶದ ಸಂರಕ್ಷಣೆಗೋಸುಗ ವೈಮಾನಿಕ ದಲವನ್ನು ಸಜ್ಜಾಗಿರಿಸುವುದು.

(೧೩) ಹಡಗುಪಡೆಯ ಮಂತ್ರಿ (First Lord of the Admiralty)—ದೇಶದ ಸಂರಕ್ಷಣಕ್ಕಾಗಿ ಹಡಗುಪಡೆಯನ್ನು ಸುಸಜ್ಜಿತವಾಗಿಡುವುದು.

(೧೪) ವ್ಯಾಪಾರ ವಿಷಯಕ ಸಮಿತಿಯ ಅಧ್ಯಕ್ಷ (President of the Board of Trade).

(೧೫) ಶಿಕ್ಷಣ ಸಮಿತಿಯ ಅಧ್ಯಕ್ಷ (President of the Board of Education).

(೧೬) ಕೃಷಿ ಸಮಿತಿಯ ಅಧ್ಯಕ್ಷ.

(೧೭) ಆರೋಗ್ಯಮಂತ್ರಿ.

(೧೮) ಲಾರ್ಡ ಪ್ರಿವಿ ಸೀಲ್–ರಾಷ್ಟ್ರದ ಮುದ್ರೆ ಈ ಮಂತ್ರಿಯ ವಶ ದಲ್ಲಿರುವುದು.

(೧೯) ಅಟಾರ್ನಿ ಜನರಲ್ (Attorney General)—ಕಟ್ಟಳೆಯನ್ನು ಕುರಿತು ಆಲೋಚನೆ ಹೇಳುವ ಕೆಲಸವು ಈ ಮಂತ್ರಿಯ ಕಡೆಗೆ ಇರುತ್ತದೆ.

(೨೦) ಪೋಸ್ಟಮಾಸ್ಟರ್ ಜನರಲ್.

(೨೧) ಚನ್ಸಲರ್ ಆಫ್ ದಿ ಡಚಿ ಆಫ್ ಲಂಕೆಸ್ಟರ್.

(೨೨) ಸ್ಥಾನಿಕ ಸ್ವರಾಜ್ಯ ಮಂತ್ರಿ.

## ಸ್ಥಿರ ವರಿಷ್ಠ ಸೇವಕವರ್ಗ (Permanent Civil Service).

ಕೆಬಿನೆಟು ಪಾರ್ಲಿಮೆಂಟಿಗೆ ಹೊಣೆಯಾಗಿರುವುದರಿಂದ ಅದಕ್ಕೆ ಕಾಮನ್ಸ ಸಭೆಯ ಬೆಂಬಲವಿಲ್ಲದಾಗಲು ಅದು ಬದಲಾಗಿ ಕಾಮನ್ಸ ಸಭೆಯ ವಿಶ್ವಾಸ ವನ್ನು ಪಡೆದಿರುವ ಹೊಸ ಕಬಿನೆಟಿನ ಸ್ವಾಧೀನಕ್ಕೆ ಹೊಸ ಆಡಳಿತದ ಸೂತ್ರವು ಹೋಗುತ್ತದೆ. ಆದರೆ ಮೇಲಿಂದ ಮೇಲೆ ಆಗುತ್ತಿರುವ ಈ ಸ್ಥಿತ್ಯಂತರಗಳಿಂದ

ಆಡಳಿತದ ನಿತ್ಯದ ವ್ಯವಹಾರಗಳಿಗೆ ಆತಂಕವಾಗಬಾರದೆಂದು ಸ್ಥಿರವಾದ ವರಿಷ್ಠ ಸೇವಕವರ್ಗವು ನಿಯೋಜಿಸಲ್ಪಟ್ಟಿರುತ್ತದೆ. ಇಂತಹ ಅಧಿಕಾರಿಗಳನ್ನು ಅವರ ರಾಜಕೀಯ ಮತಗಳನ್ನು ವಿಚಾರಿಸಿ ಇಲ್ಲವೆ ರಾಜಕೀಯ ಪಕ್ಷದಲ್ಲಿ ಅವರ ವರ್ಚಸ್ಸು ಎಷ್ಟಿದೆಂಬುದನ್ನು ನೋಡಿ ನಿಯೋಜಿಸಿರುವುದಿಲ್ಲ. ಸ್ಪರ್ಧಾ ಪರೀಕ್ಷೆಗಳನ್ನು ಏರ್ಪಡಿಸಿ ಅವುಗಳಲ್ಲಿ ಮೇಲು ತರಗತಿಗೆ ಬಂದವರನ್ನೇ ಇಂತಹ ಅಧಿಕಾರಿಗಳಾಗಿ ಆರಿಸುತ್ತಾರೆ. ಇದರಿಂದ ಬುದ್ಧಿವಂತರು, ಚತುರರು ಮತ್ತು ಕರ್ತವ್ಯದಕ್ಷರು ಆದ ಜನರೇ ಈ ಸ್ಥಳಗಳಿಗೆ ಬರುತ್ತಾರೆ. ಬಳಿಕ ಅವರು ಕೆಲಸದ ಅನುಭವವನ್ನು ಪಡೆದು ಪಾರಂಗತರಾಗುತ್ತಾರೆ. ಕಬಿನೆಟು ನಿಶ್ಚಯಿಸಿದ ನೀತಿಯನ್ನು ಅನುಸರಿಸಿ ಆಡಳಿತವನ್ನು ಸಾಗಿಸುವುದೆ ಇವರ ಕೆಲಸ. ಈ ಅಧಿಕಾರಿಗಳಲ್ಲಿ ಯಾರು ಅನುಭವದಿಂದ, ಕಾರ್ಯತತ್ಪರತೆಯಿಂದ, ಕರ್ತವ್ಯದಕ್ಷತೆಯಿಂದ ಮತ್ತು ಬುದ್ಧಿಚಾತುರ್ಯದಿಂದ ಯೋಗ್ಯತಾಸಂಪನ್ನರಾಗಿರುವರು ಅವರು ಯಾವುದೊಂದು ವಿಭಾಗದ ಸ್ಥಿರವಾದ ದ್ವಿತೀಯ ಕಾರ್ಯದರ್ಶಿತ್ವದ ಸ್ಥಾನದ ವರೆಗೆ (Permanent Under-Secretary) ಏರುವರು. ಎರಡನೆಯ ಉಪಕಾರ್ಯದರ್ಶಿ (Parliamentary Under-Secretary) ಮತ್ತು ಕಬಿನೆಟ್ ಮತ್ತು ಮಿನಿಸ್ಟ್ರಿಯಲ್ಲಿಯ ಮಂತ್ರಿಗಳು ತಮ್ಮ ಅಧಿಕಾರಕ್ಕೆ ತ್ಯಾಗಪತ್ರವನ್ನು ಕೊಡುವ ಪ್ರಸಂಗವು ಒದಗಿದರೂ ವರಿಷ್ಠ ಸೇವಕವರ್ಗವು ತನ್ನ ಸ್ಥಾನದಲ್ಲಿಯೆ ನಿಲ್ಲುವುದು. ಇದರಿಂದ ಆಡಳಿತವು ಸುಸೂತ್ರವಾಗಿ ನಡೆವುದು.

## ನ್ಯಾಯವಿಭಾಗ.

**ನ್ಯಾಯವಿಭಾಗ** – ಪಾರ್ಲಿಮೆಂಟು ಮಾಡಿದ ಕಟ್ಟಳೆಗಳನ್ನು ಮತ್ತು ಪಾರ್ಲಿಮೆಂಟಿಗೆ ಮಾನ್ಯವಾಗಿರುವ ಹಳೆಯ ರೂಢಿಗಳನ್ನು ಪರ್ಯಾಲೋಚಿಸಿ ನ್ಯಾಯವನ್ನು ಕೊಡುವ ವಿಭಾಗಕ್ಕೆ ನ್ಯಾಯವಿಭಾಗ (Judiciary) ಎನ್ನುವರು. ಇಂಗ್ಲಂಡಿನ ರಾಜ್ಯಘಟನೆಯಲ್ಲಿ ರಾಜ, ಲಾರ್ಡ್ಸ ಸಭೆ, ಪ್ರಿವಿ ಕೌನ್ಸಿಲಿನ ನ್ಯಾಯಸಮಿತಿ, ಸುಪ್ರೀಮ್ ಕೋರ್ಟ್ ಆಫ್ ಜ್ಯುಡಿಕೇಚರ ಈ ಸಂಸ್ಥೆಗಳ ಮುಖಾಂತರವಾಗಿ ನ್ಯಾಯಕೊಡುವ ಕೆಲಸವು ನಡೆವುದು. ಇವುಗಳಲ್ಲದೆ ಮುಖ್ಯವಾದ ಈ ಸಂಸ್ಥೆಗಳ ಮೇಲ್ವಿಚಾರಣೆಯಲ್ಲಿ ನ್ಯಾಯದಾನದ ಬೇರೆ ನ್ಯಾಯಸ್ಥಾನಗಳೂ ಉಂಟು.

**ರಾಜನು** – ರಾಜನು ನ್ಯಾಯದ ಉಗಮಸ್ಥಾನವಾಗಿರುವನು (Fountain of Justice). ತಾತ್ವಿಕವಾಗಿ ನ್ಯಾಯ ಮತ್ತು ಕ್ಷಮಾದಾನದ ಉಚ್ಚ

## ಇಂಗ್ಲೆಂಡಿನ ಸದ್ಯದ ರಾಜ್ಯಘಟನೆ

- ರಾಜ
  - ನ್ಯಾಯದಾನ
    - ರಾಜ
      - ಪ್ರಿವಿ ಕೌನ್ಸಿಲಿನ ನ್ಯಾಯಸಮಿತಿ
      - ಲಾರ್ಡ್ಸ ಸಭೆ
        - ಸುಪ್ರೀಮ್ ಕೋರ್ಟ್ ಆಫ್ ಜ್ಯುಡಿಕೇಚರ
          - ಕೋರ್ಟ್ ಆಫ್ ಅಪೀಲ್ ಮತ್ತು ಹಾಯ್‌ಕೋರ್ಟ್ ಆಫ್ ಜಸ್ಟಿಸ್
            - ದಿವಾಣಿ ವ್ಯವಹಾರಗಳಲ್ಲಿ
              - ಕೌಂಟಿ ಕೋರ್ಟುಗಳು
            - ಫೌಜದಾರಿ ವ್ಯವಹಾರಗಳಲ್ಲಿ
              - ಜಸ್ಟಿಸ್ ಆಫ್ ದಿ ಪೀಸ್ ಇವರ ಪೆಟಿ ಸೆಶನ್ಸ ಕೋರ್ಟುಗಳು
  - ಕಟ್ಟಳೆ ಮಾಡುವುದು
    - ಪಾರ್ಲಿಮೆಂಟ್
      - ರಾಜ
      - ಲಾರ್ಡ್ಸ ಸಭೆ (ಸು. ೭೪೦ ಸದಸ್ಯರು)
      - ಕಾಮನ್ಸ ಸಭೆ (೬೧೫ ಸದಸ್ಯರು)
  - ಕಾರ್ಯನಿರ್ವಾಹ
    - ಕೆಬಿನೆಟ್ (ಪ್ರಿವಿ ಕೌನ್ಸಿಲಿನ ಸಮಿತಿ)
      - ಮುಖ್ಯ ಮಂತ್ರಿ
      - ಡೊಮಿನಿಯನ್ ಸೆಕ್ರೆಟರಿ
        - ಸ್ವಾಯತ್ತ ಉಪನಿವೇಶಗಳ ಗವರ್ನರ ಜನರಲ್
      - ಬೇರೆ ರಾಜ್ಯಾಂಗ ಮಂತ್ರಿಗಳು
      - ಹಿಂದುಸ್ಥಾನದ ಸೆಕ್ರೆಟರಿ
        - ವಾಯಿಸರಾಯ

42*

ತಮ ಅಧಿಕಾರವು ರಾಜನ ವಶದಲ್ಲಿ ಇರುವುದು. ಆದರೆ ರಾಜನು ಪ್ರತ್ಯಕ್ಷ ವಾಗಿ ಆಡಳಿತವನ್ನು ನಡೆಯಿಸುವುದಿಲ್ಲ. ಆದುದರಿಂದ ನ್ಯಾಯದಾನದ ಸಂದರ್ಭದಲ್ಲಿ ಕಬಿನೆಟಿನ ಲಾರ್ಡ್ ಹಾಯ್ ಚನ್ಸಲರ್ ಎಂಬ ಅಧಿಕಾರಿ ರಾಜನ ಹೆಸರಿನಿಂದ ನ್ಯಾಯಕೊಡುವ ವ್ಯವಸ್ಥೆಯನ್ನು ನೋಡುವನು. ನ್ಯಾಯವಿಭಾಗ ದಲ್ಲಿಯ ಲಾರ್ಡ ಚೀಫ್ ಜಸ್ಟಿಸನೊಬ್ಬನನ್ನು ಉಳಿದು ಇತರ ನ್ಯಾಯಾಧೀಶ ರನ್ನು ಈ ಮಂತ್ರಿಯೆ ನಿಯೋಜಿಸುವನು.

**ನ್ಯಾಯದಾನದ ಪ್ರಮುಖ ಸಂಸ್ಥೆಗಳು**—ನ್ಯಾಯದಾನದ ಅತ್ಯುಚ್ಚ ನ್ಯಾಯಾಸನವು **ಲಾರ್ಡ್ಸ ಸಭೆ**. ಇದರ ಕೆಳಗೆ **ಸುಪ್ರೀಮ್ ಕೋರ್ಟ್ ಆಫ್ ಜ್ಯುಡಿಕೇಚರ** ಎಂಬ ನ್ಯಾಯಾಸನವು ಇರುವುದು. ಇದರಲ್ಲಿ **ಕೋರ್ಟ್ ಆಫ್ ಅಪೀಲ್** ಮತ್ತು **ಹಾಯ್‌ಕೋರ್ಟ್ ಆಫ್ ಜಸ್ಟಿಸ್** ಹೀಗೆ ಎರಡು ಭಾಗ ಗಳು ಇರುತ್ತವೆ. ಈ ನ್ಯಾಯಾಸನಕ್ಕೆ ಕೆಳಗಿನ ದಿವಾಣಿ ಮತ್ತು ಫೌಜದಾರಿ ಕೋರ್ಟುಗಳ ನಿರ್ಣಯಗಳ ವಿರುದ್ಧವಾಗಿ ಅಪೀಲುಗಳನ್ನು ಕೇಳುವ, ಮತ್ತು ದಿವಾಣಿವಿಷಯದಲ್ಲಿ ಘನವಾದ ಧನವಿಚಾರದ ಮತ್ತು ಮಹತ್ವದ ವಿವಾದ ಗಳನ್ನು ಮತ್ತು ಫೌಜದಾರಿ ವಿಷಯದಲ್ಲಿ ಕೊಲೆಯಂತಹ ಭಯಂಕರ ಸ್ವರೂಪದ ವ್ಯಾಜ್ಯಗಳನ್ನು ವಿಚಾರಿಸುವ ಕೆಲಸವು ಒಪ್ಪಿರುತ್ತದೆ. ಈ ಹಾಯ್‌ಕೋರ್ಟಿನ ಕೆಳಗಿನ ತರಗತಿಯಲ್ಲಿ ದಿವಾಣಿ ಭಾಗದ **ಕೌಂಟಿ ಕೋರ್ಟುಗಳು** ಮತ್ತು ಫೌಜ ದಾರಿ ಭಾಗದ ಜಸ್ಟಿಸೆಸ್ ಆಫ್ ದಿ ಪೀಸ್ ಇವರ ಪೆಟಿ ಸೆಶನ್ಸ ಕೋರ್ಟುಗಳು ಇರುತ್ತವೆ.

---

## ಸಾರಾಂಶವು

ಇಂಗ್ಲಂಡಿನ ರಾಜ್ಯಘಟನೆ—ಇಂಗ್ಲಂಡಿನ ರಾಜ್ಯಘಟನೆಯಲ್ಲಿ ರಾಜನು, ಪಾರ್ಲಿಮೆಂಟು, ಕಬಿನೆಟ್ (ಪ್ರಿವಿ ಕೌನ್ಸಿಲಿನ ಸಮಿತಿ) ಮತ್ತು ನ್ಯಾಯಸಭೆಗಳ (ಲಾರ್ಡ್ಸ ಸಭೆ ಮತ್ತು ಸುಪ್ರೀಮ್ ಕೋರ್ಟ್ ಆಫ್ ಜ್ಯುಡಿಕೇಚರ) ಇವು ಪ್ರಮುಖ ಸಂಸ್ಥೆಗಳು ಆಗಿವೆ.

ಇಂಗ್ಲಂಡಿನ ಸದ್ಯದ ರಾಜ್ಯಘಟನೆ ಒಂದೆ ಕಟ್ಟಳೆಯಿಂದ ನಿರ್ಧರಿಸಲಾಗಿಲ್ಲ. ಬೇರೆ ಬೇರೆ ಸಂಸ್ಥೆಗಳ ಉತ್ಕ್ರಾಂತಿಯಾಗಿ ಅದಕ್ಕೆ ಈ ಸ್ವರೂಪವು ಬಂದಿದೆ.

ಇಂಗ್ಲಂಡಿನ ರಾಜ್ಯಘಟನೆಯ ವಿಕಾಸವು—ಆಂಗ್ಲೋ ಸೆಕ್ಸನ್ ಅರಸರ ಕಾಲದ ವಿಟೆನಗೆಮಾಟ ಎಂಬ ಆಲೋಚನಾಮಂಡಲ. ನಾರ್ಮನರ ಆಳಿಕೆಯಲ್ಲಿಯ ಗ್ರೇಟ್ ಕೌನ್ಸಿಲ್ ಮತ್ತು ಅದರಲ್ಲಿ ಸರಂಜಾಮಿ ಸರದಾರರು. ಈ ಸರದಾರರು ಜನಸಾಮಾನ್ಯರ ಸಾಹಾಯ್ಯವನ್ನು ಪಡೆದುಕೊಂಡು ಜಾನ್ ರಾಜನಿಂದ 'ಮೆಗ್ನಾ ಚಾರ್ಟಾ' ಸನದನ್ನು

ಗಳಿಸಿದರು (೧೨೧೫). ೧ನೆಯ ಎಡ್ವರ್ಡನು ಸಾಯಮನ್ ಡಿ ಮೊಂಟಫೋರ್ಡನ ಯೋಜನೆಯಂತೆ ಹಣವನ್ನು ಕೂಡಿಸಲು ಅನುಕೂಲವಾಗಬೇಕೆಂದು ಪರಗಣೆಗಳ ಮತ್ತು ನಗರಗಳ ಪ್ರತಿನಿಧಿಗಳನ್ನು ಕರೆದು ಮಾದರಿಯ ಪಾರ್ಲಿಮೆಂಟನ್ನು ನೆರೆಯಿಸಿದನು (೧೨೯೫). ೧೩೩೦ರಲ್ಲಿ ಇದರಲ್ಲಿ ಲಾರ್ಡ್ಸ ಮತ್ತು ಕಾಮನ್ಸ ಹೀಗೆ ಎರಡು ಸಭೆಗಳು ಏರ್ಪಟ್ಟುವು. ಅರಸನು ತಾನು ನಿಯೋಜಿಸಿದ ಕೌನ್ಸಿಲಿನ ಮುಖಾಂತರವಾಗಿ ಆಡಳಿತವನ್ನು ನಡೆಯಿಸುತ್ತಿದ್ದನು. ಅದಕ್ಕೆ ೧೪೦೦ರಲ್ಲಿ ಪ್ರಿವಿ ಕೌನ್ಸಿಲ್ ಎಂಬ ಹೆಸರು ಬಂದಿತು. ಲಂಕೆಸ್ಟರ ಮನೆತನದ ಆಳಿಕೆಯಲ್ಲಿ ಪಾರ್ಲಿಮೆಂಟಿನ ಅಧಿಕಾರವು ಹೆಚ್ಚಿತು. ಮುಂದೆ ಟ್ಯೂಡರರ ಆಳಿಕೆಯಲ್ಲಿ ಅದು ಬಹಳ ಕಡಿಮೆಯಾಗಿ ರಾಜಶಕ್ತಿ ಅನಿಯಂತ್ರಿತವಾಯಿತು. ಆದರೆ ಪಾರ್ಲಿಮೆಂಟಿನ ಸಮ್ಮತಿಯಿಂದಲೆ ಟ್ಯೂಡರ ಅರಸರು ತಮ್ಮ ಅಧಿಕಾರವನ್ನು ಮೆರೆಯಿಸುತ್ತಿದ್ದರು. ಸ್ಟುವರ್ಟರ ಆಳಿಕೆಯಲ್ಲಿ ಅರಸನ ಈಶ್ವರದತ್ತ ಅಧಿಕಾರ ಮತ್ತು ಅದರಿಂದ ಕಟ್ಟಳೆಯನ್ನು ರದ್ದುಗೊಳಿಸುವ ಅರಸನ ಹಕ್ಕು ಈ ಪ್ರಶ್ನೆ ಪ್ರಾಮುಖ್ಯತೆಯನ್ನು ಪಡೆಯಿತು. ೧೬೮೮ರಲ್ಲಿ ನಡೆದ ರಾಜ್ಯಕ್ರಾಂತಿ ಮತ್ತು ಆ ತರುವಾಯ ಮಾನ್ಯವಾದ ಬಿಲ್ ಆಫ್ ರಾಯಿಟ್ಸ (೧೬೮೯) ಕಟ್ಟಳೆಯಿಂದ ಪಾರ್ಲಿಮೆಂಟಿನ ವರ್ಚಸ್ಸು ಸ್ಥಾಪಿತವಾಯಿತು. ಆ ಮೇಲೆ ಬೊಕ್ಕಸದ ಮೇಲೆ ಮತ್ತು ದಂಡಿನ ಮೇಲೆ ಪಾರ್ಲಿಮೆಂಟಿನ ಅಧಿಕಾರವು ನಡೆಯಲಾರಂಭಿಸಿತು. ಇದರಿಂದ ಕೆಬಿನೆಟ್ ಪದ್ಧತಿಯ ಆಡಳಿತದ ಉಪಕ್ರಮ. ೧ನೆಯ ಮತ್ತು ೨ನೆಯ ಜಾರ್ಜರು ಕೆಬಿನೆಟಿನ ಅಧಿವೇಶನಗಳಿಗೆ ಬರಲಾರದಾದುದರಿಂದ ಕೆಬಿನೆಟ ಪದ್ಧತಿಯ ಆಡಳಿತವು ರೂಢಿಗೆ ಬಂದಿತು. ಅದರಲ್ಲಿ ಮುಖ್ಯ ಮಂತ್ರಿಯ ನಾಯಕತ್ವವು ಸ್ಥಾಪಿಸಲ್ಪಟ್ಟಿತು. ೧೮೩೨, ೧೮೬೭, ೧೮೮೪, ೧೯೧೮ ಮತ್ತು ೧೯೨೮ ಈ ವರ್ಷಗಳ ಕಟ್ಟಳೆಗಳಿಂದ ಮತದಾತರ ಸಂಘವು ವಿಶಾಲವಾಗಿ ೧೦೦ರಲ್ಲಿ ೫೦ ಜನರಿಗೆ ಮತದಾನದ ಅಧಿಕಾರವು ಪ್ರಾಪ್ತವಾಯಿತು. ಪಾರ್ಲಿಮೆಂಟಿನ ಲಾರ್ಡ್ಸ ಸಭೆಯ ಅಧಿಕಾರಗಳು ೧೯೧೧ರಲ್ಲಿಯ ಕಟ್ಟಳೆಯಿಂದ ಬಹಳ ಕಡಿಮೆಯಾಗಿ ಕಾಮನ್ಸ ಸಭೆಯ ಮಹತ್ವವು ಬೆಳೆಯಿತು.

## ಇಂಗ್ಲಂಡಿನ ಸದ್ಯದ ರಾಜ್ಯಘಟನೆ

ರಾಜನು — ಕಾಯ್ದೆಯನ್ನು ರಚಿಸುವ, ಕಾರ್ಯನಿರ್ವಾಹವನ್ನು ಮಾಡುವ, ನ್ಯಾಯವನ್ನು ಕೊಡುವ ವಿಷಯದಲ್ಲಿ ಮುಖ್ಯ ಸತ್ತೆ ತಾತ್ವಿಕ ದೃಷ್ಟಿಯಿಂದ ಇಂಗ್ಲಂಡಿನ ರಾಜನದಾಗಿದೆ. ಆದರೆ ಆತನು ಪ್ರತ್ಯಕ್ಷವಾಗಿ ಆಡಳಿತದಲ್ಲಿ ಭಾಗವನ್ನು ವಹಿಸುವುದಿಲ್ಲ. ಆತನು ನಿಯೋಜಿಸಿದ ಮಂತ್ರಿ ಮತ್ತು ಅಧಿಕಾರಿಗಳು ಆತನ ಹೆಸರಿನಿಂದ ಆಡಳಿತವನ್ನು ಸಾಗಿಸುವರು.

ಪಾರ್ಲಿಮೆಂಟ್ — ಕಟ್ಟಳೆ ರಚಿಸುವುದು. ರಾಜನು, ಲಾರ್ಡ್ಸ ಸಭೆ (ಸು. ೭೪೦ ಸದಸ್ಯರು) ಮತ್ತು ಕಾಮನ್ಸ ಸಭೆ (೬೧೫ ಸದಸ್ಯರು). ನ್ಯಾಯದಾನವು ಲಾರ್ಡ್ಸ ಸಭೆಯ ವಿಶೇಷ ಅಧಿಕಾರವು. ಕೆಬಿನೆಟನ್ನು ಹೊಣೆಗಾರವಾಗಿ ಮಾಡುವುದು ಮತ್ತು ಹಣಕ್ಕೆ ಒಪ್ಪಿಗೆ ಕೊಡುವುದು ಕಾಮನ್ಸ ಸಭೆಯ ವಿಶೇಷ ಅಧಿಕಾರವು.

ಕೆಬಿನೆಟ್ — ಕಾರ್ಯನಿರ್ವಾಹ, ಕೆಬಿನೆಟ್, ಪ್ರಿವಿ ಕೌನ್ಸಿಲ್, ಸ್ಥಿರ ಸೇವಕ ವರ್ಗ. ಕೆಬಿನೆಟನಲ್ಲಿ ೧೦-೧೧ ಮಂತ್ರಿಗಳು; ಅವರಿಗೆ ಮುಖ್ಯ ಮಂತ್ರಿ ನಾಯಕನು. ಕೆಬಿನೆಟು ಆಡಳಿತದ ಮುಖ್ಯ ನೀತಿಯನ್ನು ನಿರ್ಧರಿಸುವುದು, ಮತ್ತು ಅದು ಕಾಮನ್ಸ್ ಸಭೆಗೆ ಹೊಣೆಗಾರವಾಗಿರುವುದು.

ನ್ಯಾಯಸ್ಥಾನಗಳು— ಅರಸು, ಲಾರ್ಡ್ಸ ಸಭೆ, ಸುಪ್ರೀಮ್ ಕೋರ್ಟ್ ಆಫ್ ಜ್ಯುಡಿಕೇಚರ(ಕೋರ್ಟ್ ಆಫ್ ಅಪೀಲ್ ಮತ್ತು ಹಾಯ್‌ಕೋರ್ಟ್ ಆಫ್ ಜಸ್ಟಿಸ್) ಇವು ಪ್ರಮುಖ ನ್ಯಾಯಸ್ಥಾನಗಳು. ಇವುಗಳ ಕೆಳತರಗತಿಯಲ್ಲಿ ಕೌಂಟಿ ಕೋರ್ಟ್ ಮತ್ತು ಪೆಟಿ ಸೆಶನ್ ಕೋರ್ಟುಗಳು. ಪ್ರಿವಿ ಕೌನ್ಸಿಲಿನ ನ್ಯಾಯಸಮಿತಿ—ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ದೇಶಗಳಿಂದ ಬರುವ ಅಪೀಲುಗಳನ್ನು ಆಲಿಸುವುದು.

---

# ೩೧ನೆಯ ಪ್ರಕರಣವು

## ರಾಷ್ಟ್ರಸಂಘವು

ರಾಷ್ಟ್ರಸಂಘದ ಆವಶ್ಯಕತೆ—ಕಳೆದ ನೂರು ವರ್ಷಗಳಲ್ಲಿ ಅನೇಕ ಶಾಸ್ತ್ರೀಯ ಶೋಧಗಳು ಆಗಿರುವುವು, ದೂರದೂರದ ಬೇರೆ ಬೇರೆ ರಾಷ್ಟ್ರಗಳಲ್ಲಿ ಪರಸ್ಪರ ಬಳಕೆ ಮಿತಿಮೀರಿ ಬೆಳೆದಿರುವುದು, ವ್ಯಾಪಾರ ಮತ್ತು ಉದ್ಯೋಗಗಳು ಅಭಿವೃದ್ಧಿಯನ್ನು ಪಡೆದಿರುವುವು. ಇದರಿಂದ ಪ್ರಪಂಚದ ಬಹುದೂರದ ಜನಾಂಗಗಳಲ್ಲಿ ವಿಶೇಷವಾದ ಸಂಬಂಧಗಳು ಉಂಟಾಗಿ ಅವು ಒಂದಕ್ಕೊಂದು ಹೆಣೆದುಕೊಂಡಿರುವುವು. ಬೇರೆ ಬೇರೆ ರಾಷ್ಟ್ರಗಳಲ್ಲಿಯ ಸಂಬಂಧವು ಹೆಚ್ಚಾಗಿ ಬೆಳೆದಿದ್ದರೂ ಒಬ್ಬರೊಬ್ಬರ ಹೇತು ಮತ್ತು ನೀತಿಯ ವಿಷಯದಲ್ಲಿ ಸಂದೇಹ ವೃತ್ತಿ ಅಳಿದುಹೋಗಿಲ್ಲ. ಹೊಸ ಶೋಧನೆ ಮತ್ತು ಬಳಕೆಯ ಸಾಧನ ಇವನ್ನು ಜನರ ಸುಖಸೌಲಭ್ಯಗಳನ್ನು ಹೆಚ್ಚಿಸುವುದಕ್ಕೆ ಉಪಯೋಗಿಸಲಾದಂತೆ, ಯುದ್ಧಕ್ಕೆ ಸಾಹಾಯ್ಯವಾಗುವ ವಿನಾಶಕ ಸಾಧನಗಳನ್ನು ಸಿದ್ಧಗೊಳಿಸಲಿಕ್ಕೂ ಉಪಯೋಗಿಸಲಾಯಿತು. ಅದರಿಂದ ರಾಷ್ಟ್ರಗಳಲ್ಲಿಯ ಅನ್ಯೋನ್ಯ ಯುದ್ಧಗಳಿಗೆ ಅತಿ ಭಯಂಕರವಾದ ಸ್ವರೂಪವು ಉಂಟಾಯಿತು. ಇಂತಹ ಯುದ್ಧವು ಸಂಭವಿಸಿದರೆ ಅದರಲ್ಲಿ ತೊಡಗಿದ ರಾಷ್ಟ್ರಗಳಂತೂ ಸರಿ, ತಟಸ್ಥ ರಾಷ್ಟ್ರಗಳಾದರೂ ಕೆಲಮಟ್ಟಿಗೆ ಅದರ ಅನಿಷ್ಟ ಪರಿಣಾಮಗಳಿಗೆ ಗುರಿಯಾಗಬೇಕಾಗುತ್ತದೆ. ಆದುದರಿಂದ ರಾಷ್ಟ್ರರಾಷ್ಟ್ರಗಳಲ್ಲಿಯ ಕಲಹಗಳನ್ನು ಯುದ್ಧದಂತಹ ಭಯಂಕರ ರೀತಿಯಿಂದ ಬಗೆಹರಿಸದೆ, ಸಾಮೋಪಚಾರದಿಂದಲೂ ಒಡಂಬಡಿಕೆಯಿಂದಲೂ ಸಂದಿಸುವಂತಹ ಯೋಜನೆಯೊಂದನ್ನು ಹುಡುಕಬೇಕೆಂದು ರಾಜ್ಯತಂತ್ರ ಚಾಲಕರಿಗೂ ರಾಜಕಾರಣಿಗಳಿಗೂ ಎಣಿಸತೊಡಗಿತು. ಈ ಉದ್ದೇಶದಿಂದ ರಾಷ್ಟ್ರರಾಷ್ಟ್ರಗಳಲ್ಲಿಯ ಕಲಹಗಳನ್ನು ಒಪ್ಪಂದದಿಂದ ನಿರ್ಣಯಿಸಲು ೧೮೯೯ರಲ್ಲಿ ಮತ್ತು ೧೯೦೭ರಲ್ಲಿ ಹಾಲಂಡಿನ ಹೇಗ ಪಟ್ಟಣದಲ್ಲಿ ಆಂತರರಾಷ್ಟ್ರೀಯ ನ್ಯಾಯಸಭೆ ಸ್ಥಾಪಿಸಲಾಯಿತು. ಆದರೆ ತಮ್ಮ ವ್ಯಾಜ್ಯವನ್ನು ಈ ನ್ಯಾಯಸಭೆಯಲ್ಲಿ ತರಬೇಕೆಂದು ಯಾರ ಮೇಲೆಯೂ ಬಂಧನವಿರಲಿಲ್ಲ. ಅಲ್ಲದೆ ಈ ಸಭೆಯಾದರೂ ಬರಿಯ ಆಲೋಚನೆಯನ್ನೇ ಹೇಳುವ ಕೆಲಸವನ್ನು ಮಾಡುತ್ತಿತ್ತು. ಕಳೆದ ಮಹಾಯುದ್ಧದ ಅನಿಷ್ಟ ಪರಿಣಾಮಗಳು ಸಾಮಾನ್ಯವಾಗಿ ಎಲ್ಲ ರಾಷ್ಟ್ರಗಳಿಗೆ ಸೋಂಕಿದುವು. ಆಗ ರಾಷ್ಟ್ರಗಳಲ್ಲಿಯ ಜಗಳಗಳನ್ನು ಪರಿಹರಿಸಿ, ಅನ್ಯೋನ್ಯ

ಸಹಕಾರವನ್ನು ಬೆಳೆಯಿಸುವಂತಹ ಸಂಘವೊಂದನ್ನು ನಿರ್ಮಿಸುವುದು ಎಲ್ಲರಿಗೂ ಆವಶ್ಯಕವೆನಿಸಿತು.

**ರಾಷ್ಟ್ರಸಂಘದ ಸ್ಥಾಪನೆ, ೧೦ ಜಾನೆವರಿ, ೧೯೨೦**—ಕಳೆದ ಮಹಾಯುದ್ಧದಲ್ಲಿ ಬೇರೆ ಬೇರೆ ರಾಷ್ಟ್ರಗಳ, ವರ್ಣಗಳ, ಜಾತಿಗಳ ಮತ್ತು ಧರ್ಮಗಳ ೯೦ ಲಕ್ಷ ಜನರು ಒಟ್ಟಿನಲ್ಲಿ ಮರಣಹೊಂದಿದರು; ೨ ಕೋಟಿ ಜನರು ಗಾಯಗೊಂಡು ಅಂಗಹೀನರಾದರು; ದೊಡ್ಡ ಪ್ರದೇಶಗಳೂ ಪಟ್ಟಣಗಳೂ ಹಾಳಾದುವು; ರೋಗದ ಪಿಡುಗುಗಳು ಉದ್ಭವಿಸಿ ಎಲ್ಲೆಡೆಯಲ್ಲಿಯೂ ಹಬ್ಬಿದುವು; ವ್ಯಾಪಾರವು, ಉದ್ಯೋಗಗಳು, ಪೇಢಿಗಳು ನಿಂತು ದೊಡ್ಡ ದೊಡ್ಡ ರಾಷ್ಟ್ರಗಳು ಕಂಗೆಟ್ಟುವು; ಕೋಟಿಗಟ್ಟಲೆ ಹಣವು ಧ್ವಂಸವಾಯಿತು. ಈ ಯುದ್ಧದಲ್ಲಿ ಒಂದು ಇಂಗ್ಲಂಡಿನ ವೆಚ್ಚವೆ ೧೦೭೫ ಕೋಟಿ ರೂಪಾಯಿ ಆಯಿತು. ಈ ಮಹಾಯುದ್ಧದಲ್ಲಿ ಸಂಭವಿಸಿದ ಮನುಷ್ಯರ ಮತ್ತು ಸಂಪತ್ತಿನ ಘೋರವಾದ ವಿನಾಶವನ್ನು ಕಂಡು ಸೋತ ರಾಷ್ಟ್ರಗಳಂತೆ ಗೆದ್ದ ಮತ್ತು ತಟಸ್ಥ ರಾಷ್ಟ್ರಗಳಿಗೂ ಈ ತರದ ಯುದ್ಧವು ಇನ್ನೊಮ್ಮೆ ಆಗಬಾರದು ಎಂದೆನಿಸಿತು. ಇಂತಹ ಪರಿಸ್ಥಿತಿಯಲ್ಲಿ ವರ್ಸೇಲ್ಸಿನಲ್ಲಿ ಒಡಂಬಡಿಕೆಯಾಗಿ (೨೮ ಜೂನ, ೧೯೧೯) ಈ ಮಹಾಯುದ್ಧವು ನಿಂತ ಬಳಿಕ ಒಡಂಬಡಿಕೆಯಾಗಿ ಬಂದ ಬೇರೆ ಬೇರೆ ರಾಷ್ಟ್ರಗಳ ಪ್ರತಿನಿಧಿಗಳ ಮುಂದೆ ಅಮೇರಿಕೆಯ ಸಂಯುಕ್ತ ಸಂಸ್ಥಾನದ ಅಧ್ಯಕ್ಷರಾದ **ವುಡ್ರೊ ವಿಲ್ಸನ್** ಇವರು ತಾವೂ ಬೇರೆ ಕೆಲವರೂ ಕೂಡಿ ಸಿದ್ಧಪಡಿಸಿದ 'ರಾಷ್ಟ್ರಸಂಘ'ದ ಯೋಜನೆಯನ್ನು ಇರಿಸಿದರು. ಈ ಯೋಜನೆಗೆ ಬೇರೆ ಬೇರೆ ೩೨ ರಾಷ್ಟ್ರದವರು ತಮ್ಮ ಒಪ್ಪಿಗೆಯನ್ನು ಕೊಟ್ಟರು. ಮುಂದೆ ೧೯೨೦, ಜಾನೆವರಿ ೧೦ನೆಯ ತಾರೀಖಿನ ದಿನ ಸ್ವಿಝರ್ಲಂಡ್ ದೇಶದಲ್ಲಿಯ **ಜಿನೆವಾ** ಎಂಬಲ್ಲಿ **'ರಾಷ್ಟ್ರಸಂಘ'** ಎಂಬ ಸಂಸ್ಥೆ (League of Nations) ಸ್ಥಾಪಿಸಲಾಯಿತು.

ಜಗತ್ತಿನಲ್ಲಿ ೬೫ ಪ್ರಮುಖ ರಾಷ್ಟ್ರಗಳು ಇವೆ. ಅವುಗಳಲ್ಲಿ ೫೪ ರಾಷ್ಟ್ರಗಳು ಈಗ 'ರಾಷ್ಟ್ರಸಂಘ'ದಲ್ಲಿ ಸೇರಿಕೊಂಡಿವೆ. ಅದರಿಂದ ಈ ಸಂಘದ ಬಲವೂ ಮಹತ್ವವೂ ಬಹಳ ಬೆಳೆದಿರುವುದು. ಅಮೇರಿಕೆಯ ಸಂಯುಕ್ತ ಸಂಸ್ಥಾನದ ಅಧ್ಯಕ್ಷರಾದ ವುಡ್ರೊ ವಿಲ್ಸನರು ಈ ಯೋಜನೆಯನ್ನು ಸಿದ್ಧಪಡಿಸುವಲ್ಲಿ ನಾಯಕತ್ವವನ್ನು ವಹಿಸಿದ್ದರೂ, 'ನಮಗೆ ಜಗತ್ತಿನ ಗೊಡವೆ ಬೇಕಾಗಿಲ್ಲ, ಜಗತ್ತಾದರೂ ನಮ್ಮ ಗೊಡವೆಗೆ ಬರುವ ಕಾರಣವಿಲ್ಲ' ಎಂಬ ನೀತಿಯನ್ನು ಅನುಸರಿಸಿ ಅಮೇರಿಕೆಯ ಸಂಯುಕ್ತ ಸಂಸ್ಥಾನವು ಇದುವರೆಗೆ ಈ ಸಂಘಕ್ಕೆ ಸೇರಿಲ್ಲ.

**ರಾಷ್ಟ್ರಸಂಘದಿಂದ ಆಗುತ್ತಿರುವ ಕಾರ್ಯಗಳು**—ರಾಷ್ಟ್ರಸಂಘವು

ಯಾವುದೇ ರಾಷ್ಟ್ರದ ಅಂತಃಸ್ಥ ಆಡಳಿತದಲ್ಲಿ ಕೈಹಾಕುವುದಿಲ್ಲ. ಆದುದರಿಂದ ಬೇಕಾದ ರಾಷ್ಟ್ರವು ತನ್ನ ಸ್ವಾತಂತ್ರ್ಯ, ರಾಷ್ಟ್ರೀಯತ್ವ ಮತ್ತು ಪ್ರತಿಷ್ಠೆ ಇವುಗಳಿಗೆ ಹಾನಿಯಾಗದಂತೆ ಈ ಸಂಘದ ಸದಸ್ಯವಾಗಬಹುದು. ರಾಷ್ಟ್ರಗಳಲ್ಲಿಯ ಜಗಳಗಳನ್ನು ಒಡಂಬಡಿಕೆಯಿಂದ ಪರಿಹರಿಸುವುದು, ಎಲ್ಲ ರಾಷ್ಟ್ರಗಳ ಭೂಸೇನೆ ಮತ್ತು ಜಲಸೇನೆಯನ್ನು ಕಡಿಮೆಮಾಡಲು ಪ್ರಯತ್ನಿಸುವುದು, ಕೂಲಿಕಾರರ ಸ್ಥಿತಿಯನ್ನು ಉತ್ತಮಗೊಳಿಸುವುದು, ಸ್ತ್ರೀಬಾಲಕರ ಮೇಲೆ ನಡೆಯುತ್ತಿರುವ ಸಾಮಾಜಿಕ ಅನ್ಯಾಯಗಳನ್ನು ನಿವಾರಿಸುವುದು, ದಾಸ ಪದ್ಧತಿಯನ್ನು ನಿರ್ಮೂಲಗೊಳಿಸುವುದು, ಮಾದಕ ಪದಾರ್ಥಗಳನ್ನು ನಿರ್ಬಂಧಿಸುವುದು, ಸಂಚಾರ ಮಾರ್ಗಗಳನ್ನು ಎಲ್ಲರಿಗೂ ಸುಗಮಗೊಳಿಸುವುದು, ಅಲ್ಪ ಸಂಖ್ಯಾಕರ ಸಮಸ್ಯೆಯನ್ನು ಬಿಡಿಸುವುದು, ರೋಗ ಪಿಡುಗುಗಳ ಹಾವಳಿಯನ್ನು ನಂದಿಸುವುದು, ಪ್ರಪಂಚದಲ್ಲಿಯ ವಿದ್ವಾಂಸರನ್ನು ಒಂದುಗೂಡಿಸಿ ಲೋಕದ ಬೌದ್ಧಿಕ ಉನ್ನತಿಗಾಗಿ ಯತ್ನಿಸುವುದು, ಮತ್ತು ಲೋಕದ ಆರ್ಥಿಕ, ಸಾಮಾಜಿಕ ಸ್ಥಿತಿಗಳನ್ನು ಉತ್ತಮಪಡಿಸಲು ಪ್ರಯತ್ನಿಸುವುದು ಮುಂತಾದ ನಾನಾ ವಿಧವಾದ ಕೆಲಸಗಳನ್ನು ಈ ರಾಷ್ಟ್ರಸಂಘವು ತನ್ನ ಕಾರ್ಯಕ್ರಮದಲ್ಲಿ ಇಟ್ಟುಕೊಂಡಿದೆ. ಬಗೆಬಗೆಯ ಈ ಕೆಲಸಗಳು ವ್ಯವಸ್ಥಿತವಾಗಿಯೂ ಸುಸೂತ್ರವಾಗಿಯೂ ನೆರವೇರಲು ರಾಷ್ಟ್ರಸಂಘವು ಅನೇಕ ಮಂಡಲಗಳನ್ನು, ಸಮಿತಿಗಳನ್ನು, ಉಪಸಮಿತಿಗಳನ್ನು ಸ್ಥಾಪಿಸಿದೆ ಮತ್ತು ಜಗತ್ತಿನ ಬಹುಶಃ ಎಲ್ಲ ರಾಷ್ಟ್ರಗಳಲ್ಲಿಯ ವಿವಿಧ ವಿಷಯಗಳಲ್ಲಿಯ ತಜ್ಞರ, ಪಂಡಿತರ ಸಹಕಾರವನ್ನು ದೊರಕಿಸಿದೆ. ಈ ಮೇರೆಗೆ ರಾಷ್ಟ್ರಸಂಘದ ಪರವಾಗಿ ನಡೆವ ಕೆಲಸವೆಲ್ಲವೂ ಶಾಸ್ತ್ರೀಯವಾಗಿಯೂ ನಿಷ್ಪಕ್ಷಪಾತವಾಗಿಯೂ ಲೋಕಹಿತದ ಉಚ್ಚ ಧ್ಯೇಯವನ್ನು ಅನುಸರಿಸಿಯೂ ಆಗುತ್ತಿರುವುದರಿಂದ ಈ ಸಂಸ್ಥೆಯ ಮಹತ್ವವೂ ಕಾರ್ಯಶಕ್ತಿಯೂ ಬಹು ವಿಸ್ತಾರಗೊಂಡಿದೆ. ಆದುದರಿಂದ ಈ ರಾಷ್ಟ್ರಸಂಘದ ಘಟನೆ ಹೇಗಿದೆಂಬುದನ್ನು ಮತ್ತೆ ಮೇಲೆ ಕಾಣಿಸಿದ ಅನೇಕ ಕಾರ್ಯಕಲಾಪಗಳನ್ನು ಸಾಗಿಸಲು ಸ್ಥಾಪಿತವಾದ ಸಮಿತಿಗಳ ವಿವರಗಳನ್ನು ಕೆಳಗೆ ಕೊಡುತ್ತೇವೆ.

**ರಾಷ್ಟ್ರಸಂಘದ ನಿಯಮಪತ್ರಿಕೆ** (Covenant)—ರಾಷ್ಟ್ರಸಂಘದ ಸದಸ್ಯವಾಗುವ ಪ್ರತಿಯೊಂದು ರಾಷ್ಟ್ರವು ರಾಷ್ಟ್ರಸಂಘದ ನಿಯಮಪತ್ರಿಕೆಗೆ ತನ್ನ ಒಪ್ಪಿಗೆಯನ್ನು ಕೊಡಬೇಕಾಗುತ್ತದೆ. ಈ ನಿಯಮಪತ್ರಿಕೆಯ ಪೀಠಿಕೆಯಲ್ಲಿಯೆ ರಾಷ್ಟ್ರಸಂಘದ ಧ್ಯೇಯವನ್ನು ನಿರ್ದೇಶಿಸಲಾಗಿದೆ. ರಾಷ್ಟ್ರಸಂಘವು ತನ್ನ ಮುಂದೆ ಇರಿಸಿಕೊಂಡ ಧ್ಯೇಯವು ಹೀಗಿರುವುದು:—ಲೋಕದಲ್ಲಿ ಶಾಂತಿ ಸ್ಥಾಪಿಸ್ಥ

ಗಳನ್ನು ಸ್ಥಾಪಿಸುವುದು, ಯುದ್ಧದಂತಹ ಕಾಡುದಾರಿಯನ್ನು ಹಿಡಿಯದೆ ಸಾಮೋಪಾಯದಿಂದಲೂ ಒಡಂಬಡಿಕೆಯಿಂದಲೂ ರಾಷ್ಟ್ರಗಳಲ್ಲಿಯ ವ್ಯಾಜ್ಯವನ್ನು ಬಗೆಹರಿಸುವುದು, ಅಂತರರಾಷ್ಟ್ರೀಯ ಕಟ್ಟಳೆಗಳನ್ನೂ ಸಂಪ್ರದಾಯಗಳನ್ನೂ ಶಾಂತತಾವೃದ್ಧಿಗಾಗಿ ಮಾಡಿದ ಒಪ್ಪಂದಗಳನ್ನೂ ಆದರಿಸುವುದು, ಬಹಿರಂಗವಾಗಿ, ನ್ಯಾಯವಾಗಿ, ಅದರದರ ಪ್ರತಿಷ್ಠೆಗೆ ಕುಂದುಬಾರದಂತೆ ಬೇರೆ ಬೇರೆ ರಾಷ್ಟ್ರಗಳಲ್ಲಿ ಅನ್ಯೋನ್ಯ ಸಂಬಂಧಗಳನ್ನು ಉಂಟುಮಾಡುವುದು.

**ರಾಷ್ಟ್ರಸಂಘದ ಸದಸ್ಯತ್ವದ ನಿಯಮಗಳು**—ಯಾವುದೊಂದು ಸ್ವಾಯತ್ತ (self-governed) ರಾಷ್ಟ್ರವಾಗಲಿ* ವಸಾಹತಾಗಲಿ ರಾಷ್ಟ್ರಸಂಘದ ಸದಸ್ಯವಾಗಿರುವ ⅔ ರಾಷ್ಟ್ರಗಳ ಸಮ್ಮತಿಯನ್ನು ಪಡೆದು ರಾಷ್ಟ್ರಸಂಘದ ಸದಸ್ಯವಾಗಬಹುದು. ಸದಸ್ಯವಾಗುವ ಪ್ರತಿಯೊಂದು ರಾಷ್ಟ್ರವು ರಾಷ್ಟ್ರಸಂಘದ ಧ್ಯೇಯಕ್ಕೆ ಮತ್ತು ನಿಯಮಾವಲಿಗೆ ತನ್ನ ಒಪ್ಪಿಗೆಯಿದೆ ಎಂದೂ ರಾಷ್ಟ್ರಸಂಘವು ತೀರ್ಮಾನಿಸಿದ ಎಲ್ಲ ಗೊತ್ತುವಳಿಗಳನ್ನು ಆಚರಣೆಯಲ್ಲಿ ತರುವೆನೆಂದೂ ವಚನ ಕೊಡಬೇಕಾಗುವುದು. ರಾಷ್ಟ್ರಸಂಘಕ್ಕೆ ಸೇರಿದ ಯಾವುದೊಂದು ರಾಷ್ಟ್ರವು ಎರಡು ವರ್ಷ ಮುಂಚಿತವಾಗಿ ಸೂಚನೆಯನ್ನು ಕೊಟ್ಟು ರಾಷ್ಟ್ರಸಂಘದಿಂದ ತನ್ನ ಹೆಸರನ್ನು ತಿರುಗಿ ತೆಗೆದುಕೊಳ್ಳಬಹುದು. ರಾಷ್ಟ್ರಸಂಘದ ನಿಯಮಗಳನ್ನೂ ಗೊತ್ತುವಳಿಗಳನ್ನೂ ಕೃತಿಯಲ್ಲಿ ತಾರದ ರಾಷ್ಟ್ರವನ್ನು ಸಂಘದಿಂದ ಕಿತ್ತುಹಾಕುವ ಅಧಿಕಾರವು ರಾಷ್ಟ್ರಸಂಘಕ್ಕೆ ಇರುವುದು.

**ಅಸೆಂಬ್ಲಿ**—ಇದು ರಾಷ್ಟ್ರಸಂಘದ ಅತಿಶ್ರೇಷ್ಠವೂ ಮಹತ್ವವುಳ್ಳುದೂ ಆದ ಸಭೆಯಾಗಿರುವುದು. ರಾಷ್ಟ್ರಸಂಘದ ಸದಸ್ಯವಾಗಿರುವ ಪ್ರತಿಯೊಂದು ರಾಷ್ಟ್ರವು ಈ ಸಭೆಗೆ ಹೆಚ್ಚೆಂದರೆ, ಮೂರರ ವರೆಗೆ ಸದಸ್ಯರನ್ನು ಕಳಿಸಬಹುದು. ಆದರೆ ಪ್ರತಿಯೊಂದು ರಾಷ್ಟ್ರವು ಒಂದೇ ಮತವನ್ನು ಕೊಡಬಲ್ಲುದು. ಈ ಸಭೆಯಲ್ಲಿ ಹಿರಿಕಿರಿಯ ಎಲ್ಲ ರಾಷ್ಟ್ರಗಳ ಯೋಗ್ಯತೆ ಸಮಾನವಾಗಿರುವುದು. ಪ್ರತಿವರ್ಷದ ಸಪ್ಟೆಂಬರ ತಿಂಗಳಲ್ಲಿ ಜಿನೆವಾ ಪಟ್ಟಣದಲ್ಲಿ ಅಸೆಂಬ್ಲಿಯ ಅಧಿವೇಶನವು ಕೂಡುವುದು. ಅದು ಸುಮಾರು ಒಂದು ತಿಂಗಳ ವರೆಗೆ ಸಾಗುವುದು. ರಾಷ್ಟ್ರಸಂಘದ ಪ್ರಧಾನಸಭೆ ಇದಾಗಿರುವುದರಿಂದ ರಾಷ್ಟ್ರಸಂಘದ ನಿಯಮಪತ್ರಿಕೆಯಲ್ಲಿ ತಿದ್ದುಪಡೆಗಳನ್ನು ಸೂಚಿಸುವುದು ಇಲ್ಲವೆ ಹೊಸ ಮಾತುಗಳನ್ನು ಸೇರಿಸುವುದು, ಆಯವ್ಯಯ ಪತ್ರಿಕೆಯನ್ನು ಕೌನ್ಸಿಲಿನ ಮತ್ತು ಬೇರೆ ಬೇರೆ ಸಮಿತಿಗಳ ವರದಿ

---

*೧೯೧೯ರ ವರ್ಸೇಲ್ಸಿನ ಸಂಧಾನಪತ್ರಿಕೆಗೆ ಹಿಂದುಸ್ಥಾನದ ಪ್ರತಿನಿಧಿಯ ಅಂಕಿತವಿದ್ದುದರಿಂದ ಹಿಂದುಸ್ಥಾನವು ಸ್ವಾಯತ್ತವಲ್ಲದಿದ್ದರೂ ಅದು ರಾಷ್ಟ್ರಸಂಘದ ಸದಸ್ಯವಾಗುವುದು ಸಾಧ್ಯವಾಯಿತು.

ಗಳನ್ನು ಸ್ವೀಕರಿಸುವುದು, ಕೌನ್ಸಿಲಿನ ಸದಸ್ಯರನ್ನು ಮತ್ತು ಅಂತರರಾಷ್ಟ್ರೀಯ ನ್ಯಾಯಾಲಯದ ನ್ಯಾಯಾಧೀಶರನ್ನು ಆರಿಸುವುದು, ರಾಷ್ಟ್ರಸಂಘಕ್ಕೆ ಸೇರ ಬಚ್ಛಿಸುವ ಹೊಸ ಸದಸ್ಯರಾಷ್ಟ್ರಗಳಿಗೆ ಒಪ್ಪಿಗೆ ಕೊಡುವುದು ಮುಂತಾದ ಅನೇಕ ಪ್ರಕಾರದ ಕಾರ್ಯಗಳು ಈ ಸಭೆಯಲ್ಲಿ ನಡೆವುವು. ಈ ಸಭೆಯಲ್ಲಿ ಗೊತ್ತಾಗುವ ನಿರ್ಣಯಗಳು, ಕೆಲವು ಅಪವಾದಗಳನ್ನು ಬಿಟ್ಟು, ಸರ್ವಾನುಮತ ದಿಂದ ಸ್ವೀಕೃತವಾಗಬೇಕಾಗುತ್ತದೆ. ಅಸೆಂಬ್ಲಿಯ ಸದಸ್ಯನು ಬೇಕಾದ ಭಾಷೆ ಯಲ್ಲಿ ಮಾತನಾಡಬಹುದು. ಆದರೆ ಆ ಸಭಾಸದನು ತನ್ನ ಭಾಷಣವನ್ನು ಇಂಗ್ಲಿಶ್ ಇಲ್ಲವೆ ಫ್ರೆಂಚ್ ಭಾಷೆಯಲ್ಲಿ ಭಾಷಾಂತರಿಸಿ ಕೊಡಬೇಕಾಗುತ್ತದೆ. ಅಧಿಕೃತ ವಾದ ಈ ಎರಡು ಭಾಷೆಗಳಲ್ಲಿಯೆ ರಾಷ್ಟ್ರಸಂಘದ ಎಲ್ಲ ಕಾರ್ಯಕಲಾಪಗಳು ಪ್ರಕಟಿಸಲಾಗುತ್ತದೆ.

**ಕೌನ್ಸಿಲ್**—ಇದು ೧೪ ಸದಸ್ಯರ ಒಂದು ಚಿಕ್ಕ ಸಮಿತಿಯಾಗಿದೆ. ಅಸೆಂಬ್ಲಿ ಮಾಡಿದ ನಿರ್ಣಯಗಳನ್ನು ಮತ್ತು ನಿರ್ಧರಿಸಿದ ನೀತಿಯನ್ನು ಆಚರಣೆಗೆ ತರುವುದು, ಬೇರೆ ಬೇರೆ ಸಮಿತಿಗಳನ್ನು ನಿರ್ಮಿಸಿ ಅವುಗಳಿಗೆ ಬೇರೆ ಬೇರೆ ಕೆಲಸ ಗಳನ್ನು ಹಂಚಿಕೊಡುವುದು, ಜಗತ್ತಿನಲ್ಲಿ ನಡೆವ ಘಟನೆಗಳ ಕಡೆಗೆ ಲಕ್ಷ್ಯವಿಡು ವುದು, ರಾಷ್ಟ್ರಸಂಘದ ಎಲ್ಲ ಕಾರ್ಯಕಲಾಪಗಳನ್ನು ನಿರೀಕ್ಷಿಸುವುದು, ಸೆಕ್ರೆಟರಿ ಯೆಟಿನಲ್ಲಿಯ ಕೆಲಸಗಾರರ ನಿಯೋಜನಕ್ಕೆ ಒಪ್ಪಿಗೆಯನ್ನು ಕೊಡುವುದು, ರಾಷ್ಟ್ರ ಸಂಘದ ಪ್ರತ್ಯಕ್ಷವಾದ ವ್ಯವಸ್ಥೆಗೆ ಒಳಪಟ್ಟ ರಾಷ್ಟ್ರಗಳ ಆಡಳಿತದ ಮೇಲ್ವಿಚಾರ ಣೆಯನ್ನು ಮಾಡುವುದು, ಇಲ್ಲವೆ ಯಾವುದೊಂದು ಮುಂದುವರಿದ ರಾಷ್ಟ್ರಕ್ಕೆ ಅದರ ಪಾಲಕತ್ವವನ್ನು ಒಪ್ಪಿಸಿದ್ದರೆ, ಅದರ ವಿಷಯದಲ್ಲಿ ಬಂದ ವರದಿಯನ್ನು ಸ್ವೀಕರಿಸುವುದು, ಅಂತರರಾಷ್ಟ್ರೀಯ ನ್ಯಾಯಾಸನದ ನ್ಯಾಯಾಧೀಶರನ್ನು ಆರಿಸುವುದು ಮುಂತಾದ ವಿವಿಧ ಕಾರ್ಯಗಳನ್ನು ಈ ಸಮಿತಿ ಮಾಡುವುದು. ಒಂದು ಬಗೆಯಿಂದ ಈ ಸಮಿತಿಗೆ ಅಸೆಂಬ್ಲಿಯ ಕಾರ್ಯನಿರ್ವಾಹಕ ಸಮಿತಿ ಎಂದೆನ್ನಬಹುದು. ಇದರಲ್ಲಿಯ ೧೪ ಸದಸ್ಯರಲ್ಲಿ ಗ್ರೇಟ್ ಬ್ರಿಟನ್ ಮತ್ತು ಫ್ರಾನ್ಸ್ ಈ ರಾಷ್ಟ್ರಗಳ ಒಬ್ಬೊಬ್ಬ ಪ್ರತಿನಿಧಿ ಸ್ಥಿರವಾಗಿ ಇರುತ್ತಾನೆ. ಮಿಕ್ಕ ಸ್ಥಳಗಳಿಗೆ ಅಸೆಂಬ್ಲಿಯ ಪರವಾಗಿ ಮೂರು ವರ್ಷಗಳ ಮಟ್ಟಿಗೆ ಆಯ್ಕೆಯಾಗುತ್ತದೆ. ಈ ಕೌನ್ಸಿಲಿನ ಅಧಿವೇಶನಗಳು ವರ್ಷದಲ್ಲಿ ನಾಲ್ಕು ಬಾರಿ ನೆರೆವುವು. ಒಂದೊಂದು ಅಧಿವೇಶನವು ಸಾಮಾನ್ಯವಾಗಿ ಒಂದು ವಾರದ ವರೆಗೆ ಸಾಗುವುದು. ಈ ಕೌನ್ಸಿಲು ವರ್ಷದ ವರೆಗೆ ಮಾಡಿದ ಕೆಲಸದ ವರದಿಯನ್ನು ಅಸೆಂಬ್ಲಿಗೆ ತಿಳಿಸಿ ಅದರ ಒಪ್ಪಿಗೆಯನ್ನು ಪಡೆಯಬೇಕಾಗುವುದು.

**ಆಂತರರಾಷ್ಟ್ರೀಯ ನ್ಯಾಯಾಸನವು**—ರಾಷ್ಟ್ರಗಳಲ್ಲಿಯ ವ್ಯಾಜ್ಯ ಗಳನ್ನು ನಿರ್ಣಯಿಸಲು ಮತ್ತು ಇದೇ ಪ್ರಕಾರದ ಸಮಸ್ಯೆಗಳನ್ನು ಕುರಿತು ಆಲೋಚನೆಯನ್ನು ಹೇಳಲು ರಾಷ್ಟ್ರಸಂಘವು ಒಂದು **ಆಂತರರಾಷ್ಟ್ರೀಯ ನ್ಯಾಯಾಸನವನ್ನು** (Court of International Justice) ಸ್ಥಾಪಿಸಿರು ವುದು. ಈ ನ್ಯಾಯಾಸನವು ಹಾಲಂಡಿನಲ್ಲಿ **ಹೇಗ** ಎಂಬಲ್ಲಿ ಕೂಡುತ್ತದೆ. ಜಗತ್ತಿನ ಬೇರೆ ಬೇರೆ ದೇಶಗಳಲ್ಲಿ ನ್ಯಾಯಾಧೀಶನ ಮತ್ತು ಕಾಯ್ದೆಯ ಕೆಲಸ ಗಳಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿ ನಾಮಾಂಕಿತರಾದ ಹನ್ನೊಂದು ಜನರನ್ನು ಅಸೆಂಬ್ಲಿ ಮತ್ತು ಕೌನ್ಸಿಲುಗಳ ಸಮ್ಮತಿಯಿಂದ ನ್ಯಾಯಾಧೀಶರಾಗಿ ಆರಿಸಲಾಗು ತ್ತದೆ. ಒಮ್ಮೆ ನಿಯೋಜಿಸಿದ ಬಳಿಕ ೯ ವರ್ಷಗಳ ವರೆಗೆ ಈ ನ್ಯಾಯಾಧೀಶರು ಈ ನ್ಯಾಯಾಸನದಲ್ಲಿ ಕೆಲಸವನ್ನು ಮಾಡಬಹುದು. ಯಾವುದೊಂದು ರಾಷ್ಟ್ರದ ಉಚ್ಚ ನೀಚ ತರಗತಿಯನ್ನು ಎಣಿಸದೆ ಆಂತರರಾಷ್ಟ್ರೀಯ ಕಾಯ್ದೆ, ನಾಗರಿಕ ರಾಷ್ಟ್ರಗಳಲ್ಲಿ ಸರ್ವಮಾನ್ಯವಾಗಿರುವ ಸಂಪ್ರದಾಯಗಳು ಮತ್ತು ಒಡಂಬಡಿಕೆ ಗಳು ಮುಂತಾದ ಮಾತುಗಳನ್ನು ಲಕ್ಷಿಸಿ ಉಚಿತವಾದ ನ್ಯಾಯವನ್ನು ನೀಡುವ ಕೆಲಸವು ಈ ನ್ಯಾಯಾಸನದಿಂದ ನಡೆಯುತ್ತದೆ. ರಾಷ್ಟ್ರಸಂಘಕ್ಕೆ ಸೇರಿದ ರಾಷ್ಟ್ರಗಳಲ್ಲಿ ವೈಮನಸ್ಸು ಹುಟ್ಟಿದರೆ, ಇವು ತಮ್ಮ ಜಗಳವನ್ನು ಬಗೆಹರಿಸಲು ಆ ಜಗಳವನ್ನು ರಾಷ್ಟ್ರಸಂಘಕ್ಕೆ ಒಯ್ಯಬೇಕು ಎಂದು ನಿಯಮವಿದೆ. ಈ ನಿಯಮದ ಉಲ್ಲಂಘನವಾದರೆ ಇಲ್ಲವೆ ಆಂತರರಾಷ್ಟ್ರೀಯ ನ್ಯಾಯಾಸನದ ನಿರ್ಣ ಯವನ್ನು ಬದಿಗಿರಿಸಿ ಯಾವುದೊಂದು ರಾಷ್ಟ್ರವು ಇನ್ನೊಂದು ರಾಷ್ಟ್ರದೊಡನೆ ಯುದ್ಧವನ್ನು ಹೂಡಿದರೆ, ಇಂತಹ ರಾಷ್ಟ್ರವನ್ನು ಮಣಿಸುವುದಕ್ಕೆ ಸಂಘದೊಳಗಿನ ಮಿಕ್ಕ ರಾಷ್ಟ್ರಗಳು ಕೌನ್ಸಿಲಿನ ಸೂಚನೆಯಂತೆ ಆ ರಾಷ್ಟ್ರವನ್ನು ಬಹಿಷ್ಕರಿಸಿ ಅದರೊಡನೆ ಎಲ್ಲ ವಿಧದ ವ್ಯವಹಾರಗಳನ್ನು ನಿಲ್ಲಿಸುವವು; ಅವಶ್ಯವೆನಿಸಿದರೆ ಆ ರಾಷ್ಟ್ರವನ್ನು ರಾಷ್ಟ್ರಸಂಘದ ವೈರಿಯಾಗಿ ಎಣಿಸಿ ಅದರೊಡನೆ ಯುದ್ಧ ವನ್ನು ಹೂಡುವವು. ಬಹಿಷ್ಕಾರದ ಮತ್ತು ಯುದ್ಧದ ಹೆದರಿಕೆಯಿಂದಲೆ ಸಾಮಾನ್ಯವಾಗಿ ಆ ರಾಷ್ಟ್ರವು ಮೆತ್ತಗಾಗುವದು.

**ಆಂತರರಾಷ್ಟ್ರೀಯ ಕೂಲಿಕಾರ ಸಂಘ** (International Labour Organization)—ಜಗತ್ತಿನಲ್ಲಿ ಶಾಂತಿಯೂ ಸ್ವಾಸ್ಥ್ಯವೂ ಚಿರಕಾಲ ಉಳಿಯಲು ಬೇರೆ ಬೇರೆ ರಾಷ್ಟ್ರಗಳಲ್ಲಿಯ ಕೂಲಿಕಾರರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಯನ್ನು ಉತ್ತಮಗೊಳಿಸುವುದು ಅತ್ಯಾವಶ್ಯಕವಾಗಿದೆ ಎಂದು ತಿಳಿದು ರಾಷ್ಟ್ರಸಂಘದವರು ಈ ಸಂಸ್ಥೆಯನ್ನು ನಿರ್ಮಾಣಮಾಡಿರುವರು.

ರಾಷ್ಟ್ರಸಂಘದ ಸದಸ್ಯವಾಗಿರುವ ಪ್ರತಿಯೊಂದು ರಾಷ್ಟ್ರದ ಪರವಾಗಿ ನಾಲ್ಕು ಪ್ರತಿನಿಧಿಗಳನ್ನು ಈ ಸಂಘಕ್ಕೆ ಕಳಿಸಲಾಗುತ್ತದೆ. ಈ ನಾಲ್ವರಲ್ಲಿ ಇಬ್ಬರು ಅಲ್ಲಿಯ ಸರಕಾರದ ಪರವಾಗಿ, ಒಬ್ಬನು ಕೂಲಿಕಾರರಿಂದ, ಇನ್ನೊಬ್ಬನು ಬಂಡ ವಾಳದವರಿಂದ ಬರುವರು. ಕೂಲಿಕಾರರ ಕೆಲಸದ ಗಂಟೆಗಳನ್ನು ಕಡಿಮೆಮಾಡು ವುದು, ಹೆಂಗುಸರಿಗೂ ಹುಡುಗರಿಗೂ ಅಪಾಯಕಾರಕವಾಗದಂತಹ ಕೆಲಸ ವನ್ನು ಕೊಡುವುದು, ಕೂಲಿಕಾರರ ಆರೋಗ್ಯ, ಸುಖಸೌಕರ್ಯಗಳು ಮತ್ತು ಮನೋರಂಜನೆ ಇವುಗಳಿಗೋಸುಗ ವ್ಯವಸ್ಥೆಮಾಡುವಂತೆ ಪ್ರೋತ್ಸಾಹಿಸುವುದು, ಮುಂತಾದ ವಿಷಯಗಳನ್ನು ಕುರಿತು ಈ ಸಂಘದ ಪರವಾಗಿ ನಿರ್ಣಯಗಳು ಆಗುತ್ತವೆ; ಮತ್ತು ಅವುಗಳನ್ನು ಕೃತಿಯಲ್ಲಿ ತರಬೇಕೆಂದು ಬೇರೆ ಬೇರೆ ರಾಷ್ಟ್ರಗಳಿಗೆ ಸೂಚಿಸಲಾಗುತ್ತದೆ.

ಅಸೆಂಬ್ಲಿ, ಕೌನ್ಸಿಲ್, ಆಂತರರಾಷ್ಟ್ರೀಯ ನ್ಯಾಯಾಸನ, ಆಂತರರಾಷ್ಟ್ರೀಯ ಕೂಲಿಕಾರ ಸಂಘ ಈ ಸಮಿತಿಗಳಿಗೆ ಸಾಹಾಯ್ಯವಾಗಲು ಮತ್ತು ರಾಷ್ಟ್ರ ಸಂಘವು ಕೈಕೊಂಡ ಘನವಾದ ಕಾರ್ಯವು ಸರಿಯಾದ ರೀತಿಯಲ್ಲಿ ಸಾಗಲು ಬೇರೆ ಬೇರೆ ವಿಷಯಗಳನ್ನು ಕುರಿತು ೧೦-೧೨ ಸಮಿತಿಗಳು ಸ್ಥಾಪಿಸಲ್ಪಟ್ಟಿವೆ. ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿಯ ಬೇರೆ ಬೇರೆ ವಿಷಯಗಳ ತಜ್ಞರನ್ನು ಮತ್ತು ನಾಮಾಂಕಿತ ಪುರುಷರನ್ನು ಈ ಸಮಿತಿಗಳ ಸದಸ್ಯರಾಗಿ ಆರಿಸುವಂತೆ ಪ್ರಯತ್ನಿಸ ಲಾಗುತ್ತದೆ. ಆದುದರಿಂದ ಈ ಎಲ್ಲ ಸಮಿತಿಗಳ ಕಾರ್ಯಗಳು ಶಾಸ್ತ್ರೀಯ ಪದ್ಧತಿ ಯಂತೆ ನಡೆವುವು. ಇದರಿಂದ ರಾಷ್ಟ್ರಸಂಘಕ್ಕೆ ಬಹಳ ಸಾಹಾಯ್ಯವಾಗುವುದು.

**ಒಡಂಬಡಿಕೆಗಳು ಮತ್ತು ಆಂತರರಾಷ್ಟ್ರೀಯ ಕಟ್ಟಳೆಯ ಸಮಿತಿ—** ಹಿಂದೆ ಬೇರೆ ಬೇರೆ ರಾಷ್ಟ್ರಗಳಲ್ಲಿ ಆಗುತ್ತಿದ್ದ ಒಡಂಬಡಿಕೆಗಳು ಗುಪ್ತವಾಗಿ ಆಗು ತ್ತಿದ್ದುದರಿಂದ ಅವುಗಳ ಹೇತುವಿನ ವಿಷಯದಲ್ಲಿ ಉಳಿದ ರಾಷ್ಟ್ರಗಳಿಗೆ ಸಂಶಯವು ಉಂಟಾಗುತ್ತಿದ್ದಿತು. ಇಂತಹ ಸಂಶಯವೃತ್ತಿ ಇಲ್ಲದಾಗಲು ರಾಷ್ಟ್ರಸಂಘದಲ್ಲಿ ಸೇರಿದ ಯಾವುದೊಂದು ರಾಷ್ಟ್ರವು ಬೇರೊಂದು ರಾಷ್ಟ್ರದೊಡನೆ ಗುಪ್ತವಾಗಿ ಒಡಂಬಡಿಕೆಯನ್ನು ಮಾಡದೆ ಪ್ರತಿಯೊಂದು ಒಡಂಬಡಿಕೆ ಪ್ರಕಟವಾಗಿಯೆ ನಡೆಯ ಬೇಕು, ಮತ್ತು ಅದರ ಒಂದು ಪ್ರತಿಯನ್ನು ಮೇಲ್ಕಾಣಿಸಿದ ರಾಷ್ಟ್ರಸಂಘದ ಸಮಿತಿಯಲ್ಲಿ ನೋಂದಾಯಿಸಬೇಕು ಎಂದು ನಿಯಮವುಂಟು. ಈ ಮೇರೆಗೆ ಒಡಂಬಡಿಕೆಯನ್ನು ನೋಂದಾಯಿಸಿದ ಬಳಿಕ ಇತರ ರಾಷ್ಟ್ರಗಳ ಅವಗಾಹನೆ ಗೋಸುಗ ಅದನ್ನು ಪ್ರಕಟಿಸಲಾಗುತ್ತದೆ. ಹೀಗೆ ಒಡಂಬಡಿಕೆಯನ್ನು ನೋಂದಾ ಯಿಸದಿದ್ದರೆ, ಅದು ಯಾರಿಗೂ ಬಂಧನಕಾರಕವಲ್ಲವೆಂದು ತಿಳಿಯಲಾಗುತ್ತದೆ.

**ನೌಕಾದಲ ನಿಯಂತ್ರಣ ಸಮಿತಿ**—ಲೋಕದಲ್ಲಿ ಶಾಂತಿ ಸ್ವಾಸ್ಥ್ಯಗಳು ಸ್ಥಾಪನೆಯಾಗಬೇಕಾದರೆ ಪ್ರತಿಯೊಂದು ರಾಷ್ಟ್ರವು ತನ್ನ ಭೂಸೇನೆ ಮತ್ತು ಜಲಸೇನೆಯನ್ನು ಕಡಿಮೆ ಮಾಡುವುದು ಬಹಳ ಅಗತ್ಯವಾಗಿದೆ. ಪ್ರತಿಯೊಂದು ರಾಷ್ಟ್ರವು ತನ್ನ ಸುರಕ್ಷಿತತೆ ಮತ್ತು ಆತ್ಮರಕ್ಷಣೆಗಾಗಿ ಅವಶ್ಯವಿರುವ ಭೂ-ಜಲ ಸೇನೆಯನ್ನು ಇಟ್ಟುಕೊಂಡ ಬಳಿಕ ಮಿಕ್ಕುದನ್ನು ಯಾವ ಪ್ರಮಾಣದಿಂದ ಕಡಿಮೆ ಮಾಡಬೇಕು ಎಂಬುದನ್ನು ಕುರಿತು ಈ ಸಮಿತಿಯಲ್ಲಿಯ ತಜ್ಞರು ಒಂದು ಯೋಜನೆಯನ್ನು ಸಿದ್ಧಪಡಿಸುವರು. ಬೇರೆ ಬೇರೆ ರಾಷ್ಟ್ರಗಳು ತಮ್ಮ ಮಟ್ಟಿಗೆ ಈ ಯೋಜನೆಯನ್ನು ಕೃತಿಗೆ ತರುವರು. ರಾಷ್ಟ್ರಸಂಘದಲ್ಲಿಯ ಎಲ್ಲ ರಾಷ್ಟ್ರಗಳು ಈ ಯೋಜನೆಯಂತೆ ವರ್ತಿಸುತ್ತಿದ್ದುದರಿಂದ ಯಾವುದೊಂದು ರಾಷ್ಟ್ರವು ಬೇರೊಂದು ರಾಷ್ಟ್ರವನ್ನು ಕುರಿತು ಸಂದೇಹಗೊಳ್ಳಲು ಕಾರಣವಿರುವುದಿಲ್ಲ. ಇದರಿಂದ ಜಗತ್ತಿನಲ್ಲಿಯ ಬೇರೆ ಬೇರೆ ರಾಷ್ಟ್ರಗಳ ಸೈನ್ಯದ ವೆಚ್ಚದಲ್ಲಿ ಬಹಳ ಉಳಿಕೆಯಾಗಿ, ಆ ಹಣವನ್ನು ಬೇರೆ ಉಪಯುಕ್ತ ಕಾರ್ಯಗಳಿಗೆ ವ್ಯಯಮಾಡಲು ಅನುವಾಗುತ್ತದೆ.

**ಸಂಚಾರಮಾರ್ಗ ನಿರ್ಧಾರಕ ಸಮಿತಿ**—ಬೇರೆ ಬೇರೆ ರಾಷ್ಟ್ರಗಳಲ್ಲಿ ಹಾಯ್ದು ಹೋಗುವ ಸಂಚಾರ ಮಾರ್ಗಗಳು, ರೇಲ್ವೆಯ ಶಾಖೆಗಳು, ದೊಡ್ಡ ದೊಡ್ಡ ನದಿಗಳು, ಪ್ರಮುಖ ಬಂದರಗಳು ಮುಂತಾದುವನ್ನು ಕುರಿತು ರಾಷ್ಟ್ರಗಳಲ್ಲಿ ಕಲಹವು ಉಂಟಾಗುವುವು. ಈ ಸಂದರ್ಭದಲ್ಲಿ ಯಾವ ರಾಷ್ಟ್ರದ ಹಕ್ಕುಗಳು ಎಷ್ಟು ಮುಂತಾದ ವಿಷಯಗಳನ್ನು ಆಲೋಚಿಸಿ ಈ ಸಮಿತಿ ಸರ್ವರಿಗೆ ಸಮ್ಮತವಾಗುವಂತಹ ಯೋಜನೆಯೊಂದನ್ನು ಸಿದ್ಧಪಡಿಸುತ್ತದೆ.

**ಚಲನ, ಹುಂಡಿ, ಆರ್ಥಿಕ, ಸಮಸ್ಯೆಗಳ ಸಮಿತಿ**—ಕಳೆದ ಮಹಾಯುದ್ಧದಿಂದಾಗಲಿ ಬೇರೆ ಕಾರಣಗಳಿಂದಾಗಲಿ ಯಾವುದೊಂದು ರಾಷ್ಟ್ರವು ಹೀನ ಸ್ಥಿತಿಗೆ ಇಳಿದು ಸಾಲಗಾರತನದಿಂದ ತನ್ನ ಪತ್ತನ್ನು ಕಳೆದುಕೊಂಡಿದ್ದರೆ ಇಂತಹ ರಾಷ್ಟ್ರಕ್ಕೆ ರಾಷ್ಟ್ರಸಂಘದ ಮಧ್ಯಸ್ಥಿಕೆಯಿಂದ ಸಾಲವು ದೊರೆಯುತ್ತದೆ. ಇದಲ್ಲದೆ, ಇಂತಹ ರಾಷ್ಟ್ರದ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಕೈಕೊಳ್ಳಬೇಕಾದ ಉಪಾಯ ಮುಂತಾದ ವಿಷಯವನ್ನು ಕುರಿತು ಆರ್ಥಿಕ ತಜ್ಞರ ಸಲಹೆಯೂ ಸಿಕ್ಕುತ್ತದೆ.

**ಮಂಡೇಟ ಸಮಿತಿ**—ರಾಷ್ಟ್ರಸಂಘದ ಪರವಾಗಿ ಯಾವುದೊಂದು ಮುಂದುವರಿದ ರಾಷ್ಟ್ರದ ಕಡೆಗೆ ಯಾವುದೊಂದು ಹಿಂದುಳಿದ ಇಲ್ಲವೆ ಯುದ್ಧದ ತರುವಾಯದಲ್ಲಿ ಅಸಹಾಯವಾದ ರಾಷ್ಟ್ರದ ಪಾಲಕತ್ವವನ್ನು ಕೊಡಲಾಗಿದ್ದರೆ,

ಈ ಸಂದರ್ಭದಲ್ಲಿ ಪಾಲಕರಾಷ್ಟ್ರವು ಒಪ್ಪಿಸಿದ ವರದಿಯನ್ನು ವಿಚಾರಿಸಿ, ಅಲ್ಲಿಯ ಆಡಳಿತವು ಆ ರಾಷ್ಟ್ರಕ್ಕೆ ಹಿತಕರವಾಗುವಂತೆ ನಡೆವುದೊ ಇಲ್ಲವೊ ಎಂಬುದನ್ನು ಈ ಸಮಿತಿ ಪರೀಕ್ಷಿಸುತ್ತದೆ, ಮತ್ತು ಇದನ್ನು ಕುರಿತು ಕೌನ್ಸಿಲಿನ ಕಡೆಗೆ ವರದಿಯನ್ನು ಕಳುಹುತ್ತದೆ.

ಮೇಲೆ ವಿವರಿಸಿದ ಸಮಿತಿಗಳಲ್ಲದೆ ಬೇರೆ ಕೆಲವು ಸಮಿತಿಗಳನ್ನೂ ರಾಷ್ಟ್ರಸಂಘವು ಏರ್ಪಡಿಸಿದೆ. **ಆರೋಗ್ಯ ಸಮಿತಿ** ಡಾಕ್ಟರ ಮತ್ತು ತಜ್ಞಜನರ ಸಾಹಾಯ್ಯದಿಂದ ಚಳಿಜ್ವರ, ಗಂಟು ಬೇನೆ (ಪ್ಲೇಗ), ನಿದ್ರಾರೋಗ ಮುಂತಾದ ರೋಗಗಳನ್ನು ಉಚ್ಚಾಟನಗೊಳಿಸಲು ಪ್ರಯತ್ನಿಸುವುದು ಮತ್ತು ಮಾದಕವಸ್ತುಗಳ ಮೇಲೆ ನಿರ್ಬಂಧವಿಡುವುದು. **ಭೂತದಯೆ ಮತ್ತು ಪರೋಪಕಾರ ಸಮಿತಿಯಿಂದ** ದುರ್ಭಿಕ್ಷ, ಭೂಕಂಪ, ನೆರೆ ಮುಂತಾದುವುಗಳಿಂದ ಉದ್ಭವಿಸುವ ಅನರ್ಥಗಳಲ್ಲಿ ಅನಾಥ-ಅಗತಿಕರಾದವರು ಸಾಹಾಯ್ಯವನ್ನು ಪಡೆಯಬಲ್ಲರು. **ಬೌದ್ಧಿಕ ಸಹಕಾರಿತಾ ಸಮಿತಿ** ಬೇರೆ ಬೇರೆ ರಾಷ್ಟ್ರಗಳಲ್ಲಿಯ ವಿದ್ವಾಂಸರನ್ನು ಒಂದೆಡೆಗೆ ಕೂಡಿಸಿ ಅವರ ಜ್ಞಾನ ಮತ್ತು ಅನುಭವಗಳಿಂದ ಎಲ್ಲ ರಾಷ್ಟ್ರಗಳು ಲಾಭ ಪಡೆಯಬೇಕು ಎಂಬ ಉದ್ದೇಶದಿಂದ ಉಪಯುಕ್ತವಾದ ವಿಷಯಗಳನ್ನು ಕುರಿತು ಬೇರೆ ಬೇರೆ ಭಾಷೆಗಳಲ್ಲಿ ಗ್ರಂಥಗಳನ್ನು ಪ್ರಕಟಿಸಲು ಪ್ರೋತ್ಸಾಹಿಸುತ್ತದೆ. **ಪ್ರಕಟನಾ ಸಮಿತಿ**—ರಾಷ್ಟ್ರಸಂಘದ ಕಾರ್ಯವಿಧಾನವು ಜಗತ್ತಿನ ಎಲ್ಲ ರಾಷ್ಟ್ರಗಳಿಗೆ ಗೊತ್ತಾಗುವ ಉದ್ದೇಶದಿಂದ ರಾಷ್ಟ್ರಸಂಘವು ಮಾಡಿದ ನಿರ್ಣಯಗಳನ್ನು ಮತ್ತು ಅದರಿಂದ ನಡೆಯುತ್ತಿರುವ ಕಾರ್ಯಗಳನ್ನು ವಿವರವಾಗಿ ಪ್ರಕಾಶನಗೊಳಿಸುತ್ತದೆ. ಈ ಮೇರೆಗೆ ಬೇರೆ ಬೇರೆ ಸಮಿತಿಗಳನ್ನು ಸ್ಥಾಪಿಸಿ ಅವುಗಳ ಮುಖಾಂತರವಾಗಿ ಅನೇಕ ಉಪಯುಕ್ತ ಕಾರ್ಯಕಲಾಪಗಳನ್ನು ರಾಷ್ಟ್ರಸಂಘವು ನೆರವೇರಿಸುತ್ತದೆ.

**ಸೆಕ್ರೆಟರಿಯೆಟ್**—ಮೇಲೆ ವಿವರಿಸಿದಂತೆ ವಿವಿಧವೂ ವ್ಯಾಪಕವೂ ಆದ ರಾಷ್ಟ್ರಸಂಘದ ಕಾರ್ಯಗಳು ಸರಿಯಾಗಿ ನಡೆದು ಬೇರೆ ಬೇರೆ ಮಂಡಲಗಳಲ್ಲಿ ಮತ್ತು ಸಮಿತಿಗಳಲ್ಲಿ ಏಕಸೂತ್ರತೆ ಉಂಟಾಗಿ ಈ ವಿಷಯಗಳು ಎಲ್ಲ ರಾಷ್ಟ್ರಗಳಿಗೆ ಗೊತ್ತಾಗಬೇಕೆಂದು ಜಿನೇವದಲ್ಲಿ ದೊಡ್ಡದಾದ ಸೆಕ್ರೆಟರಿಯೆಟ್ ಕಚೇರಿ ಸ್ಥಾಪಿಸಲಾಗಿದೆ. ಈ ಕಚೇರಿಯಲ್ಲಿ ರಾಷ್ಟ್ರಸಂಘದ ಸೇವೆಯಲ್ಲಿದ್ದಂತಹ ಮತ್ತು ರಾಷ್ಟ್ರಸಂಘಕ್ಕೆ ಹೊಣೆಗಾರರಾಗಿ ತಮ್ಮ ತಮ್ಮ ಕೆಲಸಗಳಲ್ಲಿ ಪ್ರವೀಣರಾದಂತಹ ೬೦೦ ಸ್ತ್ರೀಪುರುಷರು ಕೆಲಸ ಮಾಡುತ್ತಿರುವರು. ಈ ಸೆಕ್ರೆಟರಿಯೆಟಿನಲ್ಲಿಯ ಎಲ್ಲಕ್ಕೂ ಮುಖ್ಯನಾದ ಅಧಿಕಾರಿಗೆ ಸೆಕ್ರೆಟರಿ ಜನರಲ್ ಎಂದು ಹೆಸರು. ಈತನ

ಕೈಕೆಳಗೆ ಒಬ್ಬ ಡೆಪ್ಯುಟಿ ಸೆಕ್ರೆಟರಿ ಜನರಲ್ ಮತ್ತು ಮೂವರು ಅಂಡರ ಸೆಕ್ರೆಟರಿ ಜನರಲರು ಇರುವರು. ಈ ಮಂಡಲದ ಕೆಲಸದ ಸೌಕರ್ಯಕ್ಕೋಸುಗ ಬೇರೆ ಬೇರೆ ವಿಭಾಗಗಳನ್ನು ಕಲ್ಪಿಸಲಾಗಿದೆ.

**ರಾಷ್ಟ್ರಸಂಘಕ್ಕೆ ತಗಲುವ ವೆಚ್ಚ**:—ಪ್ರಪಂಚದಲ್ಲಿ ಶಾಂತಿಯನ್ನು ಸ್ಥಾಪಿಸಿ ಸ್ವಾಸ್ಥ್ಯವನ್ನು ನೆಲೆಗೊಳಿಸುವುದಕ್ಕೆ ರಾಷ್ಟ್ರಸಂಘವು ಕೈಕೊಂಡಿರುವ ಈ ಕಾರ್ಯಗಳಿಗೆ ವೆಚ್ಚವು ಬರುತ್ತದೆ. ಈ ವೆಚ್ಚವು ಈಗ ಒಂದು ವರ್ಷಕ್ಕೆ ೧೦ ಲಕ್ಷ ಪೌಂಡು ಅಥವಾ ಸ್ಥೂಲವಾಗಿ ೧೩ ಕೋಟಿ ರೂಪಾಯಿ ಅದೆ. ಜಗತ್ತಿನ ಎಲ್ಲ ರಾಷ್ಟ್ರಗಳ ಭೂ-ಜಲ-ಸೇನೆಗಳ ವಾರ್ಷಿಕ ವೆಚ್ಚವು ಸುಮಾರು ೩೭೫ ಕೋಟಿ ಪೌಂಡು ಆಗಿದೆ. ಇದರ ಮಾನದಿಂದ ಈ ಮೇಲ್ಕಡ ಹಣವು ಅಲ್ಪವೆ ಸೈ. ೧೦ ಲಕ್ಷ ಪೌಂಡಿನ ಈ ಹಣವು ರಾಷ್ಟ್ರಸಂಘಕ್ಕೆ ಸೇರಿದ ೫೪ ರಾಷ್ಟ್ರಗಳಲ್ಲಿ ಆ ರಾಷ್ಟ್ರದ ಜನಸಂಖ್ಯೆ ಮತ್ತು ಆದಾಯ ಇವುಗಳ ಮಾನದಿಂದ ಗೊತ್ತುಪಡಿಸಿದ ಒಂದು ವಿಶಿಷ್ಟ ಪ್ರಮಾಣದಂತೆ ಹಂಚಲಾಗಿದೆ. ಆದುದರಿಂದ ಪ್ರತಿಯೊಂದು ರಾಷ್ಟ್ರಕ್ಕೆ ಇದರಿಂದ ಬರುವ ವೆಚ್ಚವು ಅದರ ಸಾಮರ್ಥ್ಯದ ಮಾನದಿಂದ ಅತ್ಯಂತ ಅಲ್ಪವಾಗಿದೆ. ರಾಷ್ಟ್ರಸಂಘವನ್ನು ಕುರಿತು ಇಂಗ್ಲಂಡು ೧ ಲಕ್ಷ ಮತ್ತು ಹಿಂದುಸ್ಥಾನವು ೭೫ ಸಾವಿರ ಪೌಂಡು ಹಣವನ್ನು ವೆಚ್ಚಮಾಡಬೇಕಾಗುತ್ತದೆ. ಈ ಎರಡು ರಾಷ್ಟ್ರಗಳು ಸೈನ್ಯದ ನಿಮಿತ್ತವಾಗಿ ಮಾಡುವ ವೆಚ್ಚವನ್ನು ನೋಡಿದರೆ ಇದು ಅತ್ಯಲ್ಪವಾಗಿದೆ.

---

## ಸಾರಾಂಶವು

ರಾಷ್ಟ್ರಸಂಘದ ಆವಶ್ಯಕತೆ—ವೈಜ್ಞಾನಿಕ ಶೋಧನೆಗಳಿಂದ ಜನರ ಸುಖಸೌಲಭ್ಯಗಳಂತೆ ಯುದ್ಧ ಸಾಮಗ್ರಿಯಲ್ಲಿಯೂ ವಿಧ್ವಂಸಕ ಸಾಧನಗಳಲ್ಲಿಯೂ ಬೆಳವಣಿಗೆ; ಯುದ್ಧದಿಂದ ಆಗುವ ಅಪಾರವಾದ ಹಾನಿ. ಯುದ್ಧದಲ್ಲಿ ತೊಡಗಿದ ರಾಷ್ಟ್ರಗಳಂತೆ ತಟಸ್ಥ ರಾಷ್ಟ್ರಗಳಿಗೂ ತೊಂದರೆ. ಆದುದರಿಂದ ರಾಷ್ಟ್ರಗಳಲ್ಲಿಯ ಜಗಳಗಳನ್ನು ಸಾಮೋಪಾಯದಿಂದ ಬಗೆಹರಿಸುವ ಸಂಘದ ಆವಶ್ಯಕತೆ.

ರಾಷ್ಟ್ರಸಂಘದ ಸ್ಥಾಪನೆ—ಜಾನೆವರಿ ೧೯೨೦. ಸದ್ಯದಲ್ಲಿ ಪ್ರಪಂಚದ ೬೫ ರಾಷ್ಟ್ರಗಳಲ್ಲಿ ೫೪ ರಾಷ್ಟ್ರಗಳು ರಾಷ್ಟ್ರಸಂಘದಲ್ಲಿ ಸೇರಿಕೊಂಡಿವೆ. ರಾಷ್ಟ್ರಸಂಘವನ್ನು ಸ್ಥಾಪಿಸುವ ಕಲ್ಪನೆ ವುಡ್ರೊ ವಿಲ್ಸನ್ ಇವರಿಂದ ಹುಟ್ಟಿತು.

ರಾಷ್ಟ್ರಸಂಘದ ಘಟನೆ—

ಅಸೆಂಬ್ಲಿ—ಮುಖ್ಯಸಭೆ; ಕೌನ್ಸಿಲ್—ಕಾರ್ಯಕಾರಿ ಮಂಡಲ; ಅಂತರರಾಷ್ಟ್ರೀಯ ನ್ಯಾಯಮಂದಿರ—ರಾಷ್ಟ್ರ ರಾಷ್ಟ್ರಗಳಲ್ಲಿಯ ಜಗಳಗಳನ್ನು ಸಾಮೋಪಾಯದಿಂದ ಬಗೆಹರಿಸುವ ನ್ಯಾಯಾಸನ.

ಕೌನ್ಸಿಲಿನ ಮೇಲ್ವಿಚಾರಣೆಯಲ್ಲಿ ಬೇರೆ ಬೇರೆ ಕೆಲಸಗಳಿಗಾಗಿ ಕೆಳಗೆ ಕಾಣಿಸಿದ ಸಮಿತಿಗಳು.

(೧) ಒಡಂಬಡಿಕೆ ಮತ್ತು ಅಂತರರಾಷ್ಟ್ರೀಯ ಕಟ್ಟಳೆಗಳ ಸಮಿತಿ.
(೨) ನೌಕಾದಲವನ್ನು ಕಡಿಮೆಮಾಡುವ ಕುರಿತು ಸಮಿತಿ.
(೩) ಸಂಚಾರ ಮಾರ್ಗಗಳ ಸಮಿತಿ.
(೪) ಚಲನ, ಹುಂಡಿ, ಮತ್ತು ಆರ್ಥಿಕ ಸಮಸ್ಯೆಗಳ ಸಮಿತಿ.
(೫) ಮಂಡೇಟ ಸಮಿತಿ.
(೬) ಆರೋಗ್ಯ ಸಮಿತಿ.
(೭) ಭೂತದಯೆ ಮತ್ತು ಪರೋಪಕಾರದ ಸಮಿತಿ.
(೮) ಬೌದ್ಧಿಕ ಸಹಕಾರಿತಾ ಸಮಿತಿ.
(೯) ಪ್ರಕಟನಾ ಸಮಿತಿ.
(೧೦) ಅಂತರರಾಷ್ಟ್ರೀಯ ಕೂಲಿಕಾರ ಸಂಘ.

ರಾಷ್ಟ್ರಸಂಘದ ಕಾರ್ಯವು ಜಿನೀವದಲ್ಲಿ ನಡೆಯುತ್ತದೆ. ಅಲ್ಲಿ ಈ ಸಂಘದ ಸೆಕ್ರೆಟೆರಿಯೆಟ್ ಎಂಬ ಕಾರ್ಯಾಲಯವಿದೆ. ಅಂತರರಾಷ್ಟ್ರೀಯ ನ್ಯಾಯಮಂದಿರದ ಕೆಲಸವು ಮಾತ್ರ ಹೇಗದಲ್ಲಿ ನಡೆಯುತ್ತದೆ. ರಾಷ್ಟ್ರಸಂಘದ ವಾರ್ಷಿಕ ವೆಚ್ಚವು ೧೦ ಲಕ್ಷ ಪೌಂಡು ಇದೆ.

---

# ೩೨ನೆಯ ಪ್ರಕರಣವು

## ಹತ್ತೊಂಬತ್ತನೆಯ ಮತ್ತು ಇಪ್ಪತ್ತನೆಯ ಶತಕಗಳಲ್ಲಿಯ ಇಂಗ್ಲಂಡು

**ಬಳಕೆ**—ಕಳೆದ ಒಂದುವರೆ ನೂರು ವರ್ಷಗಳಲ್ಲಿ ಬಳಕೆಗೆ ಸಾಹಾಯ್ಯವಾಗುವಂತಹ ಮಹತ್ತ್ವದ ವೈಜ್ಞಾನಿಕ ಪರಿಶೋಧನಗಳು ನಡೆದುವು. ಅವುಗಳಿಂದ ಬಳಕೆಯ ವಿಚಾರದಲ್ಲಿ ಕ್ರಾಂತಿ ಉಂಟಾಗಿ ದೂರದೂರದ ಪ್ರದೇಶಗಳಲ್ಲಿಯೂ ಅವುಗಳ ಜನತೆಯಲ್ಲಿಯೂ ಪರಸ್ಪರ ಸಂಬಂಧವು ಬೆಳೆಯಿತು. ಜಾರ್ಜ ಸ್ಟೀಫನ್‌ಸನನು ೧೮೨೫ರಲ್ಲಿ ಉಗೆಯ ಶಕ್ತಿಯಿಂದ ನೆಲದ ಮೇಲೆ ನಡೆವ ಯಂತ್ರವನ್ನು ಕಂಡುಹಿಡಿದನು. ಬಳಿಕ ೧೮೩೦ರಲ್ಲಿ ಲಿವರ್ಪೂಲಿನಿಂದ ಮಂಚೆಸ್ಟರ ವರೆಗೆ ಉಗೆಬಂಡಿಯ ಮಾರ್ಗವು ಆರಂಭವಾಯಿತು. ಅನಂತರದಲ್ಲಿ ಈ ಉಗೆಬಂಡಿಯ ಮಾರ್ಗವು ಬಹಳವಾಗಿ ಬೆಳೆದು ಇಂಗ್ಲಂಡಿನಲ್ಲಿ ಎಲ್ಲೆಲ್ಲಿಯೂ ಲೋಹಮಾರ್ಗದ ಜಾಳಿಗೆಗಳು ಪಸರಿಸಿದುವು. ಜಗತ್ತಿನ ಬೇರೆ ದೇಶಗಳಲ್ಲಿಯೂ ದೊಡ್ಡ ದೊಡ್ಡ ಲೋಹಮಾರ್ಗಗಳು ಹುಟ್ಟಿದುವು. ಉಗೆಯ ಸಾಹಾಯ್ಯದಿಂದ ಓಡುವ ಹಡಗುಗಳಾದರೂ ಬಳಕೆಗೆ ಬಂದುವು. ೧೮೩೮ರಲ್ಲಿ 'ಗ್ರೇಟ್ ವೆಸ್ಟರ್ನ' ಎಂಬ ಉಗೆಹಡಗವು ೧೫ ದಿನಗಳಲ್ಲಿ ಅಟಲಾಂಟಿಕ ಮಹಾಸಾಗರವನ್ನು ದಾಟಿತು. ಮುಂದೆ ಇಪ್ಪತ್ತನೆಯ ಶತಕದಲ್ಲಿ ವಿದ್ಯುತ್ತಿನ ಬಲದಿಂದ ಲೋಹಶಕಟಗಳೂ ಟ್ರೆಮುಗಳೂ ಓಡಾಡತೊಡಗಿದುವು. ಅದೇ ಮೇರೆಗೆ ಪೆಟ್ರೋಲ ಎಣ್ಣೆಯ ಸಾಹಾಯ್ಯದಿಂದ ಓಡುವ ಮೋಟರುಗಳು, ಲಾರಿಗಳು ಮತ್ತು ಬೈಸಿಕಲುಗಳು ಬಳಕೆಗೆ ಬಂದುದರಿಂದ ಉಗೆಬಂಡಿ ಇಲ್ಲದ ಊರುಗಳೂ ಒಂದನ್ನೊಂದು ಹೊಂದಿಕೊಂಡುವು. ಈ ರೀತಿಯಾಗಿ ಜನರನ್ನು ಮತ್ತು ಸರಕುಗಳನ್ನು ಒಯ್ಯುವ ವಿಷಯದಲ್ಲಿ ಮೋಟರ ಲಾರಿಗಳು ಉಗೆಬಂಡಿಯೊಡನೆ ಸ್ಪರ್ಧೆಯನ್ನು ಹೂಡಿದುವು.

ತರುವಾಯ ಇಪ್ಪತ್ತನೆಯ ಶತಕದಲ್ಲಿ ಗಾಳಿಯಲ್ಲಿ ಚರಿಸುವ ವಿಮಾನಗಳ ಶೋಧನೆ ಆಯಿತು. ೧೯೦೯ರಲ್ಲಿ ಬ್ಲೇರಿಯಟ್ ಎಂಬ ಫ್ರೆಂಚ ವೈಮಾನಿಕನು ಕೆಲೆಯಿಂದ ಡೋವರದ ವರೆಗೆ ವಿಮಾನದಿಂದ ಪಯಣಮಾಡಿದನು. ಮುಂದೆ ಈ ವಿದ್ಯೆಯಲ್ಲಿ ಬಹಳ ಪ್ರಗತಿ ಆಯಿತು. ಇದನ್ನು ಸಾಧಿಸುತ್ತಿರುವಾಗ ಅನೇಕ

ಸಾಹಸಿಗಳು ತಮ್ಮ ಪ್ರಾಣಗಳನ್ನು ಸಂಕಟಕ್ಕೆ ಗುರಿಮಾಡಿಕೊಂಡರು. ಇಂದು ಈ ವಿದ್ಯೆಯಲ್ಲಿ ಅತಿಶಯವಾದ ಪ್ರಗತಿಯಾಗಿರುವುದು. ಡ್ರೇಕನಿಗೆ ೩೫೦ ವರ್ಷ ಗಳ ಪೂರ್ವದಲ್ಲಿ ಹಡಗದಿಂದ ಭೂಪ್ರದಕ್ಷಿಣೆಯನ್ನು ಮಾಡಲು ೩ ವರ್ಷಗಳು ಬೇಕಾದುವು; ಆದರೆ ಇಂದು ವಿಮಾನದ ಬಲದಿಂದ ೩ ವಾರಗಳಲ್ಲಿ ಭೂಪ್ರದಕ್ಷಿಣೆ ಯನ್ನು ಮಾಡುವುದು ಸಾಧ್ಯವಾಗಿದೆ.

ಹಿಂದಿನ ಕಾಲದಲ್ಲಿ ಅಂಚೆಯ ಓಲೆಗಳು ಕುದುರೆಯ ಗಾಡಿಗಳಲ್ಲಿ ಒಯ್ಯ ಲ್ಪಡುತ್ತಿದ್ದುವು. ಬಳಿಕ ಅವು ಉಗೆಬಂಡಿ ಮತ್ತು ಉಗೆಹಡಗುಗಳಲ್ಲಿ ಹೋಗ ತೊಡಗಿದುವು. ಈಗಂತೂ ಅಂಚೆಯನ್ನು ವಿಮಾನ ಮಾರ್ಗದಿಂದಲೂ ಕಳಿಸುವ ವ್ಯವಸ್ಥೆಯಾಗಿದೆ.

ಅದರಂತೆಯೆ ತಂತಿಯಂತ್ರ, ಟೆಲಿಫೋನ್, ತಂತಿಯಿಲ್ಲದ ಸಂದೇಶಯಂತ್ರ ಮತ್ತು ತಂತಿಯಿಲ್ಲದ ಟೆಲಿಫೋನ್ ಇವುಗಳ ಸಾಹಾಯ್ಯದಿಂದ ಬಹು ದೂರದ ಜನರಿಗೆ ಸುದ್ದಿಯನ್ನು ತಿಳುಹುವುದು, ಅಷ್ಟೇಕೆ ಅವರೊಡನೆ ಪ್ರತ್ಯಕ್ಷವಾಗಿ ಮಾತ ನಾಡುವುದೂ ಸಾಧ್ಯವಾಗಿದೆ. ಈಗ ಪ್ರಯೋಗಾವಸ್ಥೆಯಲ್ಲಿರುವ ಟೆಲಿವಿಜನಿನ (ದೂರದರ್ಶನ ಯಂತ್ರ) ಸಾಹಾಯ್ಯದಿಂದ ಟೆಲಿಫೋನಿನಲ್ಲಿ ನಾವು ಮಾತನಾಡುವ ಮನುಷ್ಯನು ನಮಗೆ ಕಾಣಿಸುವುದು ಸಾಧ್ಯವಾಗಬಹುದೆಂದು ತೋರುತ್ತದೆ.

ಉದ್ಯೋಗವ್ಯವಸಾಯಗಳು ಮತ್ತು ವ್ಯಾಪಾರವು—೧೮ನೆಯ ಶತಕ ದಲ್ಲಿ ನೇಯುವ ವಿದ್ಯೆಯಲ್ಲಿ ಶೋಧನೆಗಳು ನಡೆದುವು. ಅವುಗಳಿಂದ ಔದ್ಯೋಗಿಕ ಕ್ರಾಂತಿ ಉಂಟಾಗಿ ಇಂಗ್ಲೆಂಡು ವ್ಯಾಪಾರೋದ್ಯೋಗಗಳಲ್ಲಿ ಮಿಕ್ಕ ರಾಷ್ಟ್ರಗಳನ್ನು ಹಿಂದೂಡಿತು. ೧೯ನೆಯ ಶತಕದಲ್ಲಿ ನಡೆದ ಪರಿಶೋಧನೆಗಳಿಂದಲೂ ಇಂಗ್ಲೆಂಡು ಔದ್ಯೋಗಿಕ ಕ್ಷೇತ್ರದಲ್ಲಿ ಪ್ರಗತಿಯನ್ನು ಮಾಡಿ ತನ್ನ ಶ್ರೇಷ್ಠತೆಯನ್ನು ರಕ್ಷಿಸಿ ಕೊಂಡಿದೆ. ಔದ್ಯೋಗಿಕ ರಂಗದಲ್ಲಿ ಇಂಗ್ಲೆಂಡು ಮುಂದುವರಿಯಲು, ಅರಳೆ ಮತ್ತು ಉಣ್ಣೆಯ ಬಟ್ಟೆಗಳನ್ನು ನೇಯುವ ದೊಡ್ಡ ದೊಡ್ಡ ಗಿರಣಿಗಳು, ಕಬ್ಬಿಣ ಕಲ್ಲಿದ್ದಲೆ ಮೊದಲಾದ ವಸ್ತುಗಳ ಕಣಿಗಳು, ಟಾಚಣಿಯನ್ನು ಮೊದಲುಗೊಂಡು ಉಗೆಬಂಡಿಯ ಇಂಜಿನುಗಳಂತಹ ದೊಡ್ಡ ದೊಡ್ಡ ಉಕ್ಕಿನ ಯಂತ್ರಗಳನ್ನು ನಿರ್ಮಿ ಸುವ ಪ್ರಚಂಡ ಉದ್ಯಮ ಮಂದಿರಗಳು, ಉಗೆಬಂಡಿಯ ಡಬ್ಬಿಗಳನ್ನು ಮತ್ತು ಉಕ್ಕಿನ ಹಡಗುಗಳನ್ನು ರಚಿಸುವ ಕಾರ್ಯಾಗಾರಗಳು ದೇಶದಲ್ಲಿ ಎಲ್ಲೆಡೆಗಳಲ್ಲಿ ಕಾಣತೊಡಗಿದುವು. ಇವುಗಳಲ್ಲಿ ಹುಟ್ಟಿದ ಸರಕುಗಳು ಪ್ರಪಂಚದ ದೂರ ದೂರದ ನಾಡುಗಳಿಗೆ ಹೋಗತೊಡಗಿದುವು. ಈ ಮೇರೆಗೆ ಇಂಗ್ಲೆಂಡು ಪ್ರಪಂಚಕ್ಕೆ ಸಿದ್ಧ ವಸ್ತುಗಳನ್ನು ಪೂರಯಿಸುವ ಉದ್ಯೋಗ ಭಾಂಡಾರವೆ ಆಗಿ ಪರಿಣಮಿಸಿತು.

ಇದರಿಂದ ಲೋಕದ ಎಲ್ಲ ದೇಶಗಳೊಡನೆ ಬಹು ದೊಡ್ಡ ಪ್ರಮಾಣದಲ್ಲಿ ಇಂಗ್ಲಂಡಿನ ವ್ಯಾಪಾರವು ನಡೆಯಿತು.

**ಕೂಲಿಕಾರರು**—ಔದ್ಯೋಗಿಕ ಕ್ರಾಂತಿಯಿಂದ ಮತ್ತು ವ್ಯಾಪಾರಾಭಿವೃದ್ಧಿಯಿಂದ ಗಿರಣಿಗಳು, ಉದ್ಯಮ ಮಂದಿರಗಳು, ಕಾರ್ಯಾಗಾರಗಳು, ಕಬ್ಬಿಣ ಕಲ್ಲಿದ್ದಲೆಯ ಕಣಿಗಳು ಇಂಗ್ಲಂಡಿನಲ್ಲಿ ವಿಶೇಷವಾಗಿ ಬೆಳೆದುವು. ಮನೆಮಾರಿಗೆಯ ಉದ್ಯೋಗಗಳು ಮತ್ತು ಸಣ್ಣಾಗಿ ನಡೆವ ಒಕ್ಕಲತನವು ಹಿಂದುಳಿಯಿತು. ಇದರ ಫಲವಾಗಿ ಅಲ್ಪರಾದ ಒಕ್ಕಲಿಗರು ಮತ್ತು ಸಣ್ಣ ಪುಟ್ಟ ಹೋರೆಗಳಲ್ಲಿ ತೊಡಗಿದವರು ಉದ್ಯೋಗಮಂದಿರಗಳಿಗೆ ಮತ್ತು ಗಿರಣಿಗಳಿಗೆ ನೆಲೆಯಾದ ದೊಡ್ಡ ದೊಡ್ಡ ಪಟ್ಟಣಗಳಿಗೆ ಹೋಗಿ ಅಲ್ಲಿ ಕೂಲಿಯವರಾಗಿ ಕೆಲಸ ಮಾಡುವ ಹೊತ್ತು ಬಂದಿತು. ಮುಂದೆ ಫ್ರಾನ್ಸಿನೊಡನೆ ನಡೆದ ಯುದ್ಧವು ಮುಗಿದ ಬಳಿಕ ಅನೇಕ ಸೈನಿಕರೂ ನಾವಿಕರೂ ಕೂಲಿಯವರಾಗಿ ಗಿರಣಿಗಳಲ್ಲಿ ದುಡಿಯಲು ಬರ ತೊಡಗಿದರು. ಎಳೆಯ ಮಕ್ಕಳೂ ಹೆಂಗುಸರೂ ಈ ಕೆಲಸಕ್ಕೆ ಬರಲಾರಂಭಿಸಿದರು. ಕೂಲಿಕಾರರ ಸಂಖ್ಯೆ ಬೆಳೆದುದರಿಂದ ಕೂಲಿಯ ಪ್ರಮಾಣವು ಇಳಿಯಿತು. ಉದ್ಯೋಗಮಂದಿರಗಳು ಮತ್ತು ಗಿರಣಿಗಳು ಹೊಲಸಾದ ಮತ್ತು ಇಟ್ಟಣೆಯ ಸ್ಥಳಗಳಲ್ಲಿ ನೆಲಸಿರುತ್ತಿದ್ದುವು. ಇಂತಹ ಸ್ಥಳಗಳಲ್ಲಿ ೧೨-೧೪ ಗಂಟೆಗಳ ವರೆಗೆ ಕೂಲಿಯವರು ದುಡಿಯಬೇಕಾಗುತ್ತಿತ್ತು. ಪಟ್ಟಣಗಳಲ್ಲಿ ಅವರು ಇರುವ ಕೋಣೆಗಳೂ ಬಹಳ ಹೊಲಸು ಮತ್ತು ಇಕ್ಕಟ್ಟಿನವಾಗಿರುತ್ತಿದ್ದುವು. ಹೀಗೆ ಕೂಲಿಕಾರರ ಸ್ಥಿತಿ ಬಹಳ ಕಷ್ಟಮಯವಾಗಿದ್ದಿತು. ಈ ಸ್ಥಿತಿಯನ್ನು ಸುಧಾರಿಸಲು ಯಾವ ದಾರಿಯೂ ಇರಲಿಲ್ಲ. ಕೂಲಿಕಾರರು ತಮ್ಮ ಉನ್ನತಿಗಾಗಿ ಸಂಘಗಳನ್ನು ಸ್ಥಾಪಿಸಿಕೊಳ್ಳುವುದು ಆ ಕಾಲದಲ್ಲಿ ಕಟ್ಟಳೆಗೆ ವಿರೋಧಿಯಾಗಿ ತಿಳಿಯಲಾಗುತ್ತಿತ್ತು. ಗಿರಣಿಗಳ ಒಡೆಯರ ಮತ್ತು ಕೂಲಿಕಾರರ ವಿಷಯದಲ್ಲಿ ಪಾರ್ಲಿಮೆಂಟಿನ ವೃತ್ತಿ ತಟಸ್ಥವಾಗಿತ್ತು. ಆದರೆ ೧೮೩೨, ೧೮೬೭, ೧೮೮೪-೮೫ ಈ ವರ್ಷಗಳಲ್ಲಿ ಪಾರ್ಲಿಮೆಂಟಿನ ಸುಧಾರಣೆಯ ಕಟ್ಟಳೆಗಳು ಸ್ವೀಕೃತವಾದ ಬಳಿಕ ಮಧ್ಯಮ ಮತ್ತು ನಿಕೃಷ್ಟ ವರ್ಗಗಳ ಮತ್ತು ಕೂಲಿಕಾರರ ಪ್ರತಿನಿಧಿಗಳು ಪಾರ್ಲಿಮೆಂಟ ಸಭೆಯಲ್ಲಿ ಬರತೊಡಗಿದರು. ಅದರಿಂದ ಕೂಲಿಕಾರರ ಸ್ಥಿತಿಯ ಕಡೆಗೆ ಪಾರ್ಲಿಮೆಂಟಿನ ದೃಷ್ಟಿ ಹೊರಳಿ ಕೂಲಿಕಾರರಿಗೆ ಉಪಯುಕ್ತವಾದ ಅನೇಕ ಕಟ್ಟಳೆಗಳು ಪಾರ್ಲಿಮೆಂಟಿನಲ್ಲಿ ಸ್ವೀಕೃತವಾದುವು. ಇವುಗಳ ಬಲದಿಂದ ಕೂಲಿಕಾರರ ಸ್ಥಿತಿಯಲ್ಲಿ ಸುಧಾರಣೆಯಾಗಲು ಆರಂಭವಾಯ್ತು. ಕೂಲಿಕಾರರು ತಮ್ಮ ಸಂಘಗಳನ್ನು ಸ್ಥಾಪಿಸಿಕೊಳ್ಳಬಹುದು,

ಅಗತ್ಯವೆನಿಸಿದರೆ ಸಂಪನ್ನೂ ಕೈಕೊಳ್ಳಬಹುದು; ಈ ಕೃತ್ಯಗಳು ಶಾಸನ ವಿರೋಧಿಯಲ್ಲವೆಂದು ನಿರ್ಣಯಿಸಲಾಯಿತು. ೧೮೪೨ರಲ್ಲಿಯ ಕಟ್ಟಳೆಯಿಂದ ಎಳೆ ಮಕ್ಕಳನ್ನು ಕಣಿಗಳಲ್ಲಿಯ ಕೆಲಸಕ್ಕೆ ತೊಡಗಿಸಬಾರದು ಎಂದು ನಿಯಮವಾಯಿತು. ಅದೇ ಮೇರೆಗೆ ಧುಡಿತದ ಗಂಟೆಗಳನ್ನು ಕಡಿಮೆ ಮಾಡುವುದು, ಕೆಲಸಮಾಡುತ್ತಿರುವಾಗ ಕೂಲಿಕಾರರಿಗೆ ಅಪಾಯವು ಸಂಭವಿಸಿದರೆ ಅದಕ್ಕಾಗಿ ಗಿರಣಿಯ ಒಡೆಯನು ಪರಿಹಾರವನ್ನು ಕೊಡುವಂತೆ ಮಾಡುವುದು, ಮುಪ್ಪಿನಲ್ಲಿ ನಿವೃತ್ತಿವೇತನವನ್ನು ನೀಡುವುದು, ಮುಂತಾದ ವಿಚಾರಗಳಲ್ಲಿ ಉಪಯುಕ್ತವಾದ ಕಟ್ಟಳೆಗಳನ್ನು ಮಾಡಲಾಯಿತು. ಇದೇ ರೀತಿಯಲ್ಲಿ ಆಂತರರಾಷ್ಟ್ರೀಯ ಕೂಲಿಕಾರ ಸಂಘದ ಸಂಸ್ಥೆಯ ಪರವಾಗಿ ಪ್ರಪಂಚದ ಬೇರೆ ಬೇರೆ ರಾಷ್ಟ್ರಗಳಲ್ಲಿಯ ಕೂಲಿಕಾರರ ಸ್ಥಿತಿಯನ್ನು ಮೇಲುಗೊಳಿಸಲು ಪ್ರಯತ್ನಗಳು ನಡೆಯುತ್ತಲಿವೆ.

ಶಿಕ್ಷಣ—೧೯ನೆಯ ಶತಕದ ಆರಂಭದಲ್ಲಿ ಮಾಧ್ಯಮಿಕ ಮತ್ತು ಉಚ್ಚ ಶಿಕ್ಷಣವನ್ನು ಕೊಡುವಂತಹ ಅನೇಕ ಶಾಲೆ ಕಾಲೇಜುಗಳು ಇದ್ದುವು. ಆದರೂ ಜನಸಂಖ್ಯೆಯ ಪ್ರಮಾಣದಲ್ಲಿ ಪ್ರಾಥಮಿಕ ಶಿಕ್ಷಣದ ಶಾಲೆಗಳು ಹೆಚ್ಚದೆ ಇರುವುದರಿಂದ ಹಳ್ಳಿಪಳ್ಳಿಗಳ ಜನಸಾಮಾನ್ಯರು ಅಶಿಕ್ಷಿತರಾಗಿಯೆ ಇದ್ದರು. ಕೆಲವು ಖಾಸಗಿ ಸಂಘಗಳು ಪ್ರಾಥಮಿಕ ಶಿಕ್ಷಣವನ್ನು ನೀಡುತ್ತಿದ್ದುವು. ಇವುಗಳಿಗೆ ೧೮೩೩ರಿಂದ ಮುಂದೆ ಸರಕಾರದಿಂದ ಸಾಹಾಯ್ಯಧನವು ದೊರೆಯಲಾರಂಭಿಸಿತು. ಇಂತಹ ಶಾಲೆಗಳ ಸಂಖ್ಯೆ ಅಲ್ಪವಾಗಿತ್ತು. ಜನಾಂಗದ ಶಿಕ್ಷಣದ ಹೊಣೆ ಸರಕಾರದ ಮೇಲೆ ಇರುವುದೆಂದು ಆ ಕಾಲದ ಜನರ ತಿಳವಳಿಕೆಯಿರಲಿಲ್ಲ. ಆದರೆ ಪಾರ್ಲಿಮೆಂಟಿನ ಸುಧಾರಣೆಯ ಕಟ್ಟಳೆಗಳಿಂದ ಮತದಾತರ ಸಂಘವು ವಿಸ್ತೃತವಾಯಿತು. ಹೀಗೆ ಹೊಸದಾಗಿ ಪಡೆದ ಈ ಹಕ್ಕನ್ನು ಜನತೆ ಚೆನ್ನಾಗಿ ಉಪಯೋಗಿಸಿಕೊಳ್ಳಬೇಕಾದರೆ ಶಿಕ್ಷಣವು ಅಗತ್ಯವಾದುದು ಎಂದು ಜನಾಭಿಪ್ರಾಯವು ಬಲಿಯಿತು. ಆದುದರಿಂದ ೧೮೭೦, ೧೯೦೨, ೧೯೧೮ ಮತ್ತು ೧೯೪೪ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕುರಿತು ಕಟ್ಟಳೆಗಳು ಆದುವು. ಅವುಗಳಿಂದ ಪ್ರಾಥಮಿಕ ಶಿಕ್ಷಣವು ಒತ್ತಾಯವಾದುದೂ ಪುಕ್ಕಟೆಯೂ ಆಯಿತು. ಇದರಿಂದ ಪ್ರತಿಯೊಬ್ಬ ನಾಗರಿಕನು ಬಾಲ್ಯದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆವಂತೆ ವ್ಯವಸ್ಥೆಯಾಯಿತು.

ಮಾಧ್ಯಮಿಕ ಶಿಕ್ಷಣ, ಉದ್ಯಮ ಶಿಕ್ಷಣ, ಕಲಾಕೌಶಲ್ಯದ ಶಿಕ್ಷಣ, ಶಾಸ್ತ್ರೀಯ ಶಿಕ್ಷಣ, ವಿಶ್ವವಿದ್ಯಾಲಯದ ಶಿಕ್ಷಣ ಮುಂತಾದ ಶಿಕ್ಷಣವನ್ನು ಕೊಡುವ ಶಾಲೆ ಕಾಲೇಜುಗಳಾದರೂ ಹೆಚ್ಚಿದುವು.

**ಮನೆಗಳು, ಮನೋರಂಜನೆಯ ಸಾಧನಗಳು ಮುಂತಾದುವು** — ಈ ಕಾಲದ ಉತ್ತರಾರ್ಧದಲ್ಲಿ ಜನಗಳ ಮನೆಗಳ ರೀತಿಯಲ್ಲಿಯೂ ಬಹಳ ಸುಧಾರಣೆಯಾಯಿತು. ಮನೆಗಳನ್ನು ಕಟ್ಟುವಾಗ ಗಾಳಿ, ಬೆಳಕು, ಸ್ವಚ್ಛತೆ ಮತ್ತು ಸೊಬಗು ಮುಂತಾದ ವಿಷಯಗಳತ್ತ ಜನರು ಲಕ್ಷ್ಯವನ್ನು ಪೂರಯಿಸ ತೊಡಗಿದರು. ಹೊಸದಾಗಿ ವಸತಿಗಳು ಆಗುವ ಎಡೆಗಳಲ್ಲಿ, ಮನೆಗಳನ್ನು ಹೇಗೆ ಕಟ್ಟಬೇಕು ಎಂಬುದನ್ನು ಕುರಿತು ನಗರರಚನಾ ಶಾಸ್ತ್ರದಲ್ಲಿ ಸೂಚಿಸಲ್ಪಟ್ಟ ಪದ್ಧತಿಯನ್ನು ಅನುಸರಿಸಿ ಮನೆಗಳನ್ನು ಕಟ್ಟತೊಡಗಿದರು. ಹೊಸ ಶೋಧನೆಗಳಿಂದ ಮನೆಯಲ್ಲಿಯ ವಸ್ತುಗಳಾದರೂ ಸುಖಸೌಕರ್ಯಗಳನ್ನು ಒದಗಿಸುವಂತಹವು ಆದುವು. ಗಸಿನ ದೀಪಗಳು ಮತ್ತು ವಿದ್ಯುದ್ದೀಪಗಳು, ಫೊನೊಗ್ರಾಫ್, ಟೆಲಿಫೋನ್, ರೇಡಿಯೊ, ಟಾಯಿಪರಾಯಟರ, ಹೊಲಿಗೆಯ ಯಂತ್ರ, ಬೈಸಿಕಲ್ ಮುಂತಾದ ಪದಾರ್ಥಗಳು ಮಧ್ಯಮ ವರ್ಗದ ಜನರ ಮನೆಗಳಲ್ಲಿಯೂ ಕಾಣ ತೊಡಗಿದುವು. ನಾಟಕ, ಚಲನ ಚಿತ್ರ, ವಾಕ್ಚಿತ್ರ (ಟಾಕಿ) ಇವು ಮಧ್ಯಮ ವರ್ಗದ ಮನೋರಂಜನೆಯ ಸಾಧಗಳಾದುವು. ಕ್ರಿಕೆಟ್, ಫುಟ್‌ಬಾಲ್, ರಗ್ಬಿ ಫುಟ್‌ಬಾಲ್, ಟೆನಿಸ್, ಬಡ್‌ಮಿಂಗ್ಟನ್ ಇವು ಮೆಚ್ಚಿನ ಆಟಗಳಾದುವು.

---

## ಸಾರಾಂಶವು.

**ಬಳಕೆ** — ಉಗೆಬಂಡಿ, ಹಡಗು, ಮೋಟರು, ವಿಮಾನ, ತಂತಿಯಂತ್ರ, ತಂತಿಯಿಲ್ಲದ ಸಂದೇಶಯಂತ್ರ, ರೇಡಿಯೊ ಈ ಸಾಧನಗಳಿಂದ ದೂರದೂರದ ಜನಾಂಗಗಳಲ್ಲಿ ಬಳಕೆ ಬೆಳೆಯಿತು.

**ಉದ್ಯೋಗವ್ಯವಸಾಯಗಳು ಮತ್ತು ವ್ಯಾಪಾರವು**—೧೮ನೆಯ ಶತಕದ ಔದ್ಯೋಗಿಕ ಕ್ರಾಂತಿಯಿಂದ ವ್ಯಾಪಾರೋದ್ಯೋಗಗಳಲ್ಲಿ ಇಂಗ್ಲಂಡು ಮುಂದುವರಿಯಿತು. ೧೯ನೆಯ ಶತಕದಲ್ಲಿಯೂ ಅದು ಹೊಸ ಶೋಧನೆಗಳನ್ನು ಸರಿಯಾಗಿ ಉಪಯೋಗಿಸಿಕೊಂಡು ತನ್ನ ಶ್ರೇಷ್ಠತೆಯನ್ನು ಕಾಯ್ದುಕೊಂಡಿತು. ಗಿರಣಿಗಳು, ಉದ್ಯೋಗಮಂದಿರಗಳು ಮತ್ತು ಕಾರ್ಯಾಗಾರಗಳು ಇಂಗ್ಲಂಡಿನಲ್ಲಿ ಬಹುವಾಗಿ ಅಭಿವೃದ್ಧಿಗೊಂಡುವು. ಪ್ರಪಂಚದ ಪ್ರಾಯಶಃ ಎಲ್ಲ ದೇಶಗಳಿಗೆ ಇಂಗ್ಲಂಡಿನಿಂದ ಸಿದ್ಧವಸ್ತುಗಳು ಹೋಗತೊಡಗಿದುವು. ಈ ಮೇರೆಗೆ ಇಂಗ್ಲಂಡು ಜಗತ್ತಿನ ಉದ್ಯೋಗಮಂದಿರವಾಗಿ ಪರಿಣಮಿಸಿತು.

**ಕೂಲಿಕಾರರು**—ಗಿರಣಿ, ಕಾರ್ಯಾಗಾರ ಇವುಗಳ ಅಭಿವೃದ್ಧಿಯಿಂದ ಮನೆ ಮಾರಿಗೆಯ ಹೋರೆಗಳು ಕುಸಿದುವು. ಕೂಲಿಕಾರರ ಸಂಖ್ಯೆ ಹೆಚ್ಚಿತು.

ಸ್ತ್ರೀಯರು, ಚಿಕ್ಕ ಬಾಲಕರು ದುಡಿಯಲಿಕ್ಕೆ ಬರಬೇಕಾಯಿತು. ಕೂಲಿಯ ದರವು ಕಡಿಮೆಯಾಯಿತು, ಕೆಲಸದ ಗಂಟೆಗಳು ಹೆಚ್ಚಿದುವು, ಇಟ್ಟಣಿಸಿದ ಗಾಳಿಯಲ್ಲಿ ದುಡಿಯಬೇಕಾಗುತ್ತಿತ್ತು. ಈ ಕಾರಣಗಳಿಂದ ಕೂಲಿಕಾರರ ಸ್ಥಿತಿ ಕೆಟ್ಟಿತು. ಆದರೆ ಮುಂದೆ ಪಾರ್ಲಿಮೆಂಟಿನವರು ಇದರಲ್ಲಿ ಲಕ್ಷ್ಯವನ್ನು ಪೂರಯಿಸಿ ಅವರ ಸ್ಥಿತಿಯನ್ನು ಸರಿಪಡಿಸಲು ಉಪಯುಕ್ತವಾದ ಕಟ್ಟಳೆಗಳನ್ನು ರಚಿಸಿದರು.

ಶಿಕ್ಷಣ — ಪ್ರಾಥಮಿಕ ಶಿಕ್ಷಣದ ಶಾಲೆಗಳು ಸ್ವಲ್ಪವಾಗಿದ್ದು, ಹಳ್ಳಿಪಳ್ಳಿಗಳಲ್ಲಿ ಅವುಗಳು ಹಬ್ಬಿರಲಿಲ್ಲವಾದುದರಿಂದ ಜನಸಾಮಾನ್ಯರು ಅಶಿಕ್ಷಿತರಾಗಿದ್ದರು. ಆದರೆ ಪಾರ್ಲಿಮೆಂಟಿನವರು ಈ ವಿಷಯವನ್ನು ಕುರಿತು ಕಟ್ಟಳೆಗಳನ್ನು ರಚಿಸಿ ಪ್ರಾಥಮಿಕ ಶಿಕ್ಷಣವು ಒತ್ತಾಯವಾಗಿಯೂ ಪುಕ್ಕಟೆಯಾಗಿಯೂ ದೊರೆವಂತೆ ಮಾಡಿದರು, ಆದರಿಂದ ಜನಸಾಮಾನ್ಯರಿಗೆ ಶಿಕ್ಷಣದ ಸೌಲಭ್ಯವು ಒದಗಿತು.

ಮನೆಗಳು, ಮನೋರಂಜನೆಯ ಸಾಧನಗಳು ಮುಂ. — ಬೆಳಕು, ಗಾಳಿ, ಸ್ವಚ್ಛತೆ ಈ ವಿಷಯಗಳನ್ನು ಲಕ್ಷಿಸಿ ಹೊಸತಾದ ಮನೆಗಳು ಕಟ್ಟಲಾದುವು. ಹೊಸ ಶೋಧನೆಗಳಿಂದ ಅನೇಕ ಪದಾರ್ಥಗಳು ಅಗ್ಗವಾದುವು. ಆದುದರಿಂದ ಅವು ಆವಶ್ಯಕವೆನಿಸಿ ಮಧ್ಯಮಸ್ಥಿತಿಯ ಜನರ ಮನೆಗಳಲ್ಲಿಯೂ ಕಾಣತೊಡಗಿದುವು.

---

# ಪರಿಶಿಷ್ಟವು

## ಹತ್ತೊಂಬತ್ತನೆಯ ಮತ್ತು ಇಪ್ಪತ್ತನೆಯ ಶತಕಗಳನ್ನು ಕುರಿತು ಮಹತ್ತ್ವದ ಪ್ರಶ್ನೆಗಳು.

೧. ಹತ್ತೊಂಬತ್ತನೆಯ ಮತ್ತು ಇಪ್ಪತ್ತನೆಯ ಶತಕಗಳಲ್ಲಿ ಪಾರ್ಲಿಮೆಂಟಿನ ಸುಧಾರಣೆಗಾಗಿ ಯಾವ ಕಟ್ಟಳೆಗಳು ಹುಟ್ಟಿದುವು? ಇವುಗಳ ಪರಿಣಾಮವೇನಾಯಿತು ಎಂಬುದನ್ನು ಹೇಳಿರಿ.

೨. ಗುಲಾಮರ ವ್ಯಾಪಾರವು ಎಂದು ಆರಂಭವಾಯಿತು? ಇದರಿಂದ ಯಾವ ಪರಿಣಾಮವು ಸಂಭವಿಸಿತು? ಈ ವ್ಯಾಪಾರವನ್ನು ನಿಲ್ಲಿಸಬೇಕೆಂದು ಏಕೆ ಎನಿಸಿತು? ಅದು ಎಂದು ನಿಲ್ಲಿಸಲಾಯಿತು?

೩. ಸಂರಕ್ಷಿತ ವ್ಯಾಪಾರ ಮತ್ತು ಅನಿರ್ಬಂಧ ವ್ಯಾಪಾರ ಇವುಗಳಲ್ಲಿ ಭೇದವೇನು? ಇವುಗಳಲ್ಲಿ ಯಾವ ಪದ್ಧತಿ ಇಂಗ್ಲಂಡಿನಲ್ಲಿ ಬಳಕೆಯಿದ್ದಿತು? ಅದರಲ್ಲಿ ವ್ಯತ್ಯಾಸವಾದುದು ಯಾವಾಗ?

೪. ಐರಿಶ್ ಜನರು ಸ್ವರಾಜ್ಯವನ್ನು ಪಡೆಯಲು ಚಳವಳಿಯನ್ನು ಏಕೆ ಪ್ರಾರಂಭಿಸಿದರು? ಇಂಗ್ಲಂಡಿನೊಡನೆ ಏಕೀಕರಣವಿರಲು, ಅವರಿಗೆ ಯಾವ ತೊಂದರೆಗಳು

ಉಂಟಾದುವು? ಈ ಚಳವಳಿಯಲ್ಲಿ ಯಾವ ಐರಿಶ್ ನಾಯಕರು ಮನಸ್ಸನ್ನು ಹಾಕಿದರು? ಈ ಚಳವಳಿಯ ವಿಷಯದಲ್ಲಿ ಇಂಗ್ಲಂಡಿನ ನೀತಿ ಏನಿದ್ದಿತು?

೫. ಕೆಳಗೆ ಕಾಣಿಸಿದ ಜನರನ್ನು ಕುರಿತು ನಿಮಗೆ ಗೊತ್ತಿದ್ದುದನ್ನು ವಿವರಿಸಿರಿ: ಸರ್ ರಾಬರ್ಟ ಪೀಲ್, ಓಕಾನೆಲ್, ಪಾಮರ್ಸ್ಟನ್, ಡಿಝ್ರೇಲಿ, ಗ್ಲಾಡ್‌ಸ್ಟನ್, ಪಾಲ್ ಕ್ರೂಗರ್, ಲಾರ್ಡ ಡರಹೆಮ್.

೬. ಇಂಗ್ಲಂಡಿನಲ್ಲಿಯ ಬೇರೆ ಬೇರೆ ಕಾಲದ ರಾಜಕೀಯ ಪಕ್ಷಗಳು ಮತ್ತು ಅವುಗಳ ನೀತಿ ಇವನ್ನು ಕುರಿತು ವಿವರಿಸಿರಿ. ಈಗ ಇಂಗ್ಲಂಡಿನಲ್ಲಿ ಇರುವ ರಾಜಕೀಯ ಪಕ್ಷಗಳು ಯಾವುವು?

೭. ಕೆಳಗಿನ ವಿಷಯಗಳನ್ನು ಕುರಿತು ಟಿಪ್ಪಣಿಗಳನ್ನು ಬರೆಯಿರಿ: ಚಾರ್ಟಿಸ್ಟ ಆಂದೋಲನ, ಟ್ರೇಡ್ ಯೂನಿಯನ್, ಗುಪ್ತ ಮತದಾನ ಪದ್ಧತಿ, ಕೆಬಿನೆಟ್ ಪದ್ಧತಿ, ಡೊಮಿನಿಯನ್ ಸ್ಟೇಟಸ್, ಸಿವ್ಹಿಲ್ ಲಿಸ್ಟ, ೧೯೧೧ರ ಪಾರ್ಲಿಮೆಂಟಿನ ಕಟ್ಟಳೆ, ಲಿಬರಲ್ ಯೂನಿಯನಿಸ್ಟ.

೮. 'ಪೂರ್ವದೇಶೀಯ ಸಮಸ್ಯೆಗಳು' ಎಂದರೇನು? ಈ ವಿಷಯಗಳನ್ನು ಕುರಿತು ಇಂಗ್ಲಂಡಿನಲ್ಲಿಯ ರಾಜ್ಯತಂತ್ರವಿಶಾರದರ ನೀತಿಯೇನಿತ್ತು?

೯. ೧೯ನೆಯ ಶತಕದಲ್ಲಿ ಬ್ರಿಟಿಶ್ ಸಾಮ್ರಾಜ್ಯವು ಹೇಗೆ ಅಭಿವೃದ್ಧಿಯನ್ನು ಪಡೆಯಿತು ಎಂಬುದನ್ನು ಹೇಳಿರಿ.

೧೦. ಸುಯೆಝು ಕೆನಾಲ ಕಂಪನಿಯ ಪಾಲುಗಳನ್ನು ತೆಗೆದುಕೊಳ್ಳುವುದರಿಂದ ಇಂಗ್ಲಂಡಿಗೆ ಏನು ಲಾಭವಾಯಿತು?

೧೧. ಬ್ರಿಟಿಶ ಸಾಮ್ರಾಜ್ಯದೊಳಗಿನ ವಸಾಹತುಗಳ ವಿಷಯದಲ್ಲಿ ಇಂಗ್ಲಂಡು ಯಾವ ನೀತಿಯನ್ನು ತಳೆದಿತು? ಅದರ ಪರಿಣಾಮವೇನಾಯಿತು?

೧೨. ಬ್ರಿಟಿಶ ಸಾಮ್ರಾಜ್ಯದ ರಾಜ್ಯವ್ಯವಸ್ಥೆಯನ್ನು ಕುರಿತು ವಿವರವಾಗಿ ನಿವೇದಿಸಿರಿ. ಸಾಮ್ರಾಜ್ಯದ ಭಾಗಗಳು ಮತ್ತು ಇಂಗ್ಲಂಡು ಇವುಗಳಲ್ಲಿಯ ಸಂಬಂಧವು ದೃಢವಾಗಲು ಯಾವ ಯಾವ ಮಾತುಗಳು ಸಾಹಾಯ್ಯವಾಗುವುವು?

೧೩. ಇಂಗ್ಲಂಡಿನ ರಾಜ್ಯಘಟನೆಯಲ್ಲಿ ರಾಜನ ಸ್ಥಾನವಾವುದು? ರಾಜನ ವಿಶಿಷ್ಟ ಅಧಿಕಾರಗಳು ಯಾವುವು? ಅವುಗಳನ್ನು ಹೇಗೆ ಉಪಯೋಗಿಸಲಾಗುವುವು?

೧೪. ಕೆಬಿನೆಟಿನ ಉತ್ಕ್ರಾಂತಿ ಹೇಗೆ ಆಯಿತು? ಕೆಬಿನೆಟ್ ಪದ್ಧತಿಯ ರಾಜ್ಯವ್ಯವಸ್ಥೆ ಎಂದರೇನು? ಅದರ ವೈಶಿಷ್ಟ್ಯವೇನು?

೧೫. ಕಾಮನ್ಸ ಸಭೆ ಮುಖ್ಯವೆಂದು ತಿಳಿಯಲು ಕಾರಣವೇನು?

೧೬. ಇಂಗ್ಲಂಡಿನ ರಾಜ್ಯಘಟನೆಯಲ್ಲಿ ಸಂಭವಿಸಿದ ಕ್ರಾಂತಿಯನ್ನು ವಿವರಿಸಿರಿ.

೧೭. ಇಂಗ್ಲಂಡಿನ ರಾಜ್ಯಘಟನೆಯಲ್ಲಿಯ ಮುಖ್ಯ ಸಂಸ್ಥೆಗಳು ಯಾವುವು? ಅವುಗಳ ಪರಸ್ಪರ ಸಂಬಂಧಗಳು ಎಂತಹುವು?

೧೮. ಮಹಾಯುದ್ಧವು ಆರಂಭವಾಗುವ ಮುಂಚೆ ಯುರೋಪದ ರಾಷ್ಟ್ರಗಳಲ್ಲಿ ಪರಸ್ಪರ ಸಂಬಂಧಗಳು ಹೇಗೆ ಇದ್ದುವು?

೧೯. ಮಹಾಯುದ್ಧದ ಕಾರಣಗಳನ್ನು ಹೇಳಿರಿ. ಮಹಾಯುದ್ಧದಲ್ಲಿ ಸಂಭವಿಸಿದ ಮಹತ್ತ್ವದ ಸಂಗತಿಗಳನ್ನು ಸಂಕ್ಷೇಪವಾಗಿ ತಿಳಿಸಿರಿ.

೨೦. ವರ್ಸೇಲ್ಸಿನ ಒಡಂಬಡಿಕೆಯಿಂದ ಯುರೋಪದಲ್ಲಿ ಎಂತಹ ವ್ಯವಸ್ಥೆ ಉಂಟಾಯಿತು?

೨೧. ರಾಷ್ಟ್ರಸಂಘವೆಂದರೇನು? ಈ ಸಂಘವು ಎಂದು ಸ್ಥಾಪನವಾಯಿತು? ಇದರ ಮುಖಾಂತರ ಯಾವ ಕೆಲಸವು ನಡೆಯುತ್ತದೆ?

೨೨. ಮುಂದೆ ಹೇಳುವ ಜನರನ್ನು ಕುರಿತು ವಿವರಿಸಿರಿ: ಲಾಯಿಡ ಜಾರ್ಜ, ಕಿಚನೇರ್, ವುಡ್ರೊ ವಿಲ್ಸನ್, ಮಾರ್ಶಲ್ ಫಾಕ, ಜೊಸೆಫ್ ಚೆಂಬರ್ಲೇನ್.

೨೩. ಕೂಲಿಕಾರರ ಸ್ಥಿತಿಯನ್ನು ಸರಿಗೊಳಿಸಲು ೧೯ನೆಯ ಮತ್ತು ೨೦ನೆಯ ಶತಕಗಳಲ್ಲಿ ಯಾವ ಕಟ್ಟಳೆಗಳು ಹುಟ್ಟಿದುವು?

೨೪. ೧೯ನೆಯ ಮತ್ತು ೨೦ನೆಯ ಶತಕಗಳಲ್ಲಿ ಹುಟ್ಟಿದ ಮಹತ್ತ್ವದ ಶಾಸ್ತ್ರೀಯ ಶೋಧನೆಗಳು ಯಾವುವು? ಅವುಗಳಿಂದ ಆದ ಲಾಭವೇನು?

೨೫. ೧೯ನೆಯ ಮತ್ತು ೨೦ನೆಯ ಶತಕಗಳಲ್ಲಿಯ ಇಂಗ್ಲಂಡಿನ ಸಾಮಾಜಿಕ ಸ್ಥಿತಿ, ಕೂಲಿಕಾರರು, ಬಳಕೆ, ಶಿಕ್ಷಣ, ಮನೋರಂಜನ, ಉದ್ಯೋಗ, ವ್ಯಾಪಾರ ಇವುಗಳನ್ನು ಕುರಿತು ವಿವರಿಸಿರಿ.

# ಸೂಚೀಪತ್ರವು

(ಅಂಕೆಗಳು ಪೃಷ್ಠಾಂಕಗಳನ್ನು ಸೂಚಿಸುತ್ತವೆ.)

